॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೪

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1948

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೯




ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1948

# ಮುನ್ನುಡಿ

ನಾವು ಅತ್ಯಂತ ಪವಿತ್ರಗಳೆಂದು ಭಾವಿಸಿರುವ ಸ್ಮೃತಿಪುರಾಣೇತಿಹಾಸ ಗ್ರಂಥಗಳು, ಒಂದೊಂದೂ ಒಂದೊಂದು ವಿಷಯವನ್ನು ಪ್ರಧಾನವಾಗಿಟ್ಟುಕೊಂಡು ಮುಂದುವರಿದಿವೆ. ಸತ್ಯಕ್ಕೆ ಹಲವು ಮುಖಗಳುಂಟು. ಒಂದೊಂದು ಮುಖವನ್ನು ಒಂದೊಂದು ಗ್ರಂಥ ಆರಾಧಿಸುತ್ತಿರುವುದು. ನಮ್ಮ ವೈದಿಕಧರ್ಮವನ್ನು ಬೆಳೆಸುತ್ತಾ ಬಂದಪ್ರಾಜ್ಞರು ಆಯಾಕಾಲದಲ್ಲಿ ಕಂಡ ಸತ್ಯಾಂಶಗಳನ್ನು ಆಯಾ ಕಾಲದಲ್ಲಿ ಬರೆದಿಡುತ್ತ ಬಂದರು. ಸಾವಿರಾರು ವರ್ಷಗಳಿಂದ ಈ ಧರ್ಮವು ಹೀಗೆಯೇ ಬೆಳೆಯುತ್ತ ಬಂದಿರುವುದು. ವೈದಿಕಧರ್ಮವು ಬಹು ಪುರಾತನವಾದ ಆಲದ ಮರದಂತೆ. ಅದರ ನೆರಳಿನಲ್ಲಿ ನಾವು ಬಾಳುತ್ತಿರುವೆವು. ಅದರಲ್ಲಿ ಅನೇಕ ಕೊಂಬೆಗಳಿವೆ. ಒಂದು ರೆಂಬೆಯಂತೆ ಮತ್ತೊಂದಿಲ್ಲ. ಕೆಲವು ಕೊಂಬೆಗಳು ಬೆಳೆಯಲೇ ಇಲ್ಲ. ಹಲವು ಬೆಳೆಯುತ್ತಲೇ ಇವೆ. ನೋಡುವುದಕ್ಕೇನೋ ಶಾಖೆಗಳಲ್ಲಿ ಅನೇಕ ವ್ಯತ್ಯಾಸಗಳೂ, ಭೇದಗಳೂ ಕಾಣುವುವು. ಆದರೆ ಎಲ್ಲಕ್ಕೂ ಒಂದೇ ಜೀವ, ಒಂದೇ ಬುಡ, ಒಬ್ಬನೇ ಬೆಳೆಸಿದವನು. ಬೆಳೆದ ಮೇಲೆ ಎಲೆ, ಹೂವು, ಕೊಂಬೆ ಇವುಗಳಲ್ಲಿ ಕಂಡುಬರುತ್ತಿರುವ ವ್ಯತ್ಯಾಸವನ್ನು ಕಂಡು ಯಾರೂ ಭ್ರಾಂತಿಗೊಳ್ಳಬಾರದು.

ಮಾನವನ ಮನಸ್ಸು ಶಾಂತವಾಗಿರಬೇಕಾದರೆ ಆಗಾಗ ಆತ್ಮ, ಲೋಕ, ದೇವರು ಇವುಗಳ ಸ್ವರೂಪವನ್ನು ಚಿಂತಿಸುವುದು ಆವಶ್ಯಕ. ಇದರಿಂದ ಮನಸ್ಸಿನಲ್ಲಿ ಮೂಡುವ ಉದ್ವೇಗಗಳು ಅಡಗುವುವು. ಆದರೆ ಕೇವಲ ಸ್ವರೂಪ ಚಿಂತನೆ ಸಾಲದು. ಅದರೊಡನೆ ತನಗೆ ನಿಯಮಿತವಾಗಿರುವ ಕರ್ತವ್ಯಗಳನ್ನು ನೆರವೇರಿಸುತ್ತಿರಬೇಕು. ನಮ್ಮ ಪೂರ್ವಿಕರು ನಮಗೆ ಆತ್ಮಶಾಂತಿಪ್ರದವಾದ ಅನೇಕ ಕರ್ತವ್ಯಗಳನ್ನು ತೋರಿಸಿಕೊಟ್ಟಿರುವರು. ಅವನ್ನು ನಾವು ನಿತ್ಯಕರ್ಮಗಳೆಂದು ಕರೆಯುತ್ತಿದ್ದೇವೆ. ಅಜ್ಞಾನವಶನಾಗಿಯೋ ಸಂಸ್ಕಾರಬಾಹಿರನಾಗಿಯೋ, ಅಥವಾ ಸಹವಾಸದೋಷದಿಂದಲೋ, ಮಾನವನು ಅವನವನ ಪವಿತ್ರವಾದ ನಿತ್ಯಕರ್ಮಗಳನ್ನು ಬಿಟ್ಟು ದುರ್ಮಾರ್ಗದಲ್ಲಿ ಅಡಿಯಿಡಲು ಯತ್ನಿಸುವನು. ಅದಕ್ಕೆ ತಕ್ಕ ಫಲವನ್ನು ಅನುಭವಿಸಿ ಅನಂತರ ಪಶ್ಚಾತ್ತಾಪಪಡುವುದೂ ಉಂಟು. ಆಗಲೂ ವಿವೇಕದಿಂದ ಯತ್ನಿಸಿದರೆ ಫಲ ದೊರೆಯುವುದು. ಮಹಾಪಾಪವನ್ನು ಮಾಡಿದವ

ನಾವರೂ ತನಗೆ ಗತಿಯೆಲ್ಲಿಯದು ಎಂದು ನಿರಾಶೆಪಡಬೇಕಾದುದಿಲ್ಲ. ತಾನು ಮಾಡಿದ ಪಾಪಕರ್ಮಗಳಿಗಾಗಿಯೂ, ಮಾಡದ ಪುಣ್ಯಕಾರ್ಯಗಳಿಗಾಗಿಯೂ ಪಶ್ಚಾತ್ತಾಪಪಟ್ಟು, ಆಗಲೂ ಭಗವಂತನನ್ನು ಶರಣು ಹೊಕ್ಕವನಿಗೆ ಮುಕ್ತಿಯುಂಟು. "ಇದೇನು! ಕರ್ಮಬಂಧದಿಂದ ಇಷ್ಟು ಸುಲಭವಾಗಿ ಪಾರಾಗಲು ಸಾಧ್ಯವೇ" ಎಂದು ಯಾರೂ ಸಂದೇಹಪಡಬೇಕಾಗಿಲ್ಲ. ಮಾಡಿದ ಪಾಪಕರ್ಮಗಳಿಗಾಗಿಯೂ, ಪಾಪ ಯೋಚನೆಗಳಿಗಾಗಿಯೂ ಪಶ್ಚಾತ್ತಾಪಪಡುವುದೇ ಒಂದು ಕರ್ಮ. ಅದರ ಸತ್ಫಲವು ಜೀವಿಗೆ ದೊರಕುವುದು. ಭಗವಂತನನ್ನು ಶರಣುಹೊಗುವುದರಿಂದ ಪಾಪದ ಹೊರೆಯು ಕಡಿಮೆಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ, ಪಶ್ಚಾತ್ತಾಪದಿಂದ ಪಾಪವು ನಿವೃತ್ತಿಯಾಗುವುದೆಂದು ತಿಳಿದು ಮನವರಿತು ಪಾಪ ಕರ್ಮಗಳನ್ನು ಮಾಡುತ್ತ ಹೋದರೆ, ಅವುಗಳ ಫಲವನ್ನು ಅನುಭವಿಸಲೇಬೇಕಾಗುವುದು. ಉದ್ದೇಶಪೂರ್ವಕವಾಗಿ ನಡೆಸಿದ ಪಾಪಕ್ಕೆ ಎಂದೂ ಪ್ರಾಯಶ್ಚಿತ್ತವಿಲ್ಲ. ಯಾವ ಮಂತ್ರಜ್ಞನಾಗಲಿ, ಎಂತಹ ಗುರುವಾಗಲಿ, ಆ ತಪ್ಪನ್ನು ಪರಿಹರಿಸಲಾರರು. ಕಾರಣಾಂತರದಿಂದ ನಡೆಸಿದ ಪಾಪಕಾರ್ಯಗಳಿಗಾಗಿ, ಮಾನವನು ನಿಜವಾಗಿ ಮನಸ್ಸನ್ನು ಹಿಂಡಿ, ನೊಂದಹೊರತು, ಅದು ಪಶ್ಚಾತ್ತಾಪವೆನಿಸಲಾರದು. ಪಶ್ಚಾತ್ತಾಪಗೊಳ್ಳುವುದೂ, ಭಗವಂತನಲ್ಲಿ ಶರಣುಹೊಗುವುದೂ, ಅಂತರಂಗದಲ್ಲಿ ಉಂಟಾಗುವ ಬದಲಾವಣೆಗಳು. ಆರೀತಿ ಪಶ್ಚಾತ್ತಾಪದಿಂದ ಭಗವಂತನನ್ನು ಶರಣುಹೊಕ್ಕು, ಮುಕ್ತಿಪಡೆಯಲು ಜಾತಿಯಾಗಲಿ, ಕುಲವಾಗಲಿ, ಎಂದೂ ಅಡ್ಡಿಯಾಗಲಾರವು.

"ಅಪಿ ಚೇತ್ಸ ದುರಾಚಾರೋ । ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ।
ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಪಿ ಯಾಂತಿ ಪರಾಂ ಗತಿಂ ॥

ಎಂಬ ಶ್ರೀಕೃಷ್ಣಪರಮಾತ್ಮನ ಉಪದೇಶದಂತೆ, ಭಕ್ತಿಯಿಂದ ಭಗವಂತನನ್ನು ಶರಣುಹೊಂದುವವನು ಮಾನವವರ್ಗದಲ್ಲಿ ಉತ್ತಮಸ್ಥಾನವನ್ನು ಪಡೆಯುವನು.

ಶಿವರಹಸ್ಯದ ಈಭಾಗದಲ್ಲಿ ವ್ಯಭಿಚಾರಿಣಿಯಾದ ಭಿಲ್ಲಸ್ತ್ರೀಯೊಬ್ಬಳು ನರ್ಮದಾಲಿಂಗವನ್ನು ಮನಃಪೂರ್ವಕವಾಗಿ ಭಜಿಸಿ ಶಿವಸಾಯುಜ್ಯವನ್ನು ಪಡೆದಳೆಂಬ ಇತಿಹಾಸವೊಂದು ಬಂದಿರುವುದು. ಇದೇರೀತಿ, ಭಕ್ತಿಪ್ರವಣತೆಯಿಂದ, ಪಾಪಕರ್ಮಗಳಿಗೆ ಪಶ್ಚಾತ್ತಾಪಪಟ್ಟು ಭಗವಂತನಲ್ಲಿ ಶರಣುಹೊಕ್ಕು, ಮುಕ್ತಿಹೊಂದಿದವರ

ಚರಿತ್ರೆಗಳೇ ಈ ಗ್ರಂಥದಲ್ಲಿ ಅತಿಯಾಗಿ ಬರುತ್ತಿವೆ. ಹಾಗೆ ಪರಮಾತ್ಮನನ್ನು ಭಜಿಸುವಾಗ, " ಏಕೋ ದೇವಃ ಕೇಶವೋ, ವಾ, ಶಿವೋ ವಾ " ಎಂಬ ತತ್ತ್ವವನ್ನನು ಸರಿಸಿ, ಒಂದೇ ಮಾರ್ಗದಿಂದ, ಒಬ್ಬನೇ ಆದ ದೇವರನ್ನು ಭಜಿಸುತ್ತಾ, ಅವನೇ ಸರ್ವೋತ್ಕೃಷ್ಟನೆಂದೂ, ತತ್ಸಮಾನರು ಮತ್ತಾರೂ ಇಲ್ಲವೆಂದೂ ತಿಳಿಯುವುದೇ ವಿವೇಕಿಯ ಲಕ್ಷಣ; ಎಂಬ ಅಂಶವನ್ನು ಈ ಗ್ರಂಥವು ಅಲ್ಲಲ್ಲಿ ಒತ್ತಿ ಹೇಳುತ್ತಾ ವಾಚಕವೃಂದವನ್ನು ಎಚ್ಚರಿಸುತ್ತಿದೆ. ಈ ಭಾಗದ ಕೊನೆಯ ಅಧ್ಯಾಯಗಳಲ್ಲಿ ಶಿವಪಂಚಾಕ್ಷರೀ ಮಹಿಮೆಯು ಉಕ್ತವಾಗಿದೆ. ಆದರೆ, ಆ ಮಂತ್ರದ ನಿಜವಾದ ಗೂಢಾರ್ಥ, ಮಂತ್ರಸ್ವರೂಪ, ಪ್ರಣವಲಕ್ಷಣ ಮತ್ತು ಅರ್ಥ, ಇವು ಹೊರಬೀಳ ಲಿಲ್ಲ. ಕೇವಲ ಆ ಮಂತ್ರವನ್ನು ಉಚ್ಚರಿಸುವುದರಿಂದ ಉಂಟಾಗುವ ಶಕ್ತಿ, ದೂಷಿಸು ವುದರಿಂದ ಒದಗುವ ದುಷ್ಫಲ, ಇವು ಮಾತ್ರ ಮನ್ಮಥನ ಇತಿಹಾಸ ರೂಪದಲ್ಲಿ ನಿಸ್ತೃತವಾಗಿವೆ. ಇದರಿಂದ ಮಂತ್ರಮಹಿಮೆಯು ತಿಳಿಯುವುದೇ ಹೊರತು ಮಂತ್ರ ಸ್ವರೂಪದ ಅರಿವು ಆಗುವಂತಿಲ್ಲ. ಗ್ರಂಥಕಾರರ ಕವಿತಾಮಾಧುರ್ಯ, ಸಂದರ್ಭೋಚಿತ ವಾದ ಕಥಾಸಂವಿಧಾನ, ಅದರಿಂದ ತೋರಿಬರುವ ಪರಶಿವಪಾರಮ್ಯ, ಶಿವಭಕ್ತಿಯ ಮತ್ತು ಭಕ್ತನ ಪರಾಕಾಷ್ಠತೆ, ಇವು ಎಂದಿನಂತೆ ಈ ಭಾಗದಲ್ಲಿಯೂ ಮನಮೋಹಕ ವಾಗಿವೆ. ಈಶ್ವರಭಕ್ತಿಯನ್ನು ಹೆಚ್ಚಿಸಿ, ಶಿವಧರ್ಮಗಳನ್ನು ಜನಸಾಮಾನ್ಯಕ್ಕೂ ಬಾಲಭಾಷೆಯಿಂದ ವಿವರಿಸುವ ಗ್ರಂಥವು ಇದನ್ನು ಬಿಟ್ಟರೆ ಮತ್ತಾವುದೂ ದೊರೆಯ ಲಾರದು.

ಇಂತಹ ಅಮೂಲ್ಯಗ್ರಂಥರತ್ನಗಳ ಪ್ರಕಾಶಕ್ಕೆ ಸರ್ವತೋಮುಖವಾದ ಪ್ರೋತ್ಸಾಹವೀಯುತ್ತಪ್ರೀತಿಯಿಂದ ನಮ್ಮನ್ನಾಳುತ್ತಿರುವ ಶ್ರೀಮನ್ಮಹಾರಾಜರವರಾದ **ಶ್ರೀ. ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳವರಿಗೂ, ಅವರ ಕುಟುಂಬವರ್ಗದವರಿಗೂ ಸರ್ವೇಶ್ವರನು ಸಕಲ ಸನ್ಮಂಗಳಗಳನ್ನೂ ಅನುಗ್ರಹಿಸಲೆಂದು ನಾನು ಸದಾ ಭಗವಂತನನ್ನು ಪ್ರಾರ್ಥಿಸುತ್ತೇನೆ.

ಸರ್ವಜಿನ್ನಾಮ ಸಂವತ್ಸರದ
ಮಾಘ ಶುದ್ಧ ಚತುರ್ದಶಿ
ಸೋಮವಾರ
23—2—1948.

ಇತಿ ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಹರನಾಮುಕವಾದ ತೃತೀಯಾಂಶ ಉತ್ತರಾರ್ಧದ ವಿಷಯಾನುಕ್ರಮಣಿಕಾ

(ಇಪ್ಪತ್ತೆಂಟನೆಯ ಅಧ್ಯಾಯದಿಂದ ನಲವತ್ತನೆಯ ಅಧ್ಯಾಯ ಪೂರ್ತಿಯಾಗಿ)



## ಇಪ್ಪತ್ತೆಂಟನೆಯ ಅಧ್ಯಾಯ

ಮಹಾಲಕ್ಷ್ಮಿಯು ವೈಕುಂಠಲೋಕಕ್ಕೆ ವಿಷ್ಣುವಿನೊಡನೆ ರಾಜನಿಂದ ಸತ್ಕೃತಳಾಗಿ ಹಿಂದಿರುಗುವುದು. ಮತ್ತೊಬ್ಬ ಈಶ್ವರಭಕ್ತನ ಇತಿಹಾಸ. ಅವನಲ್ಲಿಗೆ ಯಮನೂ, ವಿಷ್ಣುವೂ ಬರುವುದು. ಯಮವಿಷ್ಣುಗಳು ಪ್ರೀತಿಯಿಂದ ಕೊಡುವ ವರಗಳನ್ನು ಆ ಆಸ್ತಿಕನು ನಿರಾಕರಿಸುವುದು. .... ಪುಟ ೧–೫೫

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಸತ್ಯವ್ರತರಾಜ ಮತ್ತು ಸನಂದನಮಹರ್ಷಿ ಇವರಿಬ್ಬರ ಸಂಭಾಷಣೆ. ಆತನ ರಾಣಿಯ ಪೂರ್ವಜನ್ಮ ವೃತ್ತಾಂತಕಥನ, ನರ್ಮದಾಲಿಂಗಪೂಜಾಮಹಿಮಾ. ವ್ಯಭಿಚಾರಿಣಿಯಾದ ಭಿಲ್ಲಸ್ತ್ರೀಯು ಆಕಸ್ಮಾತ್ತಾಗಿ ಶಿವಲಿಂಗವನ್ನು ಪೂಜಿಸಿದುದರಿಂದ ಗಂಧರ್ವಲೋಕವನ್ನು ಸೇರುವುದು. ಅಲ್ಲಿ ಬಿಲ್ವಪತ್ರೆಯನ್ನು ಸಂಪಾದಿಸಲು ಬಿಲ್ವವೃಕ್ಷಕ್ಕೆ ಹತ್ತುವುದು. ಅಲ್ಲಿಂದ ವಾಯುವಿನ ವೇಗದಿಂದ ಕೆಳಗೆ ಬಿದ್ದು ಮೃತಳಾಗಿ ಬ್ರಹ್ಮಲೋಕವನ್ನು ಸೇರುವುದು. ಅವಳ ಪೂರ್ವಜನ್ಮ ಭವಿಷ್ಯ ವೃತ್ತಾಂತ.

ಪುಟ ೫೬–೧೦೩

## ಮೂವತ್ತನೆಯ ಅಧ್ಯಾಯ

ಸತ್ಯವ್ರತನೆಂಬ ರಾಜನು ಬ್ರಹ್ಮಲೋಕದಿಂದ ತನ್ನ ಊರಿಗೆ ಹಿಂದಿರುಗುವುದು. ನಿಷಧರಾಜನಾದ ಪರಪುರಂಜಯರಾಜನ ಇತಿಹಾಸ. ಆತನ ಪತ್ನಿ ಪದ್ಮಾವತಿಯು ನರ್ಮದಾ ತೀರದಲ್ಲಿ ಶಿವಾಲಯವನ್ನು ನಿರ್ಮಿಸುವುದು. ಪ್ರದೋಷ ಕಾಲಾರ್ಚನೆಮಾಡುವುದು. ಗಾನನಾಟ್ಯಾದಿಗಳಲ್ಲೇ ರಾತ್ರಿಯನ್ನು ಕಳೆಯುವುದು.

ಶಿವನೈವೇದ್ಯವನ್ನು ಭಕ್ಷಿಸುವುದು. ಅನಂತರ ಶಿವಾರಾಧನೆಗೆ ಬಂದ ಸೂರ್ಯನನ್ನು ವರ್ಶನಮಾಡುವುದು. ಸೂರ್ಯ ಮತ್ತು ಪದ್ಮಾವತಿಯರ ಸಂಭಾಷಣೆ. ಶಿವಪೂಜಾ ಮಹಿಮಾ. ಪಾರ್ವತೀ ಪರಶಿವರ ರತಿಕ್ರೀಡಾಕಾಲದಲ್ಲಿ ಹುಟ್ಟಿದ ಬೆವರಿನಿಂದ ಜಗತ್ತು ಉತ್ಪತ್ತಿಯಾಗುವುದು. ಸೂರ್ಯ ಮತ್ತು ರಾಣಿ ಇವರಿಬ್ಬರ ಸಂವಾದ. ಶಿವ ಪೂಜೆಯನ್ನು ಮಾಡದಿದ್ದರೆ ಸದ್ಗತಿಯಿಲ್ಲ ಎಂಬ ವಿಷಯಕ್ಕೆ ಸಂಬಂಧಿಸಿದ ಇತಿಹಾಸ ವರ್ಣನೆ. ....... ಪುಟ ೧೦೪--೧೪೮

## ಮೂವತ್ತೊಂದನೆಯ ಅಧ್ಯಾಯ

ವಿಟಸ್ತ್ರೀಯು ತನ್ನ ವಿಟಪುರುಷನ ಮೇಲಿನ ಕ್ರೋಧದಿಂದ, ಭೋಗಸಾಧನ ವಾಗಿದ್ದ ಜಲಾದಿಸಕಲವಸ್ತುಗಳನ್ನೂ ತೆಗೆದು ಎಸೆಯುವುದು. ಆಗ ಆ ವಸ್ತುಗಳು ಶಿವಲಿಂಗದ ಮೇಲೆ ಬಿದ್ದು ಪೂಜೆಯೆನಿಸುವುದು. ಆಗ ಅದನ್ನು ನೋಡಿದ ಒಬ್ಬ ಶಾಂಭವನು ಆಕೆಯ ಗುಣಗಳನ್ನೇ ವರ್ಣಿಸುವುದು. ಪುಟ ೧೪೯--೧೯೧

## ಮೂವತ್ತೆರಡನೆಯ ಅಧ್ಯಾಯ

ವಿಟಸ್ತ್ರೀಯನ್ನು ಕೈಲಾಸಕ್ಕೆ ಕರೆದೊಯ್ಯಲು ಭೃಂಗಿಯು ದಿವ್ಯವಿಮಾನಾ ರೂಢನಾಗಿ ಅಲ್ಲಿಗೆ ಬರುವಿಕೆ. ಭೃಂಗಿಯು ಅವಳ ಪೂಜೆಯನ್ನು ನೋಡಿ ಮಾತ ನಾಡುವುದು. ಆಕೆಗೆ ಅದು ಸ್ವಪ್ನದಂತಾಗಿ ಸ್ವಪ್ನದಲ್ಲಿಯೇ ಶಂಕರನನ್ನು ಪೂಜಿಸು ವುದು. ಆಗ ಒಬ್ಬಳು ಗಂಧರ್ವ ಸ್ತ್ರೀಯು ಶಿವಪೂಜೆಗಾಗಿ ಬಂದು ಶಿವತೃಪ್ತ್ಯರ್ಥ ವಾಗಿ ಗಾನಮಾಡುವುದು. ಅವಳ ಪತಿಯು ಅವಳನ್ನೂ ತನ್ನ ನಗರಕ್ಕೆ ಕರೆಯು ವುದು. ಅವಳ ಪೂರ್ವಕಥೆ. ಶಿವಾರ್ಚನವಿಧಿ. ಆಗ ತಪೋನಿಧಿಯೊಬ್ಬನು ಶಿವನನ್ನು ಅರ್ಚಿಸುವುದು. ಆ ಪೂಜೆಯನ್ನು ಕೆಡಿಸಲು ರಂಭೆಯು ಬರುವುದು. ಶಿವಪೂಜಾಮಧ್ಯದಲ್ಲಿ ವಿಘ್ನವನ್ನೊಡ್ಡಿದವನಿಗೆ ಬರುವ ಪಾಪವಿಷಯ. ಆಗ ದೇವ ಗಣಗಳು ಅಲ್ಲಿಗೆ ಬರುವುದು. ಮತ್ತು ಭೃಂಗಿಯೊಡನೆ ಸಂಭಾಷಣೆ ಮಾಡುವುದು.

ಪುಟ ೧೯೨--೨೩೫

## ಮೂವತ್ತುಮೂರನೆಯ ಅಧ್ಯಾಯ

ಸ್ವಪ್ನದಲ್ಲಿ ಜಾರಿಣಿಯೊಬ್ಬಳು ಶಾಂಭವನೊಡನೆ ಸಂಭಾಷಿಸುವುದು. ರಾಜಕನ್ಯೆ ಮತ್ತು ಕಿನ್ನರ ಇವರಿಬ್ಬರ ಸಂವಾದ. ವಿಶ್ವಾವಸುವೆಂಬ ಗಂಧರ್ವನ ಕಥೆ.

ಪುಟ ೨೩೬--೨೭೫

## ಮೂವತ್ತು ನಾಲ್ಕನೆಯ ಅಧ್ಯಾಯ

ವಿಶ್ವಾವಸು ಮತ್ತು ಪುತ್ರರ ಪರಸ್ಪರ ಸಂವಾದ. ವಿಷ್ಣುವಿನಿಂದ ಮನ್ಮಥನ ಜನನ. ಮನ್ಮಥನಿಗೆ ಇತರ ದೇವತೆಗಳ ಸಾಮ್ಯವು ಈಶ್ವರನಲ್ಲಿ ತೋರಿದುದು. ತತ್ಪ್ರಯುಕ್ತವಾಗಿ ಮಹಾಪ್ರಳಯ ಜ್ವಾಲಾಪ್ರಾಪ್ತಿ. ಮನ್ಮಥನು ವೈಕುಂಠಕ್ಕೆ ಹೋದುದು. ಅಲ್ಲಿಗೆ ಬ್ರಹ್ಮಾದಿ ಸಕಲ ದೇವತೆಗಳೂ ಆಗಮಿಸುವುದು. ಬ್ರಹ್ಮ, ವಿಷ್ಣು ಇವರಿಬ್ಬರ ಸಂವಾದ. ಅನಂತರ ಎಲ್ಲ ದೇವತೆಗಳೂ ಪಾತಾಳಕ್ಕೆ ಹೋಗಿ ಅಲ್ಲಿ ಆದಿಶೇಷನನ್ನು ಕುರಿತು ಈ ಸಮಾಚಾರವನ್ನು ಹೇಳುವುದು.

ಪುಟ ೨೭೬--೩೦೭

## ಮೂವತ್ತೈದನೆಯ ಅಧ್ಯಾಯ

ಶಿವನಿಂದೆಯ ಪರಿಣಾಮವಾಗಿ ಸಕಲ ದೇವತೆಗಳಿಗೂ ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಶಿಕ್ಷೆಯು ಒದಗುವುದು. ಅದನ್ನು ನೋಡಿ ವ್ಯಥೆಪಟ್ಟ ಮನ್ಮಥನನ್ನು ವಿಷ್ಣುವು ದೂಷಿಸುವುದು. ಬ್ರಹ್ಮನು ಕೋಪಿಸಿಕೊಳ್ಳುವುದು. ಲಕ್ಷ್ಮಿಯು ವಿಷ್ಣುವನ್ನು ಸಮಾಧಾನಪಡಿಸುವುದು. ವಿಷ್ಣುವು ಲಕ್ಷ್ಮಿಯನ್ನು ಕುರಿತು ಮನ್ಮಥನ ದುರ್ಗುಣಗಳನ್ನು ವರ್ಣಿಸುವುದು. ಲಕ್ಷ್ಮೀ, ಸರಸ್ವತಿ, ಶಚೀ ಮೊದಲಾದ ದೇವತಾಸ್ತ್ರೀಯರು ಅಳುವುದು. ಅವರು ಅಳುವ ಧ್ವನಿಗೆ ಗಿರಿಗಹ್ವರಗಳಿಂದ ಬರುವ ಪ್ರತಿಧ್ವನಿ. ಆ ಧ್ವನಿಯ ವಿಷಯವಾಗಿ ಪಾರ್ವತಿಯು ಜಯೆಯನ್ನು ಪ್ರಶ್ನಿಸುವುದು. ಜಯಾ ಮತ್ತು ಪಾರ್ವತಿಯರ ಸಂವಾದ. ಅನೇಕ ಯುಗಗಳು ಹೀಗೆಯೇ ಕಳೆಯುವುದು. ಪ್ರಳಯಾಗ್ನಿಯ ಸಮಾಗಮ. ಅದು ವೈಕುಂಠ, ಸತ್ಯಲೋಕ, ಪಾತಾಳ ಇವುಗಳನ್ನು ಪ್ರವೇಶಿಸಿ, ಅಲ್ಲಿನ ದೇವತೆಗಳನ್ನೆಲ್ಲಾ ಹೊಡೆ

ದೋಡಿಸುವುದು. ಹಾಗೆಯೇ ಕೂರ್ಮನನ್ನು ದಹಿಸಲು ಯತ್ನಿಸುವುದು. ಆಗ ಕೂರ್ಮನು ಪ್ರಾರ್ಥನೆ ಮಾಡುತ್ತಾ, ಶಿವಲಿಂಗವನ್ನು ಆರಾಧಿಸುವುದು. ಕೂರ್ಮ ಮತ್ತು ಕಾಲಾಗ್ನಿ ಇವರಿಬ್ಬರ ಸಂವಾದ. ಶಿವಧರ್ಮವನ್ನು ಕಾಲಾಗ್ನಿಯು ಕೇಳಬಯಸುವುದು. ಕೂರ್ಮನು ಅದನ್ನು ವಿವರಿಸುವುದು. ಪುಟ ೩೦೮-೩೪೩

## ಮೂವತ್ತಾರನೆಯ ಅಧ್ಯಾಯ

ಪ್ರಳಯಾಗ್ನಿಯ ಒಂದು ಕಿಡಿಯಿಂದ ಮನ್ಮಥನು ದಹಿಸಿಹೋಗುವುದು. ವಿಶ್ವಾವಸುವು ಪುತ್ರರನ್ನು ಕುರಿತು ಈ ಶಿವಧರ್ಮಗಳನ್ನು ವಿವರಿಸುವುದು. ಸಕಲ ವಸ್ತುಗಳಲ್ಲಿಯೂ ಭಸ್ಮವನ್ನಿಟ್ಟು ಈಶ್ವರಾರ್ಪಣ ಮಾಡಬೇಕೆಂಬ ತತ್ತ್ವನಿರೂಪಣೆ. ಪುಟ ೩೪೪--೩೮೧

## ಮೂವತ್ತೇಳನೆಯ ಅಧ್ಯಾಯ

ವಿಶ್ವಾವಸು ಮತ್ತು ಅವನ ಪುತ್ರರ ಸಂವಾದ. ಗಂಧರ್ವರಾಜ ಮತ್ತು ಅವನ ಮಗಳ ಸಂಭಾಷಣೆ. ಧರ್ಮಧೇನು ಸಂವಾದ. ಹಾಟಕೇಶ್ವರ ಪೂಜೆಮಾಡಿ ಸಮುದ್ರರಾಜನು ಸ್ತುತಿಸುವುದು. ಸಾಗರ ಮತ್ತು ಪುಣ್ಯವಿಗ್ರಹ ಇವರಿಬ್ಬರ ಸಂವಾದ. ಯಮಾಲಯ ವರ್ಣನೆ. .... ಪುಟ ೩೮೨–೪೨೪

## ಮೂವತ್ತೆಂಟನೆಯ ಅಧ್ಯಾಯ

ರೇವಾತೀರದಲ್ಲಿರುವ ಶೈವಬ್ರಾಹ್ಮಣನ ಇತಿಹಾಸ. ದಂಪತಿಗಳ ಸಂವಾದ. ಸತ್ಯವ್ರತನೆಂಬ ಬ್ರಾಹ್ಮಣನ ಉಪದೇಶ. ಪಂಚವಿಧ ಧರ್ಮಗಳು. ವಿಭೂತಿ ಧಾರಣೆ. ರುದ್ರಾಕ್ಷಿಧಾರಣೆ, ರುದ್ರಾಧ್ಯಾಯಜಪ, ಬಿಲ್ವದಳದಿಂದ ಶಿವಲಿಂಗಪೂಜೆ, ಶಿವನೈವೇದ್ಯಭೋಜನ ಮತ್ತು ಶಿವಪಂಚಾಕ್ಷರೀಮಹಿಮಾವಿಶೇಷಗಳು. ಶ್ರೀರುದ್ರಾರ್ಥವ್ಯಾಖ್ಯಾ ಪ್ರಕರಣ. ಕುಮಾರಸ್ವಾಮಿಯನ್ನು ಕುರಿತು ಸೃಷ್ಟಿ ಸ್ಥಿತಿ ಲಯಗಳ ವಿಷಯವನ್ನು ಬೋಧಿಸುವುದು. ಕುಮಾರಸ್ವಾಮಿಯು ಮಂತ್ರಾರ್ಥಶ್ರವಣವನ್ನು ಅಪೇಕ್ಷಿಸುವುದು. .... ೪೨೫-೪೭೧

## ಮೂವತ್ತೊಂಬತ್ತನೆಯ ಅಧ್ಯಾಯ

ಪಂಚಾಕ್ಷರವ್ಯಾಖ್ಯಾನ ಸಮಯದಲ್ಲಿ ಅನೇಕಕೋಟಿ ಶಿವವಿಗ್ರಹಗಳು ಉತ್ಪತ್ತಿಯಾಗುವಿಕೆ. ಸ್ಕಂದ ಮತ್ತು ನಂದೀಶ್ವರರ ಸಂವಾದ. ಕೈಲಾಸವನ್ನು ಕುರಿತು ವಿಷ್ಣು, ಬ್ರಹ್ಮಾದಿಗಳ ಆಗಮನ. ನಂದೀಶ್ವರ ಮತ್ತು ದೇವಗಣ ಇವುಗಳ ಸಂವಾದ. ಶ್ರೀಶೈಲಮಹಿಮಾವರ್ಣನೆ. ವೈಕುಂಠಕ್ಕೆ ಹೋಗಿ ವಿಷ್ಣುವಿಗೆ ವೈಕುಂಠ ನೆಂಬ ಹೆಸರನ್ನೂ, ವೈಕುಂಠಾಧಿಪತ್ಯವನ್ನೂ ನಂದೀಶ್ವರನು ಅನುಗ್ರಹಿಸುವುದು. ಹಾಗೆಯೇ ಶಿವಗಣಗಳಲ್ಲಿ ಒಬ್ಬನಿಗೆ ಸತ್ಯಲೋಕಾಧಿಪತ್ಯವನ್ನೂ ಮತ್ತೊಬ್ಬನಿಗೆ ಸ್ವರ್ಗಲೋಕಾಧಿಪತ್ಯವನ್ನೂ ಕರುಣಿಸುವುದು. ಹಾಗೆಯೇ ಶಿವೋದ್ಯಾನಪಾಲ ಕತ್ವವನ್ನು ಯಮನಿಗೂ, ಉಳಿದ ದಿಕ್ಪಾಲಕರಿಗೆಲ್ಲಾ ಒಂದೊಂದು ಲೋಕವನ್ನೂ ಆಳ್ವಿಕೆಗೆ ಒಪ್ಪಿಸುವುದು. ಹಾಗೆಯೇ ಗ್ರಹ, ನಕ್ಷತ್ರಾದಿಗಳು, ಕ್ರೂರ ಮತ್ತು ಸಾಧು ಪ್ರಾಣಿಗಳು, ಪಶುಪಕ್ಷಿ ಕೀಟಾದಿಗಳು ಇವೆಲ್ಲವನ್ನೂ ನಿರ್ಮಾಣಮಾಡಿ, ತಾನು ಕೈಲಾಸಕ್ಕೆ ಹೋಗುವುದು. ನಾಗಲೋಕದ ವರ್ಣನೆ. .... ಪುಟ ೪೬೨—೫೧೧

## ನಲವತ್ತನೆಯ ಅಧ್ಯಾಯ

ಸತ್ಯವ್ರತ ಮತ್ತು ಶುಕವಾಣೀ ಇವರಿಬ್ಬರ ಸಂವಾದ. ಪ್ರಚಂಡನೆಂಬ ಹೆಸರುಳ್ಳ ದೈತ್ಯನ ಕಥೆ. ದೇವಾಸುರ ಯುದ್ಧದಲ್ಲಿ ನಾರಾಯಣಾದಿಗಳ ಅಪಜಯ. ಕಪಿಲ ಋಷಿ ಮತ್ತು ಲಕ್ಷ್ಮೀ ಇವರಿಬ್ಬರ ಸಂವಾದ. ಹರಿತಾಲಿಕಾವ್ರತಕಥನ. ಪೂಜಾವಿಧಿ. ಅಂಗಪೂಜಾಸ್ತೋತ್ರ. ತ್ರಿಪುರಾಸುರೇತಿಹಾಸ. ಪಾರ್ವತೀದೇವಿಯು ಆಗ ವ್ರತವನ್ನಾಚರಿಸುವುದು. ಪುಟ ೫೧೨—೫೪೯



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಅಷ್ಟವಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತ್ಯುಕ್ತಂ ಕಮಲಾವಚಃ ಶಿವರತಾಭೀಷ್ಟಪ್ರದಂ ಸಾದರಂ
ಶ್ರುತ್ವಾ ತಾಮಭಿನಂದ್ಯ ಸುಂದರತರಂ ಹಾರಂ ಪ್ರಕಲ್ಪ್ಯಾದರಾತ್ ।
ತತ್ಕಂಠೇ ಕಲಕಂಠಕಂಠನಿನದಾನಂದಪ್ರದಾನೋದ್ಯತೇ
ತದ್ವೀಣಾಮಧುರಧ್ವನಿಶ್ರವಣಜಾನಂದೇನ ಪೂರ್ಣಾಸ್ತದಾ ॥೧॥

---

## ಶ್ರೀಶಿವರಹಸ್ಯ ತೃತೀಯಾಂಶದ ಉತ್ತರಾರ್ಧದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ

ಯಾಜ್ಞವಲ್ಕ್ಯಮಹರ್ಷಿಗಳು ಜನಕರಾಜನಿಗೆ ಶಿವಮಹಿಮೆಯನ್ನು ಮುಂದುವರಿಸುತ್ತಾ ಹೀಗೆ ಹೇಳಿದರು ; ಶಿವಪೂಜಾಸಕ್ತರಾದ ಮಾನವರಿಗೆ ಸಕಲ ಮನೋರಥಗಳನ್ನೂ ಈಡೇರಿಸುವ ಲಕ್ಷ್ಮೀದೇವಿಯ ಮಾತುಗಳನ್ನು ಆದರದಿಂದ ಲಾಲಿಸುತ್ತಾ, ಆ ರಾಜಾಂಗನೆಯರು ಆಗ ದೇವಿಯನ್ನು ಅಭಿನಂದಿಸ ತೊಡಗಿದರು. ಮತ್ತು ಅವರು ತಮ್ಮ ಸಂತೋಷವನ್ನು ತೋರ್ಪಡಿಸುವುದಕ್ಕೋಸ್ಕರ ಆದರದಿಂದ ಒಂದು ಸುಂದರವಾದ ಹಾರವನ್ನು ನಿರ್ಮಾಣಮಾಡಿ, ನವಿಲಿನ ಕಂಠದಂತೆ ತನ್ನ ಮಧುರವಾದ ಕಂಠಧ್ವನಿಯಿಂದ ತಮಗೆಲ್ಲಾ ಅತ್ಯಾನಂದವನ್ನುಂಟುಮಾಡುತ್ತಿರುವ ಆ ಲಕ್ಷ್ಮೀದೇವಿಯ ಮನೋಹರವಾದ ಕುತ್ತಿಗೆಯಲ್ಲಿ ಆ ಹಾರವನ್ನು ಹಾಕಿದರು. ಆಮೇಲೆ ಲಕ್ಷ್ಮೀದೇವಿಯ ಮೃದುಮಧುರವಾದ ವೀಣಾಧ್ವನಿಗಳನ್ನು ಲಾಲಿಸುತ್ತಾ ಎಲ್ಲರೂ ಆನಂದಭರಿತರಾದರು. ॥೧॥

ಸಾ ಸಪ್ತಸ್ವರಸನ್ನಿಬದ್ಧಮಧುರೈರ್ಗಾನೈಃ ಸವೀಣೋದ್ಭವೈಃ
ಭೋ ಶಂಭೋ ಭವ ಸಾಂಬ ಶಂಕರ ಮಹಾದೇವೇತಿಶಬ್ದಾನ್ವಿತೈಃ ।
ಕೃತ್ವಾ ಶಂಕರಮಂದಿರಂ ಪ್ರತಿರವಾಪೂರ್ಣಂ ತು ತೂರ್ಣಂ ನೃಪಂ
ಪೂರ್ಣಾನಂದಮಮುಂ ಚಕಾರ ಕಿಮಿತಿ ಪ್ರೇಮ್ಣಾ ಗರಿಮ್ಣಾ ತದಾ ॥೧॥

ತದ್ಗಾನಶ್ರವಣಾದರೇಣ ಸ ಧರಾಧೀಶೋಽಪಿ ನೀತ್ವಾ ಮುಹುಃ
ಕಾಲಂ ಕಾಲಭಯಾಪಹಾರಚತುರೋ ಧೀರೋಽತಿಹಾರಃ ಪರಂ ।
ತತ್ಕಿಂ ಕಿಂನರಸುಂದರೀರುಚಿಕರಂ ಗಾನಂ ಕಿಮನ್ಯಾಮರೀ
ಗಂಧರ್ವಾಧಿಪಸುಂದರೀರುಚಿಕರಂ ಗಾನಂ ಕಿಮಿತ್ಯಾಹ ಸಃ ॥೨॥

ತತಃ ಪರಂ ತತ್ಪ್ರತೀಹಾರನಾರೀ ವಿಚಾರಯದ್ದ್ವಾರಸಮೂಹಮಧ್ಯೇ ।
ನಿಶ್ಚಿತ್ಯ ತಾವತ್ಕಮಲಾವಿಲಾಸಗಾನಂ ಯಯೌ ಭೂಪತಿಸನ್ನಿಧಾನಂ ॥೩॥

---

ಲಕ್ಷ್ಮೀದೇವಿಯು ವೀಣೆಯನ್ನು ಬಾರಿಸುತ್ತಾ ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ ಎಂಬ ಸಪ್ತಸ್ವರಗಳಿಂದಲೂ ಯುಕ್ತವಾಗಿರುವ ಮಧುರವಾದ ಧ್ವನಿಯಿಂದ, ಓ ಶಂಭುವೇ, (ಜಗತ್ತಿಗೆಲ್ಲಾ ಆನಂದವನ್ನುಂಟುಮಾಡುವವನೇ !) ಭವನೇ,(ಜಗತ್ಸೃಷ್ಟಿಕರ್ತನೇ !)ಅಂಬಿಕಾಪತಿಯಾದ ಶಂಕರನೇ ! ಎಲೈ ಮಹಾದೇವ, ಸಲಹು ಎಂದು ಶಿವನ ನಾಮೋಚ್ಚಾರಣೆಯನ್ನು ಮಾಡುತ್ತಾ, ತನ್ನ ಮಧುರವಾದ ವೀಣಾಧ್ವನಿಯಿಂದ ಆ ಪರಶಿವನ ಮಂದಿರವೆಲ್ಲಾ ಪ್ರತಿಧ್ವನಿಕೊಡುವಂತೆ ಹಾಡಿದಳು. ಮತ್ತು ಆ ಮಹಾರಾಜನಿಗೂ ಅತಿಶಯವಾದ ಭಕ್ತಿವಿಶ್ವಾಸಗಳುಂಟಾಗುವಂತೆ ಪರಮಾನಂದವನ್ನುಂಟುಮಾಡಿದಳು. ॥೧॥

ಧೀರನೂ ಮತ್ತು ಪರಮಶಿವಭಕ್ತನೂ ಆದ ಈ ಮಹಾರಾಜನೂ ಲಕ್ಷ್ಮೀದೇವಿಯ ಗಾನವನ್ನು ಆದರದಿಂದ ಕೇಳುತ್ತಾ ಬಹಳಕಾಲ ಅಲ್ಲಿಯೇ ಕಳೆದು ಈ ಮಧುರವಾದ ಸಂಗೀತವು, ಸುಂದರಾಂಗಿಯರಾದ ಕಿಂನರಸ್ತ್ರೀಯರ ಗಾನಕ್ಕೇನಾದರೂ ಸರಿಹೋದೀತೇ ? ಅಥವಾ ಇತರ ದೇವತಾಸ್ತ್ರೀಯರ ಮತ್ತು ಗಂಧರ್ವಸುಂದರಿಯರ ಸಂಗೀತವನ್ನೇನಾದರೂ ಅನುಕರಿಸುತ್ತಿರಬಹುದೇ ? ಎಂದು ಆ ಸಂಗೀತಾನಂದಪರವಶನಾಗಿ ಏನೊಂದೂ ತಿಳಿಯದವನಾದನು. ॥೨॥

ಅನಂತರ ಆ ರಾಜನ ದಾಸಿಯೊಬ್ಬಳು ರಾಜನಪ್ಪಣೆಯಂತೆ ರಾಜಪತ್ನಿಯರನ್ನು ಹುಡುಕುತ್ತಾ, ಅಲ್ಲಿಗೆ ಬಂದು, ರಾಣಿಯರೆಲ್ಲರೂ ಲಕ್ಷ್ಮೀದೇವಿಯ ಗಾನವೈಭ

|| ಪ್ರತಿಹಾರನಾರ್ಯುವಾಚ ||

ಸ್ವಾಮಿನ್ಪೂರ್ವಭವಾರ್ಜಿತಾಮಿತಮಹಾಪುಣ್ಯಪ್ರಭಾವೈರುಮಾ
ಕಾಂತಾರಾಧನತತ್ಪರಾ ಹರಿಸತೀ ಸಾಯಂ ಸಮಭ್ಯಾಗತಾ ।
ಕೃತ್ವಾ ಶಂಕರಪೂಜನಂ ಪುನರಿಯಂ ಗಾನಪ್ರಿಯಂ ಸತ್ಕ್ರಿಯಂ
ತಂ ಗೌರೀಪ್ರಿಯಮಾದರಾಚ್ಛಿವಪರೈರ್ವರ್ಣೈಃ ಪರಂ ಗಾಯತಿ ||೫||

ತದ್ಗಾನೈರರಮಣೀಗಣೋಽಪಿ ವಿವಶಾಶ್ಚಿತ್ರಾರ್ಪಿತತ್ವಂ ಮುಹುಃ
ಪ್ರಾಪ್ತಾಪಾರಶಿವಾಭಿಧಾನನಿನದೈರ್ದಾರಾಶ್ಚ ತೇ ತತ್ಪರಾಃ ।
ಆಹಾರಾದ್ವಿರತಾಃ ಕದಾಪಿ ನ ತಥಾ ತದ್ಗಾನಧಾರಾದರಾ
ಶ್ಚಿತ್ರಾಣಾಮಪಿ ಚಿತ್ರತಾಮುಪಗತಾಸ್ತತ್ಕೌತುಕಂ ಕೇವಲಂ ||೬||

---

ವದಲ್ಲಿ ಮುಗ್ಧರಾಗಿರುವುದನ್ನು ನೋಡಿ ಅಲ್ಲಿಂದ ಹೊರಟು ರಾಜನ ಸಮೀಪಕ್ಕೆ ಬಂದು ಇಂತೆಂದಳು. ||೪||

"ಪ್ರಭೋ, ಮಹಾವಿಷ್ಣುವಿನ ಪತ್ನಿ ಸತೀಶಿರೋಮಣಿಯಾದ ಮಹಾಲಕ್ಷ್ಮೀದೇವಿಯು, ತನ್ನ ಅಪಾರವಾದ ಪೂರ್ವಜನ್ಮಪುಣ್ಯವಿಶೇಷಮಹಿಮೆಯಿಂದ ಈ ಸಾಯಂಕಾಲ ಶಿವಾಲಯಕ್ಕೆಬಂದು ಅಲ್ಲಿ ಭಕ್ತಿಯಿಂದ ಉಮಾದೇವಿಯ ರಮಣನಾದ ಪರಮೇಶ್ವರನನ್ನು ಭಕ್ತಿಯಿಂದ ಅನನ್ಯಮನಸ್ಕಳಾಗಿ ಪೂಜೆಮಾಡಿರುವಳು. ಅಲ್ಲದೆ ತನ್ನ ಪೂಜೆಯು ಮುಗಿದನಂತರ ಸಂಗೀತಪ್ರಿಯನೂ, ಪರಮಪೂಜ್ಯನೂ ಆಗಿರುವ ಈ ಮಹಾದೇವನನ್ನು ಶಿವನಾಮಪರವಾದ ನಾಮಗಳಿಂದ ಆದರಪೂರ್ವಕವಾಗಿ ಧ್ಯಾನಿಸುತ್ತಾ ತನ್ನ ಮೃದುಮಧುರವಾದ ಕಂಠಧ್ವನಿಯಿಂದಲೂ ವೀಣೆಯಿಂದಲೂ ಸಹ ಗಾನಮಾಡುತ್ತಿರುವಳು. ||೫||

ಈ ಲಕ್ಷ್ಮೀದೇವಿಯ ಮಧುರವಾದ ಸಂಗೀತದಿಂದ ಸ್ತ್ರೀಸಮೂಹವೆಲ್ಲವೂ ಪರವಶವಾಗಿರುವುದಲ್ಲದೆ ನಿನ್ನ ಪತ್ನಿಯರೂ ಸಹ ಆ ಶಿವನಾಮಸಂಕೀರ್ತನರೂಪವಾದ ಗಾನಕ್ಕೆ ತಲೆಬಾಗಿ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ಸ್ತಬ್ಧರಾಗಿರುವರು. ಮತ್ತು ಹಿಂದೆ ಯಾವಾಗಲೂ ಹೀಗೆ ತೋರದೇ ಇರುವ ಮಹಾರಾಣಿಯರು ಆಹಾರವನ್ನೂ ಸಹ ತೆಗೆದುಕೊಳ್ಳದೆ ಸಂಗೀತದ ಆನಂದದಲ್ಲಿ ಮುಳುಗಿಹೋಗಿರುವರು. ಅತ್ಯಂತ ಆಶ್ಚರ್ಯಕರವಾಗಿ ತೋರುತ್ತಿರುವ ಈ ಸಂಗತಿಯನ್ನು ನೋಡಿದರೆ ನನಗೆ ಬಹಳ ಕುತೂಹಲವುಂಟಾಗುತ್ತಿರುವುದು. ||೬||

ಶ್ರುತ್ವಾ ತು ಗಾನಂ ಮೃಗನಾಯಕಾನಾಂ
ದಾರಾಶ್ಚ ಶಾರ್ದೂಲವರಾಂಗನಾಶ್ಚ ।
ನ ಯಾಂತಿ ತಾವದ್ವಿಪಿನಂ ಸಬಾಲ
ಮೇಣೀಕುಲಂ ತಿಷ್ಠತಿ ಗಾನಲೋಲಂ ॥೭॥

ಝುಂಕಾರೈರ್ವಿರತಾಶ್ಚರಂತಿ ಪರಿತೋ ಭೃಂಗಾಂಗನಾನಾಂ ಗಣಾಃ
ತದ್ಗಾನಶ್ರವಣಾತ್ತಥಾ ಪರಭೃತಾಂ ನಾರೀಗಣಸ್ತಿಷ್ಠತಿ ।
ಅತ್ಯುನ್ಮತ್ತಮರಾಲರಾಜವನಿತಾಃ ಪಶ್ಯಂತಿ ತಾಮಾದರಾ
ತ್ತದ್ಗಾನಶ್ರವಣಾತಿಲಜ್ಜಿತಮನೋವೃತ್ತ್ಯಾ ನಿವೃತ್ತಸ್ವರಾಃ ॥೮॥

ಸಾ ಸಪ್ತಸ್ವರಬಂಧಮೇವ ಕುರುತೇ ನಾಮೇಶಮೇಕೈಕಮಪ್ಯ
ಸ್ಯಾನಂದಸಮನ್ವಿತಾಸ್ಸ್ಫುಟತರಂ ತಚ್ಛ್ರೂಯತೇ ಶಾಂಭವಂ ।
ಸಾಮಾತಾ ಪರಮಿಂದಿರಾಪಿ ರುಚಿರಂ ಗಾನಂ ವಿಹಾಯಾಪಿ ಸಾ
ಗಂತುಂ ನೇಚ್ಛತಿ ಶಾಂಕರಾನತಿಮುಹುರ್ದ್ವಾರಾನ್ನ ತೇ ಪಶ್ಯತಿ ॥೯॥

---

ಸ್ವಾಮಿ, ಈ ಲಕ್ಷ್ಮೀದೇವಿಯ ದಿವ್ಯವಾದ ಸಂಗೀತವನ್ನು ಕೇಳುತ್ತಾ ಹೆಣ್ಣುಜಿಂಕೆಗಳೂ, ಹೆಣ್ಣು ಹುಲಿಗಳೂ ಸಹ ತಮ್ಮ ಮರಿಗಳೊಡನೆ ಕಾಡಿಗೆ ಹಿಂದಿರುಗದೆ ಅಲ್ಲಿಯೇ ನಿಂತುಬಿಟ್ಟಿರುವುವು. ಈ ಗಾನದಲ್ಲಿ ಮಗ್ನವಾಗಿರುವ ಜಿಂಕೆಗಳು ಗುಂಪುಗುಂಪಾಗಿ ತಮ್ಮ ಮರಿಗಳೊಡನೆ ಅಲ್ಲಿಯೇ ಮೈಮರೆತಿರುವವು. ॥೭॥

ದುಂಬಿಗಳು ಗುಂಪುಗುಂಪಾಗಿ ತಾವು ಝೇಂಕಾರಮಾಡದೆ ಆ ಸಂಗೀತದಲ್ಲಿಯೇ ಮಗ್ನವಾಗಿ ನಿಶ್ಶಬ್ದವಾಗಿ ಸುತ್ತಲೂ ಸಂಚರಿಸುತ್ತಿರುವುವು. ಹೆಣ್ಣು ಕೋಗಿಲೆಗಳು ಲಕ್ಷ್ಮೀದೇವಿಯ ದಿವ್ಯಸಂಗೀತವನ್ನು ಕೇಳುತ್ತಾ ತಮ್ಮ ಧ್ವನಿಯನ್ನೂ ನಿಲ್ಲಿಸಿ ಲಾಲಿಸುತ್ತಿರುವುವು. ಮತ್ತು ಮದೋನ್ಮತ್ತಗಳಾಗಿರುವ ಹೆಣ್ಣು ರಾಜಹಂಸಗಳೂ ಸಹ ಆ ಲಕ್ಷ್ಮೀದೇವಿಯನ್ನೇ ಆದರದಿಂದ ದಿಟ್ಟಿಸಿ ನೋಡುತ್ತಾ ಅವಳ ಗಾನಶ್ರವಣದಿಂದ ಲಜ್ಜೆಗೊಂಡ ಮನಸ್ಸುಳ್ಳವುಗಳಾಗಿ ಮೌನವಾಗಿ ಕುಳಿತಿರುವುವು. ॥೮॥

ಈ ಲಕ್ಷ್ಮೀದೇವಿಯಾದರೋ ಪರಮೇಶ್ವರನ ಒಂದೊಂದು ನಾಮಗಳನ್ನೂ ಸಪ್ತಸ್ವರಗಳಿಂದಲೇ ಗಾನಮಾಡುತ್ತಿರುವಳು. ಪ್ರತಿಯೊಂದು ಹೆಸರಿನಲ್ಲಿಯೂ ಶಂಭುವಿನ ಭಕ್ತಿರಸವು ಸ್ಪಷ್ಟವಾಗಿ ಕೇಳಿಬರುತ್ತಿದೆ. ಈ ರೀತಿ ಪರಮಾನಂದಭರಿತ

ಇತ್ಯಾಕರ್ಣ್ಯ ವಚಃ ಸ ಭೂಪತಿರಪಿ ಪ್ರಾಹ ಪ್ರಕೃಷ್ಟಂ ವಚ
ಸ್ತತ್ಪ್ರತ್ಯೂಹನಿವಾರಣೇನ ಸಮಯೋ ನೇಯಃ ಶಿವಾರಾಧನೈಃ ।
ಇತ್ಯೇವಂ ಸ್ಥಿರತಾಂ ಗತೋ ಹರಿರಪಿ ಸ್ವಚ್ಛಸ್ತದಾಕರ್ಣನೈ
ರಾನಂದಾಂಬುಧಿವರ್ಧಕೈಸ್ತದಿತರೇಽಪ್ಯಾನಂದಧಾರಾವೃತಾಃ ॥೧೦॥

ಏವಂ ತತ್ಕಮಲಾಕೃತಾಮಿತಮಹಾವೀಣಾಪ್ರಭೂತಂ ಪರಂ
ಗಾನಂ ಶಂಕರನಾಮಚಿಹ್ನಿತಮತಿಶ್ರಾವ್ಯಂ ಸ ಶೃಣ್ವನ್ನೃಪಃ ।
ಸಂತುಷ್ಟೋ ವಿರತೋ ನ ತಚ್ಛ್ರವಣತೋ ಕಾಲೋಽಪಿ ನೀತಸ್ತತೋ
ಮಧ್ಯಾಹ್ನೇ ಶಿವಪೂಜನೋದ್ಯತಮತಿಶ್ಚಕ್ರೇ ಶಿವಾರಾಧನಂ ॥೧೧॥

---

ಳಾಗಿ ಮನೋಹರವಾದ ತನ್ನ ಗಾನವನ್ನು ನಿಲ್ಲಿಸಿ ಈ ಲಕ್ಷ್ಮೀದೇವಿಯು ಹೊರಡಲು ಅಪೇಕ್ಷಿಸುವಂತೆಯೇ ತೋರುವುದಿಲ್ಲ. ಆನಂದಭರಿತಳಾಗಿ ಶಿವಧ್ಯಾನ ಮಗ್ನಳಾದ ಈ ಲಕ್ಷ್ಮಿಯು ಶಂಕರನ ಭಕ್ತೆಯರಾದ ನಿನ್ನ ಪತ್ನಿಯರನ್ನು ನೋಡುತ್ತಿಲ್ಲವೆಂದು ಪ್ರತೀಹಾರಿಸ್ತ್ರೀಯು ರಾಜನಿಗೆ ಹೇಳಿದಳು. ॥೯॥

ಈ ಮಹಾರಾಜನೂ ಸಹ ಪ್ರತಿಹಾರಿಯ ಮಾತುಗಳನ್ನು ಕೇಳಿ, ಎಲೈ ಪ್ರತೀಹಾರಿಯೇ ! ನೀನು ಹೇಳಿದುದು ಸರಿ. ಆ ಲಕ್ಷ್ಮೀದೇವಿಗೂ ಮತ್ತು ಅವಳ ಗಾನವನ್ನು ಲಾಲಿಸುತ್ತಾ ಶಿವಧ್ಯಾನ ತತ್ಪರರಾದ ರಾಜಸ್ತ್ರೀಯರಿಗೂ ಯಾವ ವಿಧವಾದ ತೊಂದರೆಯೂ ಉಂಟಾಗದಂತೆ ನೋಡಿಕೊಳ್ಳಬೇಕೆಂದು ಶುಭಕರವಾದ ಮಾತುಗಳನ್ನೇ ಪ್ರತೀಹಾರಿಗೆ ತಿಳಿಸಿದನು. ಮೊದಲು ಸ್ಥಿರನಾಗಿ ಕುಳಿತಿದ್ದ ಮಹಾ ವಿಷ್ಣುವೂ ಸಹ ಈ ಲಕ್ಷ್ಮೀದೇವಿಯ ಮಧುರವೂ ಶಿವಭಕ್ತಿಯುಕ್ತವೂ ಆದ ಗಾನವನ್ನು ಕೇಳಿ ಆನಂದಪರವಶನಾದನು. ಉಳಿದವರೂ ಸಹ ಆನಂದಸಾಗರದಲ್ಲಿ ಮಗ್ನರಾದರು. ॥೧೦॥

ಹೀಗೆ ಲಕ್ಷ್ಮೀದೇವಿಯು ತನ್ನ ಅಮೋಘವಾದ ವೀಣಾನಾದದೊಡನೆ ಶಂಕರನ ನಾಮಗಳನ್ನು ತಿಳಿಸುವಂತೆ ಮೃದುಮಧುರವಾಗಿ ಗಾನಮಾಡುತ್ತಿರಲು, ಇದನ್ನು ಕೇಳುತ್ತಾ ಸಂತೋಷಭರಿತನಾದ ರಾಜನು ಬಹಳ ಕಾಲದವರೆವಿಗೂ ಹಾಗೆಯೇ ಕುಳಿತಿದ್ದನು. ಹಾಗೆಯೇ ಮಧ್ಯಾಹ್ನಕಾಲವಾಗಲು ಶಿವಪೂಜೆಯಲ್ಲಿ ಉದ್ಯುಕ್ತನಾಗಿ ಭಕ್ತಿಯಿಂದ ಪರಮೇಶ್ವರನನ್ನಾರಾಧಿಸಲುಪಕ್ರಮಿಸಿದರು. ॥೧೧॥

ತತಃ ಪರಂ ಸ ಭೂಪಾಲೋ ದಾಪಯಾಮಾಸ ಭೂಷಣಂ ।
ವಿವಿಧಂ ರತ್ನಸಂಕೀರ್ಣಂ ಕಮಲಾಯೈ ಮನೋಹರಂ ॥೧೨॥

ತತಸ್ತಂ ಪ್ರೇಷಯಾಮಾಸ ನಾರಾಯಣಮಿಲಾಪತಿಃ ।
ಕಮಲಾಸಹಿತಃ ಸೋಽಪಿ ಯಯೌ ವೈಕುಂಠಮಂದಿರಂ ॥೧೩॥

ತತಃ ಪರಂ ಸ ಭೂಪಾಲಃ ಸಾಯಂಕಾಲೇಽಪಿ ಶಂಕರಂ ।
ಪೂಜಯಿತ್ವಾ ವಿಧಾನೇನ ಯಯೌ ಸ್ವನಗರಂ ಪ್ರತಿ ॥೧೪॥

ತತೋ ನಕ್ತಂ ಮಹಾದೇವನೈವೇದ್ಯಮುಪಭುಜ್ಯ ಸಃ ।
ಸದಾರೈಶ್ಚ ಕುಮಾರೈಶ್ಚ ರೇಮೇ ಸುಂದರಮಂದಿರೇ ॥೧೫॥

ಏತಾದೃಶಸ್ಯ ಭೂಪಸ್ಯ ಸ್ಮರಣೇನಾಪಿ ಸಿದ್ಧಯಃ ।
ಸಿದ್ಧ್ಯಂತಿ ಶಾಂಭವಶ್ರೇಷ್ಠಾಃ ಸ ಭೂಪಾಲಃ ಶುಭಾವಹಃ ॥೧೬॥

---

ಶಿವಪೂಜೆ ಮುಗಿದಮೇಲೆ ಆ ಮಹಾರಾಜನು ಸುಂದರವಾಗಿ ರತ್ನಖಚಿತವಾಗಿರುವ ನಾನಾ ಆಭರಣಗಳನ್ನು ಲಕ್ಷ್ಮೀದೇವಿಗೆ ಕೊಡಿಸಿದನು. ॥೧೨॥

ಆ ಭೂಪತಿಯು ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನನ್ನೂ ಉಚಿತವಾಗಿ ಗೌರವಿಸಿ ಕಳುಹಿಸಿಕೊಟ್ಟನು. ಅನಂತರ ಲಕ್ಷ್ಮಿಯೊಡನೆ ಶ್ರೀಮನ್ನಾರಾಯಣನು ತನ್ನ ಪುರಕ್ಕೆ (ವೈಕುಂಠಕ್ಕೆ) ತೆರಳಿದನು. ॥೧೩॥

ಶ್ರೀಮನ್ನಾರಾಯಣನನ್ನು ಬೀಳ್ಕೊಟ್ಟಮೇಲೆ ಆ ಮಹಾರಾಜನು ಸಾಯಂಕಾಲದಲ್ಲಿ ಶಿವನನ್ನು ವಿಧಿಪೂರ್ವಕವಾಗಿ ಪೂಜಿಸಿ ತಾನೂ ಸಹ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ॥೧೪॥

ಅನಂತರ ರಾತ್ರಿಯಾಗುತ್ತಲೂ ರಾಜನು ಮಹಾದೇವನಿಗೆ ನಿವೇದನ ಮಾಡಿದ್ದ ಪದಾರ್ಥಗಳನ್ನು ತನ್ನ ಪತ್ನಿಯರು ಮತ್ತು ಮಕ್ಕಳೊಡನೆ ಊಟಮಾಡಿ ತನ್ನ ಸುಂದರವಾದ ಅರಮನೆಯಲ್ಲಿ ಸಂತೋಷದಿಂದ ಕಾಲಹರಣಮಾಡುತ್ತಿದ್ದನು. ॥೧೫॥

ಎಲೈ ಶಂಕರನ ಭಕ್ತಾಗ್ರೇಸರರೇ! ಇಂತಹ ಶಿವಭಕ್ತಶ್ರೇಷ್ಠನೆನಿಸಿದ ರಾಜನನ್ನು ಸ್ಮರಣೆಮಾಡಿದ ಮಾತ್ರದಿಂದಲೇ ಸಕಲ ಸಿದ್ಧಿಗಳೂ ಸಿದ್ಧಿಸುವುವು. ಹೀಗೆ ಆ ರಾಜನು ಸರ್ವರಿಗೂ ಮಂಗಳಕರನಾಗಿದ್ದನು. ॥೧೬॥

ತಸ್ಮಿಂಛಾಸತಿ ತದ್ರಾಷ್ಟ್ರೇ ಶಿವವಿದ್ಯಾಮೃತಾಬ್ಧಯಃ ।
ಪ್ರವೃದ್ಧಾ ಏವ ಸರ್ವತ್ರ ಯೈರ್ಮುಕ್ತಿಃ ಸುಲಭಾ ಭವೇತ್ ॥೧೭॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ತಸ್ಯ ಶ್ರವಣಮಾತ್ರೇಣ ಜಾಯತೇ ಗತಕಲ್ಮಷಃ ॥೧೮॥

ತದ್ರಾಷ್ಟ್ರೇ ಕೋಽಪಿ ವಿಪಿನೇ ಸಂಚರಲ್ಲಿಂಗಮುತ್ತಮಂ ।
ದದರ್ಶ ಸ ಸರಸ್ತೀರೇ ಚಕ್ರೇ ತಸ್ಯೈವ ಪೂಜನಂ ॥೧೯॥

ಪ್ರಫುಲ್ಲಹೇಮಪದ್ಮಾದ್ಯೈರ್ನವಬಿಲ್ವದಲೈರಪಿ ।
ತತ್ರ ಸಾಯಮುಷಿತ್ವಾಪಿ ಕುರ್ವನ್ನೇವ ಶಿವಾರ್ಚನಂ ॥೨೦॥

---

ಈ ರಾಜನು ಆಳುತ್ತಿದ್ದಾಗ, ಅವನ ರಾಜ್ಯದಲ್ಲಿ ಶಿವವಿದ್ಯೆಯೆಂಬ (ಶಿವ ಪೂಜಾ, ಧ್ಯಾನ ಮತ್ತು ಸದಾ ಶಿವನಾಮಸ್ಮರಣ ಮುಂತಾದುವುಗಳು) ಅಮೃತದ ಸಮುದ್ರಗಳು ಎಲ್ಲೆಲ್ಲೂ ಅಭಿವೃದ್ಧಿಹೊಂದುತ್ತಿದ್ದವು. (ಅಂದರೆ ಪ್ರಜೆಗಳೆಲ್ಲಾ ಶಿವನಾಮಾಮೃತಸ್ಮರಣ, ಧ್ಯಾನ, ಪೂಜಾದಿಗಳಲ್ಲಿ ನಿರತರಾಗಿದ್ದರೆಂದು ಭಾವ.) ಆ ರಾಷ್ಟ್ರದ ಪ್ರಜೆಗಳಿಗೆ ಮೋಕ್ಷವು ಬಹು ಸುಲಭವಾಗಿ ದೊರೆಯುತ್ತಿದ್ದಿತು. ॥೧೭॥

ಈ ರಾಜನ ದೇಶದಲ್ಲಿ ಒಂದು ಪುರಾತನವಾದ ಇತಿಹಾಸವು ಕೇಳಿಬರುತ್ತಿದೆ. ಅದನ್ನು ಶ್ರವಣಮಾಡಿದ ಮಾತ್ರದಿಂದಲೇ ಮಾನವನು ಪಾಪರಹಿತನಾಗುವನು. ಅಯ್ಯ ಜನಕಮಹಾರಾಜನೇ ಆ ಇತಿಹಾಸವನ್ನು ತಿಳಿಸುವೆನು ಕೇಳು ; ಎಂದು ಯಾಜ್ಞ್ಯವಲ್ಕ್ಯಮಹರ್ಷಿಯು ಮುಂದೆ ಹೇಳತೊಡಗಿದನು. ॥೧೮॥

ಆ ರಾಜನ ದೇಶದಲ್ಲಿ ವಾಸಮಾಡುವ ಯಾವನೋ ಒಬ್ಬ ಮಾನವನು ಒಂದುದಿನ ಕಾಡಿನಲ್ಲಿ ಸಂಚರಿಸುವ ಸಮಯದಲ್ಲಿ ಒಂದು ಸರೋವರದ ದಡದಲ್ಲಿ ಶ್ರೇಷ್ಠವಾದ ಶಿವಲಿಂಗವೊಂದನ್ನು ನೋಡಿದನು. ಆಗ ಆವನು ಭಕ್ತಿಯುತನಾಗಿ ಚೆನ್ನಾಗಿ ಅರಳಿ ಚಿನ್ನದಂತೆ ಕಾಂತಿಯುಳ್ಳ ತಾವರೇ ಹೂವುಗಳಿಂದಲೂ ಹೊಸ ಬಿಲ್ವಪತ್ರೆಯ ದಳಗಳಿಂದಲೂ ಆ ಶಿವಲಿಂಗವನ್ನು ಪೂಜಿಸಿದನು ಮತ್ತು ಸಾಯಂಕಾಲದಲ್ಲಿ ಅದೇ ಸ್ಥಳದಲ್ಲಿಯೇ ಶಿವಪೂಜೆಯನ್ನು ಮಾಡುತ್ತಲೇ ಕಾಲಕಳೆಯುತ್ತಿದ್ದನು. ॥೧೯-೨೦॥

ದದರ್ಶ ಕಾಲಮುನ್ಮತ್ತಂ ಭೂತಪ್ರೇತಸಮನ್ವಿತಂ ।
ನಾಗಪಾಶಾಯುಧಧರಂ ಶೂಲಾದಿಸಮಲಂಕೃತಂ ॥೨೧॥

ತತಃ ಸ ತಾವದ್ಭೀತೋಽಪಿ ತಂ ದೃಷ್ಟ್ವಾ ಕಾಲಮದ್ಭುತಂ ।
ತನ್ನಿವಾರಕಮತ್ರಾಸ್ತಿ ಕಿಮಿತ್ಯತಿಭಯಾತುರಃ ॥೨೨॥

ದೂರಾದ್ದೃಷ್ಟ್ವಾಪಿ ತಂ ಕಾಲಂ ಕಂಪಮಾನೋಽತಿಭೀಷಣಂ ।
ತತ್ಪಾಶಾನ್ಯವಲೋಕ್ಯಾಪಿ ತದ್ದೂತಾನಪಿ ಕೋಟಿಶಃ ॥೨೩॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ಗಮನೇಽಪಿ ಬಲಂ ನ ಮೇ ।
ಅಕಸ್ಮಾದಾಗತಃ ಕಾಲಃ ಕ್ರೂರದೃಷ್ಟ್ಯಾ ಪ್ರಪಶ್ಯತಿ ॥೨೪॥

ಶಿವಲಿಂಗಾರಾಧನೇನ ಪಾಪನಾಶೋ ಭವಿಷ್ಯತಿ ।
ಇತ್ಯಾಶಾ ಭೂಯಸೀ ನಾಸೀತ್ಕಿಮಿತ್ಯೇವಾತಿವಿಸ್ಮಿತಃ ॥೨೫॥

---

ಈ ಸಮಯದಲ್ಲಿ ಭೂತಪ್ರೇತಗಳೊಡಗೂಡಿ ನಾಗಪಾಶ, ತ್ರಿಶೂಲ ಮುಂತಾದ ಆಯುಧಗಳನ್ನು ಧರಿಸಿ ಉನ್ಮತ್ತನಾಗಿ ಭಯಂಕರನಾದ ಯಮನು ಇವನ ದೃಷ್ಟಿಗೆ ಗೋಚರವಾದನು. ॥೨೧॥

ಆಗ ಅದ್ಭುತವಾದ ರೂಪವುಳ್ಳ ಭಯಂಕರನಾದ ಯಮನನ್ನು ನೋಡಿ, ಅಯ್ಯೋ! ಇನ್ನೇನು ಗತಿ! ಈ ಯಮನ ಭಯವನ್ನು ನಿವಾರಣೆಮಾಡುವವರು ಇಲ್ಲಾರಿರುವರು? ಎಂದು ಭಯಾಕುಲಿತನಾದನು. ಈ ಯಮನನ್ನು ದೂರದಲ್ಲಿ ನೋಡಿಯೇ ಹೆದರಿ ನಡುಗುತ್ತಿದ್ದ ಇವನಿಗೆ ಭಯಂಕರವಾದ ಯಮಪಾಶಗಳನ್ನೂ, ಕೋಟ್ಯಂತರ ಯಮಭಟರನ್ನೂ ನೋಡಿ ಮತ್ತೂ ಭಯವು ಹೆಚ್ಚಾಯಿತು. ॥೨೨-೨೩॥

ಈಗೇನುಮಾಡಲಿ? ಎಲ್ಲಿ ಹೋಗಲಿ? ಎಲ್ಲಾದರೂ ಹೋಗೋಣವೆಂದರೆ, ಶಕ್ತಿಯೇ ಇಲ್ಲದೆ ಕಾಲು ಬರುತ್ತಿಲ್ಲ. ಆಕಸ್ಮಾತ್ತಾಗಿ ಈ ಯಮನು ಗೋಚರನಾಗಿರುವನಲ್ಲದೇ, ನನ್ನನ್ನು ಕ್ರೂರವಾದ ದೃಷ್ಟಿಯಿಂದ ಬೇರೆ ನೋಡುತ್ತಿರುವನು. ॥೨೪॥

ಶಿವಲಿಂಗಾರಾಧನೆಯಿಂದ ನನ್ನ ಪಾಪಗಳೆಲ್ಲಾ ನಾಶವಾಗುತ್ತವೆಂದು ನಾನು ಆಸೆಯಿಂದ ಕೂಡಿದ್ದನಲ್ಲವೆ! ಅಯ್ಯೋ ವಿಧಿಯೇ! ಇದೇನು! ಇಂತಹ ಸಂದರ್ಭ ಒದಗಿತು! ಈ ವಿಷಯದಲ್ಲಿ ನನಗೆ ಆಶ್ಚರ್ಯವಾಗುತ್ತಿದೆಯಲ್ಲಾ! ॥೨೫॥

ಜೀವತಾಪಿ ಮಯಾ ದೃಷ್ಟಃ ಕಾಲೋಽಯಮತಿಭೀಷಣಃ ।
ಮರಣಾನಂತರಂ ಕಿಂ ವಾ ಭವಿಷ್ಯತಿ ಭಯಂ ಮುಹುಃ ॥೨೬॥

ಭವಾರ್ಚನೇ ಭಯಂ ಕಾಲಾಜ್ಜಾಯತೇ ಯದಿ ಜಾತುಚಿತ್ ।
ಅಸಕೃನ್ನ ಭವತ್ಯೇವ ಕಿಮಿತ್ಯಪಿ ನ ಮೇ ಮತಿಃ ॥೨೭॥

ಕಾಲಾಂತಕಾರಾಧನೇಽಪಿ ಕಾಲಭೀತಿರ್ಭವೇದ್ಯದಿ ।
ತದಾ ತದ್ಬೀಜನಾಶಃ ಸ್ಯಾತ್ಕೇನ ವಾ ತನ್ನಿವಾರ್ಯತೇ ॥೨೮॥

ಮಹ್ಯಮಪ್ಯದ್ಯ ಭಯದೋ ಯಮೋ ಯದಿ ತದಾ ಕಥಂ ।
ಅನ್ಯೇಷಾಂ ಜೀವನಂ ವಾ ಸ್ಯಾದಪರಾಧೋಽಪಿ ಕಃ ಪರಃ ॥೨೯॥

ಲಿಂಗಾರ್ಚನರತಸ್ಯಾಪಿ ವಿಪಿನೇ ಸಾಯಮೀದೃಶೀ ।
ಯದಿ ಕಾಲಾದ್ಭವೇದ್ಭೀತಿಸ್ತದಾ ಶ್ರುತಿಕಥಾ ಕುತಃ ॥೩೦॥

---

ಈಗಲೇ ಯಮದರ್ಶನವಾಯಿತಲ್ಲಾ! ಮರಣಾನಂತರ ಇದಕ್ಕಿಂತಲೂ ಅತಿಶಯವಾದ ಮತ್ತೇನು ಭಯವೊದಗುವುದೋ ದೇವರೇ ಬಲ್ಲ. ॥೨೬॥

ಈ ಶಿವಪೂಜಾಸಂದರ್ಭದಲ್ಲಿಯೂ ಒಂದುವೇಳೆ ಯಮನ ದೆಸೆಯಿಂದ ಭಯವುಂಟಾಗುವುದಾದರೆ ಪದೇ ಪದೇ ಹಾಗೆಯೇ ಏಕೆ ಉಂಟಾಗಬಾರದು! ಇದು ತಿಳಿಯದಾಗಿದೆ. ॥೨೭॥

ಕಾಲಸ್ವರೂಪನಾದ ಯಮನನ್ನು ನಿಗ್ರಹಿಸಿದ ಪರಶಿವನ ಪೂಜೆಯಲ್ಲಿ ಸಹ ಈ ಯಮನ ಭಯವು ಉಂಟಾಗುವುದೇ ನಿಜವಾದರೆ; ಆಗ ಈ ಯಮನ ವೀರ್ಯವನ್ನು ತಡೆಯುವವರು ತಾನೇ ಯಾರು? ಇದನ್ನು ಪೂರ್ಣವಾಗಿ ನಿವಾರಣೆ ಮಾಡಲು ಹೇಗೆತಾನೆ ಸಾಧ್ಯ? ॥೨೮॥

ಈ ವನಮಧ್ಯದಲ್ಲಿ ಶಿವಪೂಜಾಸಕ್ತನಾಗಿರುವ ನನಗೇ ಈ ಯಮಬಾಧೆಯು ಈ ರೀತಿ ಉಂಟಾಗಿರುವಾಗ ಉಳಿದವರು ಬದುಕುವ ಬಗೆ ಹೇಗೆ? ಅವರ ತಪ್ಪು ಮತ್ತು ಅಪರಾಧಗಳು ಯಾವುವು ತಾನೇ ಈ ಯಮಭಯವನ್ನುಂಟುಮಾಡಲಾರವು? ॥೨೯॥

ಭಕ್ತಿಪುರಸ್ಸರವಾಗಿ ಶಿವಲಿಂಗವನ್ನು ಪೂಜಿಸುತ್ತಾ ಆ ಶಿವಧ್ಯಾನದಲ್ಲೇ ತತ್ಪರನಾಗಿರುವ ನನ್ನನ್ನೇ ಈ ಯಮನು ಭಯಪಡಿಸುವುದಾದರೆ, ಶ್ರುತಿ, ಸ್ಮೃತ್ಯಾ

ಶ್ರುತಯಃ ಶಿವಪೂಜನಾದ್ಭಯಂ ನ ಜನಿರ್ಭವತೀತಿ ಸಂತತಂ ।
ಪ್ರವದಂತಿ ವದಂತಿ ತತ್ಕಥಂ ಮುನಯೋಽಪೀತಿ ವಿನಿಶ್ಚಯೋ ಮಮ ॥೩೧॥

ಹೇ ಕಾಲಾಂತಕ ಹೇ ಮಹೇಶ್ವರ ಮಹಾದೇವಾವ ಮಾಂ ದುರ್ದಶಾ
ಮೇನಾಂ ಸಂಹರ ಸಂಹರಾಶು ವಿವಿಧಾಂ ಕಂಪಾಯಮಾನಸ್ಯ ಮೇ ।
ಪಶ್ಯಾಂಗಂ ಪರಿಪಶ್ಯ ಗದ್ಗದಗಿರಾ ನ ಸ್ತೋತುಮಿಚ್ಛಾಪಿ ಮೇ
ಗೌರೀಕಾಂತಪದಾರವಿಂದಭಜನಧ್ಯಾನೇಽಪಿ ವಾ ಮನ್ಮನಃ ॥೩೨॥

---

ದಿಗಳಲ್ಲಿ ಶಿವಪೂಜಾತತ್ಪರನೂ ಶಿವಭಕ್ತನೂ ಆದ ಮಾನವನಿಗೆ ಎಂದಿಗೂ ಯಮನ ಭಯವಿಲ್ಲವೆಂದು ಹೇಳಿರುವುದಕ್ಕೆ ಬೆಲೆಯೇನು ? ॥೩೦॥

ಶ್ರುತಿಗಳೆಲ್ಲವೂ, ಶಿವಪೂಜೆಯನ್ನು ಮಾಡುವುದರಿಂದ ಸಕಲ ಭೀತಿಯೂ ನಾಶವಾಗುವುದಲ್ಲದೇ ಮಾನವನಿಗೆ ಪುನರ್ಜನ್ಮವೇ ಇಲ್ಲದಂತೆ ಮುಕ್ತಿಯೂ ಲಭಿಸುವುದೆಂದು ಸಾರುತ್ತಿರುವುವು. ಮಹರ್ಷಿಗಳೂ ಸಹ ಇದೇ ವಚನಗಳನ್ನೇ ಸದಾ ಹೇಳುತ್ತಿರುವರು. ಹೀಗಿರುವಾಗ ಶಿವಪೂಜೆಯನ್ನು ಮಾಡುವ ಮಾನವನಿಗೆ ಈ ಯಮನ ಭಯವುಂಟಾಗುವುದಾದರೆ ನಿಶ್ಚಯವಾಗಿಯೂ ಶ್ರುತಿಗಳೂ ಮಹರ್ಷಿಗಳೂ ಸಹ ಹೀಗೆ ಏಕೆ ಹೇಳುತ್ತಿದ್ದರು ? ॥೩೧॥

ಎಲೈ ಕಾಲಸ್ವರೂಪನಾಗಿ ಯಮನನ್ನು ನಿಗ್ರಹಿಸಿದ ಮಹೇಶ್ವರನೇ ! ನೀನೇ ಮಹಾದೇವನು. ಮತ್ತು ದೇವತೆಗಳಿಗೆಲ್ಲಾ ದೊಡ್ಡವನೂ ಮತ್ತು ಪೂಜ್ಯನೂ ಆಗಿರುವೆ. ಸ್ವಾಮಿಯೇ ! ನನಗೆ ಉಂಟಾಗಿರುವ ನಾನಾವಿಧವಾದ ಈ ಹೀನದೆಸೆಯನ್ನು ಪರಿಹರಿಸಿ ನನ್ನನ್ನು ಜಾಗ್ರತೆ ಉದ್ಧಾರಮಾಡು. ಪ್ರಭೋ, ಈ ಯಮನ ಭಯದಿಂದ ನಡುಗುತ್ತಿರುವ ನನ್ನ ಈ ಅವಯವಗಳನ್ನು ನೋಡು. ಹೆದರಿಕೆಯಿಂದ ಗೌರೀರಮಣನಾದ ನಿನ್ನನ್ನು ಸ್ತೋತ್ರಮಾಡುವುದಕ್ಕಾಗಲೀ ಮತ್ತು ನಿನ್ನ ಪಾದಕಮಲಾರಾಧನೆ ಅಥವಾ ಧ್ಯಾನ ಇವುಗಳನ್ನು ಮಾಡುವುದಕ್ಕೂ ಸಹ ನನಗೆ ಮನಸ್ಸೇ ಉಂಟಾಗದಂತಾಗಿದೆ. ಮಾತುಗಳು ಸಹ ಭಯದಿಂದ ಸರಿಯಾಗಿ ಹೊರಡದೆ, ಗದ್ಗದಧ್ವನಿಯಿಂದ ಸ್ತೋತ್ರಮಾಡೋಣವೆಂದರೂ ಮನಸ್ಸೇ ಬರುತ್ತಿಲ್ಲ. ॥೩೨॥

ಭೋ ಶಂಭೋ ಕರುಣಾ ಕದಾ ಮಯಿ ತವ ಸ್ಯಾದ್ವಾ ವಿಧೇಯಾಽಧುನಾ
ಮೃತ್ಯುಃ ಸನ್ನಿಹಿತೋಽತಿಭೀಷಣವಪುಃ ಕಾಕೋದರಾನ್ವಿಕ್ಷಿಪನ್ ।
ಆಯಾತ್ಯಾಗತ ಏವ ತೇನ ಕರುಣಾ ಕಿಂ ಮೇ ನ ವಿಶ್ವಸ್ಯತೇ
ಪಾದಾಂಭೋರುಹಮರ್ಚಿತಂ ಸರಸಿಜೈರ್ಭೀತಿಪ್ರಭೀತಿಂ ಕುರು ॥೩೩॥

ಅದ್ಯ ಸ್ಯಾನ್ಮದಪೇಕ್ಷಿತಂ ತದಖಿಲಂ ಪ್ರಾಪ್ತಂ ಶಿವಾರಾಧನಾ
ತ್ತತ್ತ್ವದ್ಗಿರಿಶಾರ್ಚನಾಯ ಸಕಲಂ ಜಾತಂ ಕುಮಾರಾ ಅಪಿ ।
ವೀರಾ ಏವ ಜರಾ ಕಪೋಲಮಖಿಲಂ ಪ್ರಾಪ್ತಾಧುನಾಪ್ತಂ ವಯಃ
ಕಾಯಃ ಕಲ್ಪಿತ ಏವ ಪಕ್ವಕದಲೀತುಲ್ಯೋ ಮಹೇಶಾಯ ತೇ ॥೩೪॥

ವಿದ್ಯಾರಾಶಿರಪಾರಜಲಧಿಪ್ರಾಯಃ ಶಿವಾಯಾರ್ಪಿತ
ಸ್ತತ್ಪಾದಾಂಬುರುಹೇ ಮನೋಽಪಿ ನಿಹಿತಂ ಸರ್ವಸ್ವಮೇತನ್ಮಮ ।

---

ಶಂಭುವೇ, ನಿನ್ನ ದಯೆಯು ನನ್ನ ಮೇಲೆ ಉಂಟಾಗುವುದು ಯಾವಾಗ? ಈ ಮೃತ್ಯುವಾದರೋ ತನ್ನ ಭಯಂಕರವಾದ ಶರೀರದಿಂದ ಸಮೀಪಕ್ಕೆ ಬರುತ್ತಾ ಸರ್ಪಗಳನ್ನು ನನ್ನ ಮೇಲೆ ಬಿಡುತ್ತಿರುವನು. ಇಗೋ ಬಂದೇಬಿಟ್ಟನು. ಇನ್ನೂ ನನ್ನ ಮೇಲೆ ಕರುಣೆಯೇಕೆ ಉಂಟಾಗಲಿಲ್ಲವೋ ತೋರದು. ದೇವ, ನಿನ್ನ ಪಾದ ಕಮಲಗಳನ್ನು ತಾವರೇ ಹೂಗಳಿಂದ ಪೂಜೆಮಾಡಿರುವೆನು. ದಯೆಯಿಟ್ಟು ನನಗೆ ಉಂಟಾಗಿರುವ ಯಮನ ಭಯವನ್ನು ಹೋಗಲಾಡಿಸು. ॥೩೩॥

ಪರಮೇಶ್ವರನೇ, ಮಂಗಳಸ್ವರೂಪನಾದ ನಿನ್ನ ಪೂಜೆಯಿಂದ ಎಲ್ಲವೂ ನನಗೆ ಪ್ರಾಪ್ತವಾಗಿದೆ. ನಿನ್ನನುಗ್ರಹದಿಂದ ಪಡೆದಿರುವ ಸಕಲ ಧನಕನಕಾದಿ ವಸ್ತುಗಳೆಲ್ಲವನ್ನೂ ಜಗದೀಶ್ವರನಾದ ನಿನ್ನ ಸೇವೆಗೋಸ್ಕರವೇ ಸಮರ್ಪಣೆಮಾಡಿರುವೆನು. ನಿನ್ನನುಗ್ರಹದಿಂದ ಜನಿಸಿರುವ ನನ್ನ ಮಕ್ಕಳೂ ಸಹ ವೀರರೇ ಆಗಿರುವರು. ಈಗಲಾದರೋ ನನಗೆ ವಾರ್ಧಕ್ಯವು ಪ್ರಾಪ್ತವಾಗಿ ನನ್ನ ಕಪೋಲಾದಿ ಶರೀರವನ್ನೆಲ್ಲಾ ಸುಕ್ಕುಗೊಳಿಸಿ ಆಯುಷ್ಯವನ್ನು ಕಡಿಮೆಮಾಡುತ್ತಿದೆ. ಮಹಾದೇವ, ಚೆನ್ನಾಗಿ ಕಳಿತ ಬಾಳೆಯ ಹಣ್ಣಿಗೆ ಸಮಾನವಾದ ಈ ನನ್ನ ಶರೀರವನ್ನೂ ಈಗ ನಿನಗೇ ಸಮರ್ಪಣೆಮಾಡುತ್ತಿರುವೆನು. ॥೩೪॥

ಅಪಾರವಾದ ಸಮುದ್ರಕ್ಕೆ ಸಮಾನವಾಗಿದ್ದ ನನ್ನ ವಿದ್ಯಾರಾಶಿಯನ್ನೆಲ್ಲಾ ಪರಶಿವನಿಗೆ ಸಮರ್ಪಿಸಿರುವೆನು. ನನ್ನ ಮನಸ್ಸೂ ಸಹ ಆ ಪರಮೇಶ್ವರನ

ಆಶಾಸ್ಯಂ ಚ ನ ಕಿಂಚಿದಿಂದುಶಕಲಾಲಂಕಾರಪಾದಾಂಬುಜ
ಧ್ಯಾನಾನಂದರಸಾನ್ಯದಿತ್ಯಲಮಲಂ ಸಂಸಾರವಾರ್ತಾರಸೈಃ ॥೩೫॥

ಯುಕ್ತಂ ತಾವದತಃ ಪರಂ ಮಮ ಶಿವಧ್ಯಾನಂ ಶಿವಾರಾಧನಂ
ಭಸ್ಮೋದ್ಧೂಲನಮಾದರೇಣ ಸತತಂ ರುದ್ರಾಕ್ಷಸಂಧಾರಣಂ ।
ಲಿಂಗೇ ಬಿಲ್ವದಲಾರ್ಪಣಂ ಶಿವಪುರೇ ಪಂಚಾಕ್ಷರಾವರ್ತನಂ
ಹಾರಾಪಾರಕಥಾಸುಧಾನಿಧಿಮಹಾಕಲ್ಲೋಲಮಾಲಾಪ್ಲವಃ ॥೩೬॥

ಮೂಕೋ ವಾಕ್ಪತಿತಾಮುಪೈತಿ ಜನಿತಃ ಪಂಗುರ್ಗಿರೇರ್ಲಂಘನಂ
ತಾವತ್ಕಿಂ ನ ಕರೋತಿ ಕಿಂ ನ ಧರಣೀನಾಥತ್ವಮೇತ್ಯಾತುರಃ ।
ಮೃತ್ಯುಂ ವಾ ಪರಿಚಾರಕಂ ಧನಪತಿರ್ವೀರೇಶ್ವರಾರಾಧನಾತ್ತ
ತ್ಸಾಮರ್ಥ್ಯಮಶಕ್ಯಮೇವ ಗದಿತುಂ ವೇದಾಂತವೃಂದೈರಪಿ ॥೩೭॥

---

ಪಾದಕಮಲದಲ್ಲಿಯೇ ಲೀನವಾಗಿವೆ. ಸರ್ವವೂ ನನಗೆ ಪರಶಿವನೇ ಆಗಿರುವನು. ಚಂದ್ರಮೌಳಿಯಾದ ಪರಮೇಶ್ವರನ ಪಾದಕಮಲಧ್ಯಾನದಿಂದುಂಟಾಗುವ ಆನಂದ ರಸದಲ್ಲಿ ಮಗ್ನನಾಗಿರುವ ನನಗೆ ಇದಕ್ಕಿಂತ ಬೇರೆ ಏನೂ ಅಪೇಕ್ಷೆಯಿಲ್ಲ. ಸಂಸಾರ ವಿಷಯಕವಾದ ಶೃಂಗಾರಾದಿರಸಗಳೆಂದಿಗೂ ನನಗೆ ಉಂಟಾಗದಂತೆ ಕಾಪಾಡು. ॥೩೫॥

ಮಹಾದೇವನೇ, ಇನ್ನು ಮುಂದೆ ನನಗೆ ಯಾವಾಗಲೂ ಶಿವಧ್ಯಾನ, ಶಿವಪೂಜಾ, ಆದರದಿಂದ ಭಸ್ಮವನ್ನು ಧಾರಣಮಾಡಿಕೊಳ್ಳುವಿಕೆ, ಸದಾ ರುದ್ರಾಕ್ಷ ಮಾಲೆಯನ್ನು ಧಾರಣಮಾಡುವುದು, ಶಿವಲಿಂಗದಲ್ಲಿ ಭಕ್ತಿಯಿಂದ ಬಿಲ್ವಪತ್ರೆ ಯನ್ನು ಸಮರ್ಪಿಸುವುದು ಮತ್ತು ಶಿವಲೋಕದಲ್ಲಿ (ಕೈಲಾಸದಲ್ಲಿ) ಸದಾ ಶಿವಪಂ ಚಾಕ್ಷರಮಂತ್ರವನ್ನು ಜಪಿಸುತ್ತಾ ಯಾವಾಗಲೂ ಪರಮೇಶ್ವರನ ಸಂಬಂಧವಾದ ಕಥೆಗಳೆಂಬ ಸಮುದ್ರದ ದೊಡ್ಡ ದೊಡ್ಡ ಅಲೆಗಳ ಸಮೂಹದಲ್ಲಿ ಸಂಚರಿಸುವುದೂ, ಅಂದರೆ ಶಿವಕಥೆಗಳನ್ನು ಕೇಳುತ್ತಾ ಆನಂದದಿಂದ ಕಾಲಕಳೆಯುವುದೂ ಇವೇ ನನಗೆ ಯೋಗ್ಯವಾದ ಕಾರ್ಯಗಳೆಂದು ತಿಳಿದಿರುವೆನು. ॥೩೬॥

ಜಗದ್ವೀರನಾದ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸುವ ಮೂಗನು ಈಶ್ವರಾನುಗ್ರಹದಿಂದ ವಾಕ್ಪಾಟವವನ್ನು ಹೊಂದುವನು. ಹುಟ್ಟುವಾಗಲೇ ಕಾಲು ಗಳಿಲ್ಲದ ಕುಂಟನೂ ಪರ್ವತವನ್ನಾದರೂ ಹಾರಬಲ್ಲನು. ಪರಶಿವನ ಆರಾಧನೆ

**ಕಿಂ ಚಿಂತಾಮಣಿಕೋಟಿಭಿಃ ಸುರತರುಶ್ರೇಷ್ಠೈರಪಾರೈಃ ಸುರಾ**
**ಪಾರಾತ್ಯುತ್ತಮಗೋಕುಲೈರ್ನಿಧಿವರೈರ್ವೀರೇಶ್ವರಾರಾಧನೈಃ ।**
**ಸರ್ವಾಭೀಷ್ಟಫಲೋದಯೇ ಸತಿ ಸತಾಂ ಸ್ವಾಂತಂ ನ ಸಂವರ್ತತೇ**
**ತದ್ಭಿನ್ನೇಷು ಮರೀಚಿಕಾದಿಸದೃಶೇಷ್ವಾಶಾಽಪಿ ಸರ್ವಾತ್ಮನಾ ॥೩೮॥**

---

ಯಿಂದ ಇಷ್ಟುಮಾತ್ರ ಆಗುವುದು ಒಂದು ಅತಿಶಯವೇನು! ದರಿದ್ರಮಾನವನು ಭೂಪತಿಯೇ ಆಗಬಲ್ಲನು. ರೋಗಿಯಾದವನು ತನ್ನ ಸಮೀಪಸ್ಥನಾದ ಮೃತ್ಯುವನ್ನು ದೂರ ಓಡಿಸಬಹುದು. ಮತ್ತು ಭಕ್ತಿಪುರಸ್ಸರವಾಗಿ ಶಿವನಾಮವನ್ನಾರಾಧಿಸಿ ಪೂಜೆಮಾಡುವ ಮಾನವನು ಧನಿಕನಾಗಿ ಅನೇಕ ಸುಖಸಾಧನಗಳನ್ನು ಹೊಂದಬಹುದು. ಇಂತಹ ಪರಮೇಶ್ವರನ ಅಸಾಧಾರಣವಾದ ಸಾಮರ್ಥ್ಯವನ್ನು ಹೇಳಲು ವೇದಾಂತ ಸಮೂಹಗಳಿಗೂ ಸಹ ಅಸಾಧ್ಯವೇ, ಎಂದು ನನಗೆ ತೋರುವುದು. ॥೩೭॥

ವೀರೇಶ್ವರನನ್ನು (ಶಿವನನ್ನು) ಆರಾಧಿಸುವುದರಿಂದ ಭಕ್ತನಿಗೆ ಸಕಲ ಇಷ್ಟಾರ್ಥಗಳೂ ಉಂಟಾದ ಮೇಲೆ ಇತರ ಮನೋರಥಗಳನ್ನು ಸಾಮಾನ್ಯವಾಗಿ ಸಲ್ಲಿಸುವ ಕೋಟಿ ಚಿಂತಾಮಣಿಗಳು, ಅನೇಕ ಕಲ್ಪವೃಕ್ಷಗಳೂ ಅಪಾರವಾದ ದೇವತಾಸಮೂಹ, ಅತ್ಯುತ್ತಮವೆನಿಸಿರುವ ಗೋಕುಲಗಳು ಮತ್ತು ಶ್ರೇಷ್ಠವಾದ ನವನಿಧಿಗಳು, ಇವುಗಳಿಂದ ಏನೂ ಪ್ರಯೋಜನವಿಲ್ಲ. ಅಂದರೆ ಇವುಗಳಿಂದ ಪಡೆಯಬಹುದಾದ ಫಲಗಳಿಗಿಂತಲೂ ಅತಿಶಯವಾದ ಫಲಗಳನ್ನು ಮಾನವನು ಭಕ್ತಿಯಿಂದ ಶಿವನನ್ನಾರಾಧಿಸಿ ಸಂಪಾದಿಸಬಹುದು. ಈ ಶಿವನ ಪೂಜಾದಿಗಳಿಂದ ತಮ್ಮ ಮನೋರಥಗಳೆಲ್ಲಾ ಸಿದ್ಧಿಸಿದ ಮೇಲೆ ಸತ್ಪುರುಷರ ಮನಸ್ಸು, ಬಿಸಿಲು ಕುದುರೆಗೆ ಸಮಾನವಾಗಿ, ಚಂಚಲವಾದ ಇತರ ವಸ್ತುಗಳಲ್ಲಿ ಯಾವ ರೀತಿಯಾದ ಆಸೆಯನ್ನು ಹೊಂದದೆ, ಶಾಶ್ವತವಾಗಿ ಪರಮೇಶ್ವರನಲ್ಲೇ ನೆಲಸುವುದು. ಅಥವಾ ಮತ್ತೆಲ್ಲಿಯೂ ಚಲಿಸದೆ, ಪರಮೇಶ್ವರನಿಗಿಂತಲೂ ಬೇರೆಯಾದ ಇತರ ಬಿಸಿಲು ಕುದುರೆಗೆ ಸಮಾನವಾದ ಚಿಂತಾಮಣಿಯೇ ಮುಂತಾದವುಗಳಲ್ಲಿ ಯಾವ ವಿಧವಾದ ಆಸೆಯನ್ನೂ ಇಟ್ಟುಕೊಳ್ಳಲಾರದು. ಅಂದರೆ ಚಿಂತಾಮಣಿ, ಕಾಮಧೇನು, ಕಲ್ಪವೃಕ್ಷ ಮುಂತಾದವುಗಳು ತಾತ್ಕಾಲಿಕವೂ ಅಶಾಶ್ವತವೂ ಆದ ಫಲಗಳನ್ನು ಕೊಡಬಲ್ಲವು. ಪರಶಿವನಾದರೋ ನಿತ್ಯವಾದ ಪರಮಫಲಗಳನ್ನೇ ಕರುಣಿಸುವನೆಂದು ತಿಳಿದ ಮೇಲೆ ಸಾಧುಗಳ ಮನಸ್ಸು ಶಿವನನ್ನು ಬಿಟ್ಟು ಮತ್ತೆಲ್ಲಿತಾನೇ ನೆಲಸೀತು? ॥೩೮॥

ನ ಕೃತಾಂತಕೃತಾಂತಪೂಜಯಾ ಯದಿ
ನೇಯಃ ಸಮಯೋ ಮಯಾ ತದಾ ।
ನಿಯಮೇನ ವಿನೈವ ಮಾಯಯಾ
ಸ ಯಮೋ ಮೇ ನಿಯಮಂ ಕರಿಷ್ಯತಿ ॥೩೯॥

ನ ಯೋಗಯಾಗವ್ರತದಾನಸಾಧನ
ಪ್ರಸಾಧನಾನಾಮಧುನಾಸ್ತಿ ಕೃತ್ಯಂ ।
ಪರಂ ತು ಕಾಲೇ ಖಲು ಕಾಲಕಾಲ
ಲಿಂಗಾರ್ಚನೇನೈವ ನಯಾಮಿ ಕಾಲಂ ॥೪೦॥

ರೇವಾತೀರನಿಗೂಢನೀರಜರಜಃಪುಂಜಪ್ರಭಾಮಂಜುಲೇ
ನೀಲಾನೀಲಮಹೋತ್ಪಲಾಮಲದಲಾನೀಲೇ ಶಿಲಾಮಂಡಲೇ ।

---

ಸಾಕ್ಷಾನ್ಮೃತ್ಯುವನ್ನೇ ನಿಗ್ರಹಿಸಿದ ಪರಮೇಶ್ವರನನ್ನು ನಿಯಮಪೂರ್ವಕವಾಗಿ ನಾನು ಆರಾಧನೆಮಾಡದೇ ವೃಥಾ ಕಾಲವನ್ನು ಕಳೆಯುವುದಾದರೆ ಈ ಯಮನು ತನ್ನ ಮಾಯೆಯನ್ನು ನನ್ನ ಮೇಲೆ ಶಾಸನಗಳನ್ನು ಮಾಡುವನು. ಶಿವಪೂಜೆಯನ್ನು ಮಾಡದೆ ಅನ್ಯಾಯವಾಗಿ ಕಾಲವನ್ನು ಕಳೆಯುವ ಮಾನವನನ್ನು ಯಮನು ಯಾವ ತೊಂದರೆಯೂ ಇಲ್ಲದೆ ನಿಗ್ರಹಿಸಬಲ್ಲನು. ಆದರೆ ಶಿವಪೂಜಕನನ್ನು ನಿಗ್ರಹಿಸುವುದು ಯಮನಿಗೂ ಅಸಾಧ್ಯವಲ್ಲವೆ? ॥೩೯॥

ಯೋಗಾಭ್ಯಾಸ, ಯಾಗ, ವ್ರತ ಇವುಗಳನ್ನು ಆಚರಿಸುವುದು, ನಾನಾವಿಧವಾದ ದಾನಗಳನ್ನು ಮಾಡುವುದು, ಇತರ ಸಾಧನಗಳನ್ನು ಜನಗಳಿಗೆ ಕಲ್ಪಿಸಿಕೊಡುವುದು, ಇವುಗಳಿಂದ ಈಗ ಏನೂ ಪ್ರಯೋಜನವಿಲ್ಲ. ಆದುದರಿಂದ ಯಾವಾಗಲೂ ಯಮನನ್ನು ನಿಗ್ರಹಿಸಿದ ಪರಶಿವನ ಪೂಜೆಯಿಂದಲೇ ಕಾಲವನ್ನು ಕಳೆಯುವೆನು. ಇದೇ ಎಲ್ಲಕ್ಕಿಂತಲೂ ಉತ್ತಮವಾದ ಸಾಧನವಾಗಿರುವುದು. ॥೪೦॥

ರೇವಾನದಿಯ ದಡದಲ್ಲಿ ಒಂದು ರಹಸ್ಯವಾದ ಪ್ರದೇಶವಿರುವುದು. ಆ ಪ್ರದೇಶದಲ್ಲಿ ಒಂದು ಶಿಲಾಮಂಡಲವೇರ್ಪಟ್ಟಿರುವುದು. ರೇವಾನದಿಯಲ್ಲಿ ಬೆಳೆದಿರುವ ಕಮಲಗಳ ಪರಾಗಪಂಕ್ತಿಯು ತನ್ನ ಶುಭ್ರವಾದ ಕಾಂತಿಯನ್ನು ಆ ಶಿಲಾಮಂಡಲದ ಮೇಲೆ ಬೀರುತ್ತಾ ಅದನ್ನು ಮಂಜುಲವರ್ಣವನ್ನಾಗಿ ಮಾಡುತ್ತಿರುವುದು. ಅಲ್ಲದೇ ಅತ್ಯಂತ ನೀಲವರ್ಣವುಳ್ಳ ಪರಿಶುದ್ಧವಾದ ದೊಡ್ಡ ದೊಡ್ಡ

ದತ್ವಾ ಬಿಲ್ವದಲಂ ಸಶೀತಲಜಲಂ ಭೂಮಂಡಲಾಖಂಡಲೋ
ಬಾಲೋಽಪಿ ಪ್ರಬಲೋ ಭವತ್ಯವಿಕಲಸ್ಸ್ವಾತ್ಕಾಲಕಾಲಪ್ರಿಯಃ ॥೪೧॥

ರೇವಾತೀರವರಪ್ರರೋಹರುಚಿರೈರ್ದೂರ್ವಾಂಕುರೈರಾದರಾ
ದ್ಧೀರೋ ದಾರವಿಹಾರಹಾರರುಚಿರವ್ಯಾಪಾರಹಾರಾತ್ಪರಂ ।
ತ್ಯಕ್ತ್ವಾ ಸಾಯಮಿಹಾದರೇಣ ಗುರುಣಾ ಶಾಂಗಂ ನ ಲಿಂಗಂ ಕಥಂ
ನಿರ್ಧೂತನ್ಯಥಮರ್ಚಿತಂ ಸಕೃದಪಿ ಧ್ಯಾತಂ ವಿಭೂತ್ಯಾಸಿತಂ ॥೪೨॥

ಶ್ರೀವೀರೇಶ್ವರಲಿಂಗಪೂಜಕಪದಾಂಭೋಜಾರ್ಚಿತಂ ಯದ್ರಜ
ಸ್ತತ್ಪ್ರಾಪ್ಯಾಮರವಾಹಿನೀ ಜಗದಿದಂ ತಾವತ್ಪುನಾತಿ ಸ್ವಯಂ ।

---

ಕನ್ನೈದಿಲೆ ದಳಗಳ ಕಾಂತಿಯು ಆ ಶಿಲೆಗಳ ಮೇಲೆ ಬಿದ್ದು ಒಂದುಕಡೆ ನೀಲವರ್ಣ ವುಳ್ಳದ್ದನ್ನಾಗಿ ಮಾಡುತ್ತಿದೆ. ಇಂತಹ ಸುಂದರವಾದ ಸನ್ನಿವೇಶದಲ್ಲಿ ಪವಿತ್ರವಾದ ರೇವಾನದಿಯ ದಡದಲ್ಲಿರುವ ಶಿಲಾಮಂಡಲವನ್ನು (ನರ್ಮದಾಲಿಂಗವನ್ನು) ತಂಪಾದ ನೀರಿನಿಂದ ಅಭಿಷೇಕಮಾಡಿ, ಶುದ್ಧವಾದ ಬಿಲ್ವದಳಗಳಿಂದ ಪೂಜೆಮಾಡಿ ದರೆ, ಬಾಲಕನಾಗಿದ್ದರೂ ಬಹಳ ಬಲಶಾಲಿಯೆನಿಸಿ ಯಾವ ತೊಂದರೆಯೂ ಇಲ್ಲದವ ನಾಗಿ ಈ ಭೂಮಂಡಲದಲ್ಲಿ ಇಂದ್ರನಂತೆ ಸರ್ವಭೋಗಗಳನ್ನೂ ಅನುಭವಿಸುತ್ತಾ ಯಾವಾಗಲೂ ಪರಮೇಶ್ವರನಿಗೆ ಪ್ರೀತಿಪಾತ್ರನಾಗಿರುತ್ತಾನೆ. ॥೪೧॥

ಧೀರನಾದವನು ರೇವಾನದಿಯ ಶ್ರೇಷ್ಠವಾದ ತೀರಪ್ರದೇಶದಲ್ಲಿ ಚೆನ್ನಾಗಿ ಬೆಳೆದು ಮನೋಹರವಾಗಿರುವ ಗರಿಕೆಯ ಚಿಗುರುಗಳನ್ನು ಆದರದಿಂದ ತೆಗೆದು ಕೊಂಡು ಬಂದು, ಸಾಯಂಕಾಲದ ಸಮಯದಲ್ಲಿ ಇತರ ಸ್ತ್ರೀವಿಹಾರಗಳು ಮತ್ತು ಉಳಿದ ವ್ಯಾಪಾರಗಳನ್ನೆಲ್ಲಾ ದೂರಮಾಡಿ, ಪರಮಪವಿತ್ರನೂ, ಸರ್ವಶ್ರೇಷ್ಠನೂ ಆದ ಪರಶಿವನ ಲಿಂಗವನ್ನು ಅತಿಶಯವಾದ ಭಕ್ತಿವಿಶ್ವಾಸಗಳಿಂದ ಪೂಜಿಸಿದರೆ, ಸಕಲ ದುಃಖಗಳೂ ನಿಮಿಷಮಾತ್ರದಲ್ಲಿ ಪರಿಹಾರವಾಗುವುವು. ಅಲ್ಲದೆ ಪರಮೇಶ್ವರ ನನ್ನು ಒಂದುಸಲ ಧ್ಯಾನಮಾಡಿದ ಮಾತ್ರದಿಂದಲೇ ಮಾನವನು ಸಕಲ ಸಂಪತ್ತು ಗಳನ್ನೂ ಹೊಂದುವನು. ॥೪೨॥

ವೀರೇಶ್ವರನೆನಿಸಿದ ಪರಶಿವನನ್ನು ಪೂಜಿಸುವ ಭಕ್ತನ ಪಾದಕಮಲಗಳಿಗೆ ಪೂಜೆಮಾಡಿದ ಪುಷ್ಪಪರಾಗಗಳನ್ನು ಧರಿಸಿ, ಈ ದೇವಗಂಗಾನದಿಯು ಸಮಸ್ತ ವಾದ ಈ ಪ್ರಪಂಚವನ್ನೆಲ್ಲಾ ಪವಿತ್ರವನ್ನಾಗಿ ಮಾಡುತ್ತಿರುವುದನ್ನು

ಏತಾವನ್ಮಹಿಮಾ ಶಿವಾರ್ಚನರತಸ್ಯಾತಃ ಕಥಂ ವಾ ಯಮಃ
ಸೋಽಯಂ ಮೇ ಭಯದೋ ಭವತ್ಯವಸರೇ ಪ್ರಾಪ್ತೇಽಪಿ ಮೃತ್ಯೋಃ ಪರಂ ॥೪೩॥

ಯತ್ಸಂಪನ್ನಗರಂ ಮನೋಹರವರಂ ಹಾರಂ ತದತ್ಯುನ್ನತಂ
ಪ್ರಾಕಾರಪ್ರವರಾತಿರೋಹಣಮಣಿವ್ಯಾಕೀರ್ಣನಿಶ್ರೇಣಿಕಾ ।
ತದ್ದ್ವಾರಾರ್ಗಲಕುಂಚಿಕಾ ತದನಘಶ್ರೀಕಾಮಿನೀನೀವಿಕಾ
ಚೋಲೀಚ್ಛೇದನಸಾಧನಂ ಚ ಬಹುಧಾ ಶ್ರೀಕಾಲಕಾಲಾರ್ಚನಂ ॥೪೪॥

ಮೇರುಃ ಕಲ್ಪಾಂತವಹ್ನಿಪ್ರತಿಹತಶಿಖರೋ ಭಸ್ಮಭೂತೋಽಸ್ತು ಭೂರ್ವಾ
ಪಾತಾಲಂ ಯಾತು ಯಾತು ತ್ರಿದಶನಗರಮಪ್ಯಂತತೋ ಭಸ್ಮತಾಂ ಕಿಂ ।

---

ಶಿವಪೂಜಾತತ್ಪರನಾದ ಮಾನವನ ಮಹಿಮೆಯು ಇಷ್ಟು ಅದ್ಭುತವಾಗಿರುವಾಗ, ಈ ಯಮನು ಮರಣಕಾಲ ಸಂಭವಿಸಿದಾಗ ತಾನೇ ನನಗೇನು ಭಯವನ್ನುಂಟು ಮಾಡಿಯಾನು? ನಾನೂ ಆ ಪರಶಿವನ ಭಕ್ತನೇ ಆಗಿರುವುದರಿಂದ ಯಮನು ನನ್ನನ್ನೇನೂ ಮಾಡಲಾರನು. ॥೪೩॥

ಪರಮೇಶ್ವರನ ಪಟ್ಟಣವು ಬಹಳ ದೊಡ್ಡದು. ಮನೋಹರವಾದ ಈ ನಗರದಲ್ಲಿ ಸಕಲ ಸಂಪತ್ತುಗಳೂ ಸಮೃದ್ಧಿಯಾಗಿರುವುವು. ಉನ್ನತವಾದ ಈ ಪಟ್ಟಣದ ಪ್ರಾಕಾರಗಳಲ್ಲಿ ಮೇಲಕ್ಕೆ ಹತ್ತಲು ಉತ್ತಮವಾದ ರತ್ನಖಚಿತವಾದ ಏಣಿಗಳು ಏರ್ಪಟ್ಟಿರುವುವು. ಈ ಪಟ್ಟಣದ ಬಾಗಿಲುಗಳಿಗೆ ಅನೇಕ ದೃಢವಾದ ಅಗಣಿಗಳನ್ನು ಹಾಕಿರುವರು. ಪರಿಶುದ್ಧವಾದ ಈ ಪಟ್ಟಣದಲ್ಲಿ ಲಕ್ಷ್ಮಿಯು ತಾಂಡವವಾಡುತ್ತಿರುವಳು. ಈ ಲಕ್ಷ್ಮಿಯೆಂಬ ಕಾಮಿನಿಯ (ನಾರಿಯ) ನೀವಿಯನ್ನೂ ಮತ್ತು ಚೋಲೀ (ನಿಲುವಂಗಿ) ಮುಂತಾದವುಗಳನ್ನೂ ಭೇದಿಸಿ ನಾನಾವಿಧವಾದ ಸುಖಭೋಗಗಳನ್ನು, ಮಾನವನು ಕಾಲಕಾಲನೆನಿಸಿದ ಪರಶಿವನ ಪೂಜಾದಿಗಳಿಂದ ಪಡೆಯುತ್ತಾನೆ. ಅಂದರೆ ಪರಮೇಶ್ವರನನ್ನು ಪೂಜಿಸಿದರೆ ಅನೇಕವಾದ ಸುಖ ಸಂಪತ್ತುಂಟಾಗಿ ಕೊನೆಗೆ ಶಿವಸಾನ್ನಿಧ್ಯವನ್ನು ಹೊಂದಿ ಕೈಲಾಸದಲ್ಲಿ ವಾಸಿಸುವನೆಂದು ತಿಳಿಯಬೇಕು. ॥೪೪॥

ಒಂದು ವೇಳೆ ಪ್ರಳಯಕಾಲದ ಅಗ್ನಿಯ ಉಪಟಳಕ್ಕೆ ಸಿಕ್ಕಿ ಮೇರು ಪರ್ವತವೇ ತನ್ನ ಶಿಖರಗಳೊಡನೆ ಭಸ್ಮವಾಗಲಿ. ಭೂಮಿಯೇ ಪಾತಾಳ ಲೋಕಕ್ಕಾ

ಕಾಲೋಽಪ್ಯಾಯಾತು ಮೃತ್ಯೋರಹಮಿಹ ನ ಮಹಾದೇವಭಿನ್ನಂ ಪ್ರಪನ್ನಂ
ಸಂಪನ್ನಂ ಮೇ ಮನೋಽಪಿ ತ್ರಿನಯನಚರಣಾರಾಧನೇನ ಪ್ರಸನ್ನಂ ॥೪೫॥

ಕೋಽಯಂ ಕಾಲೋಽಪಿ ರಂಕಃ ಕಥಮಪಿ ಮರಣೇ ತೂರ್ಣಮಭ್ಯರ್ಣ ಕೋಽಪಿ
ಮಾಯಾರೂಪೋಽಪಿ ವಾ ಮೇ ಮರಣಮಪಿ ನ ಮೇ ಕಾಲಕಾಲಾರ್ಚಕಸ್ಯ।
ಯಸ್ಯಾಂಕೇ ಸಾ ಭವಾನೀ ತ್ರಿಭುವನಜನನೀ ತತ್ಪದಾರಾಧಕಾನಾಂ
ಶಂಕಾತಂಕಾವಿಹೀನಸ್ಫುರದುರುಮನಸಾಂ ಕಾಲಭೀತಿಃ ಕುತೋ ವಾ ॥೪೬॥

---

ದರೂ ಹೋಗಲಿ. ಅಥವಾ ಸ್ವರ್ಗಲೋಕವೇ ಬೇಕಾದರೂ ಬೂದಿಯಾಗಿ ಹೋಗಲಿ. ಅಥವಾ ಸಾಕ್ಷಾನ್ಮೃತ್ಯುವೇ ಎದುರಿಗೆ ಬಂದು ನಿಂತಿರಲಿ. ನಾನು ಮಾತ್ರ ಮುಕ್ಕಣ್ಣ ನಾದ ಮಹಾದೇವನ ಪಾದಕಮಲ ಸೇವೆಯಿಂದ ನಿರ್ಮಲವಾಗಿರುವ ನನ್ನ ಮನ ಸ್ಸನ್ನು ಬೇರೆ ಕಡೆ ತಿರುಗಿಸುವುದಾಗಲೀ ಅಥವಾ ಮಹೇಶ್ವರನಿಗಿಂತ ಬೇರೆಯಾದ ದೇವತೆಗಳನ್ನು ಧ್ಯಾನಮಾಡುವುದಾಗಲೀ ಎಂದಿಗೂ ಮಾಡೆನು. ॥೪೫॥

ಕಾಲಸ್ವರೂಪನಾದ ಯಮನನ್ನೇ ನಿಗ್ರಹಿಸಿರುವ ಪರಶಿವನ ಪದಸರೋಜ ಗಳನ್ನು ಸದಾ ಭಕ್ತಿಪುರಸ್ಸರವಾಗಿ ಪೂಜಿಸುವ ನನಗೆ ಅಜ್ಞಾನಸ್ವರೂಪವಾಗಲೀ ಅಥವಾ ಮೃತ್ಯುವೇ ಆಗಲಿ ಸಂಭವಿಸಲು ಕಾರಣವೇ ಇಲ್ಲ. ಹೀಗಿದ್ದರೂ ನನಗೆ ಮರಣಕಾಲ ಸಮೀಪಿಸಿರುವುದೆಂದು ತಿಳಿದು, ಆಗಲೇ ಸಮೀಪಕ್ಕೆ ಬಂದು ಜಾಗ್ರತೆ ಯಿಂದ ನಿಂದಿರುವ ಈ ಯಮನು ಎಂತಹ ಒರಟನಾಗಿರಬಹುದು. ಒಂದು ವೇಳೆ ಮರಣಕಾಲ ಸಮೀಪಿಸಿದರೂ ಇವನು ಯಾರು ? ಶಿವಭಕ್ತನೆಂಬುದನ್ನಾದರೂ ವಿಚಾರಮಾಡದೆ ಇಲ್ಲಿಗೆ ಬಂದಿರುವ ಯಮನು ಶುದ್ಧ ಮೂರ್ಖನೆಂದು ತಿಳಿಯ ಬೇಕು. ಮೂರು ಲೋಕಗಳಿಗೂ ತಾಯಿಯಾಗಿರುವ ಸಾಕ್ಷಾತ್ಪಾರ್ವತೀದೇವಿಯೇ ಯಾವ ಮಹಿಮನ ತೊಡೆಯ ಮೇಲೆ ವಿರಾಜಿಸುತ್ತಿರುವಳೋ, ಅಂತಹ ಪರಮೇಶ್ವ ರನ ಪಾದಸೇವಕರಾಗಿ, ಯಾವ ವಿಧವಾದ ತೊಂದರೆ ತಾಪತ್ರಯಗಳೂ ಇಲ್ಲ ದಂತೆ ದೃಢವಾದ ಮನಸ್ಸಿನಿಂದ ಕೂಡಿರುವ ಪರಶಿವನ ಭಕ್ತರಿಗೆ ಯಮನ ಭಯ ವೆಂಬುದು ಎಲ್ಲಿಂದ ತಾನೇ ಬಂದೀತು ? ಯಾವ ರೀತಿಯಲ್ಲಿಯೂ ಅವರನ್ನು ಯಮನು ನಿಗ್ರಹಿಸಲಾರನು. ॥೪೬॥

ಕಾಲಶ್ಚೇದಾಗತೋಽಯಂ ಪ್ರತಿಹತಗತಿರಸ್ಯಸ್ತು ಯಸ್ತು ತ್ರಿನೇತ್ರೇ
ಧ್ಯಾನಾರೂಢಾತಿರೂಢಂ ಪರಹಿತಕರಣಾಸಕ್ತಚಿತ್ತಂ ತಮೇಕಂ ।
ಹಿತ್ವಾನ್ಯತ್ರೈವ ಯಾಸ್ಯತ್ಯಯಮಪಿ ಚತುರಃ ಕಾಲಕಾಲಾದ್ವಿಭೀತೋ
ಭೂತಿಂ ಸ್ಮೃತ್ವಾಪಿ ಭೀತೋ ಭವತಿ ಭವತಿ ವಾ ಭ್ರಾಂತಚಿತ್ತೋಽಪಿ ಮತ್ತಃ ॥೪೭॥

ಅಸ್ಮಾಕಂ ಪರಮಂತಕಾಂತಕಪದಾಂಭೋಜಾರ್ಚನಾರಾಧನೈ
ರ್ದೈನ್ಯಂ ತಾವದಪಾಕೃತಂ ಗತಮಿದಂ ಕಾಲಾದ್ಭಯಂ ನಿರ್ಭಯಃ ।
ಲೋಕೇ ಶಾಂಭವ ಏವ ಕೇವಲಮತಃ ಕಾಲಾದ್ಬಿಭೇತೀತಿ ಧೀ
ರ್ಧೀರಾಣಾಂ ಕಥಮಿತ್ಯತಃ ಕಥಮಿತೋ ಭೀತಿರ್ಭವಿತ್ರೀ ಚ ಮೇ ॥೪೮॥

---

ಪರಮೇಶ್ವರನ ಭಕ್ತನಾದವನಿಗೆ ಒಂದು ವೇಳೆ ಕಾಲಮೃತ್ಯುಪ್ರಾಪ್ತವಾದರೆ ಆ ಸಮಯದಲ್ಲಿ ತನ್ನ ಕಾರ್ಯವನ್ನು ನಡೆಸಿ ಮೃತ್ಯುವಶನಾಗಿರುವ ಮಾನವನನ್ನು ಯಮಲೋಕಕ್ಕೆ ಕರೆದೊಯ್ಯಲು ಸಾಕ್ಷಾದ್ಯಮನೇ ಬರುವುದಾದರೂ, ಅವನಿಗೆ ಈ ಶಿವಭಕ್ತನನ್ನು ಏನು ಮಾಡಲೂ ಸಾಧ್ಯವಾಗದೆ, ಅವನ ಕಾರ್ಯವು ವ್ಯರ್ಥವೇ ಆಗುವುದು. ಆಗ ಯಮನು ಅನವರತವೂ ಪರಶಿವನನ್ನು ಅತ್ಯಂತ ನೆಟ್ಟಮನಸ್ಸಿನಿಂದ ಧ್ಯಾನಮಾಡುತ್ತಾ, ಸದಾ ಪರೋಪಕಾರ ಮತ್ತು ಹಿತಚಿಂತನೆ ಇವುಗಳಲ್ಲಿಯೇ ತನ್ನ ಮನಸ್ಸುಳ್ಳ ಆ ಶಿವಭಕ್ತನನ್ನು ಬಿಟ್ಟು, ಪರಮೇಶ್ವರನ ಭಯದಿಂದ ಹೊರಟು ಹೋಗುವನು. ಯಮನು ಚತುರನೇ ಆದರೂ ಕಾಲಕಾಲನೆನಿಸಿದ ಪರಶಿವನ ಮುಂದೆ ಅವನಾಟವು ಸಾಗದು. ಲೋಕದಲ್ಲಿ ಅಣಿಮಾದ್ಯಷ್ಟಸಿದ್ಧಿ ರೂಪವಾದ ಐಶ್ವರ್ಯವನ್ನು ಸ್ಮರಣೆಮಾಡಿದ ಮಾತ್ರದಿಂದಲೇ ಬುದ್ಧಿ ಭ್ರಮಣೆಯುಳ್ಳವನಾಗಲೀ ಅಥವ ಹುಚ್ಚನೇ ಆಗಲೀ ಎಂದಿಗಾದರೂ ಭಯಪಡುವನೇ! ಹಾಗೆಯೇ ಈ ಯಮನೂ ಸಹ ಪರಮೇಶ್ವರನನ್ನು ನೋಡಿ, ಭಯಪಡಬೇಕಾದ ಅಗತ್ಯವೇನೂ ಇಲ್ಲ. ಸರ್ವೈಶ್ವರ್ಯ ಪ್ರದನಾದ ಪರಶಿವನನ್ನು ಧ್ಯಾನಿಸಿದರೆ ಅವನಿಗೂ ಯಾವ ವಿಧಯಾದ ಭಯವೂ ಉಂಟಾಗಲಾರದು. ಆದರೆ ಪರಶಿವನ ಯಾವ ಒಂದು ವಸ್ತುವನ್ನು ಸ್ಮರಿಸಿಕೊಂಡರೂ ಯಮನು ಹೆದರುವನು ; ಅಥವಾ ದಿಗ್ಭ್ರಾಂತನಾಗುವನು. ॥೪೭॥

ಯಮಾಂತಕನಾದ ಪರಮೇಶ್ವರನ ಅಡಿದಾವರೆಗಳನ್ನು ಭಕ್ತಿಯಿಂದ ಆರಾಧಿಸುತ್ತಿರುವ ನಮಗೆ ದೀನಭಾವವೆಲ್ಲವೂ ತೊಲಗಿತು. ಯಮನ ಭಯವೂ ನಾಶವಾದಂತೆಯೇ. ಲೋಕದಲ್ಲಿ ಶಂಭುವಿನ ಭಕ್ತನೊಬ್ಬನೇ ಕೇವಲ ನಿರ್ಭಯನೆನಿಸು

ಹೇ ಕಾಲಾಂತಕ ಶಂಕರಾಸುರವರಾಪಾರಾಸುರಾರಾಧಿತ
ಸ್ವಾಮಿನ್ನಾಲಮುಪಾಕುರುಷ್ವ ಗೃಹಮುಭ್ಯೇತ್ಯೇತು ಯಾತು ಸ್ವಕಂ ।
ಘೋರಂ ಮಂದಿರಮೇವ ರೌರವಮಯಂ ಕಃ ಶಾಂಕರಾಣಾಂ ಭಯಂ
ದಾತುಂ ವಾ ಯತತೇ ಕೃತೀ ಕೃತಮನೇನಾಪೀಹ ಪಾಪಂ ಖಲು ॥೪೯॥

ಶ್ರೀಕಾಲಕಾಲ ಯದಿ ತೇ ನ ತು ಕಾಲನಾಶೇ
ಶಕ್ತಿಸ್ತದಾ ಜನಿಜರಾಮರಣಾದಿನಾಶೇ ।
ಶಕ್ತಿಃ ಕಥಂ ಭವತಿ ವಾತಿವಿನೋದವಾರ್ತಾ
ಸಾ ತೇಽಪಕೀರ್ತಿರಪಿ ತೇ ಕಥಮಿಂದುಮೌಳೇ ॥೫೦॥

---

ವನು. ಆದುದರಿಂದ ಧೀರರಾದ ಶಿವಭಕ್ತರಿಗೆ ಯಮನ ಭಯವು ಹೇಗೆ ತಾನೇ ಒದಗೀತು ? ಈಗಾಗಲೀ ಇನ್ನು ಮುಂದಾಗಲೀ ಶಂಭುವಿನ ಭಕ್ತರು ಯಮನ ಭೀತಿಗೆ ಒಳಗಾಗುವರೆಂಬ ಬುದ್ಧಿಯು ಮಾನವರಿಗೆ ಹೇಗೆ ತಾನೆ ಉಂಟಾದೀತು ? ಆದ್ದರಿಂದ ಈ ಯಮನು ನನ್ನನ್ನೇನೂ ಮಾಡಲಾರನು. ॥೪೮॥

ಎಲೈ ಯಮನನ್ನು ನಿಗ್ರಹಿಸಿದ ಶಂಕರನೇ! ಬ್ರಹ್ಮ, ವಿಷ್ಣು, ಇಂದ್ರ-ಮುಂತಾದ ದೇವತೋತ್ತಮರಿಂದಲೂ, ಇತರ ಸಾಮಾನ್ಯ ದೇವತಾ ಸಮೂಹ ದಿಂದಲೂ, ಪೂಜಿಸಲ್ಪಡುವ ಸ್ವಾಮಿಯೇ! ಈ ಮುಂದೆ ನಿಂತಿರುವ ಯಮನನ್ನು ನಿಗ್ರಹಿಸು. ಇಲ್ಲಿಂದ ಈಗಲೇ ಈ ಯಮನು ತನ್ನ ಮನೆಗೆ ಹೋಗಿ ತನ್ನ ಘೋರ ವಾದ ರೌರವನರಕವೆಂಬ ಮಂದಿರದಲ್ಲೇ ವಾಸಿಸಲಿ; ಒಂದುವೇಳೆ ಶಾಂಕರರೆನಿಸಿದ ನಿನ್ನ ಭಕ್ತರಾದವರು ತಪ್ಪು ಮಾಡಿದ್ದರೂ ನಿನ್ನ ಪಾದ ಸೇವಕರಾದ ಇವರಿಗೆ ಯಾರು ತಾನೇ ಭಯವನ್ನುಂಟುಮಾಡಿಯಾರು ? ॥೪೯॥

ಪ್ರಭೋ ! ಕಾಲಾಂತಕನಾದ ಪರಮೇಶ್ವರನೇ, ನಿನಗೆ ಈ ಯಮನನ್ನು ನಾಶ ಪಡಿಸುವ ಶಕ್ತಿ ಇಲ್ಲದಿದ್ದರೆ ಪ್ರಪಂಚದ ಸೃಷ್ಟಿ, ಸ್ಥಿತಿ, ಮತ್ತು ಸಂಹಾರ ರೂಪ ವಾದ ಕಾರ್ಯಗಳಲ್ಲಿ ಹೇಗೆ ತಾನೆ ಶಕ್ತಿಯು ಬಂದೀತು ? ಎಲೈ ಚಂದ್ರಮೌಳಿಯೇ! ಒಂದು ವೇಳೆ ಹಾಗೆ ಹೇಳುವುದು ಕೇವಲ ವಿನೋದಕ್ಕೋಸ್ಕರ ಎಂದಾದರೆ ಅದು ನಿನಗೆ ಒಂದು ಅಪಕೀರ್ತಿಯೇ ಅಲ್ಲವೇ. ॥೫೦॥

ಪ್ರಾಣಪ್ರಯಾಣಸಮಯೇ ಪರಮಿಂದುಮೌಳಿ
ಪಾದಾರವಿಂದಮಕರಂದರಸಾಭಿಷೇಕಃ ।
ಮಚ್ಚಿತ್ತಭೃಂಗವರಮೂರ್ತಿರ್ಭವತ್ವಿತೀಶ
ಸಂಪ್ರಾರ್ಥಿತೋಽಸಿ ಮುಹುರೀಶ ನ ವಿಸ್ಮೃತೋಽಸಿ ॥೫೧॥

ಅದ್ಯಾಪಿ ಚೇದಿಹ ದಯಾ ನ ತವೇಂದುಮೌಳೇ
ಡೋಲಾಯಿತಂ ಮಮ ಮನಃ ಕಥಮದ್ಯ ನ ಸ್ಯಾತ್ ।
ಕಿಂ ತಸ್ಯ ವಾರಣಮಶಕ್ಯಮುತಾತಿಶಕ್ಯಂ
ಶರ್ವಸ್ಯ ತಾವದಿತಿ ಶೈಲಸುತಾಸಹಾಯ ॥೫೨॥

ಕಾಲಂ ಪರಂ ವರದಕಲ್ಪಮಹಂ ಸ್ಮರಾಮಿ
ಗೌರೀಮನೋಹರಪದಾಬ್ಜರಜಃಪ್ರಸಾದಾತ್ ।
ಏತನ್ನಿವಾರಣಮಶಕ್ಯಮಿಹಾಸ್ತಿ ಕಿಂ ಮೇ
ತ್ರ್ಯಂಬಕೇನ ಮನುನಾ ಮನಸಾ ಸ್ಮೃತೇನ ॥೫೩॥

---

ಚಂದ್ರಶಿರೋಭೂಷಣನಾದ ನಿನ್ನ ಪಾದಕಮಲಗಳ ಅಮೃತರಸಗಳಿಂದ ಅಭಿಷೇಕವುಂಟಾಗಲಿ. ಪರಮೇಶ್ವರನೇ, ಅನೇಕ ಬಾರಿ, “ಮರಣಸಮಯದಲ್ಲಿ ನನ್ನ ಮನಸ್ಸೆಂಬ ಕಮಲದಲ್ಲಿ ಶ್ರೇಷ್ಠವಾದ ದುಂಬಿಯ ರೂಪವನ್ನು ಧರಿಸಿ ಶಾಶ್ವತವಾಗಿ ನೀನು ನೆಲಸಬೇಕು” ಎಂದು ಪ್ರಾರ್ಥಿಸಿರುವೆನು. ಅದನ್ನು ನೀನು ಮರೆತೆಯೋ ಏನೊ ? ॥೫೧॥

ಎಲೈ ಚಂದ್ರಮೌಳಿಯೇ, ಈಗಲಾದರೂ ನನ್ನ ಮೇಲೆ ನಿನಗೆ ದಯೆ ಬಾರದೇ ಹೋದರೆ, ನನ್ನ ಮನಸ್ಸು ನಿಜವಾಗಿಯೂ ಸಂದೇಹಗೊಳ್ಳದಿರುವುದೇ ! ನೀನೇ ಪರ್ಯಾಲೋಚಿಸು. ಸ್ವಾಮಿ, ಗಿರಿಜಾರಮಣನಾದ ಪರಮೇಶ್ವರನೇ, ಭಕ್ತ ಸುಖಕರನೆನಿಸಿದ ನಿನಗೆ ಈ ಯಮನನ್ನು ನಿಗ್ರಹಿಸುವುದೊಂದು ಅಸಾಧ್ಯವೇ ! ಅಥವಾ ತುಂಬಾ ಶ್ರಮವಹಿಸಬೇಕಾದ ಕಾರ್ಯವೇ ಯಾವುದೂ ನನಗೆ ತೋರದಂತಾಗಿರುವುದು. ॥೫೨॥

ಇಷ್ಟಾರ್ಥಗಳನ್ನು ಕೊಡುವುದರಲ್ಲಿ ಕಲ್ಪವೃಕ್ಷದಂತಿರುವ ಕಾಲಸ್ವರೂಪನಾದ ಪರಮೇಶ್ವರನನ್ನು ಗೌರೀದೇವಿಯ ಮನೋಹರವಾದ ಪಾದಕಮಲಗಳ ಧೂಳಿನ ಅನುಗ್ರಹವನ್ನು ಪಡೆದು ನಾನು ಸ್ಮರಣೆಮಾಡುತ್ತಿರುವೆನು. ಮನಸ್ಸಿನಲ್ಲಿ ತ್ರ್ಯಂಬಕ

ಅದ್ಯಾಂತಕಾಂತಕ ಭಯಂ ಯಮವಾರಣೇನ
ತಾವನ್ನಿವಾರಯ ನಿವಾರಯ ಯೇನ ಚಿತ್ತಂ ।
ಸ್ವಸ್ಥಂ ತ್ವದಂಘ್ರಿಕಮಲಾಮಲಪೂಜನಾದೌ
ತದ್ವಿಘ್ನವಾರಣಮವಶ್ಯಮಪೇಕ್ಷಿತಂ ಮೇ ॥೫೪॥

ಪ್ರಾಣಪ್ರಯಾಣಸಮಯೇಽಪಿ ನ ಲಿಂಗಪೂಜಾ
ತ್ಯಾಗೋ ಮತೋ ನ ಭವತೀತಿ ವಿಧಿಶ್ಶ್ರುತೋಽಪಿ ।
ಕಿಂ ತೇನ ತಾವದಧುನಾ ತ್ವದನುಷ್ಠಿತೇನ
ಹಾ ಹಂತ ಹಂತ ವಿಧಿರೇವ ಹತಃ ಕಥಂ ವಾ ॥೫೫॥

---

ಮಂತ್ರವನ್ನು ಜಪಿಸುತ್ತಾ ಪರಶಿವನನ್ನು ಧ್ಯಾನಮಾಡುವ ನನಗೆ ಈ ಯಮನನ್ನು ನಿಗ್ರಹಿಸುವುದೊಂದು ಅಸಾಧ್ಯವೇ! ॥೫೩॥

ಎಲೈ ಕಾಲಾಂತಕನಾದ ಪರಮೇಶ್ವರನೇ, ಈಗಲೇ ಈ ಯಮನನ್ನು ನಿವಾರಣೆಮಾಡಿ, ಇವನಿಂದ ನನಗುಂಟಾಗಿರುವ ಭಯವನ್ನು ಹೋಗಲಾಡಿಸು. ಈ ಯಮಭಯವನ್ನು ನಿವಾರಣೆಮಾಡುವುದರಿಂದ ನನ್ನ ಮನಸ್ಸು ಸ್ಥಿರವಾಗಿ ಯಾವ ಅಡಚಣೆಯೂ ಇಲ್ಲದಂತೆ ನಿನ್ನ ಪಾದಕಮಲಗಳ ಪೂಜಾದಿಕಾರ್ಯಗಳಲ್ಲಿ ನಿರತವಾಗುವುದು. ಆದುದರಿಂದ ಓ ಪ್ರಭೋ, ಈ ಪೂಜಾದಿಗಳಿಗೆ ವಿಘ್ನವುಂಟಾಗದಂತೆ ಅನುಗ್ರಹಿಸುವುದೇ ನನಗೆ ಪ್ರಕೃತಕ್ಕೆ ಬೇಕಾದ ಅಪೇಕ್ಷೆಯೆಂದು ತಿಳಿ. ॥೫೪॥

ಪ್ರಾಣಹೋಗುವ ಸಮಯದಲ್ಲಿಯೂ ಸಹ ಶಿವಲಿಂಗಪೂಜೆಯನ್ನು ತ್ಯಾಗಮಾಡದೇ ಆಚರಿಸಬೇಕೆಂದು ವಿಧಿಯಿರುವುದು. ಹೀಗೆ ವಿಧಿಯಿದ್ದರೂ, ಪರಮೇಶ್ವರ, ನೀನು ಈಗ ಉದಾಸೀನನಾಗಿ ನಿನ್ನ ಭಕ್ತನನ್ನು ರಕ್ಷಿಸದೆ ಇರುವುದು ಉಚಿತವೇ! ಅಯ್ಯೋ! ಪಾಪ! ಇದರಲ್ಲಿ ನಿನ್ನ ತಪ್ಪೇನು? ಹೇಳುವ ವಿಧಿಯೇ ವ್ಯರ್ಥವಚನವುಳ್ಳದ್ದಲ್ಲವೇ! ಪ್ರಾಣತ್ಯಾಗಕಾಲದಲ್ಲಿಯೂ ಬಿಡದೆ ನನ್ನನ್ನಾರಾಧಿಸುವ ಭಕ್ತರನ್ನುದ್ಧಾರಮಾಡುವೆನೆಂದು ವಿಧಿಯಲ್ಲಿ ಅನೇಕ ಪ್ರಕಾರವಾಗಿ ನಿನ್ನ ಮಹಿಮೆಯು ಕೊಂಡಾಡಲ್ಪಟ್ಟಿದ್ದರೂ, ಈಗ ನಿನ್ನ ಭಕ್ತನಿಗೊದಗಿರುವ ವಿಪತ್ತನ್ನು ಪರಿಹರಿಸದೇ ಇರುವುದು ಉಚಿತವಲ್ಲವೆಂದು ತೋರುವುದು. ॥೫೫॥

ತ್ವತ್ಪಾದಪದ್ಮಮಣಿಪಂಜರಪಿಂಜರಂ ಮೇ
ಚಿತ್ತಂ ಭವತ್ವನಿಶಮಿಂದುಕಲಾವತಂಸ ।
ಮನ್ಮಾನಸಂ ಪರಮಹಂಸಕುಲಾವತಂಸಂ
ಮತ್ವಾ ಭವಚ್ಚರಣವಾಸಮಿಹ ಪ್ರಯಚ್ಛ ॥೫೬॥

ಸೋಽಯಂ ಯಮೋ ಯದಿ ಶರೀರಮಿದಂ ವಿನೇತು
ಮಾಯಾಂತಿ ತರ್ಹಿ ಭಯಮಸ್ಯ ನ ಮೇ ಮನಶ್ಚೇತ್ ।
ತ್ವತ್ಪಾದಪದ್ಮನಿಹಿತಂ ಧನಮಸ್ಮದೀಯಂ
ನೇತುಂ ನ ಯಸ್ಯ ಖಲು ಶಕ್ತಿರುಮಾಸಹಾಯ ॥೫೭॥

ಧನಂ ತಾವಲ್ಲೋಕೇ ಮರಣಸಮಯೇಽಪಿ ಪ್ರಿಯತಮಂ
ನ ಹಾತುಂ ವಾಂಛಾ ಸ್ಯಾದಿತಿ ಖಲು ಭವೇದ್ಗೋಪಸಮಪಿ ।
ಪುನಃ ಪ್ರತ್ಯಾಶಾಯಾಮಿತಿ ಮಮ ಮನೋರೂಪಧನಮ
ಪ್ಯುಮಾಕಾಂತೇ ದತ್ತಂ ಭವತಿ ಸತತಂ ರಕ್ಷಿತಮಪಿ ॥೫೮॥

---

ಚಂದ್ರಶಿರೋಭೂಷಣನಾದ ಪರಮೇಶ್ವರನೇ, ರತ್ನಸಮೂಹ ಕಾಂತಿಗಳಿಂದ ಅಥವಾ ಕಾಂತಿಯಂತೆ, ಹೊಂಬಣ್ಣವಾಗಿರುವ ನಿನ್ನ ಪಾದಕಮಲವು ನನ್ನ ಮನಸ್ಸಿನಲ್ಲಿ ಅನವರತವೂ ನೆಲಸಲಿ. ದೇವ! ಈ ನನ್ನ ಮನಸ್ಸು ಪರಮಹಂಸ ರೆನಿಸಿದ ಜ್ಞಾನಿಗಳ ಸಮೂಹಕ್ಕೆಲ್ಲಾ ಶಿರೋಭೂಷಣದಂತೆ ಶ್ರೇಷ್ಠವಾದುದೆಂದು ತಿಳಿದು ನಿನ್ನ ಅಡಿದಾವರೆಗಳು ನನ್ನ ಮನದಲ್ಲಿಯೇ ನೆಲಸುವಂತೆ ಮಾಡು. ||೫೬||

ನಿನ್ನ ಪದಕಮಲವನ್ನು ನನ್ನ ಮನಸ್ಸಿನಲ್ಲಿಟ್ಟರೆ, ಈ ನನ್ನ ಶರೀರವನ್ನು ಒಂದುವೇಳೆ ಯಮನು ತೆಗೆದುಕೊಂಡುಹೋಗಲು ಬಂದರೂ ನನಗೆ ಯಾವ ಭಯವೂ ಇರುವುದಿಲ್ಲ. ದೇವ, ಉಮಾರಮಣನಾದ ನಿನ್ನ ಪಾದಕಮಲಗಳಲ್ಲಿರಿ ಸಿರುವ ನಮ್ಮ ದ್ರವ್ಯವನ್ನಪಹರಿಸಲು ಯಾರಿಗೆ ತಾನೇ ಶಕ್ತಿಯುಂಟಾಗುವುದು ? ||೫೭||

ಹಣವು ಎಲ್ಲಕ್ಕಿಂತಲೂ ಮಾನವನಿಗೆ ತುಂಬಾ ಪ್ರೀತಿಕರವಾದ ಪದಾರ್ಥ. ಮಾನವನು ತನಗೆ ಅತ್ಯಂತ ಪ್ರೀತಿಕರವಾದ ಈ ಧನವನ್ನು ಸಾಯುವ ಸಮಯ ದಲ್ಲಿ ಸಹ ಮತ್ತೊಬ್ಬರಿಗೆ ತ್ಯಾಗಮಾಡದೇ ಪುನಃ ತಾನೇ ಹೊಂದಬೇಕೆಂಬ

**ಪ್ರತ್ಯಾಶಾ ಯದಿ ಜೀವನೇ ತವ ಯಮ ಪ್ರಾಯಃ ಪ್ರಶಾಂತಾ ತದಾ**
**ತಾವನ್ಮಾಮುಪಯಾಹಿ ನಿರ್ದಯಮಮುಂ ಮೃತ್ಯುಂಜಯಂ ಪಶ್ಯ ಮೇ ।**
**ತ್ರಾತಾಯಂ ಭಯತಃ ಪಿತಾಪಿ ಸ ಪುನರ್ದಾತಾಪಿ ಮುಕ್ತೇಃ ಪ್ರಭೋಃ**
**ಸಾಮರ್ಥ್ಯಂ ಕಥಮದ್ಯ ವಿಸ್ಮೃತಮಹೋ ಮೋಹಸ್ತವಾಯಂ ಕುತಃ॥೫೯॥**

**ತಂ ಮೋಹಂ ಪರಿಹಾಯ ಸಾಯಮಸಕೃನ್ಮೃತ್ಯುಂಜಯಂ ಪಶ್ಯ ಮಾ**
**ಮವ್ಯಗ್ರಂ ಕಥಮುಗ್ರಲಿಂಗನಿಕಟೇ ಪಶ್ಯೇ ಯಮ ಸ್ವಾಟನಂ ।**
**ಉಗ್ರಾನುಗ್ರಹಭಾಜನೇ ಮಯಿ ಕಥಂ ಭೀತಿರ್ಯಮಾತ್ಸ್ಯಾದಹೋ**
**ಹಾ ಹಂತಾತಿವಿಮೋಹಿತೋಽಸಿ ಯಮ ತೇ ಭ್ರಾಂತಂ ಚ ಚಿತ್ತಂ ಖಲು**
**॥೬೦॥**

---

ಪ್ರತ್ಯಾಶೆಯಿಂದ ಹೊತಿಡುವನು. ಹಾಗೆಯೇ ಈ ನನ್ನ ಮನೋರೂಪವಾದ ಧನವನ್ನೂ ಬೇರೆ ಯಾರೂ ಅಪಹರಿಸದೆ ಇರುವಂತೆ, ಉಮಾರಮಣನಲ್ಲಿ ಸಮರ್ಪಿಸುವೆನು. ಇದರಿಂದ ಅದು ಯಾವಾಗಲೂ ಸುರಕ್ಷಿತವಾಗಿರುವುದು. ॥೫೮॥

ಎಲೈ ಯಮನೇ! ನಿನಗೆ ಇನ್ನೂ ಬದುಕಬೇಕೆಂಬ ಪ್ರತ್ಯಾಸೆಯೇನಾದರೂ ಇದ್ದರೆ ಇನ್ನು ನನ್ನ ಸಮೀಪಕ್ಕೆ ಬರಬೇಡ. ಇಲ್ಲದೆ ನನ್ನ ಸಮೀಪಕ್ಕೆ ದುಡುಕಿ ಬರುವುದೇ ಆದರೆ ನಿನ್ನ ಆಸೆಯು ಮುಗಿದಂತೆಯೇ ಸರಿ. ಈ ಮೃತ್ಯುಂಜಯನೆನಿಸಿದ ಪರಮೇಶ್ವರನು ನಿಮ್ಮಂತಹವರ ವಿಷಯದಲ್ಲಿ ತುಂಬಾ ದಯಾಶೂನ್ಯನು. ಈ ಮೃತ್ಯುಂಜಯನೇ ನನ್ನನ್ನು ನಿನ್ನ ಭಯದಿಂದ ಕಾಪಾಡುತ್ತಿರುವನು. ತಂದೆ ತಾಯಿಗಳೂ, ಮುಕ್ತಿಯನ್ನು ಕೊಡುವವನೂ ಸಹ ನನಗೆ ಈ ಮಹಾದೇವನೇ ಎಂದು ತಿಳಿಯುವನಾಗು. ಎಲೈ ಯಮನೇ! ಇಷ್ಟು ಜಾಗ್ರತೆ ಸರ್ವಸಮರ್ಥನಾದ ಈ ಪರಮೇಶ್ವರನ ಸಾಮರ್ಥ್ಯವನ್ನು ಮರೆತೆಯಾ! ಅಯ್ಯೋ! ಇದು ನಿಜವಾಗಿಯೂ ನಿನ್ನ ಅಜ್ಞಾನವೇ ಹೊರತು ಬೇರೆಯಲ್ಲ. ಆದುದರಿಂದ ಕೇವಲ ಅಜ್ಞಾನಿಯಾದ ನೀನು ನಿನ್ನ ಹಿಂದಿನ ಸಮಾಚಾರವನ್ನೆಲ್ಲಾ ಸ್ಮರಿಸಿಕೊಂಡು ಇನ್ನು ಮುಂದೆ ತೊಂದರೆಗೊಳಗಾಗದಂತೆ ನಡೆದುಕೋ! ॥೫೯॥

ಯಮನೇ! ಈಗ ನಿನಗುಂಟಾಗಿರುವ ಅಜ್ಞಾನವನ್ನು ಬಿಟ್ಟು ಸಾಯಂಕಾಲದ ವೇಳೆಯಲ್ಲಿ ಅನೇಕ ಬಾರಿ ಮೃತ್ಯುಂಜಯ ಸ್ವರೂಪನಾಗಿ ತೋರುವ ನನ್ನನ್ನು ದರ್ಶನಮಾಡು. ಸ್ವಲ್ಪವೂ ಕಳವಳಗೊಳ್ಳದೇ ಉಗ್ರವಾದ ಶಿವಲಿಂಗದ ಸಮೀಪ

ಹಾರೇಷು ಪ್ರಣತೋಽತಿಭೀತ ಇತಿ ತೇ ಕೀರ್ತಿಃ ಕೃತಾಂತಸ್ಯ ವಾ
ಸಾ ತಾವದ್ವಿಗತಾ ವಿನಾಶಸಮಯಃ ಪ್ರಾಯಸ್ತವಾಯಂ ಯಮ ।
ಪ್ರಾಯಃ ಕಸ್ಯ ಕೃತಾಂತಭೀತಿರಧುನಾ ಕಾರ್ತಾಂತವಾರ್ತಾಪಿ ಕಾ
ಕಃ ಕಾಲೋಽಪಿ ನ ಕಾಲಕಾಲಭಜನಾಸಕ್ತಂ ನ ಜಾನಾಸಿ ಮಾಂ ॥೬೧॥

ಇತಿ ತದ್ವಚನಂ ಶ್ರುತ್ವಾ ಯಮಃ ಪ್ರಾಹ ತಮಾಸ್ತಿಕಂ ।
ಭಯಂ ಮಾ ಕುರು ಮತ್ತಸ್ತೇ ನ ಭಯಂ ಜಾತು ಜಾಯತೇ ॥೬೨॥

---

ದಲ್ಲಿಯೇ ಸಂಚರಿಸುತ್ತಾ ಇರುವುದನ್ನು ನೋಡಿದರೆ ನಿನಗೆ ಇದು ಗೊತ್ತಾಗುವು ದಿಲ್ಲವೇ! ಉಗ್ರಸ್ವರೂಪನಾದ ಪರಮೇಶ್ವರನ ಅನುಗ್ರಹಕ್ಕೆ ನಾನು ಪಾತ್ರನಾಗಿರು ವಾಗ ಯಮನ ಭಯವು ನನಗೆ ಹೇಗೆ ತಾನೇ ಉಂಟಾದೀತು? ಅಯ್ಯೋ ಪಾಪ! ಯಮನೇ, ನೀನು ತುಂಬಾ ಮೋಹಗೊಂಡಿರುವೆ. ನಿನ್ನ ಮನಸ್ಸು ಈಗ ಭ್ರಾಂತಿ ಹೊಂದಿರುವುದು. ॥೬೦॥

ಎಲೈ ಯಮನೇ! ಕೃತಾಂತನೆನಿಸಿದ ಯಮನೂ ಸಹ ಹೆದರಿ ಶಿವನ ಭಕ್ತ ನಿಗೆ ನಮಸ್ಕಾರ ಮಾಡುವನೆಂದು ಇನ್ನು ಮೇಲೆ ನಿನಗೆ ಇದ್ದ ಕೀರ್ತಿಯೆಲ್ಲಾ ನಷ್ಟ ವಾದಂತೆಯೇ ತಿಳಿ. ನಿಜವಾಗಿಯೂ ಇದು ನಿನಗೆ ವಿನಾಶಕಾಲವೆಂದೇ ನಾನು ತಿಳಿದಿರುವೆನು. ಯಾರಿಗೆ ಈ ಯಮನ ಬಾಧೆಯುಂಟು; ಯಮದೂತರ ವೃತ್ತಾಂತ ವಾದರೂ ಯಾರಿಗೆ ಸಂಬಂಧಿಸುವುದು ಎಂಬುದನ್ನೂ ಮೊದಲು ಯೋಚಿಸು. ನಾನು ಕಾಲಸ್ವರೂಪನಾದ ಯಮನನ್ನೇ ನಿಗ್ರಹ ಮಾಡಿದ ಪರಶಿವನ ಭಕ್ತನು; ಮತ್ತು ಸದಾ ಆ ಮಹಾದೇವನ ಪೂಜೆಯಲ್ಲಿಯೇ ನಿರತನಾಗಿರುವೆನು ಎಂಬುದನ್ನು, ನೀನು ಸಾಕ್ಷಾತ್ಕಾಲ ಸ್ವರೂಪನಾಗಿದ್ದರೂ ತಿಳಿಯಲಾರದೆ ಹೋದೆಯಲ್ಲಾ! ಇದು ನಿನ್ನ ದಡ್ಡತನವಲ್ಲವೇ! ನೀನೇ ಪರ್ಯಾಲೋಚಿಸು" ಎಂದು ಆ ಶಿವಭಕ್ತನು ಯಮ ನನ್ನು ಕುರಿತು ನುಡಿದನು. ॥೬೧॥

ಯಮನು ಆ ರೀತಿ ನುಡಿದ ಆ ಪರಶಿವಭಕ್ತನ ವಚನವನ್ನು ಲಾಲಿಸಿ, ಆಸ್ತಿಕಶಿರೋಮಣಿಯಾದ ಅವನನ್ನು ಕುರಿತು, ಎಲೈ ಭಕ್ತಾಗ್ರೇಸರನೇ! ನನ್ನ ದೆಸೆಯಿಂದ ಎಂದಿಗೂ ಯಾವ ರೀತಿಯಲ್ಲಿಯೂ ನಿನಗೆ ಭಯವುಂಟಾಗಲಾರದು. ಧೈರ್ಯವಾಗಿರು. ॥೬೨॥

ಧೈರ್ಯಂ ವಿಚಾರ್ಯ ತೇ ತಾವದ್ಗಿರಿಶಾರಾಧಕಸ್ಯ ತೇ ।
ವರಂ ವೃಣು ಪ್ರಯಚ್ಛಾಮಿ ಯದಪೇಕ್ಷಿತಮಾಸ್ತಿಕ ॥೬೩॥

॥ ಆಸ್ತಿಕ ಉವಾಚ ॥

ಮಹಾದೇವೇ ದಾತರ್ಯತಿವಿತತಭಾಗ್ಯೇ ಸತಿ ಹಿತೇ
ಸತಿ ಸ್ಫೀತೇ ಭೂತೇ ಕಿಮಿತಿ ವರಯೇಽಹಂ ವರಮಪಿ ।
ವರಂ ದಾತುಂ ಶಕ್ತೋ ನ ಜಗತಿ ತಥಾ ವಿಶ್ರುತ ಇತಿ
ತ್ವಯಾ ಜ್ಞಾತೋ ನಾತಃ ಪರಮಿತಿ ವರಂ ನೈವ ವರಯೇ ॥೬೪॥

ತ್ರಿದಶೇಶಮಹೇಶಪಾದಪದ್ಮಪ್ರವಣಾಂತಃಕರಣಸ್ಯ ದುರ್ಲಭಂ ಕಿಂ ।
ವರದೇಷು ವರೋ ಹರಃ ಪರೋ ನೋ ವರದತ್ವಂ ತವ ಕೇನ ನಿಶ್ಚಿತಂ॥೬೫॥

---

ಎಲೈ ಆಸ್ತಿಕನೇ! ಮಹೇಶ್ವರನ ಪೂಜಕನಾದ ನಿನ್ನ ಧೈರ್ಯವನ್ನು ನೋಡಿ ನನಗೆ ಬಹಳ ಸಂತೋಷವೂ ಆಶ್ಚರ್ಯವೂ ಉಂಟಾಗಿದೆ. ಆದುದರಿಂದ ನಿನಗೆ ಬೇಕಾದ ವರಗಳನ್ನು ಬೇಡು ಕೊಡುವೆನು. ಎಂದು ಯಮನು ಆ ಆಸ್ತಿಕನಿಗೆ ಅಭಯ ಪ್ರದಾನಮಾಡಿದನು. ॥೬೩॥

ಆಗ ಆಸ್ತಿಕನು ಹೀಗೆ ನುಡಿದನು. "ಯಮದೇವನೇ, ಸಕಲ ಪ್ರಾಣಿಗಳಿಗೂ ಹಿತಕರನೆನಿಸಿರುವ ಮಹಾದೇವನು, ಅತಿ ವಿಪುಲವಾದ ಐಶ್ವರ್ಯವನ್ನು ಕೊಡಲು ಬದ್ಧಕಂಕಣನಾಗಿ ನಿಂತಿರುವಾಗ ನಿನ್ನಿಂದ ನಾನು ಯಾವ ವರವನ್ನು ಬೇಡಲಿ. ಈ ಪ್ರಪಂಚದಲ್ಲಿ ವರವನ್ನು ಕೊಡಲು ಸಮರ್ಥನಾದ ಪ್ರಭುವು ಪರಶಿವನೇ ಹೊರತು, ಬೇರೆಯವರಲ್ಲವೆಂಬುದನ್ನು ನೀನರಿಯೆಯಾ! ಜಗತ್ಪ್ರಸಿದ್ಧನಾದ ದಾತೃವೆಂದರೆ ಅವನೇ. ಇದನ್ನು ತಿಳಿಯದ ನಿನ್ನಿಂದ ನಾನು ಯಾವ ವರವನ್ನೂ ಬೇಡಲಾರೆನು. ॥೬೪॥

ಮೂರು ಲೋಕಗಳಿಗೂ ಒಡೆಯನಾದ ಮಹೇಶ್ವರನ ಪಾದಕಮಲ ಸೇವೆಯಲ್ಲಿ ನೆಟ್ಟಮನಸ್ಸುಳ್ಳ ಶಂಭು ಭಕ್ತರಿಗೆ ಯಾವುದು ತಾನೇ ದುರ್ಲಭ! ದಾನ ಮಾಡುವವರಲ್ಲಿ ಶ್ರೇಷ್ಠನೆಂದರೆ ಪರಮೇಶ್ವರನೆಂದೇ ನಾನು ತಿಳಿದಿರುವೆನು. ನೀನು ಹೀಗಿರುವಾಗ ನನಗೆ ವರವನ್ನು ಬೇಡು ; ಕೊಡುತ್ತೇನೆಂದು ಹೇಳಿದೆಯಲ್ಲಾ ; ಈ ವರವನ್ನು ಕೊಡುವ ಕೆಲಸವನ್ನು ನಿನಗೆ ನಿಯಮಿಸಿದವರಾರು ? ॥೬೫॥

ಯದ್ಯತ್ತ್ವಾಸ್ಯತ್ಸಮಪೇಕ್ಷಿತಂ ತದಖಿಲಂ ಪ್ರಾಪ್ತಂ ಮಯೈವಾಧುನಾ
ಗೌರೀಕಾಂತಪದಾರವಿಂದಭಜನಾದ್ದೇಯಂ ತ್ವಯಾ ಕಿಂ ಮಮ ।
ಕಿಂ ತೇ ಶಿಷ್ಯತಿ ನಿಷ್ಠುರಂ ತವ ಮನಃ ಕಷ್ಟಪ್ರಸಾದೋದ್ಯತಂ
ಸ್ವಸ್ಥಸ್ಯಾಪಿ ಯತೋ ಭವತ್ಯತಿಭಯಂ ತ್ವತ್ತಂ ಪರಂ ನಿರ್ದಯ ॥೬೬॥

ಲಿಂಗಾರಾಧನವಿಘ್ನ ಏವ ಜನಿತಸ್ತಾವತ್ತ್ವಯಾ ತೇನ ತೇ
ಪ್ರಾಯಸ್ಸ್ಯಾದಪಿ ಶಾಸನಂ ಖಲು ಖಲ ಶ್ರೀಕಾಲಕಾಲಾರ್ಚಕಃ ।
ತಸ್ಮಾದ್ಧ್ರೀತಿಮುಪೈತಿ ಕಾಲನಿಲಯಂ ಕರ್ತುಂ ಸಮರ್ಥೋಽಪ್ಯಯಂ
ಕಃ ಕಾಲಾಂತಕಪೂಜನೇನ ಕಲಯೇತ್ಕಾಲಾದ್ಭಯಂ ನಿರ್ಭಯಃ ॥೬೭॥

ನ ಜಾನಾಸಿ ತತ್ತ್ವಂ ಶಿವಾಚಾರನಿಷ್ಠಪ್ರಭಾವಂ ಚ ಕಾಲಾಧುನಾ ಕಾಲ
ಕಾಲಃ ।

---

ನಾನು ಅಪೇಕ್ಷಿಸಿದ ಸಕಲ ಇಷ್ಟಾರ್ಥಗಳೂ, ಗೌರೀರಮಣನಾದ ಮಹಾದೇವನ ಪಾದಸೇವೆಯಿಂದ ನನಗೆ ಲಭಿಸಿಯೇ ಇರುವಾಗ, ಈಗ ನೀನು ನನಗೆ ಕೊಡುವ ವರವು ತಾನೇ ಏನಿರುವುದು? ಅತಿಪ್ರಯಾಸದಿಂದ ಅನುಗ್ರಹದಲ್ಲಿ ಪ್ರವೃತ್ತವಾಗುವ ನಿನ್ನ ಕಠಿಣವಾದ ಮಾತೊಂದೇ ನಿನ್ನಲ್ಲಿ ಉಳಿದಿರುವುದನ್ನು ನಾನು ಭಾವಿಸುವೆನು. ಎಲೈ ದಯಾಶೂನ್ಯವಾದ ಯಮನೇ! ಶಾಂತಮನಸ್ಸುಳ್ಳ ಯಾವನಿಗೂ ನಿನ್ನಿಂದತುಂಬಾ ಭಯವುಂಟಾಗುತ್ತಿರುವಾಗ, ಇದಕ್ಕಿಂತ ನಿನ್ನ ದಯೆಯನ್ನು ಎಷ್ಟೆಂದು ವರ್ಣಿಸಲಿ? ॥೬೬॥

ಎಲೈ ದುಷ್ಟನಾದ ಯಮನೇ! ನೀನು ಶಿವಲಿಂಗಪೂಜೆಗೆ ವಿಘ್ನವನ್ನುಂಟು ಮಾಡಿರುವುದರಿಂದ ನಿನಗೆ ನ್ಯಾಯವಾಗಿ ಶಿಕ್ಷೆಯಾಗಬೇಕು. ಕಾಲಾಂತಕನಾದ ಪರಮೇಶ್ವರನ ಪೂಜಕನಾದ ಶಾಂಭವನು, ಯಮನನ್ನೇ ಧ್ವಂಸಮಾಡಲು ಸಮರ್ಥನಾದರೂ, ಈಗ ನಿನ್ನ ಶಿಕ್ಷೆಯಲ್ಲಿ ಸ್ವಲ್ಪ ಹಿಂದೆಗೆಯುತ್ತಿರುವನು. ಕಾಲಾಂತಕನೆನಿಸಿದ ಪರಶಿವನನ್ನು ಪೂಜಿಸುವ ಯಾವ ಮಾನವನು ತಾನೇ ನಿನಗೆ ಹೆದರಿಯಾನು? ಅವನು ಯಾವಾಗಲೂ ನಿರ್ಭಯವೆಂದು ತಿಳಿ. ॥೬೭॥

ಯಮನೇ, ಶಿವಪೂಜಾತತ್ಪರರಾದ ಮಾನವರ ಮಹಿಮೆಯನ್ನು ಇನ್ನೂ ನೀನರಿಯೆ. ಅವರು ಕಾಲಾಂತಕನಾದ ಪರಮೇಶ್ವರನ ಸ್ವರೂಪವೇ ಆಗಿರುವರು.

ಹಿತಪ್ರಾಯ ಏವೇತಿ ತೇ ದುರ್ಮತಿಸ್ಸ್ಯಾತ್ಸಸಂಹಾರಕಃ ಕೋಽಪಿ ಕಾಲಾಗ್ನಿ ರೂಪಃ ॥೧೮॥

ಮಹಾದೇವಪಾದಾರವಿಂದಂ ಮನೋ ಮೇ
ಪ್ರವಿಷ್ಟಂ ಯಥೇಷ್ಟಂ ವಿನಷ್ಟಾಘಸಂಘಂ ।
ವಹತ್ಯೇವ ತೇ ನಿಷ್ಠುರಂ ಕೃತ್ಯಮೇತ
ತ್ತತಃ ಕಷ್ಟಮೇವಾದ್ಯ ತೇ ಭಾವಿ ಕಾಲ ॥೧೯॥

ನ ರಿಕ್ತಂ ಮನೋ ಮೇ ವಿರಕ್ತಂ ನ ಗೌರೀ
ಸಹಾಯಾಂಘ್ರಿಪಂಕೇರುಹಾರಾಧನೇಷು ।
ಸಮಸ್ತಾರ್ಥದಾನಪ್ರವೀಣೇಷು ತೇಷು
ಮಹೇಶಪ್ರಸಾದೇಷು ಶಕ್ತಿಪ್ರಕೃಷ್ಟಂ ॥೨೦॥

---

ಈ ಮಹೇಶ್ವರನು ಯಾವಾಗಲೂ ಹಿತಕರನೆಂದೇ ನೀನು ತಿಳಿದಿರುವುದು ನಿನ್ನ ದಡ್ಡತನ. ಈ ಮಹಾಮಹಿಮನು ಕಾಲಾಗ್ನಿಸ್ವರೂಪನು. ಅಲ್ಲದೆ ಜಗತ್ಸಂಹಾರ ಕರ್ತನೂ ಆಗಿರುವನು. ॥೧೮॥

ಯಮನೇ, ನನ್ನ ಮನಸ್ಸು ಯಥೇಷ್ಟವಾಗಿ ಮಹಾದೇವನ ಅಡಿದಾವರೆ ಗಳನ್ನು ಹೊಕ್ಕು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡಿದೆ. ಆದುದರಿಂದಲೇ ಕ್ರೂರವಾದ ಈ ಕಾರ್ಯವನ್ನೂ ಸಹ ನನ್ನ ಮನಸ್ಸು ಸಹಿಸಿಕೊಂಡಿದೆ. ಇಲ್ಲದಿದ್ದರೆ ಈಗಲೇ ನಿನಗೆ ಕಷ್ಟವೊದಗುತ್ತಿದ್ದಿತೆಂದು ತಿಳಿಯುವನಾಗು. ॥೧೯॥

ಅಲ್ಪವಾದ ಈ ನನ್ನ ಮನಸ್ಸು ಇತರ ಯಾವ ವಿಷಯದಲ್ಲೂ ಪ್ರವರ್ತಿಸದೆ ಯಾವಾಗಲೂ ಗೌರೀರಮಣನಾದ ಶಂಕರನ ಅಡಿದಾವರೆಗಳಲ್ಲಿಯೇ ವಿಶೇಷವಾಗಿ ಅನುರಕ್ತವಾಗಿರುವುದು. ಈ ಪಾದಸೇವೆಯಾದರೋ ಸಕಲ ಮನೋರಥಗಳನ್ನೂ ಕೊಡುವುದರಲ್ಲಿ ನಿಪುಣತರವೆನಿಸಿರುವ ಮಹೇಶ್ವರನ ಅನುಗ್ರಹಕ್ಕೆ ಕಾರಣವಾಗಿರು ವುದು. ಮಹಾದೇವನ ಈ ಅನುಗ್ರಹದಿಂದ ನನ್ನ ಮನಸ್ಸು ಉತ್ಕೃಷ್ಟವಾದ ಶಕ್ತಿಯಿಂದ ಕೂಡಿರುವುದು. ॥೨೦॥

ನಾಸ್ಮಾಕಂ ಭಯಮಿಂದುಶೇಖರಪದಾಂಭೋಜಾರ್ಚನಾತ್ಯಾದರಾತ್
ಸಂಸಾರಾದಪಿ ಕಾಲತೋಽಪಿ ಸ ಮಹಾಪಾಪೌಘತೋ ವಾ ಯಮ ।
ಪಾಪಂ ನ ಕ್ರಿಯತೇ ಕೃತೇಽಪಿ ನ ಭಯಂ ಪಾಪಾಂಬುರಾಶೀಕ್ಷಣಾ
ನ್ನಾಶಂ ಯಾಸ್ಯತಿ ಶಂಕರಸ್ಮರಣತಸ್ತ್ವತ್ತೋ ಭಯಂ ದೂರತಃ ॥೭೧॥

ದೃಷ್ಟ್ವಾ ಹಾರಪದಾಂಬುಜಾಂಚಲರಜೋಲೇಶಪ್ರಭೂತಾನಿಲಂ
ಪಾಪಾಬ್ಧಿಃ ಪ್ರಶಮಂ ಪ್ರಯಾತಿ ಸಹಸಾ ಲೋಕಸ್ಯ ಸರ್ವಸ್ಯ ಚ ।
ನಾಘಂ ಮಾಮುಪಯಾತಿ ತತ್ಕಥಮಪಿ ಪ್ರಾಯಸ್ತಮಭ್ಯಾಗತಂ
ನಾಶಂ ಯಾತಿ ಪತಂಗವತ್ಖಲು ಮಹಾದೇವಾರ್ಚಕೈಃ ಪಾವಕೈಃ ॥೭೨॥

ಪಾಪೇಭ್ಯೋ ನ ಭಯಂ ಯದಾ ಯಮ ತದಾ ತ್ವತ್ತೋಽಪಿ ಭೀತಿಃಕುತಃ
ಕಿಂ ದೇಯಂ ತವ ವರ್ತತೇ ತ್ಯಜ ಮಹಾವಾಚಾಲತಾಂ ಸಂತ್ಯಜ ।

---

ಚಂದ್ರಮೌಳಿಯಾದ ಶಂಕರನ ಪಾದಕಮಲಗಳನ್ನು ಅತ್ಯಾದರದಿಂದ ಪೂಜಿಸುವ ನಮಗೆ ಸಂಸಾರದಿಂದಲಾಗಲೀ, ಯಮನಿಂದಲಾಗಲೀ ಅಥವಾ ಮಹಾ ಪಾಪಸಮೂಹಗಳಿಂದಲಾಗಲೀ ಎಂದಿಗೂ ಭಯವಿಲ್ಲ. ಯಮನೇ, ನಾವು ಪಾಪವನ್ನೇ ಮಾಡುವುದಿಲ್ಲ. ಒಂದುವೇಳೆ ಮಾಡಿದರೂ ಭಯವಿಲ್ಲ. ಮಂಗಳಕರ ನಾದ ಮಹೇಶ್ವರನ ಸ್ಮರಣೆಯಿಂದ ಸಕಲ ಪಾಪಸಮೂಹಗಳೂ ಕ್ಷಣಕಾಲದಲ್ಲಿಯೇ ನಾಶವಾಗುವುವು. ಹೀಗಿರುವಾಗ ಕೇವಲ ನಿನ್ನಿಂದ ಭಯವುಂಟಾಗುವುದೆಂಬುದು ದೂರದ ಮಾತೆಂದು ತಿಳಿ. ॥೭೧॥

ಪರಮೇಶ್ವರನ ಪಾದಕಮಲದ ತುದಿಯಲ್ಲಿರುವ ಅಲ್ಪವಾದ ಪಾದಧೂಳಿ ಯಿಂದುಂಟಾಗಿರುವ ಬಿರುಗಾಳಿಯನ್ನು ನೋಡಿ, ಸಕಲ ಲೋಕದ ಪ್ರಜೆಗಳ ಪಾಪವೆಂಬ ಸಮುದ್ರವೂ ಸಹ ಕೂಡಲೇ ಶಾಂತವಾಗುವುದು. ಯಾವ ವಿಧವಾದ ಪಾಪವೂ ನಮ್ಮ (ಶಿವಭಕ್ತರ) ಸಮೀಪಕ್ಕೂ ಬರಲಾರದು. ಒಂದುವೇಳೆ ಬಂದರೂ ಅದನ್ನು ಪತಂಗದ ಹುಳುವಿನಂತೆ ಮಹಾದೇವನನ್ನು ಪೂಜಿಸುವ ಪ್ರಿಯ ಭಕ್ತಿಯೆಂಬ ಅಗ್ನಿಯು ನಾಶಮಾಡಿಬಿಡುವುದು. ॥೭೨॥

ಶಿವಭಕ್ತನಿಗೆ ಪಾಪಭೀತಿಯೇ ಇಲ್ಲದಿರುವಾಗ ಅವನನ್ನು ಭಯಪಡಿಸಲು ನಿನ್ನಿಂದ ಹೇಗೆ ತಾನೆ ಸಾಧ್ಯವಾದೀತು ? ಪಾಪಿಯಾದವನನ್ನು ಶಿಕ್ಷಿಸುವುದು ನಿನ್ನ ಕರ್ತವ್ಯ. ಹೀಗಿರುವಾಗ ಶಿವಪೂಜಾಪರಾಯಣರಿಗೆ ಆ ಪಾಪ ಸಂಬಂಧವೇ ಇಲ್ಲದಿರು

ವಾಚಾಲತ್ವಮುಮಾಸಹಾಯಭಜನಾಸಕ್ತೇಷು ಯುಕ್ತಂ ಕಥಂ
ಶಕ್ತಿಃ ಶಾಂಭವಪುಂಗವಸ್ಯ ಸಹಸಾ ಜ್ಞಾತಾಪಿ ನೈವ ತ್ವಯಾ ॥೭೩॥

ಧಾರ್ಷ್ಟ್ಯೇನಾಗತಮತ್ರ ಭೀತಿರಧುನಾ ಸಂಪಾದಿತಾ ಕಾಪಿ ಸಾ
ತುಭ್ಯಂ ದಾಸ್ಯತಿ ಭೀತಿಮೇವ ಸಹಸಾ ಸಾ ವೃದ್ಧಿಮುಪ್ಯೇಷ್ಯತಿ ।
ಉಪ್ತಂ ಯತ್ತದವಾಪ್ಯತೇ ಖಲು ಖಲೈಃ ಖಲ್ವಾಃ ಸಮಾರೋಪಿತಾಃ
ಶಾಲೀನಾಮುದಯಾಯ ಕಿಂ ಶಿವಜನದ್ರೋಹಾತ್ಸುಖಂ ಜಾಯತೇ ॥೭೪॥

ಯದ್ಯದ್ಯಾವಧಿ ಶಾಂಭವೇಷು ವಿನಯಸ್ತೇ ತರ್ಹಿ ಸರ್ವಾತ್ಮನಾ
ಕಃ ಕಾಲಾಂತಕತೋಽಪಿ ಭೀತಿರಿತಿ ತೇ ಚಿತ್ತೇ ಪರಂ ತಿಷ್ಠತು ।

---

ವಾಗ ನಿನ್ನ ಭಯವು ಅವರಿಗೆ ಎಂದಿಗೂ ಉಂಟಾಗಲಾರದೆಂದು ತಿಳಿ. ಈ ಶಿವ ಭಕ್ತನಿಗೆ ಕೊಡುವ ವರವು ತಾನೆ ನಿನ್ನಲ್ಲೇನಿರುವುದು ? ಎಲೈ ಯಮನೇ ! ಕೇವಲ ಅಹಂಕಾರದಿಂದ ನಿನಗೆ ಬೇಕಾದುದನ್ನು ಕೇಳು, ಕೊಡುವೆನೆಂದು ಮನಸ್ಸಿಗೆ ಬಂದ ಹಾಗೆ ಹರಟುತ್ತಿರುವ ನಿನ್ನ ವಾಕ್ಪಾಟವವನ್ನು ನಿಲ್ಲಿಸು. ಉಮಾರಮಣನ ಚರಣ ಸೇವಾನಿರತರಾದ ಭಕ್ತರಲ್ಲಿ ನೀನು ಈ ರೀತಿ ಮಾತನಾಡುವುದು ಉಚಿತವಲ್ಲವೆಂದು ತಿಳಿ. ಇನ್ನೂ ನೀನು ಆ ಶಂಭುವಿನ ಭಕ್ತಾಗ್ರೇಸರರ ಶಕ್ತಿಯು ಎಷ್ಟಿರುವುದೆಂಬು ದನ್ನೂ ತಿಳಿಯಲಾರದವನಾಗಿರುವೆ. (ಅಥವ ತಿಳಿಯಲಾರದೆ ಹೋದೆಯಲ್ಲಾ !) ॥೭೩॥

ಓ ಯಮಧರ್ಮನೇ ! ನೀನು ಗರ್ವದಿಂದ ಇಲ್ಲಿ ಬಂದು, ಏನೋ ಸ್ವಲ್ಪ ಭಯವನ್ನು ನನಗೆ ಉಂಟುಮಾಡಿದೆ. ಆ ಭಯವೇ ನಿನಗೆ ಮುಂದೆ ಚೆನ್ನಾಗಿ ಅಭಿ ವೃದ್ಧಿಯಾಗಿ ಕೂಡಲೆ ಭಯವನ್ನುಂಟುಮಾಡುವುದೆಂದು ತಿಳಿ. ಬೀಜಕ್ಕನುಗುಣ ವಾಗಿ ಕ್ಷೇತ್ರದಲ್ಲಿ ಪೈರು ಬರುವುದಲ್ಲದೆ, ದುಷ್ಟರಾದವರು ಖಲ್ವಗಳನ್ನು (ಕಾಡು ಧಾನ್ಯ ವಿಶೇಷಗಳನ್ನು) ಬಿತ್ತಿದರೆ ಅದೇನಾದರೂ ಬತ್ತವಾಗಿ ತೋರಲು ಸಾಧ್ಯವೇ ! ಹಾಗೆಯೇ ಶಿವಭಕ್ತರಾದ ಜನಗಳಿಗೆ ದ್ರೋಹಮಾಡಿದರೆ ನಿಜವಾಗಿಯೂ ಅವನಿಗೆ ಸುಖವು ದೊರೆಯುವುದೇ ? ಎಂದಿಗೂ ದುಃಖವೇ ಪ್ರಾಪ್ತಿಯಾಗುವುದು. ॥೭೪॥

ಸರ್ವಪ್ರಕಾರದಿಂದಲೂ ಶಂಕರನ ಭಕ್ತರ ವಿಷಯದಲ್ಲಿ ವಿನಯವನ್ನು ತೋರ್ಪಡಿಸುವುದೇ ಆದರೆ, ನಿನಗೆ ಕಾಲಾಂತಕನಾದ ಪರಮೇಶ್ವರನಿಂದ ಯಾವ ರೀತಿಯಿಂದಲೂ ಭಯವೇ ಇಲ್ಲವೆಂಬ ಸಂಗತಿಯು ನಿನ್ನ ಮನಸ್ಸಿನಲ್ಲಿ ಧೃಢವಾಗಿ

ಅಸ್ಮಾಕಂ ತು ಭಯಂ ನ ಶಂಕಿತಮಪಿ ತ್ವತ್ತಃ ಶಿವಾರಾಧನೇ
ನಿತ್ಯಂ ಸ್ಯಾಚ್ಛಿವಮೇವ ತೇನ ಸ ಭಯಂ ಸ್ವಪ್ನೇऽಪಿ ಸಂಭಾವಿತಂ ॥೭೫॥

ಅಶಾಂಭವಜನಾಲಯಂ ಪ್ರತಿ ಗತಿಸ್ತವ ಸ್ಯಾತ್ಸದಾ
ತದದ್ಭುತಭಯಪ್ರದಸ್ತ್ವಮಪಿ ತತ್ರ ತತ್ಕಷ್ಟತಃ ।
ತದೀಯಗ್ರಹಸಂಗಮೇ ತವ ನ ಭೀತಿರಪ್ಯಲ್ಪತೋ
ಯಥೇಷ್ಟಗತಿರಸ್ತು ತೇ ಶಿವಪರಾಙ್ಮುಖಾನಾಂ ಗೃಹೇ ॥೭೬॥

ಅಸ್ಮಿನ್ಪಾವನಪಾವನೇ ಯಮ ವನೇ ಸಿಂಹಾದಯಃ ಸರ್ವದಾ
ತ್ಯಕ್ತ್ವಾ ವೈರಮುದಾರಗೋಕುಲಯುತಾಸ್ತಿಷ್ಠಂತಿ ತೇ ಶಾಂಭವಾಃ ।
ತಾನ್ವಾ ಪಶ್ಯ ವಿಶಿಷ್ಯ ಶಾಂತಮನಸಾ ಶಾಂತೇನ ರೂಪೇಣ ತೇ
ದೃಷ್ಟಾಃ ಕಷ್ಟವಿನಾಶಕಾ ಅಪಿ ಭವಂತ್ಯೇವಾತಿಶಾಂತೋ ಭವ ॥೭೭॥

---

ರಲಿ. ನಮಗಂತೂ ಆ ಭಯದ ಶಂಕೆಯೇ ಇಲ್ಲ. ಹೀಗಿದ್ದರೂ ಶಿವಪೂಜಾ ಸಮಯದಲ್ಲಿ ನನಗೆ ನಿತ್ಯವೂ ನಿನ್ನ ಭಯವುಂಟಾಗಲಿ. ಇದರಿಂದ ನನಗೆ ಶಿವನಲ್ಲಿ ಇನ್ನೂ ದೃಢವಾದ ಭಕ್ತಿವಿಶ್ವಾಸಗಳಧಿಕವಾಗಿ ಮಂಗಳವೇ ಆಗುವುದು. ಯಾವ ರೀತಿಯಾದ ಭಯವೂ ನನಗೆ ಇದರಿಂದ ಕನಸಿನಲ್ಲಿ ಸಹ ಉಂಟಾಗಲಾರದು. ॥೭೫॥

ಎಲೈ ಯಮನೇ, ನೀನು ಯಾವಾಗಲೂ ಶಂಭುವಿನ ಭಕ್ತರಲ್ಲದವರ ಮನೆಯಲ್ಲಿ ಸಂಚರಿಸುತ್ತಾ, ಅವರಿಗೆ ಅತ್ಯದ್ಭುತವಾದ ಹಿಂಸೆಗಳನ್ನು ಕೊಟ್ಟು ಭಯಪಡಿಸುವೆ. ಆದುದರಿಂದ ಅವರ ಸಹವಾಸವು ನಿನಗೆ ಯಾವ ವಿಧವಾದ ಭಯಕ್ಕೂ ಕಾರಣವಾಗಲಾರದು. ಅವರಿಂದ ಸ್ವಲ್ಪವೂ ಭಯವಿಲ್ಲದೇ ಇರುವುದರಿಂದ ನೀನು ಶಿವನನ್ನು ಪೂಜಿಸದೆ ಕೇವಲ ಮೂರ್ಖರಾಗಿರುವವರ ಮನೆಯಲ್ಲಿ ನಿನ್ನ ಮನಸ್ಸು ಬಂದಂತೆ ಸಂಚಾರಮಾಡುವನಾಗು. ॥೭೬॥

ಯಮನೇ, ಪರಮಪಾವನವಾದ ಈ ಅರಣ್ಯದಲ್ಲಿ ಸಿಂಹವೇ ಮುಂತಾದ ದುಷ್ಟಮೃಗಗಳೂ ಸಹ ತಮ್ಮ ಜಾತಿವೈರವನ್ನು ಬಿಟ್ಟು ಹಸುಗಳ ಗುಂಪಿನೊಡನೆ ಸಂತೋಷದಿಂದ ಸಂಚರಿಸುತ್ತಿರುವುವು. ಇವೆಲ್ಲವೂ ಶಂಭುವಿನ ಭಕ್ತರಮಹಿಮೆಯೆಂದು ತಿಳಿ. ನೀನು ನಿನ್ನ ರೂಪವನ್ನೂ ಮತ್ತು ಮನಸ್ಸನ್ನೂ ಸಹ ಶಾಂತವಾಗಿಟ್ಟುಕೊಂಡು ಒಂದು ಬಾರಿ ಒಳ್ಳೆಯ ಮನಸ್ಸಿನಿಂದ ಅವುಗಳನ್ನು ದರ್ಶನ

ತ್ವತ್ತೋ ಭೀತಿಕಥಾಪಿ ಮೇ ನ ಭವತೀತ್ಯೇವಾವಧಾರ್ಯಾದರಾ
ದ್ಧೈರ್ಯೇಣಾತ್ರ ಶಿವಾರ್ಚನಾರ್ಥಮಧುನಾ ತಾವತ್ಪರಂ ಸ್ನೀಯತೇ ।
ಸಾಯಂ ಪೂಜಯ ಶಂಕರಂ ತವ ಕಥಂ ಭೀತಿರ್ನ ಶಂಗಾದ್ಭವೇ
ಚ್ಛಂಗಾರಾಧನಸಾಧನೇನ ಮನಸಾ ಶಂಗಂ ಪರಂ ಸಸ್ಮರ ॥೭೮॥

ಇತಿ ತದ್ವಚನಾಮೃತಂ ಸ ಕಾಲಃ
ಪರಮಾನಂದದಮಿತ್ಯಭೂತಪೂರ್ವಂ ।
ಅವಧಾರ್ಯ ಯಯೌ ನತೋಽತಿಭಕ್ತ್ಯಾ
ತಮಭೀತಂ ವಚನೈಃ ಪ್ರಸಾದ್ಯ ಭೂಯಃ ॥೭೯॥

ತತಃ ಪರಂ ವಿಷ್ಣುರವಾಪ ದೇಶಂ
ತಮೇವ ತಾವದ್ಗರುಡಧ್ವಜಸ್ಸನ್ ।

---

ಮಾಡು. ನಿನ್ನ ಸಕಲ ಕಷ್ಟಗಳೂ ತಪ್ಪದೇ ನಿವಾರಣೆಯಾಗುವುವು. ಆದ್ದರಿಂದ ಎಲೈ ಯಮಧರ್ಮರಾಜನೇ, ಮೊದಲು ನಿನ್ನ ಈ ಘೋರರೂಪವನ್ನು ಬಿಟ್ಟು ಶಾಂತನಾಗು. ॥೭೭॥

ನಿನ್ನಿಂದ ಯಾವ ವಿಧವಾದ ಭಯದ ಸಮಾಚಾರವೂ ಇನ್ನು ಮುಂದೆ ನನಗೆ ಉಂಟಾಗುವುದಿಲ್ಲವೆಂದು ತಿಳಿದು, ಈಗ ನಾನು ಧೈರ್ಯದಿಂದಲೂ ಮತ್ತು ಆದರದಿಂದಲೂ ಸಹ ಶಿವಪೂಜೆಗೋಸ್ಕರ ಕುಳಿತುಕೊಳ್ಳುವೆನು. ಎಲೈ ಯಮನೇ, ಸಾಯಂಕಾಲದಲ್ಲಿ ನೀನೂ ಈ ಶಂಕರನನ್ನಾರಾಧಿಸು. ನಿನಗೆ ಪರಮೇಶ್ವರನ ಭಯವು ಎಂದಿಗೂ ಉಂಟಾಗಲಾರದು. ಶಿವಪೂಜಾಸಾಧನಗಳಿಂದಲೂ, ಪರಿಶುದ್ಧವಾದ ಮನಸ್ಸಿನಿಂದಲೂ ಸಹ ಪರಮೇಶ್ವರನನ್ನು ಸ್ಮರಣೆಮಾಡುವನಾಗು. ॥೭೮॥

ಈ ರೀತಿ ಆ ಆಸ್ತಿಕನು ಹೇಳಿದ, ಅಮೃತೋಪಮವಾದ ವಚನಗಳನ್ನು ಲಾಲಿಸಿ, ಯಮನು ಹಿಂದೆ ಯಾವಾಗಲೂ ಕೇಳದ ಈ ನುಡಿಗಳು ಪರಮಾನಂದ ಪ್ರದವಾದವುಗಳು ಎಂಬುದಾಗಿ ನಿಶ್ಚಯಿಸಿ, ಸ್ವಲ್ಪವೂ ಹೆದರದೆ ಆ ಆಸ್ತಿಕನನ್ನು ಅನೇಕ ಮೃದುನುಡಿಗಳಿಂದ ಸಂತೈಸಿ, ಅನಂತರ ಅತಿಭಕ್ತಿಯಿಂದ ಅವನಿಗೆ ನಮಸ್ಕರಿಸಿ ಹೊರಟುಹೋದನು. ॥೭೯॥

ಯಮನು ಈ ಆಸ್ತಿಕನನ್ನು ಸಂತೈಸಿ ಹೊರಟುಹೋದ ಮೇಲೆ, ಪೀತಾಂ

ಪೀತಾಂಬರಾಲಂಕೃತಮೂರ್ತಿರಿಷ್ಟಂ
ದಾತುಂ ತದೀಯಂ ಕಮಲಾಸಮೇತಃ ॥೮೦॥

ಸ ದೂರಾತ್ತಂ ವಿಲೋಕ್ಯೈವ ಬಿಲ್ವೈರವನತಾನನಃ ।
ಲಿಂಗಾರ್ಚನಪರೋ ಜಾತಃ ಶಿವಧ್ಯಾನಪುರಸ್ಸರಂ ॥೮೧॥

ಸಾಯಂಕಾಲೀನಮೌನೇನ ಪೂಜಯಂತಂ ಮಹೇಶ್ವರಂ ।
ದೃಷ್ಟ್ವಾ ವಿಷ್ಣುರ್ದೂರತೋಽಪಿ ಶಿವಪೂಜಾರತೋಽಭವತ್ ॥೮೨॥

ವಿಷ್ಣುಃ ಶಿವಾರಾಧನಸಾಧನಾನಿ
ಸಂಪಾದ್ಯ ಲಿಂಗಾರ್ಚನಸಾದರೋಽಭೂತ್ ।
ತತಃ ಸಮಾಪ್ಯಾಶು ಶಿವಾರ್ಚನಂ ಚ
ಸ ಏವ ವಿಷ್ಣುಸ್ತಮುವಾಚ ಗತ್ವಾ ॥೮೩॥

ಆಸ್ತಿಕಾಸ್ತಿಕವರೋಽಸಿ ವರಂ ತೇ
ದಾತುಮಿಚ್ಛತಿ ಮನೋ ವೃಣು ಮೇ ತಂ ।

---

ಬರಧಾರಿಯಾದ ವಿಷ್ಣುವೂ ಸಹ ಲಕ್ಷ್ಮಿಯೊಡನೆ ಗರುಡನನ್ನೇರಿ, ಆಸ್ತಿಕನಿಗೆ ಇಷ್ಟವಾದ ವರಗಳನ್ನು ಕೊಡಲು ಅದೇ ಸ್ಥಳಕ್ಕೆ ಬಂದನು. ॥೮೦॥

ಆ ಆಸ್ತಿಕನು ಲಕ್ಷ್ಮೀಸಮೇತನಾಗಿ ಮಹಾವಿಷ್ಣುವು ಗರುಡನನ್ನೇರಿ ಬರುತ್ತಿರುವುದನ್ನು ದೂರದಿಂದಲೇ ನೋಡಿ, ತಲೆಯನ್ನು ಬಗ್ಗಿಸಿ ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಶಿವಧ್ಯಾನಪುರಸ್ಸರವಾಗಿ ಪೂಜೆಮಾಡತೊಡಗಿದನು. ॥೮೧॥

ದೇವನನ್ನು ಪೂಜೆಮಾಡುತ್ತಿರುವ ಆ ಆಸ್ತಿಕನನ್ನು ಮಹಾವಿಷ್ಣುವು ದೂರದಿಂದಲೇ ನೋಡಿ ತಾನೂ ಶಿವಪೂಜಾನಿರತನಾದನು. ॥೮೨॥

ಮಹಾವಿಷ್ಣುವು ಶಿವಪೂಜಾ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ತಾನೂ ಆದರದಿಂದ ಲಿಂಗಾರ್ಚನೆಯನ್ನು ಮಾಡುತ್ತಾ, ಜಾಗ್ರತೆಯಾಗಿ ಶಿವಪೂಜೆಯನ್ನು ಮುಗಿಸಿಕೊಂಡು, ತಾನೇ ಆ ಆಸ್ತಿಕನಿದ್ದೆಡೆಗೆ ಹೋಗಿ ಅವನನ್ನು ಕುರಿತು, ಹೀಗೆಂದನು. ॥೮೩॥

ಎಲೈ ಆಸ್ತಿಕಶಿರೋಮಣಿಯಾದ ಮಹಾತ್ಮನೇ ! ಮಹೇಶ್ವರನ ಪಾದಕಮಲ ಧ್ಯಾನದಿಂದ ನಿನ್ನ ಹೃದಯವು ಪರಿಶುದ್ಧವಾಗಿದೆ. ಪರಮಪಾವನನೂ, ವರಗ್ರಹಣ

ಕಿಂ ತವೇಪ್ಸಿತಮುಮೇಶಪದಾಬ್ಜ
ಧ್ಯಾನಪೂತಹೃದಯೋಽಸಿ ವರಾರ್ಹ ॥೮೪॥

ವೇದೈರ್ವದಾನ್ಯೋತ್ತಮಮೀಶಮೇಕಂ
ಮತ್ವಾ ಮಹಾದೇವಮುಪಾಶ್ರಿತೋಽಹಂ।
ಸ ಏವ ಮೇ ಸರ್ವವರಪ್ರದಾತಾ
ದಾತಾ ವರಾಣಾಂ ವರದೋತ್ತಮಶ್ಚ ॥೮೫॥

ಯಂ ಯಂ ವಾಂಛತಿ ಶಾಂಭವಃ ಪ್ರತಿದಿನಂ ತಂ ತಂ ಪ್ರಯಚ್ಛತ್ಯುಮಾ
ಕಾಂತಃ ಸಂತತಮಂತಕಾಂತಕ ಇತಿ ಖ್ಯಾತೋ ಯ ಏವ ಶ್ರುತೌ।
ತಸ್ಮಿನ್ಮೇ ವರದೋತ್ತಮೇ ಸತಿ ಮನೋ ದೈನ್ಯಂ ನ ಜಾನಾತ್ಯತಃ
ಕಿಂ ವಾ ದುರ್ಲಭಮಸ್ತಿ ಶಂಕರಪದಧ್ಯಾನೇನ ತನ್ಮೇ ಮನಃ ॥೮೬॥

---

ಯೋಗ್ಯನೂ ಆದ ನಿನಗೆ ವರವನ್ನು ಕೊಡಬೇಕೆಂದು ನಾನು ಅಪೇಕ್ಷಿಸುತ್ತೇನೆ. ನಿನಗೆ ಬೇಕಾದ ವರವನ್ನು ಬೇಡು, ಕೊಡುವೆನೆಂದು, ಮಹಾವಿಷ್ಣುವು ಆ ಶಿವಭಕ್ತನಾದ ಆಸ್ತಿಕನಿಗೆ ಹೇಳಿದನು. ॥೮೪॥

ಆ ವಿಷ್ಣುವಿನ ಮಾತನ್ನು ಕೇಳಿ ಆಸ್ತಿಕನು ಹೀಗೆಂದನು. "ಮಹೇಶ್ವರನೊಬ್ಬನೇ ದಾನಕೊಡುವುದರಲ್ಲಿ ಅತಿಸಮರ್ಥನೆಂದು ವೇದಗಳಲ್ಲಿ ಹೇಳಿರುವದನ್ನು ತಿಳಿದು, ಆ ಸರ್ವೇಶ್ವರನಾದ ಮಹಾದೇವನನ್ನೇ ಸಕಲ ಇಷ್ಟಾರ್ಥಗಳಿಗಾಗಿ ಆಶ್ರಯಿಸಿರುವೆನು. ನನಗೆ ವರಗಳನ್ನು ಕೊಡುವ ಸ್ವಾಮಿಯು ಅವನೊಬ್ಬನೇ. ಅಲ್ಲದೆ ವರದಾನಮಾಡುವುದರಲ್ಲಿ ಆ ಮಹಾದೇವನೇ ಸರ್ವೋತ್ತಮನೆನಿಸಿರುವನು. ॥೮೫॥

ಉಮಾರಮಣನೆನಿಸಿ ಯಮಾಂತಕನೆಂದು ಪ್ರಸಿದ್ಧಿಹೊಂದಿ ವೇದದಲ್ಲಿಯೂ ಸ್ತೋತ್ರಮಾಡಲ್ಪಡುತ್ತಿರುವ ಮಹಾದೇವನು, ತನ್ನ ಭಕ್ತರಿಗೆ ಬೇಕಾದದ್ದನ್ನೆಲ್ಲಾ ತಪ್ಪದೇ ಪ್ರತಿದಿನವೂ ಕೊಡುತ್ತಿರುವನು. ಇಂತಹ ಮಹಾಮಹಿಮನೇ ನನಗೆ ದಾತೃವಾಗಿರುವಾಗ ಮತ್ತೊಬ್ಬರಲ್ಲಿ ದೈನ್ಯದಿಂದ ವರಬೇಡಲು ಅಪೇಕ್ಷಿಸುವುದು ನ್ಯಾಯವೇ! ಅಥವಾ ಶಂಕರನ ಅಡಿದಾವರೆಗಳನ್ನು ಅನವರತವೂ ಧ್ಯಾನಮಾಡುವ ಭಕ್ತರಿಗೆ ಯಾವುದು ತಾನೇ ದುರ್ಲಭವೆನಿಸುವುದು? ಎಲ್ಲವೂ ಸುಲಭವೆಂದೇ ತೋರುವುದು. ಆದುದರಿಂದ ನನ್ನ ಮನಸ್ಸು ನಿನ್ನಿಂದ ವರಗಳನ್ನು ಬೇಡಲು ಅಪೇಕ್ಷಿಸುವುದಿಲ್ಲ. ॥೮೬॥

ಯೋ ದಾತಾ ಜಗತಾಂ ತಥಾಪಿ ಕಮಲಾಕಾಂತಾಮರಾಧೀಶ್ವರೋ
ಗೌರೀಚಾರುಪಯೋಧರಾಧರಮಹಾಹಾರಾವಲೀಲೀಲಯಾ ।
ಲೋಕಾನ್ಪಾಲಯತಿ ಸ್ವಭಾವವಿಭವಸ್ತದ್ವೈಭವಸ್ಯಾವಧಿ
ರ್ನಾಸ್ತ್ಯೇವೇತಿ ಸ ಏವ ಮೇ ವರದ ಇತ್ಯನ್ಯಂ ನ ಮನ್ಯಾಮಹೇ ॥೮೭॥

ಸ್ವಪ್ನೇ ವಾ ಗಿರಿಜಾಮನೋಹರಪದಾಂಭೋಜಾರ್ಚನಾನ್ಮೇ ಮನೋ
ನೈವಾಸೀದ್ವಿರತಂ ನ ಚಾನ್ಯಭಜನಾಸಕ್ತಂ ಪ್ರಮತ್ತಂ ಚ ನ ।
ತೇನೈವೇಪ್ಸಿತಸಿದ್ಧಿರಿತ್ಯಪಿ ಮತಿರ್ವೃದ್ಧಿಂ ಪ್ರಯಾತ್ಯೇವ ಮೇ
ದೈನ್ಯಾರಾತಿರುಮಾಪತಿಃ ಶರಣಮಿತ್ಯನ್ಯಂ ನ ಮನ್ಯಾಮಹೇ ॥೮೮॥

---

ಎಲೈ ಲಕ್ಷ್ಮೀಕಾಂತನಾದ ಮಹಾವಿಷ್ಣುವೇ! ಸಕಲ ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೂ ದಾನಿಯೆನಿಸಿ, ದೇವತೆಗಳಿಗೆಲ್ಲಾ ಒಡೆಯನೆನಿಸಿರುವ ಮಹಾದೇವನೇ ನಿನಗೂ ದಾತೃವಾಗಿರುವನು. ಮನೋಹರವಾದ ಕುಚಗಳು, ಚೆಲುವಾದ ಕೆಂದುಟಿಗಳು, ಮತ್ತು ದೊಡ್ಡ ಹಾರಗಳು ಇವುಗಳಿಂದ ರಾರಾಜಿಸುತ್ತಿರುವ ಪಾರ್ವತಿಯೊಡನೆ ಲೀಲೆಯಿಂದ ವಿಹರಿಸುತ್ತಾ, ಆ ಮಹಾದೇವನೇ ಈ ಸಕಲ ಲೋಕಗಳನ್ನೂ ರಕ್ಷಣೆಮಾಡುತ್ತಿರುವನು. ಅವನ ವೈಭವವು ಅನಂತವಾದುದು. ಅದಕ್ಕೆ ಎಲ್ಲೆಯೇ ಇಲ್ಲ. ಆ ಮಹೇಶ್ವರನೇ ನನಗೆ ವರಗಳನ್ನು ಕೊಡುವ ಪ್ರಭುವು. ಅವನನ್ನು ಬಿಟ್ಟು ಎಂದಿಗೂ ನಾನು ಬೇರೆಯವರನ್ನು ದಾನಶೀಲರೆಂದೂ ವರಪ್ರದರೆಂದೂ ಹೇಳಲಾರೆನು. ಮತ್ತು ನಂಬಲಾರೆನು. ॥೮೭॥

ಸ್ವಪ್ನದಲ್ಲಿ ಸಹ, ಗಿರಿರಾಜಕುಮಾರಿಕಾ ಮನಸ್ಸನ್ನು ಅಪಹರಿಸಿರುವ ಪರಮೇಶ್ವರನ ಸುಂದರವಾದ ಅಡಿದಾವರೆಗಳನ್ನು ಪೂಜೆಮಾಡುವುದರಲ್ಲಿ ನನ್ನ ಮನಸ್ಸು ಎಂದಿಗೂ ಹಿಮ್ಮೆಟ್ಟಿಲ್ಲ. ಅಲ್ಲದೇ ಪರಶಿವನನ್ನು ಬಿಟ್ಟು ಮತ್ತಾವ ದೇವತಾಪೂಜೆಯಲ್ಲಿಯೂ ಪ್ರವೃತ್ತವಾಗಿಲ್ಲ. ಒಂದು ವೇಳೆ ಹುಚ್ಚು ಹಿಡಿದಿದೆಯೆಂದು ಹೇಳುವ ಹಾಗೂ ಇಲ್ಲ. ಆ ಸ್ವಾಮಿಯ ಪಾದಪೂಜೆಯಿಂದಲೇ ಸಕಲ ಇಷ್ಟಾರ್ಥಗಳೂ, ಅಭಿವೃದ್ಧಿಹೊಂದುವುವೆಂದು ನಾನು ತಿಳಿದಿರುವೆನು. ದೈನ್ಯವನ್ನು ಶತ್ರುವಿನಂತೆ ಹೋಗಲಾಡಿಸುವುದರಲ್ಲಿ ಸಮರ್ಥನಾದ ಉಮಾರಮಣನಾದ ಪರಮೇಶ್ವರನೇ ನಮಗೆ ಶರಣನು. ಬೇರೆ ಯಾರನ್ನೂ ನಾನು ಪೂಜಿಸುವುದಿಲ್ಲ ಮತ್ತು ಬೇಡುವುದೂ ಇಲ್ಲ. ॥೮೮॥

ಯದ್ದ್ವಾರಿಕದಂಡಮಂಡಲಕಶಾಘಾತಾಭಿಭೂತೋ ಭವಾನ್
ಆದಾವೇವ ಚತುರ್ಮುಖೋಽಪಿ ಸ ಶಚೀನಾಥೋಽಪಿ ತಂ ಕೇವಲಂ ।
ಯಾಚೇ ಯಾಚಕಕಲ್ಪಭೂರುಹಮುಹಂ ಮೋಹಂ ವಿಹಾಯಾಧುನಾ
ಮೋಹಧ್ವಾಂತವಿನಾಶಕೇ ಸತಿ ಶಿವೇತ್ಯನ್ಯಂ ನ ಮನ್ಯಾಮಹೇ ॥೮೯॥

ಅಸ್ಮಾಕಂ ಗಿರಿಜಾಮನೋಹರಹರಾಪಾರಾದರಾತ್ಯಾದರೈಃ
ಸ್ವಾಂತೇ ಶಾಂತತಮೇ ನಿರಂತರಮುಮಾಕಾಂತಾನುರಕ್ತೇ ಸತಿ ।
ಅನ್ಯಸ್ಮಾತ್ಕಿಮಪೇಕ್ಷಿತಂ ಕಿಮಪಿ ವಾ ನ್ಯೂನಂ ಜಗನ್ಮಂಡಲೇ
ಪೀಯೂಷಾಂಶುಕಲಾವತಂಸಭಜನಾದನ್ಯಂ ನ ಮನ್ಯಾಮಹೇ ॥೯೦॥

ಮೃತ್ವಾ ಜನ್ಮಜರಾಭಿಘಾತನಿಹತಾಃ ಶರ್ವಾನ್ಯಸಂಸೇವನಾ
ಚ್ಛಾಂತಂ ಮೇ ಮನ ಏವ ತಾವದಧುನಾ ತೇಭ್ಯೋ ನಿವೃತ್ತಂ ತವ ।

---

ಯಾವ ಪರಮೇಶ್ವರನ ದ್ವಾರಪಾಲಕರ ಕೈಗಳಲ್ಲಿರುವ ದಂಡಗಳಿಂದಲೂ, ಚಾವಟಿಗಳಿಂದಲೂ, ನೀನೂ, (ವಿಷ್ಣುವೂ) ಬ್ರಹ್ಮನೂ, ಮತ್ತು ಶಚೀಪತಿಯಾದ ದೇವೇಂದ್ರನೂ ಸಹ ತಡೆಯಲ್ಪಟ್ಟು, ಪರಮೇಶ್ವರನ ದರ್ಶನಕ್ಕೆ ಹಾತೊರೆಯುತ್ತಿರುವರೋ, ಅಂತಹ ಮಹಾಮಹಿಮನೂ, ಯಾಚಕವೃಂದಕ್ಕೆ ಕಲ್ಪವೃಕ್ಷದಂತಿರುವನೂ, ಆದ ಮಹಾದೇವನನ್ನು ನಾನು ನನ್ನ ಅಜ್ಞಾನವನ್ನೆಲ್ಲಾ ತೊರೆದು ಬೇಡುವೆನು. ನನ್ನ ಸಕಲ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಬೇಕಾದ ಇಷ್ಟಾರ್ಥಗಳನ್ನು ಆ ಪರಶಿವನೇ ನನಗೆ ಕೊಡುತ್ತಿರುವಾಗ ನಾನು ಆ ದೇವನನ್ನು ಬಿಟ್ಟು ಮತ್ತಾರನ್ನೂ ಎಂದಿಗೂ ಬೇಡಲಾರೆನು. ॥೮೯॥

ಗಿರಿಜಾ ಮನೋಹಾರಿಯೂ, ಗೌರೀರಮಣನೂ ಆದ ಪರಮೇಶ್ವರನ ಅತ್ಯಂತ ಆದರ, ವಿಶ್ವಾಸಗಳಿಂದ ನನ್ನ ಮನಸ್ಸು ಯಾವಾಗಲೂ ಶಾಂತತೆಯನ್ನು ತಾಳಿ, ನಿರಂತರವೂ ಆ ಉಮಾರಮಣನಲ್ಲಿಯೇ ಅನುರಕ್ತವಾಗಿರುವಾಗ, ಇದಕ್ಕಿಂತಲೂ ನಾನು ಅಪೇಕ್ಷಿಸುವ ಫಲವೇನಿದೆ? ಈ ಜಗತ್ತಿನಲ್ಲಿ ನನಗೆ ಏತಕ್ಕೆ ತಾನೇ ಕಡಿಮೆಯಾಗಿರುವುದು? ಆದುದರಿಂದ ಅಮೃತ ಕಿರಣನಾದ ಚಂದ್ರನನ್ನು ತನ್ನ ಶಿರೋಭೂಷಣವನ್ನಾಗಿ ಮಾಡಿಕೊಂಡಿರುವ ಮಹಾದೇವನ ಭಜನೆಯೊಂದನ್ನು ಬಿಟ್ಟು ನನಗೆ ಬೇರೆ ಏನೂ ಬೇಡ. ॥೯೦॥

ಪರಮೇಶ್ವರನನ್ನು ಬಿಟ್ಟು ಉಳಿದ ವಿಷ್ಣ್ವಾದಿದೇವತೆಗಳನ್ನು ಸೇವಿಸಿ ಮಾನವರು ಜನನ, ಮರಣರೂಪವಾದ ಈ ಸಂಸಾರ ಚಕ್ರಕ್ಕೆ ಸಿಲುಕಿ ವಾರ್ಧಕ್ಯ

ಭೂಯಸ್ತ್ವತ್ಪದಸೇವನಂ ನ ಕುರುತೇ ತುಚ್ಛತ್ವಬುಧ್ಯಾ ಪರಂ
ತಾಂಸ್ತ್ಯಕ್ತ್ವಾ ಶಿವಪೂಜನಂ ಪರಮತೋಽಪ್ಯನ್ಯಂ ನ ಮನ್ಯಾಮಹೇ ॥೯೧॥

ಮೃತ್ಯುರ್ಯಸ್ಯ ಜರಾಪಿ ಜನ್ಮ ಜನಿತಂ ದುಃಖಂ ನ ಯಸ್ಯಾಭವ
ತ್ತನ್ಮೃತ್ಯುಂಜಯಮೇಕಮೇವ ಶರಣಂ ಪ್ರಾಪ್ತಾಃ ಸದಾ ಸಾದರಂ ।
ತಸ್ಮಿನ್ನೇವ ವದಾನ್ಯನಾಯಕವರೇ ಗೌರೀವಿಹಾರೇ ಪರೇ
ಚಿತ್ತಂ ಕ್ರೀಡತಿ ಕೇನ ಸಿದ್ಧಿರಭಿತೋಽಪ್ಯನ್ಯಂ ನ ಮನ್ಯಾಮಹೇ ॥೯೨॥

ಯಾವದ್ಭ್ರಾಂತಿರಭೂತ್ಪರಾತಿವಿಷಮಾ ತಾವತ್ತ್ವದಾರಾಧನೇ
ಪ್ಯಾಸಕ್ತಂ ತ್ವಯಿ ಮೃತ್ಯುವಶಗೇ ಜ್ಞಾತೇ ನಿವೃತ್ತಂ ಮನಃ ।

---

ವೆಂಬ ಪಾಶದಿಂದ ಬಂಧಿತರಾಗಿ ಅನವರತವೂ ಶಾಂತಿಯಿಲ್ಲದೇ ನರಳುತ್ತಿರುವರು. ಇದನ್ನು ನೋಡಿ ನನ್ನ ಮನಸ್ಸು ಇತರ ದೇವತೆಗಳಲ್ಲಿ ಒಂದು ಉತ್ಕೃಷ್ಟವಾದ ಭಾವನೆಯನ್ನೇ ಹೊಂದದೇ ನಿಮ್ಮ ಪೂಜಾದಿಗಳಲ್ಲಿ ಪ್ರವರ್ತಿಸುತ್ತಿಲ್ಲ. ಶಿವೇತರ ರಾದ ವಿಷ್ಣ್ವಾದಿದೇವತೆಗಳನ್ನು ಪೂಜಿಸಿದರೆ ಯಾವ ರೀತಿಯಿಂದಲೂ ಶಾಶ್ವತವಾದ ಫಲವಿಲ್ಲವೆಂಬ ಭಾವನೆಯುಂಟಾಗಿ, ಅದು ತುಚ್ಛವಾದ ಮನೋಽಭಿಪ್ರಾಯವೆಂದು ನನಗೆ ತಲೆದೋರಿರುವುದರಿಂದ ನಾನು ಅತ್ಯುತ್ಕೃಷ್ಟನಾದ ಆ ಪರಶಿವನನ್ನೇ ಪೂಜಿ ಸುತ್ತಿರುವೆನು. ॥೯೧॥

ಮೃತ್ಯು, ಜರೆ, (ಮುಪ್ಪು) ಜನ್ಮ, ಮತ್ತು ದುಃಖಗಳು ಇವುಗಳಾವುದೂ ಯಾವ ಮಹೇಶ್ವರನನ್ನು ಸ್ವಲ್ಪವೂ ಪೀಡಿಸಲಾರವೋ ಅಂತಹ ಆ ಮೃತ್ಯುಂಜಯ ನೆನಿಸಿದ ಮಹಾದೇವನೊಬ್ಬನನ್ನೇ ನಾವು ಆದರದಿಂದ ಶರಣು ಹೊಂದಿರುವೆವು. ಗೌರಿಯ ವಿಹಾರದಲ್ಲಿ ತತ್ಪರನಾಗಿ ದಾನಶೀಲರಲ್ಲಿ ಶ್ರೇಷ್ಠನೆನಿಸಿದ ಆ ಮಹಾದೇವ ನಲ್ಲಿಯೇ ನನ್ನ ಮನಸ್ಸು ಯಾವಾಗಲೂ ನೆಲಸಿರುವುದು. ಸಕಲ ಇಷ್ಟಾರ್ಥಗಳನ್ನೂ ಆ ಮಹಾದೇವನೇ ನನಗೆ ಕೊಡುತ್ತಿರುವನು. ಸರ್ವಸಿದ್ಧಿಗಳೂ ಅವನ ಅನುಗ್ರಹ ದಿಂದಲೇ ಒದಗುತ್ತಿರುವುವು. ಆದ್ದರಿಂದ ಆ ಮಹಾದೇವನನ್ನು ಬಿಟ್ಟು ಮತ್ತೊಬ್ಬ ರಲ್ಲಿ ನನ್ನ ಮನಸ್ಸು ಪ್ರವರ್ತಿಸುವುದಿಲ್ಲ. ॥೯೨॥

ನನಗೆ ಮೊದಲು ಅತ್ಯಂತವಿಷಮವಾದ ಭ್ರಾಂತಿಯಿದ್ದಿತು. ಆಗ ನಿನ್ನ ಪೂಜೆಯಲ್ಲಿ ನನ್ನ ಮನಸ್ಸು ಪ್ರವೃತ್ತವಾಗಿ ಸದಾ ನಿನ್ನ ಪೂಜಾದಿಗಳಲ್ಲಿಯೇ ನೆಲೆಸಿದ್ದಿತು. ಆದರೆ ನೀನೂ ಸಹ ಜನ್ಮ, ಜರಾ ಮುಂತಾದವುಗಳಿಗೆ ಒಳಪಡುವ

ಕೋ ವಾ ಜನ್ಮಜರಾವಿಹೀನ ಇತಿ ತಚ್ಚಿತ್ತಂ ವಿಚಾರ್ಯಾಧುನಾ
ಶ್ರೀಮೃತ್ಯುಂಜಯಚಿಂತನೇ ನಿರತಮಿತ್ಯನ್ಯಂ ನ ಮನ್ಯಾಮಹೇ ॥೯೩॥

ಕೋ ವಾ ರತ್ನವಿಶೇಷರತ್ನವಿಲಸತ್ಪಾತ್ರಸ್ಥದುಗ್ಧಂ ಶಿವೇ
ದತ್ತಂ ಶರ್ಕರಯಾ ಸಮೇತಮನಘೇನಾಜ್ಯೇನ ಯುಕ್ತಂ ಪರಂ ।
ತ್ಯಕ್ತ್ವಾ ಕ್ಷಾರಜಲಂ ಪಿಬತ್ಯನುದಿನಂ ತಸ್ಮಾಚ್ಛಿವಾನ್ಯಃ ಸುರೋ
ವೋಪಾಸ್ಯೋಽಪಿ ನ ತೇನ ವಾ ಫಲಮತೋಽಪ್ಯನ್ಯಂ ನ ಮನ್ಯಾಮಹೇ॥೯೪॥

ಕೋ ವಾ ಮೇರುಶರಾಸನಂ ತ್ರಿನಯನಂ ಗೌರೀವಿಹಾರಾದರ
ವ್ಯಾಖ್ಯಾನಪ್ರವಣಂ ಪ್ರಸಾಧನಧನಂ ಕೈಲಾಸಸಿಂಹಾಸನಂ ।
ತ್ಯಕ್ತ್ವಾನ್ಯಾಮರಸೇವನಾಯ ಯತತೇ ಭೀತೋ ಯಥಾ ಭೀತಿದಂ
ಪ್ರಾಪ್ನೋತ್ಯೇವ ವಿಮೋಹಿತಃ ಪ್ರಕೃತಿತೋಽಪ್ಯನ್ಯಂ ನ ಮನ್ಯಾಮಹೇ॥೯೫॥

---

ನೆಂದು ತಿಳಿದಮೇಲೆ ಆ ನನ್ನ ಮನಸ್ಸು ನಿನ್ನ ಭಜನಾದಿಗಳಲ್ಲಿ ನಿರುತ್ಸಾಹ ಗೊಂಡಿತು. ಅನಂತರ ಈ ಪ್ರಪಂಚದಲ್ಲಿ ಜನ್ಮ, ಜರಾದಿಗಳಿಗೆ ಒಳಗಾಗದ ಪರಾತ್ಪರ ವಸ್ತುವಾವುದೆಂದು ಚೆನ್ನಾಗಿ ಪರ್ಯಾಲೋಚಿಸಿದ ಮೇಲೆ, ಸದಾ ನನ್ನ ಮನಸ್ಸು ಆ ಮೃತ್ಯುಂಜಯನೆನಿಸಿದ ಮಹಾದೇವನಲ್ಲಿ ಮಾತ್ರ ನೆಲೆಗೊಂಡು, ಅವನ ಧ್ಯಾನ, ಜಪಾದಿಗಳಲ್ಲಿಯೇ ನಿರತವಾಗಿ ಬೇರೆ ದೇವತೆಗಳ ವಿಷಯದಲ್ಲಿ ಈಗ ಪ್ರವರ್ತಿಸದಂತಾಗಿದೆ. ॥೯೩॥

ಶ್ರೇಷ್ಠವಾದ ರತ್ನಗಳಿಂದ ರಚಿತವಾದ ಒಳ್ಳೆಯ ಪಾತ್ರೆಯಲ್ಲಿ ಹಾಲನ್ನು ಇಟ್ಟು, ಅದಕ್ಕೆ ಸಕ್ಕರೆ ಮತ್ತು ಪರಿಶುದ್ಧವಾದ ತುಪ್ಪ ಇವುಗಳನ್ನು ಬೆರೆಸಿ ಆ ಹಾಲನ್ನು ಪರಮೇಶ್ವರನಿಗೆ ನಿವೇದನಮಾಡಿ ಪ್ರತಿದಿನವೂ ಆ ಹಾಲನ್ನು ಕುಡಿಯು ವುದನ್ನು ಬಿಟ್ಟು ಯಾರು ತಾನೇ ಉಪ್ಪುನೀರನ್ನು ಕುಡಿಯಲು ಅಪೇಕ್ಷಿಸುತ್ತಾನೆ ? ಆದುದರಿಂದ ಶಿವನನ್ನು ಬಿಟ್ಟು ಉಳಿದ ದೇವತೆಗಳು ಪೂಜಾರ್ಹರಾದರೂ ಅವರಿಂದ ಉತ್ಕೃಷ್ಟವಾದ ಫಲವು ದೊರೆಯದೇ ಇರುವುದರಿಂದ ಬೇರೆ ಯಾರನ್ನೂ ಪೂಜಿಸದೆ, ಯಾವಾಗಲೂ ಆ ಪರಮೇಶ್ವರನನ್ನೇ ಪೂಜಿಸುತ್ತೇನೆ. ಅವನೇ ನನಗೆ ಆರಾಧ್ಯನಾದ ದೈವವು. ॥೯೪॥

ತ್ರಿಪುರಾಸುರರನ್ನು ನಾಶಮಾಡುವ ಕಾಲದಲ್ಲಿ ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡು ಅವರನ್ನು ಧ್ವಂಸಮಾಡಿದವನೂ, ಮುಕ್ಕಣ್ಣನೂ,

ಕಃ ಪ್ರಾಪ್ಯಾಪಿ ಸುಧಾಬ್ಧಿತೀರಮಸಕೃದ್ಧೀರಃ ಪಿಪಾಸಾತುರಃ
ತತ್ಕ್ಷೀರಂ ಪರಿಹಾಯ ದುರ್ಮತಿಯುತಃ ಕ್ಷಾರಾಂಬುರಾಶಿಂ ವ್ರಜೇತ್ ।
ತಸ್ಮಾದ್ದೇವಶಿಖಾಮಣಿಂ ಸುರಮಣಿಂ ಶ್ರೀಶೂಲಪಾಣಿಂ ಮನ
ಸ್ತ್ಯಕ್ತ್ವಾನ್ಯಂ ನ ಭಜತ್ಯಪಿ ಸ್ವಯಮತೋಽಪ್ಯನ್ಯಂ ನ ಮನ್ಯಾಮಹೇ ॥೧೬॥

---

ಗೌರಿಯೊಡನೆ ಲೀಲಾವಿಹಾರಮಾಡುತ್ತಾ, ಬೇಕಾದ ವ್ಯಾಖ್ಯಾನಮಾಡುವುದರಲ್ಲಿ ನಿಪುಣನೂ, ಅನುಗ್ರಹಮಾಡುವುದರಲ್ಲಿ ಸಮರ್ಥನೂ, ಅನುಗ್ರಹವೆಂಬ ಧನವುಳ್ಳವನೂ, ಮತ್ತು ಕೈಲಾಸಪರ್ವತವನ್ನೇ ತನ್ನ ಸಿಂಹಾಸನವನ್ನಾಗಿ ಮಾಡಿಕೊಂಡಿರುವವನೂ ಆದ ಮಹಾದೇವನನ್ನು ಬಿಟ್ಟು ಇತರ ದೇವತೆಗಳನ್ನು ಸೇವಿಸುವ ಮಾನವನು, ಮೊದಲೇ ಹೆದರಿರುವವನು ಮತ್ತೊಂದು ಭಯಜನಕವಸ್ತುವನ್ನೇ ತನ್ನ ಅಜ್ಞಾನದಿಂದ ಪಡೆಯುವ ಮಾನವನಿಗೆ ಸಮಾನನೆನಿಸುವನು. (ಅಂದರೆ ತನಗುಂಟಾಗಿರುವ ಭಯವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಈ ಭಯವನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳವನನ್ನಾಶ್ರಯಿಸಿದರೆ ತನ್ನ ಭಯವು ತೊಲಗಿ ಶಾಂತವಾಗುವುದು. ಹಾಗೆ ಮಾಡದೆ ಯಾವನನ್ನು ಆಶ್ರಯಿಸುವನೋ ಅವನಿಂದ ಪ್ರಕೃತ ತನಗುಂಟಾಗಿರುವ ಭೀತಿಯು ಹೋಗದಿರುವುದಲ್ಲದೆ ಬೇರೆ ಇತರ ಭಯಗಳೂ ಅವನಿಂದ ಉಂಟಾದರೆ ತುಂಬಾ ತೊಂದರೆಯೇ ಉಂಟಾಗುವುದು.) ಹಾಗೆಯೇ ಸ್ವಭಾವಶುದ್ಧವಾಗಿ ಭಯರಹಿತನಾದ ಮೃತ್ಯುಂಜಯನನ್ನು ಪೂಜಿಸದೆ ಬೇರೆ ದೇವತೆಗಳನ್ನು ಆಶ್ರಯಿಸಿದರೆ, ಭಯವು ಅಧಿಕವಾಗುವುದೇ ವಿನಾ ಸುಖ ಲೇಶವೂ ದೊರೆಯಲಾರದು. ಆದುದರಿಂದ ನನ್ನ ಮನಸ್ಸು ಆ ಪರಮೇಶ್ವರನಲ್ಲಿಯೇ ಲೀನವಾಗಿರಲಿ. ॥೧೫॥

ಪಾನಮಾಡುವ ಅಪೇಕ್ಷೆಯುಳ್ಳ ಧೀರನಾದ ಮಾನವನು ಅನೇಕವೇಳೆ ಕ್ಷೀರಸಮುದ್ರದ ಸಮೀಪಕ್ಕೆ ಹೋದರೂ ಆ ಸಮುದ್ರದ ಹಾಲನ್ನು ಕುಡಿಯದೆ, ಸ್ವೇಚ್ಛೆಯಿಂದ ಬುದ್ಧಿಯಿಲ್ಲದೆ ಅಲ್ಲಿಂದ ಹೊರಟು ಉಪ್ಪುನೀರಿನ ಸಮುದ್ರವನ್ನು ಹೊಕ್ಕು ಆ ನೀರನ್ನು ಪಾನಮಾಡುವನೇನೂ ? ಎಂದಿಗೂ ಇಲ್ಲ. ಆದುದರಿಂದ ದೇವತಾಗ್ರೇಸರನೂ, ತ್ರಿಶೂಲಪಾಣಿಯೂ ಮತ್ತು ಸಕಲ ದೇವತೆಗಳಲ್ಲಿಯೂ ಶ್ರೇಷ್ಠನೂ ಆದ ಆ ಮಹಾದೇವನನ್ನು ಬಿಟ್ಟು ನನ್ನ ಮನಸ್ಸು ಮತ್ತೊಬ್ಬರಲ್ಲಿ ಪ್ರವರ್ತಿಸುವುದಿಲ್ಲ. ನಾನೂ ಆ ಶಿವೇತರವಾದ ಯಾವ ದೇವತೆಗಳನ್ನೂ ಪೂಜಿಸುವುದಿಲ್ಲ. ॥೧೬॥

ಕಿಂ ಕಷ್ಟಾನ್ಯಪಿ ವಿಸ್ಮೃತಾನಿ ಭವತಾ ವಿಶ್ವೇಶ್ವರಾರಾಧನ
ತ್ಯಾಗಾತ್ಸಾಯುಮಿಯಂ ಗತೈವ ಕಮಲಾ ಸಿಂಧುಂ ತತಃ ಪೀಡಯಾ ।
ತನ್ನಿರ್ಮಂಥನಕಾಲಕೂಟಕಲಿತಜ್ವಾಲಾಕುಲಃ ಕೃಷ್ಣತಾಂ
ಪ್ರಾಪ್ತೋಽಸಿ ಸ್ಮರ ತತ್ಪರಂ ಸ್ಮೃತಮತೋಽಪ್ಯನ್ಯಂ ನ ಮನ್ಯಾಮಹೇ ॥೯೭॥

ತ್ವಂ ಘೋರೇ ವಿಪಿನೇ ವರಾಹವಪುಷಾ ಲಕ್ಷ್ಮೀವಿಹೀನಸ್ತದಾ
ತದ್ವನ್ಯಾಶನಜೀವನಃ ಶಿವಪದಾಂಭೋಜಾರ್ಚನಾನಾದರಾತ್ ।
ತತ್ಕಿಂ ವಿಸ್ಮೃತಮೇವ ತತ್ಸ್ಮರ ಪುನಸ್ತೇನಾಪಿ ಲಜ್ಜಾ ನ ಕಿಂ
ತೇ ತಾವದ್ಭವ ತೇನ ತಾವದಧುನಾ ತ್ವನ್ಯಂ ನ ಮನ್ಯಾಮಹೇ ॥೯೮॥

---

ಎಲೈ ವಿಷ್ಣುವೇ, ಪ್ರದೋಷಕಾಲಗಳಲ್ಲಿ ಲೋಕೇಶ್ವರನಾದ ಮಹಾದೇವನನ್ನು ಪೂಜಿಸದೆ ಹಿಂದೆ ನೀನು ಅನುಭವಿಸಿದ ಕಷ್ಟಗಳನ್ನೆಲ್ಲಾ ಮರೆತುಬಿಟ್ಟೆಯಾ! ನಿನ್ನ ಪತ್ನಿಯಾದ ಲಕ್ಷ್ಮಿಯು ಸಮುದ್ರವನ್ನು ಪ್ರವೇಶಿಸಿಬಿಟ್ಟಳು. ಅವಳನ್ನು ಹೊಂದುವುದಕ್ಕೋಸ್ಕರ ಅತಿಶ್ರಮದಿಂದ ಆ ಕ್ಷೀರಸಮುದ್ರವನ್ನೇ ಕಡೆಯುತ್ತಿರುವಾಗ ಘೋರವಾದ ಕಾಲಕೂಟವಿಷವು ಹುಟ್ಟಿತು. ಅದರ ಜ್ವಾಲೆಯಿಂದ ಮನೋಹರವಾಗಿದ್ದ ನಿನ್ನ ದೇಹಕಾಂತಿಯು ಕಪ್ಪಾಗಿ, ನಿನಗೆ ಕೃಷ್ಣನೆಂದೇ ಹೆಸರಾಯಿತು. ಈ ರೀತಿಯಾದ ತೊಂದರೆಗಳಿಗೊಳಗಾದರೂ ಪುನಃ ನೀನು ಆ ಮಹಾದೇವನನ್ನು ಮರೆತಿರುವಂತೆ ತೋರುವುದು. ಆದುದರಿಂದ ಎಲೈ ವಿಷ್ಣುವೇ, ಆ ಸರ್ವಶ್ರೇಷ್ಠನಾದ ಮಹೇಶ್ವರನನ್ನು ಸ್ಮರಣೆಮಾಡು. ನಾನೂ ಆ ಮಹಾಮಹಿಮನನ್ನು ಬಿಟ್ಟು ಬೇರೆ ಯಾರನ್ನೂ ಮನಸ್ಸಿನಲ್ಲಿ ಭಾವಿಸಲಾರೆನು. ॥೯೭॥

ಅಯ್ಯ ನಾರಾಯಣನೇ, ಶಿವನ ಅಡಿದಾವರೆಗಳನ್ನು ಪೂಜಿಸದೇ ಅನಾದರಮಾಡಿದುದರಿಂದ ಹಿಂದೆ ನೀನು ಭಯಂಕರವಾದ ಕಾಡಿನಲ್ಲಿ ಹಂದಿಯ ರೂಪವನ್ನು ಧರಿಸಿ ಲಕ್ಷ್ಮಿಯನ್ನಗಲಿ, ಕೇವಲ ಕಾಡಿನ ಗೆಡ್ಡೆ ಮುಂತಾದವುಗಳನ್ನು ಭಕ್ಷಿಸುತ್ತಿದ್ದುದನ್ನಾಗಲೇ ಮರೆತೆಯಾ! ಹಿಂದೆ ಇಂತಹ ವಿಪತ್ತುಗಳಿಗೊಳಗಾಗಿ, ಈಗಲಾದರೂ ಆ ಶಿವಭಜನೆಯನ್ನು ಮಾಡದೇ ಇರುವುದರಿಂದ ನಿನಗೆ ನಾಚಿಕೆಯಾಗುವುದಿಲ್ಲವೇ! ಆದುದರಿಂದ ಆ ಮಹಾದೇವನನ್ನು ಸ್ಮರಣೆಮಾಡಿಕೋ. ಎಲೈ ಮಹಾವಿಷ್ಣುವೇ, ನಾನೂ ಸಹ ಈ ಕಾರಣದಿಂದಲೇ ಆ ಪರಶಿವನನ್ನು ಬಿಟ್ಟು ಮತ್ತಾರನ್ನೂ ಭಜಿಸಲಾರೆನು. ॥೯೮॥

ಸ್ವತ್ವಂ ವಸ್ತುಷು ಭೂತಲೇಽಪಿ ವಿದಿತಂ ವಿಶ್ವೇಶ್ವರಸ್ಯೇತ್ಯತಃ
ಸರ್ವಂ ತಸ್ಯ ಸ ಏವ ತಾವದಸಕೃದ್ದಾತಾ ವದಾನ್ಯೋತ್ತಮಃ ।
ತಸ್ಮಾದೇವ ಸಮಸ್ತವಸ್ತುನಿಚಯಃ ಪ್ರಾಪ್ತಸ್ತದನ್ಯಸ್ಯ ಕಿಂ
ಸ್ವತ್ವಂ ವಸ್ತುಷು ಕೇಷ್ವಪೀತ್ಯಪಿ ಮಿತೇರನ್ಯಂ ನ ಮನ್ಯಾಮಹೇ ॥೯೯॥

ವಾಂಛಾ ಯತ್ರ ನ ಸರ್ವಥಾ ನ ವಿದಿತಂ ನಾಪಿ ಶ್ರುತಂ ಸರ್ವಥಾ
ತದ್ದಾತುಂ ಶಿವಪೂಜಕಾಯ ಯತತೇ ಮೃತ್ಯುಂಜಯಸ್ಸರ್ವಥಾ ।
ತಂ ದೇವೋತ್ತಮಮಪ್ರಯಾಸಫಲದಂ ತ್ಯಕ್ತ್ವಾ ತದನ್ಯಂ ಮನೋ
ಗಂತುಂ ವಾಂಛತಿ ತುಚ್ಛಮಿತ್ಯಪಿ ಕದಾಪ್ಯನ್ಯಂ ನ ಮನ್ಯಾಮಹೇ ॥೧೦೦॥

---

ಪ್ರಪಂಚದಲ್ಲಿರುವ ಸಕಲ ವಸ್ತುಗಳ ಸ್ವಾಮಿಯೂ ಆ ಜಗದೀಶ್ವರನೇ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅವುಗಳನ್ನು ದಾನಮಾಡುವ ಅಧಿಕಾರವೂ, ದಾನಮಾಡುವ ಸಾಮರ್ಥ್ಯವೂ ಮಹಾದಾನಶೀಲನೆನಿಸಿದ ಆ ಮಹಾದೇವನಿಗೇ ಸಲ್ಲುವುದು. ಅನೇಕಬಾರಿ ತನ್ನ ಭಕ್ತರಿಗೆ ದಯಾಮಯನಾದ ಪರಮೇಶ್ವರನು ಈ ಪದಾರ್ಥಗಳನ್ನು ಕೊಡುತ್ತಿರುವನು. ಆ ಮಹಾಮಹಿಮನ ಅನುಗ್ರಹದಿಂದಲೇ ಸಕಲ ವಸ್ತುಗಳೂ ದೊರೆಯುತ್ತಿರುವಾಗ, ಮತ್ತೊಬ್ಬರಿಗೆ ಆ ಪದಾರ್ಥಗಳಲ್ಲಿ ಯಾವ ಅಧಿಕಾರವೂ ಇಲ್ಲ. ಕೇವಲ ಸಾಮಾನ್ಯಪದಾರ್ಥಗಳ ಸ್ವಾಮಿತ್ವವೇ ಅವರಿಗಿಲ್ಲದಿರುವಾಗ ವಿಶೇಷವಾದ ವರಗಳನ್ನು ಕೊಡುವ ಯೋಗ್ಯತೆಯು ಉಂಟಾಗುವುದು ತಾನೇ ಹೇಗೆ? ಆದ್ದರಿಂದ ನಾನು ಆ ಮಹಾದೇವನನ್ನು ಬಿಟ್ಟು ಬೇರೆ ಯಾರನ್ನೂ ಸೇವಿಸಲಾರೆನು. ॥೯೯॥

ತನ್ನ ಭಕ್ತನಿಗೆ ಸರ್ವಥಾ ಯಾವ ಪದಾರ್ಥಗಳಲ್ಲಿ ಅಪೇಕ್ಷೆಯಿದೆ, ಇಲ್ಲ, ಎಂಬುದನ್ನು ತಿಳಿದು, ತನ್ನ ಭಕ್ತನು ತನ್ನನ್ನು ಏನನ್ನು ಪ್ರಾರ್ಥಿಸಲಿ! ಅಥವಾ ತನಗೆ ತಿಳಿಯಲಿ! ಅಂತಹ ಪದಾರ್ಥವನ್ನೇ ಮೃತ್ಯುಂಜಯನೆನಿಸಿದ ಮಹೇಶ್ವರನು ಅವನಿಗೆ ಕೊಡಲು ಪ್ರಯತ್ನಮಾಡುವನು. ಅವನು ತನ್ನನ್ನು ಕೇಳಲಿ, ಮತ್ತು ಪ್ರಾರ್ಥಿಸಲಿ, ಅನಂತರ ಕೊಡೋಣವೆಂದು ಎಂದಿಗೂ ನಿರೀಕ್ಷಿಸುವುದೇ ಇಲ್ಲ. ಮಹೇಶ್ವರನು ತನ್ನ ಭಕ್ತರಿಗೆ ಬೇಡವಾದ ಪದಾರ್ಥಗಳನ್ನು ಎಂದಿಗೂ ಕೊಡಲಾರನು. ಆದುದರಿಂದ ಯಾವವಿಧವಾದ ಆಯಾಸವೂ ಇಲ್ಲದೇ ಸಕಲ ಇಷ್ಟಾರ್ಥಗಳನ್ನೂ ಕೊಡಲು ಬದ್ಧಕಂಕಣನಾಗಿ ನಿಂತಿರುವ ಆ ದೇವತಾಸಾರ್ವಭೌಮನಾದ

ಮಾತೇವಾಶು ಶರೀರಪೋಷಣರತೋ ಲಿಂಗಾರ್ಚಕಾನಾಂ ಸದಾ
ವಿಶ್ವೇಶಃ ಸ ಪಿತಾ ಪಿತೇವ ವಿಹಿತೇ ಭಕ್ತಂ ನಿಯುಂಕ್ತೇ ಪುನಃ ।
ಸ್ನೇಹಾಂಭೋನಿಧಿಮಾಲಯಾ ಪರಿವೃತಂ ಭಕ್ತಂ ಕರೋತ್ಯೇವ ತಂ
ತ್ಯಕ್ತ್ವಾ ತಾವದುಮಾಸಹಾಯಮಧುನಾ ತ್ವನ್ಯಂ ನ ಮನ್ಯಾಮಹೇ ॥೧೦೧॥

ಅಸ್ಮತ್ಪೂರ್ವಜಪೂರ್ವಜಾರ್ಜಿತಮಹಾಪುಣ್ಯಾಂಬುರಾಶೇಃ ಫಲಂ
ಸಂವೃತ್ತಂ ಫಲಮಿತ್ಯವೈಮಿ ಬಹುಧಾ ಯಸ್ಮಾದುಮಾವಲ್ಲಭಃ ।
ಅಸ್ಮಾಕಂ ಕುಲದೈವತಂ ಪರಹಿತಂ ಕರ್ತುಂ ಸಮರ್ಥಃ ಸದಾ
ತಸ್ಮಾದೇವ ಹಿತಾರ್ಥಲಾಭಕಲನಾದನ್ಯಂ ನ ಮನ್ಯಾಮಹೇ ॥೧೦೨॥

---

ಪರಶಿವನನ್ನು ಬಿಟ್ಟು ನನ್ನ ಮನಸ್ಸು, ತುಚ್ಛವಾದ ಇತರ ದೇವತೆಗಳ ವಿಷಯದಲ್ಲಿ ಎಂದಿಗೂ ಪ್ರವರ್ತಿಸಲಾರದು. ॥೧೦೦॥

ಜಗದೀಶ್ವರನಾದ ಮಹಾದೇವನು, ತನ್ನ ಲಿಂಗವನ್ನು ಪೂಜೆಮಾಡುವ ಭಕ್ತರನ್ನು ತಾಯಿಯಂತೆ, ಆಯಾಯಾ ಕಾಲದಲ್ಲಿ ಬೇಕಾದ ಶರೀರಪೋಷಣೆಗಳನ್ನು ಮಾಡುತ್ತಾ ಕಾಪಾಡುತ್ತಾನೆ. ನನ್ನ ತಂದೆಯಾದ ಆ ಮಹೇಶ್ವರನು, ನಿಜವಾದ ತಂದೆಯಂತೆಯೇ ತನ್ನ ಭಕ್ತರನ್ನು ಸರಿಯಾದ ಮಾರ್ಗದಲ್ಲಿ ಹೋಗುವಂತೆ ನಿಯಮಿಸುತ್ತಾನೆ. ಅಲ್ಲದೇ ತನ್ನ ಅಪಾರವಾದ ಸ್ನೇಹವೆಂಬ ಸಮುದ್ರವನ್ನೇ ಮಾಲಾರೂಪವಾಗಿ ತನ್ನ ಭಕ್ತನಿಗೆ ಹಾಕಿ ಆನಂದಪಡಿಸುತ್ತಾನೆ. ತನ್ನ ಅತಿಶಯ ವಾದ ಸ್ನೇಹವಿಶ್ವಾಸಗಳಿಂದ ಹೆತ್ತ ತಂದೆ, ತಾಯಿಗಳಿಗಿಂತಲೂ ಹೆಚ್ಚಾಗಿ ನನ್ನನ್ನು ಸಲಹುತ್ತಿರುವ ಆ ಉಮಾರಮಣನನ್ನು ಬಿಟ್ಟು ನನ್ನ ಮನಸ್ಸು ಎಂದಿಗೂ ಈಗ ಬೇರೆಯವರಲ್ಲಿ ಸಂಬಂಧಿಸುವುದಿಲ್ಲ. ॥೧೦೧॥

ಹಿಂದೆ, ನಮ್ಮ ವಂಶದಲ್ಲಿ ಜನಿಸಿ ಕೀರ್ತಿಶೇಷರಾದ ನಮ್ಮ ಪೂರ್ವೀಕರು ಸಂಪಾದಿಸಿದ ಮಹಾಪುಣ್ಯಗಳೆಂಬ ಸಮುದ್ರದ ಫಲವೇ ಈ ಜನ್ಮದಲ್ಲಿ ನಮಗೆ ಆ ಗಿರಿಜಾರಮಣನು ಕುಲದೇವತೆಯಾಗಲು ಕಾರಣವೆಂದು ತಿಳಿಯುವೆನು. ಮತ್ತೊಬ್ಬರಿಗೆ ಹಿತವನ್ನುಂಟುಮಾಡುವುದರಲ್ಲಿ ಸಮರ್ಥನಾದ ಈ ಪರಮೇಶ್ವರನೇ, ನನಗೆ ಸಕಲ ಹಿತಗಳನ್ನೂ ಉಂಟುಮಾಡುತ್ತಿರುವುದರಿಂದ ಬೇರೆಯರನ್ನು ನಾನು ಎಂದೂ ಧ್ಯಾನಿಸುವುದಿಲ್ಲ. ॥೧೦೨॥

ಧನ್ಯಾನಾಂ ಶಿವ ಏವ ದೈವತಮಿತಿ ಜ್ಞಾತಂ ಶಿವಪ್ರಾರ್ಥನಂ
ಧನ್ಯಾ ಏವ ಪರಂ ವಿಹಾಯ ಸಕಲಂ ಸಂಸಾರರೂಪಂ ಮಲಂ ।
ನಿತ್ಯಂ ನಿರ್ಮಲಚೇತಸಾಪ್ಯವಿಕಲಂ ಕುರ್ವಂತ್ಯುದಾರಾಃ ಪರಂ
ಹಾರಾ ಏವ ಹರಾತ್ಪರಾತ್ಪರತರಂ ತ್ವನ್ಯಂ ನ ಮನ್ಯಾಮಹೇ ॥೧೦೩॥

ಸಂಪ್ರಾಪ್ಯಾಪಿ ಶಿವಾರ್ಚನೇನ ಸಕಲಂ ಸರ್ವಂ ಶಿವಾರಾಧನೋ
ಪಾಯಂ ಪ್ರಾಪ್ತ ಇತಿ ಪ್ರಭೂತವಿಭವಾಃ ಕುರ್ವಂತಿ ಶಂಗಾರ್ಚನಂ ।
ತಸ್ಮಾದಪ್ಯಮಿತಂ ಫಲಂ ಪುನರುಮಾಕಾಂತಾದವಾಪ್ಯಂ ತತಃ
ಶಾಂತಾ ಏವ ಶಿವಂ ಪ್ರಯಾಂತಿ ತಮತೋಽಪ್ಯನ್ಯಂ ನ ಮನ್ಯಾಮಹೇ ॥೧೦೪॥

ಯದ್ಬಿಲ್ವೀದಲಮಪ್ಯುಮಾಪತಿರತಿಪ್ರೀತ್ಯಾ ಗೃಹೀತ್ವಾ ನವಂ
ಛಿನ್ನಂ ವಾ ತ್ರುಟಿತಂ ಚ ನೀರಸಮಪಿ ಶ್ರೇಯಸ್ಕರಂ ಕೇವಲಂ ।

---

ಧನ್ಯರೆನಿಸಿದ ಮಾನವರಿಗೆಲ್ಲಾ ಶಿವನೇ ಪರದೇವತೆಯೆಂದು ತಿಳಿದಿರುವುದು. ಆದುದರಿಂದ ಅವರೆಲ್ಲರೂ ಈ ಸಂಸಾರರೂಪವಾದ ಅಂಧಕಾರವನ್ನು ಬಿಟ್ಟು ನಿತ್ಯವೂ ಉದಾರವಾದ ಮನೋಭಾವನೆಯಿಂದ ಸರ್ವಶ್ರೇಷ್ಠನಾದ ಪರಶಿವನನ್ನು ಪ್ರಾರ್ಥಿಸುತ್ತಾ ನಿಶ್ಚಿಂತೆಯಿಂದ ಪೂಜಿಸುವರು. ಶಿವನ ಭಕ್ತರು ಆ ಪರಶಿವನಿಗಿಂತಲೂ ಪೂಜ್ಯರೆನಿಸುವರು. ಆದ್ದರಿಂದ ಆ ಪರಶಿವನನ್ನು ಬಿಟ್ಟು ಮತ್ತಾರನ್ನೂ ನಾನು ಭಜಿಸುವುದಿಲ್ಲ. ॥೧೦೩॥

ಶಿವನನ್ನು ಆರಾಧಿಸಿ ಅದರಿಂದ ಸಕಲ ಶಿವಪೂಜಾಸಾಧನಗಳನ್ನು ಪಡೆದು ಮಹಾವೈಭವಶಾಲಿಗಳಾದ ಭಕ್ತರು, ಅಷ್ಟಕ್ಕೇ ಸುಮ್ಮನಾಗದೇ ಆ ಮಹೇಶ್ವರನು ತಮಗೆ ಅನುಗ್ರಹಮಾಡಿದ ಆ ಐಶ್ವರ್ಯವನ್ನೆಲ್ಲಾ ಆ ಪರಶಿವನ ಲಿಂಗಾರ್ಚನೆ, ಪೂಜಾ, ಧ್ಯಾನ ಮುಂತಾದುವುಗಳಿಗೆ ಉಪಯೋಗಿಸುವರು. ಇದರಿಂದ ಮೊದಲಿಗಿಂತಲೂ ಅಪಾರವಾದ ಐಶ್ವರ್ಯವು ಶಿವಭಕ್ತರಿಗೆ ದೊರೆಯುವುದು. ಹೀಗೆಯೇ ಸದಾ ಶಿವಪೂಜಾದಿಗಳಲ್ಲಿಯೇ ನಿರತರಾಗಿರುವ ಮಾನವರು ಕೊನೆಗೆ ಶಾಂತವಾದ ಮನಸ್ಸುಳ್ಳವರಾಗಿ ಶಿವನಸಾಯುಜ್ಯವನ್ನು ಪಡೆಯುವರು. ಆದುದರಿಂದ ಶಿವೇತರವಾದ ದೇವತೆಗಳನ್ನು ನಾನು ಪೂಜಿಸಲಾರೆನು. ॥೧೦೪॥

ನಾವು ಪೂಜೆಮಾಡುವ ಒಂದು ಸಣ್ಣ ಹೊಸದಾದ ಬಿಲ್ವಪತ್ರೆಯ ದಳವನ್ನು ಸಹ ಉಮಾರಮಣನು ಪ್ರೀತಿಯಿಂದ ಸ್ವೀಕರಿಸಿ, ಅದು ಒಂದುವೇಳೆ ಚೂರಾಗಿರಲಿ

ಮತ್ವಾ ಸರ್ವಧನಾಧಿನಾಥವಿನತಂ ದೀನಂ ಕರೋತ್ಯಾದರಾ
ದಂತೇ ಮುಕ್ತಿಮಪಿ ಪ್ರಯಚ್ಛತಿ ತತೋಽಪ್ಯನ್ಯಂ ನ ಮನ್ಯಾಮಹೇ ॥೧೦೫॥

ಶ್ರೀಕಂಠಾದ್ರಿಗಿರಿರಾಜರಾಜತನಯಾಮೇರುಸ್ಫುರಚ್ಛೇಕರಾ
ಪಾರಶ್ರೀಪರಿಹಾರದಕ್ಷವಿಲಸದ್ವಕ್ಷೋಜವಕ್ಷಸ್ಥಲಾತ್ ।
ಇಂದ್ರಾದಿಪ್ರತಿಪಕ್ಷದಕ್ಷದಲನಾತ್ಫಾಲಾನಲಾಕ್ಷಾತ್ಪರಂ
ಸ್ವಪ್ನೇ ವಾ ಮರಣೇಽಪಿ ವಾ ಸ್ವಕರಣೈರನ್ಯಂ ನ ಮನ್ಯಾಮಹೇ ॥೧೦೬॥

ಇತಿ ತದ್ವಚಸಂಶ್ರುತ್ವಾ ವಿಸ್ಮಿತಃ ಕಮಲಾಪತಿಃ ।
ಧನ್ಯೋಽಸೀತಿ ತಮುಕ್ತ್ವೈವ ಪ್ರಣತಃ ಸ ಕೃತಾಂಜಲಿಃ ॥೧೦೭॥

---

ತುಂಡಾಗಿರಲಿ ಅಥವಾ ಒಣಗಿರಲಿ, ಅದನ್ನೇ ಪರಮಶ್ರೇಯಸ್ಕರವೆಂದು ತಿಳಿದು, ದೀನನಾದ ತನ್ನ ಭಕ್ತನನ್ನು ಸಕಲ ಧನಾಧಿಪತಿಗಳಿಗೂ ನಮಸ್ಕಾರಯೋಗ್ಯನಾಗುವಂತೆ ಮಾಡುವನು. ಅಲ್ಲದೇ ತನ್ನ ಭಕ್ತನನ್ನು ಪರಮಾದರದಿಂದ ಕಾಣುತ್ತಾ ಕೊನೆಗೆ ಶಾಶ್ವತವಾದ ಮೋಕ್ಷವನ್ನೇ ಕೊಟ್ಟು ಸಲಹುವನು. ಆದ್ದರಿಂದ ಎಲೈ ವಿಷ್ಣುವೇ, ನಾನು ಆ ಪರಮೇಶ್ವರನೊಬ್ಬನನ್ನು ಬಿಟ್ಟು ಮತ್ತಾರನ್ನೂ ಮನಸಾ ಭಾವಿಸುವುದಿಲ್ಲ. ॥೧೦೫॥

ಮೇರುಪರ್ವತದಂತೆ ಪ್ರಕಾಶಿಸುತ್ತಿರುವ ಉನ್ನತವಾದ ಶಿಖರಗಳ ಮತ್ತು ಅಪಾರವಾದ ಕಾಂತಿಯ, ಬೆಡಗಿನ ಅಹಂಕಾರವನ್ನು ಅಡಗಿಸುವುದರಲ್ಲಿ ಸಮರ್ಥವೆನಿಸಿ ಕಂಗೊಳಿಸುತ್ತಿರುವ ಸ್ತನಗಳು ಮತ್ತು ವಕ್ಷಸ್ಥಳ ಇವುಗಳಿಂದ ಅತ್ಯಂತ ಮನೋಹರಳಾಗಿರುವ ಗಿರಿರಾಜಕುಮಾರಿಯ ಆಲಿಂಗನದಲ್ಲಿ ತತ್ಪರನಾಗಿ, ಶ್ರೀಕಂಠನೆಂದು ಪ್ರಸಿದ್ಧಿಹೊಂದಿರುವ ಪರಮೇಶ್ವರನು, ಇಂದ್ರಾದಿದೇವತೆಗಳಿಗೆ ಸಹಾಯಕನಾಗಿದ್ದ ದಕ್ಷಬ್ರಹ್ಮನನ್ನೇ ನಿಗ್ರಹಿಸಿರುವನು. ಇಂತಹ ಮಹಾಮಹಿಮನೂ, ಸರ್ವಶ್ರೇಷ್ಠನೂ ಮತ್ತು ಫಾಲನೇತ್ರನೂ ಆದ ಮಹಾದೇವನನ್ನೇ ನಾನು ಸಕಲ ಇಂದ್ರಿಯಗಳಿಂದಲೂ ಸೇವಿಸುವೆನೇ ಹೊರತು ಮತ್ತೊಬ್ಬರನ್ನು ಎಂದಿಗೂ ಪೂಜಿಸುವುದಿಲ್ಲ. ॥೧೦೬॥

ಹೀಗೆ ಆ ಆಸ್ತಿಕನ ಶಿವಭಕ್ತಿಪೂರ್ಣವಾದ ವಚನಗಳನ್ನು ಲಾಲಿಸಿ ಲಕ್ಷ್ಮೀಕಾಂತನಾದ ವಿಷ್ಣುವು ಆಶ್ಚರ್ಯಗೊಂಡು ಆಸ್ತಿಕನನ್ನು ಕುರಿತು, "ಎಲೈ ಶಿವಭಕ್ತಶ್ರೇಷ್ಠನೇ, ನೀನೇ ಧನ್ಯನು" ಎಂದು ಹೇಳಿ, ತಾನೂ ಕೈಜೋಡಿಸಿ ಆ ಆಸ್ತಿಕನಿಗೆ

ತತಃ ಪ್ರಾಹ ಮಹಾವಿಷ್ಣುರುಪವಿಶ್ಯಾದರೈಃ ಪರಂ ।
ತಂ ವಿಲೋಕ್ಯ ಕೃಪಾಪೂರ್ಣಕಟಾಕ್ಷೈರುಪಲಕ್ಷಿತಃ ॥೧೦೮॥

॥ ವಿಷ್ಣುರುವಾಚ ॥

ಸರ್ವಾಮರಾಧೀಶ್ವರ ವಿಶ್ವನಾಥ
ಪಾದಾರವಿಂದೇ ತವ ಭಕ್ತಿರೇವಂ ।
ಅನೇಕಜನ್ಮಾರ್ಜಿತಪುಣ್ಯಸಂಘೈ
ರ್ಜಾತಾ ಪ್ರವೃದ್ಧಾದ್ಯ ಪುನಃ ಪುನಃ ಸಾ ॥೧೦೯॥

ಅಹೋ ಮಹದ್ಭಾಗ್ಯಮಭೂತ್ತವೇದಂ
ಯತಃ ಶಿವಾರಾಧನಸಕ್ತಮೇವ ।
ಮನಸ್ತದಾನಂದದಮಿತ್ಯವೈಮಿ
ತೇನೈವ ತಾವತ್ಪರಮಾಪಿ ಮುಕ್ತಿಃ ॥೧೧೦॥

---

ನಮಸ್ಕಾರಮಾಡಿದನು. ಹಾಗೆಯೇ ಅವನ ಸಮೀಪದಲ್ಲಿ ಕುಳಿತುಕೊಂಡು ಆದರ ದಿಂದಲೂ, ಕೃಪಾಪೂರಿತವಾದ ದೃಷ್ಟಿಯಿಂದಲೂ ಅವನನ್ನು ನೋಡುತ್ತಾ, ಹೀಗೆಂದನು. ॥೧೦೭-೧೦೮॥

"ಎಲೈ ಆಸ್ತಿಕನೇ, ಸರ್ವದೇವತೆಗಳಿಗೂ ಒಡೆಯನೂ ಸಕಲ ಜಗತ್ತು ಗಳಿಗೂ ಸ್ವಾಮಿಯೂ ಆದ ಮಹಾದೇವನ ಪಾದಕಮಲಗಳಲ್ಲಿ ನಿನಗೆ ಉಂಟಾ ಗಿರುವ ಈ ಭಕ್ತಿವಿಶ್ವಾಸಗಳನ್ನು ನೋಡಿದರೆ, ಧನ್ಯನಾದ ನೀನು ಅನೇಕಜನ್ಮಗಳಲ್ಲಿ ಹಿಂದೆ ಸಂಪಾದಿಸಿದ್ದ ಪುಣ್ಯಗಳ ಫಲಗಳೇ ಎಂದೂ ಅದೇ ಪುನಃ ಪುನಃ ಈ ರೀತಿ ಯಾಗಿ ಅಭಿವೃದ್ಧಿ ಹೊಂದುತ್ತಿರುವುದೆಂದೂ ತೋರುತ್ತಿರುವುದು. ॥೧೦೯॥

ಪರಮಾನಂದವನ್ನುಂಟುಮಾಡುವ ಪರಶಿವನ ಪೂಜೆಯಲ್ಲಿಯೇ ಯಾವಾ ಗಲೂ ನಿನ್ನ ಮನಸ್ಸು ತತ್ಪರವಾಗಿರುವುದರಿಂದ ಇದು ನಿನಗೆ ಆನಂದದಾಯಕವಾದ ಮಹಾಭಾಗ್ಯವೆಂದೇ ಹೇಳಬೇಕಾಗಿದೆ. ಎಲೈ ಆಸ್ತಿಕನೇ, ಈ ಶಿವಪೂಜಾಧ್ಯಾನ ಗಳಿಂದ ಕೂಡಿದ ಚಿತ್ತಸ್ಥೈರ್ಯದಿಂದಲೇ ಪರಮೋತ್ಕೃಷ್ಟವಾದ ಮುಕ್ತಿಯೂ ನಿನಗೆ ಲಭಿಸುವುದು. ॥೧೧೦॥

ನ ಕ್ವಾಪಿ ದೃಷ್ಟಾ ದೃಢಭಕ್ತಿರೇವಂ
ಮುಕ್ತಿಪ್ರಪಾಸಾಧನಮೇವ ನೂನಂ ।
ಪುಣ್ಯೇನ ಕೇನೇಯಮುಭೂತ್ತವೇಯ
ಮುಮಾಸಹಾಯಾಂಘ್ರಿಸರೋಜಮಾತ್ರೇ ॥೧೧೧॥

ಚಿತ್ತಂ ಪವಿತ್ರಂ ತವ ಗಾತ್ರಮೇತತ್ಪವಿತ್ರ
ಮೇವೇತಿ ಮತಿರ್ಮಮಾಸೀತ್ ।
ಧನ್ಯಸ್ತ್ವದನ್ಯೋ ಭುವಿ ಕೋಪಿ ಮಾನ್ಯಃ
ಸಾಮಾನ್ಯತಸ್ತ್ವಂ ಮನುಜೋ ನ ನೂನಂ ॥೧೧೨॥

ತ್ವಮೇವ ನಂದೀ ಕಿಮುತ ಪ್ರಚಂಡಃ
ತಂಡೀ ಸಭೃಂಗೀ ಕಿಮು ವೀರಭದ್ರಃ ।
ಕಿಂ ಭೈರವೋ ವಾಥ ಷಡಾನನೋ ವಾ
ಗಜಾನನೋ ವಾ ವದ ತನ್ಮಮಾದ್ಯ ॥೧೧೩॥

---

ಆಸ್ತಿಕನೇ, ಈ ರೀತಿಯಾದ ದೃಢಭಕ್ತಿಯನ್ನು ನಿನ್ನಲ್ಲಿ ಬಿಟ್ಟು ನಾನು ಮತ್ತೆಲ್ಲಿಯೂ ಕಾಣೆನು. ಇದು ಮುಕ್ತಿಯೆಂಬ ಅರವಟ್ಟಿಗೆಯನ್ನು ಹೊಂದಿ ನಿತ್ಯಾನಂದವೆಂಬ ಸುಖವನ್ನು ಅನುಭವಿಸಲು ಸಾಧನವಾಗಿರುವುದು. ಅಯ್ಯಾ ಮಹಾತ್ಮನೇ, ಉಮಾರಮಣನಾದ ಮಹಾದೇವನ ಪಾದಕಮಲಗಳಲ್ಲಿ ನಿನಗೆ ಈ ರೀತಿಯಾದ ದೃಢಭಕ್ತಿಯು ನಿನ್ನ ಯಾವುದೋ ಒಂದು ಅಪಾರವಾದ ಪುಣ್ಯವಿಶೇಷದಿಂದ ಉಂಟಾಗಿರುವುದೆಂದು ಭಾವಿಸಿರುವೆನು. ॥೧೧೧॥

ಮೊದಲು ನಿನ್ನ ಮನಸ್ಸು ಮತ್ತು ಶರೀರ ಇವೆಲ್ಲವೂ, ಪರಮಪವಿತ್ರವಾದವುಗಳು ಎಂಬ ಭಾವನೆ ಮಾತ್ರ ನನಗೆ ಇದ್ದಿತು. ಆದರೆ, ಈಗ ಈ ಭೂಮಿಯಲ್ಲಿ ನಿನಗಿಂತಲೂ ಧನ್ಯನೂ, ಪೂಜ್ಯನೂ ಆದ ಮಾನವನೇ ಇಲ್ಲವೆಂದು ನನಗೆ ತೋರುತ್ತಿರುವುದು. ಅಯ್ಯ ಆಸ್ತಿಕನೇ! ನೀನು ಸಾಮಾನ್ಯಮನುಷ್ಯನೆಂದು ನಾನೆಂದಿಗೂ ತಿಳಿಯಲಾರೆನು. ॥೧೧೨॥

ಅಯ್ಯ ಮಹಾತ್ಮನೇ! ನೀನೇನು ಪ್ರಚಂಡನಾದ ನಂದಿಕೇಶ್ವರನೋ, ತಂಡಿಯೋ, ಭೃಂಗಿಯೆನಿಸಿದವನೋ ಅಥವ ವೀರಭದ್ರನೋ! ನನಗೆ ತಿಳಿಯದು.

ಆಶಾಸ್ಯಾ ಭಕ್ತಿರೇವಂ ಸಕಲಸುರಗಣಾಧೀಶ್ವರೇ ಶಂಕರೇ ಮೇ
ನಿತ್ಯಾನಂದಪ್ರದಾನವ್ರತನಿರತಸದಾಚಾರಧೀರೇಽತಿಶೂರೇ ।
ಗೌರೀವಕ್ಷೋಜಹಾರಪ್ರತಿಭಟಚಟುಲೋದ್ದಂಡದೋರ್ದಂಡಭಾರ
ವ್ಯಾಪಾರಾಸಾರಸಾರಪ್ರಸರದುರುತರೋರಃ ಸುರಾಧೀಶ್ವರೇ ರೇ ॥೧೧೪॥

ದುಸ್ತಾರಾಪಾರಪಾಪಪ್ರವರಗಿರಿದರೀದ್ವಾರಗಾಢಾಂಧಕಾರ
ವ್ಯಾಪಾರಾಕೋಪಟೋಪಪ್ರತಿಭಟನಿಟಲಾಲೋಲಕಾಲಾನಲಶ್ರೀಃ ।
ಸ್ಮೃತ್ಯಾರೂಢಾಪಿ ಪಾಪಪ್ರದಹನಶಮನೋಪಾಯ ಏವೇತಿ ಮನ್ಯೇ
ಧನ್ಯಾಶಾಸ್ಯಾ ಕಿಮೇಷಾ ನ ಭವತಿ ಮಹತಾಂ ಸಾಪಿ ಸಂಭಾವಿತಾಪಿ ॥೧೧೫॥

---

ಒಂದುವೇಳೆ ಭೈರವ, ಷಣ್ಮುಖ, ಅಥವಾ ಗಣಪತಿ ಇವರುಗಳಲ್ಲಿ ಯಾರಾದರೂ ಒಬ್ಬನಾಗಿರಬಹುದೇ! ಯಾವುದನ್ನೂ ನನಗೂ ತಿಳಿಸುವವನಾಗು. ॥೧೧೩॥

ಎಲೈ ಆಸ್ತಿಕನೇ! ನನಗೆ ನಿನ್ನಂತೆಯೇ ಪರಮೇಶ್ವರನಲ್ಲಿ ಭಕ್ತಿಯು ಸದಾ ದೃಢವಾಗಿ ಉಂಟಾಗಲೆಂದು ಅಪೇಕ್ಷೆಯಿದೆ. ಆ ಶಂಕರನು ಸಕಲ ದೇವತಾಸಮೂಹ ಗಳಿಗೂ ತಾನೇ ಸ್ವಾಮಿಯು. ಮಹಾಶೂರನಾದ ಈ ಮಹಾದೇವನು, ಸದಾಚಾರ ಸಂಪನ್ನರಾದವರಲ್ಲಿ ಶ್ರೇಷ್ಠನು, ಮತ್ತು ತನ್ನ ಭಕ್ತರಿಗೆ ನಿತ್ಯಾನಂದವನ್ನುಂಟು ಮಾಡುವ ವ್ರತದಲ್ಲಿ ಯಾವಾಗಲೂ ನಿರತನಾಗಿರುವನು. ಗಿರಿರಾಜಕುಮಾರಿಯಾದ ಗೌರೀದೇವಿಯ ಉನ್ನತವೂ ಮನೋಹರವೂ ಆಗಿರುವ ಸ್ತನಗಳ ಅಹಂಕಾರವನ್ನು ಅಡಗಿಸುವುದರಲ್ಲಿ ಪ್ರತಿಸ್ಪರ್ಧಿಯಾಗಿ ತನ್ನ ಅಪಾರವಾದ ನೈಪುಣ್ಯ ಮತ್ತು ಬಾಹು ಬಲ ಇವುಗಳನ್ನುಪಯೋಗಿಸುತ್ತಾ ಸಾರವತ್ತಾದ ಆ ಗಿರಿಜಾದೇವಿಯ ವಕ್ಷಸ್ಥಳದಲ್ಲಿ ರುವ ಹಾರಕ್ಕೆ ತಾನೇ ಒಡೆಯನಾಗಿರುವನು. ॥೧೧೪॥

ದಾಟಲಸಾಧ್ಯವೂ, ಅಪಾರವೂ, ಆದ ಮಹಾಪಾಪಗಳು, ಬೆಟ್ಟ, ಕಣಿವೆ, ಮುಂತಾದ ಗುಹಾಪ್ರದೇಶಗಳ ದ್ವಾರಪ್ರದೇಶಗಳಲ್ಲಡಗಿರುವ ಗಾಢವಾದ ಅಂಧಕಾರ ದಂತೆ, ಮಾನವನ ಯಾವ ಅವಯವಪ್ರದೇಶಗಳಲ್ಲಿ ಹುದುಗಿದ್ದರೂ, ಮಹೇಶ್ವರನ ಫಾಲನೇತ್ರಾಗ್ನಿಗೆ ಸಿಕ್ಕಿ, ಅಪಾರವಾದ ಆ ಮಹಾದೇವನ ಕೋಪಾಟೋಪಗಳಿಗೆ ಎದುರಾಗಿ ಧ್ವಂಸವಾಗುವುವು. ಈ ಮಹಾದೇವನ ಕಾಲಾಗ್ನಿಸ್ವರೂಪವು ಸ್ಮರಣೆಗೆ ಬಂದ ಮಾತ್ರದಿಂದಲೇ ಸಕಲ ಪಾಪಗಳನ್ನೂ ದಹನಮಾಡುವ ಉಪಾಯವು ಮಾನವನಿಗೆ ದೊರೆತಂತೆಯೇ ಆಗುವುದೆಂದು ನಾನು ತಿಳಿದಿರುವೆನು. ಇಂತಹ

ಯದ್ಭಾಗ್ಯಾಸಾರಸಾರವ್ಯತಿಕರರುಚಿರಸ್ಫಾರಗೌರೀಕುಚೋರು
ವ್ಯಾಪಾರೋದಾರಹಾರಪ್ರಸರದುರುತರಾಸಾರಕಾಶ್ಮೀರಧಾರಾಂ ।
ಸ್ಮೃತ್ವಾ ಸ್ಮೃತ್ವಾನುಭೂಯೋಪ್ಯನವರತಹಿತಸ್ವಾಂತಸಂತಾನಕಾಂತಂ
ಗೌರೀಕಾಂತಂ ನಿತಾಂತಂ ಕಥಮಪಿ ಸತತಂ ಸ್ವಾಂತಮಪ್ಯಾಶ್ರಿತಂ ಮೇ
॥೧೧೬॥

ವಾರಂ ವಾರಂ ಸ್ಮರಾರೇ ತ್ರಿಪುರಹರ ಹರಾಪಾಪಸಂಸಾರಘೋರ
ವ್ಯಾಪಾರಾಸಾರಭೀರುಸ್ಫುರದುರುಖದಿರಾಂಗಾರದಾರಾಪಸಾರಂ ।
ಯಾಚೇ ಯಾಚೇ ಪುನಸ್ತ್ವಂ ಪುನರಪಿ ಚ ಪುನಸ್ತ್ವಂ ನ ಯಾಚೇ
ನ ಯಾಚೇ
ತ್ವತ್ಪಾದಾಂಭೋಜರೇಣುಪ್ರಕರಪರಿಕೃತಸ್ವಾಂತಶಾಂತದ್ವಿರೇಫಃ ॥೧೧೭॥

---

ಅವಸ್ಥೆಯು ಒದಗುವುದಾದರೆ ಅವನೇ ಧನ್ಯನೆಂದು ಹೇಳಬೇಕು. ಮಹಾತ್ಮರಿಗೆ ಈ ಸ್ಥಿತಿಯು ಅಪೇಕ್ಷೆಪಟ್ಟರೆ ಒಂದುವೇಳೆ ಬಂದರೂ ಬರಬಹುದು. ||೧೧೫||

ಮಹೇಶನ ಅಪಾರವಾದ ಭಾಗ್ಯಸಂಪತ್ತು ಮನೋಹರವೂ ವಿಶಾಲವೂ ಮತ್ತು ಉನ್ನತವೂ ಆದ ಗೌರೀದೇವಿಯ ಕುಚಮರ್ದನರೂಪವಾದ ವ್ಯಾಪಾರದಲ್ಲಿ ಉದಾರವಾಗಿ ಪ್ರವರ್ತಿಸಿರುವುದು. ಆ ದೇವಿಯ ವಕ್ಷಸ್ಥಳಕ್ಕೆ ಅಲಂಕಾರಪ್ರಾಯವಾಗಿ ತೋರುತ್ತಿರುವ ದೊಡ್ಡ ಹಾರವು ಆ ಸ್ತನಗಳಿಗೆ ಲೇಪನಮಾಡಿಕೊಂಡಿರುವ ಸಾರವತ್ತಾದ ಕಾಶ್ಮೀರದೇಶದ ಚಂದನಧಾರೆಗಳಿಂದ ಯುಕ್ತವಾಗಿರುವುದು. ಇಂತಹ ಗೌರೀಪತಿಗೆ ಆನಂದಪ್ರದವಾದ ಆ ಕಾಶ್ಮೀರಧಾರೆಗಳನ್ನು ನೆನಸಿಕೊಂಡು ನನ್ನ ಮನಸ್ಸು ಅನವರತವೂ ತನ್ನಲ್ಲಿ ತಾನೇ ಸಂತೋಷ ಹೊಂದುತ್ತಿರುವುದು. ಎಲೈ ಅಸ್ತಿಕನೇ, ಅನವರತವೂ ಈ ನನ್ನ ಅಂತರಂಗವು ವಿಶೇಷವಾಗಿ ಆ ಗೌರೀರಮಣನಾದ ಪರಶಿವನಲ್ಲಿಯೇ ಅನುರಕ್ತವಾಗಿರುವುದು. ||೧೧೬||

ಎಲೈ ಮನ್ಮಥ ಶತ್ರುವೇ, ತ್ರಿಪುರಾಸುರನಾಶಕನೇ, ಪಾಪನಿವಾರಕನಾದ ದೇವನೇ, ಅಪಾರವೂ ನಿಸ್ಸಾರವೂ ಆದ ಈ ಘೋರವಾದ ಸಂಸಾರದಲ್ಲಿ ಹೆದರಿ ತಳಮಳಿಸುತ್ತಿರುವ ಜನಗಳನ್ನು ಚೆನ್ನಾಗಿ ಪ್ರಕಾಶಿಸುತ್ತಾ, ಜನಗಳಿಂದ ಭೀತಿಯನ್ನುಂಟುಮಾಡುತ್ತಿರುವ ದೊಡ್ಡ ದೊಡ್ಡ ಕಗ್ಗಲೀಸೌದೆಯ ಕೆಂಡಗಳಂತಿರುವ ಸಂಸಾರದಿಂದ ತೆಗೆದು ಶಾಂತಿಯನ್ನುಂಟುಮಾಡು, ಕಾಪಾಡು. ಎಲೈ ಸ್ವಾಮಿಯೇ, ಪುನಃ ಪುನಃ ಆ ನಿನ್ನ ಪಾದಕಮಲಗಳನ್ನೇ ಧ್ಯಾನಮಾಡುತ್ತೇನೆ. ನಿನ್ನ ಅಡಿದಾ

ತ್ವದ್ದರ್ಶನಂ ಜಾತಮಿಹಾಧುನಾ ಮೇ
ಪ್ರದೋಷಕಾಲೇ ಹೃತಪಾಪಜಾಲೇ ।
ಶ್ರೀಕಾಲಕಾಲಾರ್ಚಕದರ್ಶನೇನ
ಸಂಪತ್ಸಮೃದ್ಧಿಶ್ಚ ಭವಿಷ್ಯತೀಹ ॥೧೧೮॥

ಅಯಂ ಪುಣ್ಯಕಾಲಃ ಶಿವಾರಾಧನಸ್ಯ
ಸ್ವಭಾವೇನ ಸರ್ವೋಽಪಿ ಕಾಲಸ್ತಥಾಪಿ ।
ವಿಶೇಷೋಽಧುನಾ ಶಂಕರಾರಾಧನೇನ
ಪ್ರಸನ್ನೋ ಭವತ್ಯೇವ ಗೌರೀಸಹಾಯಃ ॥೧೧೯॥

ಮಹಾದೇವವಿದ್ಯಾಪ್ರಭಾವೋಽಪಿ ಭಾಗ್ಯೈ
ರಪಾರೈಃ ಕಥಂಚಿನ್ಮಯಾ ಜ್ಞಾತ ಏವ ।
ತ್ವಯಾ ಸಾಕಮತ್ರಾಪಿ ಸಂಭಾಷಣೇನ
ಪ್ರಭೂತಂ ಚ ಪುಣ್ಯಂ ಮಯಾ ಲಬ್ಧಮೇವ ॥೧೨೦॥

---

ವರೆಗಳ ಸಂಬಂಧವಾದ ಧೂಳಿನ ಸಮೂಹದಿಂದ ನಿರ್ಮಿಸಲ್ಪಟ್ಟಿರುವ ಈ ನನ್ನ ಮನಸ್ಸೆಂಬ ದುಂಬಿಯು ನಿನ್ನ ಧ್ಯಾನದಿಂದ ಶಾಂತವಾಗಿ ನಿನ್ನನ್ನು ಬಿಟ್ಟು ಬೇರೆಯ ಇತರ ದೇವತೆಗಳನ್ನು ಎಂದಿಗೂ ಬೇಡುವುದಿಲ್ಲ. ॥೧೧೮॥

ಎಲೈ ಆಸ್ತಿಕನೇ, ಸಕಲ ಪಾಪಸಮೂಹಗಳನ್ನೂ ಹೊಡೆದೋಡಿಸುವ ಈ ಪ್ರದೋಷಕಾಲದಲ್ಲಿ ನಿನ್ನ ದರ್ಶನವಾಯಿತು. ಈಗಲೇ ಕಾಲಾಂತಕನೆನಿಸಿದ ಪರಮೇಶ್ವರನ ಭಕ್ತನಾದ ನಿನ್ನ ಈ ಮಂಗಳದರ್ಶನದಿಂದ ಸಕಲ ಸಂಪತ್ತುಗಳೂ ಸಮೃದ್ಧಿಯಾಗಿ ದೊರೆಯುವುವು. ॥೧೧೮॥

ಶಿವನನ್ನು ಪೂಜಿಸಲು ಎಲ್ಲಾ ಕಾಲವೂ ಶ್ರೇಷ್ಠವೇ ಆದರೂ, ಈ ಪ್ರದೋಷ ಕಾಲವು ಅದಕ್ಕಿಂತಲೂ ವಿಶೇಷವಾದುದು. ಈ ಪ್ರದೋಷಕಾಲದಲ್ಲಿ ಜಗನ್ಮಂಗಳ ಕರನಾದ ಪರಶಿವನನ್ನು ಆರಾಧಿಸಿದರೆ ಗೌರೀರಮಣನಾದ ಈ ಮಹಾದೇವನು ನಿಶ್ಚಯವಾಗಿಯೂ ಪ್ರಸನ್ನನಾಗುವನು. ॥೧೧೯॥

ಅಯ್ಯ ಆಸ್ತಿಕನೇ; ನನ್ನ ಅಪಾರವಾದ ಭಾಗ್ಯಸಂಪತ್ತಿನಿಂದ ಎಲ್ಲೋ ಸ್ವಲ್ಪ ಮಾತ್ರ ಆ ಮಹಾದೇವನ ವಿದ್ಯಾಪ್ರಭಾವವು ನನಗೆ ತಿಳಿದಿದೆ. ಇಲ್ಲಿಯ ವರೆವಿಗೂ ಪರಮಭಕ್ತನಾದ ನಿನ್ನೊಡನೆ ಸಂಭಾಷಣೆಮಾಡಿರುವುದರಿಂದ ಇನ್ನೂ ಅಪಾರವಾದ

ಮಹಾದೇವವಿದ್ಯಾವಿಶೇಷಾತ್ರಯಾಣಾಂ
ಯಮಾವಾಸವಾರ್ತಾಪಿ ದೂರೇ ತಥಾ ಹಿ ।
ತಯಾ ವಿದ್ಯಯಾ ಸರ್ವಸಂಪತ್ಪ್ರವೃದ್ಧಿ
ರ್ಭವತ್ಯೇವ ಮುಕ್ತಿಶ್ಚ ತಸ್ಯಾಃ ಪ್ರಭಾವಾತ್ ॥೧೨೧॥

ಮಹಾದೇವವಿದ್ಯಾಂ ವಿನಾ ಶಂಕರಾರ್ಚಾ
ಕಥಂ ವಾ ಫಲಾಯ ಪ್ರವೃತ್ತಾ ತಯಾ ಸಾ ।
ಫಲಾನ್ಯಾಶು ಸೂತೇ ಫಲಪ್ರಾಪ್ತಿಹೇತುಂ
ವದಂತ್ಯೇವ ತಾಮೇವ ಸಂತಃ ಪ್ರಶಾಂತಾಃ ॥೧೨೨॥

ನ ವೇದಾಂತವಿದ್ಯಾಪಿ ಮೋಕ್ಷಪ್ರದಾನೇ
ಸಮರ್ಥಾ ಯಥಾ ಶರ್ವವಿದ್ಯಾ ಸಮರ್ಥಾ ।
ತಯಾ ವಿದ್ಯಯಾ ತಾವದುದ್ಭೂತರೂಪ
ಸ್ತ್ವಮೇವಂ ಸ್ಫುರದ್ಭಾನುರೂಪೋ ವಿಭಾಸಿ ॥೧೨೩॥

---

ಪುಣ್ಯವು ನನಗೆ ದೊರೆತಂತಾಯಿತು. ಅಥವಾ ನನ್ನ ಅಪಾರವಾದ ಪುಣ್ಯಪ್ರಾಪ್ತಿಯಿಂದಲೇ ನಿನ್ನೊಡನೆ ನನಗೆ ಸಂಭಾಷಣೆ ಮಾಡಲು ಅವಕಾಶ ದೊರೆಯಿತು. ॥೧೨೦॥

ಶಿವಧರ್ಮಬೋಧಕವಾದ ಜ್ಞಾನವನ್ನು ಆಶ್ರಯಿಸಿರುವವರಿಗೆ ಯಮಲೋಕದಲ್ಲಿ ವಾಸಮಾಡುವ ವಿಚಾರದ ಮಾತು ಬಹಳ ದೂರವೆಂದೇ ತಿಳಿಯಬೇಕು. ಅಲ್ಲದೆ ಈ ವಿದ್ಯೆಯಿಂದ ಸಕಲ ಸಂಪತ್ತುಗಳೂ ಅಭಿವೃದ್ಧಿಯಾಗುವುವಲ್ಲದೇ, ಮೋಕ್ಷವೂ ಸಹ ಇದರಿಂದಲೇ ಪ್ರಾಪ್ತಿಯಾಗುವುದು. ॥೧೨೧॥

ಈ ಮಹಾದೇವನ ವಿದ್ಯೆಯನ್ನರಿಯದೇ, ಪರಶಿವನ ಸ್ವರೂಪಜ್ಞಾನವೇ ಇಲ್ಲದೇ, ಕೇವಲ ಆ ಶಂಕರನ ಪೂಜೆಯಲ್ಲಿ ಪ್ರವರ್ತಿಸಿದರೆ ಅದರಿಂದ ಯಾವ ಫಲವುಂಟಾದೀತು ! ಜಾಗ್ರತೆ ಫಲಗಳನ್ನು ಕೊಡುವುದೂ, ಫಲಪ್ರಾಪ್ತಿಗೆ ಕಾರಣವಾಗಿರುವುದೂ ಸಹ ಈ ಶಿವವಿದ್ಯೆಯೇ ಎಂದು ಶಾಂತಮನಸ್ಕರಾದ ಸತ್ಪುರುಷರು ಹೇಳುವರು. ॥೧೨೨॥

ವೇದಾಂತವಿದ್ಯೆಯೂ ಸಹ ಈ ಶಿವವಿದ್ಯೆಯಂತೆ ಮೋಕ್ಷವನ್ನು ಕೊಡುವುದರಲ್ಲಿ ಅಷ್ಟು ಸಮರ್ಥವಾಗಲಾರದು. ಆ ಪರಶಿವವಿದ್ಯೆಯನ್ನು ಅಭ್ಯಾಸಮಾಡುವ

ತ್ವಮುತ್ರಾತಿಧನ್ಯಃ ಶಿವಾರಾಧನೇನ
ಪ್ರಸನ್ನಃ ಪ್ರಸನ್ನಂ ಮನಸ್ತ್ವಂ ಕರೋಷಿ ।
ತ್ವದೀಯಂ ಕುಲಂ ಧನ್ಯಮೇವೇತಿ ಮನ್ಯೇ
ಶಿವಾರಾಧನಾಸಕ್ತಚಿತ್ತೋಽತಿಧನ್ಯಃ ॥೧೨೪॥

ಮಹಾದೇವ ಏವಾಹಮಿತ್ಯೇವ ತಾವ
ತ್ಸ್ವಭಾವೋಽಸ್ತು ಯದ್ವಾ ಮಹಾದೇವಭಕ್ತಃ ।
ಭವಾಮೀತಿ ಭಕ್ತಿರ್ಭವತ್ವದ್ಯ ಮಹ್ಯಂ
ಪ್ರಸನ್ನೋ ಮಹೇಶೋ ಯದಿ ಸ್ವಸ್ವಪುಣ್ಯೈಃ ॥೧೫೨॥

ಮಹಾದೇವಪಾದಾಂಬುಜಾರಾಧನಾದೌ
ನ ಭಕ್ತಿರ್ಮಹಾಪಾಪಸಂಘಾನುಷಂಗೇ ।
ನ ತನ್ನಾಶಹೇತುಃ ಶಿವಾರಾಧನಾನ್ಯಸ್ತ
ತಸ್ತೇನ ತನ್ನಾಶಸಿದ್ಧಿರ್ಭವಿತ್ರೀ ॥೧೨೬॥

---

ರೆಲ್ಲರೂ ಅದ್ಭುತವಾದ ತೇಜೋರೂಪವನ್ನು ಹೊಂದುವರು. ಎಲೈ ಆಸ್ತಿಕನೇ, ನೀನೂ ಆ ಶಿವವಿದ್ಯಾಮಹಿಮೆಯಿಂದಲೇ, ಹೊಳೆಯುತ್ತಿರುವ ಸೂರ್ಯನಂತೆ ದಿವ್ಯ ವಾದ ರೂಪವನ್ನು ಹೊಂದಿ ಪ್ರಕಾಶಿಸುತ್ತಿರುವೆ. ||೧೨೩||

ಅಯ್ಯ ಆಸ್ತಿಕನೇ ! ನೀನು ಧನ್ಯನು. ಶಿವಾರಾಧನೆಯಿಂದ ಪ್ರಸನ್ನಚಿತ್ತ ನಾಗಿರುವ ನೀನು, ನಿನ್ನ ದರ್ಶನಮಾಡುವವರಿಗೂ ಮನಶ್ಶಾಂತಿಯನ್ನುಂಟು ಮಾಡುತ್ತಿರುವೆ. ನಿನ್ನ ವಂಶವೂ ಧನ್ಯವಾದದ್ದೆಂದೇ ನಾನು ಭಾವಿಸುವೆನು. ಯಾವಾಗಲೂ ಶಿವಪೂಜೆಯಲ್ಲಿಯೇ ಯಾವನ ಮನಸ್ಸು ನಿರತವಾಗಿರುವುದೋ ಅವನು ಪೂರ್ಣ ಭಾಗ್ಯಶಾಲಿಯೆಂದೇ ನನ್ನ ಅಭಿಪ್ರಾಯ. ||೧೨೪||

ಮಹೇಶ್ವರನು ಪ್ರಸನ್ನನಾಗುವುದಾದರೆ ಆಗ (ಶಿವೋಽಹಂ ಎಂಬ ಜ್ಞಾನವು) ತಾನೇ ಮಹಾದೇವನೆಂದಾಗಲೀ ಅಥವಾ ನಾನು ಮಹಾದೇವನ ಭಕ್ತನೆಂದಾಗಲೀ ನನಗೆ ಆ ದೇವನಲ್ಲಿ ಭಾವನೆಯು ಹುಟ್ಟಿ ಪರಮೇಶ್ವರನಲ್ಲಿ ಭಕ್ತಿಯುಂಟಾಗಲಿ. ಹೇಗಾದರೂ ಆ ಶಿವನ ಪೂಜಾಭಾಗ್ಯವು ದೊರೆತಂತೆಯೇ ಸರಿ. ||೧೨೫||

ಮಹಾಪಾಪಗಳ ಸಂಬಂಧವಿದ್ದರೆ ಈ ಮಹಾದೇವನ ಪೂಜಾ, ಧ್ಯಾನಾದಿ ಗಳಲ್ಲಿ ಎಂದಿಗೂ ಭಕ್ತಿಯುಂಟಾಗಲಾರದು. ಶಿವಾರಾಧನೆಯನ್ನು ಬಿಟ್ಟು ಮತ್ತಾವು

ಮಹಾದೇವಪಾದಾಬ್ಜಸಾಮರ್ಥ್ಯಮನ್ಯೈ
ರವಿಜ್ಞಾತಮೇವೇತಿ ಮನ್ಯೇ ಕಿಮನ್ಯೈಃ ।
ಶಿವಾರಾಧನೇನೈವ ಮುಕ್ತಿರ್ಯತಃ ಸ್ಯಾ
ತ್ತತಸ್ತಂ ಮಹಾದೇವಮೇಕಂ ಭಜಾಮಿ ॥೧೨೭॥

ನ ಸಂಸಾರದುಃಖಾಪಹರ್ತಾಪಿ ಲೋಕೇ
ಶಿವಾನ್ಯಸ್ತದನ್ಯಂ ನ ಜಾನೇ ನ ಜಾನೇ ।
ನ ಜಾನೇ ಶಿವಾನ್ಯಂ ನ ಜಾನೇ ಶಿವಾನ್ಯಂ
ನ ಜಾನೇ ಶಿವಾನ್ಯಂ ಸುಖಾವಾಪ್ತಿಹೇತುಂ ॥೧೨೮॥

ಇತ್ಯುಕ್ತ್ವನಂತಂ ತಂ ವಿಷ್ಣುಮಭಿನಂದ್ಯಾಸ್ತಿಕೋತ್ತಮಃ ।
ಶಿವಪೂಜಾರತೋ ಜಾತೋ ವಿಷ್ಣುಃ ಸ್ವನಿಲಯಂ ಯಯೌ ॥೧೨೯॥

---

ದಕ್ಕೂ ಈ ಪಾಪಗಳನ್ನು ನಾಶಮಾಡುವ ಸಾಮರ್ಥ್ಯವೂ ಇಲ್ಲ. ಆದ್ದರಿಂದ ಈ ಮಹಾಪಾಪಗಳು ನಾಶವಾಗಬೇಕಾದರೆ ಈ ಶಿವಪೂಜಾದಿಗಳೇ ಮುಖ್ಯಸಾಧನೆಯಲ್ಲವೆ! ॥೧೨೬॥

ಈ ಮಹಾದೇವನ ಅಡಿದಾವರೆಗಳ ಸಾಮರ್ಥ್ಯವು, ನಿನ್ನನ್ನು ಬಿಟ್ಟು ಮತ್ತಾರಿಗೂ ತಿಳಿಯದು. ಈ ಶಿವನ ಪಾದಾಬ್ಜಸೇವೆಯನ್ನು ಬಿಟ್ಟು ಉಳಿದ ಪದಾರ್ಥಗಳಿಂದ ಏನು ತಾನೇ ಪ್ರಯೋಜನ? ಶಾಶ್ವತವಾದ ಮುಕ್ತಿಯೂ ಈ ಶಿವಪಾದಾರವಿಂದ ಭಜನೆಯಿಂದಲೇ ಉಂಟಾಗುವಾಗ ಈ ಮಹಾದೇವನೊಬ್ಬನನ್ನೇ ನಾನು ಭಜಿಸುವೆನು. ॥೧೨೭॥

ಲೋಕದಲ್ಲಿ ಶಿವನೊಬ್ಬನೇ ಈ ಘೋರವಾದ ಸಂಸಾರಸಂಬಂಧಿಯಾದ ದುಃಖವನ್ನು ಪರಿಹರಿಸಬಲ್ಲನೇ ಹೊರತು ಮತ್ತಾರಿಂದಲೂ ಸಾಧ್ಯವಿಲ್ಲ: ಸರ್ವ ಸುಖಸಂಪತ್ತುಗಳಿಗೂ ಆ ಪರಶಿವನೊಬ್ಬನೇ ಮೂಲಕಾರಣನಾಗಿರುವನು. ಆದ್ದರಿಂದ ಆ ಸ್ವಾಮಿಯನ್ನು ಬಿಟ್ಟು ನಾನು ಯಾವರೀತಿಯಿಂದಲೂ ಬೇರೆಯವರನ್ನು ವಾಙ್ಮನಃಕಾಯಗಳಿಂದ ಭಾವಿಸಲಾರನು. ಎಂದು ಮಹಾವಿಷ್ಣುವು ಆಸ್ತಿಕನಿಗೆ ಹೇಳಿದನು. ॥೧೨೮॥

ಮಹಾವಿಷ್ಣುವು ಹೀಗೆ ಪರಶಿವನನ್ನು ಭಕ್ತಿಯಿಂದ ಸ್ತೋತ್ರಮಾಡುತ್ತಾ ತನ್ಮಯನಾಗಿ ಹೇಳುತ್ತಿರುವದನ್ನು ಕೇಳಿ, ಆಸ್ತಿಕಶ್ರೇಷ್ಠನೆನಿಸಿದ ಆ ಭಕ್ತನು

ಏವಂ ಶಿವಾರಾಧನತತ್ಪರಾಣಾಂ
ಧೈರ್ಯಂ ತ್ವಧೈರ್ಯಂ ನ ಕದಾಪಿ ತೇಷಾಂ ।
ನ ದೈನ್ಯವಾರ್ತಾಽಪಿ ನ ದುಃಖವಾರ್ತಾ
ಸಂಸಾರವಾರ್ತಾ ತ್ವತಿದೂರತಃಸ್ಯಾತ್ ॥೧೩೦॥

ಯಂ ದೇವದೇವಂ ಸಕೃದಾನಮಂತಃ
ಸಂಪ್ರಾಪ್ನುವಂತಃ ಸಕಲಾರ್ಥಸಿದ್ಧಿಂ ।
ತಂ ಶಂಕರಂ ಕಃ ಪ್ರಣತೋ ನ ಲೋಕೇ
ಮುಕ್ತಿಂ ಸಮಾಪ್ನೋತಿ ಸುಖಾವಸಾನೇ ॥೧೩೧॥

ಯಂ ಯೋಗಮಾರ್ಗೈಕರತೋಽಪಿ ಯೋಗೀ
ನ ಪಶ್ಯತಿ ಶ್ರೀಗಿರಿಜಾಸಹಾಯಂ ।
ಉಮಾಸಹಾಯಂ ಪ್ರಣತೋ ನ ಕೋ ವಾ
ಮುಕ್ತಿಂ ಸಮಾಪ್ನೋತಿ ಸುಖಾವಸಾನೇ ॥೧೩೨॥

---

ಅವನನ್ನು ಅಭಿನಂದಿಸಿ ಅನಂತರ ತಾನು ಶಿವಪೂಜಾಸಕ್ತನಾದನು. ಆಮೇಲೆ ವಿಷ್ಣುವೂ ಸಹ ಅಲ್ಲಿಂದ ಹೊರಟು ತನ್ನ ಸ್ಥಳಕ್ಕೆ ತೆರಳಿದನು. ॥೧೨೯॥

ಹೀಗೆ ಶಿವಪೂಜಾನಿರತರಾದ ಭಕ್ತಶಿಖಾಮಣಿಗಳಿಗೆ ಯಾವಾಗಲೂ ಧೈರ್ಯವೇ ಹೊರತು ಎಂದಿಗೂ ಅಂಜಿಕೆಯೇ ತಲೆದೋರದು. ದೈನ್ಯವಾರ್ತೆಯಾಗಲೀ ದುಃಖವೃತ್ತಾಂತವಾಗಲೀ ಅವರ ಸಮೀಪಕ್ಕೇ ಬರಲಾರದು. ಸಂಸಾರವಿಷಯಕ ವಾದ ಕ್ಲೇಶಸಮಾಚಾರಗಳಂತೂ ಬಹಳ ದೂರದಲ್ಲಿಯೇ ನಿಲ್ಲುವುವು. ॥೧೩೦॥

ದೇವಾಧಿದೇವತೆಗಳಿಗೂ ದೇವತೆಯೆನಿಸಿರುವ ಮಹೇಶ್ವರನನ್ನು ಒಂದು ಬಾರಿ ನಮಸ್ಕರಿಸಿದ ಮಾತ್ರದಿಂದಲೇ ಸಕಲ ಮನೋರಥಗಳೂ ಸಿದ್ಧಿಸುವುವು. ಇಂತಹ ಮಹಾನುಭಾವನಾದ ಶಂಕರನನ್ನು ನಮಸ್ಕಾರಮಾಡದಿರುವ ಯಾವನು ತಾನೇ ಈ ಲೋಕದಲ್ಲಿ ಅನಿತ್ಯಸುಖವನ್ನನುಭವಿಸಿದ ನಂತರ, ಮುಂದೆ ಶಾಶ್ವತ ಸುಖಸ್ವರೂಪವಾದ ಮೋಕ್ಷವನ್ನು ಹೊಂದಬಲ್ಲನು ? ॥೧೩೧॥

ಕೇವಲ ಯೋಗಾಭ್ಯಾಸಮಾರ್ಗದಲ್ಲಿಯೇ ತತ್ಪರನಾಗಿರುವ ಯೋಗಿಯು ಸಹ ಯಾವ ಗಿರಿಜಾರಮಣನನ್ನು ದರ್ಶನಮಾಡಲಾರನೋ, ಅಂತಹ ಉಮಾರಮಣನಾದ ಮಹಾದೇವನನ್ನು ಭಕ್ತಿಯಿಂದ ನಮಸ್ಕಾರಮಾಡದೇ ಯಾವನುತಾನೇ

ಸಿದ್ಧಾಃ ಪ್ರಸಿದ್ಧಾ ಅಪಿ ಯೋಗಸಿದ್ಧಾ
ಯಂ ನೈ ನ ಜಾನಂತಿ ತಮೀಶಮೀಡ್ಯಂ।
ಉಮಾಸಹಾಯಂ ಪ್ರಣತೋ ನ ಕೋ ವಾ
ಮುಕ್ತಿಂ ಸಮಾಪ್ನೋತಿ ಸುಖಾವಸಾನೇ ॥೧೩೩॥

ಯತ್ಪಾದುಕಾರಾಧನಸಕ್ತಚಿತ್ತಃ
ಕರೋತಿ ವಾಂಛಾಂ ವಿಷಯೇಷು ತಂ ಕಿಂ।
ಉಮಾಸಹಾಯಂ ಪ್ರಣತೋ ನ ಕೋ ವಾ
ಮುಕ್ತಿಂ ಸಮಾಪ್ನೋತಿ ಸುಖಾವಸಾನೇ ॥೧೩೪॥

ಯನ್ನಾಮಸಂಕೀರ್ತನಪೂತಜಿಹ್ವಾಃ
ಸ್ಮರಂತಿ ಸಂಸಾರಸುಖಂ ನ ತಂ ನೈ।
ಉಮಾಸಹಾಯಂ ಪ್ರಣತೋ ನ ಕೋ ವಾ
ಮುಕ್ತಿಂ ಸಮಾಪ್ನೋತಿ ಸುಖಾವಸಾನೇ ॥೧೩೫॥

---

ಒಂದುವೇಳೆ ಐಹಿಕಸುಖವನ್ನನುಭವಿಸಿದರೂ, ಕೊನೆಗೆ ಶಾಶ್ವತವಾದ ಮುಕ್ತಿಯನ್ನು ಹೊಂದಿಯಾನು? ॥೧೩೨॥

ಯೋಗಸಿದ್ಧಿಯನ್ನು ಪಡೆದು ಪ್ರಸಿದ್ಧರಾಗಿರುವ ಸಿದ್ಧಪುರುಷರೂ ಸಹ ಯಾವ ಸ್ತೋತ್ರಾರ್ಹನಾದ ಪರಮೇಶ್ವರನನ್ನು ತಿಳಿಯಲಾರರೋ, ಅಂತಹ ಉಮಾರಮಣನಾದ ಪರಮೇಶ್ವರನನ್ನು ನಮಸ್ಕರಿಸದೇ ಇರುವ ಯಾವ ಮಾನವನು ತಾನೇ, ಐಹಿಕಸುಖಾನುಭವಾನಂತರದಲ್ಲಿ ಮೋಕ್ಷವನ್ನು ಹೊಂದಿಯಾನು? ॥೧೩೩॥

ಪರಶಿವನ ಪಾದುಕಾಪೂಜೆಯಲ್ಲಿಯೇ ನೆಲಸಿರುವ ಮನಸ್ಸುಳ್ಳ ಶಿವಭಕ್ತನು ಪ್ರಕ್ಚಂದನ ವನಿತಾರೂಪವಾದ ವಿಷಯಸುಖಗಳಲ್ಲಿ ಎಂದಿಗಾದರೂ ಅಪೇಕ್ಷೆಪಡುವನೇ? ಇಂತಹ ಉಮಾರಮಣನಾದ ಮಹಾದೇವನನ್ನು ನಮಸ್ಕರಿಸದೇ ಇರುವ ಯಾವನು ತಾನೇ ಇಹಲೋಕಸುಖಾನುಭವಾನಂತರದಲ್ಲಿ ಮುಕ್ತಿಯನ್ನು ಹೊಂದಿಯಾನು? ॥೧೩೪॥

ಯಾವ ಪರಶಿವನ ನಾಮಸಂಕೀರ್ತನೆಯಿಂದ ಪವಿತ್ರವಾಗಿರುವ ನಾಲಿಗೆಗಳುಳ್ಳ ಜನರು, ಸಂಸಾರಸುಖದ ಕೇವಲ ಸ್ಮರಣೆಯನ್ನೂ ಮಾಡುವುದಿಲ್ಲವೋ

ವಿಶ್ವೇಶನಾಮಾಮೃತಪಾನಪೀನಾಃ
ಕೇಚಿದ್ಭವಂತ್ಯೇವ ಭವೇಽಪಿ ಧನ್ಯಾಃ ।
ತೇಷಾಂ ಪದಾಂಭೋಜರಜಃಪ್ರಸಾದ
ವಾಂಛಾಂ ಕರೋತ್ಯೇವ ಮನೋ ಮಮಾಪಿ ॥೧೩೬॥

ಯಮಭಟಗಣವಾರ್ತಾಮಂತಕಸ್ಯಾಪಿ ವಾರ್ತಾ
ಮುರುತರಸುಖದುಃಖಾಸಾರಸಂಸಾರವಾರ್ತಾಂ ।
ವಿಷಯವಿಷಮವಾರ್ತಾಂ ನ ಶೃಣೋತ್ಯೇವ ಹಾರೋ
ಹರಚರಣಸರೋಜಧ್ಯಾನಧಾರಾನುರಕ್ತಃ ॥೧೩೭॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಶಿವಭಕ್ತಯಮ ಸಂವಾದೇ, ಶಿವಭಕ್ತ ವಿಷ್ಣುಸಂವಾದ
ಕಥನಂ ನಾಮ ಅಷ್ಟಾವಿಂಶೋಽಧ್ಯಾಯಃ

---

ಅಂತಹ ಪರಮಪಾವನನಾದ ಉಮಾಕಾಂತನನ್ನು ನಮಸ್ಕಾರಮಾಡದ ಯಾವನಿಗೆ ತಾನೇ ಐಹಿಕ ಮತ್ತು ಆಮುಷ್ಮಿಕಸುಖವು ದೊರಕೀತು ? ॥೧೩೫॥

ಈ ಸಂಸಾರಪ್ರಪಂಚದಲ್ಲಿದ್ದುಗೊಂಡೇ ಕೆಲವರು ಜಗದೊಡೆಯನಾದ ಮಹಾದೇವನ ನಾಮಾಮೃತಸ್ಮರಣೆಯಿಂದ ಆನಂದಪರಿಪೂರ್ಣರಾಗಿ ಧನ್ಯರೆನಿಸಿರುವರು. ಈ ನನ್ನ ಮನಸ್ಸೂ ಕೂಡ ಅಂತಹ ಮಹಾನುಭಾವರ ಪಾದಕಮಲ ಧೂಳಿಯ ಅನುಗ್ರಹವನ್ನು ಹೊಂದಬೇಕೆಂದು ಅಪೇಕ್ಷಿಸುತ್ತಿರುವುದು. ॥೧೩೬॥

ಪರಮೇಶ್ವರನ ಚರಣಕಮಲಗಳಲ್ಲಿ ಧ್ಯಾನನಿರತನಾಗಿರುವ ಪರಶಿವನ ಭಕ್ತನು ಯಮಭಟರ ಸಮೂಹ ವಾರ್ತೆಯನ್ನಾಗಲೀ, ಅತಿಶಯವಾದ ಸುಖದುಃಖ ರೂಪವಾದ ವ್ಯಾಪಾರಗಳಿಂದ ಯುಕ್ತವಾಗಿರುವ ಸಂಸಾರವಿಚಾರವನ್ನಾಗಲೀ, ವಿಷಮವಾದ ಸ್ರಕ್ಚಂದನ ವನಿತಾವಿಷಯಕವಾದ ವಿಷಯಸುಖದ ಸಮಾಚಾರವನ್ನಾಗಲೀ ಎಂದಿಗೂ ಲೆಕ್ಕಿಸುವುದಿಲ್ಲ" (ಶಿವನ ಪದಕಮಲಗಳನ್ನು ಧ್ಯಾನಮಾಡುತ್ತಾ ಅಲ್ಲೇ ಅನುರಕ್ತನಾಗಿ ತದ್ಧ್ಯಾನಾಮೃತವನ್ನು ಪಾನಮಾಡಿಕೊಂಡು ಆನಂದಪರಿಪೂರ್ಣ

ನಾಗಿರುವ ಶಿವಭಕ್ತನಿಗೆ ಈ ಯಮನ ಭಯ, ಸಂಸಾರತಾಪತ್ರಯ ಮತ್ತು ನಶ್ವರವಾದ ವಿಷಯಸುಖ ಇವುಗಳಾವುವೂ ಇರುವುದಿಲ್ಲವೆಂದು ಭಾವವು.) ||೧೩೭||

ಇಲ್ಲಿಗೆ ಶ್ರೀಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ
ಶಿವಭಕ್ತ ಮತ್ತು ಯಮ, ಶಿವಭಕ್ತ ಮತ್ತು ಮಹಾವಿಷ್ಣು ಇವರುಗಳ
ಪರಸ್ಪರ ಸಂಭಾಷಣೆಯನ್ನು ತಿಳಿಸುವಿಕೆಯೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಏಕೋನತ್ರಿಂಶೋಽಧ್ಯಾಯಃ



॥ ಯಾಜ್ಞವಲ್ಕ್ಯ ಉವಾಚ ॥

ತಸ್ಮಾನ್ನ ಮುಕ್ತಿಃ ಶಿವವಿದ್ಯಯಾ ವಿನಾ
ನಾನಂದಸಿದ್ಧಿಶ್ಚ ಭವತ್ಯತೋಽಸ್ಯಾಃ ।
ತಯಾ ವಿನಾ ಮುಕ್ತಿಕಥಾಪಿ ದೂರೇ
ಕಿಂ ಮೂರ್ಛಿತಾಯಾ ಇತಿ ಮೇ ವಿಭಾತಿ ॥೧॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಯಾಜ್ಞವಲ್ಕ್ಯರು ಜನಕರಾಜನೊಡನೆ ಮತ್ತೆ ಹೀಗೆಂದರು. " ಈ ಶಿವವಿದ್ಯೆಯಿಂದಲೇ ಮುಕ್ತಿಯು. ಇದಿಲ್ಲದೆ ಎಂದಿಗೂ ಮುಕ್ತಿಯು ದೊರೆಯಲಾರದು. ಸಕಲ ಆನಂದಸಿದ್ಧಿಗಳೂ ಇದರಿಂದ ಲಭಿಸಬೇಕೇ ವಿನಾ ಬೇರೆ ಯಾವುದರಿಂದಲೂ ದೊರೆಯಲಾರದು. ಶಿವವಿದ್ಯೆಯನ್ನಭ್ಯಾಸಮಾಡದವನಿಗೆ ಮೋಕ್ಷಕಥೆಯು ದೂರದಲ್ಲಿರುವುದೆಂದು ಭಾವಿಸಬೇಕು. ಮೂರ್ಛೆಹೊಂದಿರುವ ವ್ಯಕ್ತಿಗೆ ಯಾವ ವಿಧವಾದ ಆನಂದವೂ ಇಲ್ಲದೇ ಎಲ್ಲವೂ ಹೇಗೆ ದೂರದೂರವಾಗುವುದೋ ಅದರಂತೆಯೇ ಶಿವಪಂಚಾಕ್ಷರೀ ವಿದ್ಯೆಯನ್ನಭ್ಯಾಸಮಾಡದೆ ಶಿವಪೂಜೆ, ಶಿವಧ್ಯಾನಾದಿಗಳನ್ನು ಮಾಡದವನಿಗೆ ಸಕಲ ಸುಖಗಳೂ ದೂರದಲ್ಲಿಯೇ ಇರುವುವೆಂದು ನನಗೆ ತೋರುವುದು. ॥೧॥

ಇತ್ಯುಕ್ತ್ವಾ ಸೋಽಪಿ ಭೂಪಾಲಃ ಸತ್ಯಜ್ಞಾನಪರಾಯಣಃ ।
ಪರಲೋಕಂ ಕಥಂ ತಸ್ಯಾಃ ಸ್ಯಾದಿತ್ಯಪಿ ಚಿರಂ ಸ್ಥಿತಃ ॥೨॥

ತತಃ ಪರಂ ದದರ್ಶಾಯಂ ತೇಜೋಮೂರ್ತಿಂ ವಿಲೋಕ್ಯ ತಾಂ ।
ಕಿಮಿತ್ಯಾಶ್ಚರ್ಯಸಂಪನ್ನೋ ವಿಸ್ಮಿತಃ ಸಮಭೂತ್ತದಾ ॥೩॥

ತತಃ ಪರಂ ತತ್ರ ಸನಾತನೋಽಪಿ
ಸನಂದನೋಽಪಿ ಸ್ಮರವೈರಿವಾರ್ತಾಂ ।
ಕುರ್ವನ್ಸಮಭ್ಯಾಗತ ಏವ ದೃಷ್ಟ್ವಾ
ತಂ ಪ್ರಾಹ ರಾಜಾ ವಿನಯೇನ ನಮ್ರಃ ॥೪॥

॥ ಸತ್ಯವ್ರತ ಉವಾಚ ॥

ಸನಂದನಾಪೂರ್ವಮಿದಂ ಪ್ರಪಶ್ಯ
ಜ್ಯೋತಿಃ ಕದಾಚಿನ್ನ ವಿಲೋಕಿತಂ ಚ ।
ಮಯಾಽಶ್ರುತಂ ಕಿಂ ತದಿದಂ ವದಾಶು
ಲೋಕಸ್ಯ ತತ್ತ್ವಂ ವಿದಿತಂ ತ್ವಯಾಽಽಶು ॥೫॥

---

ಸತ್ಯಜ್ಞಾನಪರಾಯಣನಾದ ಆ ಸತ್ಯವ್ರತರಾಜನು ಹೀಗೆ ನುಡಿದು, ಆ ವ್ಯಕ್ತಿಗೆ ಪರಲೋಕವು ಹೇಗೆ ಪ್ರಾಪ್ತವಾಗುವುದು ಎಂದು ಬಹಳಕಾಲ ಚಿಂತಾಕ್ರಾಂತನಾಗಿ ನಿಂತನು. ॥೨॥

ಹಾಗೆಯೇ ಸತ್ಯವ್ರತಮಹಾರಾಜನು ತೇಜೋಮೂರ್ತಿಯಾದ ಆವಳನ್ನು ನೋಡಿ, ಇದೇನು! ಎಂತಹ ಅದ್ಭುತವಾದ ತೇಜಸ್ಸು ಎಂದು ಹೇಳುತ್ತಾ ಆಶ್ಚರ್ಯಚಕಿತನಾದನು. ॥೩॥

ಇದಾದಮೇಲೆ ಆ ಸಮಯಕ್ಕೆ ಸರಿಯಾಗಿ, ಸನಾತನಪುರುಷನೆನಿಸಿದ ಸನಂದನನು, ಮನ್ಮಥರಿಪುವಾದ ಮಹಾದೇವನ ನಾಮಸ್ಮರಣೆಮಾಡುತ್ತಾ, ಆ ಸ್ಥಳಕ್ಕೆ ಬಂದನು. ಆಗ ಆ ಸತ್ಯವ್ರತಮಹಾರಾಜನು ಅನಿರೀಕ್ಷಿತವಾಗಿ ಬಂದ ಆ ಮುನಿವರ್ಯನನ್ನು ನೋಡಿ, ಅವನನ್ನು ಅತಿಥಿಸತ್ಕಾರದಿಂದ ಉಪಚರಿಸಿದ ನಂತರ ವಿನಯದಿಂದ ಹೀಗೆ ಪ್ರಾರ್ಥಿಸಿದನು. ॥೪॥

"ಪೂಜ್ಯನಾದ ಸನಂದನನೇ, ಅಪೂರ್ವವಾದ (ಹಿಂದೆ ಯಾವಾಗಲೂ ನೋಡದೇ ಇರುವ) ಈ ಜ್ಯೋತಿಸ್ವರೂಪವನ್ನು ನೋಡು. ಯಾವಾಗಲೂ ನಾನು

|| ಸನಂದನ ಉವಾಚ ||

ಶ್ರೀಪಂಚಾಕ್ಷರವಿದ್ಯಯಾ ಸ್ಥಿರಮತಿರ್ನಿತ್ಯಂ ಶಿವಾರಾಧಕೋ
ಭಸ್ಮೋದ್ಧೂಲಿತವಿಗ್ರಹಃ ಸ್ಫುರತಿಲಸದ್ಭೂತಿತ್ರಿಪುಂಡ್ರಾಂಕಿತಃ ।
ತ್ಯಕ್ತ್ವಾ ದೇಹಮುಮಾಸಹಾಯಚರಣಧ್ಯಾನಾತಿಪೂತೋಽಧುನಾ
ಗೌರೀನಾಥಪದಾರವಿಂದಭಜನಂ ಕರ್ತುಂ ಪ್ರಯಾತಿ ಧ್ರುವಂ ||೬||

ಅನ್ಯಂ ಪುಣ್ಯಪುಂಜಸ್ವರೂಪೋಽಪ್ಯಪಾಪೋ
ವಿನಿರ್ಧೂತಪಾಪೋ ವಿಶೇಷೇಣ ದೃಷ್ಟಃ ।
ಅದೃಷ್ಟಂ ಸಮುದ್ಭೂತಮೇವಾದ್ಯ ಸತ್ಯಂ
ಕಿಮೇತಾದೃಶಾಲೋಕನೇ ಶೋಕಶೂಕಃ ||೭||

---

ಹಿಂದೆ ಇಂತಹ ತೇಜಃಸ್ವರೂಪವನ್ನು ನೋಡಿರಲಿಲ್ಲ. ಅಥವಾ ಕೇಳಿಯೂ ಇರಲಿಲ್ಲ. ಅಯ್ಯ ಮಹಾತ್ಮನೇ! ನೀನು ಪ್ರಪಂಚದ ತತ್ತ್ವವನ್ನರಿತವನು. ಆದ್ದರಿಂದ ಇದರ ಸಮಾಚಾರವೇನೆಂಬುದನ್ನು ಜಾಗ್ರತೆ ತಿಳಿಸು" ಎಂದು ಸತ್ಯವ್ರತನು ಸನಂದನ ಮಹರ್ಷಿಯನ್ನು ಕೇಳಿದನು. ||೫||

ಆಗ ಸನಂದನ ಮಹರ್ಷಿಗಳು ಹೀಗೆ ನುಡಿದರು–ಹಿಂದೆ ಶಿವಪೂಜಾನಿರತನಾದ ಭಕ್ತನೊಬ್ಬನು ನಿತ್ಯವೂ ನೆಟ್ಟಮನಸ್ಸಿನಿಂದ ಶ್ರೀಶಿವಪಂಚಾಕ್ಷರೀಮಂತ್ರಜಪವನ್ನು ಮಾಡುತ್ತಾ ತನ್ನ ಶರೀರಕ್ಕೆಲ್ಲಾ ಭಸ್ಮವನ್ನು ಬಳಿದುಕೊಂಡು, ಕಿವಿಗಳ ವರೆಗೂ ಪ್ರಕಾಶಿಸುತ್ತಿರುವ ಭಸ್ಮತ್ರಿಪುಂಡ್ರಗಳನ್ನು ಧಾರಣೆಮಾಡಿ, ಮಹಾದೇವನನ್ನು ಆರಾಧನೆಮಾಡುತ್ತಿದ್ದನು. ಈಗ ಅವನು ಪಾಂಚಭೌತಿಕವಾದ ಈ ಶರೀರವನ್ನು ಬಿಟ್ಟು ಉಮಾರಮಣನಾದ ಶಂಕರನ ಧ್ಯಾನಮಹಿಮೆಯಿಂದ ಅತ್ಯಂತ ಪವಿತ್ರನಾಗಿ, ಈಗ ಅದೇ ಗೌರೀರಮಣನ ಪಾದಕಮಲಗಳನ್ನು ಸೇವಿಸಲು ಕೈಲಾಸಕ್ಕೆ ಹೋಗುತ್ತಿರುವನು, ಇದು ನಿಶ್ಚಯ. ||೬||

ಅತಿ ತೇಜಸ್ವಿಯಾಗಿ ಪಾಪರಹಿತನಾದ ಈ ಶಿವಭಕ್ತನು ಪುಣ್ಯಸಮೂಹಗಳೇ ತಾನಾಗಿರುವಂತೆ ತೋರುತ್ತಿರುವನು. ಇಂತಹ ಪಾಪರಹಿತನಾದವನನ್ನು ನಾವು ನೋಡಿದುದೂ ಒಂದು ಭಾಗ್ಯವೇ ಎಂದು ತಿಳಿಯಬೇಕು. ಈ ಮಹಾನುಭಾವನ ದರ್ಶನದಿಂದ ಒಂದು ಸುಕೃತರಾಶಿಯೇ ಸತ್ಯವಾಗಿಯೂ ಲಭಿಸಿರುವುದೆಂದು

ಅಪಾರರವಿಮಂಡಲಪ್ರಕರಮಾಲಿಕಾಸನ್ನಿಭಂ
ಪ್ರಯಾತಿ ಶಿವಮಂದಿರಂ ಸಕಲಲೋಕಶೋಕಾಪಹಂ ।
ವಿಲೋಕಯ ವಿಲೋಕಯ ಸ್ಮರಹರೋರುವಿದ್ಯಾನಿಧಿಂ
ಪುನರ್ನಯನಗೋಚರಃ ಕಿಮಯಮುಷ್ಯ ಭೂಯೋ ನೃಪ ॥೮॥

ವಿಭಾತಿ ಶಿವವಿದ್ಯಯಾ ತರಣಿಮಂಡಲಸ್ಯಾಪ್ಯಯಂ
ನಿರೋಧಕತಯಾ ಮಿಶೋಽಪ್ಯಮಿತಭಾನುಮಾಲಾಯಿತಃ ।
ಇದಂ ಖಲು ಮಹತ್ತರಂ ಭವತಿ ಭಾಗ್ಯಮೀಶಾರ್ಚನೋ
ದಯಂ ಭವತಿ ಶಂಕರಪ್ರವಣಮಾನಸಃ ಸರ್ವದಾ ॥೯॥

ಶಿವಾರ್ಚನಫಲಂ ಪರಂ ಭವತಿ ತಾವದೇತಾದೃಶಂ
ಪ್ರಭೂತಬಹುಪುಣ್ಯನಾನಯಮುಮಾಸಹಾಯಾರ್ಚಕಃ ।

---

ನಾನು ಭಾವಿಸುವೆನು. ಈ ಮಹಾತ್ಮರ ದರ್ಶನ ಮಾಡಿದ ಮೇಲೆ ಯಾವ ವಿಧವಾದ ಶೋಕಗಳಿಗೂ ಅವಕಾಶವೇ ಇಲ್ಲ. ॥೭॥

ಈ ಮಹಾನುಭಾವನು ಸಕಲ ಜಗತ್ತಿನ ಶೋಕವನ್ನೂ ಹೋಗಲಾಡಿಸುವ ಶಿವಮಂದಿರಕ್ಕೆ ಹೋಗುತ್ತಿರುವನು. ಆ ಶಿವಮಂದಿರವಾದರೋ ಅನೇಕ ಸೂರ್ಯ ಮಂಡಲ ಸಮೂಹಗಳನ್ನೇ ಮಾಲೆಯಂತೆ ರಚಿಸಿದರೆ ಹೇಗೆ ದೇದೀಪ್ಯಮಾನ ವಾಗಿರುವುದೋ ಅದರಂತೆ ಹೊಳೆಯುತ್ತಿರುವುದು. ಎಲೈ ರಾಜನೇ, ಈ ಮಹಾನು ಭಾವನನ್ನು ನೋಡು. ಮತ್ತೆ ದರ್ಶನಮಾಡುವನಾಗು. ಶಿವನ ವಿದ್ಯೆಗಳಿಗೆಲ್ಲಾ ನಿಧಿಯಂತೆ ಆಶ್ರಯನಾಗಿರುವ ಈ ಮಹಾತ್ಮನು ಪುನಃ ನಮ್ಮ ಕಣ್ಣಿಗೆ ಗೋಚರ ವಾಗಲಾರನು. ಆದುದರಿಂದ ಪದೇ ಪದೇ ಈಗಲೇ ಇವನನ್ನು ನೋಡಿ ಪವಿತ್ರ ನಾಗು. ॥೮॥

ಶಿವಪಂಚಾಕ್ಷರೀವಿದ್ಯೆಯ ಮಹಿಮೆಯಿಂದ ಅಪಾರವಾದ ಸೂರ್ಯಮಂಡಲದ ಸಮೂಹದಂತೆ ಕಂಗೊಳಿಸುತ್ತಿರುವ ಈ ಮಹಾತ್ಮನು ತನ್ನ ದಿವ್ಯ ತೇಜಸ್ಸಿನಿಂದ ಸೂರ್ಯಮಂಡಲವನ್ನೇ ತಡೆಯುತ್ತಿರುವನೋ ಎಂಬಂತೆ ಪ್ರಕಾಶಿಸುತ್ತಿರುವನು. ಮಹೇಶ್ವರನ ಪೂಜಾದಿಗಳಿಂದ ಸದಾ ಶಂಕರನಲ್ಲಿಯೇ ನೆಲಸಿರುವ ಮನಸ್ಸುಳ್ಳ ಮಾನವರಿಗೆ ಇಂತಹ ಮಹಾಭಾಗ್ಯವು ಸಂಭವಿಸುವುದು. ॥೯॥

ಪರಶಿವನ ಪೂಜೆಯಿಂದ ಇಂತಹ ಶ್ರೇಷ್ಠವಾದ ಫಲವುಂಟಾಗುವುದು. ಈ

ಅಯಂ ಗುರುರಿತಿ ಶ್ರುತಃ ಶಿವಪರಾಯಣಾನಾಂ ಪರಂ
ಪ್ರದರ್ಶನಮಯಂ ಕರೋತ್ಯನಘಶೈವಮಾರ್ಗಸ್ಯ ಕಿಂ ॥೧೦॥

ಮಹಾನ್ಖಲು ಶಿವಾರ್ಚಕೋ ಭುವನಮಂಡಲಾಖಂಡಲಃ
ಪ್ರಚಂಡತರಪಾತಕಪ್ರಬಲಪರ್ವತಾನಾಂ ಪವಿಃ ।
ಕಿಮೇವಮಿದಮದ್ಭುತಂ ಶಿವಪದಾಂಬುಜಾರಾಧನಂ
ಮಹಾಘವನಪಾವಕಃ ಸಕಲಲೋಕಸಂತೋಷದಃ ॥೧೧॥

ಸ ಯಾತಿ ಶಿವಮಂದಿರಂ ಶಿವಪದಾಂಬುಜಾರಾಧನಾ
ದಿಹೈತದವಲೋಕನಾದ್ಭವತಿ ಪುಣ್ಯರಾಶಿಸ್ತಥಾ ।
ಸುಖಾಂಬುನಿಧಿರುತ್ಥಿತಃ ಶಿವಜನೇಷ್ಟಚಂದ್ರೋದಯಾ
ದಹೋ ಭವತಿ ದೇಹಿನಾಂ ಶಿವಪದಾರ್ಚನಂ ಪುಣ್ಯತಃ ॥೧೨॥

---

ಪರಶಿವನನ್ನು ಪೂಜಿಸುವನೂ ಸಹ ಮಹಾಪುಣ್ಯಶಾಲಿಯೇ ಎಂದು ತಿಳಿಯಬೇಕು. ಶಿವಪರಾಯಣರಾದವರಿಗೆಲ್ಲಾ ಗುರುವೆಂದು ಪ್ರಸಿದ್ಧಿಪಡೆದು, ಇವನು ಪರಿಶುದ್ಧವಾದ ಶೈವಮಾರ್ಗಕ್ಕೆ ಇದೇ ಸರಿಯಾದ ದಾರಿಯೆಂದು ತೋರಿಸಿಕೊಡುತ್ತಿರುವನೆಂದು ತೋರುವುದು. ॥೧೦॥

ಮಹಾಶ್ರೇಷ್ಠನಾದ ಈ ಶಿವಪೂಜಕನು ಈ ಭೂಮಂಡಲಕ್ಕೆ ದೇವೇಂದ್ರನಂತಿರುವನು. (ಅಥವಾ ಈ ಶಿವಪೂಜಕನನ್ನು ಮರ್ತ್ಯಲೋಕದ ದೇವೇಂದ್ರನೆಂದೇ ಹೇಳಬಹುದು) ಅತ್ಯಂತ ಪ್ರಚಂಡವಾದ ಮಹಾಪಾಪಗಳೆಂಬ ಪರ್ವತಗಳನ್ನು ನಾಶಪಡಿಸುವುದರಲ್ಲಿ ಇವನು ವಜ್ರಾಯುಧಕ್ಕೆ ಸಮಾನನು. ಶಿವನ ಪದಕಮಲವನ್ನಾರಾಧನೆ ಮಾಡುವವರಿಗೆ ಇದೊಂದು ಏನು ಮಹಾ ಆಶ್ಚರ್ಯವೇ ! ಮಹಾಪಾಪಗಳೆಂಬ ವನಕ್ಕೆ ಕಾಡುಗಿಚ್ಚಿನಂತಿರುವ ಈ ಶಿವಪಾದಸೇವಾಧುರಂಧರನು, ಸಕಲಜನಗಳಿಗೂ ಆನಂದವನ್ನುಂಟುಮಾಡುವನು. ॥೧೧॥

ಈ ಶಿವಪೂಜಾಪರಾಯಣನು ತಾನು ಮಾಡಿದ ಶಿವನ ಅಡಿದಾವರೆಗಳ ಸೇವೆಯಿಂದ ಈಗ ಆ ಪರಮೇಶ್ವರನ ಮಂದಿರಕ್ಕೆ ತೆರಳುತ್ತಿರುವನು. ಈ ಮಹಾನುಭಾವನನ್ನು ಇಲ್ಲಿಯೇ ದರ್ಶನಮಾಡುವುದರಿಂದ ಅಪಾರವಾದ ಪುಣ್ಯರಾಶಿಯುಂಟಾಗುವುದು. ಶಿವಪೂಜಾನಿರತರಾದ ಜನರಿಗೆ ಇಂತಹ ಪ್ರೀತಿಪಾತ್ರವಾದ ಶಿವಭಕ್ತನೆಂಬ ಚಂದ್ರನು ಉದಯವಾದುದರಿಂದ ಸುಖವೆಂಬ ಸಮುದ್ರವು ಸಂತೋಷದಿಂದ

ಸ ಕಿಂ ಮಮ ಸಖಾ ಪಿತಾ ಕಿಮುತ ಸೋದರೋ ವಾ ಹಿತಃ
ಪ್ರಯಾತಿ ಶಿವಪೂಜಕಃ ಸಕೃದಪೇಕ್ಷಿತೋ ವಾ ಸುಖಂ ।
ಪ್ರಯಚ್ಛತಿ ಕಥಂ ಸುರಪ್ರವರಶಂಕರಾರಾಧಕಃ
ಕಲಾವಮರಭೂರುಹೋ ಭವತಿ ದುರ್ಲಭೋ ದುರ್ಲಭಃ ॥೧೩॥

ಅನೇನ ಜನನೋತ್ತರಂ ಶಿವಪದಾಂಬುಜಾರಾಧನಾ
ದವಾಪ್ತಮತುಲಂ ಜಗದ್ಭವತಿ ಭಾಗ್ಯಮಾನಂದದಂ ।
ಸ ತೇನ ಶಿವಪೂಜನಂ ಪುನರಪಾರಭಾಗ್ಯಪ್ರದಂ
ಚಕಾರ ಜಗತೀತಲಂ ಸಕಲಮೇವ ತಲ್ಲಂಬನಂ ॥೧೪॥

---

ಉಕ್ಕಿಬರುತ್ತಿರುವುದು. ಅಯ್ಯೋ! ಪ್ರಾಣಿಗಳಿಗೆ ಶಿವಪದಕಮಲಗಳ ಪೂಜೆಯು ಎಷ್ಟೋ ಪುಣ್ಯವಿಶೇಷಗಳಿಂದ ಲಭಿಸಬೇಕು. ಅಂತಹುದರಲ್ಲಿ ಈ ದಿವ್ಯವಾದ ತೇಜೋರೂಪವು ಲಭಿಸಬೇಕಾದರೆ ಅದೆಂತಹ ಭಾಗ್ಯ! ॥೧೨॥

ಈ ಮಹಾನುಭಾವನೇನು ನಿಜವಾಗಿಯೂ ನನ್ನ ಸ್ನೇಹಿತನೇ? ತಂದೆಯೇ, ಸೋದರನೇ ಅಥವಾ ನನ್ನ ಬಂಧುವೇ, ಯಾರೂ ಅಲ್ಲ. ಆದರೂ ಸುಮ್ಮನೆ ತನ್ನ ಇಷ್ಟಾನುಸಾರವಾಗಿ ಹೋಗುತ್ತಿರುವ ಈ ಶಿವಪೂಜಕನನ್ನು ಒಂದುಬಾರಿ ದರ್ಶನ ಮಾಡಿದ ಮಾತ್ರದಿಂದಲೇ ಎಂತಹ ಸುಖವುಂಟಾಗುತ್ತಿರುವುದು ? ನಿಜವಾಗಿಯೂ ದೇವತೋತ್ತಮನಾದ ಶಂಕರನ ಸೇವಾನಿರತನಾದ ಭಕ್ತನು ಈ ಕಲಿಯುಗದಲ್ಲಿ ಕಲ್ಪವೃಕ್ಷವೆಂದೇ ನಾನು ತಿಳಿದಿರುವೆನು. ಇಂತಹ ಮಹಾನುಭಾವನು ದೊರೆಯುವುದು ದುರ್ಲಭವಲ್ಲವೆ! ॥೧೩॥

ಈ ಮಹಾನುಭಾವನು ಹುಟ್ಟಿದಮೇಲೆ ಶಿವನ ಪದಕಮಲಗಳನ್ನಾರಾಧಿಸಿ ಅಪಾರವಾದ ಮತ್ತು ಆನಂದಪ್ರದವಾಗಿರುವ ಐಶ್ವರ್ಯವನ್ನು ಜಗತ್ತಿಗೆ ಕೊಟ್ಟನು. ಹಾಗೆಯೇ ಆ ಶಿವಾನುಗ್ರಹದಿಂದ ಲಭಿಸಿದ ಅದೇ ಐಶ್ವರ್ಯವನ್ನು ಪುನಃ ಅದಕ್ಕಿಂತಲೂ ಅತಿಶಯವಾದ ಐಶ್ವರ್ಯವನ್ನು ಕೊಡುವ ಪರಶಿವನ ಪೂಜಾದಿಗಳಿಗೆ ವಿನಿಯೋಗಿಸಿ ಈ ಪ್ರಪಂಚದಲ್ಲಿ ಭಾಗ್ಯಶಾಲಿಯೆನಿಸಿದನು. ಸಕಲ ಪ್ರಪಂಚವೂ ಆ ಪರಶಿವನನ್ನೇ ಆಶ್ರಯಿಸಿರುವುದು. ॥೧೪॥

ಶಿವವ್ರತರತಃ ಸದಾ ಶಿವಕಥಾವಿಚಾರೇ ರತಃ
ಶಿವಪ್ರವಣಮಾನಸಃ ಶಿವಜನಾನುಮೋದಪ್ರಿಯಃ ।
ಶಿವಂ ವದತಿ ಸಂತತಂ ಶಿವಶಿವೇತಿ ನಾಮ ಸ್ಮರನ್
ಶಿವಂ ಭವತಿ ಭಾವಿತಂ ಸುಕೃತರಾಶಿಭಿಃ ಕೇವಲಂ ॥೧೫॥

ಶಿವಂ ಸುರವರಂ ಪರಂ ವದತಿ ಸಾಧು ವೀರೇಶ್ವರಂ
ಶಿವಂ ಭಜತಿ ಚೇತಸಾ ಕಮಲಕುಂದಬಿಲ್ವೀದಲೈಃ ।
ಸಮರ್ಚಯತಿ ಸಾದರಂ ಗಿರಿಕುಮಾರಿಕಾವಲ್ಲಭಂ
ವರಂ ಸ್ವಕುಲದೈವತಂ ಸತತಮೇವ ಮೇನೇ ಮುದಾ ॥೧೬॥

ಶೃಣೋತಿ ಶಿವವಿದ್ಯಯಾ ಪರಮುದಾರಕೀರ್ತಿಂ ಪರಂ
ಮಹೇಶ್ವರಮಹೇಶ್ವರೇತ್ಯಮರಸಾರ್ವಭೌಮಂ ಹೃದಿ ।

---

ಈ ಮಹಾತ್ಮನು ಯಾವಾಗಲೂ ಶಿವವಿಷಯಕವಾದ ವ್ರತಗಳಲ್ಲಿಯೂ, ಶಿವಕಥಾವಿಚಾರಗಳಲ್ಲಿಯೂ ಆಸಕ್ತನಾಗಿರುವನು. ಇವನ ಮನಸ್ಸೆಲ್ಲಾ ಆ ಶಿವನಲ್ಲಿಯೇ ಲೀನವಾಗಿರುವುದು. ಶಿವನ ಭಕ್ತಜನಗಳನ್ನು ಕಂಡರೆ ಇವನಿಗೆ ತುಂಬಾ ಸಂತೋಷವಾಗುವುದು. ಅವರನ್ನು ಪ್ರೀತಿಯಿಂದ ಉಪಚರಿಸುತ್ತಾನೆ. ಯಾವಾಗಲೂ 'ಶಿವ, ಶಿವ' ಎಂಬ ನಾಮವನ್ನೇ ಜಪಿಸುತ್ತಾ, ಶಿವಸಂಬಂಧವಾದ ಸಮಾಚಾರಗಳನ್ನೇ ಹೇಳುತ್ತಿರುವನು. ಅನೇಕ ಸುಕೃತರಾಶಿಗಳಿಂದ ಈ ಶಿವನಾಮಸ್ಮರಣೆ ಮತ್ತು ಪೂಜಾದಿಗಳು ಲಭಿಸಬೇಕೇ ಹೊರತು, ಸುಮ್ಮನೇ ಎಂದಿಗೂ ಬರಲಾರದು. ॥೧೫॥

ದೇವತೋತ್ತಮನೂ, ವೀರಾಗ್ರೇಸರನೂ, ಸರ್ವಶ್ರೇಷ್ಠನೂ ಆದ ಪರಶಿವನನ್ನು ಯಾವಾಗಲೂ ಒಳ್ಳೆಯ ಮನಸ್ಸಿನಿಂದ ಇವನು ಧ್ಯಾನಮಾಡುತ್ತಾನೆ. ಪರಿಶುದ್ಧವಾದ ಮನಸ್ಸಿನಿಂದ, ತಾವರೆ, ಕುಂದಪುಷ್ಪ ಮತ್ತು ಬಿಲ್ವಪತ್ರೆಯ ದಳಗಳು ಇವುಗಳನ್ನು ತಂದು ಶಿವನನ್ನು ಪೂಜಿಸುತ್ತಾ ಆದರಿಂದ ಗಿರಿಜಾರಮಣನಾದ ಪರಮೇಶ್ವರನನ್ನು ಸೇವಿಸುತ್ತಾನೆ. ಈ ಮಹಾನುಭಾವನು ಈ ಗಿರಿಜಾರಮಣನನ್ನೇ ಯಾವಾಗಲೂ ತನ್ನ ಕುಲದೇವತೆಯೆಂದು ಪ್ರೀತಿಯಿಂದ ನಂಬಿರುವನು. ॥೧೬॥

ಮಹೇಶ್ವರ, ಮಹೇಶ್ವರ, ಎಂದು ಹೃದಯಕಮಲದಲ್ಲಿ ಸದಾ ಸ್ಮರಿಸುತ್ತಾ, ಶಿವವಿದ್ಯಾಪ್ರಭಾವದಿಂದ ಪರಮೇಶ್ವರನು ಉದಾರವಾದ ಕೀರ್ತಿಯುಳ್ಳವನೆಂದು ತಿಳಿದು

ವಿಚಿಂತ್ಯ ಪುನರಾದರಾತ್ಕನಕಕೇತಕೀಚಂಪಕೈಃ
ಕರೋತಿ ವಿಕಟಾರ್ಚನಂ ಸಮಭಿಪೂಜ್ಯ ವೀರೇಶ್ವರಂ ॥೧೭॥

ಅಪಾರಜಲಧಾರಯಾ ಶಿರಸಿ ಚೈವ ವೀರೇಶ್ವರೇ
ಚಕಾರ ಸುಮುಖಂ ಮುಹುಃ ಸ ಖಲು ಕಾಲಕಾಲಾರ್ಚನೇ ।
ಚಕಾರ ಕರಣಂ ವಯೋ ವಿರತ ಏವ ಸಂಸಾರತೋ
ಯುವಾಪಿ ಯುವತೀಂ ವಧೂಮಪಿ ವಿಹಾಯ ತನ್ಮಾತರಿ ॥೧೮॥

ಯದೇವ ಧನಮರ್ಜಿತಂ ವಿವಿಧಶಾಸ್ತ್ರವಿದ್ಯಾತ್ಮಕಂ
ತದಪ್ಯಗಸುತಾಪತಿಸ್ಮರಣಕಾರಣಂ ಕೇವಲಂ ।
ಮನೋಽಪಿ ಶಿವಪೂಜಯಾ ಪರಮಪಾವನಂ ತಸ್ಯ ವೈ
ಪ್ರಯಾತಿ ಶಿವಮಂದಿರಂ ಸುರಕೃತಾರ್ಯಡಿಂಡೀರವೈಃ ॥೧೯॥

ನ ತೇನ ಸುಖಸಾಧನಂ ಶಿವಪದಾಂಬುಜಾರಾಧನಾ
ದ್ವಿಭಿನ್ನಮಪಿ ನಿರ್ಮಿತಂ ನಿಯಮತೋಽಭವಾ ನಿಶ್ಚಿತಂ ।

---

ಈ ಮಹಾನುಭಾವನು, ಪುನಃ ಆದರಪೂರ್ವಕವಾಗಿ, ಸುವರ್ಣದ ಕೇದಿಗೆ ಮತ್ತು ಸಂಪಿಗೆ ಹೂಗಳಿಂದ ಈ ಮಹಾದೇವನನ್ನು ವಿಶೇಷವಾಗಿ ಪೂಜೆಮಾಡಿರುವನು. ವೀರೇಶ್ವರನೆನಿಸಿದ ಪರಶಿವನನ್ನು ಪೂಜೆಮಾಡಿದ ನಂತರ ಅತ್ಯುತ್ಸಾಹದಿಂದ ಪರಶಿವನನ್ನು ಮನಸಾಧ್ಯಾನಮಾಡಿರುವನು. ॥೧೭॥

ವೀರೇಶ್ವರನೆನಿಸಿದ ಈ ಮಹಾದೇವನ ತಲೆಯ ಮೇಲೆ ಈ ಮಹಾತ್ಮನು ಅಪಾರವಾದ ಶುದ್ಧೋದಕವನ್ನು ಧಾರಾಕಾರವಾಗಿ ಸುರಿದು ಅಭಿಷೇಕಮಾಡಿ, ಆ ಪರಶಿವನು ಹಸನ್ಮುಖಿಯಾಗುವಂತೆ ಮಾಡಿರುವನು. ಕಾಲಾಂತಕನೆನಿಸಿದ ಪರಶಿವನ ಪೂಜೆಯಲ್ಲಿಯೇ ಯಾವಾಗಲೂ ನಿರತನಾಗಿ, ತಾನು ಯುವಕನಾಗಿದ್ದರೂ ತನಗೆ ಅನುರೂಪಳೂ ಯುವತಿಯೂ ಆಗಿರುವ ಧರ್ಮಪತ್ನಿಯಿದ್ದರೂ ಆ ಸಂಸಾರ ವಿಷಯದಲ್ಲಿ ವಿರಕ್ತನಾಗಿ, ತನ್ನ ಪತ್ನಿಯನ್ನು ತಾಯಿಯ ಸಮೀಪದಲ್ಲಿಯೇ ಬಿಟ್ಟು, ತನ್ನ ಜೀವಿತವನ್ನೆಲ್ಲಾ ಈ ಪರಶಿವನ ಪೂಜೆಯಲ್ಲಿಯೇ ಕಳೆಯುತ್ತಿದ್ದನು. ॥೧೮॥

ಈ ಮಹಾತ್ಮನು ಸಂಪಾದಿಸಿರುವ ನಾನಾಶಾಸ್ತ್ರಜ್ಞಾನಸ್ವರೂಪವಾದ ವಿದ್ಯೆಯೆಲ್ಲವೂ ಕೇವಲ ನಗರಾಜಪುತ್ರಿಯಾದ ಪಾರ್ವತೀದೇವಿಯ ರಮಣನೆನಿಸಿದ

ತದೇವ ಸಕಲಾರ್ಥದಂ ಪರಮುಮುಕ್ತಿದಾನಕ್ಷಮಂ
ನ ಹಾತುಮಪಿ ವಾಂಛತಿ ಪ್ರಬಲಸಂಕಟೇಽಪಿ ಧ್ರುವಂ ॥೨೦॥

ಇತಿ ತದ್ವಚನಂ ಶ್ರುತ್ವಾ ಸ ರಾಜಾ ವಿಸ್ಮಯಂ ಗತಃ ।
ತಮುವಾಚ ಮಹಾತ್ಮಾನಂ ಶಂಕರಾರಾಧನಪ್ರಿಯಂ ॥೨೧॥

ದಯಾಲುರಸಿ ಧರ್ಮಾತ್ಮಾ ದೀನವತ್ಸಲ ಸಂತತಂ ।
ಏನಾಮುದ್ಧರ ಸಂಸಾರಾನ್ಮೂರ್ಛಿತಾಂ ಶಿವವಿದ್ಯಯಾ ॥೨೨॥

॥ ಸತ್ಯವ್ರತ ಉವಾಚ ॥

ಪಶ್ಯ ಭೂತಿಪ್ರಭಾಯುಕ್ತಾಂ ರುದ್ರಾಕ್ಷಸಮಲಂಕೃತಾಂ ।
ಶಿವಾರ್ಚನಪರಾಮೇನಾಮನುತಾಪಸಮನ್ವಿತಾಂ ॥೨೩॥

---

ಪರಮೇಶ್ವರನ ಸ್ಮರಣೆಗೆ ಕಾರಣವಾಗಿರುವುದು. ಸದಾ ಶಿವಪೂಜಾಕರ್ಮದಿಂದ ಈತನ ಮನಸ್ಸು ಪವಿತ್ರವಾಗಿರುವುದು. ಇಂತಹ ಪರಮ ಪವಿತ್ರಸ್ವರೂಪನಾದ ಶಿವಭಕ್ತನು ದೇವತೆಗಳ ಡಿಂಡಿಮಘೋಷಗಳೊಡನೆ ಶಿವಮಂದಿರಕ್ಕೆ ಪ್ರಯಾಣ ಮಾಡುತ್ತಿರುವನು. ॥೧೯॥

ಶಿವಪಾದಕಮಲಗಳ ಸೇವೆಯನ್ನು ಬಿಟ್ಟು ಬೇರೆ ಯಾವುದನ್ನೂ ಈ ಮಹಾನುಭಾವನು ಧರ್ಮವೆಂದೂ, ತನ್ನ ಸುಖಸಾಧನವೆಂದೂ ನಿಶ್ಚಯವಾಗಿಯೂ ಭಾವಿಸಿಲ್ಲ. ಈ ಪರಶಿವನ ಪಾದಸೇವೆಯೇ ಸಕಲ ಇಷ್ಟಾರ್ಥಗಳನ್ನೂ ಕೊಡ ತಕ್ಕುದು. ಇದೇ ಶ್ರೇಷ್ಠವಾದ ಮೋಕ್ಷಪ್ರಾಪ್ತಿಗೂ ಸಾಧನವು ಎಂದು ನಿಶ್ಚಯಿಸಿ ಈ ಮಹಾತ್ಮನು ಎಂತಹ ಪರಮ ವಿಪತ್ಕಾಲದಲ್ಲಿಯೂ ಸಹ ಇದನ್ನು ಬಿಡಲು ಅಪೇಕ್ಷೆಪಡುವುದಿಲ್ಲ. ಇದರಲ್ಲಿ ಯಾವ ಸಂದೇಹವೂ ಇಲ್ಲ." ॥೨೦॥

ಸನಂದನ ಮಹರ್ಷಿಯ ಈ ನುಡಿಗಳನ್ನು ಕೇಳಿ ಆ ಸತ್ಯವ್ರತಮಹಾ ರಾಜನು ಬಹಳವಾಗಿ ಆಶ್ಚರ್ಯಗೊಂಡನು. ಅನಂತರ ಮಹಾತ್ಮನೂ, ಶಂಕರನ ಪೂಜೆಯಲ್ಲಿ ಪ್ರೀತಿಯುಳ್ಳವನೂ ಆದ ಆ ಸನಂದನ ಮುನಿಯನ್ನು ಕುರಿತು ರಾಜನು ಮತ್ತೆ ಇಂತೆಂದನು. ॥೨೧॥

"ಧರ್ಮಾತ್ಮನಾದ ಸನಂದನಮುನಿಯೇ, ನೀನು ದಯಾಮಯನು. ನಿನ್ನನ್ನು ಯಾವಾಗಲೂ ದೀನವತ್ಸಲನೆಂದು ಕರೆಯುತ್ತಾರೆ. ಎಲೈ ಮಹಾತ್ಮನೇ,

ಇತಿ ತದ್ವಚನಂ ಶ್ರುತ್ವಾ ಸ ತಾಂ ಪಸ್ಪರ್ಶ ಭಸ್ಮನಾ ।
ಆಲಿಪ್ಯಾಂಗಂ ಪುನಃ ಸಾಪಿ ಸಂಜ್ಞಾಂ ಪ್ರಾಪ ವಿಶೇಷತಃ ॥೨೪॥

ತತಃ ಪ್ರಣಮ್ಯ ಸಾ ರಾಜ್ಞೀ ರಾಜಾನಂ ಚ ಸನಂದನಂ ।
ಆನಮ್ರವದನಾಮಂದಮುವಾಚ ಚತುರಂ ವಚಃ ॥೨೫॥

॥ ರಾಜ್ಞ್ಯುವಾಚ ॥

ಭವದ್ದರ್ಶನಮಾತ್ರೇಣ ಕೃತಕೃತ್ಯಾಸ್ಮಿ ಯದ್ಯಪಿ ।
ತಥಾಪಿ ಶಿವವಿದ್ಯಾ ಮೇ ದೇಯಾ ಮೇ ಮುಕ್ತಿಸಾಧನಂ ॥೨೬॥

---

ಅಜ್ಞಾನಿಯಾಗಿ ಮೂರ್ಛೆ ಹೊಂದಿರುವ ಈ ರಾಣಿಯನ್ನು ನಿನ್ನ ಶಿವವಿದ್ಯಾಮಹಿಮೆಯಿಂದ ಎಚ್ಚರಗೊಳಿಸಿ ಈ ಸಂಸಾರಕ್ಲೇಶದಿಂದುದ್ಧರಿಸುವನಾಗು. ॥೨೨॥

ವಿಭೂತಿಯ ಕಾಂತಿಯಿಂದ ಶೋಭಿಸುತ್ತಾ, ರುದ್ರಾಕ್ಷಮಾಲೆಗಳಿಂದಲಂಕೃತಳಾಗಿರುವ ಇವಳನ್ನು ನೋಡು. ಶಿವಪೂಜಾನಿರತಳಾಗಿದ್ದ ಈ ರಾಣಿಯು ಇಂತಹ ಮೂರ್ಛಾರೂಪವಾದ ದುಃಖಕ್ಕೊಳಗಾಗಿರುವಳು. ದಯೆಯಿಟ್ಟು ಇವಳನ್ನು ಉದ್ಧಾರಮಾಡಬೇಕು " ಎಂದು ಸತ್ಯವ್ರತನು ಸನಂದನನ್ನು ಮತ್ತೆ ಪ್ರಾರ್ಥಿಸಿದನು. ॥೨೩॥

ಆ ಸತ್ಯವ್ರತನ ಮಾತುಗಳನ್ನು ಕೇಳಿ ಸನಂದನನು ಆ ರಾಣಿಯ ಅವಯವಗಳಿಗೆಲ್ಲಾ ಭಸ್ಮವನ್ನು ಲೇಪನಮಾಡಿ ಅವಳನ್ನು ಒಂದು ಸಲ ಸ್ಪರ್ಶಮಾಡಿದನು. ಕೂಡಲೇ ಆ ರಾಣಿಯು ವಿಶೇಷವಾದ ಪ್ರಜ್ಞೆಯನ್ನು ಹೊಂದಿ ಎಚ್ಚೆತ್ತು ಕುಳಿತುಕೊಂಡಳು. ॥೨೪॥

ಅನಂತರ ಆ ರಾಣಿಯು ರಾಜನನ್ನೂ ಮತ್ತು ಸನಂದನ ಮುನಿಯನ್ನೂ ವಂದಿಸಿ, ಮುಖವನ್ನು ತಗ್ಗಿಸಿಕೊಂಡು ವಿನಯದಿಂದ ಈರೀತಿ ಚಮತ್ಕಾರವಾಗಿ ಮಾತನಾಡಿದಳು. ॥೨೫॥

" ಪೂಜ್ಯರೇ, ನಿಮ್ಮ ದರ್ಶನಮಾತ್ರದಿಂದಲೇ ನಾನು ಕೃತಕೃತ್ಯಳಾದೆನು. ಆದರೂ ತಾವು ದಯೆಯಿಟ್ಟು ನನಗೆ ಶಿವವಿದ್ಯೆಯನ್ನುಪದೇಶಮಾಡಬೇಕು. ಅದೇ ನನಗೆ ಮೋಕ್ಷಸಾಧನವಾದುದೆಂದು ನಾನು ಈಗ ತಿಳಿದಿರುವೆನು. ॥೨೬॥

ತಯೈವ ಜೀವನಂ ಧನ್ಯಂ ಭವಿಷ್ಯತಿ ಮಮಪ್ರಾಘುನಾ ।
ಸಾ ವಿದ್ಯಾ ಪರಮಾ ವಿದ್ಯಾ ಶ್ರುತಾಪ್ಯಘವಿನಾಶಿನೀ ॥೨೭॥

ಕನ್ಯಕಾಯಾಂ ಯಥಾ ಪ್ರೀತಾ ಕರೋತಿ ಜನಕಸ್ತಥಾ ।
ಮಯಿ ಪ್ರೀತಿಂ ಕುರು ಸ್ವಾಮಿನ್ನನಾಥಜನಪಾಲಕ ॥೨೮॥

ಇತ್ಯಾಕರ್ಣ್ಯ ವಚಸ್ತಸ್ಯಾಶ್ಚಿತ್ತಂ ಶುದ್ಧಂ ವಿಚಾರ್ಯ ಚ ।
ಶಿವವಿದ್ಯಾಂ ದದೌ ತಸ್ಯೈ ಸ ಕೃಪಾಲುಃ ಸನಾತನಃ ॥೨೯॥

ತತಸ್ತದ್ದೇಹತಃ ಪಾಪಾನ್ಯಪಾರಾಣ್ಯುರಗಾಕೃತಿಂ ।
ಗೃಹೀತ್ವಾ ನಿರ್ಗತಾನ್ಯಾಶು ಸಾಪಿ ವಿಸ್ಮಯಮಾಗತಾ ॥೩೦॥

ತತಃ ಶಿವಾರ್ಚನಂ ಕೃತ್ವಾ ಗತ್ವಾ ನಗರಮಾತ್ಮನಃ ।
ರಾಜ್ಞಾಪಿ ಗುರುಣಾ ತೇನಾಪ್ಯಾಪರಾಪನುಮೋದಿತಾ ॥೩೧॥

---

ಆ ಶಿವವಿದ್ಯೆಯಿಂದಲೇ ನನ್ನ ಬಾಳು ಧನ್ಯವಾಗುವುದು. ಪರಮಶ್ರೇಷ್ಠವಾದ ಈ ಶಿವವಿದ್ಯೆಯನ್ನು ಶ್ರವಣಮಾಡಿದ ಮಾತ್ರದಿಂದಲೇ ಸಕಲ ಪಾಪಗಳು ನಾಶವಾಗುವುವು. ॥೨೭॥

ಎಲೈ ಅನಾಥರಕ್ಷಕನಾದ ಸ್ವಾಮಿಯೇ, ತಂದೆಯು ತನ್ನ ಮಗಳಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟು ಸಲಹುವಂತೆ ನನ್ನಲ್ಲಿ ಪ್ರೀತಿಯಿಟ್ಟು ನನ್ನನ್ನುದ್ಧಾರ ಮಾಡಬೇಕು.'' ॥೨೮॥

ಈ ರೀತಿಯಾದ ಆ ರಾಣಿಯ ಮಾತುಗಳನ್ನು ಕೇಳಿ ದಯಾಳುವೂ ಸನಾತನನೂ ಆದ ಆ ಸನಂದನ ಮುನಿಯು ಅವಳ ಮನಸ್ಸು ಪರಿಶುದ್ಧವಾಗಿರುವುದೆಂದು ಪರೀಕ್ಷೆಮಾಡಿದನಂತರ ಆ ರಾಣಿಗೆ ಶಿವಪಂಚಾಕ್ಷರೀವಿದ್ಯೆಯನ್ನುಪದೇಶಮಾಡಿದನು. ॥೨೯॥

ಸನಂದನನು ಆ ರಾಣಿಗೆ ಶಿವಪಂಚಾಕ್ಷರೀ ವಿದ್ಯೆಯನ್ನುಪದೇಶಮಾಡಿದ ಮೇಲೆ ಆ ರಾಣಿಯ ಶರೀರದಿಂದ ಅವಳಲ್ಲಡಗಿದ್ದ ಪಾಪಗಳೆಲ್ಲವೂ ಸರ್ಪಾಕೃತಿಯನ್ನು ಹೊಂದಿ ಜಾಗ್ರತೆಯಾಗಿ ಶರೀರದಿಂದ ಹೊರಹೊರಟವು. ಇದನ್ನು ನೋಡಿ ಆ ರಾಣಿಯೂ ಸಹ ತುಂಬಾ ಆಶ್ಚರ್ಯಭರಿತಳಾದಳು. ॥೩೦॥

ಅನಂತರ ಶಿವನನ್ನು ಪೂಜಿಸಿ, ರಾಜನಿಂದಲೂ ತನ್ನ ಗುರುವಾದ ಸನಂದ

ತತಃ ಪ್ರವಿಷ್ಟಾ ನಗರಂ ಸಾ ರಾಜ್ಞೀ ಧನಪರ್ವತಾನ್ ।
ರತ್ನೋಚ್ಚಯಾನಪಾರಾಂಶ್ಚ ದರ್ಶಯಾಮಾಸ ಕೋಟಿಶಃ ॥೩೨॥

ತತಸ್ತೇನ ಧನೇನೈವ ಕಾರಯಾಮಾಸ ಶಾಂಕರಂ ।
ಮಂದಿರಂ ಸುಂದರಂ ರತ್ನೈರ್ಭೂಷಿತಂ ಚ ವಿಶೇಷತಃ ॥೩೩॥

ರತ್ನಪ್ರಾಸಾದಕರಣೈಃ ಸ್ವರ್ಣಗೋಪುರವರ್ಧನೈಃ ।
ಸುವರ್ಣರಸನಿರ್ಮಾಣೈಃ ಸಾ ಚಕಾರ ಶಿವೋತ್ಸವಂ ॥೩೪॥

ಪ್ರತ್ಯಹಂ ಶಿವಪೂಜಾಯಾಂ ನಿರತಾ ರತ್ನಭೂಷಣೈಃ ।
ಪೂಜಯಾಮಾಸ ಗಿರಿಶಮಹರ್ನಿಶಮತಂದ್ರಿತಾ ॥೩೫॥

ಪಂಚಾಮೃತಾಭಿಷೇಕಾದ್ಯೈರುಪಚಾರೈರ್ಮನೋಹರೈಃ ।
ಅಪಾರರತ್ನದೀಪೈಶ್ಚ ಪೂಜಯಾಮಾಸ ಶಂಕರಂ ॥೩೬॥

---

ನಮಹರ್ಷಿಯಿಂದಲೂ ಅನುಮೋದಿಸಲ್ಪಟ್ಟವಳಾಗಿ, ತನ್ನ ಪಟ್ಟಣಕ್ಕೆ ಹೊರಟಳು. ॥೩೧॥

ಮುಂದೆ ತನ್ನ ಪಟ್ಟಣವನ್ನು ಪ್ರವೇಶಿಸಿ, ಅಲ್ಲಿ ಪರ್ವತಕ್ಕೆ ಸಮಾನವಾಗಿ ಬಿದ್ದಿರುವ ದ್ರವ್ಯವನ್ನೂ, ಅಪಾರವಾದ ರತ್ನಸಮೃದ್ಧಿಯನ್ನೂ ಆ ರಾಣಿಯು ಕಂಡಳು. ॥೩೨॥

ಆ ಮೇಲೆ ಪರಮೇಶ್ವರನ ಅನುಗ್ರಹದಿಂದ ಲಬ್ಧವಾಗಿರುವ ಆ ದ್ರವ್ಯರಾಶಿಯಿಂದಲೇ ಸುಂದರವಾದ ಒಂದು ಶಂಕರನ ದೇವಾಲಯವನ್ನು ಕಟ್ಟಿಸಿ, ವಿಶೇಷವಾಗಿ ಅದಕ್ಕೆ ರತ್ನಗಳಿಂದ ಅಲಂಕಾರಮಾಡಿಸಿದಳು. ॥೩೩॥

ರತ್ನಮಯವಾದ ಪ್ರಾಸಾದಗಳನ್ನೂ ಸುವರ್ಣದ ದೊಡ್ಡ ದೊಡ್ಡ ಗೋಪುರಗಳನ್ನೂ, ಚಿನ್ನದ ರಸಲೇಪಿತವಾದ ಇತರ ವಸ್ತುಜಾಲಗಳನ್ನೂ ಆ ದೇವಾಲಯಕ್ಕೆ ಮಾಡಿಸಿ ವಿಜೃಂಭಣೆಯಿಂದ ಶಿವೋತ್ಸವವನ್ನು ನಡೆಸಿದಳು. ॥೩೪॥

ಪ್ರತಿನಿತ್ಯವೂ ತಪ್ಪದೆ ಶಿವಪೂಜಾನಿರತಳಾಗಿ ಹಗಲು ಮತ್ತು ರಾತ್ರಿಗಳಲ್ಲೂ ಸಹ ಜುಗುಪ್ಸೆಯಿಲ್ಲದೆ ಆ ಪರಮೇಶ್ವರನನ್ನು ಪೂಜಿಸಿದಳು. ॥೩೫॥

ಅಲ್ಲದೆ ಪ್ರತಿದಿನವೂ ಪಂಚಾಮೃತಾಭಿಷೇಕವನ್ನು ಮಾಡಿ, ಮನೋಹರವಾದ ಉಪಚಾರಗಳಿಂದಲೂ, ಅಪಾರವಾದ ರತ್ನದೀಪಗಳಿಂದಲೂ ಸಹ ಲೋಕಮಂಗಳಕರನಾದ ಮಹಾದೇವನನ್ನು ಪೂಜಿಸಲಾರಂಭಿಸಿದಳು. ॥೩೬॥

ಸಾಯಂಕಾಲೇ ಸಮಭ್ಯರ್ಚ್ಯ ಸಾ ಶಿವಾಂ ರುದ್ರವೀಣಯಾ ।
ಪ್ರೀಣಯಾಮಾಸ ಗಾನೇನ ನಾಟ್ಯೇನ ಚ ಮುಹುರ್ಮುಹುಃ ॥೩೭॥

ತಾಂ ವಿಲೋಕ್ಯ ಸ ರಾಜಾಪಿ ಶಿವಪೂಜನತತ್ಪರಾಂ ।
ಸಂತುಷ್ಟಂ ಪ್ರಾಹ ಸ ಮುನಿಂ ಶಿವಾಲೋಕನತತ್ಪರಂ ॥೩೮॥

ಪಶ್ಯ ಪಶ್ಯ ಮುನಿಶ್ರೇಷ್ಠ ರಾಜ್ಞೀಂ ಶಿವಪರಾಯಣಾಂ ।
ಸ್ತ್ರೀಣಾಮೇತಾದೃಶೀ ಬುದ್ಧಿರ್ದುರ್ಲಭಾ ಖಲು ವಸ್ತುತಃ ॥೩೯॥

ಕಾಮಾತುರಾ ಹಿ ತರುಣೀ ರಮಣಂ ಸಮಪೇಕ್ಷತೇ ।
ಸೋಽಪಿ ತಾಂ ರಮಣೀಂ ಪ್ರಾಪ್ಯ ನ ಮುಂಚತಿ ವಿಶೇಷತಃ ॥೪೦॥

॥ ಸತ್ಯವ್ರತ ಉವಾಚ ॥

ರಮಣೀ ನಿಸ್ಪೃಹಾ ಸೇಯಂ ನಿಸ್ಪೃಹಾ ಭೂಷಣೇಷ್ವಪಿ ।
ಆಹಾರಮಾತ್ರವಿರತಾ ಕರೋತಿ ಶಿವಪೂಜನಂ ॥೪೧॥

---

ಪ್ರದೋಷಕಾಲದಲ್ಲಿ ಪರಶಿವನನ್ನು ಪೂಜೆಮಾಡಿ, ಆ ರಾಣಿಯು ರುದ್ರ ವೀಣೆಯನ್ನು ಹಿಡಿದು ಮನೋಹರವಾದ ಗಾನದಿಂದಲೂ ಮತ್ತು ನರ್ತನದಿಂದಲೂ ಪದೇ ಪದೇ ಆ ಪರಮೇಶ್ವರನಿಗೆ ಸಂತೋಷವನ್ನುಂಟುಮಾಡಿದಳು. ॥೩೭॥

ಆ ರಾಜನು (ಸತ್ಯವ್ರತನು) ಯಾವಾಗಲೂ ಶಿವಪೂಜಾನಿರತಳಾಗಿರುವ ರಾಣಿಯನ್ನು ನೋಡಿ ಸಂತೋಷಹೊಂದಿ, ಆ ಪರಶಿವನನ್ನೇ ಎಡಬಿಡದೆ ನೋಡುತ್ತಿದ್ದ ಸನಂದನ ಮುನಿಯನ್ನು ಕುರಿತು ಇಂತೆಂದನು. ॥೩೮॥

"ಓ ಮುನಿಪುಂಗವನೇ, ಶಿವಪೂಜಾಪರಾಯಣಳಾಗಿ ಸದಾ ಶಿವಧ್ಯಾನ ತತ್ಪರಳಾಗಿರುವ ಈ ರಾಣಿಯನ್ನು ನೋಡು. ಸ್ವಭಾವವಾಗಿ ಸ್ತ್ರೀಯರಿಗೆ ಈ ರೀತಿಯಾದ ಬುದ್ಧಿಯುಂಟಾಗುವುದು ಬಹು ವಿರಳ. ನಾರಿಯರು ಯಾವಾಗಲೂ ಕಾಮಾತುರರಾಗಿ ತಮ್ಮ ಪತಿಯರನ್ನು ವಿಹಾರಕ್ಕೋಸ್ಕರ ಅಪೇಕ್ಷಿಸುವರು. ಅವರ ಪತಿಯೂ ಸಹ, ಯುವತಿಯೂ ರತಿಕ್ರೀಡಾಲಾಲಸಳೂ ಆದ ಅಂತಹ ಪತ್ನಿಯನ್ನು ಹೊಂದಿ ವಿಶೇಷವಾಗಿ ಅವಳೊಡನೆ ವಿಹರಿಸುವನೇ ಹೊರತು ಶಿವಭಕ್ತಿಯುತನಾಗಿರಲಾರನು. ॥೪೦॥

ಈ ರಾಣಿಯಾದರೋ ತನ್ನ ಪತಿಯಿಂದ ಯಾವ ವಿಧವಾದ ಅಪೇಕ್ಷೆಯನ್ನೂ ಹೊಂದದೆ ನಿಸ್ಪೃಹಳಾಗಿರುವಳು. ಒಡವೆ ವಸ್ತುಗಳಲ್ಲಿ ಇವಳಿಗೆ ಯಾವ ಆಸೆಯೂ

ರತ್ನಪ್ರಾಸಾದವಾಂಛಾಪಿ ನಾಸ್ಯಾಃ ಶಂಕರಮಂದಿರೇ ।
ವಾಂಛಾ ಪರಾ ಸಮುತ್ಪನ್ನಾ ಶಂಕರಾರಾಧನೇಷ್ವಪಿ ॥೪೨॥

ಶಿವಪ್ರಭಾವೋ ವಿದಿತೋ ನ ಕೇನಾ
ಪ್ಯೇಷಾಪಿ ವಿಶ್ವೇಶಪದಾರ್ಚನೇಷು ।
ಆಸ್ಥಾಮುವಾಪಾಸ್ಯಾಶು ಕರೋತಿ ಪೂಜಾಂ
ಮುಕ್ತ್ಯರ್ಥಮೇವೇತಿ ಮತಿರ್ಮಮಾಭೂತ್ ॥೪೩॥

ಕೇಯಂ ಪೂರ್ವಭವೇ ವಿದ್ವನ್ನಿಮಸ್ಯಾಃ ಸುಕೃತಂ ವದ ।
ಕೇನ ಪುಣ್ಯಪ್ರಭಾವೇನ ಶಿವಾರ್ಚನರತಾ ಸತೀ ॥೪೪॥

ನಾಭ್ಯಸ್ತಾ ವೇದವಿದ್ಯಾಪಿ ವೇದಾರ್ಥೋ ನ ಶ್ರುತೋಽಪಿ ಹಿ ।
ನ ಶ್ರುತಾನ್ಯಪಿ ಶಾಸ್ತ್ರಾಣಿ ಕಥಂ ವಾ ಶಂಕರೇ ರತಿಃ ॥೪೫॥

---

ಇಲ್ಲವಾಗಿದೆ. ಆಹಾರದಲ್ಲಿಯೂ ವಿರಕ್ತಿಯನ್ನು ಹೊಂದಿ ಕೇವಲ ಶಿವಪೂಜೆಯಲ್ಲಿ ಮಾತ್ರ ವಿಶೇಷಾಸಕ್ತಿಯಿಂದ ಕೂಡಿರುವಳು. ॥೪೧॥

ಶಿವಮಂದಿರದಲ್ಲಿಯೇ ವಾಸಮಾಡುತ್ತಿರುವ ಇವಳಿಗೆ ರತ್ನಮಯವಾದ ಉಪ್ಪರಿಗೆಯ ಮನೆಗಳ ಅಪೇಕ್ಷೆಯೇ ಇಲ್ಲ. ಯಾವಾಗಲೂ ಶಂಕರನ ಪೂಜಾ, ಆರಾಧನ, ಧ್ಯಾನ ಮುಂತಾದವುಗಳಲ್ಲಿಯೇ ಇವಳಿಗೆ ವಿಶೇಷವಾದ ಆಸಕ್ತಿಯೂ ಆಸೆಯೂ ಉಂಟಾಗಿದೆ. ॥೪೨॥

ಆ ಪರಶಿವನ ಮಹಿಮೆಯು ಯಾರಿಗೂ ತಿಳಿಯದು. ಈ ರಾಣಿಯಾದರೋ ಸದಾ ಜಗದೀಶ್ವರನ ಪಾದಸೇವೆಯಲ್ಲಿಯೇ ಶ್ರದ್ಧೆಯನ್ನಿಟ್ಟು ಅವನನ್ನು ಪೂಜೆಮಾಡುತ್ತಿರುವಳು. ಇವಳ ಈ ವಿಧವಾದ ಪೂಜೆಗಳನ್ನು ನೋಡಿದರೆ ಮುಕ್ತಿಯನ್ನು ಹೊಂದುವುದಕ್ಕೋಸ್ಕರವೇ ಎಂದು ನನಗೆ ತೋರುತ್ತಿರುವುದು. ॥೪೩॥

ಎಲೈ ವಿದ್ವಾಂಸನೇ, ಇವಳು ಹಿಂದಿನ ಜನ್ಮದಲ್ಲಿ ಯಾರಾಗಿದ್ದಳು ? ಇವಳು ಮಾಡಿರುವ ಪುಣ್ಯವೇನು ? ಯಾವ ಪುಣ್ಯಮಹಿಮೆಯಿಂದ ಪತಿವ್ರತೆಯಾದ ಇವಳು ಶಿವಪೂಜಾತತ್ಪರಳಾಗಿರುವಳು ? ॥೪೪॥

ಇವಳು ವೇದವಿದ್ಯೆಯನ್ನು ಅಭ್ಯಾಸಮಾಡಿಲ್ಲ. ವೇದಾರ್ಥವನ್ನಾದರೂ ಕೇಳಿಲ್ಲ. ಇವಳಿಗೆ ಯಾವ ಶಾಸ್ತ್ರಶ್ರವಣವೂ ಉಂಟಾಗಿಲ್ಲ. ಹೀಗಿದ್ದರೂ ಈಕೆಗೆ ಈ ರೀತಿಯಾಗಿ ಪರಮೇಶ್ವರನಲ್ಲಿ ಆಸಕ್ತಿಯುಂಟಾಗಲು ಕಾರಣವೇನು ? ॥೪೫॥

ಅಧೀತ್ಯ ವೇದಂ ವೇದಾರ್ಥಂ ಶಾಸ್ತ್ರೈರ್ಜ್ಞಾತ್ವಾ ವಿಶೇಷತಃ ।
ಶಿವಾರ್ಚನರತೋ ಲೋಕೇ ಕೋಽಪಿ ಪುಣ್ಯೈಃ ಪ್ರಜಾಯತೇ ॥೪೬॥

ವೇದಭಾಗಾಶ್ಚ ವಿವಿಧಾಸ್ತತ್ತಾತ್ಪರ್ಯಾವಧಾರಣಂ ।
ಸಾಂಗೈಃ ಶಾಸ್ತ್ರೈರ್ಭವೇತ್ತೇಷಾಂ ತದರ್ಥತತ್ತ್ವಾವಧಾರಣಾತ್ ॥೪೭॥

ಶ್ರುತ್ಯಾದಿಭಿಃ ಪ್ರಮಾಣೈಸ್ತು ವೇದಾರ್ಥೋಽವಧೃತೇ ಸತಿ ।
ಪಶ್ಚಾತ್ತಸ್ಯ ತ್ವದನುಷ್ಠಾನಂ ತಾವತ್ತತ್ಸ್ಯಾತ್ಕಥಂ ವದ ॥೪೮॥

ನ ಕೇವಲೇನ ಲಿಂಗೇನ ಶ್ರುತ್ಯರ್ಥಸ್ಯಾವಧಾರಣಂ ।
ನ ಶ್ರುತ್ಯಾಪಿ ನ ವಾ ವಿದ್ವಾಂಛುದ್ಧಃ ಪ್ರಕರಣೇನ ವಾ ॥೪೯॥

---

ಕ್ರಮವಾಗಿ ವೇದಗಳನ್ನು ಅಧ್ಯಯನಮಾಡಿ, ಇತರ ಶಾಸ್ತ್ರಗಳಿಂದ ಆ ವೇದಾರ್ಥಗಳನ್ನು ಚೆನ್ನಾಗಿ ಅರಿತುಕೊಂಡಿರುವ ಯಾವನೋ ಒಬ್ಬ ಮಾನವನಿಗೆ ಅಸಾಧಾರಣವಾದ ಪುಣ್ಯವಿಶೇಷದಿಂದ ಈ ಲೋಕದಲ್ಲಿ ಶಿವಪೂಜೆಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯುಂಟಾಗುತ್ತದೆ. ಅಂತಹ ಮಹಾತ್ಮನೊಬ್ಬನು ಎಲ್ಲೋ ಅಕಸ್ಮಾತ್ತಾಗಿ ಜನಿಸುವನು. ॥೪೬॥

ವೇದಭಾಗಗಳೋ ಋಗ್ಯಜುಃಸಾಮಾಥರ್ವಣರೂಪವಾಗಿ ಅನೇಕವಿಧವಾಗಿರುವುವು. ಇದರ ತಾತ್ಪರ್ಯವನ್ನರಿಯಬೇಕಾದರೆ ವೇದಾಂಗಗಳು (ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ) ಮತ್ತು ನ್ಯಾಯಾದಿಶಾಸ್ತ್ರಗಳು ಇವುಗಳ ಅರ್ಥಗಳನ್ನು ಚೆನ್ನಾಗಿ ನಿರ್ಧರಿಸಿ ತಿಳಿದುಕೊಳ್ಳಬೇಕು. ॥೪೭॥

ಶ್ರುತಿ, ಲಿಂಗ, ಪ್ರಕರಣ ಇವೇ ಮುಂತಾದ ಪ್ರಮಾಣಗಳಿಂದ ವೇದಾರ್ಥಗಳನ್ನು ಚೆನ್ನಾಗಿ ತಿಳಿದಮೇಲೆ ಅನಂತರ ಆ ವೇದಾರ್ಥಗಳಂತೆ ಅನುಷ್ಠಾನಮಾಡಬೇಕು. ಇವಿಷ್ಟನ್ನೂ ತಿಳಿಯಲು ಹೇಗೆ ಸಾಧ್ಯವಾದೀತು ? ನೀನೇ ಹೇಳು. ?॥೪೮॥

ವೇದಾರ್ಥವನ್ನು ನಿರ್ಣಯಮಾಡಬೇಕಾದರೆ ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ ಮತ್ತು ಸಮಾಖ್ಯಾರೂಪವಾದ ಆರು ಸಹಕಾರಿಕಾರಣಗಳೇರ್ಪಟ್ಟಿರುವುವು. ಈ ಆರು ಪ್ರಮಾಣಗಳಿಂದಲೂ ವೇದಾರ್ಥವನ್ನು ನಿರ್ಣಯಮಾಡಿ ತಿಳಿದುಕೊಳ್ಳಬೇಕೇ ಹೊರತು, ಕೇವಲ ಲಿಂಗಪ್ರಮಾಣ, ಶ್ರುತಿಪ್ರಮಾಣ ಅಥವಾ ಪ್ರಕರಣಪ್ರಮಾಣ ಇವುಗಳಿಂದಲೇ ತಿಳಿಯಲು ಅಸಾಧ್ಯವಾಗುವುದು. ॥೪೯॥

ಸಮಾಖ್ಯಯಾ ನ ವಾಕ್ಯೇನ ಸ್ಥಾನೇನಾಪಿ ವಿಶೇಷತಃ ।
ತೇಷಾಂ ಪರಸ್ಪರಾಕಾಂಕ್ಷಾ ಶ್ರುತ್ಯರ್ಥಸ್ಯಾವಧಾರಣೇ ॥೫೦॥

ಪ್ರಮಾಣಪರಿಪಂಥಿತ್ವಮಪ್ರಮಾಣಸ್ಯ ನಿಶ್ಚಿತಂ ।
ತನ್ನಿರಾಸೋಽಪಿ ತೈರೇವ ಶ್ರುತ್ಯಾದ್ಯೈರವಧಾರ್ಯತೇ ॥೫೧॥

ಮಂತ್ರೋಽಪಿ ವಿವಿಧಾನರ್ಥಾನ್ಪ್ರತಿಪಾದಯಿತುಂ ಕ್ಷಮಃ ।
ಶಬ್ದಶಕ್ತ್ಯಾಯತಸ್ತಸ್ಯ ನ ಯಥೇಷ್ಟಾ ಗತಿಃ ಖಲು ॥೫೨॥

ಶ್ರುತ್ಯಾದ್ಯೈರಂಕುಶಪ್ರಾಯೈರ್ಮಂತ್ರಮತ್ತೇಭಶಿಕ್ಷಣೇ ।
ತನ್ಮಂತ್ರಾರ್ಥಾನುಷ್ಠಾನೇಷ್ವಕ್ಷತಿರ್ನಿರ್ಣಯೇ ಸತಿ ॥೫೩॥

---

ಅಥವಾ ಸಮಾಖ್ಯಾ, ವಾಕ್ಯ ಮತ್ತು ಸ್ಥಾನ, ಈ ಒಂದೊಂದು ಕಾರಣಗಳಿಂದಲೇ ಆದರೂ ನಿರ್ಣಯಮಾಡಲು ಅಸಾಧ್ಯ. ಶ್ರುತ್ಯರ್ಥನಿರ್ಣಯಮಾಡಬೇಕಾದರೆ ಈ ಆರು ಕಾರಣಗಳು ಪರಸ್ಪರವಾಗಿ ಆಕಾಂಕ್ಷೆಯಿಂದ ಯುಕ್ತವಾಗಿರುವುವು. ॥೫೦॥

ವೇದವಾಕ್ಯಗಳಲ್ಲಿ ಪ್ರಮಾಣವಾಕ್ಯಗಳಿಗೆ ಪ್ರತಿಸ್ಪರ್ಧಿಯಾಗಿರುವ ಅರ್ಥರೂಪವಾದ ಅಪ್ರಮಾಣವಾಕ್ಯಗಳೂ ಏರ್ಪಟ್ಟಿರುವುವು. ಇವುಗಳನ್ನೂ ಶ್ರುತ್ಯಾದಿ ಪ್ರಮಾಣಗಳಿಂದಲೇ ನಿವಾರಣೆಮಾಡಿ ಸರಿಯಾದ ಪ್ರಮಾಣವಾಕ್ಯಗಳನ್ನು ನಿರ್ಧರಿಸಬೇಕು. ॥೫೧॥

ಶಬ್ದಶಕ್ತಿಗೆ ಅಧೀನವಾದ ಮಂತ್ರವಾಕ್ಯಗಳಿಂದ ನಾನಾವಿಧವಾದ ಅರ್ಥಗಳು ತೋರುವುವು. ನಾನಾರ್ಥಗಳನ್ನು ತೋರಿಸುವುದೇ ಶಬ್ದದ ಸ್ವಭಾವವಾಗಿರುವುದು. ಆದ್ದರಿಂದ ಒಂದುವೇಳೆ ಬೇರೆ ಬೇರೆ ರೀತಿಯಾಗಿ ವೇದವಾಕ್ಯಗಳಿಗೆ ಅರ್ಥವು ತೋರಿದರೂ ಯುಕ್ತವಾದ ಅರ್ಥವನ್ನು ಸ್ವೀಕರಿಸಬೇಕೆ ಹೊರತು, ವಿಪರೀತಾರ್ಥವನ್ನು ಗ್ರಹಣಮಾಡಬಾರದು. ಅದಕ್ಕೋಸ್ಕರವೇ ಮೀಮಾಂಸಾದಿಶಾಸ್ತ್ರಗಳೇರ್ಪಟ್ಟಿರುವುವು. ।೫೨॥

ಅಂಕುಶಕ್ಕೆ ಸಮಾನವಾದ ಶ್ರುತ್ಯಾದಿಪ್ರಮಾಣಗಳಿಂದ ವೇದಮಂತ್ರಗಳೆಂಬ ಮದಿಸಿದ ಆನೆಗಳನ್ನು ಶಿಕ್ಷಿಸಿ, ಪಳಗಿಸಿದ ಮೇಲೆ ಸಾಧುವಾಗುವ ಗಜಗಳಂತೆ ಆ ವೇದಮಂತ್ರಗಳ ಸರಿಯಾದ ಅರ್ಥದಂತೆ ಅನುಷ್ಠಾನಮಾಡಲು ಯಾವ ತೊಂದರೆಯೂ ಇರುವುದಿಲ್ಲ. ॥೫೩॥

ಕಿಂ ಚ ತನ್ನಿರ್ಣಯಸ್ತಾವನ್ನ ಫಲಂ ಕೇವಲಂ ಖಲು ।
ತದನುಷ್ಠಾನಪರ್ಯಂತಂ ವ್ಯಾಪಾರಃ ಖಲು ನಿಶ್ಚಿತಃ ॥೩೪॥

ತನ್ಮಂತ್ರೈರೇವ ನಿಯತೈಸ್ತತ್ಪ್ರಮಾಣೋಪಬೃಂಹಿತೈಃ ।
ತದರ್ಥಸ್ಫುರಣೇ ಪಶ್ಚಾದನುಷ್ಠಾನಂ ಫಲಾಯ ತತ್ ॥೩೫॥

ತತ್ಫಲಂ ಸೂಕ್ಷ್ಮರೂಪೇಣ ತದಾನೀಮೇವ ಜಾಯತೇ ।
ಅಪೂರ್ವರೂಪಂ ತದ್ರೂಪಮುದ್ಭೂತಿಸ್ತದನಂತರಂ ॥೩೬॥

ಕಾಲಾಂತರೋಪಭೋಗ್ಯಾನಿ ಯಾನಿ ಕರ್ಮಫಲಾನ್ಯಪಿ ।
ತಾನಿ ತಾವದನುಷ್ಠಾನೈಃ ಸಾಂಗೈರಿತಿ ವಿನಿಶ್ಚಯಃ ॥೩೭॥

ತತ್ರಾಧಿಕಾರವಿಜ್ಞಾನೇ ಸತಿ ಕರ್ಮಣಿ ಕೇವಲಂ ।
ಭವತ್ಯಧಿಕೃತಸ್ತೇನ ವಿನಾ ತಸ್ಮೋಪಜಾಯತೇ ॥೩೮॥

---

ಕೇವಲ ವೇದಾರ್ಥನಿರ್ಣಯ ಮಾತ್ರದಿಂದಲೇ ಫಲವುಂಟಾಗುವುದೆಂದು ಹೇಳಲಾಗುವುದಿಲ್ಲ. ಅಥವಾ ನಿರ್ಣೀತವಾದ ಮೇಲೆ ಆ ವೇದಾರ್ಥಕ್ಕನುಗುಣವಾಗಿ ಅನುಷ್ಠಾನಮಾಡುವವರೆಗೂ ಮನುಷ್ಯನ ವ್ಯವಹಾರವು ಎಂದಿನಂತೆ ನಡೆಯಬೇಕು. ॥೩೪॥

ಆಯಾಯಾ ಪ್ರಮಾಣಗಳಿಗನುಗುಣವಾಗಿ ನಿಯಮಿಸಲ್ಪಟ್ಟಿರುವ ವೇದಮಂತ್ರಗಳಿಂದ ಅರ್ಥಜ್ಞಾನವಾದನಂತರ ಸರಿಯಾಗಿ ಅನುಷ್ಠಾನಮಾಡಿದರೆ ಆಗ ನಿಜವಾಗಿ ಫಲವುಂಟಾಗುವುದು. ॥೩೫॥

ಕರ್ಮಾನುಷ್ಠಾನವಾದ ನಂತರ ಆಗಲೇ ಅದರ ಫಲವು ಸೂಕ್ಷ್ಮರೂಪದಿಂದ ಉಂಟಾಗುವುದು. ಆ ಫಲಕ್ಕೆ ಅಪೂರ್ವವೆಂದು ಹೇಳುವರು. ಈ ಅಪೂರ್ವವಾದ ಫಲವು ಮೊದಲು ಹುಟ್ಟಿ ಆಮೇಲೆ ಅದರಿಂದ ಅಧಿಕವಾದ ಫಲವು ಮುಂದೆ ಉಂಟಾಗುವುದು. ॥೩೬॥

ಕಾಲಾಂತರಗಳಲ್ಲಿ ಉಪಯೋಗಿಸಲು ಅರ್ಹವಾದ ಕರ್ಮಾನುಷ್ಠಾನಜನ್ಯವಾದ ಫಲಗಳೂ ಸಹ ಸಾಂಗವಾದ (ಅಂಗಸಮೇತವಾದ) ಕರ್ಮಾನುಷ್ಠಾನದಿಂದಲೇ ಸಾಧ್ಯವೆಂದು ನಿಶ್ಚಯವಾಗಿಯೂ ನಿರ್ಣಯಿಸಲ್ಪಟ್ಟಿದೆ. ॥೩೭॥

ಯಾವ ಕರ್ಮಮಾಡಬೇಕಾದರೂ ಯಾರು ಅಧಿಕಾರಿ, ಯಾರು ಅಧಿಕಾರಿಯಲ್ಲವೆಂದು ಮೊದಲು ನಿಶ್ಚಯಿಸಿದ ಮೇಲೆ ಆ ಅಧಿಕಾರಿಯಿಂದ ಸಾಂಗವಾಗಿ

ಶಾಸ್ತ್ರಾಧೀನಮಿದಂ ಸರ್ವಂ ವಿನಾ ತೇನಾಧುನಾ ಕಥಂ ।
ಜಾಯತೇ ಫಲಮೇತಸ್ಯ ಕಥಂ ಭವತಿ ತದ್ವದ ॥೫೯॥

॥ ಸನಂದನ ಉವಾಚ ॥

ಸತ್ಯಮುಕ್ತಂ ತ್ವಯಾ ರಾಜಂಛಾಸ್ತ್ರಾರ್ಥಃ ಸ ತಥಾವಿಧಃ ।
ತಸ್ಯ ಶಾಸ್ತ್ರಸ್ಯ ಚ ಜ್ಞಾನಂ ಕದಾಚಿತ್ಸಮುಪೇಕ್ಷಿತಂ ॥೬೦॥

ಬಹೂನಿ ಜನ್ಮಾನಿ ಗತಾನಿ ಯೇಷಾಂ
ಶಾಸ್ತ್ರಾರ್ಥವಿಜ್ಞಾನವಿಶಾರದಾನಾಂ ।
ತೇಷಾಮನುಷ್ಠಾನವಿಶೇಷಲಾಭಃ
ಕದಾಪಿ ನಾಸೀದಿತಿ ನಾನುಮೇಯಃ ॥೬೧॥

---

ನೆರವೇರಿಸಲ್ಪಟ್ಟ ಕರ್ಮಗಳು ಮಾತ್ರ ಫಲಜನಕವಾಗುವುವು. ಅಧಿಕಾರವೇ ಇಲ್ಲದೇ ಮಾಡುವ ಕರ್ಮಗಳಿಗೆ ಫಲವುಂಟಾಗಲಾರದು. ||೫೮||

ಎಲೈ ಮುನಿಯೇ, ಈ ಕರ್ಮಾನುಷ್ಠಾನವಿಷಯಗಳೆಲ್ಲ ಶಾಸ್ತ್ರಾಧೀನವಾಗಿರುವುವು. ಯಾವ ಶಾಸ್ತ್ರವನ್ನೂ ಅಧ್ಯಯನಮಾಡದೇ ಈಗ ಇದು ಬರುವ ಬಗೆ ಹೇಗೆ? ಫಲವು ತಾನೇ ಇದಕ್ಕೆ ಹೇಗೆ ಉಂಟಾದೀತು? ಇವೆಲ್ಲವನ್ನೂ ಪರ್ಯಾಲೋಚನೆಮಾಡಿ ನನಗೆ ತಿಳಿಸಬೇಕೆಂದು ಸತ್ಯವ್ರತಮಹಾರಾಜನು ಸನಂದನನ್ನು ಪ್ರಾರ್ಥಿಸಿಕೊಂಡನು. ||೫೯||

ಆಗ ಸನಂದನನು, ಓ ಸತ್ಯವ್ರತರಾಜನೇ, ನೀನು ಹೇಳಿದುದು ಸರಿ. ಶಾಸ್ತ್ರಾರ್ಥವೂ ಹಾಗೆಯೇ ಇರುವುದು. ಕೆಲವುವೇಳೆ ಆ ಶಾಸ್ತ್ರವಿಷಯಕವಾದ ಜ್ಞಾನವನ್ನು ಉಪೇಕ್ಷೆಮಾಡುವ ಪ್ರಸಂಗವೂ ಉಂಟು. ||೬೦||

ಹಿಂದೆ ಶಾಸ್ತ್ರಾರ್ಥಗಳನ್ನು ತಿಳಿದು, ಅತಿ ನಿಪುಣರೆಂದು ಪ್ರಸಿದ್ಧಿಪಡೆದಿದ್ದ ಎಷ್ಟೋ ಮಹನೀಯರು ಅನೇಕ ಜನ್ಮಗಳನ್ನು ಪಡೆಯುವರು. ಅನೇಕ ಜನ್ಮಗಳು ಕಳೆದು ಒಂದು ಜನ್ಮದಲ್ಲಿ ಅವರು ಯಾವ ಶಾಸ್ತ್ರಾರ್ಥವನ್ನು ಅಭ್ಯಾಸಮಾಡದೇ ಹೋದರೂ, ಹಿಂದೆ ಶಾಸ್ತ್ರಾರ್ಥಜ್ಞಾನನಿಪುಣರಾಗಿದ್ದಾಗ ಮಾತ್ರ ಅವರು ಕರ್ಮಾನುಷ್ಠಾನಮಾಡಿಲ್ಲವೆಂದು ಅನುಮಾನಮಾಡಲು ಸಾಧ್ಯವಿಲ್ಲ. ಅಂದರೆ ಈ ಜನ್ಮದಲ್ಲಿ ಅಭ್ಯಾಸಮಾಡದಿದ್ದರೂ ಹಿಂದಿನ ಜನ್ಮಗಳಲ್ಲಿ ತಾವು ಮಾಡಿರುವ ಶಾಸ್ತ್ರಾರ್ಥಾಭ್ಯಾಸ,

ಅಭ್ಯಸ್ತಶಾಸ್ತ್ರಪರಿಪಾಕವಶಾತ್ಕೃತೇಽಪಿ
ಕರ್ಮಣ್ಯವಶ್ಯಮನುಭೂಯತ ಏವ ತೇನ ।
ತತ್ರತ್ಫಲಂ ಕಥಮುಪೀತಿ ನ ತೇಷು ವಿಘ್ನಃ
ಸಂಭಾವಿತೋ ಯದಿ ತದಾ ಭವತೀತಿ ಮನ್ಯೇ ॥೬೨॥

ಪ್ರತ್ಯೂಹಮಾತ್ರಪರಿಪಂಥಿವಿನಾಶಕೇನ
ಗೌರೀಮನೋರಮಣಮೂರ್ತಿವಿಚಿಂತನೇನ ।
ಕರ್ಮಾಣಿ ತಾನಿ ಸಫಲಾನಿ ಫಲಾಯ ತೇನ
ಮುಕ್ತಾನಿ ತಾನಿ ವಿಫಲಾನಿ ನ ಸಂಶಯೋಽತ್ರ ॥೬೩॥

ಕೃತಂ ಶಿವಾರಾಧನಭಕ್ತಿಸಿದ್ಧ್ಯೈ
ಯತ್ಕರ್ಮವತ್ತಸ್ಯ ಸ ವಿಘ್ನಿತಂ ಚೇತ್ ।
ಫಲಂ ಭವತ್ಯೇವ ತತೋ ವಿಮುಕ್ತಃ
ಸಂಸಾರಬಂಧೇನ ವಿಮುಕ್ತ ಏವ ॥೬೪॥

---

ಸತ್ಕರ್ಮಾನುಷ್ಠಾನ ಇವುಗಳಿಂದ ಮಾನವರಿಗೆ ಈ ರೀತಿಯಾದ ಫಲವುಂಟಾಗುವುದೆಂದು ತಿಳಿಯಬೇಕು. ॥೬೧॥

ಹಿಂದೆ ತಾನು ಅಭ್ಯಾಸಮಾಡಿರುವ ಶಾಸ್ತ್ರಗಳ ಪರಿಪಾಕದ ದೆಸೆಯಿಂದ ತಾನು ಕರ್ಮಗಳನ್ನು ಅನುಷ್ಠಾನಮಾಡಿದ್ದರೂ, ಆಯಾ ಕರ್ಮಾನುಗುಣವಾದ ಫಲಗಳನ್ನು ಮಾನವನು ಅನುಭವಿಸಿಯೇ ತೀರುತ್ತಾನೆ. ಅವುಗಳಲ್ಲಿ ಆಗ ಯಾವ ರೀತಿಯಿಂದಲೂ ವಿಘ್ನಗಳುಂಟಾಗಲಾರವೆಂದು ನಾನು ತಿಳಿದಿದ್ದೇನೆ. ॥೬೨॥

ಪೂರ್ವಜನ್ಮಾರ್ಜಿತಪುಣ್ಯಫಲಗಳಿಗೆ ಪ್ರತಿಕಕ್ಷಿಯಾಗಿರುವ ವಿಘ್ನಗಳು, ಸಕಲ ವಿಘ್ನನಿವಾರಕನಾದ ಗೌರೀರಮಣನೆನಿಸಿದ ಮಹಾದೇವನ ಆಕಾರವನ್ನು ಸದ್ಭಾವನೆಯಿಂದ ಯೋಚಿಸುವ ಜನಗಳಿಗೆ ನಿವಾರಣೆಯಾಗುವುವು. ಮತ್ತು ಆ ಕರ್ಮಗಳೆಲ್ಲವೂ ಮಹಾದೇವನ ಧ್ಯಾನದಿಂದ ಸಫಲವಾಗುವುವು. ಶಿವನನ್ನು ಧ್ಯಾನಮಾಡದೇ ಇರುವವರಿಗೆ ಮಾತ್ರ ಎಲ್ಲವೂ ವ್ಯರ್ಥವೇ ಸರಿ. ಇದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿಯುವನಾಗು. ॥೬೩॥

ಶಿವಪೂಜಾವಿಷಯಕವಾದ ಭಕ್ತಿಯು ಸಿದ್ಧಿಸುವುದಕ್ಕೋಸ್ಕರ, ತಾನು ಮಾಡಿದ ಸಾಂಗವಾದ ಕರ್ಮಗಳಿಗೆ ಯಾವ ವಿಘ್ನವೂ ಉಂಟಾಗದೇ ಹೋದರೆ,

ಕಾಲಾಂತರೇ ವಿಘ್ನವಿನಾಶತಃ ಸ್ಯಾತ್ಸಾ ಭಕ್ತಿರೀಶಾನಪದಾರವಿಂದೇ ।
ಜಾತಾ ತದಭ್ಯರ್ಚನಸಾಧನಂ ಸ್ಯಾತ್ತತಃ ಫಲೇನ ಶ್ರುತಿರಾದೃತಾಪಿ ॥೬೫॥

ಉತ್ಪನ್ನಸ್ಯಾಪಿ ಮರ್ತ್ಯಸ್ಯ ಪ್ರತಿಬಂಧಕಸಂಭವೇ ।
ಶಂಕರಾರಾಧನೇ ಭಕ್ತಿರ್ನ ಭವಿಷ್ಯತಿ ಸರ್ವಥಾ ॥೬೬॥

ಬಾಲಕೋಽಸ್ತು ಯುವಾ ವಾಸ್ತು ವೃದ್ಧೋ ವಾಸ್ತು ತಥಾಪಿ ಕಿಂ ।
ಪ್ರತಿಬಂಧಕಸದ್ಭಾವೇ ಶಿವೇ ಭಕ್ತಿರ್ನಜಾಯತೇ ॥೬೭॥

ಅಭಾಗ್ಯಸೇತುಪ್ರತಿಬದ್ಧಚಿತ್ತಾಃ
ಶ್ರೀಮನ್ಮಹಾದೇವಸುಧಾಂಬುರಾಶಿಂ ।
ನ ಪ್ರಾಪ್ನುವಂತ್ಯೇವ ಮನಾಗಪೀತಿ
ಭಾಗ್ಯಂ ನ ತೇಷಾಂ ದುರದೃಷ್ಟಕಷ್ಟೈಃ ॥೬೮॥

---

ನಿಜವಾಗಿಯೂ ಆಗ ಅದರಿಂದ ಫಲವುಂಟಾಗುವುದು. ಈ ಫಲಪ್ರಾಪ್ತ್ಯನಂತರ ಮಾನವನು ಮುಕ್ತನಾಗಿ ಈ ಸಂಸಾರಬಂಧನದಿಂದಲೂ ಬಿಡುಗಡೆ ಹೊಂದುವನು. ||೬೪||

ಕಾಲಾಂತರದಲ್ಲಿ ಉಂಟಾದ ವಿಘ್ನನಾಶದಿಂದ ಮಾನವನಿಗೆ ಪರಮೇಶ್ವರನ ಪಾದಕಮಲಗಳಲ್ಲಿ ಭಕ್ತಿಯುಂಟಾಗುವುದು. ಈ ಭಕ್ತಿಯೇ ಆ ಶಿವಪೂಜೆ ಮಾಡಲು ಸಾಧನವಾಗುತ್ತದೆ. ಅನಂತರ ಈ ಶಿವಪೂಜೆಯಿಂದ ಶ್ರುತಿಯಲ್ಲಿ ಹೇಳಿರುವ ಫಲವು ತಪ್ಪದೆ ಲಭಿಸುವುದು. ||೬೫||

ಮಾನವನಾಗಿ ಜನ್ಮತಾಳಿದ್ದರೂ ಪ್ರತಿಬಂಧಕವಿದ್ದರೆ ಮನುಜನಿಗೆ ಶಿವಪೂಜಾ ವಿಷಯದಲ್ಲಿ ಭಕ್ತಿಯು ಹುಟ್ಟುವುದಿಲ್ಲ. ||೬೬||

ಮಾನವನು ಹುಡುಗನಾಗಿರಲಿ, ಯುವಕನೇ ಆಗಿರಲಿ ಒಂದುವೇಳೆ ಮುದುಕನೇ ಆಗಿರಲಿ, ಏನಾದರೂ ಪ್ರತಿಬಂಧಕವಿದ್ದರೆ ಪರಶಿವನಲ್ಲಿ ಎಂದಿಗೂ ಭಕ್ತಿಯು ಹುಟ್ಟುವುದಿಲ್ಲ. ||೬೭||

ದಾರಿದ್ರ್ಯವೆಂಬ (ದುರದೃಷ್ಟವೆಂಬ) ಸೇತುವೆಯಿಂದ ತಡೆಗಟ್ಟಲ್ಪಟ್ಟ ಮನಸ್ಸುಳ್ಳ ಮಾನವರು, ಸಂಪದ್ಯುಕ್ತನಾದ ಮಹಾದೇವನೆಂಬ ಅಮೃತಸಮುದ್ರವನ್ನು ಸ್ವಲ್ಪವೂ ಹೊಂದಲಾರರು. ಅವರ ದುರದೃಷ್ಟರೂಪವಾದ ಪ್ರತಿಬಂಧಕದಿಂದ ಇಂತಹ ಭಾಗ್ಯವು ಅವರಿಗೆ ಎಂದಿಗೂ ಲಭಿಸಲಾರದು. ||೬೮||

ಭಾಗ್ಯಂ ತಸ್ಯ ಸ ಏವ ಭೂರಿವಿಭವಃ ಪುಣ್ಯೈರಗಣ್ಯೈರ್ಯುತೋ
ಭೂಲೋಕಾಭರಣಂ ಸ ಏವ ಸುಕೃತೀ ತದ್ವಂಶ ಏವೋನ್ನತಃ ।
ತನ್ಮಾತ್ರೈವ ಪತಿವ್ರತಾ ಕುಲಸತೀ ತಸ್ಯಾಂಗನಾ ತತ್ಪಿತಾ
ಧನ್ಯೋ ಯಸ್ಯ ಮತಿಃ ಶಿವಾಪತಿಪದಾಂಭೋಜಾರ್ಚನೇ ಸಂತತಂ ॥೭೯॥

ಭೂಮಂಡಲೇ ಭೂಪ ವಿವೇಚನೇಪಿ
ಸ ಶಾಂಭವೋ ದುರ್ಲಭ ಏವ ಯಃ ಸ್ಯಾತ್ ।
ನಿರಂತರಂ ಶಂಕರಲಿಂಗಪೂಜಾ
ನಿವಿಷ್ಟಚಿತ್ತಃ ಸಿತಭೂತಿಪೂತಃ ॥೭೦॥

ಭೂತಿರ್ಯಸ್ಯ ಲಲಾಟಫಲಕೇ ರುದ್ರಾಕ್ಷಮಾಲಾ ಗಲೇ
ಲಿಂಗಂ ತುಂಗಮನಂಗಹರ್ತುರಮಲಂ ರೇವಾಜಲಾಸೇಚನೈಃ ।
ಸರ್ವಾರ್ಥಪ್ರದಮಾಶು ಬಾಲವಿಲಸದ್ವಿಲ್ವೀದಲಾಭ್ಯರ್ಚಿತಂ
ತಂ ಮನ್ಯೇ ಕೃತಕೃತ್ಯವರ್ಯಮಮರಾರಾಧ್ಯಂ ತಮೇವಾದರಾತ್ ॥೭೧॥

---

ಶಿವಾ (ಗಿರಿಜಾ) ರಮಣನಾದ ಮಹಾದೇವನ ಪಾದಕಮಲ ಪೂಜೆಯಲ್ಲಿಯೇ ಅನವರತವೂ ನಿರತವಾಗಿರುವ ಬುದ್ಧಿಯುಳ್ಳ ಮಾನವನ ಭಾಗ್ಯವೇ ಭಾಗ್ಯವು. ಅವನೇ ಐಶ್ವರ್ಯಶಾಲಿಯು. ಅಪಾರವಾದ ಪುಣ್ಯರಾಶಿಗಳಾದ ಯುಕ್ತನಾದುದರಿಂದ ಆ ಮಹಾನುಭಾವನೇ ಈ ಭೂಲೋಕಕ್ಕೆ ಆಭರಣಪ್ರಾಯನು. ಅವನ ವಂಶವೇ ಅತ್ಯಂತ ಶ್ರೇಷ್ಠವೂ ಉನ್ನತವೂ ಎನಿಸುವುದು. ಆತನ ತಾಯಿಯೇ ನಿಜವಾಗಿಯೂ ಪತಿವ್ರತೆ. ಅವನ ಭಾರ್ಯೆಯೇ ಕುಲಸ್ತ್ರೀ ಮತ್ತು ಆ ಮಹಾತ್ಮನ ತಂದೆಯೇ ನಿಜವಾಗಿ ಧನ್ಯನು. ॥೬೯॥

ಎಲೈ ರಾಜನೇ, ಈ ಭೂಮಂಡಲದಲ್ಲೆಲ್ಲಾ ಹುಡುಕಿದರೂ, ಅನವರತವೂ ಲೋಕಮಂಗಳಕರನಾದ ಶಿವನ ಲಿಂಗಪೂಜೆಯಲ್ಲಿಯೇ ಮನಸ್ಸಿಟ್ಟು, ಶುಭ್ರವಾದ ವಿಭೂತಿಯನ್ನು ಧಾರಣೆಮಾಡಿ ಪವಿತ್ರಚಿತ್ತರೆನಿಸಿರುವ ಶಾಂಭವರು ದೊರೆಯುವುದು ತುಂಬಾ ವಿರಳ. ॥೭೦॥

ಹಲಗೆಯಂತೆ ವಿಶಾಲವಾದ ಹಣೆಯಲ್ಲಿ ಶುಭ್ರವಾದ ವಿಭೂತಿಯೂ, ಕೊರಳಲ್ಲಿ ರುದ್ರಾಕ್ಷಮಾಲೆಯೂ, ಯಾವ ಮಹಾಮಹಿಮನಲ್ಲಿ ಶೋಭಿಸುತ್ತಿರುವುವೋ ಅವನೇ ಧನ್ಯನು. ಅಂತಹವನು ಮನ್ಮಥಧ್ವಂಸಕನಾದ ಪರಶಿವನ ಪವಿತ್ರ

ಕೋ ವಾ ನೇತ್ರಪಥಂ ಪ್ರಯಾತಿ ಗಿರಿಜಾಕಾಂತಾಂಘ್ರಿಪಂಕೇರುಹ
ಧ್ಯಾನಾಸಕ್ತಮತಿಃ ಪ್ರಕೃಷ್ಟಸುಕೃತಾಭಾವೇ ಭವಾಂಭೋನಿಧೇಃ ।
ತೇನೈವಾಶು ವಿಶೇಷಣಂ ಸುರಸರಿದ್ರೂಪಃ ಸ ಏವೇತಿ ಮೇ
ತತ್ಪಾದಾಂಬುಜರೇಣುವಾಯುರಪಿ ಯಃ ಸ ಸ್ಯಾಜ್ಜಗತ್ಪಾವನಃ ॥೭೨॥

ಶಿವನಾಮಸುಧಾಶನೋ ನ ಕೋಽಪಿ
ಪ್ರಥಿತೋ ಭೂತಲಮಂಡಲೇಽಖಿಲೇಽಪಿ ।
ಸ ಪುನಾತಿ ಜಗತ್ರಯಂ ಸಲೀಲಾ
ಗಮನೋತ್ಪನ್ನರಜೋ ವಿಶೇಷಭಾಗ್ಯೈಃ ॥೭೩॥

---

ವೆನಿಸಿದ ಉನ್ನತವಾದ ಶಿವಲಿಂಗವನ್ನು ರೇವಾನದಿಯ ಶುದ್ಧವಾದ ನೀರಿನಿಂದ ಅಭಿಷೇಕಮಾಡಿ, ಸಕಲ ಇಷ್ಟಾರ್ಥಗಳನ್ನೂ ಕೊಡುವ ಆ ಶಿವಲಿಂಗಕ್ಕೆ, ಎಳೆಯದಾಗಿ ಹೊಳೆಯುತ್ತಿರುವ ಬಿಲ್ವಪತ್ರೆಗಳಿಂದ ಪೂಜೆಮಾಡಿ ತಾನು ಧನ್ಯನೆನಿಸಿಕೊಳ್ಳುವನು. ಅವನು ದೇವತೆಗಳಿಂದಲೂ ಪೂಜಾರ್ಹನು. ಸರ್ವಶ್ರೇಷ್ಠನಾದ ಇವನನ್ನು ನಾನು ಆದರಪೂರ್ವಕವಾಗಿ ಕೃತಕೃತ್ಯನೆಂದೇ ತಿಳಿದಿರುವೆನು. ॥೭೧॥

ಅಪಾರವಾದ ಪುಣ್ಯವಿಶೇಷವಿಲ್ಲದೇ ಗಿರಿಜಾರಮಣನಾದ ಮಹೇಶನ ಪಾದಪದ್ಮ ಧ್ಯಾನದಲ್ಲಿಯೇ ಆಸಕ್ತನಾದ ಯಾವ ಮಹಾತ್ಮನು ತಾನೇ ಸುಲಭವಾಗಿ ಗೋಚರಿಸಿಯಾನು? ಇಂತಹ ಮಹಾತ್ಮರ ದರ್ಶನದಿಂದಲೇ ಸಂಸಾರವೆಂಬ ದೊಡ್ಡ ಸಮುದ್ರವೂ ಸಹ ಒಣಗಿಹೋಗುವುದು. ಈ ಶಿವಭಕ್ತನು ದೇವಗಂಗಾಸ್ವರೂಪನು. ಇಂತಹ ಮಹಾತ್ಮನ, ಪದ್ಮದಂತೆ ಮನೋಹರವಾದ ಕಾಲುಗಳ ಧೂಳಿನಮೇಲೆ ಬೀಸುವ ಗಾಳಿಯೂ ಸಹ, ಸಕಲ ಜಗತ್ತನ್ನೂ ಪಾವನವನ್ನಾಗಿ ಮಾಡುವುದು. ॥೭೨॥

ಸಮಗ್ರವಾದ ಈ ಭೂಮಂಡಲದಲ್ಲಿಯೂ ಶಿವನ ನಾಮಗಳೆಂಬ ಅಮೃತವನ್ನು ಪಾನಮಾಡುತ್ತಾ ಪ್ರಸಿದ್ಧಿ ಪಡೆದವನು, ಈ ಮಹಾತ್ಮನೊಬ್ಬನೇ ಹೊರತು ಬೇರೆ ಯಾರೂ ಇಲ್ಲ. ಆ ಮಹಾಮಹಿಮನು ತಾನು ಸಂಚಾರಮಾಡುವಾಗ ಉಂಟಾಗುವ ಧೂಳಿನ ಕಣಗಳಿಂದಲೇ ಮೂರುಲೋಕವನ್ನೂ ಪವಿತ್ರವನ್ನಾಗಿ ಮಾಡುವ ಸಾಮರ್ಥ್ಯವುಳ್ಳವನು. ॥೭೩॥

ಸ ಕ್ವಾಪಿ ನಾರೀ ಶಿವಪೂಜನೇನ ವಯೋ ನಯುತ್ಯೇವ ವಿನಾಪಿ ಭೋಗಂ ।
ತಥಾ ನರೋಽಪೀತಿ ಶಿವೈಕನಿಷ್ಠಃ ಸಾಕ್ಷಾದ್ವಸಿಷ್ಠೋಽಪಿ ಯತೋ ವರಿಷ್ಠಃ
॥೭೪॥

ಶಿವಾರಾಧನಸಕ್ತಾನಾಂ ಜೀವನಂ ಜೀವನಂ ಪರಂ ।
ಅನ್ಯೇಷಾಂ ಜೀವನಂ ತಾವನ್ಮರಣಂ ಮರಣಾದಪಿ ॥೭೫॥

ಯಾವಚ್ಛಂಕರಪೂಜನೇ ಮತಿರುಮಾಕಾಂತಾಂಘ್ರಿಪಂಕೇರುಹ
ಧ್ಯಾನೇ ತಾವದಿದಂ ಶರೀರಮಸಕೃತ್ಸಂರಕ್ಷಣೀಯಂ ಬುಧೈಃ ।
ತತ್ತ್ಯಾಗೇ ಪತಿತೋ ಭವತ್ಯನುದಿನಂ ತಜ್ಜನ್ಮ ತಾವದ್ವೃಥಾ
ತನ್ಮಾತಾ ವ್ಯಭಿಚಾರಿಣೀತಿ ಮತಿರಪ್ಯದ್ಯಾಧುನಾ ಜಾಯತೇ ॥೭೬॥

ಕೋ ವಾ ಭೂಪ ಶಶಾಂಕಶೇಖರಪದಾಂಭೋಜಾರ್ಚನಾತ್ಯಾದರೋ
ಭೂತ್ವಾ ಭೂಷಿತವಿಗ್ರಹಃ ಸ್ವಹೃದಯೇ ಗೌರೀಸಹಾಯಂ ಪರಂ ।

---

ಸ್ತ್ರೀಯರಾಗಲೀ, ಪುರುಷರಾಗಲೀ ವಿಷಯಸುಖದ ಅನುಭವವೊಂದನ್ನು ಬಿಟ್ಟು ಶಿವಪೂಜೆಯಿಂದಲೇ ತಮ್ಮ ವಯಸ್ಸನ್ನು ಯಾರೂ ಕಳೆಯುತ್ತಿಲ್ಲ. ಇದನ್ನು ನೋಡಿಯೇ ಮುನಿಶ್ರೇಷ್ಠನಾದ ವಸಿಷ್ಠಮಹರ್ಷಿಯೂ ಕೇವಲ ಶಿವಧ್ಯಾನನಿರತನಾಗಿಯೇ ಪ್ರಸಿದ್ಧನಾದನು. ॥೭೪॥

ಶಿವಪೂಜಾನಿರತರಾದ ಮಾನವರ ಬಾಳೇ ಸರಿಯಾದ ಬಾಳೆಂದು ಹೇಳಬೇಕು. ಇತರರ ಬದುಕುವಿಕೆಯು ಕೇವಲ ಮರಣಕ್ಕೆ ಸಮಾನವಾದುದು. ಒಂದುವೇಳೆ ಆ ಮರಣಕ್ಕಿಂತಲೂ ನಿಕೃಷ್ಟವಾದುದೆಂದೂ ಹೇಳಬಹುದು. ॥೭೫॥

ಲೋಕಮಂಗಳಕರನಾದ ಉಮಾರಮಣನ ಪೂಜೆಯಲ್ಲಿಯೂ ಮತ್ತು ಅವನ ಪಾದಕಮಲಧ್ಯಾನದಲ್ಲಿಯೂ ಮನಸ್ಸು ಶಾಶ್ವತವಾಗಿರುವ ವರೆಗೆ ಮಾತ್ರ ವಿದ್ವಾಂಸನಾದವನು ಈ ಶರೀರವನ್ನು ಪದೇ ಪದೇ ಕಾಪಾಡಿಕೊಳ್ಳಬೇಕು. ಈ ಶಿವಪೂಜಾಧ್ಯಾನಗಳನ್ನು ತ್ಯಾಗಮಾಡಿದ ಮರುದಿನದಿಂದಲೇ ಅವನು ಪತಿತನಾಗುವನು. ಅವನ ಜನ್ಮವೂ ವ್ಯರ್ಥವೆನಿಸುವುದು. ಅಲ್ಲದೆ ಅಂತಹವನ ತಾಯಿಯೂ ಸಹ ವ್ಯಭಿಚಾರಿಣಿಯೆನಿಸುವಳು. ಎಂಬ ಭಾವನೆ ನನಗಿದೆ. ॥೭೬॥

ಎಲೈ ರಾಜನೇ, ಚಂದ್ರಶೇಖರನ ಪಾದಪದ್ಮಸೇವೆಯಲ್ಲಿ ಸದಾ ಆದರಯುಕ್ತನಾಗಿ, ತನ್ನ ಶರೀರಕ್ಕೆ ಪರಿಶುದ್ಧವಾದ ಭಸ್ಮವನ್ನು ಬಳಿದುಕೊಂಡು ಯಾವಾಗಲೂ ತನ್ನ ಮನಸ್ಸಿನಲ್ಲಿ ಗೌರೀರಮಣನಾದ ಆ ಮಹಾದೇವನನ್ನು ಎಡಬಿಡದೆ ಧ್ಯಾನ

ಧ್ಯಾತ್ವಾ ತಿಷ್ಠತಿ ತತ್ಕಥಾಪಿ ನ ಕದಾಪ್ಯಾಕರ್ಣಿತಾ ತಂ ವಿದುಃ
ಸಾಕ್ಷಾದೀಶ್ವರಏವ ಸರ್ವಜಗತಾಂ ಪೂಜ್ಯಃ ಸ ಏವ ಧ್ರುವಂ ॥೭೭॥

ಯಸ್ಯಾಭೀಪ್ಸಿತಧರ್ಮಸಿದ್ಧಿರಸಕೃತ್ಪಾದಾಂಬುಜಾರಾಧನಾ
ಭಾವೇನಾಪಿ ತದೀಕ್ಷಣಾದಪಿ ಭವೇತ್ತತ್ಕೇವಲಂ ಶಾಂಭವಂ ।
ಮನ್ಯೇ ದುರ್ಲಭಮೇವ ಶಾಂಭವವರಂ ಸಾಮಾನ್ಯತಃ ಶಾಂಭವೋ
ಭೂಲೋಕೇ ಖಲು ದುರ್ಲಭೋ ಭವತಿ ತಂ ಮನ್ಯೇ ಪರಂ ಪಾವನಂ॥೭೮॥

ಇಯಂ ಪೂರ್ವಭವೇ ರಾಜನ್ವಿಂಧ್ಯಾಚಲನಿವಾಸಿನೀ ।
ಭಿಲ್ಲಕನ್ಯಾ ಸದಾ ವನ್ಯೈರೇತಸ್ಯಾಃ ಖಲು ಜೀವನಂ ॥೭೯॥

---

ಮಾಡುತ್ತಿರುವನಾರು ? ಆ ಮಹಾತ್ಮನ ಕಥೆಯನ್ನಾದರೂ ನಾವೆಲ್ಲಿಯೂ ಕೇಳಿಲ್ಲ ವಲ್ಲಾ ! ಸಕಲ ಪ್ರಪಂಚಗಳಿಗೂ ಒಡೆಯನಾದ ಸಾಕ್ಷಾದೀಶ್ವರನೇ ಅವನಾಗಿರ ಬಹುದೆ! ಆ ಲೋಕಪೂಜ್ಯನೇ ಅಂತಹವನಾಗಿರುವನು ಎಂದರೆ ಅದು ಸುಳ್ಳಲ್ಲ. ॥೭೭॥

ಯಾವ ಮಹಾನುಭಾವನ ಪಾದಾರವಿಂದಗಳನ್ನು ಅನೇಕಬಾರಿ ಪೂಜಿಸದೇ ಇದ್ದರೂ ಕೇವಲ ಅವನ ದರ್ಶನಮಾತ್ರದಿಂದಲೇ ಮಾನವರಿಗೆ ಸಕಲ ಇಷ್ಟಾರ್ಥ ಗಳೂ ಧರ್ಮಕಾರ್ಯವೃದ್ಧಿಯೂ ದೊರೆಯುವುವೋ, ಅಂತಹ ಭಕ್ತಾಗ್ರೇಸರನೇ ಶಿವಭಕ್ತರಲ್ಲಿ ಶ್ರೇಷ್ಠನೆನಿಸುವನು. ಎಲೈ ರಾಜನೇ! ಅಂತಹ ಶಂಭುಭಕ್ತನು ದೊರೆಯುವುದು ಅತ್ಯಂತ ಕಷ್ಟವೆಂದೇ ತೋರುವುದು. ಈ ಭೂಲೋಕದಲ್ಲಿಯೇ ಅಂತಹ ಪರಮಪಾವನನಾದ ಶಂಭುಭಕ್ತನು ವಿರಳವೆಂದೂ ನಾನು ತಿಳಿದಿರುವೆನು. ॥೭೮॥

ಅಯ್ಯಾ, ಸತ್ಯವ್ರತ ರಾಜನೇ, ಈ ರಾಣಿಯು, ಹಿಂದಿನ ಜನ್ಮದಲ್ಲಿ ಬೇಡರ ಹುಡುಗಿಯಾಗಿದ್ದಳು. ವಿಂಧ್ಯಪರ್ವತವೇ ಇವಳ ವಾಸಸ್ಥಾನವಾಗಿತ್ತು. ಯಾವಾ ಗಲೂ ಇವಳು ಕಾಡಿನಲ್ಲಿಯೇ ವಾಸಿಸುತ್ತಾ ಕಾಡಿನ, ಗೆಡ್ಡೆಗೆಣಸು, ಹಣ್ಣು ಹಂಪಲು ಗಳಿಂದಲೇ ಜೀವಿಸುತ್ತಿದ್ದಳು. ॥೭೯॥

ಇಯಂ ಚ ಯುವತೀ ತತ್ರ ಭಿಲ್ಲಕ್ರೀಡಾರತಾ ವನೇ ।
ಸಾ ತತ್ರ ಸುರತಾ ತೈಸ್ತು ಸಹ ರೇಮೇ ಯಥಾಸುಖಂ ॥೮೦॥

ತತಃ ಸಮಭವದ್ವೃಷ್ಟಿಃ ಸಾಪಿ ಕಷ್ಟಾಯ ಕಲ್ಪಿತಾ ।
ತಯಾ ವೃಷ್ಟ್ಯಾ ಕಂಪಮಾನಾ ತ್ಯಕ್ತ್ವಾ ಚ ಪುರುಷೈಸ್ತದಾ ॥೮೧॥

ತತಸ್ತದ್ವೃಷ್ಟಿಧಾರಾಭಿರ್ವಾತ್ಯಾಭಿಸ್ತರುಕೋಟರೈಃ ।
ವಿಚ್ಛಿನ್ನಂ ವಸನಂ ಸರ್ವಂ ಛಿನ್ನಮೇವ ಪುರಾತನಂ ॥೮೨॥

ತತೋ ವಾತನಿಘಾತೇನ ಪತಿತಾಂ ನವಪಲ್ಲವಾಂ ।
ಬಿಲ್ವಶಾಖಾಂ ಸಮಾದಾಯ ವಿವೇಶ ಶಿವಮಂದಿರಂ ॥೮೩॥

---

ಭಿಲ್ಲರೊಡನೆ ವಿಹರಿಸುತ್ತಿರುವ ಈ ಯುವತಿಯು ಆ ಕಾಡಿನಲ್ಲಿ ಯಥೇಚ್ಛವಾಗಿ ತನ್ನೊಡನಾಡಿಗಳಾದ ಭಿಲ್ಲರೊಡನೆ ಕ್ರೀಡಿಸುತ್ತಾ ಅವರೊಡನೆ ರಮಿಸಿದಳು. ॥೮೦॥

ಇದ್ದಕ್ಕಿದ್ದ ಹಾಗೆಯೇ ಆ ಸಮಯದಲ್ಲಿ ಅತ್ಯಂತ ಭಯಂಕರವಾದ ಮಳೆಯುಂಟಾಗಿ ಇವಳನ್ನು ಕಷ್ಟಕ್ಕೆ ಗುರಿಯಾಗುವಂತೆ ಮಾಡಿತು. ಆ ಮಳೆಯ ಆರ್ಭಟಕ್ಕೆ ಹೆದರಿ ನಡುಗುತ್ತಾ ಈ ಯುವತಿಯು ಆ ಭಿಲ್ಲಪುರುಷರ ಜೊತೆಯನ್ನು ಬಿಟ್ಟು ಹೊರಟಳು. ॥೮೧॥

ಈ ಮಳೆಯ ಧಾರಾಕಾರವಾದ ಹನಿಗಳಿಂದಲೂ, ಗಾಳಿಯ ಹೊಡೆತದಿಂದಲೂ, ಮರಗಿಡಗಳ ಪೊಟರೆಗಳ ಸಂಪರ್ಕದಿಂದಲೂ ಸಹ ಮೊದಲೇ ಹಳೆಯದಾಗಿ ಸ್ವಲ್ಪಮಟ್ಟಿಗೆ ಚಿಂದಿಯಾಗಿದ್ದ ವಸ್ತ್ರವು ಚೂರುಚೂರಾಗಿ ಹೋಯಿತು. ॥೮೨॥

ಆಗ ಗಾಳಿಯ ಹೊಡೆತದಿಂದ ಬಿದ್ದಿರುವ ಎಳೆಯ ಚಿಗುರುಗಳಿಂದ ಯುಕ್ತವಾದ ಬಿಲ್ವವೃಕ್ಷದ ಕೊಂಬೆಯನ್ನು ಮರೆಮಾಡಿಕೊಂಡು ನಾಚಿಕೆಯಿಂದ ಪಕ್ಕದಲ್ಲಿದ್ದ ಶಿವಮಂದಿರಕ್ಕೆ ಇವಳು ಪ್ರವೇಶಮಾಡಿದಳು. ॥೮೩॥

ತತಸ್ತಜ್ಜಲಧಾರಾಭಿಃ ಸರಂಧ್ರಂ ಶಿವಮಂದಿರಂ ।
ಪ್ರವಿಶ್ಯ ಚಿಂತಯಾ ವ್ಯಾಪ್ತಾ ಕ್ವ ವಾ ಗಂತವ್ಯಮಿತ್ಯಪಿ ॥೮೪॥

ತದನಂತರಮುತ್ಕೃಷ್ಟಂ ನಾರ್ಮದಂ ಲಿಂಗಮಾದರಾತ್ ।
ವಿಲೋಕ್ಯ ಸಾ ಜಗಾದೇಯಂ ಧೃತ್ವಾ ತಲ್ಲಿಂಗಮಾದರಾತ್ ॥೮೫॥

ಜಲಧಾರಾವಿಶೀರ್ಣಾಸ್ತೇ ಪಾಷಾಣಾಶ್ಚಾನಿಲಾಹತಾಃ ।
ಲಿಂಗಮೂರ್ಧ್ನಿ ಪತಿಷ್ಯಂತಿ ಕಿಂ ಕರ್ತವ್ಯಮತಃ ಪರಂ ॥೮೬॥

ಪ್ರಕೃಷ್ಟವೃಷ್ಟಿಧಾರಾಭಿಃ ಸರಂಧ್ರಂ ಚ ಭವಿಷ್ಯತಿ ।
ಸ್ಫುಟಿತಂ ಚ ಭವೇದೇವ ವಿಶೀರ್ಣಂ ಚ ಭವಿಷ್ಯತಿ ॥೮೭॥

ಲಿಂಗರೂಪೀ ಮಹಾದೇವಸ್ತದ್ವೃಷ್ಟಿವಿನಿವಾರಣಂ ।
ಕಥಂ ವಾ ನ ಕರೋತ್ಯತ್ರ ಕಿಂ ಕರ್ತವ್ಯಮತಃ ಪರಂ ॥೮೮॥

---

ಅಲ್ಲಿಯೂ ಆ ಮಳೆಯ ಪ್ರಬಲವಾದ ಜಲಧಾರೆಗಳಿಂದ ಆ ಶಿವಮಂದಿರವು ರಂಧ್ರವಾಗಿ ಸೋರುತ್ತಿದ್ದುದನ್ನು ನೋಡಿ, ಇನ್ನು ಮುಂದೆ ಎಲ್ಲಿ ಹೋಗಲಿ ಎಂದು ತುಂಬ ಚಿಂತಾಕ್ರಾಂತಳಾದಳು. ॥೮೪॥

ಹೀಗೆ ಯೋಚಿಸುತ್ತಿರಲಾಗಿ ಒಂದು ಉತ್ಕೃಷ್ಟವಾದ ನರ್ಮದಾನದಿಯ ಸಂಬಂಧವಾದ ರೇವಾಲಿಂಗವು ಅಲ್ಲಿ ಇವಳ ಕಣ್ಣಿಗೆ ಗೋಚರವಾಯಿತು. ಕೂಡಲೇ ಆದರದಿಂದ ಆ ಶಿವಲಿಂಗವನ್ನು ಹಿಡಿದುಕೊಂಡು ಹೀಗೆಂದಳು—॥೮೫॥

ನೀರಿನ ಧಾರೆಗಳ ಹೊಡೆತದಿಂದ ಚೂರುಚೂರಾದ ಕಲ್ಲುಗಳು ಗಾಳಿಯ ವೇಗದಿಂದ ಒಯ್ಯಲ್ಪಟ್ಟು ಈ ಶಿವಲಿಂಗದ ಮೇಲೆ ಬೀಳುತ್ತವೆಯಲ್ಲಾ, ಅಯ್ಯೋ, ಇನ್ನು ಮುಂದೆ ಏನುಮಾಡಲಿ, ಹೇಗೆ ತಪ್ಪಿಸಲಿ ; ॥೮೬॥

ಜೋರಾದ ಈ ಮಳೆಯ ಧಾರೆಗಳಿಂದ ಈ ಲಿಂಗವು ರಂಧ್ರವಾಗುವುದು. ಹಾಗೆಯೇ ಇದು ಒಡೆದು ಚೂರುಚೂರಾಗುವುದು. ಅಯ್ಯೋ, ಈ ಲಿಂಗಸ್ವರೂಪಿಯಾದ ಮಹಾದೇವನು ಈ ಹಾಳುಮಳೆಯನ್ನು ನಿಲ್ಲಿಸಬಾರದೇ! ಇನ್ನು ಮುಂದೆ ನಾನೇನುಮಾಡಲಿ? ಹೇಗೆ ಈ ಶಿವಲಿಂಗವನ್ನು ರಕ್ಷಿಸಲಿ? ॥೮೭-೮೮॥

ಲಿಂಗನಾಶನಸಾಮಗ್ರೀ ವೃಷ್ಟಿರೇಷಾ ಮಹತ್ತರಾ ।
ಏತನ್ನಿವಾರಣಂ ಕರ್ತುಂ ಯತತೇ ಕಿಂ ನ ಶಂಕರಃ ॥೮೯॥

ಚಿದ್ಘನಸ್ಯ ಮಹೇಶಸ್ಯ ಲಿಂಗೇಽಭಿವ್ಯಕ್ತಿರಿತ್ಯಪಿ ।
ಶ್ರುತೋ ವಾಣೀ ವಿಶೇಷೋಽಯಮಶರೀರಸಮುದ್ಭವಃ ॥೯೦॥

ಯದ್ಭಾವಿ ತದ್ಭಾವಿ ನ ಸಂಶಯೋಽತ್ರ
ಭಿನ್ನಂ ಯದೇತದ್ಯದಿ ವೃಷ್ಟಿಸೇಕೈಃ ।
ತದಾ ತದಾಲೋಕನಮಸ್ತಿ ಕೇನ
ಕರ್ತುಂ ನ ಶಕ್ಯಂ ಖಲು ಸರ್ವಥಾಪಿ ॥೯೧॥

ಲಿಂಗಂ ತದೇವ ರಮಣೀಯಮವೇಕ್ಷಣೀಯಂ
ಯಚ್ಚಂದನಾದಿಸಮಲಂಕೃತಮಾದರೇಣ ।
ಕುಂದೈಶ್ಚ ಬಿಲ್ವಮಸಕೃನ್ನವಪಲ್ಲವೈಶ್ಚ
ಸಂಪೂಜಿತಂ ಭವತಿ ಪಾಪವಿನಾಶನಾಯ ॥೯೨॥

---

ಈ ದೊಡ್ಡ ಮಳೆಯಾದರೋ ಈ ಲಿಂಗವನ್ನೇ ನಾಶಮಾಡುವುದಕ್ಕೋಸ್ಕರ ಏರ್ಪಟ್ಟ ಸಾಮಗ್ರಿಯಂತೆ ತೋರುತ್ತಿರುವುದು. ಇಂತಹ ದುಷ್ಟಮಳೆಯನ್ನು ನಿಲ್ಲಿಸಲು ಲೋಕಮಂಗಳಕರನಾದ ಮಹೇಶ್ವರನು ಏತಕ್ಕೆ ಪ್ರಯತ್ನಿಸುತ್ತಿಲ್ಲವೋ ತಿಳಿಯದಲ್ಲಾ! ॥೮೯॥

ಜ್ಞಾನಘನರೂಪಿಯಾದ ಮಹೇಶ್ವರನಿಗೆ ಲಿಂಗದಲ್ಲಿ ಅಭಿಮಾನವಿರುವುದೆಂದು ವಿಶೇಷವಾಗಿ ಅಶರೀರವಾಣಿಯನ್ನು ಕೇಳಿದೆನಲ್ಲಾ. ॥೯೦॥

ಏನು ಆಗಬೇಕೋ ಅದು ಆಗಿಯೇ ತೀರಬೇಕು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಈ ಮಳೆಯ ಹೊಡೆತದಿಂದ ಈ ಲಿಂಗವೇನಾದರೂ ಒಡೆದು ಹೋದರೆ, ಆಗ ಅದನ್ನು ನೋಡಲು ಯಾರಿಗೆತಾನೇ ಸಾಧ್ಯವಾದೀತು. ಸರ್ವಥಾ ಇದನ್ನು ನೋಡಲು ಅಸಾಧ್ಯವೆಂದೇ ನಾನು ಭಾವಿಸುವೆನು. ॥೯೧॥

ಚಂದನಾದಿಗಳಿಂದ ಆದರಪೂರ್ವಕವಾಗಿ ಅಲಂಕರಿಸಲ್ಪಟ್ಟು, ಕುಂದಪುಷ್ಪ, ಬಿಲ್ವದಳ, ಮತ್ತು ಹೊಸ ಚಿಗುರುಗಳು ಇವುಗಳಿಂದ ಪೂಜೆಮಾಡಿರುವ ಮನೋಹರವಾದ ಇದೇ ಲಿಂಗವನ್ನು ದರ್ಶನಮಾಡಬೇಕು. ಇದನ್ನು ಭಕ್ತಿಯಿಂದ ಪೂಜಿಸಿದರೆ ನಿಜವಾಗಿಯೂ ಪಾಪಗಳು ನಾಶವಾಗುವುವು. ॥೯೨॥

ಭಾಗ್ಯೇನ ಮೇ ಕುಸುಮಚಂದನಪೂಜಿತಸ್ಯ
ಲಿಂಗಸ್ಯ ತಾವದಸಕೃತ್ಸಮವೇಕ್ಷಣೇಽಪಿ ।
ಕಲ್ಯಾಣದಾಯಕಮಿದಂ ಖಲು ಲಿಂಗಮತ್ರ
ರೇವಾತರಂಗಸಮಲಂಕೃತಮುಷ್ಣಕಾಲೇ ॥೯೩॥

ಏತಸ್ಯ ತಾವದಧುನಾ ನ ಕೃತೈವ ಪೂಜಾ
ಬಿಲ್ವೇನ ವಾ ಝುಟಿತಿ ಚೇತ್ಸ್ಫುಟಿತಂ ಜಲೇನ ।
ವ್ಯರ್ಥಾ ಭವತ್ಯಪಿ ಸಪಲ್ಲವಬಿಲ್ವಶಾಖಾ
ಶಾಖಾಸಮರ್ಪಣಮಪೀಹ ಕಥಂ ಮುದೇ ಸ್ಯಾತ್ ॥೯೪॥

ಏಕೈಕಬಿಲ್ವದಲಸಂಗ್ರಹಣೇ ನ ಶಕ್ತೋ
ಹಸ್ತೋಽಪಿ ಕಂಪಸಹಿತೋಽಸ್ಯ ತನುಃ ಸಕಂಪಾ ।
ಪಾಪಾಪನೋದನಸಮರ್ಥಮಿದಂ ನ ಲಿಂಗಂ
ಕಿಂ ನಾರ್ಚ್ಯದಂ ವಿಮಲಪಲ್ಲವಪೂಜಿತಂ ಚೇತ್ ॥೯೫॥

---

ಹೂ ಮತ್ತು ಚಂದನ ಮುಂತಾದವುಗಳಿಂದ ಪೂಜಿಸಲ್ಪಟ್ಟ ಶಿವಲಿಂಗಗಳನ್ನು ನಾನು ಅನೇಕವೇಳೆ ದರ್ಶನಮಾಡಿದ್ದರೂ, ಉಷ್ಣಕಾಲದಲ್ಲಿ ರೇವಾನದಿಯ ಪ್ರವಾಹಗಳಿಂದಲಂಕೃತವಾದ ಈ ಲಿಂಗವು ದೊರೆತದ್ದು ನಿಜವಾಗಿಯೂ ನನ್ನ ಭಾಗ್ಯವೇ ಸರಿ. ಈ ಲಿಂಗವು ಸಕಲ ಮಂಗಳಗಳನ್ನೂ ಕೊಡುವ ಸಾಮರ್ಥ್ಯವುಳ್ಳದ್ದು. ॥೯೩॥

ಈ ಮಳೆಯ ಹೊಡೆತದಿಂದ ನೀರಿನ ಹನಿಗಳ ರಭಸಕ್ಕೆ ಸಿಕ್ಕಿ ಈ ಲಿಂಗವು ಒಡೆದುಹೋದರೆ ಈ ಲಿಂಗಕ್ಕೆ ಪೂಜೆಯನ್ನೇ ಮಾಡಿದಂತಾಗುವುದಿಲ್ಲ. ಅಲ್ಲದೇ ಅನಾಯಾಸವಾಗಿ ದೊರೆತಿರುವ ಈ ಚಿಗುರುಗಳಿಂದ ಕೂಡಿದ ಬಿಲ್ವಪತ್ರೆಯ ಕೊಂಬೆಯೂ ಸಹ ವ್ಯರ್ಥವೇ ಆಗುವುದು. ಆದರೆ ಈ ಕೊಂಬೆಯನ್ನೇ ಶಂಕರನ ಲಿಂಗಕ್ಕೆ ಸಮರ್ಪಿಸಿದರೆ ಅವನಿಗೆ ಪ್ರೀತಿಯುಂಟಾದೀತಲ್ಲವೆ! ॥೯೪॥

ಈ ಕೊಂಬೆಯಲ್ಲಿರುವ ಬಿಲ್ವದಳಗಳನ್ನೆಲ್ಲಾ ಬಿಡಿಸಿ, ಒಂದೊಂದನ್ನೇ ಪರಮೇಶ್ವರನ ಲಿಂಗಕ್ಕೆ ಸಮರ್ಪಣೆಮಾಡೋಣವೆಂದರೆ ಶಕ್ತಿಯಿಲ್ಲ. ನನ್ನ ಕೈಯೇ ನನ್ನ ಸ್ವಾಧೀನದಲ್ಲಿಲ್ಲ. ಅಲ್ಲದೆ ಶರೀರವೂ ತುಂಬಾ ನಡುಗುತ್ತಿದೆ. ಒಂದುವೇಳೆ ಪರಿಶುದ್ಧವಾದ ಬಿಲ್ವದಳಗಳಿಂದಲೇ ಯುಕ್ತವಾದ ಈ ಕೊಂಬೆಯನ್ನೇ

ಇತ್ಯುಕ್ತ್ವಾ ಸಾಽತಿದುಃಖಾರ್ತಾ ತಸ್ಯ ಲಿಂಗಸ್ಯ ಮಸ್ತಕಂ ।
ಸರ್ವತಶ್ಛಾದಯಾಮಾಸ ಶುದ್ಧಯಾ ಬಿಲ್ವಶಾಖಯಾ ॥೯೬॥

ಪುನರಾನೀಯ ಸಾ ಶಾಖಾಂ ಬಿಲ್ವಸ್ಯ ನವಪಲ್ಲವಂ ।
ಛಾದಯಾಮಾಸ ತಲ್ಲಿಂಗಂ ಕಂಪಮಾನಾಪಿ ಸಾ ಪುನಃ ॥೯೭॥

ಕಂಪೇನ ಹಸ್ತಾಂಗುಲಿಚಾಲನೇನ
ಲಿಂಗಾಲಯೇ ನಾಟ್ಯವಧೂರಿವಾಭೂತ್ ।
ಯಾ ಬಿಲ್ವಶಾಖಾಪಿ ಸಮರ್ಪಿತಾ ಸಾ
ಲಿಂಗಸ್ಯ ತತ್ಪೂಜನಹೇತುಭೂತಾ ॥೯೮॥

ಪಟಹೀನಾ ವಧೂಟೀವ ನಾಟ್ಯವೇಗೇನ ಸಾ ಬಭೌ ।
ತೇನ ನಾಟ್ಯೇನ ಸುಪ್ರೀತೋ ಭಗವಾನಪಿ ಶಂಕರಃ ॥೯೯॥

---

ಸಮರ್ಪಣೆಮಾಡಿದರೆ ಈ ನಾರ್ಮದಲಿಂಗವು ಪಾಪವನ್ನು ನಾಶಮಾಡಲು ಸಮರ್ಥ ವಾಗಲಾರದೇ! ॥೯೫॥

ಎಂದು ಹೇಳಿ ಆ ಭಿಲ್ಲಯುವತಿಯು ಅತಿಯಾದ ದುಃಖದಿಂದ ನೊಂದು ಆ ಶಿವಲಿಂಗದ ಮೇಲ್ಭಾಗವನ್ನು ಶುದ್ಧವಾದ ಬಿಲ್ವವೃಕ್ಷದ ಕೊಂಬೆಯಿಂದ ಎಲ್ಲಾ ಕಡೆಯಲ್ಲಿಯೂ ಮರೆಯಾಗುವಂತೆ ಮುಚ್ಚಿದಳು. ॥೯೬॥

ಇದಲ್ಲದೆ, ಪುನಃ ಆ ಮಳೆಯಲ್ಲಿಯೇ ಹೊರಗೆ ಹೋಗಿ ನಡುಗುತ್ತಲೇ ಬೇರೆಯ ಎಳೆಯ ಚಿಗುರುಗಳಿಂದ ಶೋಭಿಸುತ್ತಿರುವ ಬಿಲ್ವಶಾಖೆಯನ್ನು ತಂದು ಅದರ ಎಳೆಯ ದಳಗಳಿಂದ ಆ ಲಿಂಗವನ್ನು ನಡುಗುತ್ತಲೇ ಮುಚ್ಚಿದಳು. ॥೯೭॥

ಮಳೆಯಿಂದ ನಡುಗುತ್ತಾ ಬಿಲ್ವದಳಗಳನ್ನು ಆ ಶಿವಲಿಂಗಕ್ಕೆ ಹೊದಿಸುತ್ತಿದ್ದಾಗ್ಯ ಆಕೆಯ ಕೈಬೆರಳುಗಳು ಅಲುಗುತ್ತಿದ್ದರೆ, ನಾಟ್ಯಸ್ತ್ರೀಯು ತನ್ನ ಕೈಗಳನ್ನು ತಿರುಗಿಸುತ್ತಾ ಶಿವನ ಮುಂದೆ ನಾಟ್ಯವಾಡಿದಂತಾಯಿತು. ತಾನು ಸಮರ್ಪಣೆ ಮಾಡಿದ ಬಿಲ್ವಶಾಖೆಯಿಂದ, ಬಿಲ್ವಪತ್ರೆಗಳಿಂದ ಆ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸಿದಂತೆ ಪರಿಣಮಿಸಿತು. ॥೯೮॥

ವಸ್ತ್ರಹೀನಳಾಗಿದ್ದರೂ ಆ ಯುವತಿಯು ತನ್ನ ಭಕ್ತಿ ನಾಟ್ಯವೇಗದಿಂದ ಕುಲಸ್ತ್ರೀಯಂತೆಯೇ ತೋರುತ್ತಿದ್ದಳು. ಈ ರೀತಿಯಾದ ಅವಳ ನಾಟ್ಯದಿಂದ ಭಗವಂತನಾದ ಶಂಕರನೂ ಸಹ ಸಂತೋಷಪಟ್ಟನು. ॥೯೯॥

ತತೋ ವೃಷ್ಟಿರ್ಗತಾ ಸಾಪಿ ಸಂತುಷ್ಟಾ ಗಿರಿಜಾಪತಿಂ।
ತುಷ್ಟಾವ ಪಾಹಿ ಮಾಮೀಶ ಪಾಹಿ ಮಾಮಿತಿ ಶಂಕರ ॥೧೦೦॥

ಶಂಭೋ ವಸನಹೀನಾಂ ಮಾಂ ನಿತ್ಯಂ ಸವಸನಾಂ ಕುರು।
ಹರ ಸರ್ವಾಣಿ ಪಾಪಾಣಿ ಜಾರಸಂಗಕೃತಾನ್ಯಪಿ ॥೧೦೧॥

ದಾತಾ ತ್ವಮೇವ ಭಗವನ್ವಿಶ್ವಸ್ಯ ಸಕಲಸ್ಯ ಚ।
ಪಾಲಕೋ ನಾಶಕಶ್ಚ ತ್ವಂ ಜನಕೋಽಪಿ ನ ಸಂಶಯಃ ॥೧೦೨॥

ಭೂಮಂಡಲೋತ್ಪಾದನಕಾರಣಾಯ
ತತ್ಪಾಲನಸ್ಯಾಪ್ಯಥ ಕಾರಣಾಯ।
ತನ್ನಾಶಕಾಯಾಪಿ ನಮೋ ನಮಸ್ತೇ
ಗೌರೀಸಹಾಯಾಯ ಮಹೇಶ್ವರಾಯ ॥೧೦೩॥

---

ಇವಳ ನಾಟ್ಯದಿಂದ ಪರಶಿವನು ಸಂತುಷ್ಟನಾದ ನಂತರ ಆ ಮಳೆಯು ನಿಂತು ಹೋಯಿತು. ಅದನ್ನು ನೋಡಿ ಅವಳೂ ಸಂತೋಷಯುಕ್ತಳಾಗಿ "ಎಲೈ ಜಗದೀಶ್ವರ, ನನ್ನನ್ನು ರಕ್ಷಿಸು, ಓ ಲೋಕಮಂಗಳಕರನಾದ ಸ್ವಾಮಿಯೇ, ನನ್ನನ್ನು ಕಾಪಾಡು" ಎಂದು ಮಹಾದೇವನನ್ನು ವಿಧವಿಧವಾಗಿ ಸ್ತೋತ್ರಮಾಡಿದಳು.॥೧೦೦॥

ಓ ಶಂಭುವೇ, ವಸ್ತ್ರಹೀನಳಾಗಿ ಬೆತ್ತಲೆಯಿರುವ ನನ್ನನ್ನು ನಿತ್ಯವೂ ವಸ್ತ್ರಯುಕ್ತಳನ್ನಾಗಿ ಮಾಡುವನಾಗು. ಅಂದರೆ ಇನ್ನು ಮುಂದೆ ಇಂತಹ ನಗ್ನಾವಸ್ಥೆಯುಂಟಾಗದಂತೆ ಮಾಡು. ಜಾರರಾದ ಆ ಭಿಲ್ಲಪುರುಷರ ಸಹವಾಸಮಾಡಿದುದರಿಂದುಂಟಾದ ಸಕಲ ಪಾಪಗಳನ್ನೂ ಪರಿಹರಿಸಿ ನನ್ನನ್ನು ಕಾಪಾಡು. ॥೧೦೧॥

ಭಗವಂತನೇ, ಸಕಲ ಪ್ರಪಂಚಗಳಿಗೂ ಬೇಕಾದ ಫಲಗಳನ್ನೂ ಕೊಡುವ ದಾತೃವು ನೀನೇ ಆಗಿರುವೆ. ಜಗದ್ರಕ್ಷಕನೂ, ಲೋಕನಾಶಕನೂ, ಪ್ರಪಂಚವನ್ನು ಸೃಷ್ಟಿಮಾಡುವವನೂ, ಸಹ ನೀನೇ ಆಗಿರುವೆ. ಇದರಲ್ಲಿ ಸಂಶಯವಿಲ್ಲ. ॥೧೦೨॥

ಮಹೇಶ್ವರ, ಈ ಭೂಮಂಡಲದ ಉತ್ಪತ್ತಿಗೂ ನೀನೇ ಮೂಲಕಾರಣನು. ಹೀಗೆ ಉತ್ಪನ್ನವಾದ ಈ ಭೂಮಂಡಲವನ್ನು ಕಾಪಾಡಲೂ ನೀನೇ ಸಮರ್ಥನು. ಅಲ್ಲದೆ, ಕೊನೆಯಲ್ಲಿ ಈ ಭೂಮಂಡಲವನ್ನು ನಾಶಪಡಿಸುವವನೂ ನೀನೇ ಅಲ್ಲವೆ? ಪ್ರಭೋ, ಗೌರೀರಮಣ, ಸಕಲ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಕರ್ತನಾದ ನಿನಗೆ ನಮಸ್ಕಾರಮಾಡುವೆನು. ॥೧೦೩॥

ಅಪಾರಸಂಸಾರವಿನಾಶಕಾಯ
ಸಂಸಾರದುಃಖಪ್ರಲಯೋದ್ಯತಾಯ ।
ನಮೋಽಸ್ತು ತೇ ಕಾರಣಕಾರಣಾಯ
ವೈಕಾರಣಾಯಾಪಿ ನಮೋ ನಮಸ್ತೇ ॥೧೦೪॥

ವೇದಾಂತವೇದ್ಯಾಯ ನಮೋ ನಮಸ್ತೇ
ವೇದಸ್ವರೂಪಾಯ ನಮೋ ನಮಸ್ತೇ ।
ಅಪಾರಕಲ್ಯಾಣಗುಣಾರ್ಣವಾಯ
ನಮೋ ನಮಸ್ತೇ ಗಿರಿಜಾಸಹಾಯ ॥೧೦೫॥

ನಮೋ ನಮಶ್ಚಂದ್ರಕಲಾವತಂಸ
ಗೌರೀಸ್ಫುರನ್ಮಾನಸರಾಜಹಂಸ ।
ಗೌರೀವಿಹಾರೋನ್ನತಕಂಧರಾಂಸ
ನಮೋ ನಮೋ ಬಿಲ್ವವರೋತ್ತಮಾಂಸ ॥೧೦೬॥

---

ಅಪಾರವಾದ ಸಂಸಾರವನ್ನು ನಾಶಪಡಿಸುವವನೂ, ಈ ಸಂಸಾರದ ದುಃಖವನ್ನು ಹೋಗಲಾಡಿಸುವುದರಲ್ಲಿ ತತ್ಪರನೂ ಆದ ಮಹೇಶ್ವರನಿಗೆ ನಮಸ್ಕಾರ. ದೇವ! ಜಗತ್ಕಾರಣ ಭೂತವಾಗಿರುವ ಪದಾರ್ಥಗಳಿಗೆಲ್ಲಾ ನೀನೇ ಮೂಲ ಕಾರಣನು. ಅಲ್ಲದೆ ಸ್ಥೂಲಕಾರಣಗಳೆನಿಸಿರುವವನೂ ನೀನೇ, ಪ್ರಭೋ, ನಿನಗೆ ನಮಸ್ಕಾರ ಮಾಡುವೆನು. ॥೧೦೪॥

ವೇದಾಂತ ಜ್ಞಾನದಿಂದ ತಿಳಿಯಲ್ಪಡತಕ್ಕವನೂ, ಸಾಕ್ಷಾದ್ವೇದಸ್ವರೂಪನೂ ಆದ ನಿನಗೆ ನಮಸ್ಕರಿಸುವೆನು. ಗಿರಿಜಾರಮಣನೇ, ನೀನು ಅಪಾರವಾದ ಕಲ್ಯಾಣ ಗುಣಗಳಿಗೆ ಸಮುದ್ರದಂತೆ ಆಶ್ರಯನಾಗಿರುವೆಯಲ್ಲವೆ! ಇಗೋ, ನಿನಗೆ ಅನಂತ ನಮಸ್ಕಾರಗಳು. ॥೧೦೫॥

ಎಲೈ ಚಂದ್ರಶಿರೋಭೂಷಣನಾದ ದೇವನೆ! ನೀನು, ಪ್ರಕಾಶಿಸುತ್ತಿರುವ ಗೌರೀದೇವಿಯ ಮನಸ್ಸೆಂಬ ಮಾನಸಸರೋವರಕ್ಕೆ ರಾಜಹಂಸದಂತೆ ತೋರುತ್ತಿರುವೆ. ಸ್ವಾಮಿ! ನಿನ್ನನ್ನು ವಂದಿಸುವೆನು. ಗಿರಿರಾಜ ಕುಮಾರಿಯೊಡನೆ ವಿಹಾರ ಮಾಡಲು ಯೋಗ್ಯವಾದ ಉನ್ನತವಾದ ಭುಜಪ್ರದೇಶ, ಮತ್ತು ಕಂಠ ಇವುಗಳಿಂದ

ಕಶ್ಚಿಂದ್ರಚೂಡಚರಣಾಂಬುಜಪೂಜನೇನ
ನಾಭೀಷ್ಟಸಿದ್ಧಿಮುಸಕೃತ್ಸಮವಾಪ ರೂಪಂ ।
ಶೈವಂ ಸಮೇತ್ಯ ನವಬಿಲ್ವದಲಾಂಕುರೈರ್ವಾ
ಲಿಂಗಾರ್ಚನೇನ ವಿಜನೇ ರಜನೀಮುಖೇ ವಾ ॥೧೦೭॥

ಪ್ರದೋಷೇ ಬಿಲ್ವಂ ವಾ ಯದಿ ನವಜಲೇನಾಪಿ ಸಹಿತಂ
ಪ್ರದದ್ಯಾದ್ಯೋ ಭಕ್ತ್ಯಾ ಸಿತಭಸಿತಲಿಂಗೇಽತಿವಿಮಲೇ ।
ಸ ತಾವತ್ಸರ್ವೇಷಾಮಪಿ ಭವತಿ ಪೂಜ್ಯೋ ಜನಿಜರಾ
ವಿನಾಶಾನಾಂ ದುಃಖಂ ಪರಿಹರತಿ ದೃಷ್ಟೋಽಪಿ ಸಹಸಾ ॥೧೦೮॥

ಪುಣ್ಯಾನಿ ತಾವನ್ನ ಪುರಾ ಕೃತಾನಿ
ಯತಸ್ಸ್ಮರಾರಿಸ್ಮರಣಂ ನ ಪೂರ್ವಂ ।
ಅದ್ಯಾಪಿ ತಾವನ್ನ ಕೃತಾನಿ ಪುಣ್ಯಾ
ನ್ಯಥಾಪಿ ಲಿಂಗಂ ನಯನಾತಿಥಿರ್ನೋ ॥೧೦೯॥

---

ಶೋಭಿಸುತ್ತಿರುವ ಮಹಾದೇವನೇ! ಶ್ರೇಷ್ಠವಾದ ಬಿಲ್ವದಳಗಳಿಂದ ಶೋಭಾಯಮಾನವಾಗಿರುವ ಶಿರಸ್ಸುಳ್ಳ ನಿನಗೆ ನಮಸ್ಕಾರಮಾಡುವೆನು. ॥೧೦೬॥

ಯಾರುತಾನೇ, ಪ್ರದೋಷಕಾಲಗಳಲ್ಲಿ ನಿರ್ಜನವಾದ ಸ್ಥಳಗಳಲ್ಲಿ ಕುಳಿತು, ಎಳೆಯದಾದ ಹೊಸಬಿಲ್ವದಲಗಳಿಂದ ಶಿವಲಿಂಗವನ್ನೂ, ಮತ್ತು ಚಂದ್ರಶೇಖರನ ಪಾದಕಮಲಗಳನ್ನೂ ಪೂಜಿಸಿ, ತನಗೆ ಇಷ್ಟವಾದ ಪರಶಿವನ ರೂಪವನ್ನು ಹೊಂದಲಾರರು. ? ॥೧೦೭॥

ಪ್ರದೋಷ ಕಾಲಗಳಲ್ಲಿ ಪರಿಶುದ್ಧವಾದ ಹೊಸನೀರಿನಿಂದ ಅಭಿಷೇಕಮಾಡಿ, ಒಳ್ಳೆಯ ಬಿಲ್ವದಳಗಳನ್ನು, ಶುಭ್ರವೂ ವಿಭೂತಿಯಿಂದ ಪ್ರಕಾಶಿಸುತ್ತಿರುವುದೂ ಆದ ನಿರ್ಮಲ ಶಿವಲಿಂಗಕ್ಕೆ ಭಕ್ತಿಯಿಂದ ಪೂಜೆಮಾಡುವ ಮಾನವನು, ಎಲ್ಲರಿಗೂ ಪೂಜ್ಯನಾಗುವನು. ಮತ್ತು ಆ ಮಹಾನುಭಾವನನ್ನು ಒಂದು ಸಲ ನೋಡಿದ ಮಾತ್ರದಿಂದಲೇ ಮಾನವರ ಜನನ, ಮುಪ್ಪು, ಮತ್ತು ಮರಣರೂಪವಾದ ದುಃಖಗಳು ಕೂಡಲೇ ಪರಿಹಾರವಾಗುತ್ತವೆ. ॥೧೦೮॥

ಹಿಂದಿನ ಜನ್ಮದಲ್ಲಿ ನಾನು ಮನ್ಮಥಧ್ವಂಸಕನಾದ ಮಹಾದೇವನನ್ನು ಸ್ಮರಣೆಮಾಡದೇ ಹೋದುದರಿಂದ ಪುಣ್ಯವು ದೊರೆಯಲಿಲ್ಲ. ಈ ಜನ್ಮದಲ್ಲಿಯೂ

ಅಲಂ ಪುಣ್ಯಭಾರೈರಲಂ ಯೋಗದಾನೈ-
ರಲಂ ಸರ್ವಭೂಮಂಡಲಾವರ್ತನೈರ್ವಾ ।
ಯದಾ ಶರ್ವಲಿಂಗಂ ನವೈರ್ಬಿಲ್ವಪತ್ರೈಃ
ಪವಿತ್ರೈಃ ಪ್ರಸನ್ನಂ ತದಾ ತೈಶ್ಚ ಕಿಂ ವಾ ॥೧೧೦॥

ಅಹೋ ಮಹದ್ಭಾಗ್ಯಮಿದಂ ವನೇಽಸ್ಮಿ-
ನ್ವೃಷ್ಟಿಪ್ರಸಂಗಾದಪಿ ಶಂಗಲಿಂಗಂ ।
ದೃಷ್ಟಂ ಮಮ ಪ್ರಾಣವಿಯೋಗಕಾಲೇ
ನ ಭಾವಿ ಕಾಲಾದ್ಭಯಮಲ್ಪಶೋಽಪಿ ॥೧೧೧॥

ಸಕೃದಪ್ಯವಲೋಕಿತೋ ಮಹೇಶಃ
ಶಿವಲಿಂಗೇಷು ಸಮರ್ಚಿತೋಽಪಿ ಭಕ್ತ್ಯಾ ।

---

ಇಲ್ಲಿಯವರೆಗೆ ಯಾವ ಪುಣ್ಯಕರ್ಮಗಳನ್ನೂ ಆಚರಿಸಿಲ್ಲ. ಆದರೂ ಈ ಪರಶಿವ ಲಿಂಗವು ನನಗೆ ಗೋಚರವಾಯಿತು. ಇದು ನನ್ನ ಭಾಗ್ಯವೇ ಅಲ್ಲವೆ! ॥೧೦೯॥

ಪರಿಶುದ್ಧವಾದ ಹೊಸ ಬಿಲ್ವದಳಗಳಿಂದ ಪೂಜಿತವಾಗಿ ಪ್ರಸನ್ನವಾದ ಶಿವ ಲಿಂಗವನ್ನು ಪೂಜೆಮಾಡಿದ ಮೇಲೆ, ನಾನಾ ವಿಧವಾದ ಪುಣ್ಯಕರ್ಮಗಳೂ, ಯೋಗಾಭ್ಯಾಸ, ಅನೇಕ ದಾನಧರ್ಮಗಳು, ಅಥವಾ ಸರ್ವಭೂಮಂಡಲಯಾತ್ರೆ ಇವುಗಳಿಂದ ಏನುತಾನೇ ಫಲವುಂಟಾದೀತು? ಇತರ ದಾನಧರ್ಮಾದಿಗಳಿಂದ ಬರುವ ಪುಣ್ಯಫಲಗಳುಈ ಶಿವಲಿಂಗಪೂಜಾಪುಣ್ಯಫಲಗಳಿಗೆ ಎಂದಿಗೂ ಸರಿಹೋಗ ಲಾರವು. ಮತ್ತು ಇದೊಂದರಿಂದಲೇ ಆ ಎಲ್ಲಾ ಪುಣ್ಯಕರ್ಮಗಳ ಫಲವೂ ಅನಾಯಾಸವಾಗಿ ಬರುವುದೆಂದು ತಿಳಿಯಬೇಕು. ॥೧೧೦॥

ಆಹಾ! ನನಗೆ ಎಂತಹ ಮಹಾಭಾಗ್ಯವು ಪ್ರಾಪ್ತವಾಯಿತು. ಬಿರುಸಾದ ಮಳೆಯಿಂದ ದಾರಿಗಾಣದೆ ಎಲ್ಲಾದರೂ ನೆಲೆಯನ್ನು ಹುಡುಕಲು ಬಂದ ನನಗೆ ಈ ಮಳೆಯ ದೆಸೆಯಿಂದಲೇ ಪರಶಿವ ಲಿಂಗದ ದರ್ಶನವಾಯಿತು. ಇನ್ನು ನನ್ನ ಮರಣಸಮಯದಲ್ಲಿಯೂ ಯಮನ ಭಯವು ನನಗೆ ಉಂಟಾಗಲಾರದು. ॥೧೧೧॥

ಒಂದು ಸಲ ತನ್ನನ್ನು ದರ್ಶನಮಾಡಿದರೂ, ಅಥವಾ ಭಕ್ತಿಯಿಂದ ತನ್ನ ಲಿಂಗವನ್ನು ಪೂಜೆಮಾಡಿದರೂ ಮಾನವನನ್ನು ಈ ಮಹೇಶ್ವರನು ಕೃತಕೃತ್ಯಶ್ರೇಷ್ಠ

ಕೃತಕೃತ್ಯವಶಂ ಕರೋತಿ ಮರ್ತ್ಯಂ
ಸ ಕೃತಾಂತೋಽಪಿ ಬಿಭೇತಿ ತೇನ್ಯೆನೂನಂ

ಕೃತಾಂತಾಂತಕಂ ಕಃ ಪ್ರಪೂಜ್ಯಾತಿಭಕ್ತ್ಯಾ
ನವೈರ್ಬಿಲ್ವಪತ್ರೈರ್ಜಲೈರ್ವಾ ಫಲೈರ್ವಾ ।
ನ ಯಾತೀಶಪಾದಾರವಿಂದಂ ದ್ವಿರೇಫ
ಸ್ವಭಾವಂ ಭವಾಂಭೋಧಿರಾಶೇಶ್ಚ ಪಾರಂ

ಪ್ರಪನ್ನಾರ್ತಿನಿರ್ವಾಪಣೇಶಕ್ತಮೇಕಂ
ಮಹಾದೇವಮೇಕಂ ಪ್ರಪದ್ಯೇ ಮಹೇಶಂ ।
ವಿಶೇಷೇಣ ಮಾತಾ ಪಿತಾ ಬಂಧುರೇವ ।
ಪ್ರಕೃಷ್ಟಾ ನಿಕೃಷ್ಟಾನಿ ದೂರೀಕರೋತಿ



---

ನನ್ನಾಗಿ ಮಾಡುವನು. ಅಂತಹ ಪರಶಿವಭಕ್ತನನ್ನು ನೋಡಿದರೆ ಯಮನೂ ಸಹ ಭಯಪಡುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ॥೧೧॥

ಯಮನನ್ನು ನಿಗ್ರಹಿಸಿರುವ ಮಹಾಮಹಿಮವಾದ, ಭ್ರಮರಗಳಂತೆ ಸ್ವಭಾವವುಳ್ಳ (ಅಂದರೆ ಭ್ರಮರಗಳು ಯಾವಾಗಲೂ ಮಕರಂದವಿರುವ ಪುಷ್ಪಾದಿಗಳಲ್ಲಿಯೇ ಹಾರಾಡುತ್ತಾ ಸಂತೋಷದಿಂದ ಕಾಲಕಳೆಯುವುವು. ಹಾಗೆಯೇ ಪರಮೇಶ್ವರನೂ ತನ್ನನ್ನು ಭಕ್ತಿಯಿಂದ ಪೂಜಿಸುವ ಭಕ್ತರನ್ನು ಬಿಡದೆ ಸಲಹುವನಾದ್ದರಿಂದ ಈ ರೀತಿ ಹೇಳಿದೆ) ಮಹೇಶ್ವರನ ಅಡಿದಾವರೆಗಳನ್ನು ಅತಿಶಯವಾದ ಭಕ್ತಿಪೂರ್ವಕವಾಗಿ ಹೊಸ ಬಿಲ್ವಪತ್ರೆಗಳು, ಶುಭ್ರವಾದ ನೀರು ಮುಂತಾದವುಗಳಿಂದ ಪೂಜಿಸುವ ಮಾನವನು ಈ ಸಂಸಾರವೆಂಬ ದೊಡ್ಡ ಸಮುದ್ರವನ್ನು ದಾಟಿ, ಅದರ ಎಲ್ಲೆಯನ್ನು ಮುಟ್ಟಿ ಆನಂದಮಗ್ನನಾಗುತ್ತಾನೆ. ॥೧೩॥

ದುಃಖಿತರಾದವರ ದುಃಖವನ್ನು ಪರಿಹರಿಸುವುದರಲ್ಲಿ ಸಮರ್ಥನಾದ ಆ ಮಹೇಶ್ವರನೊಬ್ಬನನ್ನೇ ನಾನು ಭಜಿಸುತ್ತೇನೆ. ವಿಶೇಷವಾಗಿ ಈ ಮಹಾದೇವನೇ ನನಗೆ ತಾಯಿ, ತಂದೆ ಮತ್ತು ಬಂಧು ಎಲ್ಲವೂ ಆಗಿರುವನು. ತನ್ನ ಭಕ್ತರಿಗೆ ಬೇಕಾದ ಶ್ರೇಷ್ಠತೆಯನ್ನು ಕೊಡುವವನೂ, ಅವರಿಗೆ ಒದಗುವ ದೈನ್ಯವನ್ನು ದೂರ ಮಾಡುವವನೂ ಈ ಮಹಾದೇವನೇ ಆಗಿರುವನು. ॥೧೪॥

ಅನಾಯಾಸಲಭ್ಯೈವ ಮುಕ್ತಿರ್ಮಹೇಶೇ
ಶ್ರುತೇಽಪಿ ಸ್ಮೃತೇಽಪೀತಿ ಮನ್ಯೇ ತದನ್ಯಃ ।
ನ ಕೋಽಪ್ಯಸ್ತಿ ಭಕ್ತಾರ್ತಿಸಂಹಾರಹೇತುಃ
ಸ ಸೇತುಃ ಸುಖಾನಾಂ ಸ ಕೇತುರ್ಮಖಾನಾಂ ॥೧೧೫॥

ಮಹೇಶಂ ಭಜಂತಃ ಸ್ಮರಂತಃ ಸಕೃದ್ವಾ
ನ ಸಂಸಾರಭೀತಿಂ ಪ್ರಪಶ್ಯಂತಿ ಕಾಲಂ ।
ನ ಪಶ್ಯಂತಿ ದುಃಖಾನಿ ಕಾನ್ಯಪ್ಯತೋಽಹಂ
ಮಹೇಶಂ ವಿನಾನ್ಯಂ ನ ಜಾನೇ ನ ಜಾನೇ ॥೧೧೬॥

ಜನಿಸ್ತೇನ ತಾವದ್ಭವತ್ಯೇವ ತೇನ
ಸ್ಥಿತಿಸ್ತೇನ ಸಂಹಾರಕಾಲೇ ಸಮಾಪ್ತಿಃ ।
ಸಮಸ್ತಸ್ಯ ಲೋಕಸ್ಯ ತಸ್ಯಾಧುನಾಽಹಂ
ಪ್ರಪಶ್ಯಾಮಿ ಲಿಂಗಂ ಕೃತಾನಂಗಭಂಗಂ ॥೧೧೭॥

---

ಮಹೇಶ್ವರನನ್ನು ಒಂದುಸಲ ಸ್ಮರಣೆಮಾಡಿದರೂ ಅಥವಾ ಅವನ ವಿಷಯವನ್ನು ಒಂದುಬಾರಿ ಶ್ರವಣಮಾಡಿದರೂ ಅನಾಯಾಸವಾಗಿ ಮಾನವರಿಗೆ ಮುಕ್ತಿಯು ಲಭಿಸುವುದು. ಭಕ್ತರ ತೊಂದರೆಗಳನ್ನು ಹೋಗಲಾಡಿಸುವುದರಲ್ಲಿ ಕಾರಣಭೂತನಾಗಿರುವವನು ಈ ಮಹಾದೇವನೊಬ್ಬನೇ ಹೊರತು ಬೇರೆ ನಾನರಿಯೆನು. ಈ ಮಹೇಶ್ವರನು ಸುಖಗಳಿಗೆಲ್ಲಾ ಸೇತುವೆಯಂತೆ ಆಶ್ರಯನಾಗಿರುವನು. ಸಕಲ ಯಜ್ಞಯಾಗಾದಿಗಳಿಗೂ ಪತಾಕೆಯಂತೆ ಶೋಭಿಸುತ್ತಿರುವನು. ॥೧೧೫॥

ಒಂದುಸಲವಾದರೂ ಮಹೇಶ್ವರನನ್ನು ಭಜನೆ, ಅಥವಾ ಸ್ಮರಣೆಮಾಡುವ ಮಾನವರಿಗೆ ಈ ಸಂಸಾರದ ಭಯವೇ ಉಂಟಾಗಲಾರದು. ಮತ್ತು ಅವರಿಗೆ ಯಮನ ದರ್ಶನ ಸಹ ಆಗುವುದಿಲ್ಲ. ಅಲ್ಲದೇ ಇತರ ಯಾವ ದುಃಖಗಳೂ ಅವರ ಹತ್ತಿರಕ್ಕೂ ಸುಳಿಯಲಾರವು. ಆದುದರಿಂದ ನಾನು ಆ ಮಹೇಶನನ್ನು ಬಿಟ್ಟು ಬೇರೆ ಯಾರನ್ನೂ ಸೇವಿಸಲಾರೆನು. ॥೧೧೬॥

ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಕಾರ್ಯಗಳೂ ಈ ಮಹೇಶ್ವರನಿಂದಲೇ ಆಗುತ್ತಿರುವುವು. ಆದುದರಿಂದ ಮನ್ಮಥನ ಗರ್ವವನ್ನು ಭಂಗಮಾಡಿದ ಈ ಮಹೇಶ್ವರನ ಲಿಂಗವನ್ನು ಈಗ ದರ್ಶನಮಾಡುವೆನು. ॥೧೧೭॥

ಗ್ರಹಾಸ್ತಾವದದ್ಯಾಧುನಾ ಮೇ ಪ್ರಸನ್ನಾಃ
ಪುನಸ್ತಾವದೇಕಾದಶಸ್ಥಾನಯುಕ್ತಾಃ ।
ಸಮುಸ್ತಾತ್ಶ್ಚ ತೇ ತೇನ ಘೋರೇ ವನೇಽಸ್ಮಿ
ನ್ಪ್ರಕೃಷ್ಟಂ ಹಿ ಲಿಂಗಂ ಮಯಾ ದೃಷ್ಟಮೇವಂ ॥೧೧೮॥

ವಿನಷ್ಟಾನಿ ಕಷ್ಟಾನಿ ದುಃಖಪ್ರವಾಹಃ
ಕ್ಷಣೇನೈವ ನಷ್ಟೋಽ ಗತಾ ವೃಷ್ಟಿರೇಷಾ ।
ಇದಂ ಲಿಂಗಮಪ್ಯಂಬುನಾ ಸಿಕ್ತಮೇವಂ
ನವಂ ಬಿಲ್ವಪತ್ರಂ ವಹತ್ಯಾಶು ದತ್ತಂ ॥೧೧೯॥

ಅನೇನೈವ ದತ್ತೇನ ಬಿಲ್ವೇನ ಪಾಪಂ
ಪ್ರನಷ್ಟಂ ಪ್ರಕೃಷ್ಟಂ ಸುಖಂ ದಾತುಮೇವ ।
ಸಮರ್ಥಂ ನ ಸಂದೇಹವಾರ್ತಾಪಿ ಧನ್ಯಂ
ಶರೀರಂ ಮಮೇದಂ ತಥಾ ಜೀವನಂ ಚ ॥೧೨೦॥

---

ಈಗ ನನಗೆ ಆದಿತ್ಯಾದಿಗ್ರಹಗಳೆಲ್ಲರೂ ಪ್ರಸನ್ನರಾಗಿ, ಹನ್ನೊಂದನೆಯ ಅಂದರೆ ಲಾಭಸ್ಥಾನದ ಫಲವನ್ನು ಕೊಡುವವರಾಗಿದ್ದಾರೆ. ಆದ್ದರಿಂದಲೇ ಈ ಘೋರ ವಾದ ಕಾಡಿನ ಮಧ್ಯದಲ್ಲಿ ಈ ಶಿವಲಿಂಗದ ದರ್ಶನವಾಯಿತು. ॥೧೧೮॥

ಈ ಶಿವಲಿಂಗದ ದರ್ಶನದಿಂದ ನನ್ನ ಸಕಲ ಕಷ್ಟಗಳೂ ನಿವಾರಣೆಯಾದವು. ದುಃಖಪ್ರವಾಹವೆಲ್ಲವೂ ಎಲ್ಲಿಯೋ ಅಡಗಿ ಹೋಯಿತು. ಭಯಂಕರವಾದ ಮಳೆಯೂ ಸಹ ನಿಂತುಹೋಯಿತು. ಮಳೆಯ ನೀರಿನಿಂದ ನೆನಸಲ್ಪಟ್ಟ ಈ ಶಿವಲಿಂಗವು ಈಗ ತಾನೇ ನಾನು ಸಮರ್ಪಿಸಿದ ಹೊಸ ಬಿಲ್ವದಳಗಳನ್ನು ಧರಿಸಿ ಎಷ್ಟು ಚೆನ್ನಾಗಿ ಶೋಭಿಸುತ್ತಿದೆ! ॥೧೧೯॥

ಈಗ ಸಮರ್ಪಣೆಮಾಡಿದ ಈ ಬಿಲ್ವದಲದಿಂದಲೇ ನನ್ನ ಪಾಪವೆಲ್ಲಾ ನಾಶ ವಾಯಿತು. ಅಲ್ಲದೇ ಈ ಬಿಲ್ವದಳವು ಉತ್ತಮವಾದ ಸುಖವನ್ನು ಕೂಡ ಕೊಡಲು ಸಮರ್ಥವಾದುದೆಂದು ನಾನು ತಿಳಿದಿರುವೆನು. ಇದರಲ್ಲಿ ಸಂಶಯಪಡುವ ವಿಷಯವೇ ಇಲ್ಲ. ನನ್ನ ಈ ಶರೀರ ಮತ್ತು ಬಾಳು ಎಲ್ಲವೂ ಇಂದಿಗೆ ಈ ಪರಮೇಶ್ವರನನುಗ್ರಹ ದಿಂದ ಧನ್ಯವಾಯಿತು. ॥೧೨೦॥

ಬಿಲ್ವಾಂಕುರೇಣ ಗಿರಿಜಾರಮಣಃ ಕಥಂ ವಾ
ಪ್ರೀತೋ ಭವತ್ಯಘವಿನಾಶಕರಃ ಕಥಂ ವಾ ।
ಮುಕ್ತಿಪ್ರಪಾವಿತರಣಪ್ರವಣಃ ಕಥಂ ವಾ
ವೇದೋ ನ ವೇದ ತದಯಂ ಶಿವಕೌತುಕಾನಿ ॥೨೨॥

ಧತ್ತೂರಪುಷ್ಪಮಪಿ ಕೇತಕಪುಷ್ಪತುಲ್ಯಂ
ಕೃತ್ವಾ ಜಪಾಕುಸುಮಮಪ್ಯಪರಾಧಿನಾಪಿ ।
ಗೃಹ್ಣಾತಿ ದತ್ತಮಸಕೃತ್ಸಕೃದೇವ ವಾಯಂ
ಕಿಂ ಕೌತುಕಂ ತದಿದಮಿತ್ಯಪಿ ನೈವ ವಿದ್ಮಃ ॥೧೨೩॥

ಕಿಂ ಕಂಟಕಾರಿಕುಸುಮಾನ್ಯಪಿ ಕೌತುಕೇನ
ಗೃಹ್ಣಾತಿ ಕಿಂ ಕುಶದಲಾನ್ಯಪಿ ಕಿಂ ಶುಭಾನಿ ।

---

ಪಾಪ ನಾಶಕನಾಗಿ ಮುಕ್ತಿಯೆಂಬ ಪಾನೀಯಶಾಲೆಯನ್ನೇರ್ಪಡಿಸಿ, ಅದರಲ್ಲಿ ತನ್ನ ಭಕ್ತರಿಗೆ ಮೋಕ್ಷರಸವೆಂಬ ದಿವ್ಯ ಪಾನೀಯವನ್ನು ಕೊಡುವುದರಲ್ಲಿ ಅತಿ ನಿಪುಣನೆನಿಸಿರುವ ಗಿರಿಜಾರಮಣನು, ಚಿಗುರಾದ ಬಿಲ್ವದಳಗಳನ್ನು ಪೂಜೆಮಾಡಿದರೆ ಹೇಗೆ ಯಾವ ರೀತಿಯಲ್ಲಿ ಸಂತೋಷ ಹೊಂದುವನೆಂಬುದನ್ನರಿತವರಾರು? ಆ ಪರಶಿವನ ಚಮತ್ಕಾರವಾದ ಲೀಲೆಯನ್ನು ಸಾಕ್ಷಾದ್ವೇದವೇ ತಿಳಿಯಲಾರದು. ॥೧೨೨॥

ಭಕ್ತನು ತನಗೆ ಪೂಜೆಮಾಡಿದ ಧತ್ತೂರೀ ಹೂವನ್ನು ಸಹ ಕೇದಿಗೆಯ ಹೂವಿಗೆ (ತಾಳೆಯ ಹೂವಿಗೆ) ಸಮಾನವಾದದ್ದೆಂದು ಭಾವಿಸಿ ಪರಮೇಶ್ವರನು ಅದನ್ನು ಭಕ್ತಿಯಿಂದ ಸ್ವೀಕರಿಸುವನು. ಅಪರಾಧಿಯಾಗಿದ್ದರೂ ಅವನು ಒಂದು ಬಾರಿಯಾಗಲೀ ಅಥವ ಅನೇಕ ಸಲವಾಗಲೀ ತನ್ನ ಲಿಂಗಕ್ಕೆ ಪೂಜೆಮಾಡಿದ ಜಪಾ ಕುಸುಮವನ್ನು ಸಹ (ದಾಸವಾಳದ ಹೂವನ್ನು ಸಹ) ಬಹಳ ವಿಶ್ವಾಸದಿಂದ ಶಿವನು ಸ್ವೀಕರಿಸುತ್ತಾನೆ. ಆ ಮಹೇಶ್ವರನ ಲೀಲೆಯು ಅದೆಂತಹ ಕುತೂಹಲ ಮಯವಾದದ್ದೋ ನಮಗೆ ತಿಳಿಯದು. ॥೧೨೩॥

ಭಕ್ತರು ಸಮರ್ಪಿಸುವ ಹೆಗ್ಗುಳ್ಳದ ಹೂವುಗಳು ಮತ್ತು ಶುಭಕರವಾದ ದರ್ಭದಲಗಳು ಇವುಗಳನ್ನು ಸಹ ಪರಮೇಶ್ವರನು ಅತಿಯಾದ ಕುತೂಹಲದಿಂದ

ಭಕ್ತಾಭಿತಾಪಹರಣಾಯ ಜಲಾನಿ ಗೃಹ್ಣಾ
ತ್ಯಲ್ಪಾನಿ ತಾನ್ಯಭಿನವಾನಿ ನವಾನಿ ವಾಯಂ ॥೧೨೩॥

ಕಲ್ಯಾಣಸಾಗರ ಇತಿ ಪ್ರಥಿತೋ ಹರೋಽಯಂ
ಸರ್ವಾಘರಾಶಿಹರಣಾತ್ಸಹರೋ ಹರೋಽಪಿ ।
ತಂ ತಾದೃಶಂ ಗಿರಿಸುತಾಪತಿಮಾಶ್ರಯೇಽಹಂ
ಭಕ್ತೇಽಪ್ಸಿತಾರ್ಥದಮಪಾರಸುಖಪ್ರವಾಹೈಃ ॥೧೨೪॥

ಆಲೋಡ್ಯ ಚೈವ ಚಿರಮೇವ ಮಯಾಪಿ ಲೋಕೇ
ನಿರ್ಣೀತಮೀಶಚರಣಾಂಬುಜಮಾದರೇಣ ।
ಸಂಸೇವನೀಯಮಖಿಲಾಘವಿನಾಶನಾಯ
ಗೌರೀಪತಿಂ ಚಿರಮಹಂ ಹೃದಿ ಭಾವಯಾಮಿ ॥೧೨೫॥

---

ಸ್ವೀಕರಿಸುವನು. ಅಲ್ಲದೇ ಭಕ್ತರು ತನಗೆ ಅರ್ಪಿಸುವ ಅತ್ಯಲ್ಪವಾದ ಮತ್ತು ಆಗತಾನೇ ಹೊಸದಾಗಿ ತಂದಿರುವ ನೀರನ್ನೂ ಪ್ರೀತಿಯಿಂದ ಸ್ವೀಕರಿಸಿ, ತನ್ನ ಭಕ್ತರ ದುಃಖಗಳನ್ನೆಲ್ಲಾ ನಿವಾರಣೆಮಾಡುವನು. ॥೧೨೩॥

ಹರನೆನಿಸಿದ ಈ ಪರಮೇಶ್ವರನು ಕಲ್ಯಾಣಗುಣಗಳಿಗೆ ಸಾಗರದಂತೆ ಆಶ್ರಯನಾಗಿರುವನೆಂದು ಪ್ರಸಿದ್ಧಿಪಡೆದಿರುವನು. ತನ್ನ ಭಕ್ತರ ಸಕಲ ಪಾಪರಾಶಿಗಳನ್ನೂ ಧ್ವಂಸಮಾಡುವನಾದ್ದರಿಂದ ಇವನಿಗೆ ಹರನೆಂಬ ಹೆಸರು ರೂಢಿಯಾಯಿತು. ಅಪಾರವಾದ ಸುಖವನ್ನು ಪ್ರವಾಹದಂತೆ ಕೊಡುತ್ತಾ, ತನ್ನ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವುದರಲ್ಲಿ ನಿಪುಣನಾದ ಆ ಗಿರಿಜಾರಮಣನೆನಿಸಿದ ಮಹೇಶ್ವರನನ್ನು ನಾನು ಸದಾ ಆಶ್ರಯಿಸುವೆನು. ॥೧೨೪॥

ಈ ಲೋಕದಲ್ಲಿ ನಾನು ಬಹಳ ಕಾಲ, ಎಲ್ಲಾ ದೇವತೆಗಳ ವಿಷಯವನ್ನೂ ವಿಚಾರಮಾಡಿ, ಕೊನೆಗೆ ಸಕಲ ಪಾಪಗಳನ್ನೂ ನಿವಾರಣೆಮಾಡಲು ಈ ಪರಮೇಶ್ವರನ ಅಡಿದಾವರೆಗಳು ಮಾತ್ರ ಸಮರ್ಥವಾದವುಗಳೆಂದು ನಿಶ್ಚಯಿಸಿ, ಆ ಪಾದಪದ್ಮಗಳ ಸೇವೆಯೇ ಪರಮಪಾವನವೂ, ಸಕಲಮನೋರಥಪ್ರದವೂ ಎಂದು ತೀರ್ಮಾನಿಸಿರುವೆನು. ಆದುದರಿಂದಲೇ ಆ ಗೌರೀರಮಣನನ್ನೇ ನಾನು ಯಾವಾಗಲೂ ನನ್ನ ಹೃದಯದಲ್ಲಿ ಆದರದಿಂದ ಧ್ಯಾನಿಸುತ್ತಿರುವೆನು. ॥೧೨೫॥

ಗೌರೀಕುಚೋರುಗಿರಿಶೇಖರಚಾರುಹೀರ
ಹಾರಸ್ಫುರದ್ಗಿರಿಶಪಾದಸರೋಜಭೃಂಗಃ ।
ಮನ್ಮಾನಸಂ ಭವತು ತೇನ ವಿಮುಕ್ತಿರಸ್ಯ
ಸಂಭಾವಿತಾಪಿ ಜಗತಾಮಪಿ ಮಾನನೀಯಃ ॥೧೨೬॥

ಮದೀಯಸುಕೃತಾಪಾರಪಾರಾವಾರೋ ಮಹೇಶ್ವರಃ ।
ಕುಲದೈವತಮಸ್ಮಾಕಮಕಸ್ಮಾದಭವತ್ಕಥಂ ॥೧೨೭॥

ಕ್ವಾಹಂ ಕ್ವ ವಾ ವೃಷ್ಟಿರಿಯಂ ಪ್ರಭೂತಾ
ಸಂತೋಷರೂಪಾ ಶಿವದರ್ಶನೇನ ।
ಅಲಂ ಕೃತಾರ್ಥಂ ಮಮ ಮಾನಸಂ ಮೇ
ಕೃತ್ಯಂ ಚ ನಾತಃ ಪರಮಸ್ತಿ ಲೋಕೇ ॥೧೨೮॥

---

ಗಿರಿಜಾದೇವಿಯ ಪರ್ವತದ ಶಿಖರದಂತೆ ಉನ್ನತವಾಗಿರುವ ಸ್ತನಪ್ರದೇಶದಲ್ಲಿ ಮನೋಹರವಾದ ಹೀರಮಣಿಗಳ ಹಾರವು ವಿರಾಜಿಸುತ್ತಿರುವುದು. ಉಮಾಮಹೇಶ್ವರರು ಪರಸ್ಪರ ವಿಹಾರಮಾಡುವ ಕಾಲದಲ್ಲಿ ಆ ಹಾರವು ಪರಮೇಶ್ವರನ ಪಾದ ಪರ್ಯಂತವೂ ಜೋತುಬಿದ್ದಿರುವುದರಿಂದ ಅದು ಅತಿಶಯ ಕಾಂತಿಯುಕ್ತವಾಗಿ ಹೊಳೆಯುತ್ತಿರುವುದು. ಅಂತಹ ಮಹೇಶ್ವರನ ಪಾದದಲ್ಲಿ ಈ ನನ್ನ ಚಂಚಲವಾದ ಮನಸ್ಸು ಭೃಂಗದಂತೆ ನೆಲಸಲಿ. ಇದರಿಂದ ನನಗೆ ನಿಶ್ಚಯವಾಗಿಯೂ ಮುಕ್ತಿಯು ದೊರತೇ ತೀರುವುದು. ಅಲ್ಲದೇ ಸಕಲ ಪ್ರಪಂಚದಲ್ಲಿಯೂ ಉತ್ತಮ ಸ್ಥಾನವು ದೊರೆತು ಗೌರವವುಂಟಾಗುವುದು. ॥೧೨೬॥

ಈ ಮಹೇಶ್ವರನು, ಕೊನೆ ಮೊದಲೇ ಇಲ್ಲದಿರುವ ನನ್ನ ಪುಣ್ಯರಾಶಿಗೆ ಆಶ್ರಯನು. (ಅಂದರೆ ಈ ಮಹಾದೇವನ ದಿವ್ಯಸಂದರ್ಶನದಿಂದ ನನಗೆ ಅಪಾರವಾದ ಪುಣ್ಯರಾಶಿಯೇ ಲಭಿಸಿದಂತಾಯಿತೆಂದು ಭಾವವು.) ಅಲ್ಲದೆ ಅಪಾರ ಮಹಿಮನಾದ ಈ ಮಹಾದೇವನು ಅಕಸ್ಮಾತ್ತಾಗಿ ನನ್ನ ಕುಲದೇವತೆಯಾಗಲು ಕಾರಣವೇನೋ ನನಗೆ ತಿಳಿಯದು. (ಎಲ್ಲವೂ ಆ ಪರಮೇಶ್ವರನ ಲೀಲೆಯೇ ಎಂದು ಭಾವಿಸುವೆನು.) ॥೧೨೭॥

ಎಲ್ಲಿಯೋ ಭಿಲ್ಲಪುರುಷರೊಡನೆ ಸ್ವೇಚ್ಛೆಯಿಂದ ವಿಹರಿಸುತ್ತಿದ್ದ ನಾನೆಲ್ಲಿ! ಇದ್ದಕ್ಕಿದ್ದ ಹಾಗೆಯೇ ಅದ್ಭುತವಾಗಿ ಹುಯ್ಯಲು ಪ್ರಾರಂಭಮಾಡಿದ ಈ ಮಳೆ

ಇತಿ ಸ್ತುತ್ವಾ ಮಹಾದೇವಂ ಸಾ ಸ್ಥಿತಾ ಶಿವಮಂದಿರೇ
ತದಾನೀಮಾಗತಾ ಮಾತಾಸ್ತಸ್ಯಾಸ್ತಾಂ ದ್ರಷ್ಟುಮಾದರಾತ್ ॥೧೨೯॥

ತಾಂ ವಿವಸ್ತ್ರಾಂ ಕಂಪಮಾನಾಂ ವಿಲೋಕ್ಯಾತೀವ ದುಃಖಿತಾ ।
ಪಟಖಂಡಂ ದದೌ ತಸ್ಯೈ ಸಾ ನ ಜಗ್ರಾಹ ತಂ ಪಟಂ ॥೧೩೦॥

ತಾಮಾಹ ಜನನೀ ತಸ್ಯಾಃ ಕಂಪಮಾನಾಂ ಸುತಾಂ ಪ್ರತಿ ।
ಗೃಹಾಣ ವಸನಂ ಬಾಲೇ ನಗ್ನಾಸಿ ಕಿಮಿದಂ ವದ ॥೧೩೧॥

ಇತಿ ತದ್ವಚನಂ ಶ್ರುತ್ವಾ ತ್ಯಕ್ತ್ವಾ ಸಂಭಾಷಣಂ ತದಾ ।
ಶಿವಮಂದಿರಮಾಶ್ರಿತ್ಯ ಸ್ಥಿತಾ ವಿಹ್ವಲಮಾನಸಾ ॥೧೩೨॥

---

ಯೆಲ್ಲಿ? ಇದೇ ಸಂದರ್ಭದಲ್ಲಿ ನನ್ನ ತನು, ಮಾನಗಳನ್ನು ರಕ್ಷಿಸಿಕೊಳ್ಳಲು ನೆಲೆಯನ್ನು ಆರಸುತ್ತಾ ಈ ದೇವಾಲಯಕ್ಕೆ ಬಂದಮೇಲೆ ಒದಗಿದ ಈ ಪರಮಪಾವನವಾದ ಶಿವಲಿಂಗ ದರ್ಶನವೆಲ್ಲಿ? ಏನೆಂದು ಯೋಚಿಸಲೂ ಅಸಾಧ್ಯವಾಗಿರುವುದು. ಈ ಶಿವಲಿಂಗ ದರ್ಶನದಿಂದ ನನಗೆ ಉಂಟಾದ ಸಂತೋಷವನ್ನು ಹೇಗೆ ವಿವರಿಸಲಿ.? ಎಲ್ಲವೂ ಕರುಣಾಮಯನಾದ ಆ ಜಗದೀಶ್ವರನ ಲೀಲೆಯೇ! ಇನ್ನು ನನ್ನ ಮನಸ್ಸು ಇಂದಿಗೆ ಕೃತಾರ್ಥವಾಯಿತು. ಈ ಲೋಕದಲ್ಲಿ ಇನ್ನು ಮುಂದೆ ನನ್ನಿಂದಾಗಬೇಕಾದ ಕಾರ್ಯವೇನೂ ನನಗೆ ತೋರದು." ॥೧೨೮॥

ಆ ಭಿಲ್ಲ ಯುವತಿಯ ರೂಪವನ್ನು ಧರಿಸಿದ್ದ ಈ ರಾಣಿಯು, ಮಹಾದೇವನನ್ನು ಆ ಶಿವಮಂದಿರದಲ್ಲಿ ಹಾಗೆ ಸ್ತೋತ್ರಮಾಡಿ, ಭಕ್ತಿಪರವಶಳಾಗಿ ನಿಂತಿರುವ ಸಮಯಕ್ಕೆ ಸರಿಯಾಗಿ, ಇವಳ ತಾಯಿಯು ಮಗಳನ್ನು ನೋಡುವುದಕ್ಕೋಸ್ಕರ ಆದರದಿಂದ ಹುಡುಕಿಕೊಂಡು ಅಲ್ಲಿಗೆ ಬಂದಳು. ॥೧೨೯॥

ಆಗ ಬಟ್ಟೆಯಿಲ್ಲದೆ ಛಳಿಯಿಂದ ನಡುಗುತ್ತಿರುವ ತನ್ನ ಮಗಳನ್ನು ನೋಡಿ, ತಾಯಿಯು ಅತಿಯಾಗಿ ದುಃಖ ಹೊಂದಿ, ತಾನು ತಂದಿದ್ದ ಒಂದು ಬಟ್ಟೆಯ ತುಂಡನ್ನು ಮಗಳಿಗೆ ಧರಿಸುವುದಕ್ಕೋಸ್ಕರ ಕೊಟ್ಟಳು. ಆದರೆ ಅವಳು ಆ ಬಟ್ಟೆಯನ್ನು ತೆಗೆದುಕೊಳ್ಳಲಿಲ್ಲ. ॥೧೩೦॥

ತಾನು ಕೊಟ್ಟ ಬಟ್ಟೆಯನ್ನು ತೆಗೆದುಕೊಳ್ಳದೆ ಇರುವುದನ್ನು ನೋಡಿ, ತಾಯಿಯು, ನಡುಗುತ್ತಿರುವ ಮಗಳನ್ನು ಕುರಿತು, "ಎಲೌ ಮಗಳೇ! ಬೆತ್ತಲೆ

ತತಃ ಪರಂ ಸಾಯಮುಮಾಸಹಾಯಂ
ನಗ್ನೈವ ಬಿಲ್ವೈರ್ಗಿರಿಮಲ್ಲಿಕಾಭಿಃ ।
ಸಮರ್ಚಯಾಮಾಸ ತನುಂ ಸ್ವಕೀಯಾ
ಮುದ್ಧೂಲ್ಯ ಶಂಭುಸ್ಮರಣಾನುರಕ್ತಾ ॥೧೩॥

ರಾತ್ರಿರ್ಜಾಗರಣೇನೈವ ನೀತಾ ನಾಟ್ಯೇನ ಸಾ ತಯಾ ।
ಪುನಃ ಪ್ರಾತಃ ಸಮುತ್ಥಾಯ ಶಿವಪೂಜಾಂ ಚಕಾರ ಸಾ ॥೧೪॥

ಅರುಣೋದಯವೇಲಾಯಾಂ ಕಾಪಿ ಗಂಧರ್ವಕನ್ಯಕಾ ।
ತಲ್ಲಿಂಗಾರಾಧನಂ ಕರ್ತುಮಾಗತಾ ಬಹುಸಾಧನಾ ॥೧೫॥

---

ಯಲ್ಲಿರುವೆ. ಅತಿಯಾದ ಮಳೆಗಾಳಿಗಳ ಹೊಡೆತದಿಂದ ನಿನ್ನ ಶರೀರವೆಲ್ಲವೂ ನಡುಗುತ್ತಿರುವುದು. ಆದುದರಿಂದ ಈ ಬಟ್ಟೆಯನ್ನು ತೆಗೆದು ಉಟ್ಟುಕೋ, ಸಮಾಚಾರವೇನೆಂಬುದನ್ನು ನನಗೆ ಹೇಳು" ಎಂದು ಮಗಳಿಗೆ ಹೇಳಿದಳು. ॥೧೩೧॥

ತನ್ನ ತಾಯಿಯ ಮಾತುಗಳನ್ನು ಕೇಳಿ, ಅವಳೊಡನೆ ಮಾತನಾಡುವುದನ್ನೇ ನಿಲ್ಲಿಸಿ, ಬಹಳ ನೊಂದ ಮನಸ್ಸುಳ್ಳವಳಾಗಿ ಕಾತರಗೊಂಡು, ಆ ಶಿವಾಲಯದ ಒಳಗಡೆಯೇ ಹೋಗಿ ನಿಂತುಬಿಟ್ಟಳು. ॥೧೩೨॥

ಹೀಗಾದಮೇಲೆ ಸಾಯಂಕಾಲದಲ್ಲಿ ಉಮಾರಮಣನಾದ ಪರಮೇಶ್ವರನನ್ನು, ನಗ್ನಳಾಗಿಯೇ, ಬಿಲ್ವಪತ್ರೆಗಳಿಂದಲೂ, ಮತ್ತು ಗಿರಿಮಲ್ಲಿಕಾ ಪುಷ್ಪಗಳಿಂದಲೂ, ಪೂಜೆಮಾಡಿದಳು. ಆಮೇಲೆ ತನ್ನ ಮೈಯನ್ನೆಲ್ಲಾ ಚೆನ್ನಾಗಿ ಭಸ್ಮದಿಂದ ಲೇಪಿಸಿಕೊಂಡು ಶಂಭುವಿನ ಸ್ಮರಣೆಯಲ್ಲಿ ತತ್ಪರಳಾದಳು. ॥೧೩೩॥

ಆ ರಾತ್ರಿಯನ್ನೆಲ್ಲಾ ಜಾಗರಣೆಯಿಂದಲೇ ಕಳೆದು, ನಡುಗುತ್ತಿರುವ ಆ ನನ್ನ ಶರೀರದಿಂದಲೇ ಶಿವನ ಮುಂದೆ ನಾಟ್ಯವಾಡುತ್ತಿದ್ದಳು. ಮಾರನೆಯ ದಿನ ಪ್ರಾತಃಕಾಲದಲ್ಲಿಯೇ ನಾಟ್ಯದಿಂದ ಎಚ್ಚೆತ್ತು, ಪುನಃ ಆ ಪರಶಿವನನ್ನು ಭಕ್ತಿಯಿಂದ ಪೂಜೆಮಾಡಿದಳು. ॥೧೩೪॥

ಅದೇ ದಿನ ಅರುಣೋದಯ ಕಾಲಕ್ಕೆ ಸರಿಯಾಗಿ ಒಬ್ಬ ಗಂಧರ್ವಕುಮಾರಿಯು ಅದೇ ಶಿವಲಿಂಗವನ್ನು ಪೂಜಿಸುವುದಕ್ಕೋಸ್ಕರ ಅನೇಕ ಪೂಜಾಸಾಮಗ್ರಿಗಳೊಡನೆ ಆ ಸ್ಥಳಕ್ಕೆ ಬಂದಳು. ॥೧೩೫॥

ಸಾ ಸಮಾಗತ್ಯ ತೀರ್ಥೇಷು ಸ್ನಾತ್ವೋದ್ಧೂಲ್ಯಾಪಿ ಭಸ್ಮನಾ ।
ಅರ್ಚಯಾಮಾಸ ವಿವಿಧೈರ್ಲಿಂಗಂ ಪುಷ್ಪಾದಿಸಾಧನೈಃ ॥೧೩೬॥

ತತಃ ಪರಂ ಸಾ ಚಕಾರ ಗಾನಂ ಗಂಧರ್ವವಿದ್ಯಯಾ ।
ನಾಟ್ಯಂ ಚಕಾರ ಬಹುಧಾ ಸ್ವಸಖೀಗಣವೇಷ್ಟಿತಾ ॥೧೩೭॥

ಸೌಂದರ್ಯನಿಧಿರೂಪಾಂ ತಾಂ ದೃಷ್ಟ್ವಾ ಗಂಧರ್ವಕನ್ಯಕಾಂ ।
ಶಿವಾರ್ಚನರತಾಂ ದೃಷ್ಟ್ವಾ ಭಿಲ್ಲಕನ್ಯಾ ಮನೋರಮಾಂ ॥೧೩೮॥

ಸಾಪಿ ಗಂಧರ್ವತನಯಾ ತಾಂ ದೃಷ್ಟ್ವಾ ಭಿಲ್ಲಕನ್ಯಕಾಂ ।
ಭಸ್ಮೋದ್ಧೂಲಿತಸರ್ವಾಂಗಾಂ ನಗ್ನಾಮಾಹ ವಿಚಕ್ಷಣಾಂ ॥೧೩೯॥

॥ ಗಂಧರ್ವಕನ್ಯಕೋವಾಚ ॥

ಕಾಸಿ ತ್ವಂ ಕಸ್ಯ ಕನ್ಯಾಸಿ ಯುವತೀ ನಗ್ನತಾಂ ಗತಾ ।
ನ ದೃಷ್ಟಾ ಹಿ ವನೇ ಕ್ವಾಪಿ ಕಿಂ ತೇ ಕಾಲಮಿದಂ ವದ ॥೧೪೦॥

---

ಆ ಗಂಧರ್ವ ಕುಮಾರಿಯು, ಅಲ್ಲಿಗೆ ಬಂದ ನಂತರ, ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ, ಶರೀರಕ್ಕೆಲ್ಲಾ ಭಸ್ಮವನ್ನು ಬಳಿದುಕೊಂಡು, ನಾನಾ ವಿಧವಾದ ಹೂಗಳೇ ಮುಂತಾದ ಪೂಜಾ ಸಾಮಗ್ರಿಗಳಿಂದ ಆ ಶಿವಲಿಂಗವನ್ನು ಪೂಜೆಮಾಡಿದಳು. ॥೧೩೬॥

ಪೂಜೆಯು ಮುಗಿದ ಮೇಲೆ ಆ ಗಂಧರ್ವಕನ್ಯೆಯು ತನ್ನ ಗಂಧರ್ವ ವಿದ್ಯೆಯಿಂದ ಮನೋಹರವಾಗಿ ಗಾನಮಾಡಿ, ತನ್ನ ಸಖಿಯರೊಡನೆ ಸುತ್ತುವರಿಯಲ್ಪಟ್ಟವಳಾಗಿ ಅನೇಕ ವಿಧದಿಂದ ನರ್ತನ ಮಾಡಿದಳು. ॥೧೩೭॥

ಸೌಂದರ್ಯಗಳಿಗೆ ನಿಧಿಯಂತೆ ನೆಲೆಯಾಗಿರುವಳೂ, ಮನೋಹರವಾದ ಆಕೃತಿಯುಳ್ಳವಳೂ, ಮತ್ತು ಶಿವಪೂಜಾತತ್ಪರಳೂ ಆದ ಆ ಗಂಧರ್ವಕುಮಾರಿಯನ್ನು ಆ ಭಿಲ್ಲಕನ್ಯೆಯು ನೋಡಿದಳು. ॥೧೩೮॥

ಆ ಗಂಧರ್ವಕುಮಾರಿಯೂ ಸಹ ಆ ಭಿಲ್ಲಕನ್ಯೆಯನ್ನು ನೋಡಿ, ಭಸ್ಮದಿಂದ ವ್ಯಾಪ್ತವಾದ ಶರೀರವುಳ್ಳವಳಾಗಿ ಬೆತ್ತಲೆಯಿಂದಿರುವ ವಿಚಕ್ಷಣೆಯಾದ ಆ ನಾರಿಯನ್ನು ಕುರಿತು ಇಂತೆಂದಳು. ॥೧೩೯॥

“ ಎಲೌ ಮಂಗಳಾಂಗಿಯೇ, ನೀನು ಯಾರು ? ಯಾರ ಮಗಳು ? ಯುವತಿ



 

ಕಿಂ ಚ ಪೂತಾ ಭಸ್ಮನೇಯಂ ತನುರತ್ಯುತ್ತಮಾ ತವ ।
ಕೇನ ವಾ ಶಿಕ್ಷಿತಾ ದೀಕ್ಷಾ ದತ್ತಾ ಕೇನ ಮಹಾತ್ಮನಾ ॥೧೪೧॥

ಲಜ್ಜಾಮಾತ್ರಂ ಪರಿತ್ಯಜ್ಯ ವನೇಽಸ್ಮಿಂಛಿವಮಂದಿರೇ ।
ಏಕಾಕಿನೀ ವಿಚರಣೇ ವಿನಾ ತಿಷ್ಠಸಿ ನಿರ್ಭಯಾ ॥೧೪೨॥

ಏತೈರ್ಬಿಲ್ವದಲೈರೀಶಃ ಕಿಂ ತ್ವಯಾ ಸಾಯಮರ್ಚಿತಃ ।
ಧನ್ಯಾಸಿ ತವ ಭಾಗ್ಯಸ್ಯ ನಾಂತಃ ಸರ್ವಾತ್ಮನಾ ಖಲು ॥೧೪೩॥

ಪ್ರಾಯಸ್ತೇ ನಾಟ್ಯವೇಗೇನ ವಸನಂ ವಾಯುನಾ ಹೃತಂ ।
ಧನ್ಯಾಸಿ ಮಮ ಭಾಗ್ಯಾಸಿ ಸಮಾಯಾಹಿ ಮಯಾ ಸಹ ॥೧೪೪॥

---

ಯಾದ ನಿನಗೆ ಈ ರೀತಿ ನಗ್ನಸ್ಥಿತಿಯುಂಟಾಗಲು ಕಾರಣವೇನು? ಹಿಂದೆ ಯಾವಾಗಲೂ ನಾನು ನಿನ್ನನ್ನು ಈ ಕಾಡಿನಲ್ಲೆಲ್ಲಿಯೂ ನೋಡಿಲ್ಲ. ನಿನ್ನ ವಂಶವಾವುದು? ॥೧೪೦॥

ಭಸ್ಮದಿಂದ ಪರಿಶುದ್ಧವಾಗಿರುವ ಈ ನಿನ್ನ ಶರೀರವು ಅತ್ಯುತ್ತಮವೆನಿಸಿರುವುದು. ಯಾರಿಂದ ನಿನಗೆ ಈ ರೀತಿಯಾದ ಶಿಕ್ಷೆಯು ಕೊಡಲ್ಪಟ್ಟಿತು? ನಿನಗೆ ಈ ದೀಕ್ಷೆಯನ್ನು ಉಪದೇಶಮಾಡಿದ ಮಹಾತ್ಮನಾರು? ॥೧೪೧॥

ಸ್ತ್ರೀಸ್ವಭಾವವಾದ ಲಜ್ಜೆಯನ್ನು ಸಂಪೂರ್ಣವಾಗಿ ಬಿಟ್ಟು ಘೋರವಾದ ಈ ಅಡವಿಯಲ್ಲಿರುವ ಈ ಶಿವಮಂದಿರದಲ್ಲಿ ಒಬ್ಬಳೇ ಯಾರ ಭಯವೂ ಇಲ್ಲದೇ ಸಂಚರಿಸುತ್ತಿರುವೆಯಲ್ಲಾ! ॥೧೪೨॥

ಈ ಪ್ರದೋಷಕಾಲದಲ್ಲಿ ಇಲ್ಲಿ ಕಾಣುತ್ತಿರುವ ಬಿಲ್ವದಳಗಳಿಂದ ಈಶ್ವರನನ್ನು ನೀನು ಪೂಜೆಮಾಡಿದೆಯಾ! ಅಮ್ಮಾ, ನೀನು ಧನ್ಯಳು. ನಿನ್ನ ಭಾಗ್ಯಕ್ಕೆ ಪಾರವೇ ಇಲ್ಲ. ॥೧೪೩॥

ನೀನು ಶಿವನ ಸಮಕ್ಷದಲ್ಲಿ ನಾಟ್ಯವಾಡುತ್ತಿದ್ದಾಗ, ಆ ನಾಟ್ಯವೇಗದಿಂದುಂಟಾದ ವಾಯುವಿನಿಂದ ನಿನ್ನ ವಸ್ತ್ರವು ಅಪಹರಿಸಲ್ಪಟ್ಟಿರುವುದೆಂದು ತಿಳಿಯುವೆನು. ಧನ್ಯಳಾದ ಎಲೌ ಯುವತಿಯೇ, ನೀನೇ ನನ್ನ ಭಾಗ್ಯಸ್ವರೂಪಳು. ಸಮೀಪಕ್ಕೆ ಬಾ, ಜೊತೆಯಲ್ಲಿ ಹೋಗೋಣ" ಎಂದು ಹೇಳಿದಳು. ॥೧೪೪॥

ಇತ್ಯುಕ್ತ್ವಾ ತಾಂ ಗೃಹೀತ್ವೈವ ವಸ್ತ್ರಾಣ್ಯಾಭರಣಾನಿ ಚ ।
ದತ್ವಾ ಯಯೌ ಸ್ವನಗರಂ ಸಾಽಪಿ ಗಂಧರ್ವಕನ್ಯಕಾಂ ॥೧೪೫॥

ತತಃ ಪ್ರತ್ಯಹಮಾಗತ್ಯ ಸಹ ಗಂಧರ್ವಕನ್ಯಯಾ ।
ಪೂಜಯಾಮಾಸ ಗೌರೀಶಂ ಸಾಪಿ ಭಿಲ್ಲಸ್ಯ ಕನ್ಯಕಾ ॥೧೪೬॥

ತತಃ ಕದಾಚಿದಾಗತ್ಯ ಬಿಲ್ವಮಾರುಹ್ಯ ವೇಗತಃ ।
ಬಿಲ್ವಪತ್ರಾರ್ಥಮೇವಾತಃ ಪಪಾತಾನಿಲಕಂಪಿತಾ ॥೧೪೭॥

ತತೋ ವಿಸೃಜ್ಯ ಸಾ ದೇಹಂ ವಿಮಾನವರಮಾಶ್ರಿತಾ ।
ಬ್ರಹ್ಮಲೋಕಂ ಯಯೌ ತತ್ರ ಬ್ರಹ್ಮಣಾ ಪೂಜಿತಾ ನೃಪ ॥೧೪೮॥

---

ಆ ಭಿಲ್ಲಕನ್ಯೆಯನ್ನು ಕುರಿತು ಹೀಗೆ ಹೇಳಿ, ಅವಳಿಗೆ ಉತ್ತಮವಾದ ವಸ್ತ್ರಗಳನ್ನೂ ಮತ್ತು ಆಭರಣಗಳನ್ನೂ ಕೊಟ್ಟು, ಅವಳನ್ನೂ ಜೊತೆಯಲ್ಲಿಯೇ ಕರೆದುಕೊಂಡು, ಆ ಗಂಧರ್ವಕುಮಾರಿಯು ತನ್ನ ಪಟ್ಟಣಕ್ಕೆ ತೆರಳಿದಳು. ॥೧೪೫॥

ಅನಂತರ ಆ ಗಂಧರ್ವಲೋಕದಿಂದಲೇ ಪ್ರತಿನಿತ್ಯವೂ ತನ್ನ ಗೆಳತಿಯಾದ ಗಂಧರ್ವಕುಮಾರಿಯೊಡನೆ ಅಲ್ಲಿಗೆ ಬರುತ್ತಾ ಆ ಭಿಲ್ಲಕನ್ಯೆಯು, ಗೌರೀರಮಣನಾದ ಮಹೇಶ್ವರನನ್ನು ಪೂಜಿಸುತ್ತಿದ್ದಳು. ॥೧೪೬॥

ಹೀಗೆಯೇ ಅನೇಕ ದಿನ ಕಳೆಯಿತು. ಒಂದುದಿನ ಎಂದಿನಂತೆಯೇ ಆ ಶಿವಲಿಂಗಪೂಜೆಗೋಸ್ಕರ ಗಂಧರ್ವಲೋಕದಿಂದ ಬಂದು, ಬಿಲ್ವವೃಕ್ಷದ ಮೇಲೆ ಹತ್ತಿ (ಪೂಜೆಗೋಸ್ಕರ) ಬಿಲ್ವದಳಗಳನ್ನು ಕೊಯ್ಯುತ್ತಿದ್ದಾಗ, ವೇಗದಿಂದ ಮರವನ್ನು ಹತ್ತಿದ ಕಾರಣದಿಂದಲೂ, ಗಾಳಿಯ ಹೊಡೆತದಿಂದಲೂ ಕೊಂಬೆಯಿಂದ ಜಾರಿ ಮರದಿಂದ ಕೆಳಗೆ ಬಿದ್ದಳು. ॥೧೪೭॥

ಎಲೈ ರಾಜನೇ, ಹಾಗೆ ಮರದಿಂದ ಬಿದ್ದ ಒಡನೆಯೆ ಆಕೆಗೆ ಮರಣಸಂಭವಿಸಿ ಆ ಶರೀರವನ್ನು ತ್ಯಾಗಮಾಡಿ, ಇವಳು ಉತ್ತಮವಾದ ವಿಮಾನವನ್ನೇರಿ, ಬ್ರಹ್ಮಲೋಕಕ್ಕೆ ತೆರಳಿ, ಅಲ್ಲಿ ಬ್ರಹ್ಮನಿಂದ ಪೂಜಿಸಲ್ಪಟ್ಟಳು. ॥೧೪೮॥

ತತಶ್ಚತುರ್ಮುಖಃ ಪ್ರಾಹ ಸಭಾಯಾಂ ಸ ಸುರಾನ್ಪ್ರತಿ ।
ಭಾಗ್ಯಮೇತಾದೃಶಂ ಲೋಕೇ ಲಬ್ಧಂ ಶಂಕರಪೂಜಯಾ ॥೧೪೯॥

॥ ಬ್ರಹ್ಮೋವಾಚ ॥

ಭಿಲ್ಲಸ್ಯ ಕನ್ಯಕಾ ಸೇಯಂ ವನೇಽಪಿ ವ್ಯಭಿಚಾರಣೀ ।
ಜಾರಾಲಿಂಗನಸಂತುಷ್ಟಾ ಶಿವಮಂದಿರಮಾಶ್ರಿತಾ ॥೧೫೦॥

ಬಿಲ್ವೈಃ ಶಿವಾರ್ಚನಂ ತಾವಚ್ಚಕಾರೇಯಂ ಮನೋಹರೈಃ ।
ತೇನ ಪುಣ್ಯಪ್ರಭಾವೇನ ಗಂಧರ್ವನಗರಂ ಗತಾ ॥೧೫೧॥

ಗಂಧರ್ವನಾರೀಸಹಿತಾ ತಾಭಿರಪ್ಯಾದೃತಾ ಸದಾ ।
ಕದಾಚಿದ್ಬಿಲ್ವಮಾರುಹ್ಯ ಪತಿತಾ ಭಿಲ್ಲಕನ್ಯಕಾ ॥೧೫೨॥

ಅಭ್ಯಾಸೋ ಭಿಲ್ಲನಾರೀಣಾಂ ತರೋರಾರೋಹಣೇ ತತಃ ।
ತೇನಾಭ್ಯಾಸೇನ ಸಾ ತತ್ರ ಬಿಲ್ವಾದಾನಸಮುದ್ಯತಾ ॥೧೫೩॥

---

ಆಗ ಚತುರ್ಮುಖಬ್ರಹ್ಮನು ತನ್ನ ಸಭೆಯಲ್ಲಿ ನೆರದಿದ್ದ ದೇವತೆಗಳನ್ನು ಕುರಿತು, ಲೋಕದಲ್ಲಿ ಇಂತಹ ಭಾಗ್ಯವು ಪ್ರಾಪ್ತಿಯಾಗಬೇಕಾದರೆ ಆ ಶಂಕರನ ಪೂಜೆಯೇ ಕಾರಣವೆಂದು ತಿಳಿಯಿರಿ. ಎಂದು ॥೧೪೯॥

ಈ ಭಿಲ್ಲಕನ್ಯೆಯ ಹಿಂದಿನ ವೃತ್ತಾಂತವನ್ನೆಲ್ಲಾ ಬ್ರಹ್ಮನು ದೇವತೆಗಳಿಗೆ ಈ ರೀತಿಯಾಗಿ ಹೇಳಿದನು. ॥೧೫೦-೧೫೧॥

"ಓ ದೇವತೆಗಳಿರಾ ! ಇವಳು ಹಿಂದೆ ಬೇಡರಕನ್ಯೆಯಾಗಿದ್ದಳು. ಯಾವಾಗಲೂ ಕಾಡಿನಲ್ಲೇ ಭಿಲ್ಲಪುರುಷರೊಡನೆ ವಿಹರಿಸುತ್ತಾ, ಜಾರರಾದ ಆ ಭಿಲ್ಲಪುರುಷರ ಆಲಿಂಗನದಿಂದ ಸಂತೋಷ ಹೊಂದುತ್ತಾ ಇವಳು ವ್ಯಭಿಚಾರಿಣಿಯಾಗಿದ್ದಳು. ಅಕಸ್ಮಾತ್ತಾಗಿ ವಿಹಾರಸಮಯದಲ್ಲುಂಟಾದ ದೊಡ್ಡ ಮಳೆಯಿಂದ ನೆಲೆಗಾಣದೆ, ಆಶ್ರಯವನ್ನು ಹುಡುಕುತ್ತಾ ಶಿವಮಂದಿರವನ್ನು ಪ್ರವೇಶಮಾಡಿದಳು. ಹಾಗೆಯೇ ಅದ್ಭುತವಾದ ಅಲ್ಲಿನ ಶಿವಲಿಂಗವನ್ನು ದರ್ಶನಮಾಡಿ, ಮನೋಹರವಾದ ಬಿಲ್ವಪತ್ರೆಗಳಿಂದ ಆ ಶಿವಲಿಂಗವನ್ನು ಪೂಜೆಮಾಡಿದಳು. ಆ ಶಿವಪೂಜಾಮಹಿಮೆಯಿಂದಲೇ ಇವಳು ಕಡೆಗೆ ಗಂಧರ್ವಲೋಕವನ್ನು ಹೊಂದಿದಳು. ॥೧೫೧॥

ಗಂಧರ್ವಕುಮಾರಿಯೊಡನೆ ಗಂಧರ್ವಲೋಕಕ್ಕೆ ಹೋಗಿ ಅಲ್ಲಿ ಗಂಧರ್ವಸ್ತ್ರೀಯರಿಂದ ಯಾವಾಗಲೂ ಆದರಿಸಲ್ಪಡುತ್ತಿದ್ದಳು. ಒಂದುದಿನ ಎಂದಿನಂತೆ

ತ್ಯಕ್ತಪ್ರಾಣಾ ಪ್ರಾಪ ಲೋಕಂ ಮಮ ದುಷ್ಪ್ರಾಪಮೋಜಸಾ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಯದಿ ಸ್ಯಾದ್ಗತಜೀವನಾ ॥೧೫೪॥

ತದಾ ಮುಕ್ತಿರ್ಭವೇದೇವ ಶಿವಸಾರೂಪ್ಯಲಕ್ಷಣಾ ।
ಅಹೋ ಮಹೇಶಮಹಿಮಾ ಜ್ಞಾಯತೇ ನ ಸುರೈರಪಿ ॥೧೫೫॥

ನ ವೇದೈರಪಿ ವಿಜ್ಞಾತಃ ಸ ವಿಜ್ಞೇಯಃ ಕಥಂ ಸುರೈಃ ।
ಅವಿಜ್ಞೇಯಪ್ರಭಾವಸ್ಯ ಶಿವಸ್ಯ ಪರಮಾತ್ಮನಃ ॥೧೫೬॥

ಸ್ವರೂಪಂ ಕೇನ ವಾ ಜ್ಞೇಯಂ ತಜ್ಜ್ಞಾನಮತಿದುರ್ಲಭಂ ।
ಕೀರ್ತಿತಶ್ಚಿದ್ಘನತ್ವೇನ ಶ್ರುತಿಭಿಃ ಸ ಸದಾಶಿವಃ ॥೧೫೭॥

---

ಶಿವಲಿಂಗಪೂಜೆಗೋಸ್ಕರ ಬಿಲ್ವವೃಕ್ಷವನ್ನೇರಿ ಪತ್ರೆಯನ್ನು ಕೊಯ್ಯುತ್ತಿದ್ದಾಗ ಈ ಭಿಲ್ಲಕುಮಾರಿಯು ಕೆಳಗೆ ಬಿದ್ದು ಮೃತಳಾದಳು. ॥೧೫೨॥

ಭಿಲ್ಲಸ್ತ್ರೀಯರಿಗೆ ಮರವನ್ನು ಹತ್ತುವ ಅಭ್ಯಾಸವಿರುವುದರಿಂದ ಇವಳೂ ಅದರಿಂದಲೇ ಮರವನ್ನು ಹತ್ತಿ ಬಿಲ್ವದಳಗಳನ್ನು ತರಲು ಪ್ರಯತ್ನಿಸಿದಳು. ॥೧೫೩॥

ಅಲ್ಲಿ ಮೃತಳಾದ ನಂತರ, ಮಹಾತೇಜಸ್ವಿಗಳಿಂದಲೂ ಪ್ರವೇಶಿಸಲಸಾಧ್ಯವಾದ ಈ ನನ್ನ ಲೋಕಕ್ಕೆ ಬಂದಿರುವಳು. ಇವಳು ತಾನು ಕುಯ್ಯುತ್ತಿದ್ದ ಬಿಲ್ವದಳಗಳನ್ನು ಪರಮೇಶ್ವರನಿಗೆ ಸಮರ್ಪಿಸಿ ಮೃತಳಾಗಿದ್ದಪಕ್ಷದಲ್ಲಿ, ಇವಳಿಗೆ ಶಿವಸಾರೂಪ್ಯರೂಪವಾದ ಮುಕ್ತಿಯೇ ದೊರೆಯುತ್ತಿದ್ದಿತು. ಇದೆಂತಹ ಆಶ್ಚರ್ಯ! ಆ ಮಹೇಶ್ವರನ ಮಹಿಮೆಯು ದೇವತೆಗಳಿಗೆ ತಿಳಿಯಲಸಾಧ್ಯವಾಗಿದೆ. ॥೧೫೪-೧೫೫॥

ವೇದಗಳಿಂದಲೂ ತಿಳಿಯಲಸಾಧ್ಯವಾದ ಮಹಿಮೆಯುಳ್ಳ ಆ ಮಹೇಶ್ವರನನ್ನು ದೇವತೆಗಳು ಹೇಗೆ ತಾನೇ ತಿಳಿದಾರು! ಅಗೋಚರವಾದ ಮಹಿಮೆಯುಳ್ಳ ಆ ಶಿವಪರಮಾತ್ಮನ ಸ್ವರೂಪವನ್ನು ತಿಳಿಯಲು ಯಾರಿಂದ ತಾನೆ ಸಾಧ್ಯವಾದೀತು? ಆ ರೀತಿಯಾದ ತಿಳಿವಳಿಕೆಯು ತುಂಬಾ ದುರ್ಲಭ. ಸದಾಶಿವನನ್ನು ಶ್ರುತಿಗಳು, ಚಿದ್ಘನಸ್ವರೂಪನೆಂದು (ಜ್ಞಾನರಾಶಿ) ಹೇಳುತ್ತಿರುವುವು. ॥೧೫೬-೧೫೭॥

ಅಂಬಿಕಾರಮಣತ್ವೇನ ಕೀರ್ತಿತೋಽಪಿ ಸದಾಶಿವಃ ।
ಸ ಏವ ಹಿ ಮಹಾದೇವೋ ನಿರ್ಗುಣತ್ವೇನ ಕೀರ್ತಿತಃ ॥೧೫೮॥

ಶಿವೋ ನಿರಂಜನತ್ವೇನ ಕೀರ್ತಿತೋ ವೇದರಾಶಿಭಿಃ ॥೧೫೯॥

ಶಿವಸ್ವರೂಪಂ ಸಹಸಾ ನ ವೇದ್ಯೈರ್ವಿಜ್ಞಾತಮೇವೇತಿ ವದಂತಿ ಸಿದ್ಧಾಃ ।
ಅಸ್ಮಾಕಮೀಶಾನಪದಾರವಿಂದಧ್ಯಾನೇ ಪರಂ ಭಕ್ತಿರಭೂತಪೂರ್ವಾ ॥೧೬೦॥

ವದಂತಿ ವೇದಾಃ ಶಿವಮದ್ವಿತೀಯಂ
ಸರ್ವಾಮರಾಧೀಶ್ವರಮಿತ್ಯಪೀತಿ ।
ವಯಂ ಶಿವಾರಾಧನಮಾತ್ರಸಕ್ತಾ
ಯದ್ವಾಸ್ತು ತದ್ವಾಸ್ತು ಶಿವಸ್ವರೂಪಂ ॥೧೬೧॥

ಧನ್ಯಾಃ ಶಂಕರಲಿಂಗಪೂಜನರತಾಃ ಪ್ರಾಪ್ಯಾಂತಕಾಲೇ ಶಿವಂ
ಭಸ್ಮಾಲಂಕೃತವಿಗ್ರಹಂ ಗಿರಿಸುತಾಕಾಂತಂ ಮುಹುಃ ಸಂತತಂ ।

---

ಈ ಸದಾಶಿವನನ್ನು ಅಂಬಿಕಾರಮಣನೆಂದು ಕರೆಯುತ್ತಿದ್ದರೂ, ಅವನೇ ಮಹಾದೇವನೆನಿಸಿ, ನಿರ್ಗುಣನೆನಿಸುತ್ತಿರುವನು.(ಆಕಾರಾದಿ ಗುಣರಹಿತನೂ ಅವನೇ ಆಗಿರುವನು.) ॥೧೫೮॥

ವೇದರಾಶಿಗಳೆಲ್ಲಾ ಶಿವನನ್ನು ನಿರಂಜನನೆಂದು (ಪಾಪವಿದೂರ) ಸಾರುತ್ತಿರುವುವು. ಸಿದ್ಧಪುರುಷರು ವೇದಗಳಿಂದಲೂ ಶಿವನ ಸ್ವರೂಪವನ್ನು ಜಾಗ್ರತೆಯಾಗಿ ತಿಳಿಯಲು ಸಾಧ್ಯವಿಲ್ಲವೆಂದು ಹೇಳುತ್ತಿರುವರು. ನಮಗಾದರೋ ಆ ಈಶ್ವರನ ಪಾದಕಮಲಧ್ಯಾನದಲ್ಲಿಯೇ ಅಪೂರ್ವವೂ, ಶ್ರೇಷ್ಠವೂ ಆದ ಭಕ್ತಿಮಾತ್ರವೇ ತಿಳಿದಿರುವುದು. ॥೧೫೯-೧೬೦॥

ವೇದಗಳು, ಶಿವನು ಅದ್ವಿತೀಯನು ; ಮತ್ತು ಸಕಲ ದೇವತೆಗಳಿಗೂ ಸ್ವಾಮಿಯು ಎಂದು ಹೇಳುತ್ತಿರುವುವು. ಆ ಪರಶಿವನ ಸ್ವರೂಪವು ಹೇಗಾದರೂ ಇರಲಿ, ನಾವು ಮಾತ್ರ ಆ ಶಿವನ ಪೂಜೆಯಲ್ಲಿ ನಿರತರಾಗಿರುವೆವು. ೧೬೧॥

ಶಂಕರನ ಲಿಂಗಪೂಜೆಯಲ್ಲಿ ನಿರತರಾದವರು ಧನ್ಯರೆನಿಸಿ, ತಮ್ಮ ಮರಣ ಕಾಲದಲ್ಲಿ ಭಸ್ಮದಿಂದ ಅಲಂಕರಿಸಲ್ಪಟ್ಟ ದೇಹವುಳ್ಳವರಾಗಿ, ಗಿರಿಜಾರಮಣನಾದ ಆ ಮಹಾದೇವನನ್ನು ಹೊಂದಿ, ಒಂದು ಸಲ ಸ್ಮರಣೆಮಾಡಿದ ಮಾತ್ರದಿಂದಲೇ ಅವರನ್ನು ಸಕಲ ದೇವತೆಗಳೂ ಆದರದಿಂದ ಪೂಜಿಸುವರು. ಮತ್ತು ಅವರು

ಸ್ಮೃತ್ವಾ ವಾ ಸಕೃದೇವ ವಾ ಸುರವರೈರಾರಾಧಿತಃ ಸಾದರಂ
ಕೈಲಾಸೇ ಖಲು ಶೈಲಜಾಪತಿಪದಾಂಭೋಜಪ್ರಸಾದಾಶ್ರಯಃ ॥೧೬೨॥

ಧನ್ಯಾನಾಂ ವ್ರತಮಿಂದುಶೇಖರಪದಾಂಭೋಜಾರ್ಚನಂ ತೇನ ತೇ
ಕಾಲೇನಾಪಿ ಸಮರ್ಚಿತಾಃ ಸುರಗಣೈರಭ್ಯರ್ಚಿತಾಃ ಕಿಂನರೈಃ ।
ಗಂಧರ್ವೈರಪಿ ಸರ್ವಸೌಖ್ಯಸಹಿತಾಃ ಸಂಪತ್ಪ್ರವೃದ್ಧಾಃ ಸದಾ
ಪುತ್ರೈಃ ಪೌತ್ರವರಾದಿಭಿಶ್ಚ ಸಹಿತಾಃ ಕುರ್ವಂತಿ ತೇ ಮಂಗಲಂ ॥೧೬೩॥

ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ರಾಜಸ್ತ್ರೀ ಪೂರ್ವಜನ್ಮ
ಭಿಲ್ಲಸ್ತ್ರೀ ಶಿವಪೂಜನ ಮಹಿಮಾವೃತ್ತಾಂತ ಬ್ರಹ್ಮಲೋಕಾಪ್ತಿ
ಕಥಾವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ

---

ಕೈಲಾಸವನ್ನೇ ಹೊಂದಿ ಅಲ್ಲಿ ಗಿರಿಜಾದೇವಿಯ ಮನೋಹರನಾದ ಮಹಾದೇವನ ಪಾದಕಮಲಗಳಲ್ಲಿ ಆಶ್ರಯಹೊಂದುವರು ಮತ್ತು ಅವನ ಅನುಗ್ರಹಕ್ಕೆ ಪಾತ್ರರಾಗುವರು. ॥೧೬೨॥

ಧನ್ಯರೆನಿಸಿದ ಮಾನವರಿಗೆ ಚಂದ್ರಶೇಖರನ ಪಾದಪದ್ಮಗಳ ಸೇವೆಯೇ ಪ್ರಧಾನವಾದ ವ್ರತವಾಗಿರುವುದು. ಅವರು ಈ ವ್ರತಮಹಿಮೆಯಿಂದ ಯಮನಿಂದಲೂ ಪೂಜಿಸಲ್ಪಡುವರು. ಅಲ್ಲದೇ ಕಿನ್ನರರೂ, ಗಂಧರ್ವರೂ ಮುಂತಾದ ಸಕಲ ದೇವತೆಗಳಿಂದಲೂ ಪೂಜಿಸಲ್ಪಡುವರು. ಇವರಿಗೆ ಯಾವಾಗಲೂ ಸಕಲ ಸೌಖ್ಯಗಳೂ ಉಂಟಾಗುವುವು. ಸರ್ವದಾ ಇವರು ಸರ್ವಸಂಪತ್ತುಗಳಿಂದಲೂ ಯುಕ್ತರಾಗಿ, ಉತ್ತಮರೂ, ಯೋಗ್ಯರೂ ಆದ ಪುತ್ರ, ಪೌತ್ರರೊಂದಿಗೆ ಕೂಡಿ ಸದಾ ಮಂಗಳಕಾರ್ಯಗಳಲ್ಲಿ ನಿರತರಾಗಿ ಆನಂದಭರಿತರಾಗುವರು. ॥೧೬೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಅಂಶದಲ್ಲಿ, ಸತ್ಯವ್ರತ
ರಾಜನ ರಾಣಿಯ ಪೂರ್ವಜನ್ಮವೃತ್ತಾಂತ, ಭಿಲ್ಲಸ್ತ್ರೀಯು ಮಾಡಿದ
ಶಿವಪೂಜಾಮಹಿಮೆಯ ವೃತ್ತಾಂತ ಮತ್ತು ಆ ಶಿವಪೂಜಾಮಹಿಮೆಯಿಂದ
ಆ ಭಿಲ್ಲಸ್ತ್ರೀಗೆ ಬ್ರಹ್ಮಲೋಕಪ್ರಾಪ್ತಿಯಾದ ವೃತ್ತಾಂತ
ಇವುಗಳ ಕಥಾವರ್ಣನ ರೂಪವಾದ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ಬ್ರಹ್ಮವಚಃ ಶ್ರುತ್ವಾ ತೇ ಸರ್ವೇ ಶಿವಪೂಜಕಾಃ ।
ತಮೂಚುರ್ವಿನಯಾನಮ್ರಾಃ ಶಿವಸ್ಮರಣಪೂರ್ವಕಂ ॥೧॥

ಬ್ರಹ್ಮನ್ನಸ್ಯಾಃ ಕಿಯತ್ಕಾಲಂ ಬ್ರಹ್ಮಲೋಕೇ ಸ್ಥಿತಿಃ ಪುನಃ ।
ಕದಾ ಸ್ಯಾದವತಾರೋಽಪಿ ಭುವಿ ತತ್ಪುಣ್ಯಕೋಟಿಭಿಃ ॥೨॥

---

## ಮೂವತ್ತನೆಯ ಅಧ್ಯಾಯ

ಬ್ರಹ್ಮನ ಈ ಮಾತುಗಳನ್ನು ಕೇಳಿ, ಶಿವಪೂಜಾತತ್ಪರರಾದ ಆ ದೇವತೆಗಳೆಲ್ಲರೂ, ಶಿವಸ್ಮರಣೆಮಾಡುತ್ತಾ ವಿನಯದಿಂದ ತಲೆಬಾಗಿ ನಮಸ್ಕರಿಸಿ ಆ ಬ್ರಹ್ಮನನ್ನು ಕುರಿತು ಹೀಗೆ ಪ್ರಾರ್ಥಿಸಿದರು. ಎಂದು ಯಾಜ್ಞವಲ್ಕ್ಯರು ಜನಕಮಹಾರಾಜನಿಗೆ ಶಿವಪೂಜೆಯ ಪವಿತ್ರತೆಯನ್ನು ವಿವರಿಸಿದರು. ॥೧॥

ಬ್ರಹ್ಮನ ಸಭೆಯಲ್ಲಿದ್ದ ದೇವತೆಗಳು ಬ್ರಹ್ಮನನ್ನು ಹೀಗೆ ಪ್ರಶ್ನಿಸಿದರು— "ಬ್ರಹ್ಮದೇವನೇ, ಈ ನಾರೀಮಣಿಗೆ ಈ ಬ್ರಹ್ಮಲೋಕದಲ್ಲಿ ಎಷ್ಟು ದಿವಸ ವಾಸ ವೇರ್ಪಡುವುದು ? ಇಲ್ಲಿಯ ವಾಸ ಮುಗಿದಮೇಲೆ ಪುನಃ ಯಾವಾಗ ಇವಳು ಅಪಾರವಾದ ಪುಣ್ಯವಿಶೇಷಗಳಿಂದ ಭೂಲೋಕದಲ್ಲಿ ಅವತರಿಸುವಳು ? ॥೨॥

ಇತ ಏವ ನ ಕೈಲಾಸಯಾತ್ರಾ ಭವತಿ ಸರ್ವಥಾ ।
ತತ್ಪ್ರಾಪ್ತ್ಯುಪಾಯಭೂತಸ್ಯ ತತ್ಪುಣ್ಯಸ್ಯಾಪಿ ದರ್ಶನಾತ್ ॥೩॥

ಅತ್ರಾಪ್ಯಸ್ಯಾಃ ಕಿಯತ್ಕಾಲಮವಸ್ಥಾನಮತಿರ್ಭವೇತ್ ।
ಲೋಕಾಂತರವಿಹಾರೇಚ್ಛಾ ಕಿಮಸ್ಯಾ ಅಪಿ ಭಾವಿನೀ ॥೪॥

ಬಹವಃ ಪೂರ್ವಮಾಗತ್ಯ ಲೋಕೇಽಸ್ಮಿನ್ನಪಿ ಸಾದರಂ ।
ಸ್ಥಿತ್ವಾ ಚರಂತಿ ಲೋಕೇಷು ವೈಕುಂಠಾದಿಷು ಶಾಂಕರಾಃ ॥೫॥

ಅತ್ರ ಸ್ಥಿತಿಃ ಶಾಂಭವಪುಂಗವಾನಾಂ
ನಾತೀವ ಸಂತೋಷಕರಾ ಕದಾಚಿತ್ ।
ಸ್ಥಿತ್ವಾಪಿ ಯಾಂತ್ಯೇವ ಮನೋಹರೇಷು
ಸ್ಥಾನೇಷು ಹಾರೇಷು ವಿಶೇಷತಸ್ತು ॥೬॥

---

ಈಕೆಯು ಕೈಲಾಸಪ್ರಾಪ್ತಿಗೆ ಉಪಾಯಭೂತವಾಗಿರುವ ಅಪಾರವಾದ ಪುಣ್ಯ ವಿಶೇಷಗಳನ್ನು ಸಂಪಾದಿಸಿರುವುದರಿಂದ ಇವಳಿಗೆ ಈ ಬ್ರಹ್ಮಲೋಕದಿಂದಲೇ ಕೈಲಾಸ ಯಾತ್ರೆಯುಂಟಾಗುವುದೆ? ಅಲ್ಲಿಯವರೆಗೆ ಇವಳು ಈ ಲೋಕದಲ್ಲಿ ವಾಸಮಾಡು ವಳೇ? ಅಥವಾ ಬೇರೆ ಲೋಕಗಳಿಗೆ ಹೋಗಿ ಅಲ್ಲಿ ವಿಹಾರಮಾಡಬೇಕೆಂಬ ಅಪೇಕ್ಷೆ ಯೇನಾದರೂ ಈ ನಾರೀಮಣಿಗೆ ಉಂಟೇ? ॥೩-೪॥

ಹಿಂದೆ ಅನೇಕಮಂದಿ ಈಶ್ವರಭಕ್ತರು ಈ ಬ್ರಹ್ಮಲೋಕಕ್ಕೆ ಬಂದು ಕೆಲವು ಕಾಲ ಆದರಪೂರ್ವಕವಾಗಿ ಇಲ್ಲಿಯೇ ವಾಸಮಾಡುತ್ತಾ ವೈಕುಂಠಾದಿಲೋಕಗಳಲ್ಲಿ ಸಂಚಾರಮಾಡುತ್ತಿದ್ದರು. ॥೫॥

ಶಿವಭಕ್ತಾಗ್ರಗಣ್ಯರಾದವರಿಗೆ ಈ ಬ್ರಹ್ಮಲೋಕವಾಸವು ಎಂದಿಗೂ ಅತಿಶಯ ವಾದ ಸಂತೋಷವನ್ನುಂಟುಮಾಡಲಾರದು. ಆದ್ದರಿಂದ ಅವರು ಇಲ್ಲಿದ್ದರೂ ಮನೋಹರವಾದ ಹರನ ಪವಿತ್ರ ಸ್ಥಳಗಳಲ್ಲಿಯೇ ವಿಶೇಷವಾಗಿ ಸಂಚಾರಮಾಡುತ್ತಾ ಆನಂದಮಗ್ನರಾಗಿರುತ್ತಾರೆ. ॥೬॥

ಆ ಚಂದ್ರಮೌಳಿಯಾದ ಮಹಾದೇವನ ಅತ್ಯಲ್ಪವಾದ ಅನುಗ್ರಹದಿಂದ ನಮಗೆ ಈ ಬ್ರಹ್ಮಲೋಕದ ಸ್ಥಿತಿಯುಂಟಾಗಿರುವುದು. ಆ ಮಹೇಶ್ವರನನುಗ್ರಹವು

ಅಸ್ಮಾಕಮತ್ರ ಸ್ಥಿತಿರಿಂದುಮೌಲೇಃ
ಪ್ರಸಾದಲೇಶಾತ್ತದನುಗ್ರಹಶ್ಚೇತ್ ।
ವಿಶೇಷತಸ್ತರ್ಹಿ ಭವೇದವಶ್ಯಂ
ಕೈಲಾಸವಾಸಃ ಸ ತು ಕಾಮಧೇನುಃ ॥೭॥

ಸ ಏವ ತಾವತ್ಖಲು ಕಲ್ಪವೃಕ್ಷಃ
ಸ ಏವ ಚಿಂತಾಮಣಿರಿತ್ಯವೈಮಿ ।
ಕೈಲಾಸಲೋಕಾದಧಿಕೋ ನ ಲೋಕಃ
ಸ ಏವ ಲೋಕಃ ಖಲು ಶಂಕರಸ್ಯ ॥೮॥

ಆನಂದರೂಪಸ್ಯ ಮಹೇಶ್ವರಸ್ಯ
ಕೈಲಾಸವಾಸೇಽಪಿ ಮತಿಃ ಸದಾಭೂತ್ ।
ಶಿವಾಭಿಮಾನಸ್ಥಲಮೇವ ಮನ್ಯೇ
ಕೈಲಾಸಮಾನಂದಸುಧಾನಿವಾಸಂ ॥೯॥

---

ವಿಶೇಷವಾಗಿ ಉಂಟಾದ ಪಕ್ಷದಲ್ಲಿ ಅವಶ್ಯವಾಗಿ ಕಾಮಧೇನುಪ್ರಾಯವಾದ ಆ ಕೈಲಾಸವಾಸವೇ ದೊರೆಯುವುದು. ॥೭॥

ಆ ಕೈಲಾಸಲೋಕವೇ ಕಲ್ಪವೃಕ್ಷ. ಚಿಂತಾಮಣಿ ಎಂಬ ರತ್ನವೂ ಅದೇ ಆಗಿರುವುದೆಂದು ನಾನು ತಿಳಿದಿರುವೆನು. ಕೈಲಾಸಕ್ಕಿಂತಲೂ ಉತ್ಕೃಷ್ಟವಾದ ಬೇರೆ ಲೋಕವೇ ಇಲ್ಲ. ಆ ಸರ್ವಶ್ರೇಷ್ಠವಾದ ಕೈಲಾಸವೇ ಜಗನ್ಮಂಗಳಕರನಾದ ಆ ಮಹೇಶ್ವರನ ಲೋಕವಾಗಿರುವುದಲ್ಲವೆ ! ॥೮॥

ಬ್ರಹ್ಮನೇ, ಆನಂದಸ್ವರೂಪನಾದ ಆ ಮಹೇಶ್ವರನಿಗೆ ಯಾವಾಗಲೂ ಆ ಕೈಲಾಸವಾಸದಲ್ಲಿ ಅತಿಶಯವಾದ ಅಭಿರುಚಿಯುಂಟು. ಆ ಪರಶಿವನ ಅಭಿಮಾನಕ್ಕೆ ಪಾತ್ರವಾಗಿರುವ ಈ ಕೈಲಾಸವನ್ನು ಆನಂದವೆಂಬ ಅಮೃತಕ್ಕೆ ವಾಸಸ್ಥಳವೆಂದು ನಾನು ತಿಳಿಯುವೆನು. ॥೯॥

ಶಿವಪೂಜಾನಿರತನಾದವನು ಆ ಪರಶಿವನ ಅನುಗ್ರಹದಿಂದ ಕೈಲಾಸವನ್ನು ಪಡೆದು ಮುಕ್ತನಾಗುವನು. ಆದ್ದರಿಂದ ಶಿವಪೂಜೆಯನ್ನು ಮಾಡುವವರಿಗೆ ಮುಕ್ತಿಯು ಬಹು ಸುಲಭವಾಗಿ ದೊರೆಯುವುದು. ಆ ಪರಮೇಶ್ವರನಿಗೆ ಬಿಲ್ವದಳ

ಕೈಲಾಸಮಾಸಾದ್ಯ ಶಿವಪ್ರಸಾದಾ
ನ್ಮುಕ್ತೋ ಭವತ್ಯೇವ ಶಿವಾರ್ಚಕೋಽತಃ ।
ಶಿವಾರ್ಚಕಾನಾಂ ಸುಲಭೈವ ಮುಕ್ತಿ
ರ್ಬಿಲ್ವಾರ್ಪಣೇನಾಪಿ ಮಹಾಘನಾಶಃ ॥೧೦॥

ಧರ್ಮಸ್ತಥಾ ಕೋಽಪಿ ನ ದೃಶ್ಯತೇ ಚ
ಧರ್ಮಃ ಪರಂ ಶಂಕರಪೂಜನಂ ನಃ ।
ಧರ್ಮಸ್ವರೂಪೋ ಭಗವಾನ್ಮಹೇಶಃ
ತಲ್ಲೀಲಯಾ ಮುಕ್ತಿಸುಖಾದಿಕಾನಿ ॥೧೧॥

ಮನುಷ್ಯರೂಪೇಣ ಗಣಾಃ ಶಿವಾರ್ಚಾಂ
ಕುರ್ವಂತಿ ತೇಷಾಂ ಸುಲಭೈವ ಮುಕ್ತಿಃ ।

---

ಗಳನ್ನು ಸಮರ್ಪಣೆಮಾಡುವವರಿಗೆ ಎಂತಹ ಮಹಾಪಾಪಗಳಿದ್ದರೂ ಅವು ತಪ್ಪದೇ ನಾಶವಾಗುವುವು. ॥೧೦॥

ನಮಗೆ ಆ ಶಂಕರನ ಪೂಜೆಯೇ ಪರಮಧರ್ಮವೆನಿಸಿರುವುದು. ಇದಕ್ಕಿಂತ ಬೇರೆಯ ಧರ್ಮವು ನಮಗೆ ತೋರುವುದೇ ಇಲ್ಲ. ಆ ಮಹೇಶ್ವರನೇ, ಸಾಕ್ಷಾದ್ಧರ್ಮ ಸ್ವರೂಪನಾಗಿರುವನು. ಆ ಮಹಾದೇವನ ಲೀಲಾಮಾತ್ರದಿಂದಲೇ ಮುಕ್ತಿ, ಸುಖ, ಮುಂತಾದವುಗಳೆಲ್ಲವೂ ಮಾನವರಿಗೆ ಲಭಿಸುವುವು. ॥೧೧॥

ಶಿವಗಣಗಳು ಮನುಷ್ಯ ರೂಪನ್ನು ಧರಿಸಿ, ಆ ಪರಶಿವನನ್ನು ಪೂಜಿಸುವುದ ರಿಂದ ಅವರಿಗೆ ಮೋಕ್ಷವು ಸುಲಭವಾಗಿ ದೊರೆಯುವುದು. ಈ ಶಿವಗಣಗಳನ್ನು ಬಿಟ್ಟು ಬೇರೆಯವರಿಗೆ ಈ ಶಿವಪೂಜೆಯಲ್ಲಿ ಭಕ್ತಿಯುಂಟಾಗುವುದು ಬಹಳ ದುರ್ಲಭ. ಶಿವಾರ್ಚನೆಯನ್ನು ಬಿಟ್ಟು ಇತರವಾದ ಬೇರೆ ಬೇರೆ ಧರ್ಮಗಳಿಂದ ಯಾವ ಪುಣ್ಯವು ತಾನೇ ಉಂಟಾದೀತು! (ವಿಧವಿಧವಾದ ಧರ್ಮಕಾರ್ಯಗಳನ್ನು ಆಚರಿಸಿ ದರೂ ಈ ಶಿವಪೂಜಾ ಮಹಿಮೆಯಿಂದುಂಟಾಗುವ ಪುಣ್ಯಕ್ಕೆ ಸರಿಹೋಗುವ ಪುಣ್ಯವು ಬರುವುದಿಲ್ಲವೆಂದು ಭಾವವು.) ॥೧೨॥

ಪರಮೇಶ್ವರನ ಸೃಷ್ಟಿವೈಚಿತ್ರ್ಯವನ್ನೆಷ್ಟೆಂದು ಹೇಳಲಿ! ನಮಗೊಂದೂ ತೋರು ವುದಿಲ್ಲ. ಈ ಪರಶಿವನ ಪೂಜೆಯಿಂದ ಸುಖವು ಪ್ರವಾಹ ರೂಪವಾಗಿ ಲಭಿಸುವುದು.

ಅನ್ಯಸ್ಯ ಭಕ್ತಿರ್ನ ಶಿವಾರ್ಚನೇಷು
ಪುಣ್ಯಸ್ಯ ಕಿಂ ವಾ ವಿವಿಧೈಶ್ಚ ಧರ್ಮೈಃ ॥೧೨॥

ಕಿಂ ಸೃಷ್ಟವಾನೀಶೇನ ಚ ತಂ ನ ವಿದ್ಮಃ
ಶಿವಾರ್ಚನಂ ಯೇನ ಸುಖಪ್ರವಾಹಾಃ ।
ಭವಂತಿ ತಾವದ್ಬಹುಧಾ ನ ತೇಷಾಂ
ಪ್ರವೃದ್ಧಿರಿತ್ಯೇವ ವಿನಿಶ್ಚಯೋಽಪಿ ॥೧೩॥

ಸಕೃನ್ನತ್ವಾ ಸ್ಮೃತ್ವಾ ಶಿವಚರಣಪಾದಾಂಬುಜರಜ
ಸ್ಸುರಾರಾಧ್ಯಂ ತೀರ್ತ್ವಾ ವಿಷಮಮಪಿ ಸಂಸಾರಜಲಧಿಂ ।
ಪ್ರಯಾಂತಿ ಬ್ರಹ್ಮಾಂಡಸ್ಥಿತಿಜನನನಾಶಾದಿಕರಣಂ
ಮಹಾದೇವಂ ತಸ್ಮಿನ್ದೃಢನಿಹಿತಚಿತ್ತಾಃ ಶಿವಜನಾಃ ॥೧೪॥

ಇತಿ ತದ್ವಚನಂ ಶ್ರುತ್ವಾ ಸಂತುಷ್ಟಃ ಸ ಚತುರ್ಮುಖಃ ।
ತಾನುವಾಚಾತಿಹೃಷ್ಟಾತ್ಮಾ ಪ್ರಭಾವಂ ಶಾಂಕರಂ ಸ್ಮರನ್ ॥೧೫॥

---

ನಾನಾವಿಧವಾಗಿ ಉಂಟಾಗುವ ಈ ಸುಖಪ್ರವಾಹಗಳು ದಿನದಿನಕ್ಕೂ ನಿಶ್ಚಯವಾಗಿಯೂ ಅಭಿವೃದ್ಧಿಹೊಂದುವುವೇ ಹೊರತು, ಇವುಗಳಿಗೆ ಎಂದಿಗೂ ಚ್ಯುತಿಯಿಲ್ಲ. ॥೧೩॥

ದೇವತೆಗಳಿಂದಲೂ ಪೂಜಿತವಾದ ಶಿವನ ಪಾದಕಮಲಧೂಳಿಯನ್ನು ಒಂದು ಬಾರಿ ನಮಸ್ಕರಿಸಿಯೋ ಅಥವಾ ಸ್ಮರಣೆಮಾಡಿಯೋ ಮಾನವರು ವಿಷಮವಾದ (ಘೋರವಾದ) ಈ ಸಂಸಾರವೆಂಬ ಸಮುದ್ರವನ್ನೇ ದಾಟುತ್ತಾರೆ. ಅನಂತರ ಆ ಮಹಾದೇವನಲ್ಲಿಯೇ ದೃಢವಾದ ಮನಸ್ಸಿಟ್ಟು ಧ್ಯಾನಮಾಡುವ ಶಿವಭಕ್ತರು, ಸಕಲ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಸಂಹಾರ ಕಾರಕನಾದ ಆ ಮಹೇಶ್ವರನ ಸನ್ನಿಧಾನವನ್ನೇ ಪಡೆಯುವರು.'' ॥೧೪॥

ದೇವತೆಗಳ ಈ ವಚನಗಳನ್ನು ಲಾಲಿಸಿ ಸಂತುಷ್ಟನಾದ ಚತುರ್ಮುಖ ಬ್ರಹ್ಮನು ತಾನೂ, ಆ ಶಂಕರನ ಮಹಿಮೆಯನ್ನು ಸ್ಮರಣೆಮಾಡುತ್ತಾ ಆ ದೇವತೆಗಳನ್ನು ಕುರಿತು ಹೀಗೆಂದನು. ॥೧೫॥

ಭಿಲ್ಲಭೂಪಾಲಮಹಿಲಾ ಸೇಯಂ ಬಾಲಾ ಭವಿಷ್ಯತಿ ।
ಇತಿ ಬ್ರಹ್ಮವಚಃ ಶ್ರುತ್ವಾ ತೇಽಪಿ ಹೃಷ್ಟಾಃ ಸಭಾಸದಾಃ ॥೧೬॥

ಏವಂ ಭಾಗ್ಯಮಿದಂ ಲಬ್ಧಮನಯಾ ಶಿವಪೂಜಯಾ ॥೧೭॥

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸೋಽಪಿ ಸತ್ಯವ್ರತೋ ನೃಪಃ ।
ಸಂತುಷ್ಟಃ ಸ್ವಪುರಂ ಪ್ರಾಪ ಸ್ಮರನ್ ಶಂಕರವೈಭವಂ ॥೧೮॥

ಪುನಃ ಶೃಣು ಪ್ರವಕ್ಷ್ಯಾಮಿ ಶ್ರೀಮಹಾದೇವವೈಭವಂ ।
ತತ್ಪ್ರಭಾವಾನುಕಥನಾದ್ವಿರತಂ ನ ಮನೋ ಮಮ ॥೧೯॥

ಶಿವಾರ್ಚನಪ್ರಭಾವಸ್ಯ ಕಥನಾದಪಿ ಮುಚ್ಯತೇ ।
ಅಪಾರಪಾತಕಾಕಾರಸಂಸಾರಾದಿತಿ ಮೇ ಮತಿಃ ॥೨೦॥

---

ಸಭಾಸದರೇ, ಈ ಬಾಲಿಕೆಗೆ ಬ್ರಹ್ಮಲೋಕವಾಸ ಮುಗಿದನಂತರ ಈಕೆಯು ಭಿಲ್ಲಭೂಪಾಲನ (ಬೇಡರ ರಾಜನ) ಪತ್ನಿಯಾಗಿ ಜನಿಸುವಳು ಎಂದು ಹೇಳಿದನು. ಬ್ರಹ್ಮನ ಮಾತುಗಳನ್ನು ಕೇಳಿ ಸಭಾಸದರಾದ ದೇವತೆಗಳೆಲ್ಲರೂ, ತುಂಬಾ ಸಂತೋಷ ಹೊಂದಿದವರಾಗಿ, ಈ ನಾರೀಮಣಿಗೆ ಈ ರೀತಿಯಾದ ಭಾಗ್ಯವು ಆ ಪರಶಿವನ ಪೂಜೆಯಿಂದಲೇ ಲಭಿಸಿತು, ಎಂದು ಪರಸ್ಪರವಾಗಿ ಹೇಳತೊಡಗಿದರು. ॥೧೬-೧೭॥

ಸನಂದನಮಹರ್ಷಿಯು, ಹೀಗೆ ತನ್ನ ರಾಣಿಯ ಪೂರ್ವಜನ್ಮವೃತ್ತಾಂತ ವನ್ನೂ, ಶಿವಪ್ರಭಾವವನ್ನೂ ವಿಸ್ತರಿಸಿ ಹೇಳಿದುದನ್ನು ಕೇಳಿ, ಆ ಸತ್ಯವ್ರತಮಹಾ ರಾಜನು ಬಹಳ ಸಂತೋಷ ಹೊಂದಿದವನಾಗಿ ಲೋಕಶಂಕರನ ವೈಭವವನ್ನು ಸ್ಮರಿಸುತ್ತಾ ತನ್ನ ಪಟ್ಟಣಕ್ಕೆ ತೆರಳಿದನು. ॥೧೮॥

ಎಲೈ ರಾಜನೇ, ಆ ಮಹಾದೇವನ ವೈಭವವನ್ನು ಇನ್ನೂ ಹೇಳುವೆನು ಲಾಲಿಸು; ಆ ಮಹೇಶ್ವರನ ವೈಭವವನ್ನು ಹೇಳುತ್ತಿದ್ದರೆ ನನ್ನ ಮನಸ್ಸಿಗೆ ಸ್ವಲ್ಪವೂ ಬೇಸರಿಕೆಯೇ ಉಂಟಾಗುವುದಿಲ್ಲ. ಇನ್ನೂ ಕುತೂಹಲವೇ ಹೆಚ್ಚಾಗು ತ್ತದೆ. ॥೧೯॥

ಶಿವನ ಪೂಜಾಮಹಿಮೆಯನ್ನು ಹೇಳುವಮಾತ್ರದಿಂದಲೇ ಮಾನವನು,

ಪುರಾ ಬ್ರಹ್ಮಸಭಾಸದ್ಭಿಃ ಶಿವಪೂಜನತತ್ಪರೈಃ ।
ಪೃಷ್ಟಶ್ಚತುರ್ಮುಖೋ ಭಕ್ತ್ಯಾ ಕಥಾಂ ವದ ಶಿವಾಮಿತಿ ॥೨೧॥

॥ ಬ್ರಹ್ಮೋವಾಚ ॥

ರಾಜಾ ನಿಷಧದೇಶಾನಾಂ ನಾಮ್ನಾ ಪರಪುರಂಜಯಃ ।
ತಸ್ಯ ಪದ್ಮಾವತೀ ನಾಮ ಮಹಿಲಾ ಶಂಕರಪ್ರಿಯಾ ॥೨೨॥

ಸಾ ಲಿಂಗಪೂಜನರತಾ ರೇವಾತೀರೇ ಮನೋರಮೇ ।
ಕಾರಯಾಮಾಸ ಮಣಿಭಿರ್ಮಂದಿರಂ ಶಾಂಕರಂ ಪರಂ ॥೨೩॥

ತತ್ರ ನಾರ್ಮದಲಿಂಗಾನಿ ಸ್ಥಾಪಯಿತ್ವಾ ವಿಧಾನತಃ ।
ಪೂಜಯಾಮಾಸ ವಿವಿಧೈರುಪಚಾರೈರ್ಮನೋಹರೈಃ ॥೨೪॥

---

ಅಪಾರವಾದ ಪಾಪಗಳಿಗೂ ಆಶ್ರಯಸ್ಥಾನವಾಗಿರುವ ಈ ಘೋರವಾದ ಸಂಸಾರ ಬಂಧನದಿಂದ ಬಿಡುಗಡೆಹೊಂದುವನೆಂದು ನಾನು ತಿಳಿದಿರುವೆನು. ॥೨೦॥

ಹಿಂದೆ ಬ್ರಹ್ಮನ ಸಭೆಯಲ್ಲಿ ನೆರದಿದ್ದ ಶಿವಪೂಜಾತತ್ಪರರು, ಚತುರ್ಮುಖ ಬ್ರಹ್ಮನನ್ನು ಕುರಿತು, ದೇವ! ಶಿವನ ಸಂಬಂಧಿಯಾದ ಕಥೆಗಳನ್ನು ನಮಗೆ ಹೇಳುವವನಾಗೆಂದು ಭಕ್ತಿಯಿಂದ ಪ್ರಾರ್ಥಿಸಿದರು. ॥೨೧॥

ಅವರ ಪ್ರಾರ್ಥನೆಯನ್ನಂಗೀಕರಿಸಿ ಬ್ರಹ್ಮನು ಹೀಗೆ ಹೇಳಿದನು.—ಶಿವಭಕ್ತ ಶ್ರೇಷ್ಠರೇ, ಲಾಲಿಸಿರಿ. ಹಿಂದೆ ಪರಪುರಂಜಯನೆಂಬ ಒಬ್ಬ ಅರಸು, ನಿಷಧದೇಶಗಳಿಗೆ ರಾಜನಾಗಿದ್ದನು. ಅವನಿಗೆ ಪದ್ಮಾವತೀ ಎಂಬ ಹೆಸರಿನ ಪಟ್ಟದ ಮಹಿಷಿಯೊಬ್ಬ ಳಿದ್ದಳು. ಅವಳು ಯಾವಾಗಲೂ ಶಿವನಲ್ಲಿ ಪ್ರೀತಿಯುಳ್ಳವಳಾಗಿ ಸದಾ ಶಿವಭಜನ ನಿರತಳಾಗಿದ್ದಳು. ॥೨೨॥

ಇವಳು ಶಿವಲಿಂಗಪೂಜಾನಿರತಳಾಗಿದ್ದುದರಿಂದ ಮನೋಹರವಾದ ನರ್ಮದಾ ನದಿಯ ದಡದಲ್ಲಿ ರತ್ನಗಳಿಂದ ಒಂದು ದಿವ್ಯವಾದ ಶಂಕರದೇವಾಲಯವನ್ನು ಕಟ್ಟಿಸಿದಳು. ॥೨೩॥

ಆ ಶ್ರೇಷ್ಠವಾದ ದೇವಾಲಯದಲ್ಲಿ ನರ್ಮದಾ ನದಿಯಲ್ಲಿ ದೊರೆಯುವ ಲಿಂಗ ಗಳನ್ನು ಸ್ಥಾಪಿಸಿ ವಿಧಿಪೂರ್ವಕವಾದ ನಾನಾ ಬಗೆಯ ಪೂಜಾ ಸಾಮಗ್ರಿಗಳಿಂದ ಯುಕ್ತಳಾಗಿ ಆರಾಧಿಸಿದಳು. ॥೨೪॥

ತತ್ರ ಶಂಕರಪೂಜಾಯಾಂ ನಿರತಾ ರಜನೀಮುಖೇ ।
ಬಿಲ್ವಾದಿಭಿರ್ಮಹಾದೇವಂ ಪೂಜಯಾಮಾಸ ಸಾದರಂ ॥೨೫॥

ತತಃ ಪರಂ ಸಾ ಚಕಾರ ಗಾನಂ ಗಂಧರ್ವವಿದ್ಯಯಾ ।
ನಾಟ್ಯಂ ಚಕಾರ ಯತ್ನೇನ ನಿರಾಹಾರೇಣ ಭಕ್ತಿತಃ ॥೨೬॥

ಪ್ರದೋಷಕಾಲಾಪಗಮೇ ಶಿವನೈವೇದ್ಯಭೋಜನಂ ।
ಕೃತ್ವಾ ಶಿವಾಚಾರರತಂ ದದರ್ಶ ರವಿಮಾದರಾತ್ ॥೨೭॥

ರವಿರೀಶಾನಮಭ್ಯರ್ಚ್ಯ ಕೋಮಲೈರ್ಬಿಲ್ವಪಲ್ಲವೈಃ ।
ಜಲೈರಪ್ಯಮಲೈರೀಶಂ ರೇವಾಯಾಂ ಪ್ರೀತಮಾನಸಃ ॥೨೮॥

---

ಆ ದೇವಾಲಯದಲ್ಲಿ ಯಾವಾಗಲೂ ಶಂಕರನ ಪೂಜೆಯಲ್ಲಿಯೇ ನಿರತಳಾಗಿರುತ್ತಾ, ರಾತ್ರಿಯ ವೇಳೆಯಲ್ಲಿ ಅಂದರೆ ಪ್ರದೋಷಕಾಲದಲ್ಲಿ ಬಿಲ್ವಪತ್ರಾದಿ ಪೂಜಾ ಸಾಮಗ್ರಿಗಳಿಂದ ಆ ಮಹಾದೇವನನ್ನು ಆದರ ಪೂರ್ವಕವಾಗಿ ಪೂಜಿಸುತ್ತಿದ್ದಳು. ॥೨೫॥

ಪೂಜೆಯು ಮುಗಿದನಂದರ ಆ ಪದ್ಮಾವತಿಯು ಗಂಧರ್ವ ವಿದ್ಯೆಯಿಂದ ಮಧುರವಾಗಿ ಗಾನಮಾಡಿ, ಮನೋಹರವಾಗಿರುವಂತೆ ಆ ಸ್ವಾಮಿಯ ಮುಂದೆ ನರ್ತನಮಾಡಿದಳು. ಆ ಸಮಯದಲ್ಲಿ ಅವಳು ಯಾವ ಆಹಾರವನ್ನೂ ತೆಗೆದು ಕೊಳ್ಳದೆ ಶ್ರದ್ಧಾಭಕ್ತಿಪುರಸ್ಸರವಾಗಿ ನಿಯಮದಿಂದಿರುತ್ತಿದ್ದಳು. ॥೨೬॥

ಹೀಗೆ ಪ್ರದೋಷ ಕಾಲವು ಕಳೆದ ಮೇಲೆ ಆ ಪರಶಿವನಿಗೆ ನೈವೇದ್ಯ ಮಾಡಿದ್ದ ಭಕ್ಷ್ಯಭೋಜ್ಯಾದಿಗಳನ್ನು ನಾನು ಊಟ ಮಾಡಿ, ಹಾಗೆಯೇ ಅತ್ತ ನೋಡಲು ಮುಂದೆ ಶಿವಪೂಜಾ ನಿರತನಾಗಿ ಶಿವಧರ್ಮತತ್ಪರನಾಗಿ ಕುಳಿತಿದ್ದ ಸೂರ್ಯನು ಇವಳ ಕಣ್ಣಿಗೆ ಗೋಚರನಾದನು. ॥೨೭॥

ಆ ಸೂರ್ಯದೇವನು ರೇವಾ ನದಿಯ ಪರಿಶುದ್ಧವಾದ ನೀರಿನಿಂದ ಶಿವನಿಗೆ ಅಭಿಷೇಕಮಾಡಿ, ಕೋಮಲವಾದ ಬಿಲ್ವಪತ್ರೆಯ ಚಿಗುರುಗಳಿಂದ ಆ ಪರಶಿವನನ್ನು ಭಕ್ತಿಯಿಂದ ಪೂಜಿಸಿ, ಭಕ್ತಿಪರವಶನಾಗಿ ಸಂತುಷ್ಟವಾದ ಮನಸ್ಸುಳ್ಳವನಾದನು. ॥೨೮॥

ಶಿವಮಂದಿರಮಾಲೋಕ್ಯ ದೀಪಮಾಲಾವಿರಾಜಿತಂ ।
ಧೂಪಧೂಮಸಮಾಕ್ರಾಂತಂ ಶಿವಭಕ್ತಜನಾಶ್ರಿತಂ ॥೨೯॥

ದಿವ್ಯೋಪಹಾರಸಂಪನ್ನಂ ಮಣಿಮಂಡಲಮಂಡಿತಂ ।
ಸಂತೋಷಂ ಪರಮಂ ಪ್ರಾಪ ಶಿವಪೂಜಾವಲೋಕನಾತ್ ॥೩೦॥

ತಾದೃಶಂ ರವಿಮಾಲೋಕ್ಯ ಭೂತಿಭೂಷಿತವಿಗ್ರಹಂ ।
ಕೃತಾಂಜಲಿಪುಟಾ ಪ್ರಾಹ ಸ್ಮರಂತೀ ಶಂಕರಂ ಮುಹುಃ ॥೩೧॥

॥ ಪದ್ಮಾವತ್ಯುವಾಚ ॥

ಕೋಽಸಿ ಶಂಕರಭಕ್ತೋಽಸಿ ಶಂಕರಾರ್ಚನತತ್ಪರಃ ।
ಶಿವಾರ್ಚನಪ್ರಭಾವಂ ಮೇ ವದ ನಿಶ್ಚಿತ್ಯ ಸಾದರಂ ॥೩೨॥

---

ತಾನು ರೇವಾನದಿಯ ದಡದಲ್ಲಿ ಶಿವಲಿಂಗವನ್ನು ಪೂಜೆಮಾಡಿದ ನಂತರ, ಸೂರ್ಯದೇವನು ಆ ನದಿಯ ದಡದ ಮೇಲೆ ಕಟ್ಟಿದ್ದ ದಿವ್ಯವಾದ ಆ ಶಿವಮಂದಿರವನ್ನೂ, ಅಲ್ಲಿ ನಡೆಯುತ್ತಿದ್ದ ಶಿವಪೂಜೆಯನ್ನು ನೋಡಿ, ಅತಿಯಾಗಿ ಆನಂದ ಭರಿತನಾದನು. ಆ ಶಿವ ದೇವಾಲಯವು ಚಿತ್ರ ವಿಚಿತ್ರವಾದ ದೀಪಗಳ ಮಾಲೆಗಳಿಂದ ಶೋಭಾಯಮಾನವಾಗಿದ್ದಿತು. ಧೂಪಗಳ ಹೊಗೆಯು ಆ ಮಂದಿರದಲ್ಲೆಲ್ಲಾ ವ್ಯಾಪಿಸಿ ಸುವಾಸನೆಯನ್ನುಂಟುಮಾಡುತ್ತಿದ್ದಿತು. ಶಿವನ ಭಕ್ತರ ಗುಂಪುಗಳು ಆ ದೇವಾಲಯದಲ್ಲಿ ಕಿಕ್ಕಿರಿದಿದ್ದಿತು. ದಿವ್ಯವಾದ ಉಪಹಾರ ಸಾಮಗ್ರಿಗಳು ಸ್ವಾಮಿಯ ಮುಂದೆ ಸಿದ್ಧವಾಗಿದ್ದುವು. ನಾನಾ ವಿಧವಾದ ರತ್ನ ಸಮೂಹಗಳಿಂದ ಆ ಮಂದಿರವು ಅಲಂಕರಿಸಲ್ಪಟ್ಟಿತ್ತು. ॥೨೯-೩೦॥

ಸೂರ್ಯನು ಈ ರೀತಿಯಾಗಿ ಶಿವಮಂದಿರದಲ್ಲಿ ಪೂಜಾದಿಗಳು ನಡೆಯುತ್ತಿದ್ದುದನ್ನು ನೋಡಿ, ಆನಂದಭರಿತನಾದ ಮೇಲೆ, ಈ ಪದ್ಮಾವತೀದೇವಿಯು, ವಿಭೂತಿಧಾರಣೆಯಿಂದ । ಅಲಂಕೃತವಾದ ದೇಹವುಳ್ಳವನಾಗಿ, ಶಿವಪೂಜಾಧ್ಯಾನಾದಿ ತತ್ಪರನಾಗಿರುವ ಆ ಸೂರ್ಯದೇವನನ್ನು ನೋಡಿ ಕೈಜೋಡಿಸಿ, ಅವನಿಗೆ ನಮಸ್ಕಾರ ಮಾಡಿ, ಬಾರಿಬಾರಿಗೂ ಶಂಕರನನ್ನು ಸ್ಮರಿಸುತ್ತಾ ಸೂರ್ಯನನ್ನು ಕುರಿತು ಇಂತೆಂದಳು. ॥೩೧॥

ಅಯ್ಯ ಮಹಾತ್ಮನೆ, ನೀನು ಯಾರು ? ಶಂಕರಪೂಜಾತತ್ಪರನಾದ ನಿನ್ನನ್ನು ನೋಡಿದರೆ ಆ ಪರಶಿವನ ಭಕ್ತನೆಂದು ತೋರುತ್ತಿರುವುದು. ಮಹಾನುಭಾವ !

ಕಥಂ ವಾ ಶ್ರೀಮಹಾದೇವಃ ಪ್ರಸನ್ನಃ ಪಾರ್ವತೀಪತಿಃ ।
ಧ್ಯೇಯಃ ಕಥಂ ವಾ ಪೂಜಾಪಿ ಕಥಂ ಕಾರ್ಯಾ ಪ್ರಯತ್ನತಃ ॥೩೩॥

ಕುತ್ರ ವಾ ಪೂಜಿತಃ ಶಂಭುಃ ಕೇನ ವಾ ಸಾಧನೇನ ಸಃ ।
ಪ್ರಸನ್ನಃ ಪರಮಾಂ ವೃದ್ಧಿಂ ಪ್ರಯಚ್ಛತಿ ಕೃಪಾನಿಧಿಃ ॥೩೪॥

॥ ಭಾನುರುವಾಚ ॥

ಧನ್ಯಾಸಿ ಕೃತಕೃತ್ಯಾಸಿ ಪುಣ್ಯರಾಶಿರಸಿ ಸ್ವತಃ ।
ಪ್ರಶ್ನೋಽಯಂ ತವ ಕಲ್ಯಾಣಿ ತನುತೇ ಮಂಗಳಾನಿ ಮೇ ॥೩೫॥

ಯಃ ಸರ್ವಮಂಗಲಾಕಾಂತಸ್ತತ್ಪದಾಂಬುಜರೇಣುಭಿಃ ।
ಸ್ಮೃತೈಃ ಕಲ್ಯಾಣರಾಶೀನಾಮುದಯೋ ಜಾಯತೇ ಮುಹುಃ ॥೩೬॥

---

ಆ ಶಿವಪೂಜಾಮಹಿಮೆಯನ್ನು ಸರಿಯಾಗಿ ನಿಶ್ಚಯಿಸಿ ನನಗೆ ಆದರಪೂರ್ವಕವಾಗಿ ತಿಳಿಸುವನಾಗು. ॥೩೨॥

ಪಾರ್ವತೀರಮಣನಾದ ಆ ಮಹಾದೇವನು ಪ್ರಸನ್ನನಾಗಲು ಏನುಮಾಡಬೇಕು? ಅವನನ್ನು ಧ್ಯಾನಮಾಡುವ ಬಗೆ ಯಾವುದು? ಯಾವ ರೀತಿಯಲ್ಲಿ ಅವನನ್ನು ಶ್ರದ್ಧೆಯಿಂದ ಪೂಜಿಸಬೇಕು? ॥೩೩॥

ಯಾವ ಸ್ಥಳದಲ್ಲಿ, ಯಾವ ಪೂಜಾಸಲಕರಣೆಗಳಿಂದ ಪೂಜೆಮಾಡಿದರೆ, ಕೃಪಾನಿಧಿಯಾದ ಆ ಪರಮೇಶ್ವರನು ಪ್ರಸನ್ನನಾಗಿ ಶ್ರೇಷ್ಠವಾದ ಅಭಿವೃದ್ಧಿಯನ್ನುಂಟುಮಾಡುವನು? ಎಂಬುದನ್ನು ದಯೆಯಿಟ್ಟು ನನಗೆ ತಿಳಿಸಬೇಕೆಂದು ಪದ್ಮಾವತೀದೇವಿಯು ಸೂರ್ಯನನ್ನು ಪ್ರಾರ್ಥಿಸಿದಳು. ಆಗ ಸೂರ್ಯನು ಹೀಗೆ ನುಡಿದನು. ॥೩೪॥

" ಮಂಗಳಾಂಗಿಯೇ, ನೀನೇ ಧನ್ಯಳು. ಕೃತಕೃತ್ಯಳೂ ನೀನೇ ಆಗಿರುವೆ. ಸ್ವತಃ ನೀನೇ ಸಕಲ ಪುಣ್ಯಗಳಿಗೂ ರಾಶಿಯಂತೆ ಆಶ್ರಯಳಾಗಿರುವೆ. ಶೋಭನೆಯೇ, ನಿನ್ನ ಪ್ರಶ್ನೆಯೇ ನನಗೆ ಸನ್ಮಂಗಳವನ್ನುಂಟುಮಾಡುತ್ತಿದೆ. ॥೩೫॥

ಸರ್ವಮಂಗಳಾ ದೇವಿಯಾದ ಪಾರ್ವತಿಯ ರಮಣನಾದ ಮಹೇಶ್ವರನ, ತಾವರೆಯಂತಿರುವ ಪಾದಗಳ ಧೂಳನ್ನು ಸ್ಮರಣೆ ಮಾಡಿದ ಮಾತ್ರದಿಂದಲೇ, ಸಕಲ ಕಲ್ಯಾಣ ಪರಂಪರೆಗಳೂ ಭಕ್ತರಿಗೆ ಪದೇ ಪದೇ ಉಂಟಾಗುವುವು. ॥೩೬॥

ಯಸ್ಯ ಸ್ಮರಣಮಾತ್ರೇಣ ಶೋಭನಾನಾಂ ಪರಂಪರಾ ।
ಭವತ್ಯೇವ ಸ ಗೌರೀಶಃ ಸ್ಮೃತಃ ಪುಣ್ಯವಶಾದಿಹ ॥೩೭॥

ಯತ್ಕಥಾ ಪಾವನತ್ವೇನ ಪಾವನೇಷು ಶ್ರುತಾ ಶುಭಾ ।
ಸಾ ಕಥಾ ಸಂಸ್ಮೃತಾ ಶ್ರಾವ್ಯಾ ಶ್ರವಣೇನಾಪಿ ಮುಕ್ತಿದಾ ॥೩೮॥

ಶಿವಕಥಾಮೃತಸಾಗರಕೀರ್ತನಶ್ರವಣತೋಽಪಿ ನ ತೃಪ್ತಮಿದಂ ಮನಃ ।
ಅಖಿಲಪಾತಕನಾಶನಸಾಧನಂ ಸ್ಮೃತಮಪಿ ಪ್ರಯತೇನ ವಿಶೇಷತಃ ॥೩೯॥

ಶಿವಕಥಾಮೃತರಾಶಿರನೇಕಧಾ
ಶ್ರುತ ಇತಿ ಸ್ವತ ಏವ ಪುನಃ ಪುನಃ ।

---

ಯಾವ ಪರಮೇಶ್ವರನ ಸ್ಮರಣೆ ಮಾತ್ರದಿಂದಲೇ ಸಕಲ ಮಂಗಳ ಪರಂಪರೆಯೂ ಅವಶ್ಯವಾಗಿ ಉಂಟಾಗುವುವೋ, ಅಂತಹ ಗೌರೀರಮಣನೆನಿಸಿದ ಮಹಾದೇವನನ್ನು ಈಗ ನನ್ನ ಪುಣ್ಯವಶದಿಂದ ಸ್ಮರಣೆಮಾಡುತ್ತಿರುವೆನು. ॥೩೭॥

ಯಾವ ಪರಮೇಶ್ವರನ ಸಂಬಂಧವಾದ ಕಥೆಯು ಪವಿತ್ರವೆನಿಸಿರುವುದೋ, ಮತ್ತು ಪವಿತ್ರವಾದವುಗಳಲ್ಲಿಯೂ ಪರಮಪವಿತ್ರವೆನಿಸಿರುವುದೋ, ಅಂತಹ ಆ ಮಹಾದೇವನ ಕಥೆಯನ್ನು ಸ್ಮರಣೆಮಾಡಬೇಕು. ಆ ಶಿವನ ಕಥೆಯನ್ನು ಶ್ರವಣ ಮಾಡಿದರೆ ನಿಜವಾಗಿಯೂ ಮುಕ್ತಿಯುಂಟಾಗುವುದು. ॥೩೮॥

ಶಿವನ ಸಂಬಂಧವಾದ ಕಥೆಗಳೆಂಬ ಅಮೃತಸಾಗರಗಳನ್ನು ಕೀರ್ತನಮಾಡುವುದು ಮತ್ತು ಕೇಳುವುದು ಇವುಗಳಿಂದ ಎಷ್ಟು ಹೊತ್ತು ಕಳೆದರೂ ನನ್ನ ಮನಸ್ಸಿಗೆ ತೃಪ್ತಿಯೇ ಉಂಟಾಗುತ್ತಿಲ್ಲ. ಅಂದರೆ ಅಪಾರವಾದ ಶಿವಕಥೆಗಳು ಕೇಳುವುದಕ್ಕೆ ಆನಂದವಾಗಿಯೂ ಇರುವುವು. ಇದನ್ನು ಎಷ್ಟು ಕೇಳಿದರೂ ನನಗೆ ಸಾಕೆಂಬ ಅಭಿಪ್ರಾಯವೇ ಉಂಟಾಗದೆ ಇನ್ನೂ ಕೇಳಬೇಕೆಂಬ ಕುತೂಹಲವೇ ಹೆಚ್ಚುತ್ತಿರುವುದು. ಈ ಶಿವಕಥೆಗಳನ್ನು ವಿಶೇಷವಾಗಿ ಶ್ರದ್ಧಾ ಭಕ್ತಿ ಪುರಸ್ಸರವಾಗಿ ನಿಯಮದಿಂದ ಸ್ಮರಣೆ ಮಾಡಿದರೆ ಸಕಲ ಪಾಪಗಳನ್ನೂ ನಾಶಪಡಿಸಲು ಇದು ಮುಖ್ಯ ಸಾಧನವಾಗುವುದಲ್ಲವೆ! ॥೩೯॥

ತಾನಾಗಿಯೇ ಅಮೃತಸಮಾನವಾದ ಈ ಶಿವಕಥೆಗಳ ಸಮೂಹವನ್ನು ಪುನಃ ಪುನಃ ಅನೇಕ ಬಾರಿ, ಶ್ರವಣಮಾಡಿದ್ದರೂ, ಅದನ್ನು ಪುನಃ ಶ್ರವಣಮಾಡಬೇಕೆಂಬ

ಶ್ರವಣಮಿಚ್ಛತಿ ಪಾಪವಿನಾಶನೇ
ಕರುಣಮೇಕಮಿದಂ ಭುವಿ ಮುಕ್ತಿದಂ ॥೪೦॥

ಯನ್ನಾಮಸ್ಮರಣೇನ ಪಾಪನಿಲಯೋ ಯನ್ನಾಮಸಂಕೀರ್ತನಾ
ದಾಪದ್ರೂಪಜಲಾರ್ಣವೌಘವಿಲಯೋ ಯನ್ನಾಮಸಂಕೀರ್ತನಾತ್ ।
ಸರ್ವಾಭೀಷ್ಟಸಮೃದ್ಧಿರೇವ ತದಿದಂ ವಂದೇ ಮುಕುಂದಾರ್ಚಿತಂ
ಗೌರೀನಾಥಪದಾರವಿಂದಜರಜಃಪುಂಜಂ ನಿಕುಂಜಾಲಯಂ ॥೪೧॥

ಯತ್ಪಾದಾಂಬುರುಹಾರ್ಚನಾಯ ಯತತೇ ನಾರಾಯಣಃ ಸಂತತಂ
ತತ್ಪಾದಾಂಬುರುಹಪ್ರಭಾವಮಧುನಾ ಸ್ಮೃತ್ವಾ ಮನಃ ಕೇವಲಂ ।
ಪ್ರಾಪಾನಂದಮನಂತಜನ್ಮಜಮಹಾಪುಣ್ಯಾಬ್ಧಿಪೂರೈರಿದಂ
ಗೌರೀಕಾಂತಪದಾರವಿಂದಭಜನಂ ಜನ್ಮಾಪಹಂ ಜಾಯತೇ ॥೪೨॥

---

ಕುತೂಹಲವೇ ಇನ್ನೂ ಹೆಚ್ಚುತ್ತಿದೆ. ಪಾಪಗಳನ್ನು ನಾಶಮಾಡುವುದರಲ್ಲಿ ಸಮರ್ಥವೂ, ಮುಕ್ತಿಯನ್ನುಂಟುಮಾಡುವುದೂ ಆಗಿರುವುದೆಂದರೆ ಈ ಭೂಲೋಕದಲ್ಲಿ ಆ ಶಿವಕಥಾಶ್ರವಣವೊಂದೆ. ॥೪೦॥

ಯಾವ ಮಹಾದೇವನ ನಾಮಸ್ಮರಣೆಯಿಂದ ಪಾಪಗಳೆಲ್ಲಾ ನಾಶವಾಗುವುವೋ, ಮತ್ತು ಸಮುದ್ರದಂತೆ ಅಪಾರವಾಗಿರುವ ವಿಪತ್ತುಗಳೆಲ್ಲಾ ಧ್ವಂಸವಾಗಿ ಹೋಗುವುವೋ, ಅಂತಹ ದಿವ್ಯನಾಮಸ್ಮರಣೆಯ ಮಹಿಮೆಯಿಂದ ಸಕಲ ಇಷ್ಟಾರ್ಥಸಿದ್ಧಿಗಳೂ ತಪ್ಪದೇ ಉಂಟಾಗುವುವು. ಇಂತಹ ಮಹಾಮಹಿಮೆಯುಳ್ಳ ಪರಮೇಶ್ವರನ ಪಾದಕಮಲಗಳನ್ನು ಮುಕುಂದಾದಿ ದೇವಶ್ರೇಷ್ಠರೂ ಸಹ ಭಕ್ತಿಯಿಂದ ಪೂಜಿಸುತ್ತಿರುವರು. ಶಿವಭಕ್ತರಿಗೆ ಲತಾಮಂಟಪಸಮೂಹದಂತೆ ಆನಂದದಾಯಕವಾಗಿರುವ ಆ ಪರಮೇಶ್ವರನ ಪಾದಧೂಳಿಯ ಸಮೂಹವನ್ನು ನಾನು ಸದಾ ನಮಸ್ಕರಿಸುವೆನು. ॥೪೧॥

ಯಾವ ಗಿರಿಜಾರಮಣನ ಪಾದಾಂಬುಜಗಳನ್ನು ಸೇವಿಸುವುದಕ್ಕೋಸ್ಕರವಾಗಿಯೇ ಸಾಕ್ಷಾನ್ನಾರಾಯಣನೂ ಅನವರತವೂ ಪ್ರಯತ್ನಿಸುತ್ತಿರುವನೋ, ಅಂತಹ ಮಹಾದೇವನ ಅಡಿದಾವರೆಗಳ ಮಹಿಮೆಯನ್ನು ಈಗ ಸ್ಮರಣೆಮಾಡುತ್ತಾ ನನ್ನ ಮನಸ್ಸು ಅನಂತವಾದ ಜನ್ಮಗಳಲ್ಲಿ ಮಾಡಿದ ಮಹಾಪುಣ್ಯವೆಂಬ ಸಮುದ್ರದ ಪ್ರವಾಹಗಳಿಂದ ಹೊಂದಲಸಾಧ್ಯವಾಗಿರುವ ದಿವ್ಯವಾದ ಆನಂದವನ್ನು

ಧನ್ಯಂ ಧನ್ಯಮಿದಂ ದಿನಂ ಶಿವಪದಧ್ಯಾನೇನ ನೀತಂ ಪುನಸ್ತ
ತ್ಪಾದಾಂಬುಜಮೇವ ಚಿತ್ತಮಸಕೃತ್ಸ್ಮೃತ್ವಾಪಿ ತೃಪ್ತಂ ಪುನಃ ।
ತೃಪ್ತಿಂ ಯಾಸ್ಯತಿ ತತ್ಪ್ರಭಾವಕಥನಾತ್ತೇನೈವ ಮುಕ್ತಿಃ ಪರಾ
ಪಾಪಾನಾಂ ವಿಲಯೋಽಪಿ ಪಾವನಮಿದಂ ತೇನೈವ ನೂನಂ ಮನಃ ॥೪೩॥

ಲಿಂಗಾರಾಧನಜಾತಪುಣ್ಯವಿಭವೋ ವೇದೈರ್ನ ವಿಜ್ಞಾಯತೇ
ಕಿಂ ವೇದೈರಪಿ ಕಿಂ ಮುನೀಶ್ವರಗಣೈರ್ನಾರಾಯಣೇನಾಪಿ ವಾ ।
ಕಿಂ ವಾಣೀರಮಣೇನ ನಾಗನಿಲಯಾಧೀಶೇನ ತದ್ವರ್ಣನಂ
ಶಕ್ಯಂ ಕಸ್ಯ ಭವಿಷ್ಯತೀತಿ ಬಹುಧಾ ಚಿತ್ತಂ ಮಮ ವ್ಯಾಕುಲಂ ॥೪೪॥

ಯದ್ಯಪ್ಯರ್ಧಶಶಾಂಕಶೇಖರಪದಾಂಭೋಜಾರ್ಚನೇನಾದರ
ಸ್ತದ್ಜ್ಞಾನೇ ಸತಿ ತತ್ಪ್ರಭಾವಕಥನಂ ಶಕ್ಯಂ ಕಥಂಚಿದ್ಭವೇತ್ ।

---

ಹೊಂದುತ್ತಿದೆ. ಆ ಮಹಾಮಹಿಮನಾದ ಗೌರೀರಮಣನ ಭಜನೆಯು ಮಾನವನ ಜನ್ಮವನ್ನೇ ತೊಡೆದುಹಾಕಿ ಶಾಶ್ವತವಾದ ಮೋಕ್ಷವನ್ನುಂಟುಮಾಡುತ್ತದೆ. ॥೪೨॥

ಶಿವನಾಮಸಂಕೀರ್ತನ, ಶಿವಪದಧ್ಯಾನ, ಮುಂತಾದವುಗಳಿಂದ ಕಳೆದ ಈ ದಿನವೇ ಧನ್ಯವಾದುದು. ಆ ಶಿವನ ಪಾದಾರವಿಂದಗಳನ್ನೇ ಅನೇಕ ಬಾರಿ ಸ್ಮರಣೆ ಮಾಡಿ ಈ ನನ್ನ ಮನಸ್ಸೂ ಸಂತುಷ್ಟವಾಗಿರುವುದು. ಮತ್ತು ಆ ಶಿವಮಹಿಮೆ ಯನ್ನು ನಿನಗೆ ಹೇಳುವುದರ ದೆಸೆಯಿಂದ ಇನ್ನೂ ತೃಪ್ತಿಹೊಂದುವುದು. ಇದರಿಂ ದಲೇ ಉತ್ಕೃಷ್ಟವಾದ ಮುಕ್ತಿಯೂ, ಪಾಪನಾಶವೂ ಆಗುವುದಲ್ಲದೇ ನಿಜವಾ ಗಿಯೂ ನನ್ನ ಮನಸ್ಸು ಪವಿತ್ರವಾಗುವುದು. ॥೪೩॥

ಶಿವಲಿಂಗಪೂಜೆಯಿಂದುಂಟಾಗುವ ಪುಣ್ಯವೈಭವವನ್ನು ವೇದಗಳೂ ತಿಳಿಯ ಲಾರವು. ಕೇವಲ ವೇದಮಂತ್ರದಿಂದಲೇನು ? ಮುನಿಶ್ರೇಷ್ಠರ ಸಮೂಹವೂ ನಾರಾಯಣನೂ, ಚತುರ್ಮುಖಬ್ರಹ್ಮ ಮತ್ತು ಆದಿಶೇಷ ಇವರುಗಳೂ, ಆ ಪರಶಿವನನ್ನು ವರ್ಣಿಸಲು ಸಾಧ್ಯರೇ ಅಲ್ಲ ಎಂದು ನನ್ನ ಮನಸ್ಸಿನಲ್ಲಿ ಬಹಳ ವ್ಯಾಕುಲವಾಗುತ್ತಿರುವುದು. ॥೪೪॥

ಅರ್ಧಚಂದ್ರನನ್ನು ಶಿರೋಭೂಷಣವನ್ನಾಗಿ ಧರಿಸಿರುವ ಮಹಾದೇವನನ್ನು ಪೂಜಿಸಲು ನನಗೆ ಯದ್ಯಪಿ ಆದರವೇ ಇದ್ದರೂ, ಆ ಪರಮೇಶ್ವರ ವಿಷಯಕವಾದ ಜ್ಞಾನವುಂಟಾದರೆ ಮಾತ್ರ ಏನೋ ಸ್ವಲ್ಪಮಟ್ಟಿಗಾದರೂ ಆ ಮಹಾಮಹಿಮನ

ತನ್ನೇತ್ಯೇವ ಖಲು ಸ್ಥಗಿತಮಸ್ಯೇತನ್ಮನಃ ಸರ್ವಥಾ
ಸರ್ವಾಶಾಸ್ಯಮಿದಂ ಕಥಂಚಿದಧುನಾ ತಾವನ್ಮಯಾಪ್ಯುಚ್ಯತೇ ॥೪೫॥

ಪುರಾ ಬ್ರಹ್ಮಾಂಡವಿಲಯೇ ಜಗತ್ಸ್ರಷ್ಟುಂ ಮಹೇಶ್ವರಃ ।
ಕ್ರೀಡಾವಿನೋದಸಂಪನ್ನಾಂ ಭವಾನೀಮಾಹ ಸಾದರಂ ॥೪೬॥

॥ ಸದಾಶಿವ ಉವಾಚ ॥

ಬ್ರಹ್ಮಾಂಡಾನಿ ವಿದಗ್ಧಾನಿ ಪಶ್ಯ ಪಶ್ಯ ವರಾನನೇ ।
ಏತೇಷಾಂ ಸೃಷ್ಟಿರಧುನಾ ತವ ಕಿಂ ಸಮುಪೇಕ್ಷಿತಾ ॥೪೭॥

ಯದ್ವಾ ನೇತಿ ವಿಚಾರ್ಯೇದಂ ವದ ಸಾದರಮಂಬಿಕೇ ।
ಸರ್ಗೇಽಪಿ ತವ ಶಕ್ತಿಃ ಕಿಂ ವಿದ್ಯತೇ ಗಿರಿಕನ್ಯಕೇ ॥೪೮॥

---

ಪ್ರಭಾವವನ್ನು ನಿನಗೆ ಹೇಳಲು ಶಕ್ಯವಾದೀತು. ಸರ್ವಥಾ ನನಗೆ ಆ ರೀತಿಯಾದ ಸಾಮರ್ಥ್ಯವಿಲ್ಲವೆಂದೇ ನನ್ನ ಮನಸ್ಸು ಹಿಂದೆಗೆಯುತ್ತಿರುವುದು. ಆದರೂ, ಈಗ ಸರ್ವರಿಂದಲೂ ಅಪೇಕ್ಷಿಸಲು ಯೋಗ್ಯವಾದ ಈ ಶಿವನ ಕಥೆಯನ್ನು ತಿಳಿದಮಟ್ಟಿಗೆ ವಿವರಿಸುವೆನು ಕೇಳು, ಎಂದು ಸೂರ್ಯನು ಪದ್ಮಾವತಿಯನ್ನು ಕುರಿತು ಹೇಳುತ್ತಾ ಇಂತೆಂದನು. ॥೪೫॥

ಹಿಂದೆ ಪ್ರಪಂಚ ಪ್ರಳಯಕಾಲದಲ್ಲಿ ಲೋಕಗಳೆಲ್ಲಾ ನಾಶವಾಗಿರುವಾಗ ಪುನಃ ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುವುದಕ್ಕೋಸ್ಕರ ಮಹೇಶ್ವರನು ವಿಹಾರ ವಿನೋದದಲ್ಲಿ ತೊಡಗಿದ್ದ ಗಿರಿಜೆಯನ್ನು ಆದರದಿಂದ ಇಂತೆಂದನು. ॥೪೬॥

"ಎಲೌ ಸುಮುಖಿ! ಇತ್ತನೋಡು, ಈ ಬ್ರಹ್ಮಾಂಡವೆಲ್ಲಾ ಹೇಗೆ ಭಸ್ಮವಾಗಿ ಹೋಗಿದೆ. ಇದನ್ನು ಪುನಃ ಸೃಷ್ಟಿಮಾಡಬೇಕೆಂದು ನಿನಗೆ ಇಚ್ಛೆಯುಂಟೇ? ॥೪೭॥

ಅಂಬಿಕೆ! ಅಥವಾ ಸೃಷ್ಟಿ ಬೇಡವೆಂದು ಹೇಳುವೆಯಾ! ಆದರದಿಂದ ಹೇಳು, ಎಲೌ ಗಿರಿರಾಜಕುವರಿಯೇ! ಒಂದುವೇಳೆ ನಿನಗೆ ಸೃಷ್ಟಿಮಾಡಲು ಶಕ್ತಿ ಇದೆಯೇ? ಎಂಬುದನ್ನಾದರೂ ತಿಳಿಸಿಬಿಡು" ಎಂದು ಶಿವನು ಪಾರ್ವತಿಯನ್ನು ಪ್ರಶ್ನಿಸಿದನು. ॥೪೮॥

ಇತಿ ತದ್ವಚನಂ ಶ್ರುತ್ವಾ ಗೌರೀ ಬ್ರಹ್ಮಾಂಡಮಂಡಲಂ ।
ದಗ್ಧಂ ವಿಲೋಕ್ಯ ತಂ ಪ್ರಾಹ ಮಹಾದೇವಂ ತ್ರಿಲೋಚನಂ ॥೪೯॥

॥ ಗೌರ್ಯುವಾಚ ॥

ಭಗವನ್ಜನಸಂಮರ್ದಃ ಸರ್ವದಾ ಸರ್ಜನೇ ಸಃ ।
ಏಕಾಂತಕಾಲಃ ಸುಲಭಃ ನ ಕದಾಪೀತಿ ದೃಶ್ಯತೇ ॥೫೦॥

ಲೋಕಂ ಸೃಷ್ಟ್ವಾ ಕಿಮಸ್ಮಾಕಂ ಫಲಂ ವ್ಯಸನಮೇವ ತತ್ ।
ಕಿಂ ತೇನ ವ್ಯಸನೇನಾಪಿ ಕಾರ್ಯಮೇತೇನ ಕಿಂ ತವ ॥೫೧॥

ನ ಹಿ ಕಾರ್ಯಂ ವಿನಾ ಲೋಕೇ ಕ್ವಚಿತ್ಕಶ್ಚಿತ್ಪ್ರವರ್ತತೇ ।
ಕೃತಯಾಪಿ ತಯಾ ಸೃಷ್ಟ್ಯಾ ಕಿಂ ತನ್ನಾಶೇನ ವಾ ಫಲಂ ॥೫೨॥

---

ತನ್ನ ಪತಿಯ ವಚನಗಳನ್ನು ಲಾಲಿಸಿ, ಹಾಗೆಯೇ ಗೌರಿಯು ಬ್ರಹ್ಮಾಂಡ ಮಂಡಲವೆಲ್ಲವೂ ಸುಟ್ಟು ಭಸ್ಮವಾಗಿರುವುದನ್ನು ನೋಡಿ, ಮುಕ್ಕಣ್ಣನಾದ ಮಹಾದೇವನನ್ನು ಕುರಿತು ಹೀಗೆಂದಳು. ॥೪೯॥

ಓ ಭಗವನ್! ಪ್ರಪಂಚವನ್ನು ಸೃಷ್ಟಿಮಾಡೋಣವೆಂದರೆ, ಅದರಿಂದ ಜನರ ಗುಂಪು ಅತಿಯಾಗಿ ಹೆಚ್ಚುವುದು. ಆಗ ನಮಗೆ ಏಕಾಂತ ಸ್ಥಳವೇ ದುರ್ಲಭವಾಗುವುದು. ಆದುದರಿಂದ ಈ ಸೃಷ್ಟಿಯು ನಮಗೆ ಬೇಡ. ॥೫೦॥

ಮಹಾದೇವನೇ, ಈ ಲೋಕಗಳನ್ನೆಲ್ಲಾ ಸೃಷ್ಟಿಮಾಡುವುದರಿಂದ ನಮಗೆ ಏನು ತಾನೇ ಫಲ? ಕೇವಲ ವ್ಯಸನವೊಂದೇ ಫಲವೆಂದು ತೋರುವುದು. ಈ ವ್ಯಸನರೂಪವಾದ ಪ್ರಪಂಚಸೃಷ್ಟಿಯಿಂದ ನಿನಗೆ ಆಗಬೇಕಾದ ಕಾರ್ಯ ತಾನೇ ಏನು? ॥೫೧॥

ಪ್ರಯೋಜನವಿಲ್ಲದೇ ಯಾರೂ ಎಂದಿಗೂ ಯಾವ ಕಾರ್ಯದಲ್ಲಿಯೂ ಪ್ರವರ್ತಿಸುವುದಿಲ್ಲವೆಂಬುದು ಪ್ರಸಿದ್ಧವಾಗಿದೆ. ಒಂದು ವೇಳೆ ಪ್ರಪಂಚಸೃಷ್ಟಿಮಾಡಿದರೂ ಪುನಃ ಅದದ್ನು ನಾಶಮಾಡುವುದರಿಂದ ಬರುವ ಫಲವೇನು? ॥೫೨॥

ಅದ್ಯ ಯಾವತ್ಕೃತಂ ಕಾರ್ಯಂ ತತ್ಕೃತಂ ಕೃತನಿತ್ಯತಃ ।
ಲೀಲಯಾಪ್ಯಲಮೇವಾಲಂ ವಿಹರಸ್ವ ಯಥಾಸುಖಂ ॥೫೩॥

ಕಸ್ಯಾಪಿ ಕ್ವಾಪಿ ಸಂಚಾರೋ ನ ತದ್ವಿಲಯನಾದಿಹ ।
ಅತೋ ವಿಹಾರಕಾಲೋಽಯಮಲಂ ಸೃಷ್ಟ್ಯಾ ಮಹೇಶ್ವರ ॥೫೪॥

ಯತ್ರ ಕ್ವಾಪ್ಯಸ್ತು ಸಂಚಾರಃ ಶಯನಂ ವಾ ಯಥೇಚ್ಛಯಾ ।
ನ ಕಸ್ಮಾದಪಿ ಲಜ್ಜಾ ಸ್ಯಾದ್ವಿಹರಸ್ವ ಸದಾಶಿವ ॥೫೫॥

ಅತ್ರ ದಿಙ್ಮಂಡಲಾನ್ಯೇವ ಭವಂತ್ಯಾವರಣಾನ್ಯಪಿ ।
ಅತೋ ಯಥಾಸುಖಂ ಶಂಭೋ ವಿಹರಸ್ವ ಮಹೇಶ್ವರ ॥೫೬॥

ಸುಧಾಕರಾಣಾಂ ವಾ ಪ್ರವೇಶಃ ಕ್ವಾಪಿ ದೃಶ್ಯತೇ ।
ನಾಪಿ ಸೂರಕರಾಣಾಂ ವಾ ಸರ್ವೇಷಾಂ ಪ್ರಲಯಾದಿಹ ॥೫೭॥

---

ಇಲ್ಲಿಯವರೆಗೆ ಮಾಡಿರುವ ಕಾರ್ಯಗಳೇ ಸಾಕಾಗಿವೆ. ಈ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಲೀಲೆಯೂ ಸಾಕು. ಆ ವ್ಯಸನವೂ ಸಾಕು. ನೀನು ಸುಖವಾಗಿ ವಿಹರಿಸುವನಾಗು. ॥೫೩॥

ಈಗ ಪ್ರಪಂಚವೆಲ್ಲವೂ ಲಯವಾಗಿರುವುದರಿಂದ ಯಾರೂ ಸಂಚಾರಮಾಡುವ ಹಾಗಿಲ್ಲ. ಯಾರ ತೊಂದರೆಯೂ ಉಂಟಾಗಲಾರದು. ಆದ್ದರಿಂದ ಮಹೇಶ್ವರನೇ, ಇದು ನಮಗೆ ಸರಿಯಾದ ವಿಹಾರಕಾಲವೆಂದು ತಿಳಿ. ಇನ್ನು ಸೃಷ್ಟಿಕಾರ್ಯವನ್ನು ಸ್ವಲ್ಪ ದೂರಮಾಡುವುದು ಒಳ್ಳೆಯದು. ॥೫೪॥

ಎಲ್ಲಾದರೂ ಸುಖವಾಗಿ ಸಂಚರಿಸೋಣ. ಅಥವಾ ಸದಾಶಿವಸ್ವಾಮಿಯೇ! ಮತ್ತೆಲ್ಲಿಯಾದರೂ ಮಲಗಿ ಆನಂದದಿಂದ ವಿಹಾರಮಾಡೋಣ. ಈ ಸಮಯದಲ್ಲಿ ಯಾರೂ ಇಲ್ಲದೇ ಇರುವುದರಿಂದ ನಾಚಿಕೆಗೆ ಅವಕಾಶವೇ ಇಲ್ಲ. ಪ್ರಭೋ! ಈಗ ಸೃಷ್ಟಿಕಾರ್ಯವು ಬೇಡ. ॥೫೫॥

ಇಲ್ಲಿ ನಮಗೆ ಈ ದಿಙ್ಮಂಡಲಗಳೇ ಆವರಣಗಳಾಗಿವೆ. ಆದುದರಿಂದ ಮಹೇಶ್ವರನೇ, ಸುಖಪ್ರದನಾದ ಸ್ವಾಮಿಯೇ! ನನ್ನೊಡನೆ ನಿನಗೆ ಮನಬಂದಂತೆ ಸುಖವಾಗಿ ವಿಹರಿಸುವವನಾಗು. ॥೫೬॥

ಎಲ್ಲವೂ ಪ್ರಳಯದಲ್ಲಿ ನಾಶವಾಗಿರುವಾಗ ಚಂದ್ರಕಿರಣಗಳಾಗಲೀ ಸೂರ್ಯ

ತ್ವಯಾ ಸಹ ವಿಹಾರಾಯ ತಪಶ್ಚರ್ಯಾ ಕೃತಾ ಪುರಾ ।
ವಿಹಾರಸಮಯಃ ಸೋಽಯಂ ನ ಸಂತ್ಯತ್ರ ಶರೀರಿಣಃ ॥೫೮॥

ನ ನಕ್ಷತ್ರಾಣಿ ಪವನೋ ಭೂಧರಾ ನಾಂಬುರಾಶಯಃ ।
ನ ವಾ ನಾರಾಯಣೋ ನೇಂದ್ರೋ ನ ಬ್ರಹ್ಮಾ ನೋಽಪಿ ಮಾನವಾಃ ॥೫೯॥

ಕೈಲಾಸೇ ವಾ ಮಂದರೇ ವಾ ಶ್ರೀಶೈಲೇ ವಾ ಸದಾಶಿವ ।
ಕಾಶ್ಯಾಂ ವಾ ವಸತಿಸ್ತಾವತ್ಪೂರ್ವಮಾಸೀಜ್ಜನಾನ್ವಯೇ ॥೬೦॥

ಅಧುನಾ ಯತ್ರ ಕುತ್ರಾಪಿ ಸ್ಥಾತುಂ ಶಕ್ಯಂ ತಥಾ ಸತಿ ।
ವಿಹಾರವಿಘ್ನನಾಶೋಽಪಿ ಜಾತ ಏವೇತಿ ಮನ್ಮಹೇ ॥೬೧॥

ಇತಿ ತದ್ವಚನಂ ಶ್ರುತ್ವಾ ಶಂಕರೋ ಹೃಷ್ಟಮಾನಸಃ ।
ಗೌರೀವಿಹಾರಚತುರೋ ಬಭೂವ ಭಗವಾಂಛಿವಃ ॥೬೨॥

---

ಕಿರಣಗಳಾಗಲೀ ಇಲ್ಲಿಗೆ ಪ್ರವೇಶಮಾಡಲು ಸಾಧ್ಯವೇ ಇಲ್ಲ. ಒಂದು ವೇಳೆ ಪ್ರವೇಶ ಮಾಡಿಯಾವೆಂಬ ಅಂಜಿಕೆಯೂ ಇಲ್ಲ. ॥೫೭॥

ಮಹಾದೇವನೇ, ನಿನ್ನೊಡನೆ ವಿಹರಿಸಬೇಕೆಂಬ ಅಪೇಕ್ಷೆಯಿಂದಲೇ ಹಿಂದೆ ನಾನು ಬಹುಕಾಲ ತಪಸ್ಸನ್ನಾಚರಿಸಿದೆನು. ಆ ತಪಸ್ಸಿನ ಫಲಕ್ಕೆ ಇದೇ ಸರಿಯಾದ ಸಮಯವಾಗಿರುವುದು. ಇಲ್ಲಿ ಯಾವ ಪ್ರಾಣಿಗಳ ಅಡಚಣೆಯೂ ಇರುವುದಿಲ್ಲ. ॥೫೮॥

ಈ ಸಮಯದಲ್ಲಿ ನಕ್ಷತ್ರಗಳು, ವಾಯು, ಪರ್ವತಗಳು, ಸಮುದ್ರಗಳೂ ಮತ್ತು ನಾರಾಯಣ, ಇಂದ್ರ, ಬ್ರಹ್ಮಾ ಅಥವಾ ಮಾನವರು ಇವರಾರೂ ಇಲ್ಲ. ॥೫೯॥

ಸದಾಶಿವನೇ, ಕೈಲಾಸಪರ್ವತ, ಶ್ರೀಶೈಲಪರ್ವತ, ಕಾಶೀ ಮುಂತಾದ ಜನನಿಬಿಡವಾದ ಸ್ಥಳಗಳಲ್ಲಿಯೇ ಹಿಂದೆ ನಮ್ಮ ವಸತಿಯೇರ್ಪಟ್ಟಿತ್ತು. ॥೬೦॥

ಈಗಲಾದರೋ ಎಲ್ಲಿ ಬೇಕಾದರೂ ನಿನ್ನಿಚ್ಛೆಯಂತೆ ನೆಲಸಬಹುದು. ಯಾವವಿಧವಾದ ವಿಘ್ನವೂ ನಮ್ಮ ವಿಹಾರಕ್ಕುಂಟಾಗಲಾರದೆಂದು ತಿಳಿದಿರುವೆನು." ಎಂದು ಪಾರ್ವತಿಯು ಶಿವನಿಗೆ ಹೇಳಿದಳು. ॥೬೧॥

ಪ್ರಿಯೆಯು ಹೀಗೆ ಹೇಳಿದುದನ್ನು ಕೇಳಿ ಶಂಕರನು ಸಂತೋಷಹೊಂದಿ, ವಿಹಾರ ಚತುರನಾದ ಭಗವಾನ್ ಮಹಾದೇವನು ಅದಕ್ಕೆ ಒಪ್ಪಿ ಕ್ರೀಡಾಸಕ್ತನಾದನು. ॥೬೨॥

ತಯೋರ್ವಿಹಾರಕಾಲೋಽಪಿ ಯಾವಾನ್ಸ್ಯತ್ತಃ ಪುರಾ ತದಾ ।
ಸ ನ ಜ್ಞಾತೋಽಪಿ ಕೇನಾಪಿ ಸ ಕಾಲಸ್ತಸ್ಯ ನೋಹರಃ ॥೩೩॥

ಗೌರೀವಿಹಾರರಸಸಾಗರಸೇವನೇನ
ವೃತ್ತಾಃ ಶ್ರಮೋಽಪಿ ಶಿವಯೋಃ ಸತಯೋಃ ಶ್ರಮೇಣ ।
ಸ್ವೇದಾಂಬುರಾಶಿರಭವತ್ತತ ಏವ ಜಾತಾ
ಸೃಷ್ಟಿಶ್ಚ ಸರ್ವಜಗತಾಂ ಚ ಯಥಾ ಕ್ರಮೇಣ ॥೩೪॥

ಸ್ವೇದಃ ಸ ಏವ ಜಲಧಿತ್ವಮವಾಪ ಕೋಽಪಿ
ಗಂಗಾತ್ವಮಾಪ ಯಮುನಾತ್ವಮವಾಪ ಕೋಽಪಿ ।
ವಾಣೀತ್ವಮಾಪ ಸರಯೂತ್ವಮವಾಪ ಕೋಽಪಿ
ಕ್ಷೀರಾಂಬುರಾಶಿಮಪಿ ಕೋಽಪಿ ಸ ಏವ ನೂನಂ ॥೩೫॥

---

ಆ ಗಿರಿಜಾ ಮಹೇಶ್ವರರ ವಿಹಾರಕಾಲವು ಎಷ್ಟು ದಿವಸದವರೆಗೆ ಇತ್ತೆಂಬ ವಿಷಯವನ್ನಾರೂ ತಿಳಿಯಲಾರರು. ಆದರೂ ಆ ಪೂರ್ಣಕಾಲವು, ಉಮಾಮಹೇಶ್ವರರಿಗೆ ಪರಮಾನಂದವನ್ನುಂಟುಮಾಡುತ್ತಿದ್ದಿತೆಂದು ಮಾತ್ರ ಹೇಳಬಹುದು. ॥೩೩॥

ಪರಸ್ಪರ ವಿಹರಿಸುತ್ತಾ ರಸಭರಿತವಾದ ವಿನೋದದಿಂದ ಕಾಲವನ್ನು ಕಳೆಯುತ್ತಾ, ಪರಸ್ಪರ ಆನಂದಮಗ್ನರಾಗಿದ್ದ ಆ ಉಮಾಮಹೇಶ್ವರರಿಗೆ ಬಹಳ ಶ್ರಮವುಂಟಾಯಿತು. ಆ, ಶ್ರಮದಿಂದ ಬೆವರಿನ ಸಮೂಹವು ಜನಿಸಿ, ಅಪಾರವಾದ ಆ ಬೆವರಿನ ರಾಶಿಯಿಂದಲೇ ಕ್ರಮವಾಗಿ ಸಕಲ ಪ್ರಪಂಚಸೃಷ್ಟಿಯೂ ಆರಂಭವಾಯಿತು. ॥೩೪॥

ಆ ಬೆವರಿನ ಪಂಕ್ತಿಯೇ ಒಂದು ಕಡೆ ಸಮುದ್ರವಾಗಿಯೂ, ಒಂದು ಕಡೆ ಗಂಗಾನದಿಯಾಗಿಯೂ, ಇನ್ನೊಂದುಕಡೆ ಯಮುನಾನದಿಯಾಗಿಯೂ, ಮತ್ತೊಂದು ಕಡೆ ಸರಸ್ವತೀನದಿಯಾಗಿಯೂ, ಬೇರೊಂದುಕಡೆ ಸರಯೂನದಿಯ ರೂಪವಾಗಿಯೂ ಒಂದು ಕಡೆಯಲ್ಲಿ ಕ್ಷೀರಸಮುದ್ರವಾಗಿಯೂ ಪರಿಣಮಿಸಿತು. ಇದು ನಿಶ್ಚಯ. ॥೩೫॥

ಸ ಏವ ಶೋಣಾ ಭದ್ರಾತ್ವಂ ನರ್ಮದಾತ್ವಮವಾಪ ಸಃ ।
ಗೋದಾವರೀತ್ವಂ ಸಂಪ್ರಾಪ ಕಾವೇರಿತ್ವಮವಾಪ ಸಃ ॥೬೬॥

ಸಂಪ್ರಾಪ ಕೃಷ್ಣವೇಣೀತ್ವಂ ಸ್ವೇದಪೂರಸ್ತಯೋಸ್ತದಾ ।
ತೇನೈವ ಸ್ವೇದಪೂರೇಣ ಬ್ರಹ್ಮಾಂಡಂ ಜಲಪೂರಿತಂ ॥೬೭॥

ತೇನ ವಾಯುಃ ಸಮುತ್ಪನ್ನಃ ಜಾತಂ ಚ ಗಗನಂ ತತಃ ।
ಅಗ್ನಿರಿಂದುಶ್ಚ ಸೂರ್ಯಶ್ಚ ಮಹಾವಿಷ್ಣುಶ್ಚತುರ್ಮುಖಃ ॥೬೮॥

ವಿಂಧ್ಯಶ್ಚ ಹಿಮವಾನ್ಮೇರುರ್ಮಂದರೋ ಗಂಧಮಾದನಃ ।
ಕುಲಾಚಲಾಶ್ಚ ನಾಗಾಶ್ಚ ಸರ್ಪಾಶ್ಚ ಮಣಿಭೂಷಣಾಃ ॥೬೯॥

ನಿಧಯಃ ಶಂಖಮುಖ್ಯಾಶ್ಚ ಲೋಕಾಃ ಸ್ವರ್ಗಾದಯಸ್ತಥಾ ।
ವನಾನ್ಯಪಿ ವಿಚಿತ್ರಾಣಿ ಧಾನ್ಯಾನ್ಯಪಿ ವಿಶೇಷತಃ ॥೭೦॥

ತೇನೈವ ಸ್ವೇದರೂಪೇಣ ವೇದಾ ಅಷ್ಟ್ಯಾಗಮಾ ಅಪಿ ।
ವಿದ್ಯಾಃ ಸಮಸ್ತಾಃ ಸಂಭೂತಾಃ ಗಂಧರ್ವಾಃ ಕಿನ್ನರಾ ಅಪಿ ॥೭೧॥

---

ಶೋಣಾ, ಭದ್ರಾ, ನರ್ಮದಾ, ಗೋದಾವರೀ, ಕಾವೇರೀ, ಕೃಷ್ಣವೇಣೀ ಮುಂತಾದ ನದಿಗಳೆಲ್ಲವೂ ಆ ಪಾರ್ವತೀಪರಮೇಶ್ವರರ ವಿಹಾರಕಾಲದ ಸ್ವೇದದಿಂದಲೇ ಉಂಟಾದುವು. ಅನಂತರ ಈ ನದಿಗಳಿಂದ ಅಂದರೆ ಉಮಾಮಹೇಶ್ವರರ ಸ್ವೇದಪ್ರವಾಹರೂಪವಾದ ಈ ಗಂಗಾನದಿಗಳಿಂದ ಬ್ರಹ್ಮಾಂಡವೆಲ್ಲವೂ ಜಲಭರಿತವಾಯಿತು. ॥೬೬-೬೭॥

ವಾಯು, ಅಂತರಿಕ್ಷ, ಅಗ್ನಿ, ಚಂದ್ರ, ಸೂರ್ಯ, ಮಹಾವಿಷ್ಣು, ಚತುರ್ಮುಖ ಬ್ರಹ್ಮ, ವಿಂಧ್ಯಪರ್ವತ, ಹಿಮವತ್ಪರ್ವತ, ಮಂದರಪರ್ವತ, ಗಂಧಮಾದನಪರ್ವತ, ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರಗಳೆಂಬ ಸಪ್ತಕುಲಪರ್ವತಗಳೂ, ರತ್ನಭೂಷಣಗಳುಳ್ಳ ನಾಗಗಳೂ, ಶಂಖವೇ ಮುಂತಾದ ನವನಿಧಿಗಳೂ, ಸ್ವರ್ಗಾದಿಯಾದ ಸಕಲ ಲೋಕಗಳೂ, ವಿಚಿತ್ರವಾದ ವನಗಳೂ ಮತ್ತು ಬಗೆಬಗೆಯ ಧಾನ್ಯಗಳೂ ಸಹ ಆ ಸ್ವೇದಪ್ರವಾಹದಿಂದಲೇ ಜನಿಸಿದವು. ॥೬೮-೬೯-೭೦॥

ಪಾರ್ವತೀಪರಮೇಶ್ವರರ ಈ ಸ್ವೇದದಿಂದಲೇ ವೇದಗಳೂ, ಆಗಮಗಳೂ

ತತ ಏವ ಸಮುತ್ಪನ್ನಾಃ ಸರ್ವೇ ತೇ ಮಾನವಾ ಅಪಿ ।
ಮನವೋಽಪಿ ಸಮುತ್ಪನ್ನಾಃ ಪಶುಪಕ್ಷಿಮೃಗಾದಯಃ ॥೭೨॥

ಏವಮೇತತ್ಸಮುತ್ಪನ್ನಂ ಜಗದ್ದೃಷ್ಟ್ವಾ ಮಹೇಶ್ವರಃ ।
ವಿಸ್ಮಯಂ ಪರಮಂ ಪ್ರಾಪ ಸಾಪಿ ಗೌರೀ ಶಿವಪ್ರಿಯಾ ॥೭೩॥

ತತಸ್ತಾಮಾಹ ಗಿರಿಜಾಂ ಗಿರಿಜಾರಮಣಃ ಪ್ರಭುಃ ।
ಪಶ್ಯ ಪಶ್ಯ ವಿಲಾಸೋಽಯಂ ಕಥಂ ಪರಿಣತಂ ಪ್ರಿಯೇ ॥೭೪॥

ಸೃಷ್ಟ್ಯರ್ಥೋಽಯಂ ವಿಲಾಸಸ್ತೇ ವಿಜನತ್ವಾವಲೋಕನಾತ್ ।
ಜನಾವಲೋಕನೇ ವೃತ್ತೇ ಸ ಶಾಂತಶ್ಚಾಂತ ಏವ ತೇ ॥೭೫॥

---

ಮತ್ತು ಸಮಸ್ತ ವಿದ್ಯೆಗಳೂ, ಅಲ್ಲದೇ ಗಂಧರ್ವರೂ, ಕಿಂನರರೂ ಸಹ ಜನಿಸಿದರು. ॥೭೧॥

ಆ ಸ್ವೇದದಿಂದಲೇ ಚತುರ್ದಶ (ಹದಿನಾಲ್ಕು ಮಂದಿ) ಮನುಗಳೂ ಅವರಿಂದ ಮಾನವರೂ ಅಲ್ಲದೇ ಪಶು, ಪಕ್ಷಿ, ಮೃಗ ಮುಂತಾದವುಗಳೂ ಸಂಭವಿಸಿದವು. ॥೭೨॥

ಹೀಗೆ ತಮ್ಮ ಬೆವರಿನ ಹನಿಗಳಿಂದ ಉಂಟಾಗಿರುವ ಸಕಲಜಗತ್ತನ್ನೂ ನೋಡಿ, ಮಹೇಶ್ವರನೂ ಮತ್ತು ಶಿವನ ಪ್ರೇಯಸಿಯಾದ ಆ ಪಾರ್ವತಿಯೂ ಸಹ ಅತ್ಯಾಶ್ಚರ್ಯಗೊಂಡರು. ॥೭೩॥

ಇದನ್ನು ನೋಡಿದ ನಂತರ ಗಿರಿಜಾರಮಣನೂ, ಸರ್ವಸಮರ್ಥನೂ ಆದ ಪರಮೇಶ್ವರನು ತನ್ನ ಪ್ರಿಯೆಯಾದ ಗಿರಿಜೆಯನ್ನು ಕುರಿತು, ಪ್ರೇಯಸಿ, ಇತ್ತ ನೋಡು, ನಮ್ಮಿರ್ವರ ವಿಲಾಸವು ಯಾವ ರೀತಿಯಾಗಿ ಪರಿಣಾಮಹೊಂದಿರುವುದು. ॥೭೪॥

ದೇವಿ! ಜನರಹಿತವಾಗಿದ್ದ ಸಮಯವನ್ನು ನೋಡಿ, ನೀನು ವಿಲಾಸೋನ್ಮುಖಳಾದದ್ದು ಕೇವಲ ಜಗತ್ಸೃಷ್ಟಿಗೋಸ್ಕರವೇ ಎಂದು ತೋರುವುದು. ಈ ಜಗತ್ಸೃಷ್ಟಿಯಾಗಿ ಪ್ರಾಣಿಗಳು ಕಾಣುತ್ತಿರುವುದರಿಂದ ಆ ನಿನ್ನ ವಿಹಾರವಿಲಾಸವೂ ಶಾಂತವಾಯಿತಲ್ಲವೆ! ॥೭೫॥

ಅತಃ ಪರಂ ವಿಲಾಸಾರ್ಥಂ ಯದಿ ಸ್ಥಲಮುಪೇಕ್ಷಿತಂ ।
ತದಾ ಕೈಲಾಸನಿಲಯಮಾಯಾಹಿ ಗಿರಿಕನ್ಯಕೇ ॥೭೬॥

ತತ್ರೋದ್ಯಾನವನೇ ರಮ್ಯೇ ಸರ್ವಪುಷ್ಪಸಮಾಕುಲೇ ।
ಭೃಂಗಾಂಗನಾಗಾನವೀತೇ ಪರಭೃದ್ಗಾನಸಂಕುಲೇ ॥೭೭॥

ಸುಧಾಪ್ರವಾಹಸಂಕೀರ್ಣೇ ಮಂದಮಾರುತಸೇವಿತೇ ।
ಪುಷ್ಪಶಯ್ಯಾಸಮಾಕೀರ್ಣೇ ಫಲರಾಜಿವಿರಾಜಿತೇ ॥೭೮॥

ರತ್ನಮಂದಿರಸಂಕೀರ್ಣೇ ರತ್ನಸಿಂಹಾಸನಾರ್ಚಿತೇ ।
ರತ್ನಪರ್ಯಂಕಸಂಕೀರ್ಣೇ ರತ್ನಮಾಲಾವಿರಾಜಿತೇ ॥೭೯॥

ಇಂದುಕಂದುಕಸಂವೀತೇ ಪುಷ್ಪಮಾಲಾವಿರಾಜಿತೇ ।
ಮಣಿದೀಪಸಮಾಕೀರ್ಣೇ ಶರದ್ರಾಕಾನಿಶಾಕರೇ ॥೮೦॥

---

ಆದ್ದರಿಂದ, ಇನ್ನು ಮುಂದೆ, ವಿಲಾಸವನ್ನು ಹೊಂದಲು ಸ್ಥಳವನ್ನು ಅಪೇಕ್ಷಿಸುವುದಾದರೆ, ಗಿರಿರಾಜಕುಮಾರಿಯೇ! ಕೈಲಾಸಕ್ಕೆ ಬಂದುಬಿಡು. ಅಲ್ಲಿಯೇ ಯೋಗ್ಯವಾದ ಸ್ಥಳವು ನಮ್ಮ ವಿಹಾರಕ್ಕೆ ಸಿದ್ಧವಾಗಿರುವುದು. ॥೭೬॥

ಆ ಕೈಲಾಸದಲ್ಲಿ ಮನೋಹರವಾದ ಉದ್ಯಾನವನಗಳಿರುವುವು. ಆ ಉದ್ಯಾನಗಳು ಮನೋಹರವಾದ ಹೂವುಗಳಿಂದ ಯುಕ್ತವಾಗಿವೆ. ಅಲ್ಲಿ ಹೆಣ್ಣು ದುಂಬಿಗಳು ಮನೋಹರವಾಗಿ ಗಾನಮಾಡುತ್ತಿರುವುವು. ಕೋಗಿಲೆಗಳು ತಮ್ಮ ಇಂಪಾದ ಧ್ವನಿಯಿಂದ ಆನಂದವನ್ನುಂಟುಮಾಡುತ್ತಿರುವುವು. ಅಮೃತಪ್ರವಾಹದಿಂದ ವ್ಯಾಪ್ತವಾದ ಮಂದಮಾರುತವು ಆ ಉದ್ಯಾನವನಗಳಲ್ಲಿ ಬೀಸುತ್ತಿರುವುದು. ಪುಷ್ಪಮಯವಾದ ಶಯ್ಯೆಗಳೂ (ಹಾಸಿಗೆಗಳು) ಹಣ್ಣುಗಳ ಸಮೂಹವೂ ವಿರಾಜಿಸುತ್ತಿರುವುವು. ॥೭೭-೭೮॥

ಆ ಉದ್ಯಾನದಲ್ಲಿ ರತ್ನಮಯವಾದ ಮನೆಗಳೂ, ರತ್ನಖಚಿತವಾದ ಸಿಂಹಾಸನಗಳೂ, ರತ್ನಗಳಿಂದ ಕೆತ್ತಿದ ಮಂಚಗಳೂ, ರತ್ನಹಾರಗಳೂ ಯಥೇಚ್ಛವಾಗಿ ವ್ಯಾಪ್ತವಾಗಿರುವುವು. ॥೭೯॥

ಚಂದ್ರನಂತೆ ಪ್ರಕಾಶಿಸುವ ಚಂಡಿನಿಂದ ಯುಕ್ತವಾಗಿ, ಹೂಮಾಲೆಗಳಿಂದ ವಿರಾಜಿಸುತ್ತಿರುವ ಈ ಉದ್ಯಾನವನಗಳು, ರತ್ನಗಳೆಂಬ ದೀಪಗಳಿಂವ ವ್ಯಾಪ್ತವಾಗಿ ಶರತ್ಕಾಲದ ಪೂರ್ಣಚಂದ್ರನಂತೆ ಬೆಳಗುತ್ತಿರುವುವು. ॥೮೦॥

ಬ್ರಹ್ಮಾಂಡಪ್ರಲಯೇಽಪ್ಯಸ್ಯ ಪ್ರಲಯೋ ನ ಪ್ರಜಾಯತೇ ।
ಸರ್ವರ್ತುಗಣಸಂಕೀರ್ಣಂ ಸರ್ವದಾ ತದ್ವನಂ ಮಮ ॥೮೧॥

ತತ್ರ ಪಕ್ವಾನ್ಯಪಾರಾಣಿ ಫಲಾನಿ ವಿವಿಧಾನ್ಯಪಿ ।
ತೇಭ್ಯಃ ಪೀಯೂಷಧಾರಾಶ್ಚ ಪ್ರಸ್ರವಂತಿ ಮುಹುರ್ಮುಹುಃ ॥೮೨॥

ಸರಿದ್ವರಾಪಿ ಪರಿತಸ್ತದುದ್ಯಾನಸ್ಯ ಶೋಭನಂ ।
ಮಹಾದೇವ ಮಹಾದೇವ ಮಹಾದೇವೇತಿ ವಾದಿನೀ ॥೮೩॥

ಉತ್ಫುಲ್ಲಪುಂಡರೀಕಾನಾಂ ಮಾಲಾಭಿಃ ಸಾ ವಿರಾಜಿತಾ ।
ತತ್ತೀರೇ ಸಂತಿ ಬಹವೋ ಮರಾಲಾಃ ಸ್ವಾಂಗನಾಯುತಾಃ ॥೮೪॥

ತೇ ಸರ್ವದಾ ವದಂತ್ಯೇವ ಹರ ಶಂಭೋ ಶಿವೇತ್ಯಪಿ ।
ಮರಾಲನಾರೀಗಾನಾನಿ ಶ್ರಾವ್ಯಾಣಿ ಕಮಲಾನನೇ ॥೮೫॥

---

ಬ್ರಹ್ಮಾಂಡ ಪ್ರಳಯಕಾಲದಲ್ಲಿಯೂ ಸಹ ಆ ವನಕ್ಕೆ (ಪ್ರಳಯ) ನಾಶ ವುಂಟಾಗುವುದಿಲ್ಲ. ಆ ನನ್ನ ಕೈಲಾಸದ ಉದ್ಯಾನವನವು ವಸಂತಾದಿ ಸಕಲ ಋತು ಸಮೂಹದಿಂದ ಯಾವಾಗಲೂ ವ್ಯಾಪ್ತವಾಗಿರುವುದು. ॥೮೧॥

ಆ ವನದಲ್ಲಿ ಬಗೆಬಗೆಯಾದ ಅಪಾರವಾದ ಹಣ್ಣುಗಳು ಪಕ್ವವಾಗಿ ಸುಲಭ ವಾಗಿ ದೊರೆಯುವುವು. ಚೆನ್ನಾಗಿ ಪಕ್ವವಾಗಿರುವ ಆ ಹಣ್ಣುಗಳಿಂದ ಪದೇ ಪದೇ ಅಮೃತಧಾರೆಗಳು ಸುರಿಯುತ್ತಿರುವುವು. ॥೮೨॥

ಶ್ರೇಷ್ಠವೂ ಮತ್ತು ಪಾವನವೂ ಆದ ಗಂಗಾನದಿಯು ಆ ಉದ್ಯಾನದ ಸುತ್ತಲೂ ಹರಿಯುತ್ತಾ "ಮಹಾದೇವ, ಮಹಾದೇವ, ಮಹಾದೇವ" ಎಂಬುದಾಗಿ ಸದಾ ನನ್ನ ನಾಮಸ್ಮರಣೆಯಿಂದಲೇ ಯುಕ್ತವಾಗಿ ಆ ಉದ್ಯಾನಕ್ಕೆ ವಿಶೇಷವಾದ ಕಾಂತಿಯನ್ನುಂಟುಮಾಡುತ್ತಿದೆ. ॥೮೩॥

ಆ ಗಂಗಾನದಿಯು ಅರಳಿದ ಕಮಲಪಂಕ್ತಿಗಳಿಂದ ಶೋಭಿಸುತ್ತಿದೆ. ಆ ನದಿಯ ದಡದಲ್ಲಿ ಅನೇಕ ರಾಜಹಂಸಗಳು ತಮ್ಮ ಹೆಣ್ಣು ಹಂಸಗಳೊಡನೆ ವಿಹರಿ ಸುತ್ತಿರುವುವು. ॥೮೪॥

ಎಲೌ ಕಮಲಮುಖಿಯೇ, ಹೆಣ್ಣು ರಾಜಹಂಸಗಳೆಲ್ಲವೂ, ಇಂಪಾಗಿ ಗಾನಮಾಡುತ್ತಾ ಮಧುರವಾದ ಧ್ವನಿಗಳಿಂದ ಯಾವಾಗಲೂ ಹರ! ಶಂಭೋ! ಶಿವ! ಎಂಬುದಾಗಿ ನನ್ನ ನಾಮವನ್ನೇ ಸ್ಮರಣೆಮಾಡುತ್ತಿರುವುವು. ॥೮೫॥

ತತ್ರ ಗಂತವ್ಯಮಧುನಾ ಡೋಲಾ ತತ್ರಾಸ್ತಿ ಕಾಂಚನೀ ।
ಡೋಲೋತ್ಸವೋಽಪಿ ಕರ್ತವ್ಯಸ್ತತ್ರ ತಾವನ್ಮನೋಹರಃ ॥೮೬॥

ಇತ್ಯುಕ್ತ್ವಾ ಸ ಮಹಾದೇವೋ ಭವಾನೀಕರಸಂಪುಟಂ ।
ಗೃಹೀತ್ವಾ ಗಮನಂ ತತ್ರ ಸಸ್ಮಾರಾಮರಪುಂಗವಃ ॥೮೭॥

ತತಃ ಪ್ರವಿಷ್ಟೋ ಗಿರಿಶೋ ಗಿರಿಜಾಕರಸಂಪುಟಂ ।
ಧೃತ್ವಾ ಕರೇಣ ತ್ವರಯಾ ತದುದ್ಯಾನಂ ಮನೋಹರಂ ॥೮೮॥

ರತ್ನಪ್ರಾಸಾದಮಾರುಹ್ಯ ರತ್ನಸಿಂಹಾಸನೇ ಸ್ಥಿತಃ ।
ಶಿವಯಾ ಪುಷ್ಪಶಯ್ಯಾಯಾಂ ರೇಮೇ ಗಣವಿವರ್ಜಿತಃ ॥೮೯॥

ತತಃ ಪರಂ ಸ ಡೋಲಾಯಾಮಾರುಹ್ಯ ಸ ಶಿವಯಾ ಸಹ ।
ಇಂದುಕಂದುಕಲೀಲಾಭಿಶ್ಚಕಾರ ದಿನಯಾಪನಂ ॥೯೦॥

---

ಈಗ ನಾವು ಅಲ್ಲಿಗೆ ಹೋಗೋಣ, ಅಲ್ಲಿ ಚಿನ್ನದಿಂದ ರಚಿಸಿದ ಉಯ್ಯಾಲೆಯಿರುವುದು. ಮನೋಹರವಾದ ಆ ಉಯ್ಯಾಲೆಯಲ್ಲಿ ಕುಳಿತು ಡೋಲೋತ್ಸವವನ್ನಾಚರಿಸೋಣ. ॥೮೬॥

ಹೀಗೆ ಮಹಾದೇವನು ಪಾರ್ವತಿಗೆ ಹೇಳಿ, ಗಿರಿಜೆಯ ಸಂಪುಟದಂತಿರುವ ಕೈಯನ್ನು ಹಿಡಿದುಕೊಂಡು, ಒಂದುಸಲ ತಾನು ಹೇಳಿದ್ದ ಉದ್ಯಾನಕ್ಕೆ ಹೋಗಬೇಕೆಂದು ಸ್ಮರಿಸಿಕೊಂಡನು. ಆ ಸ್ಮರಣೆಮಾಡಿದ ಕೂಡಲೇ ದೇವತೋತ್ತಮನಾದ ಆ ಮಹಾದೇವನು, ದೇವಿಯ ಕೈಹಿಡಿದುಕೊಂಡಿದ್ದಂತೆಯೇ ಮನೋಹರವಾದ ಆ ಉದ್ಯಾನಕ್ಕೆ ಪ್ರವೇಶಮಾಡಿಯೇ ಬಿಟ್ಟನು. ॥೮೭-೮೮॥

ಆ ಉದ್ಯಾನದಲ್ಲಿದ್ದ ರತ್ನಮಯವಾದ ಪ್ರಾಸಾದವನ್ನೇರಿ ಅಲ್ಲಿ ಸಿದ್ಧವಾಗಿದ್ದ ರತ್ನಖಚಿತವಾದ ಸಿಂಹಾಸನದ ಮೇಲೆ ಸ್ವಲ್ಪ ಹೊತ್ತು ಕುಳಿತುಕೊಂಡು, ತನ್ನ ಗಣಗಳನ್ನೆಲ್ಲಾ ಬೇರೆ ಕಡೆಗೆ ಕಳುಹಿಸಿ, ಆ ಪ್ರಾಸಾದದಲ್ಲಿ ಏರ್ಪಟ್ಟಿದ್ದ ಪುಷ್ಪಮಯವಾದ ಹಾಸಿಗೆಯ ಮೇಲೆ ಗಿರಿಜಾಂಬಿಕೆಯೊಡನೆ ವಿಹರಿಸಿದನು. ॥೮೯॥

ಆಮೇಲೆ ಮಹಾದೇವನು ಸ್ವಲ್ಪಕಾಲ ಉಯ್ಯಾಲೆಯನ್ನೇರಿ ಪಾರ್ವತಿಯೊಡನೆ ವಿಹಾರಮಾಡುತ್ತಲೂ ಚಂದ್ರರೂಪವಾದ ಚಂಡಿನ ಆಟವನ್ನಾಡುತ್ತಲೂ ದಿನವನ್ನೆಲ್ಲಾ ಕಳೆದನು. ॥೯೦॥

ತಸ್ಮಿನ್ನೇವ ದಿನೇ ಜಾತಾಃ ಕೋಟಿಶಃ ಪ್ರಲಯಾ ಅಪಿ ।
ಸರ್ಗಾಶ್ಚ ತಾವತ್ತೇಷಾಂ ಚ ನ ಸಂಖ್ಯಾ ಕಾಪಿ ದೃಶ್ಯತೇ ॥೯೧॥

ಏವಮೇವ ಮಹಾದೇವಃ ಶಿವಯಾ ಸಹ ಸರ್ವದಾ ।
ಕ್ರೀಡಾಂ ಕರೋತಿ ವ್ರೀಡಾಂ ಚ ತ್ಯಕ್ತ್ವಾ ವ್ರೀಡಾಪಿ ತಸ್ಯ ನ ॥೯೨॥

ಚಿದ್ಘನಃ ಸ ಮಹಾದೇವಸ್ತಸ್ಯ ವ್ರೀಡಾ ಕುತೋ ಭವೇತ್ ।
ನ ತಸ್ಯ ಸುರತೇಚ್ಛಾಪಿ ತಸ್ಯ ಜ್ಞಾನಘನಸ್ಯ ಸಃ ॥೯೩॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ವದಂತಿ ತಂ ॥೯೪॥

---

ಗಿರಿಜಾ ಮಹಾದೇವರು ಈ ರೀತಿ ವಿಹಾರಮಾಡುತ್ತಿರುವ ಆ ದಿನದಲ್ಲಿ ಎಷ್ಟೋ ಕೋಟಿ ಪ್ರಳಯಕಾರ್ಯಗಳೂ, ಮತ್ತು ಸೃಷ್ಟಿಕಾರ್ಯಗಳೂ, ನಡೆದುಹೋದವು. ಅವುಗಳ ಸಂಖ್ಯೆಗಳನ್ನು ಇಷ್ಟೇ ಎಂದು ಹೇಳಲು ಯಾರಿಗೂ ಸಾಧ್ಯವಲ್ಲ. ॥೯೧॥

ಹೀಗೆಯೇ ಮಹಾದೇವನು, ಪಾರ್ವತಿಯೊಡನೆ ಯಾವಾಗಲೂ ವಿಹರಿಸುತ್ತಾ ಆನಂದರಸಪರಿಪೂರ್ಣನಾಗಿ, ಸಾಧಾರಣರಾದ ಜನಗಳಿಗಿರುವ ನಾಚಿಕೆಯೆಂಬುದನ್ನೇ ಅರಿಯದಾದನು. ಮಹಾಮಹಿಮನಾದ ಆ ಪರಮೇಶ್ವರನಿಗೆ ಆ ನಾಚಿಕೆಯೆಂಬುದು ಹೇಗೆ ತಾನೇ ಉಂಟಾದೀತು ? ॥೯೨॥

ಘನೀಭೂತವಾದ ಜ್ಞಾನಸ್ವರೂಪನೆನಿಸಿದ ಆ ಮಹಾದೇವನಿಗೆ ಈ ಲೌಕಿಕವಾದ ನಾಚಿಕೆಯೆಂಬುದು ಎಲ್ಲಿಂದ ಬಂದೀತು ? ದಿವ್ಯಜ್ಞಾನಸ್ವರೂಪನಾಗಿ ನಿರಾಕಾರನಾದ ಈ ಭಗವಂತನಿಗೆ ಸುರತಾಭಿಲಾಷೆಯೂ ಇಲ್ಲ. ಆವನು ಯಾವಾಗಲೂ ಜ್ಞಾನಮಯನು, ನಿತ್ಯಾನಂದ ಸ್ವರೂಪನು. ॥೯೩॥

ಮನಸ್ಸಿನಿಂದ ಯಥಾರ್ಥವಸ್ತುವಿಷಯಗಳನ್ನು ಹೇಳುವುದು ಋತವೆನಿಸುವುದು. ಮಾತಿನಿಂದ ಯಾಥಾರ್ಥ್ಯವನ್ನುಚ್ಚರಿಸುವುದು ಸತ್ಯ. ಪರಬ್ರಹ್ಮವಸ್ತುವೆಂಬುದು ಈ ಎರಡು ವಿಧವಾದ ಸತ್ಯಾತ್ಮಕವಾದದ್ದು. ಇದನ್ನೇ ವ್ಯಾವಹಾರಿಕ ಸತ್ಯವೆಂದೂ, ಪಾರಮಾರ್ಥಿಕ ಸತ್ಯವೆಂದೂ ಹೇಳುವರು. ಅಂತಹ ಪರಬ್ರಹ್ಮವಸ್ತುವು ಭಕ್ತಾನುಗ್ರಹಕ್ಕಾಗಿ ಉಮಾಮಹೇಶ್ವರಾತ್ಮಕವಾದ ಪುರುಷರೂಪದಿಂದ ತೋರುತ್ತಿರುವುದು. ಆ ದೇಹದಲ್ಲಿ ಮಹೇಶ್ವರ ಭಾಗವು ಕೃಷ್ಣವರ್ಣದಿಂದಲೂ, ಉಮಾಭಾಗವಾದ ಎಡಭಾಗವು ಪಿಂಗಳವರ್ಣದಿಂದಲೂ ಶೋಭಿಸುತ್ತಿರುವುದು. ಪುರುಷರೂಪಿಯಾದ

ಸತ್ಯಜ್ಞಾನಮನಂತಂ ಚ ತದ್ಬ್ರಹ್ಮ ಪರಮಂ ವಿದುಃ ।
ತತೋ ಭೀತಃ ಸ ವಾತೋಽಪಿ ವಾತಿ ಸೂರ್ಯೋಪ್ಯುದೇತಿ ಸಃ ॥೯೫॥

ಅಗ್ನಿರಿಂದ್ರಶ್ಚ ಭೀತಃ ಸ್ಯಾನ್ಮೃತ್ಯುರ್ಧಾವತಿ ಪಂಚಮಃ ।
ಇಯಮಾನಂದಮೀಮಾಂಸಾ ತತ್ಸ್ವರೂಪಮಗೋಚರಂ ॥೯೬॥

ಯಸ್ಯ ಪ್ರಸಾದಲೇಶೇನ ಸರ್ವೇ ನಾರಾಯಣಾದಯಃ ।
ಸುರಾಃ ಕೃತಾರ್ಥಾಸ್ತಂ ದೇವಂ ಶರಣಂ ಯಾಮಿ ಶಂಕರಂ ॥೯೭॥

---

ಪರಶಿವನು ಯೋಗಬಲದಿಂದ ಸ್ವಕೀಯವಾದ ತೇಜಸ್ಸನ್ನು ಬ್ರಹ್ಮರಂಧ್ರದಲ್ಲಿ ಧರಿಸಿ, ಊರ್ಧ್ವರೇತಸ್ಸು ಎನಿಸಿಕೊಳ್ಳುವನು. ಹಾಗೆಯೇ ನೂರು ಕಣ್ಣುಗಳುಳ್ಳವನಾದ್ದರಿಂದ ಪರಶಿವನನ್ನು ವಿರೂಪಾಕ್ಷನೆಂದೂ, ಜಗತ್ಕಾರಣನಾಗಿ ಸರ್ವಜಗದಾತ್ಮಕನಾದ್ದರಿಂದ ವಿಶ್ವರೂಪಿಯೆಂದೂ ಹೇಳುವರು. ಇಂತಹ ಪರಶಿವನಿಗೆ ನಮಸ್ಕಾರ. ॥೯೪॥

ಸತ್ಯ, ಜ್ಞಾನ, ಏತದ್ರೂಪವಾದ, ಆದ್ಯಂತರಹಿತವಾದ ಪರಾಪರವಸ್ತುವನ್ನೇ ಪರಬ್ರಹ್ಮವಸ್ತುವೆನ್ನುವರು. ಇದರ ಭಯದಿಂದಲೇ ವಾಯುವು ಕಾಲಕಾಲಕ್ಕೆ ಬೀಸುತ್ತಾ ಸಂಚರಿಸುತ್ತಿರುವನು. ಸೂರ್ಯದೇವನು ಕಾಲಕಾಲಕ್ಕೆ ಉದಯಾಸ್ತಗಳಿಂದ ಬೆಳಗುತ್ತಿರುವನು. ॥೯೫॥

ಹಾಗೆಯೇ ಅಗ್ನಿ, ಇಂದ್ರ, ಇವರೂ ಪರಬ್ರಹ್ಮನ ಭಯದಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ನಡೆಸುತ್ತಿರುವರು. ಸೂರ್ಯ, ವಾಯು, ಅಗ್ನಿ, ಇಂದ್ರ ಈ ನಾಲ್ವರಲ್ಲದೆ, ಐದನೆಯದಾದ ಮೃತ್ಯುವೂ ಸಹ ಈ ಪರಬ್ರಹ್ಮನ ಆಜ್ಞೆಯಂತೆಯೇ ಮುಂದುವರಿಯುತ್ತಿರುವುದು. ಮಾನುಷವಾದ ಆನಂದಕ್ಕಿಂತಲೂ ಬೃಹಸ್ಪತ್ಯಾದಿ ಆನಂದಗಳು ದೊಡ್ಡದೆನಿಸಿ, ಈ ಪರಬ್ರಹ್ಮಾನಂದವು ಅತಿ ಶ್ರೇಷ್ಠವಾದ ಆನಂದವೆನಿಸುವುದು. ಇದೇ ಆನಂದಮೀಮಾಂಸೆಯು. ಅಂತೂ ಆನಂದಮಯವಾದ ಪರಶಿವಸ್ವರೂಪವು ಸುಲಭವಾಗಿ ಅರಿಯುವುದಕ್ಕೆ ಸಾಧ್ಯವಿಲ್ಲ. ॥೯೬॥

ನಾರಾಯಣನೇ ಮುಂತಾದ ದೇವತೆಗಳೂ ಸಹ ಯಾವ ಪರಮೇಶ್ವರನ ಅನುಗ್ರಹ ಲೇಶಮಾತ್ರದಿಂದಲೇ ಕೃತಕೃತ್ಯರೆನಿಸಿರುವರೋ ಅಂತಹ ಲೋಕಮಂಗಳಕರನಾದ ಶಂಕರನನ್ನು ನಾನು ಮೊರೆಹೊಗುವೆನು. ॥೯೭॥

ಸಂಹಾರಕಾಲೇ ಸಂಪ್ರಾಪ್ತೇ ಬ್ರಹ್ಮನಾರಾಯಣಾದಿಕಾನ್ ।
ಸಂಹೃತ್ಯ ಲೀಲಾಂ ಕುರುತೇ ಯಃ ಸ ಏವ ಸದಾಶಿವಃ ॥೯೮॥

ಯಸ್ಯ ಪ್ರಸಾದಾದಶಿವಾಪಹಾರೋ
ಯಸ್ಯ ಪ್ರಸಾದಾಜ್ಜನನಾಪಹಾರಃ ।
ಯಸ್ಯ ಪ್ರಸಾದೇನ ಜರಾಪಹಾರಃ
ತಮೇವ ದೇವಂ ಶಿವಮಾಶ್ರಯಾಮಃ ॥೯೯॥

ಶಿವ ಇತ್ಯುಚ್ಚರನ್ನೇವ ಮನುಜಃ ಸ್ಯಾಚ್ಛಿವಾಲಯಃ ।
ತಸ್ಯ ದೇವಸ್ಯ ಮಹಿಮಾ ವೇದಾನಾಮಪ್ಯಗೋಚರಃ ॥೧೦೦॥

ಯಮಾಹುರೀಶಂ ಪರಮಂ ವರೇಣ್ಯಂ
ಸರ್ಗಸ್ಥಿತೀನಾಮಪಿ ಹೇತುಭೂತಂ ।
ತಮೇವ ದೇವೋತ್ತಮಮಿಂದುಖಂಡ
ಶೋಭಾಸಮಾಲಂಕೃತಮಾಶ್ರಯಾಮಃ ॥೧೦೧॥

---

ಜಗತ್ಸಂಹಾರ ಕಾಲವು ಒದಗಿದಾಗ ಆ ಸದಾಶಿವನು ಬ್ರಹ್ಮ, ನಾರಾಯಣ ಮುಂತಾದ ದೇವತೋತ್ತಮರನ್ನೂ ಸಹ ಸಂಹಾರಮಾಡಿ, ತಾನೊಬ್ಬನೇ ಲೀಲೆಯಿಂದ ವಿಹಾರಮಾಡುವನು. ॥೯೮॥

ಯಾವ ಮಹೇಶ್ವರನ ಅನುಗ್ರಹದಿಂದ ಅಮಂಗಳ ಪರಿಹಾರವೂ, ಜನ್ಮ ನಿವೃತ್ತಿಯೂ (ಶಾಶ್ವತವಾದ ಮುಕ್ತಿಯೂ) ಮತ್ತು ಮುಪ್ಪಿಲ್ಲದಿರುವಿಕೆಯೂ ಸಹ ಉಂಟಾಗುವುವೋ ಅಂತಹ ದೇವೋತ್ತಮನಾದ ಪರಶಿವನನ್ನೇ ಆಶ್ರಯಿಸೋಣ. ॥೯೯॥

ಪರಶಿವನ ನಾಮವನ್ನು ಒಂದುಬಾರಿ "ಶಿವ" ಎಂದು ಉಚ್ಚಾರಮಾಡುತ್ತಿದ್ದ ಹಾಗೆಯೇ ಮಾನವನು ಸಕಲ ಮಂಗಳಗಳಿಗೂ ನೆಲೆಯಾಗುವನು. ಮತ್ತು ಪರಶಿವನ ಸಾನ್ನಿಧ್ಯವನ್ನು ಪಡೆಯುವನು. ಮಹಾದೇವನ ಮಹಿಮೆಯು ಇಷ್ಟೇ ಎಂದು ವೇದಗಳಿಗೂ ಸರಿಯಾಗಿ ಗೊತ್ತಿಲ್ಲ. ॥೧೦೦॥

ಯಾವ ಈಶ್ವರನನ್ನು ಪರಮ ಶ್ರೇಷ್ಠನೆಂದೂ, ಸೃಷ್ಟಿ, ಸ್ಥಿತಿ ಮತ್ತು ಸಂಹಾರಕಾರ್ಯಗಳಿಗೂ ಮೂಲಕಾರಣನೆಂದೂ ಹೇಳುವರೋ ಅಂತಹ ದೇವತಾ

ಸಹಸ್ರಜಿಹ್ವೋಽಪಿ ನ ಯಸ್ಯ ತತ್ತ್ವಂ
ಸ್ತೋತುಂ ಸಮರ್ಥಶ್ಚತುರಾನನೋ ವಾ ।
ನಾರಾಯಣೋ ವಾ ತಮುಮಾಸಹಾಯ
ಮಾನಂದಕಂದಂ ಹೃದಿ ಭಾವಯಾಮಃ ॥೧೦೨॥

ತಲ್ಲೀಲಾಸ್ವೇದರಾಶಿಃ ಸುರಸರಿದಚಲಾಧೀಶಕನ್ಯಾ ಯದಂಕೇ
ಯನ್ಮೌಲೌ ಚಂದ್ರರೇಖಾ ವಿಲಸತಿ ಸತತಂ ಯಜ್ಜಟಾಜೂಟಮಾಲಾ ।
ತಾರಾಣಾಮೇವ ಹಾರೋಽಪ್ಯುರಸಿ ನವಲಸದ್ಬಿಲ್ವಮಾಲಾ ವಿಲೋಲಾ
ತತ್ಪಾದಾಂಭೋಜಭೃಂಗೋ ಭವತು ಮಮ ಮನಸ್ತ್ಯಕ್ತಸಂಸಾರಗಂಧಃ
॥೧೦೩॥

---

ಶ್ರೇಷ್ಠನೂ, ಚಂದ್ರಖಂಡಕಾಂತಿಯಿಂದಲಂಕೃತನೂ ಆದ ಮಹಾದೇವನನ್ನೇ ನಾವು ಆಶ್ರಯಿಸೋಣ. ॥೧೦೧॥

ಸಾವಿರ ನಾಲಿಗೆಗಳುಳ್ಳ ಆದಿಶೇಷ, ಚತುರ್ಮುಖಬ್ರಹ್ಮ ಮತ್ತು ನಾರಾಯಣ ಇವರೂ ಯಾವ ಮಹೇಶ್ವರನ ತತ್ತ್ವವನ್ನೂ, ಸಂಪೂರ್ಣ ಮಹಿಮೆಯನ್ನೂ ವರ್ಣಿಸಲು ಸಮರ್ಥಲಾಗಲಾರರೋ, ಅಂತಹ ಆನಂದದ ಮೊಳಕೆಯಂತಿರುವ ಆ ಉಮಾರಮಣನನ್ನು ನಾವು ಮನಸ್ಸಿನಲ್ಲಿ ಧ್ಯಾನಮಾಡುತ್ತೇವೆ. ॥೧೦೨॥

ಮಹೇಶ್ವರನ ಲೀಲಾವಿಹಾರ ಕಾಲದಲ್ಲಿ ಹುಟ್ಟಿದ ಬೆವರಿನ ಸಮೂಹವೇ ದೇವಗಂಗಾನದಿಯು. ಪರ್ವತರಾಜನ ಕುಮಾರಿಯೇ ಆ ಮಹಾದೇವನ ಪತ್ನಿ ಯೆನಿಸಿ ತೊಡೆಯ ಮೇಲೆ ವಿರಾಜಿಸುತ್ತಿರುವಳು. ಚಂದ್ರನ ರೇಖೆಯೂ ಮಾಲಾ ಕಾರವಾದ ಜಡೆಗಳ ಸಮೂಹವೂ ಆ ಸ್ವಾಮಿಯ ತಲೆಯಲ್ಲಿ ಪ್ರಕಾಶಿಸುತ್ತಿರುವುವು. ನಕ್ಷತ್ರಗಳ ಸಮೂಹವೇ ಆ ದೇವನಿಗೆ ಹಾರವಾಗಿ ಏರ್ಪಟ್ಟಿರುವುದು. ಅಲ್ಲದೆ ವಕ್ಷ ಸ್ಥಳದಲ್ಲಿ ಹೊಸದಾದ ಬಿಲ್ವಪತ್ರೆಗಳಿಂದ ರಚಿಸಿದ ಮನೋಹರವಾದ ಹಾರವು ಚಂಚಲವಾಗಿ ತೋರುತ್ತಿರುವುದು. ನನ್ನ ಮನಸ್ಸು ಇಂತಹ ಮಹಾಮಹಿಮನಾದ ಮಹೇಶ್ವರನ ಪಾದಕಮಲದಲ್ಲಿ ದುಂಬಿಯಂತಿರುತ್ತಾ ಈ ಸಂಸಾರವಿಷಯಕವಾದ ಗಂಧವೇ ಇಲ್ಲದೇ ನೆಲಸಲಿ. ॥೧೦೩॥

ಲೋಕೇ ಭಾಗ್ಯಸುಧಾಂಬುರಾಶಿರಹಿತಾಸ್ತೇ ಯೇ ತದಾ ಶಂಕರ
ಧ್ಯಾನಾನಂದವಿಹೀನಹೀನಮನಸಸ್ತೇ ದುರ್ಭಗಾಃ ಸರ್ವದಾ ।
ಕಲ್ಪಾಂತೇಽಪಿ ನ ಮುಕ್ತಿರಿತ್ಯಪಿ ಮಿತಾಃ ಸಂಸಾರಿಣಸ್ತೇ ಸದಾ
ಸರ್ವೇ ನಾರಕಿಣೋಽಪಿ ತತ್ಕುಲಮಪಿ ಸ್ಯಾತ್ಪುಲ್ಕಸಾನಾಂ ಕುಲಂ ॥೧೦೪॥

ಯಸ್ಯಾಂತಃಕರಣಂ ಮಹೇಶ್ವರಪದಾಂಭೋಜಾರ್ಚನೇ ಸಾದರಂ
ತನ್ನಾಮಸ್ಮರಣೇಽಪಿ ತತ್ಸುಖಕಥಾವಾರ್ತಾಸುರಕ್ತಂ ಸದಾ ।
ತಂ ಪ್ರಾಹುರ್ಗತಕಲ್ಮಷಂ ಮುನಿಜನಾಃ ಸರ್ವೇಽಪಿ ತಂ ಕೇವಲಂ
ವಂದ್ಯಂ ಪ್ರಾಹುರಮಂದಪುಣ್ಯವಿಭವಂ ಭಾವಂ ಭವಾಭ್ಯರ್ಚಕಂ ॥೧೦೫॥

ಆಕಲ್ಪಂ ವಿಜಯೀ ಸ ಏವ ಸ ಶುಭಾರಂಭೈಕಭೂರ್ಭಾಸುರಃ
ಸ ಸ್ಯಾದಿಂದುಕಲಾವತಂಸಚರಣಾಂಭೋಜಾರ್ಚಕಾನಾಂ ಪ್ರಿಯಃ ।
ಸಸ್ಯಾದುತ್ತಮಸಂಪದಾಮಪಿ ನಿಧಿಃ ಸ ಸ್ಯಾತ್ಸುರಾಣಾಮಪಿ
ಪ್ರಾಯಃ ಸೇವ್ಯ ಇತಿ ಪ್ರಭೂತವಿಭವೋ ಭಾವೋ ನ ಕಿಂ ದುರ್ಲಭಃ॥೧೦೬॥

---

ಲೋಕದಲ್ಲಿ ಶಂಕರನ ಪೂಜೆ, ಧ್ಯಾನ ಮುಂತಾದವುಗಳನ್ನು ಮಾಡುತ್ತಾ, ಆದರಿಂದುಂಟಾಗುವ ಆನಂದವನ್ನು ಪಡೆಯದ ಮನಸ್ಸುಳ್ಳ ಮಾನವರು ನಿಜವಾಗಿಯೂ ಭಾಗ್ಯವೆಂಬ ಅಮೃತದ ಸಮುದ್ರವನ್ನೇ ಹೊಂದಲಾರರು. ಅವರು ಯಾವಾಗಲೂ ನಿರ್ಭಾಗ್ಯರೆನಿಸುವರು. ಕಲ್ಪದ ಕೊನೆಯಲ್ಲಿ ಸಹ ಅವರಿಗೆ ಮುಕ್ತಿಯುಂಟಾಗಲಾರದು. ಇವರು ಯಾವಾಗಲೂ ಸಂಸಾರಚಕ್ರದಲ್ಲಿಯೇ ಸಿಲುಕಿ, ನರಕವನ್ನೈದುವರು. ಅವರ ವಂಶವೂ ಸಹ ಚಂಡಾಲರ ಕುಲಕ್ಕೆ ಸದೃಶವಾಗುವುದು. ||೧೦೪||

ಯಾವಾಗಲೂ ಆ ಮಹೇಶ್ವರನ ಪಾದಕಮಲವನ್ನು ಆದರದಿಂದ ಪೂಜಿಸುವ ಮತ್ತು ಅವನ ನಾಮಸ್ಮರಣೆಯನ್ನೇ ಅನವರತವೂ ಮಾಡುತ್ತಾ ಆ ಮಹಾದೇವನಲ್ಲೇ ಅನುರಕ್ತನಾಗಿರುವ ಶಿವಪೂಜಕನನ್ನು, ಸಕಲ ಮುನಿಜನರೂ ನಮಸ್ಕಾರಾರ್ಹನೆಂದೂ, ಅಪಾರವಾದ ಪುಣ್ಯ ವೈಭವವುಳ್ಳವನೆಂದೂ ಮತ್ತು ಆ ಆಕಾರವು ಶಿವನ ಅಂಶವೇ ಎಂದೂ ಹೇಳುತ್ತಿರುವರು. ||೧೦೫||

ಆ ಶಿವಪೂಜಕನೇ ಕಲ್ಪಪರ್ಯಂತವೂ ವಿಜಯಶಾಲಿಯೆನಿಸುವನು. ಅವನೇ ತೇಜಸ್ವಿಯು. ಸಕಲ ಶುಭಕಾರ್ಯಗಳ ಆರಂಭಕ್ಕೂ ಅವನೇ ಮೂಲಕಾರಣನಾಗುವನು. ಚಂದ್ರಶಿರೋಭೂಷಣನಾದ ಆ ಪರಮೇಶ್ವರನ ಪೂಜಕರಲ್ಲೆಲ್ಲಾ ಪ್ರೀತಿಪಾತ್ರನೂ

ಸ್ವಪ್ನೇಽಪಿ ಯಸ್ಯ ಶಿವಲಿಂಗವಿಲೋಕನೇಚ್ಛಾ
ಸ್ವಚ್ಛಾ ಭವಿಷ್ಯತಿ ಭವಾರ್ಚನಜಾತಪುಣ್ಯೈಃ ।
ತತ್ಪಾದಪದ್ಮಜರಜೋಮಣಿಮಂಜರೀವ
ಧನ್ಯೋತ್ತಮೋರುಶಿರಸಿ ಸ್ಫುರತೀಹ ಧೀರೇ ॥೧೦೭॥

ಅಜ್ಞಾತ್ವಾಪಿ ಶಿವಪ್ರಸಾದವಿಭವಂ ಯಃ ಶಂಕರಾರಾಧನ
ಧ್ಯಾನಾಲಂಕೃತಚಿತ್ತವೃತ್ತಿರಸಕೃದ್ಯದ್ವಾ ಸಕೃತ್ಸಾದರಂ ।
ತಂ ಮುಕ್ತಂ ಪ್ರವದಂತಿ ಪಾವನಮಿತಿ ಪ್ರಾಹುರ್ಮುನೀಂದ್ರಾಃ ಸುರಾಃ
ತಂ ರತ್ನಂ ಜಗತೀತಲಸ್ಯ ಸತತಂ ವಂದೇ ಮುಹುಃ ಸಾದರಂ ॥೧೦೮॥

---

ಅವನೇ ಆಗುವನು. ಶ್ರೇಷ್ಠವಾದ ಸಂಪತ್ತುಗಳಿಗೆ ಅವನು ನಿಧಿಪ್ರಾಯನಾಗಿರುವನು. ಸಕಲ ದೇವತೆಗಳೂ ಸಾಮಾನ್ಯವಾಗಿ ಇವನನ್ನು ಸೇವಿಸುವರು. ಅಲ್ಲದೇ ಇವನು ಅಪಾರವಾದ ವೈಭವವನ್ನು ಪಡೆಯುವನು. ಆ ಪರಶಿವನ ಪೂಜಾನಿರತರಾದವರಿಗೆ ಇಂತಹ ಭಾಗ್ಯಗಳುಂಟಾಗುವುದು ಏನು ತಾನೇ ಕಷ್ಟ. ॥೧೦೬॥

ಶಿವನನ್ನು ಪೂಜೆಮಾಡುವುದರಿಂದುಂಟಾದ ಪುಣ್ಯದಿಂದ, ಸ್ವಪ್ನದಲ್ಲಿಯಾದರೂ ಶಿವಲಿಂಗವನ್ನು ನೋಡಬೇಕೆಂಬ ಅಪೇಕ್ಷೆಯು ನಿಷ್ಕಲ್ಮಷವಾಗಿ ಉಂಟಾಗುವುದಾದರೆ ಆ ಮಾನವನು ಧನ್ಯೋತ್ತಮನು. ಅವನ ಪಾದಕಮಲ ಸಂಬಂಧಿಯಾದ ಧೂಳುಗಳು ಮಣಿಗಳ ಸಮೂಹದಂತೆ ಧೀರರಾದ ಮಾನವರ ವಿಶಾಲವಾದ ತಲೆಯಲ್ಲಿ ಧರಿಸಲ್ಪಟ್ಟು ಪ್ರಕಾಶಿಸುವುದು. ॥೧೦೭॥

ಶಿವಾನುಗ್ರಹ ಮಹಿಮೆಯನ್ನು ತಾನು ತಿಳಿಯದೇ ಇದ್ದರೂ, ಅನೇಕ ಸಲವಾಗಲೀ, ಒಂದೇಬಾರಿಯಾಗಲೀ ಆ ಶಂಕರನ ಆರಾಧನ ಮತ್ತು ಧ್ಯಾನ ಮುಂತಾದವುಗಳಲ್ಲಿ ಮನಸ್ಸು ಕೊಡುತ್ತಾ, ಆದರಪೂರ್ವಕವಾಗಿ ಆ ಮಹಾದೇವನನ್ನು ಸೇವಿಸುವ ಮಾನವನನ್ನು, ಮುನಿವರ್ಯರೂ ಮತ್ತು ದೇವತೆಗಳೂ ಸಹ ಮುಕ್ತನೆಂದೂ, ಪೂರ್ಣ ಪವಿತ್ರನೆಂದೂ ಹೇಳುತ್ತಿರುವರು. ಆ ಮಹಾನುಭಾವನು ಈ ಪ್ರಪಂಚಕ್ಕೆ ರತ್ನಪ್ರಾಯನಾಗಿರುವನು. ಅಂತಹ ಶಿವಭಕ್ತಾಗ್ರೇಸರನನ್ನು ನಾನು ಆದರದಿಂದ ಪದೇ ಪದೇ ನಮಸ್ಕರಿಸುತ್ತೇನೆ. ॥೧೦೮॥

ಯೋ ಭಕ್ತ್ಯಾ ರಜನೀಮುಖೇಷು ಗಿರಿಶಂ ಸಂಪೂಜ್ಯ ಬಿಲ್ವಾದಿಭಿಃ
ನೈವೇದ್ಯಾದಿಸಮರ್ಪಣೇನ ಚ ಮುಹುರ್ನಾಟ್ಯೈಃ ಪ್ರಣಾಮೈರಪಿ ।
ಸಂತುಷ್ಟಸ್ತ್ರಮುಪಾಸ್ತದುಃಖನಿಕರಂ ಮನ್ಯೇ ಸರೋವಾ ಸರಸ್ತೀರೇ
ಲಿಂಗಮಭಂಗಬಿಲ್ವಕಮಲೈರಾರಾಧ್ಯ ಶಂಗಂ ವ್ರಜೇತ್ ॥೧೦೯॥

ಇತ್ಯಾಕರ್ಣ್ಯ ವಚಸ್ತಸ್ಯ ತಂ ಪ್ರಣಮ್ಯಾಭಿನಂದ್ಯ ಚ ।
ನಿತ್ಯಂ ಶಿವಕಥಾಮೇವಂ ವದೇತ್ಯಾಹ ವಿಚಕ್ಷಣಾ ॥೧೧೦॥

ಸ ಸಂತುಷ್ಟಸ್ತಯಾ ಸಾಕಮುಷಿತ್ವಾ ಶಿವಮಂದಿರೇ ।
ಕೃತ್ವಾ ಜಾಗರಣಂ ಪಶ್ಚಾದುದಯಾಚಲಮಾಪ ಸಃ ॥೧೧೧॥

---

ಪ್ರದೋಷಕಾಲಗಳಲ್ಲಿ ಮಹೇಶ್ವರನನ್ನು ಬಿಲ್ವಪತ್ರೆ, ಹೂ ಮುಂತಾದುವುಗಳಿಂದ ಭಕ್ತಿಪುರಸ್ಸರವಾಗಿ ಪೂಜಿಸಿ, ನೈವೇದ್ಯಾದಿಗಳನ್ನು ಸಮರ್ಪಣಮಾಡಿ, ಅನಂತರ ಮನೋಹರವಾದ ನಾಟ್ಯಗಳನ್ನು ಪ್ರದರ್ಶನಮಾಡುತ್ತಾ, ನಾನಾರೀತಿಯ ಉಪಚಾರದಿಂದಲೂ, ನಮಸ್ಕಾರಗಳಿಂದಲೂ ಪರಮೇಶ್ವರನನ್ನು ಸಂತೋಷಪಡಿಸಿ, ತಾನೂ ಸಂತುಷ್ಟನಾಗಿರುವ ಮಾನವನಿಗೆ ಯಾವ ದುಃಖಸಮೂಹಗಳೂ ಇಲ್ಲವೆಂದು ನಾನು ತಿಳಿದಿರುವೆನು. ಇದೇ ರೀತಿ ಸರೋವರಗಳ ದಡಗಳಲ್ಲಿಯೂ ಆ ಶಿವಲಿಂಗವನ್ನು ಭಕ್ತಿಯಿಂದ ಬಿಲ್ವಾದಿಸಾಧನಪುರಸ್ಸರವಾಗಿ ಪೂಜಿಸುವ ಭಕ್ತನು ಕೊನೆಗೆ ಶಿವಸಾಯುಜ್ಯವನ್ನೈದುವನು. ॥೧೦೯॥

ಸೂರ್ಯನ ಈ ಮಾತುಗಳನ್ನು ಕೇಳಿ ಆ ರಾಣಿಯು ಅವನಿಗೆ ನಮಸ್ಕಾರಮಾಡಿ, ಅಭಿನಂದನೆಮಾಡಿದಳು. ವಿಚಕ್ಷಣೆಯಾದ ಆ ಮಹಾರಾಣಿಯು ನಿತ್ಯವೂ ನನಗೆ ಈ ಶಿವಕಥೆಗಳನ್ನು ಹೇಳಬೇಕೆಂದು ಆ ಸೂರ್ಯನನ್ನು ಪ್ರಾರ್ಥಿಸಿಕೊಂಡಳು. ॥೧೧೦॥

ಆ ಸೂರ್ಯನೂ ಸಂತುಷ್ಟನಾಗಿ ರಾಣಿಯೊಡನೆ ಅದೇ ಶಿವಮಂದಿರದಲ್ಲಿ ವಾಸಮಾಡುತ್ತಾ, ರಾತ್ರಿಯೆಲ್ಲಾ ಜಾಗರಣೆಮಾಡಿ ತಾನು ಉದಯಾಚಲಪರ್ವತಕ್ಕೆ ತೆರಳಿದನು. ॥೧೧೧॥

ಸಾಪಿ ರಾಜ್ಞೀ ಪ್ರಗೇ ಶಕ್ತ್ಯಾ ಸ್ನಾತ್ವಾ ರೇವಾಜಲೇ ತತಃ ।
ಪರಿಧಾಯ ದುಕೂಲಾನಿ ಭಸ್ಮರುದ್ರಾಕ್ಷಭೂಷಣಾ ॥೧೧೨॥

ಶಿವಾಚಾರರತಾಪಾರಸಖೀಜನಸಮಾವೃತಾ ।
ವಿವೇಶ ಮಂದಿರಂ ಶಂಭೋಃ ಶಿವಾರಾಧನತತ್ಪರಾ ॥೧೧೩॥

ರತ್ನಕುಂಭಸಮಾನೀತರೇವಾನೀರೈರ್ಮನೋಹರೈಃ ।
ಪಂಚಾಮೃತೈಶ್ಚಾಭಿಷಿಚ್ಯ ಪೂಜಯಾಮಾಸ ಶಂಕರಂ ॥೧೧೪॥

ತತಃ ಪರಮೃತುಂ ಪ್ರಾಪ ಸಾ ರಾಜ್ಞೀ ಸ್ವಗೃಹಂ ಗತಾ ।
ತತ್ರ ಧ್ಯಾನರತಾ ಸಾಪಿ ಮಧ್ಯಾಹ್ನೇ ಶಿವಪೂಜನಂ ॥೧೧೫॥

ನ ಜಾತಮಿತಿ ಚಿಂತಾರ್ತಾ ಪೂಜಯಾಮಾಸ ಚೇತಸಾ ।
ಮಾನಸಂ ಪೂಜನಂ ಕೃತ್ವಾ ಮಹಾದೇವಸ್ಯ ಸಾದರಂ ॥೧೧೬॥

---

ಆ ರಾಣಿಯೂ ಸಹ ಪ್ರಾತಃಕಾಲದಲ್ಲಿ ರೇವಾ ನದಿಯ ನೀರಿನಲ್ಲಿ ತನ್ನ ಶಕ್ತ್ಯನುಸಾರವಾಗಿ ಸ್ನಾನಮಾಡಿ, ರೇಷ್ಮೆಯ ವಸ್ತ್ರಗಳನ್ನುಟ್ಟು ಭಸ್ಮ ಮತ್ತು ರುದ್ರಾಕ್ಷಮಾಲೆ ಇವುಗಳನ್ನು ಧರಿಸಿಕೊಂಡಳು. ॥೧೧೨॥

ಆ ಮೇಲೆ ಶಿವನ ಪೂಜಾಧ್ಯಾನಾದ್ಯುಪಚಾರಗಳಲ್ಲಿ ತತ್ಪರವಾಗಿರುವ ಅನೇಕ ಮಂದಿ ತನ್ನ ಗೆಳತಿಯರೊಡಗೂಡಿ, ಆ ಶಿವಾಲಯಕ್ಕೆ ಪ್ರವೇಶಿಸಿ ಅಲ್ಲಿ ಆ ಪರಮೇಶ್ವರನ ಪೂಜೆಯಲ್ಲಿ ತತ್ಪರಳಾದಳು. ॥೧೧೩॥

ಮನೋಹರವಾದ ಮತ್ತು ರತ್ನ ಖಚಿತವಾಗಿರುವ ಕುಂಭಗಳಿಂದ ತಂದಿರುವ ಪರಿಶುದ್ಧವಾದ ರೇವಾನದಿಯ ನೀರಿನಿಂದ ಆ ಪರಶಿವನ ಲಿಂಗಕ್ಕೆ ಪಂಚಾಮೃತ ಪೂರ್ವಕವಾಗಿ (ಹಾಲು, ಮೊಸರು, ತುಪ್ಪ, ಸಕ್ಕರೆ ಮತ್ತು ಜೇನು ಇವುಗಳಿಂದ) ಅಭಿಷೇಕಮಾಡಿ, ಆ ಶಂಕರನನ್ನು ಭಕ್ತಿಯಿಂದ ಪೂಜೆಮಾಡಿದಳು. ॥೧೧೪॥

ಹೀಗೆ ಪೂಜೆಮಾಡಿದ ಮೇಲೆ ಆ ರಾಣಿಯು ಋತುಮತಿಯಾದಳು (ಬಹಿಷ್ಠೆಯಾದಳು.) ಒಡನೆಯೇ ಆ ವೇಳೆಯಲ್ಲಿ ತಾನು ಅಶುಚಿಯಾದ್ದರಿಂದ ಆ ಶಿವಾಲಯದಲ್ಲಿರುವುದು ಅನುಚಿತವೆಂದರಿತು ತನ್ನ ಮನೆಗೆ ಹಿಂತಿರುಗಿ ಅಲ್ಲಿಯೇ ತನ್ನ ಮನಸ್ಸಿನಲ್ಲಿ ಪರಶಿವನನ್ನು ಧ್ಯಾನಿಸುತ್ತಾ, ಅಯ್ಯೋ ಈ ದಿನ ಮಧ್ಯಾಹ್ನವೇಳೆಯಲ್ಲಿ ಪರಶಿವನನ್ನು ಪೂಜಿಸುವ ಯೋಗವು ನನಗೆ ತಪ್ಪಿಹೋಯಿತಲ್ಲಾ ಎಂದು

ನಿನಾಯ ಕಾಲಂ ದುಃಖೇನ ರಾಜ್ಞೀ ದಿನಚತುಷ್ಟಯಂ।
ತತಃ ಸ್ನಾತ್ವಾ ಮಹಾದೇವಮುಪಚಾರೈರನೇಕಧಾ ॥೧೧೭॥

ಸಾ ಚತುರ್ಗುಣಿತೈಶ್ಚಕ್ರೇ ಶ್ರೀಮಹಾದೇವಪೂಜನಂ।
ತತಃ ಸಾಯಂ ರವಿಂ ದೃಷ್ಟ್ವಾ ಶಿವಪೂಜೋತ್ತರಂ ನೃಪ ॥೧೧೮॥

ಸಾ ರಾಜ್ಞೀ ತಮುವಾಚಾಪಿ ಧೃತಭೂತಿವಿಭೂಷಣಾ ॥೧೧೯॥

॥ ರಾಜ್ಞ್ಯುವಾಚ ॥

ರವೇಗುರುರ್ಮೇ ಜನಕಸ್ತ್ವಮೇವಾಸಿ ಶಿವಾರ್ಚಕಃ।
ಶಿವಪೂಜಾಪರಿತ್ಯಾಗೇ ಕಾ ಗತಿಸ್ಸ್ಯಾದ್ವದಾಧುನಾ ॥೧೨೦॥

॥ ಭಾನುರುವಾಚ ॥

ತ್ಯಕ್ತ್ವಾ ಮಹಾದೇವಪದಾಂಬುಜಾರ್ಚಾಂ
ಕೋ ವಾ ಸುಖಂ ಪ್ರಾಪ್ತುಮಪಿ ಪ್ರವೃತ್ತಃ।

---

ಬಹಳ ಚಿಂತಾಕ್ರಾಂತಳಾಗಿ, ಮನಸ್ಸಿನಲ್ಲಿಯೇ ನೊಂದುಕೊಂಡು, ಆದರದಿಂದ ಮಾನಸಿಕವಾದ ಪೂಜೆಯನ್ನು ಆ ಮಹಾದೇವನಿಗೆ ಸಲ್ಲಿಸಿದಳು. ಹೀಗೆಯೇ ಬಹಳ ಚಿಂತೆಯಿಂದ ನಾಲ್ಕು ದಿವಸಗಳು ಹಾಗೂ ಹೀಗೂ ಕಳೆದಳು.॥೧೧೫-೧೧೬॥

ಅನಂತರ ಐದನೆಯ ದಿವಸ ಶುದ್ಧಸ್ನಾನಮಾಡಿ ಆ ಮೇಲೆ ಮಹಾದೇವನನ್ನು ಹಿಂದಕ್ಕಿಂತಲೂ ನಾಲ್ಕರಷ್ಟು ಅತಿಶಯವಾದ ಉಪಚಾರಗಳಿಂದ ನಾನಾವಿಧವಾಗಿ ಪೂಜೆಮಾಡಿದಳು. ಹಾಗೆಯೇ ಸಾಯಂಕಾಲದಲ್ಲಿ ತನ್ನ ಶಿವಪೂಜೆಯು ಮುಗಿದಮೇಲೆ ಸೂರ್ಯನನ್ನು ಕಂಡಳು. ಮತ್ತು ಭಸ್ಮ ಮತ್ತು ಆಭರಣ ಇವುಗಳನ್ನು ಧರಿಸಿರುವ ಆ ರಾಣಿಯು ಸೂರ್ಯದೇವನನ್ನು ಕುರಿತು ಹೀಗೆ ಪ್ರಾರ್ಥಿಸಿದಳು. ॥೧೧೭-೧೧೮-೧೧೯॥

ಓ ಸೂರ್ಯದೇವನೇ, ಶಿವಾರ್ಚಕನಾದ ನೀನೇ ನನಗೆ ಗುರು, ತಂದೆಯೂ ನೀನೇ ಆಗಿರುವೆ. ದೇವ, ಶಿವಪೂಜೆ ಮಾಡುವುದನ್ನು ಬಿಟ್ಟರೆ ಯಾವಗತಿಯುಂಟಾಗುವುದೆಂಬುದನ್ನು ಈಗ ನನಗೆ ತಿಳಿಸುವನಾಗೆಂದು ಆ ರಾಣಿಯು ಸೂರ್ಯನನ್ನು ಕೇಳಿಕೊಂಡಳು. ॥೧೨೦॥

ಮಹಾದೇವನ ಅಡಿದಾವರೆಗಳ ಪೂಜೆಯನ್ನು ಬಿಟ್ಟು ಯಾರಿಗೆ ತಾನೇ ಸುಖವನ್ನು ಹೊಂದಲು ಸಾಧ್ಯವಾದೀತು? ಸಾಯಲು ಸಿದ್ಧವಾಗಿರುವವನು ತನ್ನ

ಸಂಜೀವನೀಂ ಚೇನ್ಮರಣೋನ್ಮುಖೇನ
ತ್ಯಕ್ತ್ವಾ ಕಥಂ ವಾ ವದ ಜೀವನಂ ಸ್ಯಾತ್ ॥೧೨೧॥

ಶಂಕರಾರಾಧನಂ ತ್ಯಕ್ತ್ವಾ ನ ಮೂಢೋಽಪ್ಯಧಿತಿಷ್ಠತಿ ।
ಶಂಕರಾರಾಧನಾಭಾವೇ ಜೀವನಂ ಮರಣೋಪಮಂ ॥೧೨೨॥

ವರಂ ಮರಣಮನ್ವಹಂ ವರಮಘೌಘಕೋಟ್ಯಾರ್ಜನಂ
ವರಂ ಚ ವಿಷಭೋಜನಂ ವರಮಪಾರಗೋಹಿಂಸನಂ ।
ವರಂ ದ್ವಿಜವಧೋಽಪಿ ವಾ ನ ವರಮೀಶಲಿಂಗಾರ್ಚನ
ವ್ಯವಾಯ ಇತಿ ಮೇ ಮತಿಃ ಕಿಮಿತಿ ತಸ್ಯ ವಾ ಜೀವನಂ ॥೧೨೩॥

---

ಆ ದುಃಸ್ಥಿತಿಯಲ್ಲಿ ಸಂಜೀವನೀಬಳ್ಳಿಯನ್ನು ಬಿಟ್ಟು ಬದುಕಲು ಸಾಧ್ಯವೇ! ನೀನೇ ಹೇಳು? (ಅಂದರೆ ಮರಣೋನ್ಮುಖನಾಗಿರುವವನನ್ನು ಸಂಜೀವಿನೀ ಲತೆಯು ಹೇಗೆ ಗುಣಪಡಿಸಿ ಬದುಕಿಸಿ ಸುಖ ಹೊಂದುವಂತೆ ಮಾಡುವುದೋ, ಹಾಗೆಯೇ ನಾನಾವಿಧವಾದ ಸಂಸಾರಸಂಬಂಧಿಯಾದ ಅಥವಾ ಇತರ ದುಃಖಗಳಿಂದ ಪರಿತಪಿಸು ತ್ತಿರುವ ಮಾನವ ಸಮುದಾಯಕ್ಕೆ ಅವರ ದುಃಖಗಳನ್ನು ಹೋಗಲಾಡಿಸಿ ಬೇಕಾದ ಸುಖಸಂಪತ್ತುಗಳನ್ನು ದೊರಕಿಸಿಕೊಡುವುದರಲ್ಲಿ ಈ ಮಹಾದೇವನ ಪಾದಕಮಲ ಸೇವೆಯು ಸಂಜೀವಿನೀಲತೆಗೆ ಸಮಾನವಾಗಿರುವುದೆಂದು ಭಾವವು.) ॥೧೨೧॥

ಯಾವ ಮೂಢನಾದರೂ ಶಿವನ ಪೂಜೆಯನ್ನು ಬಿಟ್ಟಿರಲಾರನು. ಶಂಕರನ ಪೂಜೆಯಿಲ್ಲದೇ ಬದುಕುವವನ ಜೀವನವು ಮರಣಕ್ಕೆ ಸಮಾನವಾದುದು. ॥೧೨೨॥

ಶ್ರೇಷ್ಠವಾದ ಪರಶಿವಲಿಂಗವನ್ನು ಪೂಜಿಸುವುದನ್ನು ಬಿಟ್ಟು ಬದುಕುವುದ ಕ್ಕಿಂತ ಪ್ರತಿನಿತ್ಯವೂ ಮರಣಹೊಂದುವದೂ, ಅಪಾರವಾದ ಕೋಟ್ಯಂತರ ಮಹಾ ಪಾಪಗಳನ್ನು ಗಳಿಸುವುದು, ವಿಷವನ್ನೇ ತಿನ್ನುವುದು, ಅಪಾರವಾದ ಗೋಹಿಂಸೆ ಮಾಡುವುದು, ಅಥವಾ ಬ್ರಾಹ್ಮಣವಧೆಮಾಡುವುದು ಇವುಗಳೆಲ್ಲಾ ಶ್ರೇಷ್ಠವೆನಿಸು ವುವು. (ಅಂದರೆ ಇವೆಲ್ಲವೂ ಯದ್ಯಪಿ ಅನುಷ್ಠೇಯಗಳಲ್ಲವಾದರೂ ಆ ಶಿವಪೂಜಾ ಧ್ಯಾನಾದಿಗಳನ್ನು ಬಿಡುವುದರಿಂದ ಈ ಪಾಪಕಾರ್ಯಾಚರಣೆಯಿಂದ ಲಭಿಸುವ ಪಾಪ ರಾಶಿಯು ಸಂಘಟಿಸುವುದೆಂದು ತಾತ್ಪರ್ಯ) ॥೧೨೩॥

ನ ಮಾತೃಗಮನೇನ ವಾ ಭವತಿ ತಾದೃಶಂ ಪಾತಕಂ
ಸುರಾದಿಮಧುಸೇವನಾದಪಿ ತಥಾವಿಧಂ ಪಾತಕಂ ।
ದ್ವಿಜೋತ್ತಮವಧೇನ ವಾ ತವ ತಥಾವಿಧಂ ಪಾತಕಂ
ನ ಯಾದೃಶಮುಮಾಪತಿಪ್ರಿಯಸಮರ್ಚನತ್ಯಾಗತಃ ॥೧೨೪॥

ಅನಾಯಾಸೇನ ಸಿದ್ಧ್ಯಂತಿ ಸರ್ವೇಽರ್ಧನರ್ಮಾಃ ಶಿವಾರ್ಚನಾತ್ ।
ತತ್ಪರಿತ್ಯಾಗತಃ ಪಾಪಾನ್ಯನಾಯಾಸಾರ್ಜಿತಾನ್ಯಪಿ ॥೩೨೫॥
ಶಿವಪೂಜನಸಾಮರ್ಥ್ಯಂ ನ ಜಾನಂತ್ಯೇವ ದುರ್ಜನಾಃ ।
ಅತ ಏವ ನ ಕುರ್ವಂತು ಶಿವಲಿಂಗೇ ಶಿವಾರ್ಚನಂ ॥೧೨೬॥

ಪಾಪಾನ್ಯಪಾರಾಣಿ ಲಯಂ ಪ್ರಯಾಂತಿ
ಶಿವಾರ್ಚನೇನೈವ ಶಿವಾರ್ಚಕಾಣಾಂ ।
ನ ತದ್ವಿನಾಶಾರ್ಥಮತಿಪ್ರಯತ್ನಃ
ಸ್ಮೃತೇಽಪಿ ಶಂಗೇ ಸ ಮಹಾಘಭಂಗಃ ॥೧೨೭॥

---

ಪ್ರೀತಿಪಾತ್ರನಾದ ಉಮಾರಮಣನ ಪೂಜಾತ್ಯಾಗದಿಂದ ಲಭಿಸುವ ಪಾತಕವು ಮಾತೃಗಮನದಿಂದಲಾಗಲಿ, ಹೆಂಡ, ಸುರಾ ಮುಂತಾದವುಗಳ ಪಾನದಿಂದಲಾಗಲೀ, ಮತ್ತು ಬ್ರಾಹ್ಮಣೋತ್ತಮನ ವಧೆಯಿಂದಲಾಗಲೀ ಎಂದಿಗೂ ಉಂಟಾಗಲಾರದು. ಅಂದರೆ ಮಾತೃಗಮನಾದಿಗಳಿಂದ ಬರುವ ಪಾಪಕ್ಕಿಂತಲೂ ಶಿವಪೂಜಾಪರಿತ್ಯಾಗ ದಿಂದುಂಟಾಗುವ ಪಾತಕವು ಮಿಗಿಲೆನಿಸುವುದು. ॥೧೨೪॥

ಶಿವಪೂಜೆಯಿಂದ ಸಕಲ ಧರ್ಮಗಳೂ ಅನಾಯಾಸವಾಗಿ ಸಿದ್ಧಿಸುವುವು. ಅದೇ ರೀತಿ ಶಿವಪೂಜಾಪರಿತ್ಯಾಗದಿಂದ ಅಪಾರವಾದ ಪಾಪಗಳೂ ಅನಾಯಾಸವಾಗಿಯೇ ಲಭಿಸುವುವು. ॥೧೨೫॥

ದುಷ್ಟರಿಗೆ ಆ ಶಿವಪೂಜಾಮಹಿಮೆಯು ತಿಳಿಯದೇ ಇರುವುದರಿಂದ ಅವರು ಆ ಶಿವಪೂಜೆಯನ್ನೂ, ಲಿಂಗಾರ್ಚನೆಯನ್ನೂ ಮಾಡುವುದಿಲ್ಲ. ॥೧೨೬॥

ಶಿವಪೂಜಕರಿಗೆ ಆ ಪರಶಿವನ ಪೂಜೆಯಿಂದ ಅಪಾರವಾದ ಮಹಾಪಾಪಗಳೂ ನಾಶಹೊಂದುವುವು. ಅಂತಹ ಪಾಪಗಳನ್ನು ನಾಶಮಾಡಿಕೊಳ್ಳುವುದಕ್ಕೋಸ್ಕರ ವಿಶೇಷವಾದ ಪ್ರಯತ್ನವನ್ನೇನೂ ಮಾಡಬೇಕಾಗಿಲ್ಲ. ಆ ಮಹಾದೇವನ ಸ್ಮರಣೆ ಮಾತ್ರದಿಂದಲೇ ಮಹಾಪಾತಕಗಳೂ ನಾಶವಾಗುವುವು. ॥೧೨೭॥

ನ ಕಲ್ಪಕೋಟ್ಯರ್ಜಿತಪಾತಕೇಭ್ಯೋ
ಬಿಭೇತಿ ಭಾವೋ ಭವಪೂಜಕಶ್ಚೇತ್ ।
ಸಂಸಾರದುಃಖಾನಿ ಹರತ್ಯವಶ್ಯಂ
ಹರಃ ಸ್ಮೃತೋಽಥ ಸಮರ್ಚಿತೋ ವಾ ॥೧೨೮॥

ಪಾಪಾಪಾರತರೇಃ ಪವಿಃ ಖಲು ಮಹಾದೇವಾರ್ಚನಂ ತದ್ವತಃ
ಸಂಸಾರಾಂಬುಧಿಬಾಡಬೋಽಪಿ ತದಿತಿ ಜ್ಞಾತ್ವಾ ಶಿವಾರಾಧನಂ ।
ಕುರ್ವಂತ್ಯುತ್ತಮವೃತ್ತಯಃ ಶಿವಪದಾಂಭೋಜಾರ್ಚನಾತ್ತದ್ವ್ರತಂ
ತತ್ತ್ಯಾಗೇ ಪತಿತೋ ಭವತ್ಯನುದಿನಂ ತಸ್ಮಾತ್ತದರ್ಚಾ ವರಾ ॥೧೨೯॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ತಸ್ಯ ಸಂಶ್ರವಣಾತ್ಸದ್ಯೋ ಮುಚ್ಯತೇ ಪಾಪಬಂಧನಾತ್ ॥೧೩೦॥

---

ಶಿವಪೂಜಕನು ಭವಸಂಜ್ಞಕನಾದ ಆ ಪರಮೇಶ್ವರನ ಸೇವೆಯಿಂದ, ಕೋಟ್ಯಂತರ ಕಲ್ಪಗಳಿಂದಲೂ ಸಂಪಾದನೆಮಾಡಿದ ಮಹಾಪಾತಕಗಳಿಗೆ ಸ್ವಲ್ಪವೂ ಹೆದರಲಾರನು. ಆ ಪರಮೇಶ್ವರನನ್ನು ಸ್ಮರಣೆಮಾಡಿದರೂ, ಅಥವಾ ಪೂಜಿಸಿದರೂ ಈ ಸಂಸಾರವಿಷಯಕವಾದ ದುಃಖಗಳೂ ನಾಶವಾಗುವುವು. ॥೧೨೮॥

ಮಹಾದೇವನ ಪೂಜೆಯು ಅಪಾರವಾದ ಪಾಪಗಳೆಂಬ ಪರ್ವತಗಳಿಗೆ ವಜ್ರಾಯುಧರೂಪವಾಗಿರುವುದೆಂದೂ, ಸಂಸಾರವೆಂಬ ಸಮುದ್ರಕ್ಕೆ ಬಡಬಾಗ್ನಿಯಂತಿರುವುದೆಂದೂ ತಿಳಿದು, ಶಿವಭಕ್ತಿಯುಳ್ಳ ಮಾನವರು ಆ ಶಿವನ ಅಡಿದಾವರೆಗಳ ಪೂಜಾರೂಪವಾದ ವ್ರತವನ್ನು ತಪ್ಪದೇ ಆಚರಿಸುವರು. ಆ ಶಿವಪೂಜೆಯನ್ನು ಬಿಟ್ಟರೆ ಮಾನವನು ಪತಿತನಾಗುವನು. ಆದರಿಂದ ಪ್ರತಿದಿನವೂ ಅವನನ್ನು ಪೂಜೆ ಮಾಡುವುದೇ ಅತ್ಯಂತ ಶ್ರೇಷ್ಠವಾದುದು. ॥೧೨೯॥

ಇದೇ ವಿಷಯದಲ್ಲಿ ಈ ಮುಂದೆ ಹೇಳುವ ಒಂದು ಪ್ರಾಚೀನ ಇತಿಹಾಸ ವಿರುವುದು. ಆ ಇತಿಹಾಸವನ್ನು ಕೇಳುವುದರಿಂದ ಕೂಡಲೇ ಸಕಲ ಪಾಪಗಳೂ ತೊಲಗುವುವು. ॥೧೩೦॥

ಪುರಾ ಹಿಮಗಿರೇರೇವ ಕಂಧರೇ ರುಚಿರೇ ಪರೇ ।
ಚಚಾರ ಚಾರಣಃ ಕೋಽಪಿ ಸರ್ವದಾ ಯುವತೀಯುತಃ ॥೧೩೧॥

ತೇನ ನಾರಾಧಿತಂ ಲಿಂಗಮನ್ಯಾರಾಧಿತಮೇವ ವಾ ।
ನ ದೃಷ್ಟಮತಿಸಂಶೋಭೈರ್ದೀಪೈಃ ಕಾಂತಿವಿರಾಜಿತಂ ॥೧೩೨॥

ನ ಬಿಲ್ವತರುಮೂಲಾನಿ ಶಿವಲಿಂಗಾನ್ವಿತಾನ್ಯಪಿ ।
ನಾರಾಧಿತಾಃ ಶಾಂಕರಾಶ್ಚ ನ ತೈಃ ಸಖ್ಯಂ ಸಮಾರ್ಜಿತಂ ॥೧೩೩॥

ಸುರತಾಚಾರನಿರತಸ್ತದಾಚಾರಾದರೈಃ ಸಹ ।
ರತಿಂ ಚಕಾರ ದುಷ್ಟಾತ್ಮಾ ಶಿವಪೂಜನವರ್ಜಿತಃ ॥೧೩೪॥

ಅಹೋರಾತ್ರಂ ಸ ತರುಣೀಂ ವಿಹಾಯ ನ ತು ತಿಷ್ಠತಿ ।
ತೇನೈವ ಕಸ್ಮಿಂಶ್ಚಿದ್ವಿಪಿನೇ ದೃಷ್ಟೋ ಬಿಲ್ವತರುರ್ಮಹಾನ್ ॥೧೩೫॥

---

ಹಿಂದೆ ಮನೋಹರವಾದ ಹಿಮವತ್ಪರ್ವತದ ಒಂದು ಶಿಖರಪ್ರದೇಶದಲ್ಲಿ ಒಬ್ಬ ಚಾರಣನು ಯಾವಾಗಲೂ ತನ್ನ ಯುವತಿಯಾದ ಪತ್ನಿಯೊಡನೆ ವಿಹರಿಸುತ್ತಿದ್ದನು. ॥೧೩೧॥

ಆ ಚಾರಣನು ಒಂದು ದಿನವೂ ಶಿವಲಿಂಗವನ್ನು ಪೂಜೆಮಾಡಿರಲಿಲ್ಲ ಮತ್ತು ಮಾಡುತ್ತಲೂ ಇರಲಿಲ್ಲ. ಅಥವಾ ಮತ್ತೊಬ್ಬರು ಪೂಜೆಮಾಡಿರುವ, ಧೂಪದೀಪಾದಿಗಳಿಂದ ಕಾಂತಿಯುಕ್ತವಾಗಿ ವಿರಾಜಿಸುತ್ತಿರುವ ಶಿವಲಿಂಗವನ್ನು ಸಹ ದರ್ಶನ ಮಾಡಿರಲಿಲ್ಲ. ॥೧೩೨॥

ಶಿವಲಿಂಗಗಳಿಂದ ಯುಕ್ತವಾದ ಬಿಲ್ವವೃಕ್ಷಗಳ ಬುಡದಲ್ಲಿ ಕುಳಿತು ಶಂಕರನನ್ನು ಪೂಜಿಸಲಿಲ್ಲ. ಅಥವಾ ಹಾಗೆ ಪೂಜೆಮಾಡುವ ಶಿವಭಕ್ತರ ಸ್ನೇಹವನ್ನಾದರೂ ತಾನು ಸಂಪಾದನೆಮಾಡಿರಲಿಲ್ಲ. ॥೧೩೩॥

ಯಾವಾಗಲೂ ಸ್ತ್ರೀಸೌಖ್ಯರೂಪವಾದ ಆಚಾರದಲ್ಲಿಯೇ ನಿರತನಾಗಿ, ಅದರಲ್ಲಿಯೇ ಆದರದಿಂದ ಆ ದುಷ್ಟನಾದ ಚಾರಣನು ಶಿವಪೂಜೆಯನ್ನೇ ಮಾಡದೆ ಸ್ತ್ರೀಸಂಭೋಗ, ಸ್ತ್ರೀರತಿ ಇವುಗಳಲ್ಲೇ ಲೋಲನಾಗಿದ್ದನು. ॥೧೩೪॥

ಹೀಗೆ ಹಗಲೂ ರಾತ್ರಿಯೂ ಎಡಬಿಡದೆ ಆ ಚಾರಣನು ಆ ತರುಣಿಯನ್ನು ಬಿಡದೇ ಆ ಪ್ರದೇಶದಲ್ಲಿಯೇ ಸಂಚರಿಸುತ್ತಿದ್ದನು. ಹೀಗಿರುವಾಗ ಅವನು ಆ ಕಾಡಿನಲ್ಲಿ ಒಂದು ದೊಡ್ಡ ಬಿಲ್ವವೃಕ್ಷವನ್ನು ನೋಡಿದನು. ॥೧೩೫॥

ಸಚ್ಛಾಯಂ ತರುಸಂಛನ್ನಂ ಸ ಬಿಲ್ವತರುಮಾಶ್ರಿತಃ ।
ತಯಾ ಸಹ ಸ್ಥಿತಸ್ತತ್ರ ತರುಣ್ಯಾ ರಜನೀಮುಖೇ ॥೧೩೬॥

ತದಾನೀಮಾಗತಃ ಕಶ್ಚಿಚ್ಛಾಂಭವಃ ಶಿವಪೂಜಕಃ ।
ತಂ ದುರಾತ್ಮಾನಮಾಲೋಕ್ಯ ವಿಸ್ಮಿತೋ ಮೌನಮಾಶ್ರಿತಃ ॥೧೩೭॥

ಅಯಂ ಪ್ರದೋಷಕಾಲೋಽತ್ರ ತರುಣೀರತಿಲಾಲಸಃ ।
ಬಿಲ್ವಮೂಲಂ ಸಮಾಶ್ರಿತ್ಯ ತಿಷ್ಠತ್ಯಘಕುಲಾರ್ಜಕಃ ॥೧೩೮॥

ದೃಷ್ಟ್ವಾಪಿ ಮಾಮಯಂ ಲಜ್ಜಾಂ ನ ಪ್ರಾಪ್ತೋ ವಿರತೋಽಪಿ ನ ।
ಸುರತಾನುರತೋ ಭೂಯೋ ಭೂಯೋಽಪಿ ಮದನಾತುರಃ ॥೧೩೯॥

ಮಯಾದ್ಯ ದುರದೃಷ್ಟೇನ ದೃಷ್ಟೋಽಯಂ ಜಾರಿಣೀರತಃ ।
ಅತಃ ಪರಂ ಕ್ವ ಗಂತವ್ಯಂ ವನೇ ಬಿಲ್ವೋಽಪ್ಯಯಂ ಮಹಾನ್ ॥೧೪೦॥

---

ಒಳ್ಳೆಯ ನೆಳಲು ಮತ್ತು ಸೊಂಪಾದ ವೃಕ್ಷಪಂಕ್ತಿಗಳು ಇವುಗಳಿಂದ ಯುಕ್ತವಾಗಿರುವ ಆ ಬಿಲ್ವವೃಕ್ಷದ ಬುಡದಲ್ಲಿಯೇ ಆ ಜಾರಣನು ತನ್ನ ಯುವತಿಯೊಡನೆ ಪ್ರದೋಷವೇಳೆಯಲ್ಲಿ ತಂಗಿದನು. ॥೧೩೬॥

ಆ ಪ್ರದೋಷವೇಳೆಯಲ್ಲಿಯೇ ಒಬ್ಬ ಶಿವಪೂಜಾಸಕ್ತನಾದ ಶಂಭುಭಕ್ತನು ಅಲ್ಲಿಗೆ ಬಂದು ಆ ದುಷ್ಟನನ್ನು ನೋಡಿ ಆಶ್ಚರ್ಯಯುಕ್ತನಾಗಿ ಮೌನ ತಾಳಿದನು. ॥೧೩೭॥

ಇದು ಒಳ್ಳೆಯ ಪ್ರದೋಷಕಾಲವಾಗಿರುವುದು. ಇಂತಹ ಪವಿತ್ರವಾದ ವೇಳೆಯಲ್ಲಿ ಪಾಪಸಮೂಹವನ್ನು ಸಂಪಾದನೆ ಮಾಡಲು ತೊಡಗಿರುವ ಈ ಮೂರ್ಖನು ಈ ಬಿಲ್ವವೃಕ್ಷದ ಬುಡದಲ್ಲಿ ತರುಣಿಯೊಡನೆ ಸ್ವಲ್ಪವೂ ಚಿಂತೆಯೇ ಇಲ್ಲದೇ ರತಿಕ್ರೀಡೆಯನ್ನೆಸಗುತ್ತಿರುವನಲ್ಲಾ! ॥೧೩೮॥

ನನ್ನನ್ನು ನೋಡಿದರೂ ಇವನಿಗೆ ಇನ್ನೂ ನಾಚಿಗೆಯೇ ಉಂಟಾಗಲಿಲ್ಲವಲ್ಲ. ಅಲ್ಲದೇ ಇನ್ನೂ ಸುಮ್ಮನಾಗದೆ ಮದನಾತುರನಾದ ಈ ಮೂರ್ಖನು ಪುನಃ ಪುನಃ ಆ ಸುರತಕ್ರೀಡೆಯಲ್ಲಿಯೇ ವಿಶೇಷವಾಗಿ ಆಸಕ್ತನಾಗುತ್ತಿರುವನು. ॥೧೩೯॥

ನನ್ನ ದುರದೃಷ್ಟವಶದಿಂದ ವ್ಯಭಿಚಾರಿಣೀ ಸ್ತ್ರೀಯಲ್ಲಿ ಅನುರಕ್ತನಾದ ಈ ದುಷ್ಟನು ಗೋಚರನಾದನು. ಇನ್ನು ಮುಂದೆ ನಾನು ಎಲ್ಲಿ ಹೋಗಲಿ? ಈ ಕಾಡಿನಲ್ಲಾದರೋ ಇದೇ ದೊಡ್ಡ ಬಿಲ್ವವೃಕ್ಷವಾಗಿರುವುದು. ॥೧೪೦॥

ತನ್ಮೂಲೇ ಲಿಂಗಮುತ್ತುಂಗಂ ಶಾಂಗಂ ತಿಷ್ಠತಿ ಶೋಭನಂ ।
ತಿಷ್ಠಂತಿ ಬಿಲ್ವಪತ್ರಾಣಿ ಕರಪ್ರಾಪ್ಯಾನಿ ಕೋಟಿಶಃ ॥೧೪೧॥

ಇದಂ ಗಂಗಾಜಲಂ ರಮ್ಯಮಭಿಷೇಕಾರ್ಹಮುದ್ಧೃತಂ ।
ಗಂಗಾತೀರೇ ಲಿಂಗಪೂಜಾ ಶಂಗಪ್ರಿಯತರಾ ಖಲು ॥೧೪೨॥

ಗಂಗಾತೀರತರುಸ್ಸೋಽಯಂ ಗಂಗಾಪತನಶೀತಲಃ ।
ಅತ ಏವ ನ ತಾಂತಾನಿ ತತ್ಪತ್ರಾಣ್ಯಪಿ ಸರ್ವಥಾ ॥೧೪೩॥

ಏತೈರಾರಾಧಿತೇ ಲಿಂಗೇ ಶಂಗೋ ಮಂಗಲದೋ ಭವೇತ್ ।
ಅದೃಷ್ಟಂ ಪ್ರತಿಬದ್ಧಂ ಮೇ ಕಿಮೇವಂ ರಜನೀಮುಖೇ ॥೧೪೪॥

---

ಈ ಬಿಲ್ವವೃಕ್ಷದ ಬುಡದಲ್ಲಿ ಉನ್ನತವೂ ಮಂಗಳಪ್ರದವೂ ಆದ ಶಿವಲಿಂಗ ವಿರುವುದು. ಈ ವೃಕ್ಷದಲ್ಲಿರುವ ಬಿಲ್ವದಳಗಳೋ ಕೋಟ್ಯಂತರ ಸಂಖ್ಯೆಯಲ್ಲಿದ್ದು ಕೈಗೇ ಸಿಕ್ಕುವಂತಿರುವುವು. ॥೧೪೧॥

ಮನೋಹರವಾದ ಈ ಗಂಗಾಜಲವಾದರೂ ಆ ಪರಶಿವನ ಅಭಿಷೇಕಕ್ಕೆ ಉಪ ಯೋಗಿಸಲು ಯೋಗ್ಯವಾಗಿರುವುದು. ಗಂಗಾನದಿಯ ದಡದಲ್ಲಿ ಶಿವಲಿಂಗಪೂಜೆ ಮಾಡಿದರೆ ಪರಮೇಶ್ವರನಿಗೆ ಬಹು ಪ್ರೀತಿಯುಂಟಾಗುವುದೆಂದು ಹೇಳುವರು. ॥೧೪೨॥

ಗಂಗಾನದಿಯ ದಡದಲ್ಲಿರುವ ಈ ಬಿಲ್ವಪತ್ರೆಯ ಮರವು ಈ ನದಿಯ ಕಡೆಗೆ ಬಾಗಿ ನದಿಯ ನೀರಿನಿಂದ ತುಂಬಾ ಶೀತಲವಾಗಿದೆ. ಆದ್ದರಿಂದಲೇ ಆ ಬಿಲ್ವಪತ್ರೆಯ ಮರದ ಯಾವ ಪತ್ರೆಯೂ ಬಾಡಿಲ್ಲ. ॥೧೪೩॥

ಇಂತಹ ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಪೂಜೆಮಾಡಿದರೆ ಸುಖಕರನಾದ (ಶಂಗ) ಆ ಮಹೇಶ್ವರನು ಸನ್ಮಂಗಲವನ್ನುಂಟುಮಾಡುವನು. ಇಂತಹ ಪ್ರದೋಷ ಸಮಯದಲ್ಲಿ ನನ್ನ ದುರದೃಷ್ಟದಿಂದ ಈ ರೀತಿ ಪೂಜೆಗೆ ತೊಂದರೆಯಾಯಿತಲ್ಲಾ ! ॥೧೪೪॥

ಪ್ರಾಯಃ ಪಾಪಂ ಕೃತಂ ಪೂರ್ವಂ ತೇನ ಲಿಂಗಾರ್ಚನೋದ್ಯಮೇ ।
ವೃತೇಽಪಿ ಪ್ರತಿಬಂಧೋಽಯಂ ಕಥಂ ವಾ ಸಮುಪಸ್ಥಿತಃ ॥೧೪೫॥

ಶ್ರೇಯಸಾಂ ಪ್ರತಿಬಂಧೋಽಪಿ ಭೂಯಾನೇವಮುಪಸ್ಥಿತಃ ।
ಶಿವಪೂಜನಲಾಭೋಽಯಂ ಸುಲಭಃ ಕಿಂ ಭವಿಷ್ಯತಿ ॥೧೪೬॥

ಭಾಗ್ಯಾನ್ಯಭ್ಯುದಯೋದ್ಯುಕ್ತಾನ್ಯಪಾರಾಣಿ ಭವಂತಿ ಚೇತ್ ।
ಭವತ್ಯೇವ ನ ಸಂದೇಹೋ ನಿಷ್ಪ್ರತ್ಯೂಹಂ ಶಿವಾರ್ಚನಂ ॥೧೪೭॥

ಧಿಗಿದಂ ಬ್ರಹ್ಮಲಿಖಿತಂ ಫಾಲೇ ಧಿಗಿದಮೀದೃಶಂ ।
ಅಸ್ಮಿನ್ಕಾಲೇ ಯತೋ ನಾಭೂಚ್ಛಂಗಲಿಂಗಸಮರ್ಚನಂ ॥೧೪೮॥

ತದಾ ಸಂಸಾರಬಂಧೋಽಪಿ ವಿಚ್ಛಿನ್ನಃ ಸ್ಯಾದಸಂಶಯಂ ॥೧೪೯॥

---

ಪ್ರಾಯಶಃ ನಾನು ಹಿಂದಿನ ಜನ್ಮದಲ್ಲಿ ಬಹುಪಾಪಮಾಡಿದ್ದೆನೆಂದು ತೋರುವುದು. ಆದರಿಂದಲೇ ಈ ರೀತಿಯಾಗಿ ಶಿವಲಿಂಗಪೂಜಾರೂಪವಾದ ಉದ್ಯೋಗದಲ್ಲಿ ಪ್ರತಿಬಂಧಕವುಂಟಾಗಿರುವುದು. ॥೧೪೫॥

ಶ್ರೇಯಸ್ಕರವಾದ ಕಾರ್ಯಗಳಿಗೆ ಈ ರೀತಿ ಅನೇಕ ಪ್ರತಿಬಂಧಕಗಳೊದಗುವುದು ಸಾಮಾನ್ಯವಾದ ಪದ್ಧತಿ. ಎಲ್ಲರಿಗೂ ಆ ಶಿವಪೂಜೆಮಾಡುವ ಸನ್ನಿವೇಶವು ಸುಲಭವಾಗಿ ಹೇಗೆ ತಾನೇ ಉಂಟಾದೀತು? ॥೧೪೬॥

ಒಂದುವೇಳೆ ಹಿಂದೆ ನಾನು ಮಾಡಿದ ಕರ್ಮವಿಶೇಷಗಳಿಂದ ಅಭ್ಯುದಯಕಾರಕವಾದ ಅಪಾರ ಭಾಗ್ಯಸಂಪತ್ತಿದ್ದದ್ದೇ ಆದರೆ, ಯಾವ ಸಂದೇಹವೂ ಇಲ್ಲದೇ ಈ ಶಿಷಪೂಜೆಯ ವಿಷಯದಲ್ಲಿ ವಿಘ್ನಗಳುಂಟಾಗುತ್ತಿರಲಿಲ್ಲ. ॥೧೪೭॥

ಇಂತಹ ಪ್ರದೋಷಸಮಯದಲ್ಲಿಯೂ ಶಿವಲಿಂಗಪೂಜಾಧಿಕಾರವು ನಿರ್ವಿಘ್ನವಾಗಿ ಒದಗಲಿಲ್ಲವಲ್ಲ. ನಾನೆಂತಹ ನಿರ್ಭಾಗ್ಯನು. ಅಯ್ಯೋ! ಆ ಬ್ರಹ್ಮನು ನನ್ನ ಹಣೆಯಲ್ಲಿ ಈ ರೀತಿಯಾಗಿ ಫಲಾನುಭವ ಮಾಡು ಎಂದು ಬರೆದಿದ್ದನೋ ಏನೋ! ಇದಕ್ಕೆ ಧಿಕ್ಕಾರವಿರಲಿ. ॥೧೪೮॥

ಒಂದುವೇಳೆ ಈ ರೀತಿಯಾದ ವಿಘ್ನವೊದಗದೇ ಹೋಗಿ, ಶಿವಪೂಜೆಯನ್ನು ಈ ಪ್ರದೋಷಕಾಲದಲ್ಲಿ ನಾನು ಈ ಬಿಲ್ವದಳಗಳಿಂದ ನಡೆಸಿದ್ದರೆ, ನಿಜವಾಗಿಯೂ ನನಗೆ ಸಂಸಾರರೂಪವಾದ ಬಂಧನವೇ ತೊಲಗಿಹೋಗುತ್ತಿತ್ತು. ॥೧೪೯॥

ಕ್ವ ತಾದೃಶಂ ಭಾಗ್ಯಮಭಾಗ್ಯಯೋಗೇ
ಸಾಯಂ ಶಿವಾರಾಧನಸಾಧನೇಷು ।
ಸತ್ಸ್ವೇವ ಲಿಂಗಾರ್ಚನಮುದ್ಯತಾವನ್ನ
ಜಾತಮೇತತ್ಪ್ರತಿಬಂಧಕೇನ ॥೧೫೦॥

ಅಹೋ ಕಥಂ ವಾ ಪ್ರತಿಬಂಧನಾಶೋ
ನ ಜಾಯತೇ ಜಾತು ಕೃತಂ ನ ಪುಣ್ಯಂ ।
ವಿನಾತ್ರ ತೇನಾಸ್ಯ ಕುತೋಽಧುನಾ ಸ್ಯಾ
ತ್ಸಾಯಂ ಶಿವಾರಾಧನವೃದ್ಧಿಸಿದ್ಧಿಃ ॥೧೫೧॥

ಯೇಷಾಂ ವಿನಷ್ಟಾನಿ ನ ಪಾತಕಾನಿ
ಕೃತಾನಿ ಜನ್ಮಾಂತರಸಾಧನಾನಿ ।
ತೇಷಾಂ ನ ಸಾಯಂ ಶಿವಪೂಜನೇ
ಚ್ಛಾ ಜಾತಾಪಿ ಸಾ ಸ್ಯಾತ್ಪ್ರತಿಬಂಧರುದ್ಧಾ ॥೧೫೨॥

---

ಈ ದೌರ್ಭಾಗ್ಯವು ನಮ್ಮ ಹಣೆಯಲ್ಲಿ ಬರೆದಿರುವಾಗ ಅಂತಹ ಶಿವಪೂಜಾ ಭಾಗ್ಯವು ನಮಗೆ ಹೇಗೆ ಲಭಿಸಬೇಕು? ನನ್ನ ಪೂರ್ವಾರ್ಜಿತಪಾಪಕರ್ಮಗಳ ಪ್ರತಿಬಂಧಕದಿಂದ ಈ ಸಾಯಂಕಾಲದಲ್ಲಿ ಶಿವಪೂಜಾಸಾಮಗ್ರಿಗಳೆಲ್ಲಾ ಸಿದ್ಧವಾಗಿದ್ದರೂ ಆ ಪರಶಿವನ ಪೂಜೆಯು ನಡೆಯಲಿಲ್ಲ. ॥೧೫೦॥

ನಾನು ಪುಣ್ಯವನ್ನು ಗಳಿಸಿದೇ ಹೋದುದರಿಂದ, ಈಗ ಹೇಗೆತಾನೇ ಆ ಶಿವ ಪೂಜಾಪ್ರತಿಬಂಧಕವು ನಾಶವಾದೀತು? ಆ ಪ್ರತಿಬಂಧಕವು ನಾಶವಾಗದೇ ಈಗ ಪ್ರದೋಷಕಾಲದಲ್ಲಿ ಈ ಶಿವಪೂಜಾಭಿವೃದ್ಧಿಯೂ ಶಿವಪೂಜಾಸಿದ್ಧಿಯೂ ಹೇಗೆತಾನೇ ಸಿದ್ಧಿಸೀತು? ॥೧೫೧॥

ತಮ್ಮ ಪಾಪಗಳು ನಾಶವಾಗದೇ ಪುನರ್ಜನ್ಮ ಪ್ರಾಪ್ತಿರೂಪವಾದ ಸಾಧನಗಳನ್ನೇ ಹೊಂದಿರುವ ಮಾನವರಿಗೆ ಇಂತಹ ಪ್ರದೋಷವೇಳೆಗಳಲ್ಲಿ ಆ ಪರಶಿವನ ಪೂಜೆಯಲ್ಲಿ ಇಚ್ಛೆಯೇ ಉಂಟಾಗುವುದಿಲ್ಲ. ಒಂದುವೇಳೆ ಹಾಗೆ ಉಂಟಾದರೂ ಅದಕ್ಕೆ ಅನೇಕ ಪ್ರತಿಬಂಧಕಗಳುಂಟಾಗಿ ನಿಂತುಹೋಗುವುದು. ॥೧೫೨॥

ಅಸಾರಸಂಸಾರವಿಹಾರರಕ್ತಾಃ
ಕುರ್ವಂತಿ ನಾರೀಕುಶರೀರಯೋಗಂ ।
ತೇಷಾಂ ನ ತಾವದ್ಗಿರಿಶಾರ್ಚನೇಚ್ಛಾ
ತೇ ದುರ್ಭಗಾ ಏವ ಯತಃ ಸ್ವಭಾವೈಃ ॥೧೫೩॥

ಜ್ಞಾತ್ವಾಪಿ ಸಂಸಾರವಿಷಂ ಪಿಬಂತೀ
ಪುನಃ ಪುನರ್ಜನ್ಮಜರಾದಿರೂಪಂ ।
ನ ತದ್ವಿನಾಶಾಯ ಸುಧಾಂ ಪಿಬಂತೀ
ಮಹೇಶಲಿಂಗಾರ್ಚನಲಕ್ಷಣಾಂ ತಾಂ ॥೧೫೪॥

ಕಥಂ ನಿಧಾನಂ ಸುಲಭಂ ಮಹೇಶ
ಪೂಜಾಸ್ವರೂಪಂ ನಿಧಿರಂಜನೇನ ।
ವಿನಾ ನ ಲಭ್ಯಂ ಖಲು ಪಾಪನಾಶ
ಸ್ತತ್ರಾಂಜನಂ ಕೇವಲಮಿತ್ಯವೈಮಿ ॥೧೫೫॥

---

ಸಾರರಹಿತವಾದ ಈ ಸಂಸಾರ ಸಾಗರದಲ್ಲಿ ಮಗ್ನರಾಗಿ ಯಾವಾಗಲೂ ವಿಹಾರನಿರತರಾದ ಮಾನವರೂ ಸ್ತ್ರೀಸಂಬಂಧವಾದ ಕುತ್ಸಿತಶರೀರ ಸಂಬಂಧವನ್ನಪೇಕ್ಷಿಸುವರೇ ಹೊರತು, ನಿರ್ಭಾಗ್ಯಶಾಲಿಗಳಾದ ಅವರಿಗೆ ಈ ಶಿವಪೂಜಾ, ಧ್ಯಾನ ಮುಂತಾದವುಗಳಲ್ಲಿ ಸ್ವಲ್ಪವೂ ಅಪೇಕ್ಷೆಯೇ ಉಂಟಾಗುವುದಿಲ್ಲ. ಅವರು ಸ್ವಭಾವವಾಗಿಯೇ ಭಾಗ್ಯರಹಿತರು. ॥೧೫೩॥

ಪುನಃ ಪುನಃ ಜನನಮರಣರೂಪವಾದ ಈ ಸಂಸಾರವೆಂಬುದು ವಿಷಪ್ರಾಯವೆಂಬುದನ್ನರಿತೂ ಜನತೆಯು ಆ ಸಂಸಾರವೆಂಬ ವಿಷವನ್ನೇ ಪಾನಮಾಡುವರು. ಆ ಸಂಸಾರವೆಂಬ ವಿಷವನ್ನು ಹೋಗಲಾಡಿಸುವುದಕ್ಕೋಸ್ಕರ, ಮಹೇಶ್ವರನ ಲಿಂಗಪೂಜಾಲಕ್ಷಣವನ್ನೇ ಕೊನೆಯಾಗಿ ಉಳ್ಳ ಅಮೃತವನ್ನು ಎಂದಿಗೂ ಪಾನ ಮಾಡಲಪೇಕ್ಷಿಸುವುದಿಲ್ಲ. ॥೧೫೪॥

ಅಂಜನವಿಲ್ಲದೇ (ನಿಧಿಯನ್ನು ತೋರಿಸುವ ಒಂದು ರಸವಿಶೇಷ) ನಿಧಿಯು ದೊರೆಯುವುದು ದುರ್ಲಭವಾದುದರಿಂದ ಮಹೇಶ್ವರನ ಪೂಜಾರೂಪವಾದ ನಿಧಿಯೂ ಪಾಪರಾಹಿತ್ಯವೆಂಬ ಅಂಜನ ಸಹಾಯವಿಲ್ಲದೇ ಹೇಗೆ ತಾನೇ ದೊರಕೀತು? ಈ

ಪಾಪರಾಶಿರಧುನಾನುಮಿತೋಽಪಿ
ವಿಶ್ವನಾಥಜನಿತಪ್ರತಿಬಂಧಾತ್ ।
ಕಿಂ ವಿಧೇಯಮಧುನಾ ಮಮ ಸಾಯಂ
ಶಂಗಲಿಂಗಮಪಿ ನೇಕ್ಷಿತಮೇವ ॥೧೫೬॥

ಯದಿ ಲಿಂಗವಿಲೋಕನಾದ್ಗತಂ ಸ್ಯಾ
ದಿದಮಾಯುಃ ಕ್ಷಣಮೇವ ವಾ ತದಾ ಮೇ ।
ಸಫಲಾ ಜನಿರಪ್ಯುಮಾಸಹಾಯ
ಸ್ಮರಣಂ ದುರ್ಲಭಮೇವ ದೇಹಿನಾಂ ತು ॥೧೫೭॥

ಕಿಂ ದೇಹೇನ ಕಿಮುತ್ತಮೈಶ್ಚ ನಯನೈಃ ಫುಲ್ಲಾರವಿಂದಪ್ರಭೈಃ
ಕಿಂ ಹಸ್ತೈರಪಿ ಪದ್ಮಪತ್ರಸದೃಶೈಃ ಕಿಂ ಜಿಹ್ವಯಾ ವಾ ತಯಾ ।
ಯೇನೇಶೋ ನ ನತೋ ನ ಯೈರಪಿ ಮುಹುರ್ದೃಷ್ಟೋಽಪಿ ನಾರಾಧಿತೋ
ಬಿಲ್ವೈಃ ಸಂಸ್ತುತ ಏವ ವಾ ಗಿರಿಸುತಾಕಾಂತಃ ಕೃತಾಂತಾಂತಕಃ ॥೧೫೮॥

---

ಮಹಾದೇವನ ಪೂಜಾರೂಪವಾದ ನಿಧಿಯನ್ನು ಹೊಂದಲು ಪಾಪನಾಶರೂಪ ವಾದುದೇ ಅಂಜನವಾಗಿರುವುದೆಂದು ನಾನು ತಿಳಿಯುವೆನು. ॥೧೫೫॥

ಈಗ ವಿಶ್ವನಾಥನ ಪೂಜೆಗೆ ಒದಗಿದ ಪ್ರತಿಬಂಧಕದಿಂದ ನನ್ನ ಹಿಂದಿನ ಪಾಪರಾಶಿಗಳು ನನಗೆ ಊಹೆಯಿಂದ ತಿಳಿದುಬಂದರೂ ಈಗ ನಾನೇನು ಮಾಡಲಿ; ಈ ಸಾಯಂಕಾಲದಲ್ಲಿ ನನಗೆ ಆ ಸುಖಪ್ರದವಾದ ಶಿವನ ಲಿಂಗವೂ ಗೋಚರವಾಗಲಿಲ್ಲವಲ್ಲಾ! ॥೧೫೬॥

ಈ ಶಿವಲಿಂಗವನ್ನು ದರ್ಶನಮಾಡಿದ ಮರುಕ್ಷಣದಲ್ಲಿಯೇ ನನ್ನ ಪ್ರಾಣವು ಹೋಗಿದ್ದರೆ, ಆಗ ನನ್ನ ಈ ಜನ್ಮಕ್ಕೆ ಸಾರ್ಥಕವಾಗುತ್ತಿತ್ತು. ಮತ್ತೆ ಜನ್ಮವೂ ದೊರಕುತ್ತಿರಲಿಲ್ಲ. ಸಾಮಾನ್ಯವಾಗಿ ಪ್ರಾಣಿಗಳಿಗೆ ಉಮಾರಮಣನ ಸ್ಮರಣೆಯು ದುರ್ಲಭವೆಂದೇ ಹೇಳಬೇಕು. ॥೧೫೭॥

ಪರಮೇಶ್ವರನನ್ನು ನಮಸ್ಕರಿಸದೇ ಇರುವ ಉತ್ತಮವಾದ ದೇಹವೂ, ಆ ಪರಮೇಶ್ವರನನ್ನು ದರ್ಶನಮಾಡದೇ ಇರುವ ಅರಳಿದ ಕಮಲದಂತೆ ಕಾಂತಿಯುಳ್ಳ ಶ್ರೇಷ್ಠವಾದ ಕಣ್ಣುಗಳೂ, ಪರಮೇಶ್ವರನನ್ನು ಬಿಲ್ವದಳಗಳಿಂದ ಪೂಜಿಸದೆ ಇರುವ, ಕಮಲಪತ್ರಗಳಿಗೆ ಸಮಾನವಾದ ಕೈಗಳೂ, ಕಾಲಾಂತಕನಾದ ಆ

ಭಕ್ತ್ಯಾ ಯೋ ನ ಕೃತಾಂತಕಾಂತಕಶಿವಧ್ಯಾನಾಧಿರೂಢೋ ದೃಢಂ
ತಂ ತಾವತ್ಪುರುಷಾಧಮಂ ವಿದುರಧಃ ಪಾತಾಯ ತಜ್ಜೀವನಂ ।
ತಂ ದೃಷ್ಟ್ವಾ ಯಮಕಿಂಕರಾಃ ಸ್ಫುಟತರಂ ಕೃತ್ವೋಪಹಾಸಾಯನಂ
ನೇಯಃ ಕಿಂ ಯಮಮಂದಿರಾಯ ಪ್ರುತಮಿತ್ಯುಚ್ಚೈರ್ವದಂತ್ಯೇವ ತೇ ॥೧೫೯॥

ಯಮದೂತರಿಪುಃ ಪರಂ ನರೋಽಯಂ
ಗಿರಿಶಾನರ್ಚಕ ಏವ ತನ್ನಯಂತಿ ।
ಯಮಮಂದಿರಮಾಶು ಶೂಲಘಾತೈ
ರ್ನಿಹತಂ ವೃಶ್ಚಿಕಕೋಟಿಕೂಟಲಗ್ನಂ ॥೧೬೦॥

ಯಮಕಿಂಕರಧೀರಧೀವರಾಣಾಂ
ಬಡಿಶೇ ತಾವದಶೈವಮತ್ಸ್ಯಜಾಲಂ ।

---

ಗಿರಿಜಾರಮಣನನ್ನು ಸ್ತೋತ್ರಮಾಡದೇ ಇರುವ ಪಾಪಿ ನಾಲಿಗೆ ಇವುಗಳಿದ್ದರೂ ಏನುತಾನೇ ಪ್ರಯೋಜನ ? ॥೧೫೮॥

ಯಮನನ್ನು ನಿಗ್ರಹಿಸಿದ ಆ ಪರಶಿವನನ್ನು ದೃಢಮನಸ್ಸಿನಿಂದ ಭಕ್ತಿಪುರಸ್ಸರವಾಗಿ ಧ್ಯಾನಮಾಡದವನನ್ನು ಪುರುಷಾಧಮನೆನ್ನುವರು. ಅವನ ಬಾಳು ಕೇವಲ ಅಧೋಗತಿಯನ್ನೈದುವುದು. ಕೊನೆಗಾಲದಲ್ಲಿ ಇವನನ್ನೊಯ್ಯಲು ಬಂದ ಯಮಭಟರೂ ಸಹ ಇವನನ್ನು ನೋಡಿ, ಹಾಸ್ಯಕ್ಕೆ ಗುರಿಮಾಡಿ, ಯಮಲೋಕಕ್ಕೆ ಕರೆದುಕೊಂಡು ಹೋಗುವುದೇ ತಮ್ಮ ಮುಂದಿನ ಕಾರ್ಯವೆಂದು ಗಟ್ಟಿಯಾದ ಧ್ವನಿಯಿಂದ ನಗುತ್ತಾ ಎಳೆದೊಯ್ಯುವರು. ॥೧೫೯॥

ಯಾವಾಗಲೂ ಹಿಮಾಲಯಪರ್ವತದಲ್ಲಿಯೇ (ಕೈಲಾಸಗಿರಿಯಲ್ಲಿಯೇ) ನೆಲಸಿರುವ ಮಹಾದೇವನನ್ನು ಪೂಜಿಸದೇ ಇರುವ ಈ ಮಾನವನು ಯಮದೂತರುಗಳಿಗೂ ಪರಮಶತ್ರುಪ್ರಾಯನು. ಆದ್ದರಿಂದ ಅವರೂ ಇವನನ್ನು ಶೂಲಗಳಿಂದ ಹೊಡೆಯುತ್ತಲೂ ತಿವಿಯುತ್ತಲೂ ಯಮಲೋಕಕ್ಕೆ ಕೂಡಲೇ ಕರೆದುಕೊಂಡು ಹೋಗಿ, ಅಲ್ಲಿ ಅನೇಕ ಕೋಟಿ ಗುಂಪುಗುಂಪಾದ ಚೇಳುಗಳ ಸಮೂಹದಿಂದ ಕಚ್ಚಿಸುತ್ತಾ ಚೆನ್ನಾಗಿ ಹಿಂಸೆ ಕೊಡುವರು. ॥೧೬೦॥

ಧೀರರಾದ ಯಮಭಟರೆಂಬ ಬೆಸ್ತರ ಮೀನಿನ ಬಲೆಯಲ್ಲಿ ಶಿವಾರ್ಚನೆ ಮಾಡದೇ ಇರುವ ಮಾನವರೆಂಬ ಮೀನುಗಳ ಸಮೂಹವು ಬೀಳುವುದೆಂದರೆ

ಪತತೀವ ಕಿಮದ್ಭುತಂ ತದೀಯಂ
ವಿಫಲಂ ಜೀವನಮೇವ ತಾದೃಶಂ ಹಿ ॥೧೬೧॥

ವನೇ ವನೇನಾಪಿ ನ ಫಾಲಲೋಚನಂ
ಬಿಲ್ವೀದಲೈರ್ವಾ ಕುಸುಮೈರ್ನವೈರ್ವಾ ।
ಕಿಮರ್ಚಯಂತೀತಿ ಭಟಾ ವದಂತೋ
ಹಸಂತಿ ಕಾಲಸ್ಯ ವಿಶೇಷಕಾಲೇ ॥೧೬೨॥

ಜಲಂ ಪ್ರಕ್ಷಿಪಂತೋಽಪಿ ಬಿಲ್ವೀದಲಂ ವಾ
ಪ್ರಸೂನಂ ನವಂ ವಾ ಫಲಂ ವಾ ಮಹೇಶೇ ।
ತರಂತ್ಯೇವ ಸಂಸಾರಪಾಪಾಹಿನಕ್ರ
ಪ್ರಬದ್ಧಾಂಬುರಾಶಿಂ ಸ್ಮರಂತೋಽಪಿ ಕಾಶೀಂ ॥೧೬೩॥

ಅಪಾರೋರುಪಾಪಾಟವೀಪಾವಕಾನಾಂ
ಶಿವಾರಾಧನಾನಾಂ ಫಲಂ ತಾವದೇಕಂ ।

---

ಆದರಲ್ಲಾಶ್ಚರ್ಯವೇನು ? ಶಿವಪೂಜಕನಲ್ಲದವನ ಜೀವನವೇ ಅಂತಹದು. ಕೇವಲ ವ್ಯರ್ಥವಾದುದು. ॥೧೬೧॥

ಕಾಡಿನಲ್ಲಿದ್ದರೂ ವಿಶೇಷಸಮಯಗಳಲ್ಲಿ ಶುಭ್ರವಾದ ನೀರಿನಿಂದ ಫಾಲ ಲೋಚನನಿಗೆ (ಹಣೆಯಲ್ಲಿ ಕಣ್ಣುಳ್ಳ ಶಿವನಿಗೆ) ಅಭಿಷೇಕಮಾಡಿ, ಎಳೆಯದಾದ ಬಿಲ್ವದಳಗಳು ಮತ್ತು ಹೊಸದಾಗಿ ತಂದ ಹೂಗಳು ಇವುಗಳಿಂದ ಈ ಮಾನವರು ಏತಕ್ಕೆ ಪೂಜೆಮಾಡುವುದಿಲ್ಲವೋ ? ಇವರೆಂತಹ ಮೂರ್ಖರು, ಎಂಬುದಾಗಿ ಹೇಳುತ್ತಾ ಆ ಯಮಭಟರು ಶಿವಪೂಜೆಮಾಡದ ಮಾನವರನ್ನು ಯಮಾಲಯಕ್ಕೆ ಕರೆದುಕೊಂಡುಹೋಗಿ ಅಲ್ಲಿ ಅವರನ್ನು ಹಾಸ್ಯಮಾಡುವರು. ॥೧೬೨॥

ಮಹೇಶ್ವರನಿಗೆ ನೀರನ್ನು ಅಭಿಷೇಕಮಾಡುತ್ತಾ ಬಿಲ್ವದಳ, ಹೊಸ ಹೂಗಳು, ಶ್ರೇಷ್ಠವಾದ ಫಲಗಳು ಇವುಗಳನ್ನು ಸಮರ್ಪಣೆಮಾಡುವವರಾಗಿ ಆ ಮಹಾದೇವನ ನೆಲೆಯಾದ ಕಾಶೀಕ್ಷೇತ್ರವನ್ನು ಸ್ಮರಣೆಮಾಡುವ ಮಾನವರು, ಪಾಪರೂಪವಾದ ಸರ್ಪ, ಮೊಸಳೆ ಮುಂತಾದ ಪ್ರಾಣಿಗಳಿಂದ ಯುಕ್ತವಾದ ಈ ಸಂಸಾರವೆಂಬ ಸಮುದ್ರವನ್ನು ನಿಜವಾಗಿಯೂ ದಾಟುವರು. ॥೧೬೩॥

ಅಪಾರವಾದ ಮಹಾಪಾಪಗಳೆಂಬ ಅಡವಿಗಳಿಗೆ ಅಗ್ನಿಪ್ರಾಯವಾಗಿರುವ

ನ ಕಿಂ ತ್ವದ್ಭುತಾಪಾರದುಃಖಪ್ರಣಾಶಾದ
ಪಾರಾಣಿ ರಮ್ಯಾಣಿ ಸೌಖ್ಯಾನಿ ನೂನಂ ॥೧೬೪॥

ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಥೇ
ರಾಜ್ಞೀರವಿಸಂವಾದೇ ಶಿವಪೂಜಾಯಾ ಅಕರಣೇ ಕಾಗತಿರಿತಿ
ಪ್ರಶ್ನಸ್ಯ ಇತಿಹಾಸವರ್ಣನಂ ನಾಮ ತ್ರಿಂಶೋಽಧ್ಯಾಯಃ

---

ಶಿವಾರಾಧನೆಗಳಿಗೆ ಮಾನವರ ಅತ್ಯದ್ಭುತವೂ ಅಸಂಖ್ಯಾತವೂ ಆದ ದುಃಖಗಳನ್ನು ಹೋಗಲಾಡಿಸುವುದೊಂದೇ ಫಲವಲ್ಲ. ಆ ದುಃಖಗಳನ್ನು ಪುನಃ ಅವರಿಗೆ ಉಂಟಾಗದಂತೆ ಮಾಡಿ ಅನಂತವಾದ ಮತ್ತು ಹೃದಯಂಗಮವಾದ ಸುಖಸಂಪತ್ತಿಯನ್ನೂ ನಿಶ್ಚಯವಾಗಿ ದೊರಕಿಸಿಕೊಡುವುದೂ ಫಲವೆಂದೇ ಅರಿಯಬೇಕು. (ಅಂದರೆ ಮಹಾದೇವನನ್ನು ಪೂಜಿಸಿದರೆ ಅಪಾರವಾದ ಫಲಗಳುಂಟಾಗುವುವೆಂದು ಭಾವವು.) ॥೧೬೪॥

ಅತ್ಯಲ್ಪ ಸುಖಾನುಭವರೂಪವಾದ ಫಲಗಳನ್ನು ಕೊಡುವ ಯಾಗಗಳಿಂದಲೂ ಮತ್ತು ಸ್ವರ್ಗಲೋಕಪ್ರಾಪ್ತಿಯಿಂದಲೂ ಏನೂ ಪ್ರಯೋಜನವಿಲ್ಲ. ಶಿವ ಪೂಜಾತತ್ಪರರಾದವರು ಆ ಸ್ವರ್ಗವನ್ನೂ, ಅದರಿಂದುಂಟಾಗುವ ಫಲವನ್ನೂ ಅತಿ ತುಚ್ಛವಾದುದೆಂದು ಭಾವಿಸುವರು. ಪ್ರದೋಷಕಾಲದಲ್ಲಿ ಆ ಶಿವಲಿಂಗವನ್ನಾರಾಧಿಸುವುದರಿಂದ ಇದಕ್ಕಿಂತಲೂ ಅತಿಶಯವಾದ ಮನೋರಥಗಳು ತಪ್ಪದೇ ದೊರೆಯುವಾಗ, ಅವರು ಈ ಸ್ವರ್ಗಾದಿಗಳನ್ನು ಹೇಗೆತಾನೆ ಅಪೇಕ್ಷಿಸಿಯಾರು ? ಆ ಶಿವ ಪೂಜಾನಿರತರಿಗೆ ಮೋಕ್ಷವೂ ತಮ್ಮ ಕೈಯೊಳಗಿರುವ ನೆಲ್ಲಿಕಾಯಿಯಂತೆ ಸುಲಭವಾಗಿರುವುದು. ಯಮನಾದರೋ ಗಣನೆಗೇ ಬಾರದ ಒಬ್ಬ ಹೊಟ್ಟೆಗಿಲ್ಲದ ಭಿಕ್ಷುಕನಂತೆ ಆಗುವನು ಎಂದು ಆ ಶಾಂಭವನು ಪಾಪಿಯಾದ ಚಾರಣನನ್ನು ನೋಡುತ್ತಾ ಆಲೋಚಿಸಿದನೆಂದು ಸೂರ್ಯದೇವನು ರಾಣಿಗೆ ತಿಳಿಸಿದನು. ॥೧೬೫॥

ಇಲ್ಲಿಗೆ ಶ್ರೀಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ
ರಾಣಿ ಮತ್ತು ಸೂರ್ಯ ಇವರ ಸಂವಾದದಲ್ಲಿ, ಶಿವಪೂಜೆಯನ್ನು ಮಾಡದೇ
ಹೋದರೆ ಯಾವ ಗತಿಯುಂಟಾಗುವುದೆಂಬ ಪ್ರಶ್ನೆಗೆ ಅದೇ
ವಿಷಯವನ್ನು ಪ್ರತಿಪಾದನೆಮಾಡುವ ಇತಿಹಾಸವರ್ಣನೆಯೆಂಬ
ಮೂವತ್ತನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

ತೃತೀಯಾಂಶೇ

ಉತ್ತರಾರ್ಧೇ

## ಏಕತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ಸ್ಥಿರಮತಿಃ ಸೋಽಪಿ ಶಾಂಕರಃ ಶಂಕರಾರ್ಚನಂ ।
ಕಥಂ ವಾ ವಿಘ್ನಿತಂ ನ ಸ್ಯಾದಿತಿ ಚಿಂತಾಕುಲೋಽಭವತ್ ॥೧॥

ತತಃ ಸುರಸರಿತ್ತೀರೇ ಭೂರುಹಾನ್ಪರಿತೋ ಮುಹುಃ ।
ಪಶ್ಯನ್ನನ್ಯಂ ನ ಸಂಪ್ರಾಪ ವನೇ ಬಿಲ್ವತರುಂ ಪರಂ ॥೨॥

---

## ಮೂವತ್ತೊಂದನೆಯ ಅಧ್ಯಾಯ

ಯಾಜ್ಞವಲ್ಕ್ಯಮಹರ್ಷಿಗಳು ಜನಕರಾಜನನ್ನು ಕುರಿತು ಮುಂದಿನ ಕಥೆಯನ್ನು ವಿವರಿಸಲಾರಂಭಿಸಿದನು. ದೃಢವಾದ ಬುದ್ಧಿಯುಳ್ಳ ಆ ಶಾಂಭವನು ಒಡನೆಯೇ, ಈಗ ಏನು ಮಾಡಲಿ? ಶಿವನ ಪೂಜೆಗೆ ಇಂತಹ ವಿಘ್ನವುಂಟಾಯಿತಲ್ಲಾ! ಇದನ್ನು ಹೇಗೆ ತಡೆಗಟ್ಟಲಿ? ಎಂಬುದಾಗಿ ಚಿಂತಾಕ್ರಾಂತನಾದನು. ॥೧॥

ದಡದಲ್ಲಿ ಮತ್ತೆಲ್ಲಿಯಾದರೂ ಬಿಲ್ವವೃಕ್ಷವಿರುವುದೋ ಏನೋ ನೋಡೋಣವೆಂದು ಎಲ್ಲ ಕಡೆಯಲ್ಲಿಯೂ ಹುಡುಕಿದನು. ಆದರೆ ಆ ಕಾಡಿನಲ್ಲಿ ಶ್ರೇಷ್ಠವಾದ ಬೇರೆ ಬಿಲ್ವವೃಕ್ಷವಾವುದೂ ಆವನಿಗೆ ಗೋಚರವಾಗಲಿಲ್ಲ. ॥೨॥

ತದ್ಬಿಲ್ವಮೂಲವಿಲಸಲ್ಲಿಂಗಂ ಮಂಗಲದಾಯಕಂ ।
ದೃಷ್ಟ್ವಾ ಹೃಷ್ಟೋಽಪಿ ಕುಪಿತಸ್ತಂ ವಿಲೋಕ್ಯಾತಿವಿಸ್ಮಿತಃ ॥೩॥

ತತಃ ಪರಂ ಚಾರಣೋಽಪಿ ರಮಣೀಭೋಗಸಾಧನಂ ।
ಚಂದನಾದಿಕಮಾದಾಯ ಪಪ್ರಚ್ಛ ಸಮುಪಸ್ಥಿತಾಂ ॥೪॥

ಕಿಂ ವಿಲಂಬಃ ಕೃತಶ್ಚೇಟಿ ಕುಪಿತಾ ಚಟುಲಾನನಾ ।
ನಾಧುನಾಽಪ್ಯಾಗತಾ ಸಾಪೀತ್ಯನುವಾರಂ ತ್ವಮಾದರಾತ್ ॥೫॥

ಕ್ವ ಚಂದನಂ ಕ್ವ ವಾ ಮಾಲ್ಯಂ ಕ್ವ ಕರ್ಪೂರಾದಿಕರ್ದಮಃ ।
ಕಸ್ತೂರಿಕಾ ಕ್ವ ವಾ ರಮ್ಯಾ ಕ್ವ ವಾ ಕುಂಕುಮಕೇಸರಃ ॥೬॥

ಕುತ್ರಾಸ್ತ್ಯಗರುಸಾರೋಽಪಿ ಕ್ಷೀರಂ ವಾ ಘೃತಸಂಯುತಂ ।
ಫಲಾನಿ ಕುತ್ರ ಪಕ್ವಾನಿ ಕುತ್ರ ವಾ ದೀಪಮಾಲಿಕಾ ॥೭॥

---

ಆಮೇಲೆ ಮೊದಲು ನೋಡಿದ ಬಿಲ್ವವೃಕ್ಷದ ಬುಡದಲ್ಲಿ ಪ್ರಕಾಶಿಸುತ್ತಿರುವ ಮಂಗಳಕರವಾದ ಶಿವಲಿಂಗವನ್ನು ನೋಡಿ ಸಂತುಷ್ಟನಾದರೂ, ಆ ಚಾರಣದಂಪತಿಗಳ ಮೇಲಿನ ಕೋಪವನ್ನು ತೋರ್ಪಡಿಸುತ್ತಾ ಆಶ್ಚರ್ಯಚಕಿತನಾಗುತ್ತಿದ್ದನು. ॥೩॥

ಅದೇ ಸಮಯಕ್ಕೆ ಸರಿಯಾಗಿ ಆ ಚಾರಣನೂ ತನ್ನ ರಮಣಿಯ ಭೋಗ ಸಾಮಗ್ರಿಗಳಾದ ಚಂದನ ಮುಂತಾದವುಗಳನ್ನು ತೆಗೆದುಕೊಂಡು ಬಂದ ಚೇಟಿಯನ್ನು ಪ್ರಶ್ನೆಮಾಡುತ್ತಿದ್ದನು. ॥೪॥

ಎಲೌ ಚೇಟಿಯೇ, ಇಷ್ಟುಹೊತ್ತು ತಡವೇತಕ್ಕೆ ಮಾಡಿದೆ? ಆ ನನ್ನ ಸುಂದರ ಮುಖಿಯಾದ ಪ್ರಿಯೆಯು, ಇನ್ನೂ ನೀನು ಬರಲಿಲ್ಲವೇ ಎಂದು ಪದೇಪದೇ ನಿನ್ನನ್ನು ಕೇಳಿ, ವಿಳಂಬವಾದದ್ದಕ್ಕೆ ನಿನ್ನ ಮೇಲೆ ಕೋಪಗೊಂಡಿರುವಳು. ॥೫॥

ಚಂದನವೆಲ್ಲಿ? ಹೂಮಾಲೆ, ಕರ್ಪೂರದಗಂಧ, ಮನೋಹರವಾದ ಕಸ್ತೂರೀ, ಉತ್ತಮವಾದ ಕುಂಕುಮ ಕೇಸರೀ ಇವುಗಳೆಲ್ಲಾ ಎಲ್ಲಿ? ॥೬॥

ಸಾರಭೂತವಾದ ಅಗರುಧೂಪ, ತುಪ್ಪವನ್ನು ಬೆರಸಿದ ಹಾಲು, ಚೆನ್ನಾಗಿ ಕಳಿತಿರುವ ಹಣ್ಣುಗಳು ಮತ್ತು ದೀಪಗಳ ಸಮೂಹ, ಅವುಗಳನ್ನೆಲ್ಲಾ ತಂದಿರುವೆಯಾ! ॥೭॥

ಪಾನಾರ್ಹಮಧುನಾ ಕುತ್ರ ಶೀತಲಂ ವಿಮಲಂ ಜಲಂ ।
ವಿತಾನಂ ಪುಷ್ಪಶಯ್ಯಾ ವಾ ತಾಂಬೂಲಾನ್ಯಪಿ ಕುತ್ರ ವಾ ॥೮॥

ಕ್ವ ವಾ ಕೇಯೂರಹಾರಾದಿ ತದೀಯಾಭರಣಂ ನವಂ ।
ಕ್ವ ದುಕೂಲಾನಿ ರಮ್ಯಾಣಿ ಕ್ವಾನ್ನಾನಿ ವಿಮಲಾನ್ಯಪಿ ॥೯॥

ಇತಿ ತದ್ವಚನಂ ಶ್ರುತ್ವಾ ಸ್ವಾಮಿನ್ಸರ್ವಮಿಹಾಹೃತಂ ।
ಗತಾಗತಾಭ್ಯಾಂ ಕಾಲೋಽಪಿ ಕಶ್ಚಿದದ್ಯ ವಿಲಂಬಿತಃ ॥೧೦॥

ಅಪರಾಧೋಽಪಿ ಸೋಢವ್ಯ ಇತ್ಯುವಾಚಾತಿವಿಹ್ವಲಾ ।
ಸಾಮಗ್ರೀಮಾಗತಾಂ ಪಶ್ಯ ಸರ್ವಾಮಪಿ ಮನೋಹರಾಂ ॥೧೧॥

ತತಃ ಸರ್ವಂ ಸಮಾದಾಯ ಬಿಲ್ವಮೂಲೇ ಮನೋಹರೇ ।
ಸ್ಥಾಪಯಾಮಾಸ ಸಾ ಚೇಟೀ ಭೋಗಸಾಧನಮುತ್ತಮಂ ॥೧೨॥

---

ಕುಡಿಯಲು ಯೋಗ್ಯವಾದ ಶೀತಲವೂ, ಪರಿಶುದ್ಧವೂ ಆದ ನೀರೆಲ್ಲಿ? ವಿತಾನವೂ (ಮೇಲುಗಡೆ ಛತ್ರಿಯಂತೆ ನಾಲ್ಕು ಕೋಲುಗಳ ಸಹಾಯದಿಂದ ಹಿಡಿದು ಕೊಳ್ಳುವ ಬಟ್ಟೆ) ಪುಷ್ಪಮಯವಾದ ಶಯ್ಯೆಯೂ ಮತ್ತು ತಾಂಬೂಲಗಳೂ ಎಲ್ಲಿರುವುವು? ॥೮॥

ಭುಜಕೀರ್ತಿ (ತೋಳುಬಂದಿ) ಹಾರ ಮುಂತಾದ ಆ ನನ್ನ ರಮಣಿಯ ನೂತನವಾದ ಒಡವೆಗಳೆಲ್ಲಿ? ಮನೋಹರವಾದ ರೇಷ್ಮೆಯ ವಸ್ತ್ರಗಳು, ಪರಿಶುದ್ಧವೂ, ನಾನಾಬಗೆಯವೂ ಆದ ಅನ್ನಗಳೂ ಸಹ ಎಲ್ಲಿವೆ? ಎಂದು ಆ ಚಾರಣನು ಅವುಗಳನ್ನು ತೆಗೆದುಕೊಂಡು ಬಂದ ಚೇಟಿಯನ್ನು ಪ್ರಶ್ನೆಮಾಡಿದನು. ॥೯॥

ಆ ಚಾರಣನ ಮಾತನ್ನು ಕೇಳಿ ಚೇಟಿಯು (ಸಖಿಯು) ಸ್ವಾಮಿ! ತಾವು ಕೇಳಿದ ಪದಾರ್ಥಗಳನ್ನೆಲ್ಲಾ ಇಗೋ ಇಲ್ಲಿ ತಂದಿರುವೆನು. ಆದರೆ ಹೋಗಿಬರುವುದು ಸ್ವಲ್ಪ ನಿಧಾನವಾದ್ದರಿಂದ ಈ ಕಾರ್ಯವು ವಿಲಂಬವಾಯಿತು. ॥೧೦॥

ಪ್ರಭೋ, ನನ್ನ ಈ ದಿನದ ಅಪರಾಧವನ್ನು ದಯೆಯಿಟ್ಟು ಕ್ಷಮಿಸಬೇಕು. ಮನೋಹರವಾದ ಸಕಲ ಸಾಮಗ್ರಿಗಳನ್ನೂ ಇಲ್ಲಿ ತಂದು ಸಿದ್ಧಪಡಿಸಿರುವೆನು. ಪರಾಂಬರಿಸಬೇಕೆಂದು ಆ ಸಖಿಯು ಬಹಳ ದೀನಳಾಗಿ ಬೇಡಿಕೊಂಡಳು. ॥೧೧॥

ಹೀಗಾದ ನಂತರ ಆ ಚೇಟಿಯು ತಾನು ತಂದಿದ್ದ ಉತ್ತಮವಾದ ಉಪ

ತತಸ್ತದ್ರಮಣೀಂ ದೃಷ್ಟ್ವಾ ವಿಲಂಬಃ ಕಿಮುಭೂದಿತಿ ।
ಭರ್ತ್ಸಯಾಮಾಸ ಸಾ ಭೀತಾ ದೃಷ್ಟ್ವಾ ಪರುಷಭಾಷಿಣೀ ॥೧೩॥

ತತಃ ಪರಂ ಸಮುತ್ಥಾಯ ಸಾ ವೇಗೇನ ವರಾನನಾ ।
ಕಿಮಿಯಂ ಭೋಗಸಾಮಗ್ರೀ ಸಮಾನೀತಾ ವನೇಽಧುನಾ ॥೧೪॥

ದೀಪಮಾಲಾರಚನಯಾ ದರ್ಶಯೇತ್ಯಾಹ ಸತ್ವರಂ ।
ರಮಣಂ ತರುಣಂ ದೃಷ್ಟ್ವಾ ವಿವರ್ಣಂ ಪ್ರಾಹ ಸತ್ವರಂ ॥೧೫॥

ತತಸ್ತಯಾಪಿ ಪರಿತೋ ದೀಪಮಾಲಾಃ ಪ್ರಕಲ್ಪಿತಾಃ ।
ತದ್ದೀಪಕಾಂತ್ಯಾ ಕಾಂತಾನಿ ವಸ್ತೂನಿ ಸಕಲಾನ್ಯಪಿ ॥೧೬॥

---

ಭೋಗಸಾಮಗ್ರಿಗಳನ್ನೆಲ್ಲಾ ಮನೋಹರವಾದ ಆ ಬಿಲ್ವವೃಕ್ಷದ ಬುಡದಲ್ಲಿ ತೆಗೆದುಕೊಂಡು ಹೋಗಿ ಇರಿಸಿದಳು. ॥೧೨॥

ಅನಂತರ ಆ ಚಾರಣನ ರಮಣಿಯು ತನ್ನ ಸಖಿಯನ್ನು ನೋಡಿ, ಇಷ್ಟು ವಿಲಂಬಮಾಡಲು ಕಾರಣವೇನೆಂದು ಅವಳನ್ನು ಕಠಿಣವಾದ (ಬಿರುಸಾದ) ನುಡಿಗಳಿಂದ ನಿಂದಿಸಿದಳು. ಇದರಿಂದ ಆ ಸಖಿಯು ಭಯಪಟ್ಟು ಮೌನದಿಂದಿದ್ದಳು. ॥೧೩॥

ಹೀಗೆ ಗದರಿಸಿದ ನಂತರ ಶ್ರೇಷ್ಠವಾದ ಮುಖಕಾಂತಿಯುಳ್ಳ ಆ ರಮಣಿಯು ಕೂಡಲೇ ಎದ್ದು ಕುಳಿತು, ಈ ಕಾಡಿನಲ್ಲಿ ತಂದ ಭೋಗಸಾಮಗ್ರಿಗಳು ಇಷ್ಟೇಯೋ ! ಅಥವಾ ಯಾವ ಯಾವ ಭೋಗಸಾಮಗ್ರಿಗಳನ್ನು ತಂದಿರುವೆಯೋ ನೋಡೋಣ. ॥೧೪॥

ನೀನು ತಂದಿರುವ ಸಾಮಗ್ರಿಗಳನ್ನೆಲ್ಲಾ ದೀಪಪಂಕ್ತಿಗಳನ್ನು ರಚಿಸಿ ಕೂಡಲೇ ತೋರಿಸು ಎಂದು, ಕಳೆಗುಂದಿದ ಮುಖಕಾಂತಿಯುಳ್ಳ, ತರುಣನಾದ ತನ್ನ ರಮಣನನ್ನು ನೋಡುತ್ತಾ ನುಡಿದಳು. ॥೧೫॥

ಅನಂತರ ಆ ಸಖಿಯು ಸುತ್ತಲೂ ದೀಪಪಂಕ್ತಿಗಳನ್ನು ರಚಿಸಿದಳು. ಆ ದೀಪಗಳ ಕಾಂತಿಯಿಂದ ಅವಳು ತಂದಿದ್ದ ಭೋಗಸಾಮಗ್ರಿಗಳೆಲ್ಲಾ ಚೆನ್ನಾಗಿ ಹೊಳೆಯುತ್ತಿದ್ದವು. ॥೧೬॥

ತತಸ್ತಾನಿ ವಿಲೋಕ್ಯಾಪಿ ಸ್ವಲ್ಪಾನೀತ್ಯಪಿ ಕೋಪತಃ ।
ಆಪೌ ತಜ್ಜಲಮಾದಾಯ ಲಿಂಗೇ ಕ್ಷಿಪ್ತಂ ತಯಾ ರುಷಾ ॥೧೭॥

ಪಶ್ಚಾಚ್ಚಂದನಮಾದಾಯ ದಿವ್ಯಗಂಧಸಮನ್ವಿತಂ ।
ಚಂದನಂ ಚ ವಿನಿಕ್ಷಿಪ್ತಂ ಲಿಂಗೇ ತುಂಗೇ ಮನೋಹರೇ ॥೧೮॥

ಪುಷ್ಪಾಣ್ಯಪಿ ವಿಚಿತ್ರಾಣಿ ಪಾರಿಜಾತಾದಿಕಾನ್ಯಪಿ ।
ತಯಾ ಕ್ಷಿಪ್ತಾನಿ ತಲ್ಲಿಂಗೇ ದುಕೂಲಾನ್ಯಪಿ ಸತ್ವರಂ ॥೧೯॥

ಪಶ್ಚಾದನ್ನಾನಿ ಸರ್ವಾಣಿ ತ್ಯಕ್ತಾನಿ ವಿವಿಧಾನ್ಯಪಿ ।
ಲಿಂಗಮೂಲೇ ಮನೋಜ್ಞಾನಿ ಮಧುರಾಣಿ ವಿಶೇಷತಃ ॥೨೦॥

ತತಃ ಪಪಾತ ಸಾ ಕೋಪಾತ್ತಸ್ಮಿನ್ಲಿಂಗಾಂಗಣೇ ತದಾ ।
ತತಃ ಪರಂ ಚಾರಣೋಽಪಿ ತಾಂ ವಿಲೋಕ್ಯಾತಿವಿಸ್ಮಿತಃ ॥೨೧॥

---

ಮನೋಹರವಾದ ಆ ಪದಾರ್ಥಗಳನ್ನು ನೋಡಿದರೂ, ಇದು ಸ್ವಲ್ಪವೆಂಬ ಕೋಪದಿಂದ ಆ ತರುಣಿಯು, ಮೊದಲು, ಆ ಸಖಿಯು ತಂದಿದ್ದ ಪರಿಶುದ್ಧವೂ ಶೀತಲವೂ ಆದ ನೀರನ್ನು ಕೋಪದಿಂದ ತನ್ನ ಪಕ್ಕದಲ್ಲಿದ್ದ ಶಿವಲಿಂಗದ ಮೇಲೆ ಎರಚಿದಳು. ॥೧೭॥

ಆಮೇಲೆ ದಿವ್ಯಪರಿಮಳಗಂಧದಿಂದ ಯುಕ್ತವಾದ ಚಂದನವನ್ನು ತೆಗೆದುಕೊಂಡು ಮನೋಹರವೂ, ಉನ್ನತವೂ ಆದ ಆ ಶಿವಲಿಂಗಕ್ಕೆ ಎಸೆದುಬಿಟ್ಟಳು. ॥೧೮॥

ತನಗೋಸ್ಕರ ತಂದಿದ್ದ ಚಿತ್ರವಿಚಿತ್ರವಾದ ಪಾರಿಜಾತವೇ ಮೊದಲಾದ ಹೂವುಗಳನ್ನೂ, ರೇಷ್ಮೆಯ ವಸ್ತ್ರಗಳನ್ನೂ, ಕೋಪದಿಂದ ಆ ಚಾರಣನ ರಮಣಿಯು ಆ ಶಿವಲಿಂಗದ ಮೇಲೆ ಎಸೆದುಬಿಟ್ಟಳು. ॥೧೯॥

ಅನಂತರ, ಮನೋಹರವೂ ವಿಶೇಷವಾಗಿ ಮಧುರವೂ ಆಗಿರುವ ವಿಧವಿಧವಾದ ಎಲ್ಲಾ ಅನ್ನಗಳನ್ನೂ ಆ ಶಿವಲಿಂಗದ ಸಮೀಪದಲ್ಲಿಯೇ ತಳ್ಳಿಬಿಟ್ಟಳು. ॥೨೦॥

ಎಲ್ಲಾ ಭೋಗಸಾಮಗ್ರಿಗಳನ್ನೂ ಎಸೆದ ನಂತರ ಆ ರಮಣಿಯು ತುಂಬಾ ಕೋಪದಿಂದ ಆ ಶಿವಲಿಂಗಗಳಿದ್ದ ಪ್ರದೇಶದಲ್ಲಿ ಬಿದ್ದುಬಿಟ್ಟಳು. ಇದನ್ನೆಲ್ಲಾ ನೋಡಿದ ಆ ಚಾರಣನೂ ಅವಳ ನಡೆವಳಿಕೆಗಳಿಂದ ತುಂಬಾ ಆಶ್ಚರ್ಯಗೊಂಡನು. ॥೨೧॥

ತತ್ಸರ್ವಂ ಶಾಂಭವೋ ದೃಷ್ಟ್ವಾ ದೂರಾದೇವ ಪುನಃ ಪುನಃ ।
ವಿಸ್ಮಯಂ ಪರಮಂ ಪ್ರಾಪ ಪ್ರಾಶಂಸಯನ್ನೇವ ತಾಮಪಿ ॥೨೨॥

ಧನ್ಯೇಯಂ ಕೃತಕೃತ್ಯೇಯಂ ಸರ್ವಲಕ್ಷಣಸಂಯುತಾ ।
ಪೂಜಾಂ ಚಕಾರ ಲಿಂಗೇಽಸ್ಮಿನ್ಬಿಲ್ವಮೂಲೇ ಮನೋಹರೇ ॥೨೩॥

ಜನ್ಮಾಂತರೇ ಕೃತಂ ಕಿಂ ವಾ ತಯಾ ಪುಣ್ಯಂ ನಿಶಾಮುಖೇ ।
ವಿವಿಧೈಃ ಸಾಧನೈರೇವಂ ಚಕಾರ ಶಿವಪೂಜನಂ ॥೨೪॥

ಅಮರೀ ಕಿಮಿಯಂ ಕಿಂ ವಾ ಕಾಪಿ ಗಂಧರ್ವಕನ್ಯಕಾ ।
ಕೇನ ಪುಣ್ಯಪ್ರಭಾವೇನ ಶರೀರಂ ಪ್ರಾಪ್ತಮೀದೃಶಂ ॥೨೫॥

ಲೋಕಾನಾಂ ಶಿಕ್ಷಣಾಯಾತ್ರ ಶರೀರಂ ಧೃತಮೀದೃಶಂ ।
ಏವಂ ಪೂಜಾ ಮಹೇಶಸ್ಯ ಕರ್ತವ್ಯೇತಿ ನಿಶಾಮುಖೇ ॥೨೬॥

---

ಪರಶಿವಭಕ್ತನು ದೂರದಿಂದಲೇ ಈ ಸಂಘಟನೆಗಳನ್ನೆಲ್ಲಾ ನೋಡಿ ಆ ಚಾರಣನ ರಮಣಿಯನ್ನು ಗೌರವಿಸುತ್ತಾ ಅವಳನ್ನು ಮನದಲ್ಲಿ ಹೊಗಳಲಾರಂಭಿಸಿದನು. ॥೨೨॥

ಸಕಲ ಲಕ್ಷಣಗಳಿಂದ ಯುಕ್ತಳಾದ ಈ ರಮಣಿಯು ಮನೋಹರವಾದ ಬಿಲ್ವವೃಕ್ಷದ ಬುಡದಲ್ಲಿರುವ ಈ ಶಿವಲಿಂಗಕ್ಕೆ ಪೂಜೆಮಾಡಿದವಳಾದ್ದರಿಂದ ಇವಳೇ ಧನ್ಯಳು. ಮತ್ತು ಕೃತಕೃತ್ಯಳು. ॥೨೩॥

ಇವಳು ಜನ್ಮಾಂತರದಲ್ಲಿ ಏನು ಪುಣ್ಯಮಾಡಿದ್ದಳೋ ಕಾಣೆ; ಅದರ ಮಹಿಮೆಯಿಂದ ಈ ಪ್ರದೋಷಕಾಲದಲ್ಲಿ ನಾನಾವಿಧಗಳಿಂದ ಈ ರೀತಿ ಶಿವಪೂಜೆಯನ್ನು ಈಕೆಯು ಮಾಡಿರುವಳು. ॥೨೪॥

ಇವಳೇನು ದೇವತಾಸ್ತ್ರೀಯೋ ಅಥವಾ ಯಾರಾದರೂ ಗಂಧರ್ವಕುಮಾರಿಯೋ, ಯಾವ ಪುಣ್ಯಪ್ರಭಾವದಿಂದ ಈ ಸುಂದರವಾದ ಶರೀರವು ಪ್ರಾಪ್ತವಾಯಿತೋ ಕಾಣೆನು. ॥೨೫॥

ಪ್ರದೋಷಕಾಲದಲ್ಲಿ ಈ ರೀತಿ ಮಹೇಶ್ವರನ ಪೂಜೆಯನ್ನು ಮಾಡಬೇಕೆಂದು ಜನಗಳಿಗೆಲ್ಲಾ ತಿಳಿಸುವುದಕ್ಕೋಸ್ಕರ, ಇಲ್ಲಿ ಸ್ವಾಮಿಯು ಈ ರೀತಿಯಾದ ರೂಪವನ್ನು ಧರಿಸಿರುವಂತೆ ತೋರುತ್ತಿರುವುದು. ॥೨೬॥

ದಿವ್ಯಃ ಕುಂಕುಮಕೇಸರಾದಿಸಹಿತಃ ಪಾಟೀರಸಾರಃ ಪರಃ
ಕರ್ಪೂರಾಗರುಸಂಯುತೋ ಮೃಗಮದವ್ಯಾಪ್ತೋಽಪಿ ದತ್ತಃ ಶಿವೇ ।
ಮಾಲ್ಯಾನ್ಯಪ್ಯಮಿತಾನಿ ತಾನಿ ವಿಮಲಾ ಸಾ ಪುಷ್ಪಶಯ್ಯಾ ತಯಾ
ಶರ್ವಾಯಾದ್ಯ ನಿವೇದ್ಯ ಚಂದನಯುತಾ ಸಾ ಕಲ್ಪಿತಾ ಶಂಕರೇ ॥೨೭॥

ಕರ್ಪೂರಸಾರಪರಿಕಲ್ಪಿತದೀಪಮಾಲಾ
ಸೇಯಂ ಶಿವಾರಮಣಲಿಂಗವಿಶೇಷಕಾಂತ್ಯಾ ।
ಯುಕ್ತಾ ಮಹಾಘವನಪಾವಕತಾಮವಾಪ
ಧನ್ಯೇ ಮಮಾದ್ಯ ನಯನೇ ಶಿವವೀಕ್ಷಣೇನ ॥೨೮॥

ಆಕಲ್ಪಿತಃ ಕೋಽಯಮಿಹಾದ್ಯ ಲಾಭೋ
ವೃತ್ತಃ ಶಿವಾರಾಧನದರ್ಶನೇನ ।
ಏವಂ ಕಿಮಭ್ಯರ್ಚಿತಶಂಗಲಿಂಗಂ
ದೃಷ್ಟಂ ಮಯಾ ಪೂರ್ವಭವೇ ಕದಾ ವಾ ॥೨೯॥

---

ದಿವ್ಯವಾದ ಕುಂಕುಮಕೇಸರೀ, ಪಚ್ಚಕರ್ಪೂರ, ಅಗುರುಧೂಪ ಮತ್ತು ಕಸ್ತೂರೀ ಇವುಗಳಿಂದ ಯುಕ್ತವಾದ ದಿವ್ಯಚಂದನವನ್ನು ಈ ರಮಣಿಯು ಪರಶಿವನಿಗೆ ಸಮರ್ಪಿಸಿದಳು. ಅಲ್ಲದೇ ಅಪಾರವಾದ ಹೂಮಾಲೆಗಳನ್ನೂ ನಿರ್ಮಲವಾದ ಪುಷ್ಪಶಯ್ಯೆಯನ್ನೂ ಆ ಶಿವನಿಗೆ ನಿವೇದನಮಾಡಿರುವಳು. ಮತ್ತು ತನ್ನ ಉಪಭೋಗಕ್ಕೋಸ್ಕರ ತಂದಿದ್ದ ಪದಾರ್ಥಗಳನ್ನೆಲ್ಲಾ ಈಕೆಯು ಆ ಪರಶಿವನಿಗೆ ಅರ್ಪಿಸಿರುವಳು. ॥೨೭॥

ಸಾರಭೂತವಾದ ಕರ್ಪೂರಗಳಿಂದ ನಿರ್ಮಿಸಿರುವ ದೀಪಪಂಕ್ತಿಗಳಿಂದ ಈ ಉಮಾರಮಣನ ಲಿಂಗವು ವಿಶೇಷವಾಗಿ ಕಾಂತಿಯುಕ್ತವಾಗಿರುವುದು. ಅಲ್ಲದೇ ಇದರಿಂದ ಈ ಮಹಾನುಭಾವಳು ಮಹಾಪಾತಕಗಳೆಂಬ ಅಡವಿಗೆ ಅಗ್ನಿಯಂತೆ ಧ್ವಂಸಕಳಾಗಿರುವಳು. ಇಂತಹ ದೇವಿಯಿಂದ ಪೂಜಿಸಲ್ಪಟ್ಟಿರುವ ಪರಶಿವನನ್ನು ನೋಡಿದುದರಿಂದ ಈ ನನ್ನ ಎರಡು ಕಣ್ಣುಗಳೂ ನಿಜವಾಗಿಯೂ ಧನ್ಯಗಳಾದವು. ॥೨೮॥

ಇದೇನು ಇದ್ದಕ್ಕಿದ್ದಂತೆಯೇ ಈ ಶಿವಲಿಂಗದರ್ಶನಲಾಭವು ನನಗೆ ದೊರೆಯಿತಲ್ಲಾ! ನಾನು ಈ ರೀತಿಯಾಗುತ್ತೆಂದು ಯೋಚಿಸಿರಲಿಲ್ಲ. ಇಂತಹ ಶಿವಪೂಜಾ

ಏತಾದೃಶಂ ಲಿಂಗಮನುತ್ತಮಂ ಚೇ
ದಭ್ಯರ್ಚಿತಂ ಪೂರ್ವಭವೇ ಕದಾಪಿ।
ತದಾ ಕಥಂ ವಾ ಜನಿರೀದೃಶೀ ಸ್ಯಾ
ದತೋ ನ ದೃಷ್ಟಂ ಖಲು ಪೂರ್ವಮೇವ ॥೩೦॥

ಪುಣ್ಯೇನ ಕೇನಾಪಿ ಮಯಾದ್ಯ ದೃಷ್ಟಂ
ಲಿಂಗಂ ಸಮಭ್ಯರ್ಚಿತಮಾದರೇಣ।
ಏತಾದೃಶಂ ಪುಣ್ಯಮಯತ್ನಲಭ್ಯಂ
ಧರ್ಮಾರ್ಥಕಾಮಾದಿಕಸಾಧನಂ ಮೇ ॥೩೧॥

---

ದರ್ಶನವು ನನಗಾದುದು ನನ್ನ ಪುಣ್ಯವೇ ಸರಿ. ಹಿಂದೆ ಈ ರೀತಿ ಉತ್ತಮವಾದ ಸಾಮಗ್ರಿಗಳಿಂದ ಪೂಜಿಸಿದ ಶಿವಲಿಂಗವನ್ನು ನಾನು ಯಾವ ಜನ್ಮದಲ್ಲಿಯೂ ನೋಡಿರಲಿಲ್ಲ. ॥೨೯॥

ಇಂತಹ ಅತ್ಯುತ್ತಮವಾದ ಶಿವಲಿಂಗವನ್ನು ನಾನು ಪೂರ್ವಜನ್ಮದಲ್ಲಿ ಎಂದಾದರೂ ನಾನು ಪೂಜಿಸಿದ್ದರೆ, ಆಗ ನನಗೆ ಈ ರೀತಿ ಪುನರ್ಜನ್ಮವೇ ಉಂಟಾಗುತ್ತಿರಲಿಲ್ಲ. ನನಗೆ ಈ ಪುನರ್ಜನ್ಮ ಬಂದಿರುವುದರಿಂದ ಹಿಂದೆ ನಾನು ಇಂತಹ ಲಿಂಗವನ್ನು ನೋಡಿಯೇ ಇಲ್ಲವೆಂದು ತೋರುವುದು. ॥೩೦॥

ಮಹತ್ತರವಾದ ಯಾವುದೋ ಪುಣ್ಯವಿಶೇಷದಿಂದ ಈ ರೀತಿ ಆದರಪೂರ್ವಕವಾಗಿ ಪೂಜಿಸಲ್ಪಟ್ಟಿರುವ ಈ ಶಿವಲಿಂಗವು ನನಗೆ ಗೋಚರವಾಯಿತು. ಅನಾಯಾಸವಾಗಿ ದೊರೆತ ಈ ಶಿವಲಿಂಗದರ್ಶನರೂಪದಿಂದ ಪುಣ್ಯವು ನನಗೆ ಧರ್ಮ, ಅರ್ಥ ಮತ್ತು ಕಾಮ, ಮೋಕ್ಷ ಮುಂತಾದ ಪುರುಷಾರ್ಥಸಾಧನೆಗೆ ಸಾಧನವಾಗಿದೆಯೆಂದು ಭಾವಿಸುವೆನು. (ವಸ್ತುತಃ ಆ ಚಾರಣನ ಪತ್ನಿಯು ಕೋಪದಿಂದ ತನಗೆ ಸಖಿಯು ತಂದ ಪದಾರ್ಥಗಳು ಬೇಡವೆಂದು ಪಕ್ಕದಲ್ಲಿದ್ದ ಶಿವಲಿಂಗಕ್ಕೆ ಎಲ್ಲವನ್ನೂ ಎಸೆದುಬಿಟ್ಟಳು. ಅವಳಿಗೆ ತಾನು ಶಿವಲಿಂಗಕ್ಕೆ ಸಮರ್ಪಣೆ ಮಾಡುತ್ತಿದ್ದೇನೆಂಬ ಭಾವನೆಯಿರಲಿಲ್ಲ. ಕೇವಲ ಕಲ್ಲೆಂಬ ಭಾವನೆಯಿಂದಲೇ ಎಸೆದಳು. ಅದನ್ನು ತಿಳಿಯದ ಆ ಶಿವಭಕ್ತನುಅವಳು ಆ ಶಿವಲಿಂಗಕ್ಕೆ ಭಕ್ತಿಪುರಸ್ಸರವಾಗಿ ಪೂಜೆಮಾಡಿದಳೆಂದು ಅವಳನ್ನು ಗೌರವಿಸುತ್ತಿರುವನು.) ॥೩೧॥

ಭೂತಾಪಿ ಸೇಯಂ ಶಿವರಾತ್ರಿರದ್ಯ
ಸೋಮೋಽಪಿ ಪುಣ್ಯಃ ಖಲು ವಾಸರೋಽದ್ಯ ।
ಆರ್ದ್ರಾನ್ವಿತಃ ಸೋಽಯಮಘಾಪಹಾರಂ
ಕರಿಷ್ಯತೀತ್ಯತ್ರ ನ ಸಂಶಯೋ ಮೇ ॥೩೨॥

ಮಯಾ ತು ಬಿಲ್ವೀದಲಮಾತ್ರಮದ್ಯ
ಪ್ರದೇಯಮಿತ್ಯೇವ ಸಮಾಗತಂ ಚ ।
ಅಕಲ್ಪಿತಃ ಸೋಽಯಮಿಹಾದ್ಯ ಲಾಭಃ
ಶೈಲಾತ್ಮಜಾವಲ್ಲಭದರ್ಶನೇನ ॥೩೩॥

ಪುಷ್ಪಾದಿಕಾಭ್ಯರ್ಚಿತಲಿಂಗಮದ್ಯ
ದೃಷ್ಟಂ ತತೋ ನಷ್ಟಮಿಹಾತಿಕಷ್ಟಂ ।
ಮಹೇಶ್ವರಾನುಗ್ರಹ ಏವ ವೃತ್ತಃ
ಸಾಯಂ ಶಿವಾರಾಧನದರ್ಶನೇನ ॥೩೪॥

---

ಈ ದಿನ ಶಿವರಾತ್ರಿ, ಸೋಮವಾರ. ಸಾಲದ್ದಕ್ಕೆ ಆರ್ದ್ರಾನಕ್ಷತ್ರವೂ ಸೇರಿರುವುದು. ಇಂತಹ ಪುಣ್ಯದಿವಸದಲ್ಲಿ ಮಾಡಿದ ಶಿವಲಿಂಗಪೂಜಾ ಮತ್ತು ದರ್ಶನಾದಿಗಳು ಪಾಪವನ್ನು ನಾಶಮಾಡುವುವೆಂಬುದರಲ್ಲಿ ನನಗೆ ಲೇಶವೂ ಸಂದೇಹವಿಲ್ಲ.॥೩೨॥

ನಾನು ಕೇವಲ ಬಿಲ್ವದಳಗಳನ್ನು ಮಾತ್ರ ಆ ಪರಶಿವನ ಲಿಂಗಕ್ಕೆ ಸಮರ್ಪಣೆ ಮಾಡಬೇಕೆಂದು ಇಲ್ಲಿಗೆ ಬಂದೆನು. ಆದರೆ ಗಿರಿರಾಜಕುಮಾರಿಕಾರಮಣನಾದ ಮಹಾದೇವನ ಈ ದಿವ್ಯವಾದ ಪೂಜಾದರ್ಶನದಿಂದ ಒಂದು ಅಸಾಧಾರಣವಾದ ಪುಣ್ಯವಿಶೇಷ ಲಾಭವೇ ಅಕಸ್ಮಾತ್ತಾಗಿ ದೊರೆಯಿತು. ॥೩೩॥

ಪುಷ್ಪಗಳೇ ಮುಂತಾದ ಪೂಜಾಸಾಮಗ್ರಿಗಳಿಂದ ಪೂಜಿಸಿರುವ ಈ ಶಿವಲಿಂಗವನ್ನು ದರ್ಶನಮಾಡಿದುದರಿಂದ ನನ್ನ ಸಕಲ ಕಷ್ಟಗಳೂ ನಾಶವಾದವು. ಅಲ್ಲದೇ ಈ ಪ್ರದೋಷಕಾಲದಲ್ಲಿ ಶಿವಪೂಜಾದರ್ಶನದಿಂದ ಮಹೇಶ್ವರನ ಅನುಗ್ರಹವೇ ಉಂಟಾಯಿತೆಂದು ಭಾವಿಸುವೆನು. ॥೩೪॥

ಧನ್ಯಾಃ ಕ್ವಚಿತ್ಸಂತಿ ಶಿವಾರ್ಚಕಾಸ್ತೇ
ಜ್ಞೇಯಾಃ ಕಥಂ ವಾ ಸುಕೃತೈರ್ವಿನಾಪಿ ।
ಅನ್ಯಾದೃಶೀ ಬುದ್ಧಿರಿಹಾಭವನ್ಮೇ
ತದ್ಬುದ್ಧಿಜಂ ಪಾಪಮಿಹಾಶು ನಷ್ಟಂ ॥೩೫॥

ಶೈವಸ್ವರೂಪಾಣ್ಯತಿಪಾವನಾನಿ
ದೃಷ್ಟಾನಿ ಪುಣ್ಯೈರಮಿತೈಃ ಕದಾಚಿತ್ ।
ಅಶೇಷಪಾಪೌಘವಿನಾಶನಾಯ
ಭವಂತಿ ತಾವತ್ಸುಕೃತೈರಪಾರೈಃ ॥೩೬॥

ಅಲಮೇತದಪೇಕ್ಷಣೇನ ಪುಣ್ಯೈ
ರಪಿ ಯಾಗಾದಿಭಿರಪ್ಯಪಾರದಾನೈಃ ।
ಶಿವ ಇತ್ಯನುವಾರಮೇಕದಾ ವಾ
ವದ ಜಿಹ್ವೇ ಪ್ರಣತೋಽಸ್ಮಿ ತುಭ್ಯಮದ್ಯ ॥೩೭॥

---

ಧನ್ಯರಾದ ಅನೇಕ ಮಂದಿ ಶಿವಪೂಜಕರು, ಬೇರೆ ಬೇರೆ ರೀತಿಯಿಂದ ಗೋಚರವಾಗುವರು. ಅವರನ್ನು ಶಿವಪೂಜಾನಿರತರೆಂದು ತಿಳಿಯುವುದು ಪುಣ್ಯವಿಶೇಷ ದಿಂದಲೇ ಹೊರತು ಬೇರೆ ಸಾಧ್ಯವಿಲ್ಲ. ನನಗೆ ಈ ತರುಣಿಯಲ್ಲಿ ವಿಪರೀತವಾದ ದುರ್ಬುದ್ಧಿಯುಂಟಾಗಿತ್ತು. ಆದರೆ ಈಗ ಇವಳು ಮಾಡಿದ ಶಿವಪೂಜಾದರ್ಶನದಿಂದ ಆ ನನ್ನ ದುರ್ಬುದ್ಧಿಯಿಂದುಂಟಾದ ಸಕಲ ಪಾಪಗಳೂ ಕೂಡಲೇ ನಷ್ಟವಾದವು. ॥೩೫॥

ಅಸಂಖ್ಯಾತವಾದ ಪುಣ್ಯವಿಶೇಷ ಮಹಿಮೆಯಿಂದ ಒಂದೊಂದು ಬಾರಿ ಅತ್ಯಂತ ಪವಿತ್ರವಾದ ಶಿವಭಕ್ತರ ಸ್ವರೂಪವು ಗೋಚರವಾಗುವುದು. ಹೀಗೆ ಅಪಾರ ವಾದ ಪುಣ್ಯಪರಿಪಾಕದಿಂದ ಗೋಚರವಾಗುವ ಆ ಪರಮಪುರುಷರ ದರ್ಶನವು ಮಾನವನ ಸಮಸ್ತ ಪಾಪಗಳನ್ನೂ ಖಂಡಿತವಾಗಿಯೂ ಹೋಗಲಾಡಿಸುವುದು. ॥೩೬॥

ಇಂತಹ ಪರಮ ಶಿವಭಕ್ತರ ದರ್ಶನ, ಯಾಗಾದ್ಯನುಷ್ಠಾನ ಮತ್ತು ನಾನಾವಿಧವಾದ ದಾನಧರ್ಮಗಳು ಇವುಗಳನ್ನೆಲ್ಲಾ ಮಾಡುವುದರಿಂದುಂಟಾಗುವ ಪುಣ್ಯಫಲವು ಹಾಗಿರಲಿ ; ಎಲೈ ನಾಲಿಗೆಯೇ ! ಪದೇಪದೆಯಾಗಲಿ, ಅಥವಾ ಒಂದು

ಅಪರಾಧಸಹಸ್ರಕೋಟಿಕೊಟಿಃ
ಪ್ರಲಯಂ ಯಾತಿ ಕದಾಚಿದಾದರೇಣ ।
ಶಿವ ಇತ್ಯಭಿಮಾನಮಾತ್ರತೋ ವಾ
ವದ ಜಿಹ್ವೇ ಶಿವಮೇವ ತೇ ನಮೋ ಮೇ ॥೩೮॥

ಪೂಜಾದ್ರವ್ಯಸಮುರ್ಜನಾಯ ನ ಧನಂ ಶಕ್ತಿಶ್ಚ ನಾತಃ ಪರಂ
ತದ್ದ್ರವ್ಯಾರ್ಜನಸಾಧನಂ ಚ ನ ಮಿತಂ ಯಲ್ಲೌಕಿಕಂ ತನ್ಮಯಾ ।
ತ್ವಂ ತಾವತ್ಸಮುಪಾರ್ಜಿತಾಸಿ ರಸನೇ ಪುಣ್ಯೈರಗಣ್ಯೈರತಃ
ಶಂಭೋ ಶಂಕರ ಚಂದ್ರಶೇಖರ ಮಹಾದೇವೇತಿ ವಾ ಸಂವದ ॥೩೯॥

ಮಾ ಮಾ ಸಂವದ ಸಂವದಾಶು ರಸನೇ ಮೋಹಾತ್ಪ್ರಮಾದೇನ ವಾ
ಭ್ರಂಶೇನಾಪಿ ಶಿವಾನ್ಯನಾಮ ಸತತಂ ಶಂಭೋ ಶಿವೇತ್ಯಾದರಾತ್ ।

---

ಸಲವಾಗಲೀ ಆ ಪರಶಿವನ ದಿವ್ಯನಾಮವನ್ನು (ಶಿವ ಎಂಬುದಾಗಿ) ಉಚ್ಚರಿಸು. ಅದರಿಂದಲೇ ಇದಕ್ಕಿಂತಲೂ ಅತಿಶಯವಾದ ಪುಣ್ಯವುಂಟು. ಇಗೋ, ಶಿವನಾಮೋಚ್ಚಾರಣೆ ಮಾಡುವ ಆ ನಿನಗೆ ನಮಸ್ಕಾರಮಾಡುವೆನು. ॥೩೭॥

ಯಾವಾಗಲಾದರೂ ಒಂದು ಬಾರಿ ಆದರ ಪೂರ್ವಕವಾಗಿ ಕೇವಲ ಅಭಿಮಾನ ಮಾತ್ರದಿಂದಲಾದರೂ 'ಶಿವ' ಎಂಬ ನಾಮವನ್ನು ಸ್ಮರಣೆಮಾಡುವುದರಿಂದ ಗುಂಪುಗುಂಪಾಗಿರುವ ಸಾವಿರಕೋಟಿ ಅಪರಾಧಗಳೂ ಸಹ ನಾಶವಾಗುವುವು. ಆದುದರಿಂದ ಎಲೈ ನಾಲಿಗೆಯೇ ! ಶಿವನಾಮಗಳನ್ನುಚ್ಚರಿಸು ? ॥೩೮॥

ಆ ಪರಮೇಶ್ವರನ ಪೂಜಾದ್ರವ್ಯಗಳನ್ನು ಸಂಗ್ರಹಿಸಲು ನನ್ನಲ್ಲಿ ದ್ರವ್ಯವಿಲ್ಲ. ಮತ್ತು ನನ್ನಲ್ಲಿ ಅಂತಹ ಶ್ರೇಷ್ಠವಾದ ಶಕ್ತಿಯೂ ಇಲ್ಲವಾಗಿದೆ. ಆ ಮಹಾದೇವನನ್ನು ಪೂಜಿಸಲು ಲೋಕವ್ಯವಹಾರದಲ್ಲಿ ಬೇಕಾದ ಸಲಕರಣೆಗಳ ಸಾಧನಗಳು ಹೇಗೆಂಬುದೂ ಎಷ್ಟೆಂಬುದೂ ನನಗೆ ತಿಳಿಯದು. ಎಲೈ ನಾಲಿಗೆಯೇ ! ಅನಂತವಾದ ಪುಣ್ಯರಾಶಿಗಳಿಂದ ನೀನೊಂದು ಮಾತ್ರ ನನಗೆ ದೊರೆತಿರುವುದರಿಂದ, ಆ ನೀನು ಯಾವಾಗಲೂ, ಶಂಭೋ, ಶಂಕರ, ಚಂದ್ರಶೇಖರ, ಮಹಾದೇವ, ಎಂಬ ಆ ಪರಶಿವನ ದಿವ್ಯನಾಮಗಳನ್ನಾದರೂ ಉಚ್ಚಾರ ಮಾಡು. ॥೩೯॥

ಎಲೈ ರಸನೇಂದ್ರಿಯವೇ, ಅಜ್ಞಾನದಿಂದಾಗಲೀ, ಪ್ರಮಾದದಿಂದಲಾಗಲೀ, ಅಥವಾ ಬಾಯಿತಪ್ಪಿಯಾಗಲೀ, ಶಿವನಿಗಿಂತ ಬೇರೆಯಾದವರ ನಾಮಗಳನ್ನು

ತ್ವಂ ತಾವದ್ವದ ಶರ್ಕರಾಸ್ಯತಿಸಿತಾ ತುಭ್ಯಂ ಮಯಾ ದೀಯತೇ
ಕ್ಷೀರಂ ಚಾಜ್ಯಸಮನ್ವಿತಂ ಶಿವಕಥಾಪೀಯೂಷತೃಪ್ತಾಪ್ಯಸಿ ॥೪೦॥

ಗೌರೀಮನೋರಮಣನಾಮಸುಧಾಂ ವಿಹಾಯ
ವಾಂಛಾಪಿ ತೇ ಖಲು ನ ಸಾ ರಸನೇ ರಸಜ್ಞೇ ।
ಕಸ್ಮಾದ್ಯಶೋ ಭವತಿ ಯೇನ ತವಾನ್ಯವಾಂಛಾ
ಸ್ಯಾದಿತ್ಯತಃ ಪರಮುಮಾರಮಣಂ ವದಾಶು ॥೪೧॥

ಪುಣ್ಯೈರಪಾರೈರ್ಬಹುಜನ್ಮಸಿದ್ಧೈ
ರ್ಯಾಗೈಶ್ಚ ಯೋಗೈರಪಿ ಸಾಧಿತಾ ತ್ವಂ ।
ಅತೋ ಮಹಾದೇವ ಶಿವೇತಿ ನಾಮ
ಪೀಯೂಷಮೇವಾದರತಃ ಪಿಬಾಶು ॥೪೨॥

---

ಎಂದಿಗೂ ಉಚ್ಚಾರಮಾಡದೆ ಅನವರತವೂ ಆ ಪರಶಿವನ ನಾಮಗಳನ್ನು ಮಾತ್ರ ಆದರದಿಂದ ಉಚ್ಚರಿಸುತ್ತಿರು. ಶಿವಕಥಾಮೃತಚರ್ವಣದಿಂದ ನೀನು ಯದ್ಯಪಿ ತೃಪ್ತಿ ಹೊಂದಿರುವೆ. ಆದರೂ ನೀನು ಬಿಡದೇ ಆ ಶಿವನಾಮವನ್ನು ಜಪಿಸು. ಕಲ್ಲುಸಕ್ಕರೆ ಯನ್ನೂ ತುಪ್ಪದೊಡಗೂಡಿದ ಹಾಲನ್ನೂ ನಾನು ನಿನಗೆ ಕೊಡುವೆನು. (ಅಂದರೆ ಈ ಶಿವನಾಮಗಳ ಉಚ್ಚಾರಣೆಯು ಸಕ್ಕರೆ, ತುಪ್ಪ ಇವುಗಳಿಂದ ಮಿಶ್ರವಾದ ಒಳ್ಳೆಯ ಹಾಲಿಗೆ ಸಮಾನವಾಗಿರುವುದೆಂದೂ ಇಂತಹ ಶಿವನಾಮವನ್ನು ನೀನು ಸದಾ ಜಪ ಮಾಡೆಂದೂ ಭಾವವು.) ॥೪೦॥

ರಸವನ್ನರಿತ (ಸಾರವನ್ನು ತಿಳಿದ) ಎಲೈ ರಸನೇಂದ್ರಿಯವೇ! ಗೌರೀ ಮನೋರಮಣನೆನಿಸಿದ ಆ ಮಹಾದೇವನ ನಾಮಾಮೃತವನ್ನು ಬಿಟ್ಟು, ಇತರ ದೇವತೆಗಳ ನಾಮೋಚ್ಚಾರಣೆಯ ವಿಷಯದಲ್ಲಿ ನಿನಗೆ ಅಪೇಕ್ಷೆಯು ಹೇಗೆತಾನೆ ಉಂಟಾದೀತು? ಆದುದರಿಂದ ಸರ್ವಶ್ರೇಷ್ಠವಾದ ಉಮಾರಮಣನ ದಿವ್ಯನಾಮ ಗಳನ್ನೇ ಜಾಗ್ರತೆಯಾಗಿ ಜಪಿಸು. ॥೪೧॥

ಅನೇಕ ಜನ್ಮಗಳಲ್ಲಿ ಮಾಡಿರುವ ಅಪಾರವಾದ ಪುಣ್ಯವಿಶೇಷಗಳಿಂದಲೂ, ಅನೇಕ ಯಾಗ ಮತ್ತು ಯೋಗಾಭ್ಯಾಸ, ಇವುಗಳನ್ನಾಚರಿಸುವಿಕೆಯಿಂದಲೂ ನೀನು ನನಗೆ ದೊರೆತಿರುವೆ. ಆದುದರಿಂದ ಇಂತಹ ಸಂದರ್ಭದಲ್ಲಿ 'ಮಹಾದೇವ' ಶಿವ

ತಿಕ್ತಾ ಸದಾ ಸೋಮರಸಾವಸಿಕ್ತಾ
ತತೋ ವಿರಕ್ತಾ ತ್ವಮಿಹಾನುರಕ್ತಾ ।
ಮಹೇಶ್ವರಾಪಾರಸುಧಾಸ್ವರೂಪಾ
ನಾಮಾವಲೀಕೇ ಚ ರಸೇಽನುವೇಲಂ ॥೪೩॥

ವಿಲೋಕಯೇದಂ ನಯನಾರವಿಂದ
ಮಂದಾರಕುಂದಾರ್ಚಿತಲಿಂಗಮದ್ಯ ।
ಇದಂ ಕದಾ ವಾ ಸುಲಭಂ ತವ ಸ್ಯಾದಿ
ಹಾಧುನಾ ಪುಣ್ಯವಶೇನ ಲಬ್ಧಂ ॥೪೪॥

ಯಥಾ ಧನಂ ನೈವ ಜಹಾತಿ ದೀನ
ಸ್ತಥಾ ಪ್ರಪಶ್ಯಾಶು ಮಹೇಶಲಿಂಗಂ ।

---

ಎಂಬ ಆ ಪರಮೇಶ್ವರನ ನಾಮೋಚ್ಚಾರಣರೂಪವಾದ ಅಮೃತವನ್ನೇ ಆದರದಿಂದ ಪಾನಮಾಡು. ॥೪೨॥

ಅನೇಕ ಯಜ್ಞಗಳನ್ನಾಚರಿಸಿದಾಗ, ಸೋಮರಸಪಾನದಲ್ಲಿ ಆಸಕ್ತವಾಗಿದ್ದೆ. ಈಗ ಈ ಮಹೇಶ್ವರನ ನಾಮಾಮೃತಪಾನದಲ್ಲಿ ತತ್ಪರವಾದ ಮೇಲೆ ಆ ಸೋಮ ರಸದಲ್ಲಿ ಕಹಿಯೆಂಬ ಭಾವನೆ ಬಂದು ವಿರಕ್ತಿಹೊಂದಿ ಯಾವಾಗಲೂ ಆ ಮಹಾದೇ ವನ ಅಮೃತಸ್ವರೂಪವಾದ ನಾಮಪಂಕ್ತಿಗಳ ಸ್ಮರಣೆಯಲ್ಲಿಯೇ ಕಾಲವನ್ನು ಕಳೆ ಯುತ್ತಿರುವೆ. ಇದು ಎಲ್ಲಕ್ಕಿಂತಲೂ ಅತಿ ಮಧುರವಾದದ್ದೆಂದು ನಾನು ತಿಳಿದಿ ರುವೆನು. ॥೪೩॥

ಎಲೈ ಕಮಲಕ್ಕೆ ಸಮಾನವಾದ ನೇತ್ರವೇ! ಮಂದಾರ, ಕುಂದ (ಕೋಲು ಮಲ್ಲಿಗೆ) ಮುಂತಾದ ಹೂವುಗಳಿಂದ ಪೂಜಿಸಿರುವ ಈ ಶಿವಲಿಂಗವನ್ನು ನೋಡು. ಇಂತಹ ಸಂದರ್ಭವು ನಿನಗೆ ಮತ್ತಾವಾಗಲೂ ಸುಲಭವಾಗಿ ದೊರೆಯಲಾರದು. ಪುಣ್ಯವಶದಿಂದ ಈಗ ನಿನಗೆ ದೊರೆತಿದೆ. ಆದುದರಿಂದ ಈ ಶಿವಲಿಂಗವನ್ನು ನೋಡಿ, ನಿನ್ನ ಜನ್ಮ ಸಾರ್ಥಕಮಾಡಿಕೊ. ॥೪೪॥

ದೀನನಾದ ಯಾಚಕನು ತನಗೆ ಅಪೇಕ್ಷಿತವಾದ ಹಣವನ್ನು ಬಿಡದೇ ಸ್ವೀಕರಿಸುವಂತೆ, ನೀನೂ ಈಗ ಈ ಮಹೇಶ್ವರನ ಲಿಂಗವನ್ನು ಜಾಗ್ರತೆ ನೋಡಿ

ಏತಾದೃಶಸ್ತ್ರೇ ಕಥಮುತ್ಸವಃ ಸ್ಯಾ
ತ್ಕಾಲಾಂತರೇ ತೇನ ವಿಲೋಕಯೇದಂ ॥೪೫॥

ವಂಧ್ಯಾ ಲಬ್ಧಕುಮಾರವೀಕ್ಷಣರತಾ ಕಾರ್ಯಾಂತರಾಸಂಗತಾ
ತದ್ವತ್ತ್ವಂ ಶಿವಲಿಂಗಮರ್ಚಿತಮಿದಂ ಪಶ್ಯಾಧುನಾ ಸಾದರಂ ।
ಸ್ವಪ್ನೇಽಪ್ಯದ್ಭುತಶಂಗಲಿಂಗರಚಿತಾ ಪೂಜಾ ಯತೋ ದುರ್ಲಭಾ
ಪಶ್ಯೇದಂ ಪುನರಾದರೈಃ ಪುನರಿದಂ ಪಶ್ಯ ಪ್ರಪಶ್ಯಾದರಾತ್ ॥೪೬॥

ತ್ವಂ ತಾವನ್ಮಮ ಪುಣ್ಯಸಾಧನಮತಸ್ತ್ವಂ ಪುಣ್ಯವೃಂದಾರ್ಜಿತಂ
ಮೇನೇ ಶಂಗವಿಲೋಕನೇನ ತದಿದಂ ಸರ್ವಾತ್ಮನಾ ದುರ್ಲಭಂ ।
ಆಪ್ತತ್ವೇನ ಮಯೇದಮುಚ್ಯತ ಇತಿ ಜ್ಞೇಯಂ ತ್ವಯಾ ಸರ್ವಥಾ
ಮಾಮಾಪ್ತಂ ತವ ಸರ್ವಥಾಪಿ ನಯನೇ ಜಾನೀಹಿ ಜಿಹ್ವೇ ತಥಾ ॥೪೭॥

---

ಕೃತಕೃತ್ಯನಾಗು. ಈಗಲ್ಲದೇ ಮತ್ತಾವಾಗತಾನೇ ಇಂತಹ ಉತ್ಸವವು (ಆನಂದಕರವಾದ ಮಹೋತ್ಸವವು) ದೊರಕೀತು. ಆದುದರಿಂದ ಅನಾಯಾಸವಾಗಿ ದೊರೆತಿರುವ ಈ ಶಿವಲಿಂಗವನ್ನು ದರ್ಶನಮಾಡಿ ಧನ್ಯನಾಗು. ॥೪೫॥

ಬೇರೆ ಕಾರ್ಯಗಳಲ್ಲಿ ತತ್ಪರಳಾಗದೇ ಈ ಶಿವಲಿಂಗದರ್ಶನವನ್ನು ಮಾಡಿದ ಬಂಜೆಯಾದ ಹೆಂಗಸೂ ಮಹೇಶನನುಗ್ರಹದಿಂದ ಪುತ್ರನನ್ನು ಪಡೆದು, ಆ ಕುಮಾರನನ್ನು ಯಾವಾಗಲೂ ನೋಡುತ್ತಾ ಆನಂದಭರಿತಳಾಗುವಳು. ಇವಳು ಎಡಬಿಡದೇ ತನ್ನ ಕುಮಾರನನ್ನೇ ನೋಡುತ್ತಿರುವಂತೆ, ನೀನೂ ಆದರಪೂರ್ವಕವಾಗಿ ನಾನಾವಿಧವಾದ ಪೂಜಾಸಾಮಗ್ರಿಗಳಿಂದ ಪೂಜಿಸಲ್ಪಟ್ಟಿರುವ ಈ ಶಿವಲಿಂಗವನ್ನು ಪುನಃ ಪುನಃ ನೋಡಿ ಆನಂದಪಡು. ಇಂತಹ ಅದ್ಭುತವಾದ ಶಿವಲಿಂಗಕ್ಕೆ ಪೂಜೆಮಾಡಿರುವುದು, ಮತ್ತೆ ಅದು ಸ್ವಪ್ನದಲ್ಲಿಯೂ ದೊರೆಯುವುದು, ದುರ್ಲಭವೇ ಎಂದು ತಿಳಿದು ಆದರಪೂರ್ವಕವಾಗಿ ಪುನಃ ಪುನಃ ಆ ಶಿವಲಿಂಗದರ್ಶನಮಾಡು. ॥೪೬॥

ನಾನು ಮಾಡುವ ಪುಣ್ಯಕೆಲಸಗಳಿಗೆಲ್ಲಾ ನೀನು ಸಾಧನವಾಗಿರುವೆ. ಆದುದರಿಂದ ನೀನೂ ನನ್ನ ಪೂರ್ವಾರ್ಜಿತ ಪುಣ್ಯವಿಶೇಷ ಸಮೂಹಗಳಿಂದಲೇ ದೊರಕಿರುವೆಯೆಂದು ನಾನು ಭಾವಿಸುವೆನು. ನೀನಿಲ್ಲದಿದ್ದರೆ ಯಾವ ರೀತಿಯಲ್ಲಿಯೂ ಈ ಪರಶಿವನ ಲಿಂಗದರ್ಶನವು ನನಗೆ ದುರ್ಲಭವೇ ಆಗುತ್ತಿದ್ದಿತು. ನಾನು ನಿನ್ನ ಹಿತಚಿಂತಕ

ಧನ್ಯಾಸ್ತೇ ತರವೋಽಪಿ ಶಂಗನಿಲಸಲ್ಲಿಂಗಾಂಗಣಾರೋಪಿತಾಃ
ತತ್ಸೇವಾನಿರತಾಃ ಪುನಃ ಪುನರತಿಚ್ಛಾಯಾತಿದಾನೈರಲಂ ।
ಛತ್ರಂತೀತಿ ನ ಚಿತ್ರಮತ್ರ ಸುಕೃತಂ ಕಿಂ ಕಿಂ ಕೃತಂ ತೈರಪಿ
ಜ್ಞಾತುಂ ಶಕ್ಯಮತಃ ಪರಂ ನ ಸಹಸಾ ತತ್ಸನ್ನಿಧಾನಾತ್ಸದಾ ॥೪೮॥

ಧನ್ಯಾಸ್ತೇ ತರವಃ ಸಪಲ್ಲವಕುಲೈರಭ್ಯರ್ಚಯಂತ್ಯೇವ ತೇ
ಶಂಗಂ ಲಿಂಗಮಯತ್ನಲಬ್ಧವಿಭವಾಸ್ತೇ ಪಾಂಡುಪತ್ರೈರಪಿ ।
ಪಕ್ವೈರಪ್ಯಮಲೈಃ ಫಲೈರನಿಲತಸ್ತಾವತ್ಸ್ವತಃ ಪ್ರಚ್ಯುತೈ
ರೇತದ್ಭಾಗ್ಯಗುಣಾನುವರ್ಣನಮಪಿ ಪ್ರಾಯೋಽಸ್ತಿ ಪುಣ್ಯಾಬ್ಧಿಭಿಃ ॥೪೯॥

---

ನಾದುದರಿಂದ ಹೀಗೆ ಹೇಳುತ್ತಿರುವೆನೆಂದು ತಿಳಿದುಕೋ. ಅನ್ಯಥಾ ಭಾವಿಸಬೇಡ. ಎಲೈ ನಯನೇಂದ್ರಿಯವೆ ಮತ್ತು ರಸನೆಯೇ, ನೀವಿಬ್ಬರೂ ನನ್ನನ್ನು ಆಪ್ತನೆಂದು ಭಾವಿಸಿ ಈ ಶಿವಲಿಂಗ ದರ್ಶನ ಮತ್ತು ಶಿವನಾಮಸ್ಮರಣ ಇವುಗಳಿಂದ ನಿಮ್ಮ ಜನ್ಮವನ್ನು ಸಾರ್ಥಕಮಾಡಿಕೊಳ್ಳಿರಿ. ॥೪೭॥

ಸುಖಸ್ವರೂಪನಾದ ಆ ಪರಮೇಶ್ವರನ ಲಿಂಗಗಳಿಂದ ಪ್ರಕಾಶಿಸುತ್ತಿರುವ ಅಂಗಳಪ್ರದೇಶಗಳಲ್ಲಿ ಹುಟ್ಟಿರುವ ಮರಗಳು ಸದಾ ತಂಪಾದ ನೆಳಲನ್ನುಂಟು ಮಾಡುವುದರಿಂದ ಛತ್ರಿಗಳೋಪಾದಿಯಲ್ಲಿ ತೋರುತ್ತಾ ಯಾವಾಗಲೂ ಆ ಪರಶಿವನ ಸೇವೆಯಲ್ಲಿಯೇ ತತ್ಪರವಾಗಿರುವುವು. ಈ ವೃಕ್ಷಗಳು ನಿಜವಾಗಿಯೂ ಧನ್ಯವಾದವುಗಳು. ಇವು ಆ ಪರಮೇಶ್ವರನ ಸನ್ನಿಧಾನವನ್ನು ಪಡೆಯಲು ಎಷ್ಟು ಆಶ್ಚರ್ಯಕರಗಳಾದ ಪುಣ್ಯವಿಶೇಷಗಳನ್ನೆಸಗಿದ್ದವೋ ಅದನ್ನು ಕೂಡಲೇ ತಿಳಿಯಲು ಯಾರಿಗೂ ಸಾಧ್ಯವಿಲ್ಲ. ॥೪೮॥

ಚಿಗುರುಗಳ ಸಮೂಹಗಳಿಂದ ಯಾವಾಗಲೂ ಪೂಜಿಸುತ್ತಲೇ ಇರುವ ಈ ಮರಗಳೇ ನಿಜವಾಗಿಯೂ ಧನ್ಯವಾದುವುಗಳು. ಅನಾಯಾಸವಾಗಿ ದೊರೆತ ಶಿವಲಿಂಗ ಪೂಜಾ ವೈಭವವುಳ್ಳ ಈ ವೃಕ್ಷಗಳು, ತಮ್ಮ ಬಿಳುಪಾದ ಪತ್ರೆಗಳಿಂದಲೂ, ಪರಿಶುದ್ಧವೂ ಪಕ್ವವೂ ಆಗಿ ತಾನಾಗಿಯೇ ತೊಟ್ಟುಸಿಡಿದು ಕೆಳಗೆ ಬಿದ್ದಿರುವ ಹಣ್ಣು ಹಂಪಲುಗಳಿಂದಲೂ, ಮತ್ತು ತಂಪಾದ ಗಾಳಿಯಿಂದಲೂ ಕೂಡ .ಯಾವಾಗಲೂ ಈ ಶಿವಲಿಂಗವನ್ನು ಆದರದಿಂದ ಸೇವೆಮಾಡುತ್ತಿರುವುವು. ಇಂತಹ ಈ ವೃಕ್ಷಪಂಕ್ತಿಗಳ ಭಾಗ್ಯವು ಹಾಗಿರಲಿ ; ಇವುಗಳ ಗುಣಗಳನ್ನು ಸಾಮಾನ್ಯವಾಗಿ ವರ್ಣಿಸಬೇಕಾ

ತರುರಪ್ಯರುಶಂಗಲಿಂಗಭಾಗೇ
ಸ್ಥಿರ ಏವಾತಿತರಾಂ ಕರೋತಿ ಸೇವಾಂ ।
ಅಯಮತ್ರ ಮಹಾನುಭಾವ ಇತ್ಯ
ಭಿಮಾನೋ ಮಮ ತನ್ನಿಧಾನಮೇವ ॥೫೦॥

ಇಯಮಪ್ಯಧುನಾ ಪ್ರದೋಷಕಾಲೇ
ಶಿವಮಭ್ಯರ್ಚ್ಯ ಸಕೃತ್ಪ್ರಣಾಮಮುಕ್ತಾ ।
ಸಕೃದಪ್ಯವಲೋಕಿತಾ ಶುಭಾನಾಂ
ನಿಧಿಮೇವ ಪ್ರಯತಾ ಪ್ರದಾಸ್ಯತೀಹ ॥೫೧॥

ಇಯಮಾಲೋಕಿತಾ ಧನ್ಯಾ ಪುಣ್ಯೈರೇವ ಮುಹುರ್ಮುಹುಃ ।
ಶಿವಪೂಜನಸಂತುಷ್ಟಾ ಕಥಮೇವಂ ಮನೋರಮಾ ॥೫೨॥

ಅಥ ಪ್ರದೋಷಸಮಯಃ ಕಥಂ ಜ್ಞಾತಸ್ತ್ವಯಾಧುನಾ ।
ಕಥಮಭ್ಯರ್ಚಿತಂ ಲಿಂಗಂ ಸಾಂಗಂ ಸಾಯಂ ಶಿವಾಶ್ರಿತಂ ॥೫೩॥

---

ದರೂ ಸಮುದ್ರದಂತೆ ಅಪಾರವಾದ ಪುಣ್ಯಗಳೇ ಇರಬೇಕು. ಇಲ್ಲದಿದ್ದರೆ ಅಸಾಧ್ಯವೇ ಸರಿ. ||೪೯||

ಜ್ಞಾನ, ಮತ್ತು ವಿವೇಕಶೂನ್ಯವಾದ ಒಂದು ಸಾಧಾರಣ ಮರವಾಗಿದ್ದರೂ, ಇದು ಸ್ಥಿರವಾಗಿ ಆ ಮಹೇಶ್ವರನ ಲಿಂಗವಿರುವ ಪ್ರದೇಶದಲ್ಲಿ ನಿಂತು ಸೇವೆ ಮಾಡುತ್ತಿರುವುದರಿಂದ, ಈ ಶಿವಪೂಜಾ ಮತ್ತು ಶಿವಸೇವಾಕಾರಣವಾಗಿಯೇ ಈ ಮರವೂ ಮಹಾಮಹಿಮೆಯುಳ್ಳದ್ದೆಂಬ ಅಭಿಮಾನವು ನನಗುಂಟಾಗಿರುವುದು. ||೫೦||

ಇಂತಹ ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸಿ ಒಂದು ಬಾರಿ ನಮಸ್ಕಾರ ಮಾಡುವಿಕೆಯಿಂದಲೇ ಮುಕ್ತಿ ಹೊಂದಿರುವ ಈ ನಾರೀ ಮಣಿಯನ್ನು ನಿಯಮವಾಗಿ ಒಂದು ಸಲ ನೋಡುವುದರಿಂದಲೇ ಸಕಲ ಶುಭಪರಂಪರೆಗಳೂ ಉಂಟಾಗುವುವು. ||೫೧||

ಪ್ರದೋಷವೇಳೆಯಲ್ಲಿ ಶಿವಪೂಜೆಯಿಂದ ಸಂತುಷ್ಟಳಾಗಿ ಮನೋಹರಾಕೃತಿಯುಳ್ಳ ಧನ್ಯಳಾದ ಈ ನಾರೀಮಣಿಯನ್ನು ಅನೇಕ ಪುಣ್ಯವಿಶೇಷಗಳಿಂದ ಪದೇ ಪದೇ ದರ್ಶನಮಾಡಿದ ಈ ದಿನವೇ ಧನ್ಯವಾದುದು. ||೫೨||

ಎಲೌ ನಾರೀಮಣಿಯೇ, ಈಗ ಒಳ್ಳೆಯ ಪ್ರದೋಷಸಮಯವೆಂಬುದು ನಿನಗೆ

ಕಲ್ಯಾಣರೂಪಃ ಕರುಣಾನಿಧಾನಂ
ನಿಧಾನರೂಪೋ ಗಿರಿಜಾಸಹಾಯಃ।
ತುಷ್ಟೋಽಧುನಾ ಲಿಂಗಸಮರ್ಚನೇನ
ಸಾಯಂ ನ ಸಂದೇಹವಿಪರ್ಯಯೋ ಮೇ ॥೩೪॥

ಕಿಮಪ್ಯೇಕಂ ಲಿಂಗೇ ಯದಿ ಪತತಿ ಪತ್ರಂ ಕರಗತಂ
ನವಂ ವಾ ಶುಕ್ಲಂ ವಾ ಶಕಲಿತಮಪಿ ಲಿಂಗೇ ತದಖಿಲಂ।
ಅಘಂ ತಾವದ್ದೂರೇ ಸಕೃದಪಿ ಕರೋತೀತಿ ವಿದಿತಂ
ಪ್ರಸೂನಾದ್ಯೈರ್ಲಿಂಗಂ ಪುನರಿಹ ಕಿಮಭ್ಯರ್ಚಿತಮಿತಿ ॥೩೫॥

ಅಹೋ ಮಹಾದೇವಮುಮಾಸಹಾಯಂ
ದಯಾಸಮುದ್ರಂ ನ ಸ ವೇದ ವೇದಃ।
ನ ದೈವವೃಂದೈರಪಿ ತತ್ಸ್ವರೂಪಂ
ವಿಜ್ಞಾತಮೇವೇತಿ ಮತಿರ್ಮಮಾಭೂತ್ ॥೩೬॥

---

ಹೇಗೆ ತಿಳಿಯಿತು? ಇಂತಹ ಸಾಯಂಕಾಲ ಸಮಯದಲ್ಲಿ ಶಿವಸಾಯುಜ್ಯವನ್ನು ಕೊಡುವ ಈ ಲಿಂಗವನ್ನು ಸಾಂಗವಾಗಿ ಹೇಗೆ ಪೂಜೆಮಾಡಿದೆ? ॥೩೩॥

ಮಂಗಳಸ್ವರೂಪನೂ, ಕರುಣಾಳುವೂ, ಸಕಲ ಜಗತ್ತಿಗೂ ಆದಿಕಾರಣನೂ ಆದ ಆ ಗಿರಿಜಾರಮಣನು, ಸಾಯಂಕಾಲದಲ್ಲಿ ಮಾಡಿದ ಈ ಲಿಂಗಾರಾಧನೆಯಿಂದ ನಿಜವಾಗಿಯೂ ಸಂತುಷ್ಟನಾಗಿರುವನು. ಇದರಲ್ಲಿ ಯಾವ ಸಂದೇಹವೂ ಇಲ್ಲವೆಂಬುದಾಗಿ ನನಗೆ ತೋರುತ್ತಿರುವುದು. ॥೩೪॥

ಶುಭ್ರವಾದ ಬಣ್ಣವುಳ್ಳದ್ದೂ, ಚೂರಾಗಿರುವುದೂ ಆದ ಒಂದೇ ಒಂದು ಬಿಲ್ವಪತ್ರೆಯನ್ನು ಹಿಡಿದುಕೊಂಡಿರುವಾಗ ಆ ಶಿವಲಿಂಗದಮೇಲೆ ಬಿದ್ದರೂ ಅದು ಸಕಲ ಪಾಪಗಳನ್ನೂ ದೂರಮಾಡುವುದೆಂದು ಪ್ರಸಿದ್ಧವಾಗಿರುವಾಗ, ದಿವ್ಯ ಪರಿಮಳಯುಕ್ತವಾದ ಪುಷ್ಪವೇ ಮುಂತಾದ ಪೂಜಾಸಾಮಗ್ರಿಗಳಿಂದ ವಿಧಿವತ್ತಾಗಿ ಶಿವಲಿಂಗವನ್ನು ಪೂಜೆಮಾಡಿದರೆ ಅದರಿಂದುಂಟಾಗುವ ಪುಣ್ಯವನ್ನು ಎಷ್ಟೆಂದು ತಾನೇ ವರ್ಣಿಸಲಾದೀತು? ॥೩೫॥

ದಯಾಸಾಗರನೂ, ಉಮಾರಮಣನೂ ಆದ ಆ ಮಹಾದೇವನನ್ನು ಆ ವೇದವೇ ಸರಿಯಾಗಿ ತಿಳಿಯಲಾರದು. ದೇವತೆಗಳ ಸಮೂಹವೂ ಆ ಮಹಾಮಹಿಮ

ಇತ್ಯುಕ್ತ್ವಾ ಸ ಮಹಾಶೈವೋ ಮಹಾಪೂಜಾಸಮನ್ವಿತಃ ।
ಲಿಂಗಂ ದೃಷ್ಟ್ವಾ ಪ್ರಹರ್ಷೇಣ ಪ್ರಣತೋಽಪಿ ಮುಹುರ್ಮುಹುಃ ॥೫೭॥

ವಿಮಾನಂ ಪ್ರೇಷಯಾಮಾಸ ಗಣೈರ್ಭೃಂಗೀಶ್ವರಾದಿಭಿಃ
ದೃಷ್ಟ್ವಾ ತೇಷಾಂ ಸಮಾರಂಭಂ ಮಾರ್ಗೇ ನಾರಾಯಣಾದಯಃ ॥೫೮॥

ತೈಃ ಸಹೈವ ತದಾ ಸರ್ವೇ ತತ್ರ ತಾವತ್ಸಮಾಗತಾಃ ।
ತದ್ದೃಷ್ಟ್ವಾ ಲಿಂಗಮುತ್ಕೃಷ್ಟಂ ಪೂಜಿತಂ ಪ್ರಣತಾಃ ಸುರಾಃ ॥೫೯॥

ವಿಸ್ಮಯಂ ಪರಮಂ ಪ್ರಾಪುರ್ಗಣಾನೂಚುಸ್ತತಃ ಪರಂ ॥೬೦॥

---

ನಾದ ಪರಮೇಶ್ವರನ ಸ್ವರೂಪವನ್ನು ತಿಳಿದಿಲ್ಲ. ಮತ್ತು ತಿಳಿಯಲಾರದೆಂದೂ ನಾನು ಭಾವಿಸುವೆನು. ॥೫೬॥

ಶಿವಭಕ್ತಾಗ್ರೇಸರನಾದ ಆ ಮಹಾ ಶೈವನು, ಹೀಗೆ ಹೇಳಿ, ಅನಂತರ ಅತಿಶಯವಾದ ಪೂಜೆಯಿಂದ ಕೂಡಿರುವ ಆ ಶಿವಲಿಂಗವನ್ನು ನೋಡಿ, ಅತ್ಯಂತ ಸಂತೋಷದಿಂದ ಪದೇ ಪದೇ ಅದಕ್ಕೆ ನಮಸ್ಕಾರ ಮಾಡಿದನು. ॥೫೭॥

ಈ ಸಮಾಚಾರವು ಕೈಲಾಸಕ್ಕೆ ಹೇಗೋ ತಿಳಿದನಂತರ ಮಹೇಶ್ವರನು, ಕೂಡಲೇ ಭೃಂಗೀಶ್ವರ ಮುಂತಾದ ಶಿವಗಣಗಳೊಡನೆ ಆ ಸ್ಥಳಕ್ಕೆ ವಿಮಾನವನ್ನು ಕಳುಹಿಸಿಕೊಟ್ಟನು. ಭೃಂಗೀ ಮುಂತಾದ ಈ ಶಿವಗಣಗಳ ಸಮಾರಂಭವನ್ನು ನೋಡಿ ಮಾರ್ಗದಲ್ಲಿ ಸಂಚರಿಸುತ್ತಿದ್ದ ನಾರಾಯಣನೇ ಮುಂತಾದ ದೇವತೆಗಳು ತಾವೂ ಅವರೊಡನೆಯೇ ಕೂಡಲೇ ಕುತೂಹಲದಿಂದ ಆ ಶಿವಪೂಜೆ ನಡೆಯುತ್ತಿದ್ದ ಪ್ರದೇಶಕ್ಕೆ ಬಂದು, ಅತಿ ವಿಜೃಂಭಣೆಯಿಂದ ಪೂಜಿಸಲ್ಪಟ್ಟಿದ್ದ ಉತ್ಕೃಷ್ಟವಾದ ಆ ಶಿವಲಿಂಗವನ್ನು ನೋಡಿದರು. ಮತ್ತು ಆ ದೇವತೆಗಳೆಲ್ಲರೂ ನಮಸ್ಕಾರ ಮಾಡತೊಡಗಿದರು. ॥೫೮-೫೯॥

ಹೀಗೆ ನಮಸ್ಕರಿಸಿದನಂತರ ಆ ನಾರಾಯಣನೇ ಮೊದಲಾದ ದೇವತೆಗಳು ಅತ್ಯಾಶ್ಚರ್ಯಚಕಿತರಾಗಿ ಸಮಾಚಾರವೇನೆಂದು ಆ ಶಿವಗಣಗಳನ್ನು ಪ್ರಶ್ನೆ ಮಾಡಿದರು. ॥೬೦॥

॥ ದೇವಾ ಊಚುಃ ॥

ಅಹೋ ಗಣೋತ್ತಮಾಃ ಸರ್ವೇ ಯೂಯಂ ಶಂಕರಪೂಜಕಾಃ ।
ಅತೀತಾನಾಗತಜ್ಞಾನಸಂಪನ್ನಾಃ ಶಿವಪೂಜಯಾ ॥೬೧॥

ಕೇನೇದಮರ್ಚಿತಂ ಲಿಂಗಂ ತುಂಗಂ ಬಿಲ್ವಸಮಾಶ್ರಿತಂ ।
ತಸ್ಯ ಪುಣ್ಯಪ್ರಭಾವಸ್ಯ ನಾವಧಿರ್ದೃಶ್ಯತೇ ಪರಃ ॥೬೨॥

ಅಯಂ ಪ್ರದೋಷಸಮಯಃ ಕಾಮಧೇನುರಿವಾಗತಃ ।
ಏತತ್ಪೂಜಕಭಾಗ್ಯಾನಿ ಕ್ಷೀರಾಕಾರಾಣಿ ದಾಸ್ಯತಿ ॥೬೩॥

ಕಥಂ ಸಾ ಮಹತೀ ಪೂಜಾ ಕೃತಾ ಪುಣ್ಯಪ್ರವರ್ಧಿನೀ ।
ಏತತ್ಪೂಜಾವೀಕ್ಷಣೇನಾನಂದೋ ವರ್ಧತೇ ಮುಹುಃ ॥೬೪॥

ಪಾಟೀರಾದಿರಸಾನುಲಿಪ್ತಮಧುನಾ ಕಸ್ತೂರಿಕಾಕರ್ದಮೈಃ
ಕರ್ಪೂರಾಗರುಸಾರಸಾರಸುರಸೈರ್ವನ್ಯೈಸ್ಸುಗಂಧೈರ್ಯುತಂ ।

---

ಓ ಗಣಶ್ರೇಷ್ಠರಿರಾ, ಶಂಕರನ ಪೂಜಕರಾದ ನೀವೆಲ್ಲರೂ ಆ ಪರಶಿವನ ಪೂಜೆಯ ಮಹಿಮೆಯಿಂದ ಭೂತ ಭವಿಷ್ಯದ್ಜ್ಞಾನಸಂಪನ್ನರಾಗಿರುವಿರಿ. ॥೬೧॥

ಬಿಲ್ವಯುಕ್ತವಾದ ಉನ್ನತವಾದ ಈ ಶಿವಲಿಂಗವನ್ನು ಯಾರು ಪೂಜೆ ಮಾಡಿದರು ? ಅವರ ಪುಣ್ಯಪ್ರಭಾವಕ್ಕೆ ಎಲ್ಲೆಯೇ ಇಲ್ಲವೆಂದು ತೋರುತ್ತಿರುವುದು. ॥೬೨॥

ಕಾಮಧೇನುವಿನಂತೆ ಪ್ರಶಸ್ತವಾಗಿ ಬಂದಿರುವ ಈ ಪ್ರದೋಷಸಮಯವು ಈ ಸಮಯದಲ್ಲಿ ಶಿವಲಿಂಗವನ್ನು ಪೂಜಿಸಿರುವವರಿಗೆ ಭಾಗ್ಯಸಂಪತ್ತನ್ನು ಕ್ಷೀರಧಾರೆ ಯಂತೆ ಸಂತತವಾಗಿ ಕೊಡುವುದು. ॥೬೩॥

ಪುಣ್ಯವನ್ನು ಅಭಿವೃದ್ಧಿಪಡಿಸುವ ಈ ಮಹಾಪೂಜೆಯು ಹೇಗೆ ಮಾಡ ಲ್ಪಟ್ಟಿತು? ಈ ಪೂಜೆಯನ್ನು ನೋಡುವುದರಿಂದಲೇ ಪದೇ ಪದೇ ಆನಂದವು ವಿಶೇಷವಾಗಿ ಅಭಿವೃದ್ಧಿಯಾಗುತ್ತಿರುವುದಲ್ಲವೆ? ॥೬೪॥

ಚಂದನವೇ ಮುಂತಾದ ರಸ, ಕಸ್ತೂರಿಯ ಗಂಧ, ಕರ್ಪೂರ, ಅಗರು ಇವು ಗಳ ಸಾರವತ್ತಾದ ರಸಗಳು, ಮತ್ತು ಕಾಡಿನಲ್ಲಿ ಬೆಳೆದ ಇತರ ಸುಗಂಧ ದ್ರವ್ಯಗಳು ಇವುಗಳಿಂದ ಲೇಪನಮಾಡಲ್ಪಟ್ಟಿರುವ ಈ ಶಿವಲಿಂಗವು ಬಹಳ ಉತ್ಕೃಷ್ಟವೆನಿಸಿ

ಲಿಂಗಂ ಮಂಗಲದಾಯಕಂ ಖಲು ವನೇ ದೃಷ್ಟಂ ಪ್ರಕೃಷ್ಟಂ ಮುಹುಃ
ಕಷ್ಟಂ ನಾಶಯಿತುಂ ಪ್ರವೃತ್ತಮಧುನಾ ಪುಣ್ಯೈರಪಾರೈಃ ಖಲು ॥೬೫॥

ಪಾಟೀರಗಂಧೇನ ಕಿಲಾಧುನೇದಂ
ವನಂ ಸಗಂಧಂ ಭ್ರಮರಾವೃತಂ ಚ ।
ಏತಾದೃಶಂ ಚಂದನಮುದ್ಯ ಪತ್ರಂ
ಕೇನಾತ್ರ ಲಿಂಗೇನ ರಜನೀಮುಖೇಽಸ್ಮಿನ್ ॥೬೬॥

ಯೋ ಲಿಂಗೇ ರಜನೀಮುಖೇಽತಿಸುಭಗೋ ದದ್ಯಾತ್ಸ್ಮುದಾ ಚಂದನಂ
ಕಸ್ತೂರೀಸಹಿತಂ ಸ ಯಾತಿ ಸದನಂ ಗಂಧಂ ಪ್ರಸನ್ನಂ ಮುದಾ ।
ಯಾನಂ ರತ್ನಸಮೇತಮೇತ್ಯ ಸಮಹಾಭಾಗ್ಯೈರ್ಯುತಃ ಶಾಂಭವಂ
ತತ್ಪುಣ್ಯಾವಧಿರೇವ ನೇತಿ ವಿದಿತಂ ಮಾನ್ಯೈರಪಾರೈರಪಿ ॥೬೭॥

---

ಈ ವನಪ್ರದೇಶದಲ್ಲಿ ಗೋಚರಿಸಿತು. ಅಪಾರವಾದ ಪುಣ್ಯಪರಿಪಾಕದಿಂದ ಗೋಚರಿಸಿದ ಮಂಗಲಪ್ರದವಾದ ಈ ಶಿವಲಿಂಗವು ಸಮಸ್ತ ಕಷ್ಟಗಳನ್ನೂ ನಾಶಪಡಿಸಲು ಸಮರ್ಥವಾಗಿರುವುದೆಂದು ತಿಳಿಯುವೆನು. ॥೬೫॥

ಈ ಚಂದನಗಂಧದ ಸುವಾಸನೆಯು ಈ ಕಾಡನ್ನೆಲ್ಲಾ ಸುಗಂಧಯುಕ್ತವನ್ನಾಗಿ ಮಾಡಿದೆ. ದುಂಬಿಗಳು ಸುಗಂಧವಾಸನೆಗೆ ಸುತ್ತಲೂ ಮುತ್ತಿಕೊಂಡಿವೆ. ಇಂತಹ ದಿವ್ಯವಾದ ಚಂದನವನ್ನು ಈ ಪ್ರದೋಷಸಮಯದಲ್ಲಿ ಶಿವಲಿಂಗಕ್ಕೆ ಸಮರ್ಪಿಸಿರುವ ಮಹನೀಯರಾರು ? ॥೬೬॥

ಪ್ರದೋಷಕಾಲದಲ್ಲಿ ಕಸ್ತೂರಿಯಿಂದ ಯುಕ್ತವಾದ ಚಂದನಗಂಧವನ್ನು ಶಿವಲಿಂಗಕ್ಕೆ ಸಮರ್ಪಿಸುವ, ಅತಿಸೌಭಾಗ್ಯಶಾಲಿಯಾದ ಮಾನವನು ಸಂತೋಷದಿಂದ ರತ್ನಖಚಿತವಾದ ವಿಮಾನವನ್ನೇರಿ ಅನಂತವಾದ ಭಾಗ್ಯಗಳೊಡನೆ ಮನೋಹರವೂ, ಸುಗಂಧಭರಿತವೂ, ಪ್ರಸನ್ನವೂ ಆದ ದಿವ್ಯವಾದ ಶಿವಲೋಕವನ್ನೈದುವನು. ಅವನ ಪುಣ್ಯಕ್ಕೆ ಎಣೆಯೇ ಇಲ್ಲ. ಅಪಾರವಾದ ಅಳತೆಯ ಸಾಮಗ್ರಿಗಳಿಗೊಂದಕ್ಕೂ ಇವನ ಪುಣ್ಯದ ಪ್ರಮಾಣವಿಷ್ಟೇ ಎಂದು ಹೇಳಲಸಾಧ್ಯವಾಗಿರುವುದು. ॥೬೭॥

ಪುಷ್ಪೋಚ್ಚಯೋಽಯಂ ಕಥಮುದ್ಯ ದತ್ತಂ
ಲಿಂಗೇ ಮಹಾಪಾತಕನಾಶಕೋಽಯಂ ।
ನಾನಾವಿಧಾಪಾರನವಪ್ರಸೂನೈ
ರಭ್ಯರ್ಚಿತಂ ಲಿಂಗಮಿದಂ ಮನೋಜ್ಞಂ ॥೩೮॥

ಅಭಿನವಮೃಗಮದಪೂರೋ
ಹರತಿ ವಿಷಾದಕೋಟಿಕೋಟಾನಾಂ ।
ಸಮುದಯಮುಪಹರ್ತುಮೇವ ಭರ್ತು
ಗಿರಿವರರಾಜವಿಶೇಷಕನ್ಯಕಾಯಾಃ ॥೩೯॥

ಯತ್ರ ಕ್ವಾಪಿ ಸಮರ್ಚಿತಂ ಯದಿ ಮಹಾಲಿಂಗಂ ತದಾ ಸರ್ವಥಾ
ಸರ್ವಾಘಕ್ಷಯ ಏವ ಲಿಂಗಮಧುನಾ ಬಿಲ್ವಸ್ಯ ಮೂಲೇ ಯದಿ ।
ಪುಷ್ಪಾದ್ಯೈರಪಿ ಪೂಜಿತಂ ಯದಿ ತದಾ ಸಾಯಂ ಜಲೈರ್ವಾ ಫಲೈ
ರಿಷ್ಟಾಂಭೋಧಿಸಮರ್ಪಣಾಯ ಯತತೇ ಲಿಂಗಾಶ್ರಿತಃ ಶಂಕರಃ ॥೨೦॥

---

ಈ ಶಿವಲಿಂಗಕ್ಕೆ ಸಮರ್ಪಿಸಿರುವ ಹೂವುಗಳ ಸಮುದಾಯವು ಮಹಾಪಾತಕಗಳನ್ನೂ ನಾಶಪಡಿಸುವುದು. ನಾನಾವಿಧವಾದ ಅಪಾರವೂ ನೂತನವೂ ಆಗಿರುವ ಹೂವುಗಳಿಂದ ಪೂಜೆಮಾಡಲ್ಪಟ್ಟಿರುವ ಈ ಶಿವಲಿಂಗವು ಅತಿ ಮನೋಹರವಾಗಿ ತೋರುತ್ತಿರುವುದು. ॥೩೮॥

ಗಿರಿರಾಜಕನ್ಯಕಾರಮಣನಾದ ಪರಮೇಶ್ವರನಿಗೆ ಸಮರ್ಪಿಸಿರುವ ಕಸ್ತೂರಿಕಾಮೃಗಸಂಬಂಧಿಯಾದ ಗಂಧವು, ಸಮಸ್ತ ವಿಪತ್ತು ಮತ್ತು ದುಃಖಗಳೆಂಬುವುಗಳನ್ನು ಹೋಗಲಾಡಿಸಿ, ಪುನರ್ಜನ್ಮವೇ ಇಲ್ಲದಂತೆ ಮಾಡುವುದಕ್ಕೋಸ್ಕರವೋ ಎಂಬಂತೆ ಸರ್ವತ್ರ ತೋರುತ್ತಿರುವುದು. ॥೩೯॥

ಯಾವ ಸ್ಥಳದಲ್ಲಿಯಾಗಲೀ ಪರಶಿವನ ಮಹಾಲಿಂಗವನ್ನು ಪೂಜಿಸಿದರೆ ಅವಶ್ಯವಾಗಿ ಸಕಲ ಪಾಪಗಳೂ ನಾಶವಾಗುವುವು. ವಿಶೇಷವಾಗಿ ಬಿಲ್ವವೃಕ್ಷದ ಬುಡದಲ್ಲಿ ಪ್ರದೋಷಕಾಲದಲ್ಲಿ ಹೂವೇ ಮುಂತಾದ ಪೂಜಾಸಾಮಗ್ರಿಗಳು, ನೀರು, ಉತ್ತಮವಾದ ಹಣ್ಣು ಮುಂತಾದವುಗಳನ್ನು ಸಮರ್ಪಿಸಿ, ವಿಧಿಪೂರ್ವಕವಾಗಿ ಪೂಜೆ ಮಾಡುವುದರಿಂದ ಲಿಂಗವಾಸಿಯಾದ ಆ ಶಂಕರನು ತನ್ನ ಭಕ್ತರಿಗೆ ಸಮುದ್ರದಂತೆ

ಪುಣ್ಯಾನ್ಯಪ್ಯಮಿತಾನಿ ತಾವದಧುನಾ ತತ್ತತ್ಫಲಾಯೋನ್ಮುಖಾ
ನ್ಯೇವೇತಿ ಪ್ರಮಿತಿಃ ಕಿಲಾಭವದಿಯಂ ಪುಣ್ಯೈರಪಾರೈಃ ಖಲು ।
ಧನ್ಯಂ ವಸ್ಯಮಿದಂ ಶರೀರಮಧುನಾ ಧನ್ಯೇ ಚ ನೇತ್ರಾಂಬುಜೇ
ಲಿಂಗಂ ದೃಷ್ಟಮಭೂತಪೂರ್ವಮಸಕೃದ್ಬಿಲ್ವಾದಿಭಿಃ ಪೂಜಿತಂ ॥೭೧॥

ಇತಿ ದೇವವಚಃ ಶ್ರುತ್ವಾ ಭೃಂಗೀ ಮಂಗಲದಂ ವಚಃ ।
ಉವಾಚ ಪರಮಪ್ರೀತ್ಯಾ ತಾನ್ದೇವಾನ್ಶಿವಪೂಜಕಾನ್ ॥೭೨॥

॥ ಭೃಂಗ್ಯುವಾಚ ॥

ತದಿದಂ ಕೌತುಕಂ ದೃಷ್ಟಂ ಮಹಾದೇವವಿಚೇಷ್ಟಿತಂ ।
ಸ ಶಂಕರಃ ಸ್ವಭಾವೇನ ನಾಮ್ನಾಪಿ ಖಲು ಶಂಕರಃ ॥೭೩॥

---

ಅಗಾಧವೂ ಗಂಭೀರವೂ ಆದ ಇಷ್ಟು ಫಲಗಳನ್ನೇ ಕೊಡಲುದ್ಯುಕ್ತನಾಗುವನು. ॥೭೦॥

ಬಿಲ್ವಪತ್ರೆಯೇ ಮುಂತಾದ ಸಾಧನಗಳಿಂದ ಪೂಜಿಸಲ್ಪಟ್ಟಿರುವ, ಹಿಂದೆ ಯಾವಾಗಲೂ ನೋಡದೇ ಇರುವ ಈ ಶಿವಲಿಂಗವನ್ನು ದರ್ಶನಮಾಡಿದುದರಿಂದ ಈಗ ನನಗೆ ಅಪಾರವಾದ ಪುಣ್ಯಪ್ರಾಪ್ತಿಯುಂಟಾಗಿ ಅವೆಲ್ಲವೂ ತಮ್ಮ ಫಲಗಳನ್ನು ಕೊಡಲುದ್ಯುಕ್ತವಾಗಿರುವುವು. ಇಂತಹ ಭಾಗ್ಯವು ಅನಂತವಾದ ಪುಣ್ಯಮಾತ್ರ ದಿಂದಲೇ ಉಂಟಾಯಿತೆಂದು ತಿಳಿಯುವೆನು. ಈ ಕಾಡಿನಲ್ಲಿರುವ ನನ್ನ ಶರೀರವೂ, ತಾವರೆ ಹೂವಿಗೆ ಸಮಾನವಾದ ಈ ನೇತ್ರಗಳೂ ಇಂತಹ ಶಿವಲಿಂಗದರ್ಶನದಿಂದ ನಿಜವಾಗಿಯೂ ಧನ್ಯವೇ ಆಗಿರುವುವೆಂದು ಭಾವಿಸುವೆನು. ॥೭೧॥

ದೇವತೆಗಳ ಈ ಮಾತನ್ನು ಕೇಳಿ ಭೃಂಗಿಯು ಶಿವಪೂಜಕರಾದ ಆ ದೇವತೆ ಗಳನ್ನು ನೋಡಿ, ಪ್ರೀತಿಯಿಂದ ಅವರನ್ನು ಕುರಿತು ಮಂಗಳಕರವಾದ ವಚನಗಳನ್ನು ಹೀಗೆ ನುಡಿದನು. ॥೭೨॥

“ ಇವೆಲ್ಲವೂ ಆ ಮಹಾದೇವನ ಲೀಲೆ. ಅದರಿಂದಲೇ ಕುತೂಹಲವನ್ನುಂಟು ಮಾಡುತ್ತಿರುವುದು. ಮಹಾದೇವನು ಸ್ವಭಾವವಾಗಿಯೇ ಮಂಗಳಕರನಾಗಿರುವ ನಲ್ಲದೆ (ಶಂಕರನಾಗಿರುವನಲ್ಲದೆ) ಅವನ ಹೆಸರೂ ಶಂಕರನೆಂದೇ (ಸುಖಕರನೆಂದೇ) ಇರುವುದು. (ಅಂದರೆ ಆ ಮಹಾದೇವನು ತನ್ನ ಹೆಸರಿಗನುಗುಣವಾಗಿ ಎಲ್ಲರಿಗೂ ಆನಂದಪ್ರದನಾಗಿರುವನೆಂದು ಭಾವವು) ॥೭೩॥

ದೀನಬಂಧುರಿತಿ ಜ್ಞಾತಃ ಕರುಣಾಸಾಗರೋ ಹರಃ ।
ಏತದಾನಯನಾಯಾದ್ಯ ಪ್ರೇಷಯಾಮಾಸ ಮಾಂ ಶಿವಃ ॥೨೪॥

ಇಯಂ ತು ಜಾರಿಣೀ ಸೋಽಪಿ ಜಾರಜೋ ರತಿತತ್ಪರಃ ।
ಚಕಾರ ವಾಸಮತ್ರಾಪಿ ನಿಜನೇ ಸವನೇ ವನೇ ॥೨೫॥

ಆನೀತಂ ಸ್ವೋಪಭೋಗಾರ್ಥಂ ಚಂದನಾದಿಕಮುತ್ತಮಂ ।
ಏತದಾನಯನೇ ಕೋಽಪಿ ವಿಲಂಬಃ ಸಮಭೂತ್ಖಲು ॥೨೬॥

ಏತಸ್ಯಾಸ್ತದ್ವಿಲಂಬೇನ ರೋಷಃ ಖಲು ಮಹಾನಭೂತ್ ।
ತೇನ ರೋಷೇಣ ಸಾ ದುಷ್ಟಾ ಭರ್ತ್ಸಯಾಮಾಸ ತಂ ಪತಿಂ ॥೨೭॥

ತತಃ ಪರಂ ದೀಪಮಾಲಾ ತದಾನೀತಾವಲೋಕನಂ ।
ಕರ್ತುಂ ವಿರಚಿತಾ ರಮ್ಯಾ ಸ್ಥೂಲಕರ್ಪೂರದೀಪಿಕಾ ॥೨೮॥

---

ದೀನರೆನಿಸಿರುವವರಿಗೆಲ್ಲಾ ಬಂಧುವೂ, ಕರುಣಾಸಾಗರನೂ ಆದ ಈ ಮಹಾದೇವನು ಈ ನಾರಿಯನ್ನು ಕರೆದುತರುವುದಕ್ಕಾಗಿ ನನ್ನನ್ನು ಈಗ ಇಲ್ಲಿಗೆ ಕಳುಹಿಸಿಕೊಟ್ಟಿರುವನು. ॥೨೪॥

ಈ ನಾರಿಯು ಕುಲಟೆಯು. (ವ್ಯಭಿಚಾರಿಣಿಯು) ಈತನು ಯಾವಾಗಲೂ ಸಂಭೋಗಾಭಿಲಾಷೆಯುಳ್ಳವನು ಮತ್ತು ವ್ಯಭಿಚಾರದಿಂದ ಹುಟ್ಟಿದವನು. ಇವರಿಬ್ಬರೂ ನಿರ್ಜನವೂ, ಮನೋಹರವೂ ಆಗಿರುವ ಈ ಕಾಡಿನಲ್ಲಿ ಕೇವಲ ರತಿಕ್ರೀಡೆಗೋಸ್ಕರ ವಾಸಮಾಡುತ್ತಿದ್ದರು. ॥೨೫॥

ಇವರ ಉಪಭೋಗಕ್ಕೋಸ್ಕರ ಉತ್ತಮವಾದ ಚಂದನಾದಿ ಸಾಮಗ್ರಿಗಳು ಇಲ್ಲಿಗೆ ಈ ದಾಸಿಯಿಂದ ತರಲ್ಪಟ್ಟವು. ಈ ಉಪಭೋಗಸಾಮಗ್ರಿಗಳನ್ನು ಚೇಟಿಯು ತರುವುದು ಸ್ವಲ್ಪ ವಿಳಂಬವಾಯಿತು. ॥೨೬॥

ಹೀಗೆ ಸ್ವಲ್ಪ ತಡವಾದುದರಿಂದ ಕುಪಿತಳಾದ ಈ ದುಷ್ಟಸ್ತ್ರೀಯು ತನ್ನ ಪತಿಯನ್ನು ಇದಕ್ಕೋಸ್ಕರವಾಗಿ ನಿಂದಿಸಿದಳು. ॥೨೭॥

ಇಷ್ಟಾದಮೇಲೆ, ತಂದಿರುವ ಸಾಮಗ್ರಿಗಳನ್ನು ಸರಿಯಾಗಿ ನೋಡುವುದಕ್ಕೋಸ್ಕರ ದಪ್ಪ ಕರ್ಪೂರದ ಗೆಡ್ಡೆಗಳಿಂದ ನಿರ್ಮಿತವಾದ ದೀಪ ಪಂಕ್ತಿಗಳು ತರಲ್ಪಟ್ಟವು. ॥೨೮॥

ತತಃ ಸರ್ವಂ ವಿಲೋಕ್ಯೇಯಂ ಚಂದನಾದಿಕಮುತ್ತಮಂ ।
ಸುರತ್ನಕಲಶಾನೀತಂ ಜಲಮಪ್ಯತಿಶೀತಲಂ ॥೭೯॥

ತಲ್ಲಿಂಗೇ ಪಾತಯಾಮಾಸ ದುಗ್ಧಮಾದೌ ತತಃ ಪರಂ ।
ದಧ್ಯಾಜ್ಯಮಧುಮಿಷ್ಟಂ ಚ ಶರ್ಕರಾ ಪಾತಿತಾ ತತಃ ॥೮೦॥

ಪಾತಿತಂ ಚ ಜಲಂ ಪಶ್ಚಾಚ್ಚಂದನಂ ಚ ಮನೋಹರಂ ।
ಕರ್ಪೂರರೇಣಾನ್ವಿತಂ ರಮ್ಯಂ ತಥಾ ಮೃಗಮದಾನ್ವಿತಂ ॥೮೧॥

ಪಾತಿತಾನ್ಯಪಿ ಪುಷ್ಪಾಣಿ ದಿವ್ಯಾನಿ ವಿವಿಧಾನ್ಯಪಿ ।
ದುಕೂಲಾನಿ ಮನೋಜ್ಞಾನಿ ಸುರತ್ನಾಭರಣಾನ್ಯಪಿ ॥೮೨॥

ಪುಷ್ಪಶಯ್ಯಾಪಿ ದತ್ತೇಯಂ ಶಿವಲಿಂಗಸ್ಯ ಮಸ್ತಕೇ ।
ದಿವ್ಯಾನ್ನಾನ್ನಾನಿ ದತ್ತಾನಿ ಲಿಂಗಮೂಲೇ ತಯಾ ತತಃ ॥೮೩॥

---

ಅನಂತರ, ಉತ್ತಮವಾದ ಚಂದನವೇ ಮೊದಲಾದ ಆ ಪದಾರ್ಥಗಳನ್ನೂ, ಒಳ್ಳೆಯ ರತ್ನಖಚಿತವಾದ ಕಲಶದಲ್ಲಿ ತಂದಿರುವ ಶೀತಲವಾದ ನೀರನ್ನೂ ನೋಡಿ ಈ ನಾರಿಯು ಅವು ಸ್ವಲ್ಪವೆಂಬ ಭಾವನೆಯಿಂದ; ॥೭೯॥

ಅಲ್ಲಿಯೇ ಪಕ್ಕದಲ್ಲಿದ್ದ ಶಿವಲಿಂಗದ ಮೇಲೆ ಮೊದಲು ಹಾಲನ್ನೂ, ಅನಂತರ ಮೊಸರು. ತುಪ್ಪ, ಜೇನುತುಪ್ಪ, ಮತ್ತು ಸಕ್ಕರೇ ಇವುಗಳನ್ನೂ (ತನಗಾಗಿ ತಂದಿದ್ದ ಇವುಗಳನ್ನು) ಕೋಪದಿಂದ ಎಸೆದಳು. ॥೮೦॥

ಆ ಮೇಲೆ ತಂಪಾದ ನೀರನ್ನು ಆ ಲಿಂಗದ ಮೇಲೆ ಎರಚಿ, ಕರ್ಪೂರ, ಮತ್ತು ಕಸ್ತೂರಿ ಇವುಗಳಿಂದ ಬೆರೆದ ಉತ್ತಮವಾದ ಚಂದನವನ್ನೂ ಆ ಶಿವಲಿಂಗದ ಮೇಲೆ ಬಿಸುಟುಬಿಟ್ಟಳು. ॥೮೧॥

ನಾನಾವಿಧವೂ ದಿವ್ಯವೂ ಆದ ಪುಷ್ಪಗಳನ್ನೂ, ಮನೋಹರವಾದ ರೇಷ್ಮೆಯ ವಸ್ತ್ರಗಳನ್ನೂ, ಸುಂದರವಾದ ರತ್ನಾಭರಣಗಳನ್ನೂ ಲಿಂಗದ ಮೇಲೆ ಎಸೆದಳು. ॥೮೨॥

ತಮ್ಮ ಉಪಭೋಗಕ್ಕೋಸ್ಕರ ತಂದಿದ್ದ ಪುಷ್ಪಶಯ್ಯೆಯನ್ನೂ ಕೋಪದಿಂದ ಇವಳು ಆ ಶಿವಲಿಂಗದ ತಲೆಯಮೇಲೆ ಹಾಕಿದಳು. ಅಲ್ಲದೇ ನಾನಾವಿಧವಾದ ದಿವ್ಯಾನ್ನಗಳನ್ನೂ ಉದಾಸೀನತೆಯಿಂದ ಆ ಲಿಂಗದ ಬುಡದಲ್ಲಿಯೇ ಬಿಟ್ಟುಬಿಟ್ಟಳು. ।೮೩॥

ರೋಷೇಣ ಪತಿತಾ ಸೇಯಂ ಪ್ರಣತೇವ ವಿಭಾತಿ ಸಾ ।
ಭಕ್ತ್ಯಾ ನ ಲಿಂಗಮನಯಾ ಪೂಜಿತಂ ರಜನೀಮುಖೇ ॥೮೪॥

ಮಹೇಶ್ವರಃ ಕೃಪಾಸಿಂಧುಸ್ತುಷ್ಟೋಽನೇನಾರ್ಪಿತೇನ ಚ ।
ಚಂದನಾದಿಸಮೂಹೇನ ಲಿಂಗೇ ತುಂಗೇ ಮನೋಹರೇ ॥೮೫॥

ಪವಿತ್ರೋ ಯದಿ ಭೂತ್ಯಾದ್ಯೈರ್ಭಕ್ತ್ಯಾ ಲಿಂಗಸಮರ್ಚನಂ ।
ಕರೋತಿ ಬಿಲ್ವಪತ್ರಾದ್ಯೈಸ್ತದೇಶಃ ಸ್ವಪದಪ್ರದಃ ॥೮೬॥

ಶಿವಾಭಿಮಾನಸ್ಥಲಮೇಕಮೇವ
ಲಿಂಗಂ ತದುತ್ತುಂಗಮನಾರ್ಮದಂ ವಾ ।
ತಸ್ಮಾನ್ಮಾರ್ಮದಂ ವಾ ಶಿವಲಿಂಗಮಾತ್ರೇ
ಗೃಹ್ಣಾತಿ ದತ್ತಂ ಸ ಶಿವೋ ಜಲಂ ವಾ ॥೮೭॥

---

ಇಷ್ಟೆಲ್ಲಾ ಆದಮೇಲೆ ಇವಳು ಇನ್ನೂ ಕೋಪದಿಂದಲೇ ಕೂಡಿದ್ದುದರಿಂದ ಹಾಗೆಯೇ ನೆಲದಮೇಲೆ ಬಿದ್ದುಬಿಟ್ಟಳು. ಇದ್ದರಿಂದ ಶಿವನಿಗೆ ನಮಸ್ಕಾರಮಾಡಿದಂತಾಯಿತು. ಈ ನಾರಿಯು ಅಂತಹ ಪ್ರದೋಷಸಮಯದಲ್ಲಿ ಭಕ್ತಿಯಿಂದೆಂದಿಗೂ ಶಿವಲಿಂಗವನ್ನು ಪೂಜಿಸಿರಲಿಲ್ಲ. ॥೮೪॥

ದಯಾಸಮುದ್ರನಾದ ಮಹೇಶ್ವರನು, ಉನ್ನತವೂ, ಮನೋಹರವೂ ಆದ ತನ್ನ ಲಿಂಗದಲ್ಲಿ ಕೇವಲ ದುಷ್ಟಭಾವನೆಯಿಂದ ಸಮರ್ಪಣೆಮಾಡಿದ ಚಂದನಾದಿ ಸಮೂಹಗಳಿಂದಲೇ ಸಂತುಷ್ಟನಾಗಿರುವನು. ॥೮೫॥

ಮಾನವನು ಪರಿಶುದ್ಧನಾಗಿ ನಾನಾವಿಧವಾದ ಐಶ್ವರ್ಯಗಳಿಂದಲೂ, ಕೋಮಲವಾದ ಬಿಲ್ವಪತ್ರೆ ಮುಂತಾದ ಸಾಧನಗಳಿಂದಲೂ ಭಕ್ತಿಪುರಸ್ಸರವಾಗಿ ಲಿಂಗವನ್ನು ಪೂಜಿಸಿದರೆ ಆಗ ಆ ಮಹಾದೇವನು ಅವನಿಗೆ ತನ್ನ ಪದವಿಯನ್ನೇ ಕೊಡುವನು. ॥೮೬॥

ಉನ್ನತವಾದ ಶಿವಲಿಂಗವೊಂದೇ ಆ ಪರಶಿವನಿಗೆ ಅಭಿಮಾನಭೂತವಾಗಿರುವ ಸ್ಥಳವು. ಆ ಲಿಂಗವು ನರ್ಮದಾನದಿಯ ಸಂಬಂಧವಾಗಿರಲಿ ಅಥವ ಇಲ್ಲದಿರಲಿ ಅದರಲ್ಲಿ ಸಮರ್ಪಿಸಿದ ಕೇವಲ ಜಲವನ್ನು ಸಹಾ ಮಹೇಶ್ವರನು ಪ್ರೀತಿಯಿಂದ ಸ್ವೀಕರಿಸುವನು. ॥೮೭॥

ಕಮಲಾನ್ಯಮಲಾನಿ ಬಿಲ್ವಮಾಲಾಂ
ನವದೂರ್ವಾಂಕುರಸಂಕುಲಾಂ ಮಹೇಶಃ ।
ಶಿವಲಿಂಗನಿವೇದನೇನ ಗೃಹ್ಣಾತ್ಯ
ಮಿತಾಘೌಘನಿವಾರಣಾಯ ಶಂಭುಃ ॥೮೮॥

ಭಕ್ತ್ಯಾ ವಿನಾಪಿ ಕಿಲ ಪತ್ತನವಪ್ರಸೂನ
ಬಿಲ್ವೀದಲಾನಿ ಸಕೃದಾದರತೋ ಗೃಹೀತ್ವಾ ।
ಮುಕ್ತಿಂ ದದಾತಿ ಸುಬಹೂನಿ ಸುಖಾನಿ ದತ್ವಾ
ಲಿಂಗಾರ್ಚಕಾಯ ಗಿರಿಶಃ ಶಿವಲಿಂಗಸಂಗಃ ॥೮೯॥

ರೋಷೇಣ ದೋಷವಶಗೇನ ವಿಮೋಹಿತೇನ
ಲಿಂಗೇ ನಿಪಾತಿತಮನರ್ಘ್ಯಸುಘಾಪಹಾರೀ ।
ಗೃಹ್ಣಾತಿ ತಾವದುದಕಂ ಮುಖಮೇವ ಲಿಂಗಂ
ಶಂಗಸ್ಯ ತಾವದಿತಿ ಮೇ ಮತಿರಿತ್ಯವೈಮಿ ॥೯೦॥

---

ಪರಿಶುದ್ಧವಾದ ಕಮಲದ ಹೂಗಳನ್ನೂ, ಬಿಲ್ವಪತ್ರೆಗಳ ಮಾಲೆಯನ್ನೂ, ಹೊಸದಾಗಿರುವ ಚಿಗುರು ಗರಿಕೆಗಳ ಸಮೂಹವನ್ನೂ ಸಹ ಮಹೇಶ್ವರನ ಶಿವಲಿಂಗಕ್ಕೆ ನಿವೇದನಮಾಡಿದರೆ, ಅದನ್ನು ಸ್ವೀಕರಿಸಿ ಶಂಕರನು ಮಾನವರ ಅಪರಿಮಿತವಾದ ಪಾಪರಾಶಿಗಳನ್ನೂ ನಿವಾರಣೆಮಾಡುವನು. ॥೮೮॥

ಭಕ್ತಿಯನ್ನೇ ತೋರ್ಪಡಿಸದೇ ಯಾವಾಗಲಾದರೂ ಒಂದು ಬಾರಿ ತನಗೆ ಸಮರ್ಪಿಸಿದ ಹೊಸ ಹೂಗಳು ಮತ್ತು ಬಿಲ್ವದಳಗಳನ್ನು ಕೂಡ ಆ ಮಹಾದೇವನು ಆದರದಿಂದ ಸ್ವೀಕರಿಸಿ, ಅವನಿಗೆ ಮುಕ್ತಿಯನ್ನು ಕರುಣಿಸುವನು. ಅಲ್ಲದೇ ಯಾವಾಗಲೂ ಆ ಲಿಂಗದಲ್ಲೇ ನೆಲಸಿರುವ ಶಿವನು ತನ್ನ ಲಿಂಗಾರ್ಚನೆಮಾಡುವ ಭಕ್ತನಿಗೆ ನಾನಾವಿಧವಾದ ಐಹಿಕಸುಖಗಳನ್ನು ಅನುಗ್ರಹಿಸುವನು. ॥೮೯॥

ಕೋಪದಿಂದಲಾಗಲೀ, ಪಿತ್ತಾದಿ ದೋಷಗಳ ದೆಸೆಯಿಂದಾಗಲೀ, ಅಜ್ಞಾನದಿಂದಾಗಲೀ, ಲಿಂಗದ ಮೇಲೆ ಎಸೆದ ವಸ್ತುವು ಅಮೂಲ್ಯವೆನಿಸಿ, ಸಕಲಪಾಪಗಳನ್ನೂ ಪರಿಹಾರಮಾಡುವುದು. ಶಿವಲಿಂಗವು ಶಿವನ ಮುಖವಾದುದರಿಂದ ಆ ಲಿಂಗಕ್ಕೆ ಸಮರ್ಪಿಸಿದ ನೀರನ್ನು ನಾವು ಆ ಪರಶಿವನಿಗೇ ಸಮರ್ಪಿಸಿದಂತಾಗುವುದೆಂದು ನಾನು ತಿಳಿಯುವೆನು. ॥೯೦॥

ಶಂಗಾರಾಧನಸಾಧನಾನಿ ವಿವಿಧಾನ್ಯಾನೀಯ ಭಕ್ತ್ಯಾ ಮುದಾ
ಯೋಽಲಿಂಗಾರ್ಚನತತ್ಪರಃ ಶಿವರತಸ್ತಸ್ಮೈ ಮಹೇಶಃ ಸ್ವಯಂ ।
ದಾತುಂ ವಾಂಛತಿ ವಾಂಛಿತಾರ್ಥಮಸಕೃನ್ನಾದೇಯಮಸ್ಯಾಸ್ತ್ಯತ
ಸ್ತತ್ಸರ್ವಂ ಖಲು ದುರ್ಲಭಂ ಚ ಲಭತೇ ವಿಶ್ವೇಶ್ವರಾನುಗ್ರಹಾತ್ ॥೯೧॥

ಫಲಮಪಿ ಸಜಲಂ ವಾ ಶಂಕರೇ ಭಕ್ತಿಯುಕ್ತ್ಯೈ
ರ್ನಿಹಿತಮಮಲಲಿಂಗೇ ಖಂಡಬಿಲ್ವೀದಲಂ ವಾ ।
ಗಿರಿವರಸುತಯಾಯಂ ಸಾಕಮೇವಾಶು ಗೃಹ್ಣಾ
ತ್ಯಪಿ ಪುನರಪಿ ಮೂರ್ಧ್ನಾ ತದ್ವಿಧತ್ತೇ ಮಹೇಶಃ ॥೯೨॥

ಸ್ನೇಹಂ ಕರೋತಿ ಗಿರಿಶೋ ನಿಜಪಾದಪದ್ಮ
ಪೂಜಾರತೇಽತಿವಿರತೇ ವಿಷಯೇಷು ಬಾಲೇ ।
ವೃದ್ಧೇಽಪಿ ವಾ ಸ ಖಲು ಷಣ್ಮುಖತುಲ್ಯಮೇವ
ತಂ ತಾವದಾಶು ಮನುತೇ ತನುತೇ ಸುಖಾನಿ ॥೯೩॥

---

ನಾನಾವಿಧವಾದ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಸುಖಸ್ವರೂಪನಾದ ಆ ಮಹಾದೇವನ ಲಿಂಗವನ್ನು ಸಂತೋಷದಿಂದ ಪೂಜೆಮಾಡುವುದರಲ್ಲಿ ತತ್ಪರನಾಗಿರುವ ಶಿವಭಕ್ತನಿಗೆ ಆ ಮಹೇಶ್ವರನು ಬೇಕಾದದ್ದನ್ನೆಲ್ಲಾ ಪದೇ ಪದೇ ಕರುಣಿಸುವನು. ಈ ಪ್ರಪಂಚದಲ್ಲಿ ಮಹೇಶ್ವರನಿಂದ ಕೊಡಲು ಸಾಧ್ಯವಾಗದ ಪದಾರ್ಥವೇ ಇಲ್ಲವಾದುದರಿಂದಲೂ, ಎಲ್ಲವೂ ಅದರಿಂದ ಸುಲಭವಾಗಿರುವುದರಿಂದಲೂ, ಶಿವಪೂಜಾನಿರತನಾದವನು ಆ ವಿಶ್ವೇಶ್ವರನ ಅನುಗ್ರಹದಿಂದ ತನಗೆ ಬೇಕಾದ ವರಗಳನ್ನೆಲ್ಲಾ ಅನಾಯಾಸವಾಗಿಯೇ ಹೊಂದುವನು. ॥೯೧॥

ಪರಿಶುದ್ಧವಾದ ಶಿವಲಿಂಗದಲ್ಲಿ ಭಕ್ತಿಪುರಸ್ಸರವಾಗಿ ಸಮರ್ಪಿಸಿದ ಪದಾರ್ಥವು ಹಣ್ಣಾಗಲೀ, ನೀರಾಗಲೀ, ಅಥವಾ ತುಂಡಾದ ಬಿಲ್ವಪತ್ರೆಯಾಗಲೀ ಎಲ್ಲವನ್ನೂ ಆ ಶಂಕರನು ತನ್ನ ಪ್ರೇಯಸಿಯಾದ ಗಿರಿಜೆಯೊಡನೆ ಪ್ರೀತಿಯಿಂದ ಸ್ವೀಕರಿಸಿ, ಕೂಡಲೇ ಅವುಗಳನ್ನು ತನ್ನ ತಲೆಯಲ್ಲಿ ಧಾರಣೆಮಾಡುತ್ತಾನೆ. ॥೯೨॥

ಕೈಲಾಸಪರ್ವತವಾಸಿಯಾದ ಪರಮೇಶ್ವರನು ತನ್ನ ಪಾದಕಮಲಸೇವಾ ತತ್ಪರರಾದವರಲ್ಲಿ ಯಾವಾಗಲೂ ಸ್ನೇಹದಿಂದ ವರ್ತಿಸುವನು. ಅವರು, ಅತ್ಯಂತ ವಿರಕ್ತರಾಗಲೀ, ಬಾಲಕರಾಗಿರಲೀ, ಅಥವಾ ವೃದ್ಧರೇ ಆಗಿರಲಿ, ಅವರೆಲ್ಲರಲ್ಲಿಯೂ

ಭಜನೀಯೋ ಯದಿ ಮುದಾ ತದಾ ಮೃತ್ಯುಂಜಯಃ ಪರಂ ।
ಭಜನೀಯಸ್ತತ್ಸಮಾನೋ ದಯಾಲುರ್ನ ಶ್ರುತಃ ಶ್ರುತೌ ॥೯೪॥

ಆನಂದಯತ್ಯಸಕೃದಾದರತಃ ಪಿತೇವ
ದತ್ವಾ ಸುಖಾನಿ ವಿವಿಧಾನಿ ವಿಪದ್ವಿನಾಶಂ ।
ಕೃತ್ವಾ ವಿಮುಕ್ತಿಮಪಿ ತಾಂ ಸ ದದಾತಿ ಭಕ್ತ್ಯಾ
ಸಂಪೂಜಿತಃ ಸಕೃದುಮಾರಮಣೋಽತ್ರ ಲಿಂಗೇ ॥೯೫॥

ತಸ್ಯಾದೇಯಂ ನಾಸ್ತಿ ಲೋಕೇಷು ನೂನಂ
ಭಕ್ತ್ಯಾ ತಾವದ್ಬಿಲ್ವಮಾದಾಯ ಮುಕ್ತಿಂ ।
ದತ್ವಾ ಪಶ್ಯತ್ಯಾದರೇಣಾಸುರಕ್ತಂ
ಲಿಂಗಾರ್ಚಾಯಾಂ ಲಿಂಗಪೂಜಾಪ್ರಿಯೋಽಯಂ ॥೯೬॥

---

ತನ್ನ ಪ್ರಿಯಕುಮಾರನಾದ ಷಣ್ಮುಖನಿಗೆ ಸಮಾನವಾದ ಭಾವನೆಯನ್ನಿಟ್ಟು ಎಲ್ಲರಿಗೂ ಸದಾ ಸೌಖ್ಯವನ್ನುಂಟುಮಾಡುತ್ತಾನೆ. ॥೯೩॥

ಸಂತೋಷದಿಂದ ಸೇವೆಮಾಡಬೇಕಾದರೆ ನಿಜವಾಗಿ ಮೃತ್ಯುಂಜಯನೆನಿಸಿದ ಮಹಾದೇವನೊಬ್ಬನೇ ಉತ್ಕೃಷ್ಟನಾದವನೆಂದು ತಿಳಿಯಬೇಕು. ಅವನಿಗೆ ಸಮಾನರಾದ ದಯಾಳುಗಳಾರೂ ವೇದದಲ್ಲಿ ಪ್ರತಿಪಾದಿತರಾಗಿಲ್ಲವಾದ ಕಾರಣ ಆ ಮಹೇಶನನ್ನೇ ಭಜನೆಮಾಡಬೇಕು. ॥೯೪॥

ಅನೇಕ ಬಾರಿ ತಂದೆಯಂತೆ ಆದರಪೂರ್ವಕವಾಗಿ ತನ್ನ ಭಕ್ತರಿಗೆ ಆನಂದವನ್ನುಂಟುಮಾಡುವನು. ನಾನಾವಿಧವಾದ ಸುಖವನ್ನುಂಟುಮಾಡಿ ಅವರಿಗೊದಗುವ ವಿಪತ್ತುಗಳನ್ನೆಲ್ಲಾ ಪರಿಹಾರಮಾಡುತ್ತಾನೆ. ಅಲ್ಲದೇ ಒಂದುಬಾರಿ ಭಕ್ತಿಯಿಂದ ಶಿವಲಿಂಗಪೂಜೆ ಮಾಡುವವರಿಗೆ ಉಮಾರಮಣನಾದ ಮಹೇಶ್ವರನು ಮೋಕ್ಷವನ್ನೇ ಕೊಟ್ಟುಬಿಡುವನು. ॥೯೫॥

ಆ ಮಹಾದೇವನು ತನ್ನ ಭಕ್ತರಿಗೆ ಮೂರು ಲೋಕಗಳಲ್ಲಿಯೂ ಕೊಡಲು ಅಸಾಧ್ಯವಾದ ಪದಾರ್ಥವನ್ನೇ ಕಾಣನು. ಆದುದರಿಂದ ಮಹಾದೇವನು ತನಗೆ ಭಕ್ತಿಯಿಂದ ಬಿಲ್ವಪತ್ರೆಗಳನ್ನು ಸಮರ್ಪಣೆಮಾಡುವವರಿಗೆ ಮುಕ್ತಿಯನ್ನೇ ಅನುಗ್ರಹಿಸುವನು. ಅಲ್ಲದೇ ಶಿವಲಿಂಗಪೂಜಾಪ್ರಿಯನಾದ ಮಹೇಶ್ವರನು ತನ್ನ ಭಕ್ತನಿಗೆ

ಲಿಂಗೇ ಸನ್ನಿಹಿತೋ ಯಥಾ ಸ ಗಿರಿಶಸ್ತದ್ವನ್ನ ಕುತ್ರಾಪ್ಯತೋ
ಲಿಂಗಾರಾಧನಮೇವ ಸಾಧನಮಿದಂ ಸಾಕ್ಷಾನ್ನಿಧಾನಂ ಪರಂ।
ತತ್ತಾವದ್ವಿನತೋಽತಿಕಾಮ್ಯಮಸಕೃನ್ಮುಕ್ತಿಂ ಪ್ರಯಚ್ಛತ್ಯತ
ಸ್ತಸ್ಮಾದಪ್ಯಧಿಕಂ ಕಿಮಸ್ತಿ ಭುವನೇ ತನ್ನೈವ ಜಾನೀಮಹೇ ॥೯೭॥

ಲಿಂಗಾದೇವ ಸಮಸ್ತಮೇತದಧುನಾ ಜಾತಂ ಜಗನ್ಮಂಡಲಂ
ಯೇನಾಖಂಡಲಕೋಟಯೋಽಪಿ ಜನಿತಾಃ ಪೂರ್ವಂ ನಿಧೀನಾಂ ಗಣಾಃ।
ಕಿಂ ನಾರಾಯಣಕೋಟಯೋ ನ ಜನಿತಾಸ್ತಸ್ಮಾತ್ತದತ್ಯುತ್ತಮಂ
ಶಾಂಗಂ ಲಿಂಗಮುಮಾಸಹಾಯನಿಲಯಂ ಮನ್ಯೇ ತದಭ್ಯರ್ಚ್ಯತೇ ॥೯೮॥

ಮೃಷ್ಟಂ ತದೇಕಂ ಶಿವಲಿಂಗರೂಪಂ
ನಿಧಾನಮೀಶಾನನಿಧಾನದಾನೇ।

---

ಬೇಕಾದ ವರಗಳನ್ನು ಕೊಟ್ಟು ಯಾವಾಗಲೂ ಲಿಂಗಪೂಜಾಚರಣೆಯಲ್ಲಿಯೇ ಅನುರಕ್ತನಾಗಿರುವ ತನ್ನ ಭಕ್ತನನ್ನು ಆದರಪೂರ್ವಕವಾಗಿ ನೋಡುವನು. ॥೯೬॥

ಗಿರಿನಿವಾಸಿಯಾದ ಆ ಪರಮೇಶ್ವರನು ಯಾವಾಗಲೂ ಶಿವಲಿಂಗದಲ್ಲಿ ವಿಶೇಷವಾಗಿ ಸಂನಿಹಿತವಾಗಿರುವಂತೆ ಮತ್ತೆಲ್ಲಿಯೂ ಇರುವುದಿಲ್ಲವಾದುದರಿಂದ ಆ ಲಿಂಗಾರಾಧನೆಯೇ ಮಾನವನಿಗೆ ಉತ್ಕೃಷ್ಟವೂ, ಸಕಲ ಸುಖಕಾರಣವೂ ಎನಿಸಿದೆ. ಅಂತಹ ಶಿವಲಿಂಗವನ್ನು ನಮಸ್ಕಾರಮಾಡುವುದರಿಂದ, ಎಲ್ಲರೂ ವಿಶೇಷವಾಗಿ ಅಪೇಕ್ಷಿಸುವ ಮೋಕ್ಷವನ್ನೇ ಆ ಮಹೇಶ್ವರನು ಹೊಂದುವನು. ಇದಕ್ಕಿಂತಲೂ ಉತ್ಕೃಷ್ಟವಾದ ಮತ್ತು ಅಧಿಕವಾದ ಅಪೇಕ್ಷೆಯು ಪ್ರಪಂಚದಲ್ಲಿ ಮತ್ತಾವುದಿದೆಯೋ ನನಗೆ ತಿಳಿಯದು. ॥೯೭॥

ಸಮಸ್ತ ಜಗನ್ಮಂಡಲವೂ, ಈ ಶಿವಲಿಂಗದಿಂದಲೇ ಉಂಟಾಗಿರುವುದು. ಹಿಂದೆ ಕೋಟ್ಯಂತರ ಮಂದಿ ಇಂದ್ರರೂ, ಅನೇಕ ನಿಧಿಗಳ ಸಮೂಹವೂ, ಅನೇಕ ಕೋಟಿ ನಾರಾಯಣಾದಿದೇವತೆಗಳೂ ಈ ಲಿಂಗದಿಂದಲೇ ಉದ್ಭವಿಸಿರುವರು. ಆದುದರಿಂದ ಅತ್ಯುತ್ತಮವಾದ ಮತ್ತು ಉಮಾಕಾಂತನಿಗೆ ಆಶ್ರಯವಾದ ಶಿವಲಿಂಗವನ್ನೇ ಪೂಜಿಸಬೇಕೆಂದು ನಾನು ತಿಳಿದಿರುವೆನು. ॥೯೮॥

ಪವಿತ್ರವಾದ ಮತ್ತು ಪರಿಶುದ್ಧವಾದ ಆ ಶಿವಲಿಂಗವೊಂದೇ ಐಶ್ವರ್ಯರೂಪವಾದ ನಿಧಿಯನ್ನು ಕೊಡುವುದರಲ್ಲಿ ಸಮರ್ಥವೂ ಮೂಲಕಾರಣವೂ ಆಗಿರುವುದೆಂಬ

ಸಮರ್ಥನೋನೇತಿ ಮತಿರ್ಮಮಾಸೀ
ದತೋಽಪಿ ಲಿಂಗಾರ್ಚನಮಿಷ್ಟಹೇತುಃ ॥೯೯॥

ಶಾಂಗಂ ಲಿಂಗಮನುಸ್ಮರಂ ಛಿವಶಿವೇತ್ಯಭ್ಯುಚ್ಚರನ್ ಸಂಚರ
ನ್ಕಾಶೀನಾಥಪುರೇ ವಿಭೂತಿಕವಚೋ ರುದ್ರಾಕ್ಷಭೂಷಾಶ್ರಯಃ ।
ಶ್ರೀವೀರೇಶ್ವರಮರ್ಚಯನ್ನಭಿನವೈರ್ಬಿಲ್ವೀದಲೈಃ ಕೋಮಲೈಃ
ಇಂದ್ರಸ್ಯಾಪಿ ಚಕಾರ ನೈವ ಗಣನಾಂ ಹಾರಃ ಪ್ರವೀರಃ ಖಲು ॥೧೦೦॥

ಹಾರಾಣಾಮತಿದುರ್ಲಭಂ ನ ಭುವನೇ ದೃಷ್ಟಂ ಪ್ರಕೃಷ್ಟಂ ಧನಂ
ಹಾರತ್ವೇ ಸತಿ ದುರ್ಲಭೇ ತದಿತರತ್ಕಿಂ ದುರ್ಲಭಂ ವಾ ಭವೇತ್ ।
ಲಬ್ಧೋ ಯೇನ ವಿಶೇಷತಸ್ಸುರಮಣಿಸ್ತಸ್ಯಾಪಿ ಕಿಂ ದುರ್ಲಭಃ
ಕಾಚಸ್ತಸ್ಯ ನ ಕಾಚಖಂಡವಿಷಯೇ ನಾಂಛಾಪಿ ತುಚ್ಛಾ ಕಥಂ ॥೧೦೧॥

---

ಬುದ್ಧಿಯು ನನಗುಂಟಾಗಿರುವುದು. ಹಾಗಾಗಲು ಆ ಶಿವಲಿಂಗಪೂಜೆಯಲ್ಲಿ ನನಗೆ ಅತಿಶಯವಾದ ಭಕ್ತಿಯಿರುವುದೇ ಕಾರಣ. ॥೯೯॥

ಶಿವಲಿಂಗವನ್ನೇ ಯಾವಾಗಲೂ ಸ್ಮರಣೆಮಾಡುತ್ತಾ, 'ಶಿವ ಶಿವ' ಎಂಬ ಆ ಮಹೇಶನ ನಾಮುಗಳನ್ನೇ ಸದಾ ಉಚ್ಚರಿಸುತ್ತಾ, ಕಾಶೀಪಟ್ಟಣದಲ್ಲಿ ವಿಭೂತಿಯೆಂಬ ಕವಚವನ್ನೂ, ರುದ್ರಾಕ್ಷಮಾಲೆಯೆಂಬ ಆಭರಣಗಳನ್ನೂ ಧರಿಸಿದವನಾಗಿ, ನೂತನವೂ ಕೋಮಲವೂ ಆದ ಬಿಲ್ವದಳಗಳಿಂದ ಆ ವೀರೇಶ್ವರನನ್ನು ಪೂಜೆ ಮಾಡುವ ವೀರನಾದ ಶಿವಭಕ್ತನು ದೇವಾಧೀಶನಾದ ಇಂದ್ರನನ್ನೂ ಗಣನೆಗೆ ತರುವುದಿಲ್ಲ. ॥೧೦೦॥

ಪರಮೇಶ್ವರನ ಭಕ್ತರಾದವರಿಗೆ ಪ್ರಪಂಚದಲ್ಲಿ ಉತ್ಕೃಷ್ಟವೆನಿಸಿರುವ ದ್ರವ್ಯವೇ ಮುಂತಾದ ಯಾವ ಪದಾರ್ಥಗಳೂ ದುರ್ಲಭವಲ್ಲ. ಆದರೆ ಅಂತಹ ಹಾರತ್ವವು ಮಾತ್ರ (ಅಂದರೆ ಶಿವನ ಭಕ್ತನಾಗಿ ಸದಾ ತತ್ಪೂಜಾಪರಾಯಣನಾಗಿರುವಿಕೆಯು ಮಾತ್ರ) ದುರ್ಲಭವು. ಅಂತಹ ದುರ್ಲಭವಸ್ತುವೇ ದೊರೆತಿರುವಾಗ ಅವನಿಗೆ ಮತ್ತಾವುದು ತಾನೇ ದುರ್ಲಭವಾದೀತು ? ಮತ್ತೊಬ್ಬರಿಗೆ ವಿಶೇಷಪ್ರಯತ್ನದಿಂದಲೂ ದೊರೆಯಲಸಾಧ್ಯವಾದ ಚಿಂತಾಮಣಿಯೆಂಬ ರತ್ನವೂ ಅವನಿಗೆ ಸುಲಭವಾಗಿ ದೊರೆಯುವುದು. ಅಥವಾ ಅವನಿಗೆ ಅದು ಗಾಜುಬೇಕಾದರೂ ಆಗಬಹುದು. ಶಿವಭಕ್ತನಿಗೆ ಚಿಂತಾಮಣಿಯಲ್ಲಿಯೂ ಗಾಜಿನ ಚೂರಿನಲ್ಲಿಯೂ ಯಾವ ವಿಧವಾದ

ಹಾರತ್ವಂ ಸುರಭೂರುಹಃ ಸುರಮಣಿಸ್ತತ್ಕಾಮಧೇನೋಃ ಪರಾ
ತಸ್ಮಾದಪ್ಯಧಿಕಂ ನ ವಸ್ತುವಿಷಯೇ ದೃಷ್ಟಂ ಶ್ರುತಂ ವಾ ಸುರಾಃ।
ತತ್ಪ್ರಾಪ್ಯಾಶು ಮಹೇಶಪೂಜನರತಃ ಪ್ರಾಪ್ನೋತಿ ಸಾಕ್ಷಾಚ್ಛಿವಂ
ಸಂಪ್ರಾಪ್ಯಾಶು ಸುಖಾಂಬುಧೀನಪಿ ತತೋ ಹಾರಃ ಸ ಲೋಕೋತ್ತರಃ
॥೧೦೨॥

ಇತ್ಯುಕ್ತಂ ತದ್ವಚಃ ಶ್ರುತ್ವಾ ತೇ ಸರ್ವೇ ತ್ರಿದಶಾಸ್ತದಾ।
ವಿಸ್ಮಯಂ ಪರಮಂ ಚಕ್ರುರ್ದೃಷ್ಟ್ವಾ ತಾಂ ಪತಿತಾಮಪಿ ॥೧೦೩॥

ಪಶ್ಚಾದ್ಭೃಂಗೀ ಸಮಾಗತ್ಯ ಭೂತಿಪೂತಾಂ ಚಕಾರ ತಾಂ।
ತತಸ್ತಾಮಾಹ ಸುಭಗೇ ಧನ್ಯಾಸಿ ವರವರ್ಣಿನೀ ॥೧೦೪॥

---

ತಾರತಮ್ಯಭಾವನೆಯೇ ಇಲ್ಲದಿರುವಾಗ ಗಾಜಿನ ವಿಷಯದಲ್ಲಿ ತುಚ್ಛವಾದ ಭಾವನೆಯು ಹೇಗೆತಾನೆ ಅವನಿಗೆ ಉಂಟಾದೀತು? ॥೧೦೧॥

ಓ ದೇವತೆಗಳಿರಾ! ಕಲ್ಪವೃಕ್ಷ, ಚಿಂತಾಮಣಿ ಮತ್ತು ಕಾಮಧೇನು ಇವುಗಳಿಗಿಂತಲೂ ಉತ್ಕೃಷ್ಟವಾದ ಬೇರೆ ಪದಾರ್ಥಗಳನ್ನೇನಾದರೂ ನೀವು ಕೇಳಿರುವಿರಾ! ಅಥವಾ ನೋಡಿರುವಿರಾ! ಆದರೆ ಪರಶಿವಭಕ್ತನು ಇವೆಲ್ಲಕ್ಕಿಂತಲೂ ಉತ್ತಮನೆನಿಸುವನು. ಮಹೇಶ್ವರನ ಪೂಜೆಯಲ್ಲಿಯೇ ತತ್ಪರನಾದ ಶಿವಭಕ್ತನು ಈ ಹಾರತ್ವವನ್ನು ಹೊಂದಿ ಕೂಡಲೇ ಶಿವನ ಸಾಯುಜ್ಯವನ್ನೇ ಪಡೆಯುವನು. ಅನಂತರ ಆತನು ಲೋಕೋತ್ತರನೆನಿಸಿ ಸುಖವೆಂಬ ಸಮುದ್ರಗಳನ್ನೇ ಹೊಂದುವನು. ಅಂದರೆ ಅಪಾರವಾದ ಬ್ರಹ್ಮಾನಂದವನ್ನು ಪಡೆಯುವನೆಂದು ತಿಳಿಯಬೇಕು." ॥೧೦೨॥

ಭೃಂಗಿಯು ಹೇಳಿದ ಈ ಮಾತನ್ನು ಕೇಳಿ ನಾರಾಯಣನೇ ಮೊದಲಾದ ದೇವತೆಗಳೆಲ್ಲರೂ, ಪಾಪಿಷ್ಠೆಯಾಗಿದ್ದ ಆ ಸ್ತ್ರೀಯನ್ನು ನೋಡಿ ಆಶ್ಚರ್ಯಚಕಿತರಾದರು. ॥೧೦೩॥

ಅನಂತರ ಭೃಂಗಿಯು ಆ ನಾರಿಯ ಸಮೀಪಕ್ಕೆ ಬಂದು, ಅವಳನ್ನು ಭಸ್ಮಧಾರಣೆಯಿಂದ ಪರಿಶುದ್ಧಳನ್ನಾಗಿ ಮಾಡಿ, ಎಲೌ ಸೌಭಾಗ್ಯವತಿಯೇ! ಉತ್ತಮಜಾತಿಯ ಸ್ತ್ರೀಯಾದ ನೀನೇ ಧನ್ಯಳು; ॥೧೦೪॥

ಏಹಿ ರತ್ನವಿಮಾನಂ ತೇ ಸಮಾನೀತಮಿಹಾಧುನಾ ।
ಪ್ರೇಷಿತಂ ಗಿರಿಶೇನೇದಂ ವಿಚಿತ್ರಮತಿಸುಂದರಂ ॥೧೦೫॥

ಇತ್ಯುಕ್ತಂ ತದ್ವಚಸ್ತ್ರಾವತ್ತಯಾ ನ ಶ್ರುತಮೇವ ಸಾ ।
ಗಾಢನಿದ್ರಾಸಮಾಕ್ರಾಂತಾ ಪಶ್ಯಂತೀ ಸ್ವಪ್ನಮುತ್ತಮಂ ॥೧೦೬॥

ಸ್ವಪ್ನೇ ದದರ್ಶ ಸಾ ಲಿಂಗಮುತ್ತುಂಗಗಿರಿಸನ್ನಿಭಂ ।
ದೃಷ್ಟ್ವಾ ತತ್ಪೂಜನೋದ್ಯುಕ್ತಾ ಸಾ ತಾವದ್ದಿವ್ಯಸಾಧನೈಃ ॥೧೦೭॥

ಪಂಚಾಮೃತಪ್ರವಾಹಾದ್ಯೈರಭಿಷಿಚ್ಯ ಮಹೇಶ್ವರಂ ।
ಪೂಜಯಾಮಾಸ ಬಿಲ್ವಾದ್ಯೈಃ ಪಲ್ಲವೈರತಿಕೋಮಲೈಃ ॥೧೦೮॥

ಪುಷ್ಪೋಚ್ಚಯೈರಪಾರೈಶ್ಚ ಪಾಟೀರರಸಕರ್ದಮೈಃ ।
ದಿವ್ಯೈರಾಭರಣೈರ್ದಿವ್ಯದುಕೂಲೈರಪಿ ಭಕ್ತಿತಃ ॥೧೦೯॥

---

ಮಹಾದೇವನು ನಿನಗೋಸ್ಕರ ಈ ರತ್ನವಿಮಾನವನ್ನು ಕಳುಹಿಸಿಕೊಟ್ಟಿರುವನು. ಅತಿ ವಿಚಿತ್ರವೂ ಸರ್ವಾಂಗಸುಂದರವೂ ಆಗಿರುವ ಈ ವಿಮಾನವನ್ನೇರುವಳಾಗು ಎಂದು ನುಡಿದನು. ॥೧೦೫॥

ಗಾಢವಾದ ನಿದ್ರೆಯಲ್ಲಿ ಮಗ್ನಳಾಗಿ ಉತ್ತಮವಾದ ಸ್ವಪ್ನವನ್ನು ಕಾಣುತ್ತಾ ಮಲಗಿದ್ದ ಆ ನಾರಿಗೆ, ಈ ಭೃಂಗಿಯು ಆಡಿದ ಮಾತುಗಳು ಕೇಳಿಸಲೇ ಇಲ್ಲ. ॥೧೦೬॥

ಅವಳು ಕನಸಿನಲ್ಲಿ ಪರ್ವತಕ್ಕೆ ಸಮಾನವಾಗಿರುವ ಉತ್ತಮವಾದ ಶಿವಲಿಂಗವನ್ನು ನೋಡಿ, ನಾನಾವಿಧವಾದ ಪೂಜಾಸಾಧನಗಳಿಂದ ಆ ಶಿವಲಿಂಗವನ್ನು ಪೂಜಿಸುವುದರಲ್ಲಿ ಉದ್ಯುಕ್ತಳಾಗಿದ್ದಳು. ॥೧೦೭॥

ಪಂಚಾಮೃತಗಳ ಪ್ರವಾಹವು ಹರಿಯುವಂತೆ ಮಹೇಶ್ವರನಿಗೆ ಅಭಿಷೇಕ ಮಾಡಿ ಬಿಲ್ವಪತ್ರೆಯೇ ಮುಂತಾದ ಅತಿ ಕೋಮಲವೆನಿಸಿದ ಚಿಗುರುಗಳಿಂದ ಆ ಶಿವಲಿಂಗವನ್ನು ಸ್ವಪ್ನದಲ್ಲಿ ಪೂಜಿಸಿದಳು. ॥೧೦೮॥

ಅನಂತವಾದ ಪುಷ್ಪಸಮೂಹದಿಂದಲೂ, ನಾನಾವಿಧವಾದ ಚಂದನಗಂಧ, ದಿವ್ಯವಾದ ಆಭರಣ, ಮನೋಹರವೂ ದಿವ್ಯವೂ ಆಗಿರುವ ರೇಷ್ಮೆಯ ವಸ್ತ್ರಗಳು ಇವುಗಳನ್ನು ಭಕ್ತಿಯಿಂದ ಆ ಮಹಾದೇವನಿಗೆ ಸಮರ್ಪಿಸಿದಳು. ॥೧೦೯॥

ಧೂಪರಾಶಿಸಮುತ್ಪನ್ನಧೂಮರಾಜಿಭಿರುತ್ತಮೈಃ ।
ದೀಪಮಾಲಾಸಮೂಹೈಶ್ಚ ನೈವೇದ್ಯಗಿರಿಭಿರ್ಮುಹುಃ ॥೧೧೦॥

ಚಂದ್ರಮಂಡಲಸಂಕಾಶೈರ್ವಿತಾನೈರಪಿ ಕೋಟಿಶಃ ।
ರತ್ನಛತ್ರೈರಪಾರೈಶ್ಚ ಧ್ವಜೈರಪ್ಯುರುಚಾಮರೈಃ ॥೧೧೧॥

ನಾಟ್ಯೈರ್ಗಾನೈಶ್ಚ ವಿವಿಧೈಃ ಪೂಜಯಂತೀ ಸದಾಶಿವಂ ।
ದದರ್ಶ ಶಾಂಭವಂ ಸ್ವಪ್ನೇ ಶಿವಾರ್ಚನಸಮುದ್ಯತಂ ॥೧೧೨॥

ಸ್ವಪ್ನೇ ತಮಾಹ ಭಗವನ್ಕುತೋಽದ್ಯ ಸಮುಪಾಗತಂ ।
ಗಂತವ್ಯಂ ತೇ ಕ್ವ ವಾ ವಿದ್ವನ್ನಿಹ ಸಂವಸ ಸಂವಸ ॥೧೧೩॥

ಸಮರ್ಚಯ ಮಹಾದೇವಂ ಸಾಧನೈರ್ವಿವಿಧೈರಪಿ ।
ಅಪೇಕ್ಷಿತಂ ಚ ದೇಯಂ ತೇ ಮಯಾ ಧನಮನುತ್ತಮಂ ॥೧೧೪॥

---

ಅಪರಿಮಿತವಾದ ಧೂಪಪಂಕ್ತಿಗಳಿಂದ ಉತ್ತಮವಾದ ಧೂಮರಾಜಿಯು ಹೊರಡುತ್ತಿರುವಂತೆ ಧೂಪಗಳನ್ನೂ, ನಾನಾವಿಧವಾದ ದೀಪಗಳ ಮಾಲೆಗಳ ಆಕಾರ ದಿಂದ ಹೊತ್ತಿಸಿಡುವ ದೀಪಪಂಕ್ತಿಗಳನ್ನೂ, ಬೆಟ್ಟಗಳಿಗೆ ಸಮಾನವಾದ ನೈವೇದ್ಯ ಪದಾರ್ಥಗಳನ್ನೂ ಆ ಶಿವಲಿಂಗಕ್ಕೆ ಸಮರ್ಪಿಸಿದಳು. ||೧೧೦||

ಚಂದ್ರಮಂಡಲದಂತೆ ಪ್ರಕಾಶಮಾನವಾಗಿರುವ ಅನೇಕ ಮೇಲ್ಕಟ್ಟುಗಳನ್ನೂ, ಅಪಾರವಾದ ರತ್ನಛತ್ರಿಗಳು, ಧ್ವಜ ಮತ್ತು ದೊಡ್ಡ ಚಾಮರಗಳು ಇವುಗಳನ್ನೂ ಸಹ ಪರಮೇಶ್ವರನಿಗೆ ಸಮರ್ಪಿಸಿದಳು. ||೧೧೧||

ಬಗೆಬಗೆಯಾದ ನರ್ತನಗಳಿಂದಲೂ, ನಾನಾವಿಧವಾದ ಗಾನಗಳಿಂದಲೂ ಸದಾಶಿವನನ್ನು ಪೂಜೆಮಾಡುತ್ತಾ ಇದ್ದಹಾಗೆಯೇ, ತನ್ನ ಆದೇ ಸ್ವಪ್ನದಲ್ಲಿ ಶಿವಪೂಜಾತತ್ಪರನಾಗಿದ್ದ ಶಾಂಭವಶ್ರೇಷ್ಠನೊಬ್ಬನನ್ನು ಕಂಡಳು. ||೧೧೨||

ಹಾಗೆಯೇ ಸ್ವಪ್ನದಲ್ಲಿ ಆ ಶಾಂಭವನನ್ನು ಕುರಿತು, "ಭಗವನ್, ತಾವು ಎಲ್ಲಿಂದ ಬರೋಣವಾಯಿತು? ಈಗ ಮುಂದೆ ತಮ್ಮ ಪ್ರಯಾಣ ಯಾವ ಕಡೆಗೆ? ವಿದ್ವಾಂಸರೇ, ಇಲ್ಲಿಯೇ ಕೆಲವು ಕಾಲ ವಾಸಮಾಡಿರಿ. ||೧೧೩||

ಸ್ವಾಮಿ, ಇಲ್ಲಿಯೇ ಇದ್ದು ನಾನಾವಿಧವಾದ ಸಲಕರಣೆಗಳಿಂದ ಈ ಮಹೇಶ್ವರ ನನ್ನು ಪೂಜೆಮಾಡಿರಿ. ತಮಗೆ ಬೇಕಾಗುವ ಶ್ರೇಷ್ಠವಾದ ಪೂಜಾದ್ರವ್ಯವೇ ಮುಂತಾದ ಸಲಕರಣೆಗಳನ್ನೆಲ್ಲಾ ನಾನು ಒದಗಿಸಿಕೊಡುವೆನು. ||೧೧೪||

ಉತ್ತಮೋಽಸಿ ಸಭಾಗ್ಯೋಽಸಿ ಶಾಂಭವೋಽಸಿ ದ್ವಿಜೋತ್ತಮ ।
ಶಾಂಭವಾಯ ಧನಂ ದೇಯಂ ಮಯಾ ತಾವದುಪಾರ್ಜಿತಂ ॥೧೧೫॥

ದಾನಪಾತ್ರಂ ಮಯಾ ದೃಷ್ಟಮದ್ಯೈವ ಸುಕೃತೈರಿಹ ।
ತ್ವತ್ತುಲ್ಯದಾನಪಾತ್ರಂ ಚ ನ ದೃಷ್ಟಂ ಭುವನತ್ರಯೇ ॥೧೧೬॥

ಹಾರಾ ಮನೋಹರಾಸ್ಸಂತಿ ಕೇಯೂರಾದೀನಿ ಸಂತಿ ಮೇ ।
ದಿವ್ಯಾನ್ಯಾಭರಣಾನ್ಯೇವ ರತ್ನಾನಿ ವಿವಿಧಾನ್ಯಪಿ ॥೧೧೭॥

ಗೋಧನಾನಿ ವಿಚಿತ್ರಾಣಿ ಸಂತಿ ಮೇ ರತ್ನಮಂದಿರಂ ।
ತೇಷ್ವೇಕಂ ಗೃಹಾಣ ತ್ವಂ ಕೃತಾರ್ಥಾಸ್ಮಿ ಯತೋಽಧುನಾ ॥೧೧೮॥

ಕಿಂ ಚೋಪದೇಶಂ ಕುರು ಮೇ ಶೈವಮಂತ್ರಸ್ಯ ಕೇವಲಂ ।
ವಿಚಿತ್ರಾಃ ಸಂತು ಮಂತ್ರಾಸ್ತೇ ತೇಷಾಂ ಕೃತ್ಯಂ ನ ಮೇ ಮುನೇ ॥೧೧೯॥

---

ಎಲೈ ಬ್ರಾಹ್ಮಣೋತ್ತಮನೇ, ನೀವು ಉತ್ತಮಕುಲಸಂಭೂತರು, ಭಾಗ್ಯಶಾಲಿಗಳು ಮತ್ತು ಶಂಭುವಿನ ಭಕ್ತಾಗ್ರೇಸರರೂ ಸಹ ಆಗಿರುವಿರಿ. ನಾನು ಸಂಪಾದಿಸಿರುವ ಹಣವನ್ನು ಆ ಈಶ್ವರಭಕ್ತರಿಗೆ ಅವಶ್ಯವಾಗಿ ದಾನಮಾಡಬೇಕು. ॥೧೧೫॥

ಪುಣ್ಯವಿಶೇಷಮಹಿಮೆಯ ಫಲದಿಂದ ಈಗ ನನಗೆ ದಾನಮಾಡಲು ಯೋಗ್ಯವಾದ ಪಾತ್ರವು ದೊರೆತಿದೆ. ಈ ಮೂರು ಲೋಕದಲ್ಲಿಯೂ ನಿನಗೆ ಸಮಾನನಾದ ಸತ್ಪಾತ್ರನು ಎಲ್ಲಿಯೂ ಇಲ್ಲವೆಂದೇ ನನ್ನ ಭಾವನೆ. ॥೧೧೬॥

ಮನೋಹರವಾದ ಮತ್ತು ರತ್ನಗಳಿಂದ ಖಚಿತವಾದ ದಿವ್ಯ ಹಾರಗಳೂ, ಅಮೂಲ್ಯವಾದ ಆಭರಣ, ಮತ್ತು ಉತ್ತಮವಾದ ರತ್ನಗಳೂ ನನ್ನಲ್ಲಿ ವಿವಿಧವಾಗಿವೆ. ॥೧೧೭॥

ವಿಚಿತ್ರವಾದ ಗೋಧನಗಳೂ ಮತ್ತು ರತ್ನಮಂದಿರವೂ ಸಹ ನನ್ನಲ್ಲಿವೆ. ಸ್ವಾಮಿ, ಇವುಗಳೆಲ್ಲಾ ಹಾಗಿರಲಿ, ನಾನು ಹೇಳಿದ ಈ ಪದಾರ್ಥಗಳಲ್ಲಿ ಯಾವುದಾದರೂ ಒಂದನ್ನು ಈಗ ಸ್ವೀಕರಿಸಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕು. ॥೧೧೮॥

ಓ ಮುನಿಯೇ! ಅಲ್ಲದೇ ನನಗೆ ಕೇವಲ ಶೈವಮಂತ್ರವನ್ನುಪದೇಶಿಸು. ಸ್ವಾಮಿ! ನಿನಗೆ ಅನೇಕ ವಿಚಿತ್ರವಾದ ಇನ್ನೂ ಬೇರೆ ಮಂತ್ರಗಳು ಬರಬಹುದು. ಆದರೆ ಅವುಗಳಿಂದ ನನಗೆ ಪ್ರಯೋಜನವಿಲ್ಲ. ಕೇವಲ ಆ ಶಿವಪಂಚಾಕ್ಷರೀ ಮಂತ್ರವನ್ನು ಮಾತ್ರ ಉಪದೇಶಮಾಡುವನಾಗು. ॥೧೧೯॥

ಶಿವಪಂಚಾಕ್ಷರೇಣೈವ ಪೂಜನೀಯಃ ಸದಾಶಿವಃ ।
ಸ ಏವ ರೋಚತೇ ಮಹ್ಯಂ ದೇಯಃ ಪುಣ್ಯದಿನೇ ಶುಭೇ ॥೧೨೦॥

ಸರ್ವಪಾಪಹರತ್ವೇನ ಶ್ರುತಃ ಪಂಚಾಕ್ಷರೋ ಮಯಾ ।
ಅತಸ್ತಮೇವ ಮೇ ದೇಹಿ ಸರ್ವಪಾಪವಿನಾಶಕಂ ॥೧೨೧॥

ಮಂತ್ರರಾಜತಯಾ ಜ್ಞಾತಃ ಶಿವಪಂಚಾಕ್ಷರಃ ಪರಃ ।
ತಮೇವೋಪದಿಶಾಽದ್ಯಾಶು ಪುಣ್ಯಕಾಲೋಽಯಮದ್ಭುತಃ ॥೧೨೨॥

ಪಂಚಾಕ್ಷರೋಽಪಿ ದ್ವಿವಿಧಃ ಸಂಹಿತೋಪನಿಷದ್ಗತಃ ।
ತತ್ರ ಯೋ ರೋಚತೇ ಮಂತ್ರಃ ಸ ದೇಯಸ್ತಾವದಾದರಾತ್॥೧೨೩॥

---

ಶಿವಪಂಚಾಕ್ಷರಮಂತ್ರದಿಂದಲೇ ಆ ಸದಾಶಿವನನ್ನು ಪೂಜಿಸಬೇಕು. ಅದೇ ನನಗೆ ತುಂಬಾ ರುಚಿಸುವುದರಿಂದ ಶುಭಕರವಾದ ಪುಣ್ಯದಿವಸವನ್ನು ನೋಡಿ, ಆ ಮಂತ್ರವನ್ನು ನನಗೆ ಉಪದೇಶಿಸು. ॥೧೨೦॥

ಈ ಶಿವಪಂಚಾಕ್ಷರಮಂತ್ರವು ಸಕಲ ಪಾಪಗಳನ್ನೂ ನಾಶಮಾಡುವುದೆಂದು ಪ್ರಸಿದ್ಧವಾಗಿರುವುದು. ಆದುದರಿಂದ ಆ ಸಕಲ ಪಾಪನಾಶಕವಾದ ಶಿವಪಂಚಾಕ್ಷರ ಮಂತ್ರವನ್ನೇ ನನಗೆ ಉಪದೇಶಮಾಡು. ॥೧೨೧॥

ಶ್ರೇಷ್ಠವಾದ ಈ ಶಿವಪಂಚಾಕ್ಷರಮಹಾಮಂತ್ರವು ಮಂತ್ರರಾಜನೆಂದು ಪ್ರಖ್ಯಾತಿಹೊಂದಿದೆಯಾದ್ದರಿಂದ, ಎಲೈ ಸ್ವಾಮಿಯೇ! ಅದ್ಭುತವಾದ ಈ ಪುಣ್ಯಕಾಲ ದಲ್ಲಿ ನನಗೆ ಅದನ್ನೇ ಉಪದೇಶಮಾಡು. ॥೧೨೨॥

ಈ ಶಿವಪಂಚಾಕ್ಷರಮಹಾಮಂತ್ರವು, ಸಂಹಿತೆ, ಮತ್ತು ಉಪನಿಷತ್ತು (ವೇದ ಮತ್ತು ವೇದಾಂತ) ಇವುಗಳೆರಡರಲ್ಲಿಯೂ ಪಠಿತವಾಗಿರುವುದು. ಇವುಗಳಲ್ಲಿ ನಿಮಗೆ ಸಂಪೂರ್ಣ ಅಭಿರುಚಿಯಿರುವುದು. ಇಂತಹ ಮಂತ್ರವನ್ನು ನನಗೆ ತಾವು ಆದರದಿಂದ ಉಪದೇಶಮಾಡಬೇಕು." ಎಂಬುದಾಗಿ ಸ್ವಪ್ನದಲ್ಲಿ ಆ ನಾರಿಯು ಶಾಂಭವನನ್ನು ಪ್ರಾರ್ಥಿಸಿದಳು. ॥೧೨೩॥

ಇತಿ ತದ್ವಚನಂ ಶ್ರುತ್ವಾ ಸೋಽಪಿ ಶಾಂಭವಪುಂಗವಃ ।
ತಾಮುವಾಚ ವಿರಕ್ತೋಽಸೌ ಸರ್ವಸಾಧನನಿಸ್ಪೃಹಃ ॥೧೨೪॥

॥ ಶಾಂಭವ ಉವಾಚ ॥

ಕಿಂ ಧನೈರ್ನಶ್ವರೈರ್ಭದ್ರೇ ಕಿಮೇತೈರ್ಮಣಿಭೂಷಣೈಃ ।
ನ ರತ್ನಮಂದಿರೇಣಾಪಿ ಕೃತ್ಯಮಸ್ತಿ ಮಮಾಧುನಾ ॥೧೨೫॥

ನ ಚಿತ್ರವಸನೈಃ ಕೃತ್ಯಂ ನ್ಯಾ ಗೋಮಂಡಲೈರಪಿ ।
ಕಿಂ ಚ ಭೂಮಂಡಲೇಚ್ಛಾಪಿ ನ ಮೇ ಭವತಿ ಸರ್ವಥಾ ॥೧೨೬॥

ನ ಸ್ವರ್ಗಲೋಕವಾಂಛಾ ಮೇ ಸತ್ಯಲೋಕೋ ನ ವಾಂಛಿತಃ ।
ವೈಕುಂಠಲೋಕವಾಂಛಾಪಿ ನಾಸ್ತಿ ಸರ್ವಾತ್ಮನಾ ಮಮ ॥೧೨೭॥

ಸರ್ವೇ ತೇ ಪ್ರಲಯಂ ಯಾಂತಿ ಮಹಾಪ್ರಳಯವಹ್ನಿನಾ ।
ಉದುಂಬರಫಲೋತ್ಪನ್ನಮಶಕಾ ಇವ ಭಾಂತಿ ತೇ ॥೧೨೮॥

---

ಈ ರೀತಿ ನುಡಿದ ಆ ನಾರಿಯ ಮಾತನ್ನು ಕೇಳಿ ವಿರಕ್ತನೂ, ಸಕಲ ಪದಾರ್ಥಗಳಲ್ಲಿಯೂ ಮಮತೆ ಬಿಟ್ಟವನೂ ಆಗಿರುವ ಆ ಶಾಂಭವಾಗ್ರೇಸರನು ಆವಳನ್ನು ಕುರಿತು ಇಂತೆಂದನು. ॥೧೨೪॥

"ಎಲೌ ಮಂಗಳಾಂಗಿಯೇ, ನಶ್ವರವಾದ ಈ ಹಣ, ರತ್ನ, ಆಭರಣ ಮತ್ತು ಈ ರತ್ನಮಂದಿರ ಇವುಗಳಿಂದ ಯಾವ ಪ್ರಯೋಜನವೂ, ಏನೊಂದು ಕಾರ್ಯವೂ ಈಗ ನನಗೆ ಇಲ್ಲ. ॥೧೨೫॥

ಚಿತ್ರವಿಚಿತ್ರವಾದ ಬಟ್ಟೆಬರೆಗಳಿಂದಲಾಗಲೀ, ಗುಂಪುಗುಂಪಾದ ಗೋವುಗಳ ಹಿಂಡುಗಳಿಂದಲಾಗಲೀ, ನನಗೆ ಯಾವ ಪ್ರಯೋಜನವೂ ಕಾಣುವುದಿಲ್ಲ. ಒಟ್ಟಿನಲ್ಲಿ ನನಗೆ ಈ ಭೂಮಂಡಲದಲ್ಲಿರಬೇಕೆಂಬ ಅಪೇಕ್ಷೆಯೇ ಇಲ್ಲ. (ಅಥವಾ ನನಗೆ ಈ ಭೂಮಂಡಲದ ಅಪೇಕ್ಷೆಯೇ ಎಂದಿಗೂ ಬೇಡವಾಗಿದೆ.) ॥೧೨೬॥

ಸ್ವರ್ಗಲೋಕ, ಸತ್ಯಲೋಕ ಮತ್ತು ಆ ವೈಕುಂಠಲೋಕ, ಇವುಗಳನ್ನು ಹೊಂದಬೇಕೆಂಬ ಅಪೇಕ್ಷೆಯೂ ನನಗೆ ಯಾವ ರೀತಿಯಿಂದಲೂ ಇಲ್ಲವೇ ಇಲ್ಲ ವೆಂದು ತಿಳಿ. ॥೧೨೭॥

ಈ ಭೂಲೋಕ, ಸ್ವರ್ಗಲೋಕ, ಸತ್ಯಲೋಕ ಮತ್ತು ವೈಕುಂಠಲೋಕ ಇವುಗಳೆಲ್ಲವೂ ಮಹಾಪ್ರಳಯಕಾಲದಲ್ಲಿ ಉಂಟಾಗುವ ಅಗ್ನಿಜ್ವಾಲೆಗೆ ತುತ್ತಾಗಿ

ನ ತನ್ಮಶಕವಾಂಛಾಸ್ತಿ ಲೋಕೇ ಕಸ್ಯಾಪಿ ಸುವ್ರತೇ ।
ಷಟಿತೋದುಂಬರಫಲೇ ಸ್ವರ್ಗೇ ವಾ ತುಲ್ಯಧೀರ್ಮಮ ॥೧೨೯॥

ದುರ್ಭಗಾಃ ಖಲು ವಾಂಛಂತಿ ಸ್ವರ್ಗವಾಸಂ ತಥಾ ಸತಿ ।
ತತ್ರಾಪಿ ವಾಂಛಾ ನೇತ್ಯತ್ರ ವಾಂಛಾ ತವ ಧನೇ ಕಥಂ ॥೧೩೦॥

ಯದ್ಯಸ್ತಿ ಧನಮುತ್ಕೃಷ್ಟಂ ತದಾ ತೈರಧುನಾ ಧನ್ಯೈಃ ।
ಪೂಜಯಸ್ವ ಮಹಾದೇವಂ ವಿಲಂಬಂ ಮಾ ಕುರು ಪ್ರಿಯೇ ॥೧೩೧॥

ಪದ್ಮಪಲ್ಲವಜಲೋಪಮಂ ಮನೋ
ಜೀವನಂ ಚ ಚಲಮೇವ ತಚ್ಚರಂ ।
ನಾಧಿತಿಷ್ಠತಿ ತತಸ್ತ್ವಮೀಶ್ವರಂ
ಪೂಜಯಸ್ವ ಶಿವಲಿಂಗಮಸ್ತಕೇ ॥೧೩೨॥

---

ನಾಶವಾಗುವುವು. ಇವುಗಳೆಲ್ಲಾ ಅತ್ತಿಯ ಹಣ್ಣಿನ ಒಳಗೆ ಹುಟ್ಟುವ ಹುಳುಗಳಂತೆ ತೋರುತ್ತಾ, ಅಲ್ಪಕಾಲದಲ್ಲಿಯೇ ನಾಶಹೊಂದುವುವು. ॥೧೨೮॥

ಶ್ರೇಷ್ಠವಾದ ಶಿವವ್ರತನಿಯಮದಲ್ಲಿ ತತ್ಪರಳಾದ ಸಾಧ್ವಿಯೇ, ಲೋಕದಲ್ಲಿ ಯಾರಾದರೂ ಒಂದು ನೊಣವನ್ನು ಅಪೇಕ್ಷಿಸುವರೆ! ಬಿರಿದು ಬಿದ್ದು ಹೋಗಿರುವ ಅತ್ತಿಯ ಹಣ್ಣಿನಲ್ಲಿಯೂ ಮತ್ತು ಸ್ವರ್ಗದಲ್ಲಿಯೂ ಸಹ ನನಗೆ ಒಂದೇ ತೆರನಾದ ಬುದ್ಧಿಯುಂಟಾಗಿರುವುದು. (ಎರಡೂ ನಶ್ವರವೆಂದು ಭಾವವು.) ॥೧೨೯॥

ಕೇವಲ ಭಾಗ್ಯಹೀನರು ಮಾತ್ರ ಅಂತಹ ಸ್ವರ್ಗವಾಸವನ್ನು ಬಯಸುತ್ತಾರೆ. ನನಗೆ ಆ ಸ್ವರ್ಗವಾಸದಲ್ಲಿಯೇ ಅಭಿರುಚಿಯಿಲ್ಲದಿರುವಾಗ ನಿನ್ನ ಈ ಧನಾದಿಗಳಲ್ಲಿ ಹೇಗೆ ತಾನೇ ಮನಸ್ಸುಂಟಾದೀತು ? ॥೧೩೦॥

ಎಲೌ ಪ್ರಿಯಾಭಿಲಾಷಿಣಿಯೇ, ನಿನ್ನಲ್ಲಿ ಉತ್ಕೃಷ್ಟವಾದ ಹಣವಿದ್ದರೆ ಅವೆಲ್ಲವನ್ನೂ ಈಗ ಈ ಮಹಾದೇವನ ಪೂಜೆಗೋಸ್ಕರ ಉಪಯೋಗಿಸು. ಸ್ವಲ್ಪವೂ ತಡಮಾಡಬೇಡ. ॥೧೩೧॥

ಈ ಮನಸ್ಸು ತಾವರೆಯ ದಳದ ಮೇಲೆ ನಿಂತಿರುವ ನೀರಿನ ಹನಿಗಳಿಗೆ ಸಮಾನವಾದದ್ದು (ಅಂದರೆ ಅತಿ ಚಂಚಲವಾದದ್ದೆಂದು ಭಾವವು.) ಮಾನವನ ಜೀವಿಕೆಯೋ ಅತಿ ಚಪಲಸ್ವಭಾವವುಳ್ಳದ್ದು. ಇವೆರಡೂ ಬಹಳಕಾಲ ಶಾಶ್ವತವಾಗಿ

ಯದೇವ ಧನಮುತ್ಕೃಷ್ಟಂ ತತ್ಸರ್ವಂ ಲಿಂಗಮಸ್ತಕೇ ।
ಪ್ರಯಚ್ಛೇಚ್ಛಾ ಚ ವಿಷಯೇ ತುಚ್ಛಾ ಸಾ ಖಲು ಸರ್ವಥಾ ॥೧೩೩॥

ಪ್ರಾರ್ಥನೀಯೋ ಮಹಾದೇವಃ ಪುನಃ ಪುನರುಮಾಪತೇ ।
ವಿಷಯೇಚ್ಛಾವಿನಿರ್ಮುಕ್ತಾಂ ಕುರು ಮಾಮಿತಿ ಸಾದರಂ ॥೧೩೪॥

ವಿಷಯಾಸ್ತೇ ವಿಷಪ್ರಾಯಾಃ ಸರ್ವೇ ತ್ಯಾಜ್ಯಾಃ ಸ್ವಭಾವತಃ ।
ವಿಷಯೇಚ್ಛಾನುರಕ್ತಾನಾಂ ಸುಖಂ ಸ್ವಪ್ನೇಽಪಿ ದುರ್ಲಭಂ ॥೧೩೫॥

ವಿಹಾಯ ವಿಷಯೇ ವಾಂಛಾಂ ಕುರು ಶಂಕರಪೂಜನಂ ।
ಶಿವಪೂಜನಸಾಮಗ್ರೀ ಸಂಪನ್ನಾ ಖಲು ತೇ ಸದಾ ॥೧೩೬॥

---

ನಿಲ್ಲಲಾರವು. ಆದ್ದರಿಂದ ಎಲೌ ಸಾಧ್ವಿಯೇ ! ಈ ಶಿವಲಿಂಗದ ಮೇಲ್ಭಾಗದಲ್ಲಿ ಭಕ್ತಿಯಿಂದ ಈ ವಸ್ತುಗಳೆಲ್ಲವನ್ನೂ ಇಟ್ಟು ಪೂಜೆಮಾಡು. ॥೧೩೨॥

ನಿನ್ನಲ್ಲಿರುವ ಉತ್ಕೃಷ್ಟವಾದ ಧನವನ್ನೆಲ್ಲಾ ಪರಶಿವನ ಲಿಂಗದ ಮೇಲೆ ಇರಿಸಿಬಿಡು. ಮತ್ತು ಈ ವಿಷಯಸುಖವು ಮತ್ತು ಅದರ ಅಪೇಕ್ಷೆಯೂ ಇವೆರಡೂ ಅತಿ ತುಚ್ಛವಾದುವುಗಳೆಂದು ತಿಳಿದು, ಅವುಗಳಿಗಾಗಿ ಪ್ರಯತ್ನವನ್ನು ಬಿಟ್ಟು ಎಲ್ಲವನ್ನೂ ಆ ಪರಮೇಶ್ವರನಿಗೆ ಸಮರ್ಪಣೆಮಾಡು. ॥೧೩೩॥

ಅನಂತರ, ನೀನು ಆ ಮಹಾದೇವನನ್ನು, "ಎಲೈ ಉಮಾರಮಣನಾದ ಸ್ವಾಮಿಯೇ ! ನನ್ನನ್ನು ಈ ತುಚ್ಛವಾದ ವಿಷಯಸುಖಾಪೇಕ್ಷೆಯಿಂದ ಮುಕ್ತಳನ್ನಾಗಿ ಮಾಡಿ, ನನ್ನ ವಿಷಯದಲ್ಲಿ ಆದರಭಾವನೆಯನ್ನು ಬೀರುವವನಾಗು. ಪ್ರಭೋ !" ಎಂದು ಪ್ರಾರ್ಥನೆಮಾಡಿಕೋ ? ॥೧೩೪॥

ವಿಷಯಸುಖಗಳೆಲ್ಲವೂ ಸ್ವಭಾವವಾಗಿ ವಿಷಕ್ಕೆ ಸಮಾನವಾದವುಗಳು. ಆದುದರಿಂದ ಅವುಗಳನ್ನು ಸಂಪೂರ್ಣವಾಗಿ ತ್ಯಾಗಮಾಡಬೇಕು. ವಿಷಯಸುಖಗಳಲ್ಲಿ ಸದಾ ಅನುರಕ್ತರಾಗಿರುವವರಿಗೆ ಸ್ವಪ್ನದಲ್ಲಿಯೂ ಸುಖವು ದೊರೆಯಲಾರದು. ॥೧೩೫॥

ಸ್ರಕ್ಚಂದನಾದಿ ವಸ್ತುಗಳಿಂದ ಸುಖಾಭಿಲಾಷೆಯನ್ನು ತೊರೆದು, ಯಾವಾಗಲೂ ಆ ಶಂಕರನನ್ನು ಭಕ್ತಿಯಿಂದ ಪೂಜಿಸು. ನಿನ್ನಲ್ಲಿ ಆ ಶಿವಪೂಜಾ ಸಲಕರಣೆಗಳು ಸಂಪೂರ್ಣವಾಗಿರುವುದರಿಂದ ಆ ಶಿವಪೂಜೆಗೆ ಯಾವ ಆತಂಕವೂ ಉಂಟಾಗಲಾರದು. ॥೧೩೬॥

ದುರ್ಲಭಂ ಮಾನುಷಂ ದೇಹಮಾಸಾದ್ಯ ಶಿವಪೂಜನಂ ।
ಯದಿ ನ ಕ್ರಿಯತೇ ಮೋಹಾತ್ತದಾ ಜನ್ಮ ನಿರರ್ಥಕಂ ॥೧೩೭॥

ಭಾರಭೂತಂ ಶರೀರಂ ಸ್ಯಾದನೀಶಾರ್ಚನಸಾಧನಂ ।
ಶರೀರಕೃತ್ಯಮೇತಾವತ್ಸತಾಂ ಶಂಕರಪೂಜನಂ ॥೧೩೮॥

ಅಭಾಗ್ಯೈರ್ಯೌವನೋನ್ಮತ್ತೈಃ ಸರ್ವದಾ ಮದನಾತುರೈಃ ।
ನಾರಾಧ್ಯತೇ ಮಹಾದೇವಸ್ತೇ ಯಾಂತಿ ನರಕಂ ಧ್ರುವಂ ॥೧೩೯॥

ತರುಣೀಂ ರಮಣೀಂ ದೃಷ್ಟ್ವಾ ಪ್ರಹಸಂತಿ ವದಂತಿ ಚ ।
ನ ವದಂತಿ ಮಹಾದೇವಂ ಪಾಹಿ ಪಾಹೀತಿ ಸರ್ವಥಾ ॥೧೪೦॥

ಬಾಲೇ ಮಾಮೇಹಿ ಮಾಮೇಹೀತಿ ವದಂತಿ ತೇ ।
ಉನ್ಮತ್ತಾಸ್ತೇ ಶಿವಂ ತಾವನ್ನ ವದಂತಿ ಕದಾಚನ ॥೧೪೧॥

---

ಸಾಮಾನ್ಯವಾಗಿ ಹೊಂದಲಸಾಧ್ಯವಾದ ಈ ಮಾನವ ಜನ್ಮವನ್ನು ಪಡೆದರೂ ಅಜ್ಞಾನವಶದಿಂದ ಆ ಪರಶಿವನನ್ನು ಪೂಜೆಮಾಡದಿದ್ದರೆ ನಿಜವಾಗಿಯೂ ಅವನ ಜನ್ಮವು ವ್ಯರ್ಥವೆಂದೇ ತಿಳಿಯಬೇಕು. ॥೧೩೭॥

ಆ ಪರಶಿವನ ಪೂಜೆಗೆ ಸಾಧನವಾಗದ ಈ ಶರೀರವೂ ನಿಜವಾಗಿಯೂ ಭೂಮಿಗೆ ಭಾರಭೂತವೆಂದೇ ಅರಿಯಬೇಕು. ಸತ್ಪುರುಷರಿಗೆ, ಆ ಶಂಕರನ ಪೂಜೆಯೇ ಈ ಶರೀರ ದೊರಕಿರುವುದಕ್ಕೆ ಫಲವೆಂದು ಹೇಳಿದೆ. ॥೧೩೮॥

ಭಾಗ್ಯಹೀನರಾದವರು, ಯೌವನ ಮದದಿಂದ ಕೊಬ್ಬಿದವರಾಗಿ ಯಾವಾಗಲೂ ಮನ್ಮಥ ಕ್ರೀಡೆಯಲ್ಲಿಯೇ ಅಭಿಲಾಷೆಯುಳ್ಳವರಾಗಿರುತ್ತಾ, ಆ ಮಹಾದೇವನನ್ನು ಪೂಜೆಮಾಡುವುದಿಲ್ಲ. ಅಂಥಹವರಿಗೆ ನಿಜವಾಗಿಯೂ ನರಕಪ್ರಾಪ್ತಿಯಾಗುವುದು. ॥೧೩೯॥

ರತಿಕ್ರೀಡಾಭಿಲಾಷಿಣಿಯಾಗಿರುವ ತರುಣಿಯನ್ನು ನೋಡಿ ಮಾನವರು, ನಗುತ್ತಾ ವಿನೋದದಿಂದ ಸಂಭಾಷಣೆಮಾಡುತ್ತಾ, ಕಾಲಕಳೆಯುವರೇ ಹೊರತು ಆ ಮಹಾದೇವನನ್ನು ದೇವ! ನಮ್ಮನ್ನು ರಕ್ಷಿಸು, ಕಾಪಾಡು, ಎಂಬುದಾಗಿ ಎಂದಿಗೂ ಶಿವನಾಮ ಸಂಕೀರ್ತನ ಪುರಸ್ಸರವಾಗಿ ಸ್ತೋತ್ರಮಾಡುವುದಿಲ್ಲ. ॥೧೪೦॥

ಆ ತರುಣಿಯನ್ನು ಕುರಿತು, ಎಲೌ ಕೋಮಲಾಂಗಿಯಾದ ಬಾಲಿಕೆಯೇ! ನನ್ನ ಸಮೀಪಕ್ಕೆ ಬಾ, ನನ್ನೊಡನೆ ಸಂಭಾಷಣೆಮಾಡಿ, ನನ್ನ ಸಂಗಡ ವಿಹರಿಸು

ಅಮೂಲ್ಯಾನಿ ವಿಚಿತ್ರಾಣಿ ದುಕೂಲಾನಿ ಪ್ರಿಯೇ ತ್ವಯಾ ।
ಗ್ರಾಹ್ಯಾಣೀತಿ ವದಂತ್ಯಜ್ಞಾಃ ಶಂಕರಾನರ್ಪಿತಾನ್ಯಪಿ ॥೧೪೨॥

ದಿವ್ಯಂ ಮೃಗಮದೋಪೇತಂ ಚಂದನಂ ದಾತುಮಿಚ್ಛತಿ ।
ವಧೂಭ್ಯೋ ನ ಮಹೇಶಾಯ ಲಿಂಗೇ ದಾತುಂ ಸ ವಾಂಛತಿ ॥೧೪೩॥

ಹಾರಾನುದಾರಾನಾದಾಯ ಯುವತೀಸ್ತನಮಂಡಲೇ ।
ದದಾತಿ ನ ಮಹಾಲಿಂಗೇ ಹಾರಂ ದಾತುಂ ಸ ವಾಂಛತಿ ॥೧೪೪॥

ರತ್ನತಾಟಂಕಮಾನೀಯ ವನಿತಾಯೈ ಪ್ರಯಚ್ಛತಿ ।
ನ ಶರ್ವಲಿಂಗೇ ದಾತುಂ ವಾ ತಸ್ಯ ವಾಂಛಾ ಪ್ರಜಾಯತೇ ॥೧೪೫॥

---

ಎಂಬ ಮಾತುಗಳನ್ನಾಡುತ್ತಾ ಉನ್ಮತ್ತರಂತೆ ತೋರುವರೇ ಹೊರತು, ಆ ಪರಶಿವನನ್ನು ಒಂದುಬಾರಿಯಾದರೂ ಸಂತೋಷದಿಂದ ಸ್ತೋತ್ರಮಾಡುವುದಿಲ್ಲ. ॥೧೪೧॥

ಆ ಮಂಗಳಕರನಾದ ಪರಮೇಶ್ವರನಿಗೂ ಸಮರ್ಪಿಸದೆ ಇರುವಂತಹ ಅಮೂಲ್ಯವೂ, ವಿಚಿತ್ರವೂ ಆಗಿರುವ ರೇಷ್ಮೆಯ ವಸ್ತ್ರಗಳನ್ನು, 'ಪ್ರೇಯಸಿ, ಇಗೋ ಈ ವಸ್ತ್ರಗಳನ್ನು ಸ್ವೀಕರಿಸಿ ನನ್ನೊಡನೆ ಪ್ರೇಮವನ್ನು ಬೀರು' ಎಂಬುದಾಗಿ ಮೂಢರಾದ ಮಾನವರು ಹೇಳುತ್ತಿರುವರು. ॥೧೪೨॥

ಕಸ್ತೂರಿಯಿಂದ ಮಿಶ್ರಿತವಾದ ದಿವ್ಯಚಂದನವನ್ನು ಸುಂದರಾಂಗಿಯರಾದ ತನ್ನ ಪ್ರೇಯಸಿಯರಿಗೆ ಮಾನವನು ಕೊಡಲು ಅಪೇಕ್ಷಿಸುವನೇ ಹೊರತು, ಇದು ಮಹೇಶ್ವರನಿಗೋಸ್ಕರ ಕೊಡಬೇಕಾದುದೆಂದು ತಿಳಿದು ಎಂದೂ ಆ ಶಿವಲಿಂಗಕ್ಕೆ ಸಮರ್ಪಣೆಮಾಡುವುದಿಲ್ಲ. ॥೧೪೩॥

ದಿವ್ಯವೂ ಉದಾರವೂ ಮನೋಹರವೂ ಆದ ಹಾರಗಳನ್ನು ತೆಗೆದುಕೊಂಡು ಆ ತನ್ನ ಪ್ರೇಯಸಿಯಾದ ಯುವತಿಯ ಸ್ತನಮಂಡಲದಲ್ಲಿ ಸಮರ್ಪಿಸುವನೇ ವಿನಾ, ಮಾನವನು ಆ ಮಹೇಶ್ವರನ ಉನ್ನತವಾದ ಲಿಂಗದಲ್ಲಿ ಯಾವಾಗಲೂ ಅಲಂಕರಿಸಲಪೇಕ್ಷಿಸುವುದಿಲ್ಲ. ॥೧೪೪॥

ರತ್ನಖಚಿತವಾದ ಕರ್ಣಾಭರಣವನ್ನು ಯುವತಿಗೆ ಕೊಡುವನೇ ಹೊರತು ಮಾನವನು ಅದನ್ನು ಆ ಶಿವಲಿಂಗಕ್ಕೆ ಸಮರ್ಪಣೆ ಮಾಡಬೇಕೆಂಬ ಅಪೇಕ್ಷೆಯೂ ಅವನಿಗೆ ಉಂಟಾಗಲಾರದು. ॥೧೪೫॥

ದಿವ್ಯಗಂಧಫಲೀಮಾಲಾಂ ಮೂಢೋ ಬಾಲಾಂಗಲೇಪನಂ ।
ಪ್ರಯಚ್ಛತಿ ಮಹಾಲಿಂಗೇ ತಾಂ ನ ದಾತುಂ ಸ ವಾಂಛತಿ ॥೧೪೬॥

ಅಭಾಗ್ಯಾಸ್ತೇ ಸಮುತ್ಪನ್ನಾಃ ಸರ್ವೇ ಭೂಭಾರತಾಂ ಗತಾಃ ।
ನ ಹಾರತ್ವಮನುಪ್ರಾಪ್ಯ ಕುರ್ವಂತಿ ಶಿವಪೂಜನಂ ॥೧೪೭॥

ಶಿವಂ ವಾಂಛಂತಿ ಯೋ ನಿತ್ಯಂ ಸ ಏವ ಶಿವಪೂಜನಂ ।
ಕರೋತಿ ತಾವದನ್ಯಸ್ತು ನ ಕರೋತಿ ಶಿವಾರ್ಚನಂ ॥೧೪೮॥

ತಸ್ಯಾಶಿವಂ ಜನ್ಮನಿ ಜನ್ಮನೀತಿ
ಮನ್ಯೇ ನ ಯಸ್ಯಾಸ್ತಿ ಶಿವಾರ್ಚನೇಚ್ಛಾ ।
ಶಿವಾರ್ಚನೇಚ್ಛಾ ಶಿವಹೇತುಭೂತಾ
ಸಾ ತಾವದತ್ಯುತ್ತಮವಾಂಛಿತಾ ಸ್ಯಾತ್ ॥೧೪೯॥

---

ದಿವ್ಯವಾದ ಶ್ರೀ ಗಂಧವೃಕ್ಷದ ಚಂದನದಿಂದ ಮಾಡಿದ ಮಾಲೆಯನ್ನು ಆ ಶಿವನ ಮಹಾಲಿಂಗಕ್ಕೆ ಸಮರ್ಪಿಸೋಣವೆಂಬ ಅಪೇಕ್ಷೆ ಎಂದೂ ಉದಯಿಸದೆ ಅದನ್ನು ನಾರಿಯ ಅಂಗಲೇಪನಕ್ಕೋಸ್ಕರ ಕೊಟ್ಟು ಬಿಡುವನು. ॥೧೪೬॥

ನಿರ್ಭಾಗ್ಯರಾದ ಇವರೆಲ್ಲರೂ ಕೇವಲ ಮಾನವ ಜನ್ಮ ತಾಳಿ ಭೂಮಿಗೆ ಭಾರವಾಗಿರುವರೇ ಹೊರತು, ಆ ಶಿವನಲ್ಲಿ ಭಕ್ತಿದೋರಿ ತನ್ಮೂಲಕ ಪರಶಿವನನ್ನು ಎಂದಿಗೂ ಪೂಜೆ ಮಾಡುವುದಿಲ್ಲ. ॥೧೪೭॥

ಅನವರತವೂ ಮಂಗಳವನ್ನೂ ಮತ್ತು ಸುಖವನ್ನೂ ಅಪೇಕ್ಷೆಪಡುವನು ಮಾತ್ರ ಬಿಡದೆ, ನಿತ್ಯವೂ ಆ ಪರಶಿವನನ್ನು ಭಕ್ತಿಯಿಂದ ಪೂಜಿಸುವನೇ ಹೊರತು ಬೇರೆಯವನು ಎಂದಿಗೂ ಆ ಶಿವನನ್ನು ಪೂಜೆಮಾಡುವುದಿಲ್ಲ. ॥೧೪೮॥

ಶಿವಪೂಜಾಪೇಕ್ಷೆಯೇ ಇಲ್ಲದ ಮಾನವನಿಗೆ ಜನ್ಮ ಜನ್ಮದಲ್ಲಿಯೂ ಅಮಂಗಳವೇ ಉಂಟಾಗುವುದು. ಇದು ನಿಜ. ಶಿವನನ್ನು ಪೂಜೆಮಾಡಲು ಉಂಟಾಗುವ ಅಪೇಕ್ಷೆಯು ಮಂಗಳ ಪ್ರಾಪ್ತಿಗೋಸ್ಕರವಾಗಿಯೇ ಉಂಟಾಗುವುದು. ಆದುದರಿಂದ ಇದು ಅತ್ಯುತ್ತಮವಾದ ಅಪೇಕ್ಷೆಯಲ್ಲವೆ! ॥೧೪೯॥

ಕಲ್ಪಾಂತೇಽಪಿ ಜಹಾತಿ ಯೋ ನ ಮನಸಾ ವಿಶ್ವೇಶಲಿಂಗಾರ್ಚನೇ
ವಾಂಛಾಂ ತತ್ಪದರೇಣುಭಿರ್ಜಗದಿದಂ ಪೂತಂ ಭವತ್ಯನ್ವಹಂ ।
ತಂ ವಂದೇ ಮುಹುರಾದರೇಣ ವಿರತಂ ಸಂಸಾರವಾರ್ತಾರಸೇ
ಕಂಸಾರಾತಿಸಮರ್ಚಿತಾಂಘ್ರಿಕಮಲಧ್ಯಾನಾದರಂ¦ ಸಂತತಂ ॥೧೫೦॥

ಸಂತಃ ಶಾಂಕರಪುಂಗವಾ ಇತಿ ಮಯಾ ಜ್ಞಾತಾಸ್ತದಾರಾಧನಾ
ದೀಶಃ ಪೂಜಿತ ಏವ ತಸ್ಯ ಸುಕೃತಾಂಭೋಧೇಃ ಪದಾಂಭೋರುಹೇ।
ದೃಷ್ಟೇ ಚ ಪ್ರಲಯಂ ಪ್ರಯಾತ್ಯಘಕುಲಂ ತಸ್ಮೈ ಸಮಸ್ತಂ ಪರಂ
ಮನ್ಯೇ ಶಾಂಭವಪುಂಗವಾದಪಿ ಪರಂ ಕಿಂ ಭೂತಲೇ ತಿಷ್ಠತಿ ॥೧೫೧॥

ಶಿವಂ ವದತಿ ಯಃ ಸದಾ ಶಿವಮನುಸ್ಮರತ್ಯನ್ವಹಂ
ಶಿವಾರ್ಚನರತಃ ಸದಾ ಶಿವಶಿವೇತಿ ವಾಚೋ ವದನ್ ।

---

ಕಲ್ಪದ ಕೊನೆಯಲ್ಲಿಯೂ ಯಾವನು ಬಿಡದೇ ಆ ವಿಶ್ವೇಶ್ವರನೆನಿಸಿದ ಮಹಾದೇವನ ಲಿಂಗವನ್ನು ಮನಃಪೂರ್ವಕವಾಗಿ ಪೂಜಿಸುತ್ತಾ ಯಾವಾಗಲೂ ಅವನ ಪೂಜಾಪೇಕ್ಷೆಯನ್ನೇ ಅಪೇಕ್ಷಿಸುತ್ತಿರುವನೋ, ಅಂತಹ ಪರಶಿವನ ಭಕ್ತನ ಪಾದ ಕಮಲದೂಳಿಗಳಿಂದ ಪ್ರತಿನಿತ್ಯವೂ ಈ ಭೂಮಂಡಲವು ಪರಿಶುದ್ಧಿ ಹೊಂದುತ್ತಿರುವುದು. ಇಂತಹ ಮಹಾನುಭಾವನ ಅಡಿದಾವರೆಗಳನ್ನು ಕಂಸಧ್ವಂಸಕನಾದ ಶ್ರೀ ಕೃಷ್ಣನೇ ಮುಂತಾದವರೂ ಪೂಜಿಸುತ್ತಾ ಧ್ಯಾನತತ್ಪರರಾಗಿರುವರು. ಸಂಸಾರ ವಿಷಯಕವಾದ ರಸಾನುಭವದಲ್ಲಿ ವಿರಕ್ತನಾಗಿರುವ ಇಂತಹ ಮಹಾನುಭಾವನ ಪಾದಕಮಲವನ್ನು ನಾನು ಪದೇಪದೇ ಆದರದಿಂದ ನಮಸ್ಕರಿಸುವೆನು. ||೧೫೦||

ಶಂಕರನ ಭಕ್ತಾಗ್ರೇಸರರು ಸತ್ಪುರುಷರೆಂದು ತಿಳಿದು, ನಾನು ಅಂತಹ ಶಾಂಭವನನ್ನು ಪೂಜೆಮಾಡುವುದರಿಂದ ಆ ಪರಮೇಶ್ವರನನ್ನು ಪೂಜೆಮಾಡಿದಂತೆಯೇ ಆಗುವುದು. ಅಲ್ಲದೇ ಆ ಶಂಭುಭಕ್ತರ ಪಾದಕಮಲದರ್ಶನದಿಂದುಂಟಾಗುವ ಪುಣ್ಯವೆಂಬ ಸಮುದ್ರಗಳ ದೆಸೆಯಿಂದ ಸಮಸ್ತ ಪಾಪರಾಶಿಗಳೂ ನಾಶವಾಗುವುವು. ಈ ಲೋಕದಲ್ಲಿ ಶಾಂಭವನಿಗಿಂತ ಉತ್ಕೃಷ್ಟವಾದ ಬೇರೆ ಯಾವ ಪೂಜ್ಯವಸ್ತುವೂ ಇಲ್ಲದಿರುವುದರಿಂದ ಅಂತಹ ಮಹಾಮಹಿಮನಿಗೆ ಸರ್ವದಾ ನಮಸ್ಕರಿಸುವೆನು. ||೧೫೧||

ಯಾವಾಗಲೂ ಆ ಶಿವನ ನಾಮಸ್ಮರಣೆಯನ್ನೇ ಮಾಡುತ್ತಾ, ಪ್ರತಿನಿತ್ಯವೂ ಮಂಗಳಕರವಾದ ಶಿವನಾಮವನ್ನೇ ಉಚ್ಚರಿಸುತ್ತಾ ಶಿವಪೂಜಾನಿರತನಾಗಿ, 'ಶಿವ,

**ಪುನಾತಿ ಭುವನತ್ರಯಂ ಸ ಶಿವ ಏವ ತಂ ಕೇವಲಂ**
**ಚರಂ ಪರಮಲಿಂಗಮಿತ್ಯಪಿ ವದಂತಿ ಧನ್ಯೋತ್ತಮಾಃ ॥೧೫೨॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ**
**ವಿಟಸ್ತ್ರೀಅಜ್ಞಾನವಶಾತ್ಕೃತಶಿವಪೂಜನ ಮಹಿಮಾವರ್ಣನಂ**
**ನಾಮೈಕತ್ರಿಂಶೋಽಧ್ಯಾಯಃ**

---

ಶಿವ' ಎಂಬ ಭಗವಂತನ ನಾಮಗಳನ್ನು ಉಚ್ಚರಿಸುತ್ತಿರುವವನು ಮೂರು ಲೋಕವನ್ನೂ ಪವಿತ್ರಗೊಳಿಸುವನು. ಆವನನ್ನೇ ಸಂಚರಿಸುವ ಶಿವಲಿಂಗವೆನ್ನುವರು. ಮತ್ತು ಆತನನ್ನೇ ಸಾಕ್ಷಾಚ್ಛಿವನೆಂದೂ, ಮತ್ತು ಶಿವನ ಚರಮೂರ್ತಿಯೆಂಬುದಾಗಿಯೂ ಹೇಳುವರು.' ಎಂದು ಆಕೆಗೆ ಸ್ವಪ್ನದಲ್ಲಿ ಶಾಂಭವನೊಬ್ಬನು ಹೇಳುತ್ತಿದ್ದಂತೆ ಕಂಡುಬಂದಿತು. ॥೧೫೨॥

ಇಲ್ಲಿಗೆ ಶ್ರೀಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಅಂಶದ
ಉತ್ತರಾರ್ಧದಲ್ಲಿ ಜಾರಿಣಿಯು ತಿಳಿಯದೇ ಮಾಡಿದ ಶಿವಪೂಜಾ ಮಹಿಮೆಯ
ವರ್ಣನೆಯೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀ ಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ದ್ವಾತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಚಾರಣಸ್ಯಾಪಿ ಭಾಮಿನೀ ।
ತಂ ಪ್ರಣಮ್ಯಾತಿವಿನತಾ ಪ್ರಾಹ ಭಕ್ತಿಪುರಃಸರಂ ॥೧॥

॥ ಚಾರಣಾಂಗನೋವಾಚ ॥

ಯದುಕ್ತಮಧುನಾ ವಿದ್ವಂಸ್ತತ್ಸತ್ಯಂ ನಾತ್ರ ಸಂಶಯಃ ।
ವಿಷಯೇಷು ನ ವಾಂಛಾ ಮೇ ತಾವದದ್ಯ ಪ್ರಜಾಯತೇ ॥೨॥

---

## ಮೂವತ್ತೆರಡನೆಯ ಅಧ್ಯಾಯ

ಯಾಜ್ಞವಲ್ಕ್ಯರು ಮತ್ತೆ ಜನಕಮಹಾರಾಜನೊಡನೆ ಹೀಗೆಂದರು– ಆ ಶಾಂಭವಾಗ್ರೇಸರನು ನುಡಿದ ವಚನಗಳನ್ನು ಕೇಳಿ, ಆ ಚಾರಣನ ಪ್ರಿಯಪತ್ನಿಯು ಅವನಿಗೆ ನಮಸ್ಕರಿಸಿ, ಅತ್ಯಂತ ವಿನಯದಿಂದ ಅವನನ್ನು ಕುರಿತು ಭಕ್ತಿಪುರಸ್ಸರವಾಗಿ ಮತ್ತೆ ಹೀಗೆಂದಳು. ॥೧॥

"ವಿದ್ವಾಂಸನೇ, ನೀನು ಈಗ ನುಡಿದುದೆಲ್ಲಾ ಸತ್ಯವಾದದ್ದು. ಇದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲ. ಇನ್ನು ನನಗೆ ಈ ವಿಷಯಸುಖಗಳಲ್ಲಿ ಅಪೇಕ್ಷೆಯುಂಟಾಗುವುದಿಲ್ಲ. ॥೨॥

ಶಿವಪೂಜನಮಾತ್ರೇಚ್ಛಾ ತಾವದದ್ಯ ಪ್ರಜಾಯತೇ ।
ವಿಷಯೇ ವಿಷರೂಪಾ ಧೀಃ ಸಂಜಾತಾಽದ್ಯ ವಿಶೇಷತಃ ॥೩॥

ಶಿವ ಏವ ಸದಾ ಕಿಲಾರ್ಚನೀಯಃ
ಶಿವದಾನಪ್ರವಣೇ ಮಹೇಶ್ವರೇ ಮೇ ।
ಮತಿರದ್ಯ ಕಥಂಚಿದೇವಮಂತಃ
ಕರಣಂ ತತ್ರ ಸಮರ್ಪಿತಂ ಮಯಾಪಿ ॥೪॥

ಯೇನಾಂತಃಕರಣೇನ ಶಂಕರಪದಧ್ಯಾನಂ ಕ್ಷಣಂ ವಾ ಮುಹುಃ
ಜಾತಂ ತತ್ಸಕಲಾರ್ಥದಾನನಿಪುಣಂ ಮನ್ಯೇ ತದೇವಾಧುನಾ ।
ದತ್ತಂ ಶಂಕರಪಾದಪಂಕಜರಜಃಪುಂಜೇ ತದಪ್ಯರ್ಜಿತಂ
ತೇನ ಕ್ರೀಡತಿ ತಾವತಾಪಿ ಜನನಂ ತಾವತ್ಕೃತಾರ್ಥಂ ಮಮ ॥೫॥

---

ಈಗ ನನಗೆ ಕೇವಲ ಶಿವಪೂಜೆಯಲ್ಲಿ ಮಾತ್ರ ಅಪೇಕ್ಷೆಯುಂಟಾಗಿದೆ. ನನಗೆ ವಿಷಯಸುಖಗಳಲ್ಲಿ ವಿಷಸದೃಶವಾದ ಬುದ್ಧಿಯುಂಟಾಗಿದೆ. ||೩||

ಯಾವಾಗಲೂ ಆ ಶಿವನೇ ಪೂಜ್ಯನೆನಿಸುವವನಲ್ಲವೆ! ಮಂಗಳವನ್ನುಂಟು ಮಾಡುವುದರಲ್ಲಿ ಸಮರ್ಥನಾದ ಆ ಮಹೇಶ್ವರನಲ್ಲಿಯೇ ಯಾವಾಗಲೂ ನನ್ನ ಮನಸ್ಸು ಸ್ಥಿರವಾಗಿರುವುದು. ನನ್ನ ಅಂತಃಕರಣವನ್ನೆಲ್ಲಾ ಆ ಮಹೇಶ್ವರನಲ್ಲಿಯೇ ನಿಲ್ಲಿಸಿರುವೆನು. ||೪||

ಯಾವ ನನ್ನ ಅಂತಃಕರಣವು ಯಾವಾಗಲೂ ಆ ಜಗನ್ಮಂಗಳಸ್ವರೂಪನಾದ ಶಂಕರನ ಪಾದಧ್ಯಾನದಲ್ಲಿ ಒಂದು ಕ್ಷಣವಾಗಲೀ, ಅಥವಾ ಆಗಾಗ ಆಸಕ್ತಿಯೋಗ ದಿಂದಾಗಲಿ ಸ್ಥಿರವಾಗಿ ನಿಂತಿತೋ, ಅದರಿಂದಲೇ ಈಗ ನನ್ನ ಮನಸ್ಸು ಸಕಲ ಪದಾರ್ಥಗಳನ್ನು ಹೊಂದುವುದರಲ್ಲಿಯೂ ಸಮಸ್ತ ವಸ್ತುಗಳನ್ನು ದಾನಮಾಡುವುದ ರಲ್ಲಿಯೂ ಸಾಮರ್ಥ್ಯಹೊಂದಿರುವುದೆಂದು ತಿಳಿಯುವೆನು. ಆ ಶಂಕರನ ಪಾದಕಮಲ ದಲ್ಲಿಟ್ಟಿರುವ ನನ್ನ ಅಂತಃಕರಣವು ಯಾವಾಗಲೂ ಅಲ್ಲಿಯೇ ವಿಹರಿಸುತ್ತಿರುವುದರಿಂದ ಇಷ್ಟರಿಂದಲೇ ನನ್ನ ಜನ್ಮವು ನಿಜವಾಗಿಯೂ ಸಾರ್ಥಕವಾಯಿತೆಂದು ಭಾವಿಸು ವೆನು. ||೫||

ಪರಶಿವಭಕ್ತನಿಗೆ ಆ ಶಿವನನ್ನು ಪೂಜೆಮಾಡುವುದರಲ್ಲಿಯೂ, ಶಿವಕಥಾ ಮೃತಶ್ರವಣದಲ್ಲಿಯೂ, ಶಿವದೇವಾಲಯದಲ್ಲಿಯೂ, ಸ್ಥಿರವಾದ ಅಪೇಕ್ಷೆಯುಂಟಾಗ

ಶಂಗಾರ್ಚನೇ ಶಂಗಕಥಾಸುಧಾಯಾಂ
ಶಾಂಗೇನ ಶಂಗೋಽಪಿ ಶಿವಾಲಯೇಽಪಿ
ಇಚ್ಛಾ ಪ್ರವೃತ್ತಾ ಕಥಮದ್ಯ ಸೇಯಂ।
ಸ್ಥಿರಾ ಭವಿಷ್ಯತ್ಯಧುನಾ ವದೇದಂ ॥೬॥

॥ ಶಂಕರ ಉವಾಚ ॥

ಧನ್ಯಾಸಿ ನೂನಂ ಸುಭಗೇ ತವಾದ್ಯ
ಯತೋ ಮತಿಃ ಶಂಕರಲಿಂಗಪೂಜಾಂ।
ಕರ್ತುಂ ಪ್ರವೃತ್ತಾ ಕಿಮತೋಽಪಿ ಭಾಗ್ಯಂ
ತತೋಽಧುನಾ ತಾಂ ಕುರು ಸಾವಧಾನಂ ॥೭॥

ಪುರಾ ಕಶ್ಚಿದಭೂದ್ರಾಜಾ ಹಿಮವದ್ಗಿರಿಮಂಡಲೇ।
ಸ ಸರ್ವಭಾಗ್ಯಸಂಪನ್ನಃ ಪುತ್ರಪೌತ್ರಸಮನ್ವಿತಃ ॥೮॥

ತಸ್ಯ ಕನ್ಯಾಽಭವದ್ಧನ್ಯಾ ಕಮಲಾಮಲಲೋಚನಾ।
ಸಾ ತಾವದ್ಬಾಲ್ಯಮಾರಭ್ಯ ಶಿವಾರ್ಚನಪರಾಯಣಾ ॥೯॥

---

ಬೇಕಾದರೆ ಹೇಗೆ ಇರಬೇಕೆಂಬುದನ್ನು ಈಗ ನನಗೆ ತಿಳಿಸು ಎಂದು ಆ ನಾರಿಯು ಪ್ರಾರ್ಥಿಸಿದಳು. ॥೬॥

ಆಗ ಶಂಕರನ ಭಕ್ತನು ಹೀಗೆ ಹೇಳಿದನು.—"ಎಲೌ ಸೌಭಾಗ್ಯವತಿಯೇ! ನಿನಗೆ ಆ ಶಂಕರನ ಲಿಂಗಪೂಜೆಯಲ್ಲಿ ಬುದ್ಧಿಯು ಹುಟ್ಟಿರುವುದರಿಂದ ನೀನು ನಿಜವಾಗಿಯೂ ಧನ್ಯಳೇ ಸರಿ. ಇದಕ್ಕಿಂತಲೂ ಅಧಿಕವಾದ ಭಾಗ್ಯವು ಏನುತಾನೇ ಬೇಕು? ಆದ್ದರಿಂದ ಸಾವಧಾನವಾಗಿ ಆ ಶಿವಲಿಂಗಪೂಜಾವಿಧಿಯನ್ನು ಕೇಳುವವಳಾಗು. ॥೭॥

ಹಿಂದೆ ಹಿಮಾಲಯಪರ್ವತಗಳ ಗುಂಪಿನ ಮಧ್ಯದಲ್ಲಿರುವ ದೇಶದಲ್ಲಿ ಒಬ್ಬ ರಾಜನಿದ್ದನು. ಅವನು ಸಕಲ ಸಂಪತ್ತುಗಳಿಂದ ಯುಕ್ತನಾಗಿ ಮಕ್ಕಳು ಮೊಮ್ಮಕ್ಕಳು ಇವರುಗಳಿಂದ ವಿರಾಜಿಸುತ್ತಿದ್ದನು. ॥೮॥

ಅವನಿಗೆ ತಾವರೆಯಂತೆ ನಿರ್ಮಲವೂ ವಿಶಾಲವೂ ಆದ ಕಣ್ಣುಗಳಿಂದ ಪ್ರಕಾಶಿಸುತ್ತಿರುವ ಒಬ್ಬ ಮಗಳಿದ್ದಳು. ಅವಳು ಬಾಲ್ಯದಿಂದಲೂ ಸದಾ ಶಿವಪೂಜಾಪರಾಯಣಳಾಗಿದ್ದಳು. ॥೯॥

ಶಿವಗಾನರತಾ ನಿತ್ಯಂ ಶಿವವ್ರತಪರಾಯಣಾ ।
ಶ್ರುತ್ವಾ ಶಿವಕಥಾಮೇವ ಚಕಾರ ದಿನಯಾಪನಂ ॥೧೦॥

ಸಾ ಹಿಮಾಲಯಕೂಟಸ್ಥಂ ದದರ್ಶ ಶಿವಮಂದಿರಂ ।
ಪ್ರಾಸಾದವರಮಾರುಹ್ಯ ವೀಣಾವಾದನತತ್ಪರಾ ॥೧೧॥

ಶಿವಾಲಯಸ್ಥೂಲಶೃಂಗಾತ್ಕಶ್ಚಿದ್ವಾಯುರುಪಾಗತಃ ।
ತೇನ ವಾತೇನ ಸಂಬಂಧಃ ಸುಗಂಧೋಽಪ್ಯಾಗತಸ್ತತಃ ॥೧೨॥

ತೇನ ಗಂಧೇನ ಹರ್ಮ್ಯಾಣಿ ಸುಗಂಧಾನಿ ಪ್ರತಿಕ್ಷಣಂ ।
ತತಃ ಪರಂ ಪುಷ್ಪಮಾಲಾಪ್ಯೇಕಾ ತಾವದುಪಾಗತಾ ॥೧೩॥

ತಾಂ ಮಾಲಿಕಾಂ ವಿಲೋಕ್ಯಾಶು ಭ್ರಮದ್ಭ್ರಮರಸಂಯುತಾಂ ।
ವಿಸ್ಮಯಂ ಪರಮಂ ಪ್ರಾಪ್ತಾಕೇಯಂ ಕಸ್ಮಾದುಪಾಗತಾ ॥೧೪॥

---

ನಿತ್ಯವೂ ಪರಶಿವನ ವಿಷಯಕವಾಗಿಯೇ ಗಾನಮಾಡುತ್ತಾ, ಯಾವಾಗಲೂ ಶಿವವ್ರತತತ್ಪರಳಾಗಿದ್ದಳು. ದಿನವನ್ನೆಲ್ಲಾ ಶಿವಕಥಾಶ್ರವಣದಿಂದಲೇ ಕಳೆಯುತ್ತಿದ್ದಳು. ॥೧೧॥

ಒಂದುದಿನ ಅವಳು ಆ ಹಿಮವತ್ಪರ್ವತದ ಸಮೂಹದ ಮಧ್ಯದಲ್ಲಿರುವ ಶಿವಮಂದಿರವನ್ನು ನೋಡಿ, ಉತ್ತಮವಾದ ಪ್ರಾಸಾದದ ಮೇಲೆ ಹತ್ತಿ ವೀಣೆಯನ್ನು ಬಾರಿಸಲು ಪ್ರಾರಂಭಿಸಿದಳು. ॥೧೧॥

ಹೀಗೆ ವೀಣೆಯನ್ನು ಬಾರಿಸುತ್ತಿದ್ದಾಗ ಆ ಶಿವಾಲಯದ ದೊಡ್ಡ ಶಿಖರದ ಕಡೆಯಿಂದ ಒಂದು ವಾಯುವು ಇವಳ ಉಪ್ಪರಿಗೆಯ ಕಡೆಗೆ ಬೀಸಿತು. ಅದರಿಂದ ಆ ದೇವಾಲಯದ ಸಂಬಂಧವು ಇವಳಿಗುಂಟಾದುದಲ್ಲದೆ, ಆ ವಾಯುವಿನಿಂದ ತರಲ್ಪಟ್ಟ ಸುಗಂಧವಾಸನೆಯೂ ಇವಳಿಗೆ ಬಂದು ಸೇರಿತು. ॥೧೨॥

ಆ ಸುಗಂಧದಿಂದ ಉಪ್ಪರಿಗೆಯ ಮನೆಯೆಲ್ಲಾ ಆ ಕ್ಷಣದಲ್ಲಿಯೇ ಸುವಾಸನೆಯಿಂದ ತುಂಬಿಹೋಯಿತು. ಅನಂತರ ಅದೇ ಶಿವದೇವಾಲಯದ ಶಿಖರದ ಕಡೆಯಿಂದಲೇ ಒಂದು ಹೂಮಾಲೆಯೂ ಸಹ ಇವಳ ಸಮೀಪಕ್ಕೆ ಬಂದಿತು. ॥೧೩॥

ಪರಿಮಳಕ್ಕಾಗಿ ಧ್ವನಿಮಾಡುತ್ತಾ ಮುತ್ತಿಕೊಂಡಿರುವ ದುಂಬಿಗಳುಳ್ಳ ಆ ಹೂ ಮಾಲಿಕೆಯು ಅಸಿರೀಕ್ಷಿತವಾಗಿ ಬಂದುದನ್ನು ನೋಡಿ, ಕೂಡಲೇ ಆ

ಭೂಮಂಡಲೇ ನ ದೃಷ್ಟಾನಿಪುಷ್ಪಾಣ್ಯೇತಾದೃಶಾನಿ ತು ।
ಏತತ್ಪ್ರಸೂನನಾಮಾಪಿ ಜ್ಞಾಯತೇ ನ ನರೈಃ ಖಲು ॥೧೫॥

ಸುರಮಂದಾರಪುಷ್ಪಾಣಾಂ ಕಿಮಿಯಂ ಮಾಲಿಕಾಽಥವಾ ।
ಲೋಕಾಂತರಸ್ಥಮಂದಾರಪುಷ್ಪಮಾಲಾ ಕಿಮೀದೃಶೀ ॥೧೬॥

ಗಂಧರ್ವನಗರೋತ್ಪನ್ನಪುಷ್ಪಮಾಲಾ ಕಿಮಾದೃಶೀ ॥೧೭॥
ಯದ್ವಾ ಕಿಂನರಲೋಕಸ್ಯ ಪುಷ್ಪಮಾಲಾ ಭವಿಷ್ಯತಿ ।

ನಾಗಲೋಕಸಮುತ್ಪನ್ನಮಂದಾರಕುಸುಮೋದ್ಭವಾ ॥೧೮॥

ಮಾಲಿಕೇಯಮುತಾನ್ಯೇತಿ ಚಿಂತಾವ್ಯಾಕುಲಮಾನಸಾ ।
ತತೋ ವಿಮಾನಮಾರುಹ್ಯ ಸಾ ಯಯೌ ಶಿವಮಂದಿರಂ ॥೧೯॥

---

ಬಾಲಿಕೆಗೆ ಬಹಳ ಆಶ್ಚರ್ಯವುಂಟಾಯಿತು. ಆಗ ಅವಳು, ಇದೇನು! ಈ ಮಾಲೆಯು ಎಲ್ಲಿಂದ ಏತಕ್ಕಾಗಿ ಬಂದಿತೆಂದು ಆಶ್ಚರ್ಯಚಕಿತಳಾದಳು. ॥೧೪॥

ಈ ರೀತಿಯಾದ ಹೂಗಳು ಈ ಭೂಮಂಡಲದಲ್ಲೆಲ್ಲಿಯೂ ಕಾಣುವುದಿಲ್ಲ. ಅಲ್ಲದೇ ಈ ಹೂವುಗಳ ಹೆಸರು ಕೂಡ ಈ ಮಾನವರಿಗೆ ತಿಳಿಯದು. ॥೧೫॥

ಇದು ದೇವಲೋಕದ ಮಂದಾರಪುಷ್ಪಗಳಿಂದ ರಚಿತವಾದ ಮಾಲಿಕೆಯಾಗಿರಬಹುದೇ! ಅಥವಾ ಬೇರೆ ಲೋಕಗಳಲ್ಲಿ ಬೆಳೆದ ಮಂದಾರಪುಷ್ಪಗಳ ಹಾರವೇನಾದರೂ ಹೀಗೆಯೇ ಇರಬಹುದೋ ಏನೋ ತಿಳಿಯದಲ್ಲಾ! ॥೧೬॥

ಒಂದುವೇಳೆ ಗಂಧರ್ವಪಟ್ಟಣದಲ್ಲಿ ಬೆಳೆದ ಹೂಮಾಲೆಯು ಹೀಗಿರಬಹುದೋ! ಅಥವಾ ಇದನ್ನು ಕಿಂನರಲೋಕದಲ್ಲಿ ಹುಟ್ಟಿದ ಹೂಮಾಲೆಯೆಂದು ತಿಳಿಯೋಣವೋ! ಅಥವಾ ನಾಗಲೋಕದಲ್ಲಿ ಬೆಳೆದ ಮಂದಾರಪುಷ್ಪಗಳ ಮಾಲೆಯಾಗಿರಬಹುದೋ! ॥೧೭-೧೮॥

ಇದು ಮಾಲಿಕೆಯೋ ಅಥವಾ ಬೇರೆ ಇನ್ನೇನಾದರೂ ಆಗಿರಬಹುದೋ ಎಂಬುದಾಗಿ ಸಂಶಯದಿಂದ ಕೂಡಿದ ಮನಸ್ಸುಳ್ಳವಳಾಗಿ, ಕೂಡಲೇ ಅಲ್ಲಿಂದ ತನ್ನ ವಿಮಾನವನ್ನೇರಿ ಆ ಶಿವಮಂದಿರದ ಕಡೆಗೆ ಪ್ರಯಾಣಮಾಡಿದಳು. ॥೧೯॥

ಸಾ ತತ್ರ ಮಂದಿರಂ ದೃಷ್ಟ್ವಾ ಶಾಂಕರಸ್ಯಾತಿವಿಸ್ಮಿತಾ ।
ರತ್ನಗೋಪುರಸಂಕೀರ್ಣರತ್ನಭಿತ್ತಿವಿರಾಜಿತಂ ॥೨೦॥

ಹಾರತೋರಣಸಂಯುಕ್ತಂ ದಿವ್ಯಪುಷ್ಪಸಮರ್ಚಿತಂ ।
ಹಾರಕೋಟಿಸಮಾಕ್ರಾಂತಂ ಸ್ತುತಂ ವೇದೈರನೇಕಧಾ ॥೨೧॥

ದದರ್ಶ ಕನ್ಯಕಾಂ ತತ್ರ ನಾಟ್ಯಗಾನವಿಶಾರದಾಂ ।
ಸೌಂದರ್ಯನಿಧಿರೂಪಾಂ ತಾಂ ಪ್ರಾಹ ಬಾಲಾಂ ಮನೋರಮಾಂ॥೨೨॥

ಕಾಸಿ ಕನ್ಯೇ ವಿಶಾಲಾಕ್ಷಿ ಸಂಪೂರ್ಣನವಯೌವನೇ ।
ಕಃ ಪಿತಾ ತವ ಮಾತಾ ಕಾ ಕ್ವ ಭರ್ತಾ ತವ ತಿಷ್ಠತಿ ॥೨೩॥

---

ಆ ಶಿವದೇವಾಲಯವನ್ನು ನೋಡಿ ಅವಳು ಅತಿಯಾಗಿ ಆಶ್ಚರ್ಯಹೊಂದಿದಳು. ಅದು ರತ್ನಮಯವಾದ ಗೋಪುರಗಳಿಂದಲೂ ರತ್ನಖಚಿತವಾದ ಗೋಡೆಗಳಿಂದಲೂ ವಿರಾಜಿಸುತ್ತಿದ್ದಿತು. ಆ ದೇವಾಲಯಕ್ಕೆ ಹಾರ, ತೋರಣ ಮುಂತಾದವುಗಳನ್ನು ಅಲಂಕಾರವಾಗುವಂತೆ ಕಟ್ಟಿದ್ದರು. ದಿವ್ಯವಾದ ಹೂಗಳಿಂದ ಆ ಶಿವದೇವಾಲಯವನ್ನು ಸಿಂಗರಿಸಿದ್ದರು. ಕೋಟ್ಯಂತರ ಹಾರಗಳನ್ನು ಸಾಲಾಗಿ ಜೋಡಿಸಿದ್ದರು. ಆ ಶಿವದೇವಾಲಯದಲ್ಲಿ ನಾನಾವಿಧವಾದ ವೇದಪಠನೆಯೂ, ಸ್ತೋತ್ರಗಳೂ ನಡೆಸಲ್ಪಡುತ್ತಿದ್ದವು. ॥೨೦-೨೧॥

ಇಂತಹ ಶಿವದೇವಾಲಯದಲ್ಲಿ ನಾಟ್ಯ ಮತ್ತು ಸಂಗೀತ ಇವುಗಳಲ್ಲಿ ನಿಪುಣೆಯಾಗಿ, ಸೌಂದರ್ಯಕ್ಕೆ ಸಮುದ್ರದಂತೆ ಆಶ್ರಯಳಾಗಿ, ಮನೋಹರವಾದ ಆಕೃತಿಯಿಂದ ಕಂಗೊಳಿಸುತ್ತಿರುವ ಒಬ್ಬ ಬಾಲಿಕೆಯನ್ನು ಈಕೆಯು ನೋಡಿ ಅವಳನ್ನು ಕುರಿತು ಹೀಗೆ ಮಾತನಾಡಿಸಿದಳು. ॥೨೨॥

ವಿಶಾಲವಾದ ನೇತ್ರಗಳೂ, ಪರಿಪೂರ್ಣವಾದ ನವಯೌವನ ಇವುಗಳಿಂದ ಶೋಭಿಸುತ್ತಿರುವ ಕನ್ಯಾಮಣಿಯೇ! ನೀನು ಯಾರು? ನಿನ್ನ ತಂದೆ ಮತ್ತು ತಾಯಿಯರ ಹೆಸರೇನು? ನಿನ್ನ ಪತಿಯು ಎಲ್ಲಿ ವಾಸಮಾಡುತ್ತಿರುವನು? ॥೨೩॥

ಗಾನವಿದ್ಯಾ ಸಮಭ್ಯಸ್ತಾ ಕುತೋ ವಾ ತೇ ಗುರುಶ್ಚ ಕಃ ।
ಇತಿ ಪೃಷ್ಟಾ ಮುದಾ ಪ್ರಾಹ ಸಾ ತಾಂ ಗಂಧರ್ವಕನ್ಯಕಾ ॥೨೪॥

॥ ಗಂಧರ್ವಕನ್ಯಕೋವಾಚ ॥

ಗಂಧರ್ವನಗರಾಧೀಶಃ ಪಿತಾ ಮಮ ಸ ಶಾಂಭವಃ ।
ಸ ಏವ ಮೇ ಗುರುರ್ಗಾನಮಭ್ಯಸ್ತಮತಿಸುಂದರಂ ॥೨೫॥

ಮಮ ವ್ರತಮಿದಂ ನಿತ್ಯಂ ಶ್ರೀಮಹಾದೇವಪೂಜನಂ ।
ನಿತ್ಯಂ ಗಂಧರ್ವನಾರೀಣಾಂ ಸರ್ವಾಸಾಮಪಿ ತದ್ವ್ರತಂ ॥೨೬॥

ಪುರುಷಾಣಾಂ ವಿಶೇಷೇಣ ವ್ರತಂ ಶಂಕರಪೂಜನಂ ।
ಶ್ರೀಮಹಾದೇವಪೂಜಾಯಾಂ ಚಿತ್ತಂ ಮೇ ನಿರತಂ ಸದಾ ॥೨೭॥

ಅನೇನ ಜೀವನಂ ಧನ್ಯಮಸ್ಮಾಕಂ ಶಿವಪೂಜನಂ ।
ಧನಂ ಧಾನ್ಯಂ ನಿಧಾನಂ ಚ ಜೀವನಂ ಚ ಫಲಂ ಮಹತ್ ॥೨೮॥

---

ನೀನು ಈ ಸಂಗೀತವಿದ್ಯೆಯನ್ನು ಎಲ್ಲಿ ಕಲಿತೆ? ನಿನ್ನ ಗುರುವಾರು? ಎಂಬುದಾಗಿ ಪ್ರಶ್ನೆಮಾಡಲು ಆ ಗಂಧರ್ವಕುಮಾರಿಯು ಇದನ್ನು ಕೇಳಿ ಸಂತೋಷ ದಿಂದ, ಆ ಬಾಲಿಕೆಯನ್ನು ಕುರಿತು ಹೀಗೆಂದಳು. ॥೨೪॥

"ಗಂಧರ್ವಲೋಕದ ರಾಜನೇ ನನ್ನ ತಂದೆ. ಅವನು ಶಂಭುವಿನ ಪರಮ ಭಕ್ತನು. ಅವನೇ ನನ್ನ ಗುರುವು. ಅತ್ಯಂತ ಮನೋಹರವಾದ ಗಾನವಿದ್ಯೆಯೂ ನನಗೆ ಅವನಿಂದಲೇ ಲಬ್ಧವಾಯಿತು. ॥೨೫॥

ನಿತ್ಯವೂ ಶ್ರೀಮಹಾದೇವನನ್ನು ಪೂಜಿಸುವುದು ನನ್ನ ವ್ರತ. ನಾನೊಬ್ಬ ಳೇನು! ಎಲ್ಲಾ ಗಂಧರ್ವಸ್ತ್ರೀಯರಿಗೂ ಇದು ನಿತ್ಯವ್ರತವಾಗಿರುವುದು. ॥೨೬॥

ಗಂಧರ್ವಲೋಕದ ಪುರುಷರಿಗೂ ವಿಶೇಷವಾದ ನಿಯಮಾದಿಗಳಿಂದ ಆ ಜಗನ್ಮಂಗಳಪ್ರದನಾದ ಶಂಕರನ ಪೂಜೆಯೇ ಮುಖ್ಯವ್ರತವಾಗಿರುವುದು. ನನ್ನ ಮನಸ್ಸು ಯಾವಾಗಲೂ ಆ ಮಹಾದೇವನ ಪೂಜೆಯಲ್ಲಿಯೇ ತತ್ಪರವಾಗಿ ಅವನಲ್ಲಿಯೇ ಅಡಗಿರುತ್ತದೆ. ॥೨೭॥

ಈ ಶಿವಪೂಜೆಯಿಂದಲೇ ನಮ್ಮ ಜೀವನವು ಧನ್ಯವೆನಿಸಿರುವುದು. ಧನ, ಧಾನ್ಯ, ನಿಧಿಗಳು, ನಮ್ಮ ಬದುಕುವಿಕೆ, ಮುಂತಾದ ಮಹಾಫಲಗಳೆಲ್ಲಕ್ಕೂ ಈ ಶಿವಪೂಜೆಯೇ ಮೂಲಕಾರಣವಾಗಿರುವುದು." ॥೨೮॥

ಇತಿ ತದ್ವಚನಂ ಶ್ರುತ್ವಾ ಸಾ ಬಾಲಾ ವಿಸ್ಮಯಂಗತಾ ।
ತಾಮುವಾಚಾತಿಯತ್ನೇನ ಗೃಹೀತ್ವಾ ಪುಷ್ಪಮಾಲಿಕಾಂ ॥೨೯॥

ಏತಾನಿ ಕಾನಿ ಪುಷ್ಪಾಣಿ ಪುಷ್ಪನಾಮಾನಿ ಕಿಂ ಪ್ರಿಯೇ ।
ಕುತ್ರಾಸ್ತಿ ವನಮೇತೇಷಾಂ ತತ್ಪ್ರದರ್ಶಯ ಸಾದರಂ ॥೩೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ನಾಟ್ಯಕಾಲೋಽಯಮೀದೃಶಃ ।
ಗಾನಸ್ಯಾಪೀತಿ ತಾಮಾಹ ಸಾ ತತ್ರೋಽವಾಸ ಮಂದಿರೇ ॥೩೧॥

ಆಸಾಯಂ ನಾಟ್ಯನಿರತಾ ಸಾಯಂಕಾಲೇ ಮನೋಹರೇ ।
ಸ್ನಾನಾರ್ಥಂ ನಿರ್ಗತಾ ತತ್ರ ಸ್ನಾತಾ ಗಂಗಾಜಲೇ ಶುಭೇ ॥೩೨॥

ತತೋ ಗಂಧರ್ವನಗರಾದಾಗತಾಂಛಿವಪೂಜಕಾನ್ ।
ದೃಷ್ಟ್ವಾ ತೈಃ ಸಹಸಾ ಪ್ರಾಪ ದಿವ್ಯಂ ಶಂಕರಮಂದಿರಂ ॥೩೩॥

---

ಗಂಧರ್ವಕುಮಾರಿಯು ಆ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡ ಆ ಹಿಮವತ್ಪರ್ವತ ರಾಜನ ಮಗಳಾದ ಬಾಲಿಕೆಯು ತನ್ನ ಸಮೀಪಕ್ಕೆ ಅನಿರೀಕ್ಷಿತವಾಗಿ ಬಂದಿದ್ದ ಪುಷ್ಪಮಾಲಿಕೆಯನ್ನು ಪ್ರಯತ್ನಪೂರ್ವಕವಾಗಿ ಹಿಡಿದುಕೊಂಡು ಆ ಗಂಧರ್ವಕುಮಾರಿಯನ್ನು ಮುಂದೆ ಹೇಳುವಂತೆ ಕೇಳಿಕೊಂಡಳು. ॥೨೯॥

ಎಲೌ ಪ್ರಿಯಕಾರಿಣಿಯಾದ ಸುಂದರಾಂಗಿಯೇ! ಇವು ಯಾವ ಪುಷ್ಪಗಳು? ಇವುಗಳ ಹೆಸರೇನು? ಬೆಳೆಯುವ ಕಾಡೆಲ್ಲಿದೆ? ದಯೆಯಿಟ್ಟು ನನ್ನ ಮೇಲೆ ಆದರದಿಂದ ಅದನ್ನು ನನಗೆ ತೋರಿಸು ಎಂಬುದಾಗಿ ಕೇಳಿದಳು. ॥೩೦॥

ಅವಳ ಮಾತುಗಳನ್ನು ಕೇಳಿ ಆ ಗಂಧರ್ವಕುಮಾರಿಯು ಇದು ನಾಟ್ಯಕಾಲವು. ಅಲ್ಲದೆ ಗಾನಸಮಯವೂ ಆಗಿರುವುದು. ಆದ್ದರಿಂದ ಬೇರೆ ಸಮಯದಲ್ಲಿ ಹೇಳುತ್ತೇನೆಂದು ಹೇಳಲು, ಆ ಬಾಲಿಕೆಯು ಹಾಗೆಯೇ ಆಗಲೆಂದು ಆ ಶಿವಮಂದಿರದಲ್ಲಿಯೇ ವಾಸಮಾಡಿದಳು. ॥೩೧॥

ಸಾಯಂಕಾಲದವರೆವಿಗೂ ಆ ಗಂಧರ್ವಕುಮಾರಿಯು ನಾಟ್ಯತತ್ಪರಳಾಗಿದ್ದು ಸಾಯಂಕಾಲವಾಗುತ್ತಲೂ ಮನೋಹರವಾದ ಆ ಸಮಯದಲ್ಲಿ ಸ್ನಾನಕ್ಕೋಸ್ಕರ ಹೊರಹೊರಟು ಮಂಗಳಕರವಾದ ಗಂಗಾನದಿಯ ನೀರಿನಲ್ಲಿ ಸ್ನಾನಮಾಡಿದಳು. ॥೩೨॥

ಹೀಗೆ ಸ್ನಾನಮಾಡಿದ ನಂತರ ಅದೇವೇಳೆಗೆ ಗಂಧರ್ವಪಟ್ಟಣದಿಂದ ಬಂದಿರುವ

ತತೋಽಪಚಾರೈರ್ವಿವಿಧೈಃ ಪೂಜಯಾಮಾಸ ಶಂಕರಂ ।
ಪುಷ್ಪೈರಪಾರೈರ್ವಿವಿಧೈಶ್ಚಂದನಾದ್ಯೈರ್ಮನೋಹರೈಃ ॥೩೪॥

ತತೋ ನಿವೃತ್ತಾಸ್ತೇ ಸರ್ವೇ ಪೂಜಯಿತ್ವಾ ಮಹೇಶ್ವರಂ ।
ಸಾ ತತ್ರ ಗಾನನಿರತಾ ನ ಯಯೌ ಮಂದಿರಂ ಸ್ವಕಂ ॥೩೫॥

ತತಸ್ತದ್ರಮಣೋ ದೃಷ್ಟ್ವಾ ತಾಮಾಹ ಯುವತೀಂ ಮುದಾ ।
ಏಹಿ ಭದ್ರೇ ಸ್ವನಗರಂ ಸಮಾಪ್ತಮಪಿ ಪೂಜನಂ ॥೩೬॥

ಪ್ರದೋಷಕಾಲೋಽಪಿ ಗತಸ್ತ್ವರಯೇತ್ಯಾಹ ಸಾದರಂ ।
ಸಾ ತಮಾಹ ಪ್ರಿಯಂ ಲಜ್ಜಾಂ ತ್ಯಕ್ತ್ವಾ ಭೋಗರತಿಂ ತಥಾ ॥೩೭॥

---

ಶಿವಪೂಜಕರನ್ನು ನೋಡಿ ತಾನೂ ಜಾಗ್ರತೆಯಾಗಿ ಅವರೊಡನೆ ಹೊರಟು ದಿವ್ಯ ವಾದ ಆ ಶಿವಮಂದಿರವನ್ನು ಪ್ರವೇಶಮಾಡಿದಳು. ॥೩೩॥

ಅನಂತರ ಆ ಶಿವಮಂದಿರದಲ್ಲಿ ನಾನಾವಿಧವಾದ ಉಪಚಾರಗಳಿಂದಲೂ ಅಪಾರವಾದ ಹೂವು, ಬಗೆ ಬಗೆಯಾದ ಗಂಧ ಮನೋಹರವಾಗಿರುವ ಚಂದನ ಮುಂತಾದ ಪೂಜಾಸಾಮಗ್ರಿಗಳಿಂದಲೂ ಆ ಪರಶಿವನನ್ನು ಪೂಜೆಮಾಡಿದಳು. ॥೩೪॥

ಮಹೇಶ್ವರನನ್ನು ಪೂಜೆಮಾಡಿದ ನಂತರ ಎಲ್ಲರೂ ಗಂಧರ್ವನಗರಕ್ಕೆ ಹಿಂದಿರುಗಿದರು. ಆದರೆ ಈ ಗಂಧರ್ವಕುಮಾರಿಯು ಮಾತ್ರ ತನ್ನ ಮನೆಗೆ ಹಿಂತಿರುಗದೇ ಅಲ್ಲಿಯೇ ಗಾನತತ್ಪರಳಾಗಿ ಕುಳಿತಳು. ॥೩೫॥

ಅನಂತರ ಆ ಗಂಧರ್ವಕುಮಾರಿಯ ರಮಣನು ತನ್ನ ಪ್ರಿಯೆಯನ್ನು ನೋಡಿ, ಎಲೌ ಮಂಗಳಾಂಗಿಯೇ! ಪೂಜೆಯು ಮುಗಿಯಲಿಲ್ಲವೇ! ನಮ್ಮ ಪಟ್ಟಣಕ್ಕೆ ಹೋಗೋಣ, ಏಳು ಎಂಬುದಾಗಿ ಆ ಯುವತಿಯನ್ನು ಕರೆದನು. ॥೩೬॥

ಪ್ರಿಯೇ! ಪ್ರದೋಷಕಾಲವೂ ಕಳೆದುಹೋಯಿತು. ಇನ್ನು ಜಾಗ್ರತೆಯಾಗಿ ಹೊರಡು ಎಂದು ಆದರದಿಂದ ನುಡಿದ ತನ್ನ ಪತಿಯನ್ನು ಕುರಿತು, ಆ ಕುಮಾರಿಯು ನಾಚಿಕೆಯನ್ನೂ, ಸಂಭೋಗಾಭಿಲಾಷೆಯನ್ನೂ ಬಿಟ್ಟು ಹೀಗೆಂದಳು. ॥೩೭॥

|| ಗಂಧರ್ವನಾರ್ಯುವಾಚ ||

ಗಚ್ಛ ಗಚ್ಛ ಯಥೇಷ್ಟಂ ತ್ವಂ ಯತ್ರ ಕುತ್ರಾಪಿ ರೋಚತೇ ।
ಮಮಾತ್ರೈವ ಸ್ಥಿತಿಸ್ತಾವದ್ಯಾವದ್ದೇಹವಿಸರ್ಜನಂ ||೩೮||

ದುರ್ಲಭಂ ಖಲು ಸಂಪ್ರಾಪ್ತಮಿದಂ ಶಂಕರಮಂದಿರಂ ।
ಅತಃ ಪರಂ ನ ಗಂತವ್ಯಂ ಕುತ್ರಾಪಿ ನ ರತಿಶ್ಚ ಮೇ ||೩೯||

ಕಾಲೋ ನೇಯೋ ಮಯಾ ಸೋಽಯಂ ಶ್ರೀಮಹಾದೇವಪೂಜಯಾ ।
ಅಲಂ ಜೀವನವಾರ್ತಾಭಿರ್ಭೋಗವಾರ್ತಾಭಿರಪ್ಯಲಂ ||೪೦||

ಅಪೂರ್ವಭೋಗೋ ನ ಕ್ವಾಪಿ ಯೋ ಭುಕ್ತೋ ವಿಷಯಃ ಪುರಾ ।
ತತ್ರ ತಾವನ್ನ ಮೇ ವಾಂಛಾ ನಾಽಽಹಾರೇಽಪಿ ರತಿರ್ಮಮ ||೪೧||

---

"ನಿನಗೆ ಇಚ್ಛೆಬಂದ ಕಡೆ ನೀನು ಹೋಗುವವನಾಗು. ನಾನು ಮಾತ್ರ ಇಲ್ಲಿಯೇ ಇದ್ದು ಈ ಶರೀರತ್ಯಾಗವಾಗುವವರೆವಿಗೂ ದೇವಧ್ಯಾನನಿರತಳಾಗಿಯೇ ಕಾಲಕಳೆಯು ವೆನು. ಈಗ ನಿನ್ನೊಡನೆ ನಾನು ಬರಲಾರೆನು. ||೩೮||

ಅತಿ ದುರ್ಲಭವಾದ ಈ ಶಿವಮಂದಿರವೇ ನನಗೆ ಈಗ ದೊರೆತಿರುವುದು. ಇನ್ನು ಮುಂದೆ ನಾನೆಲ್ಲಿಯೂ ಹೋಗಬೇಕಾಗಿಲ್ಲ. ನನಗೆ ಮತ್ತಾವ ಅಪೇಕ್ಷೆಯೂ ಇಲ್ಲ. ||೩೯||

ನಾನು ಸಂಪದ್ಯುಕ್ತನಾದ ಆ ಮಹೇಶ್ವರನ ಪೂಜೆಯಿಂದಲೇ ಈ ಕಾಲ ವನ್ನೆಲ್ಲಾ ಕಳೆಯಬೇಕೆಂದಿರುವೆನು. ಇನ್ನು ಮುಂದೆ ಜೀವನವಿಷಯಕವಾದ ಸಮಾಚಾರಗಳೂ, ಸಂಭೋಗವಾರ್ತೆಯೂ ನನಗೆ ನಿಜವಾಗಿಯೂ ಬೇಡವಾಗಿದೆ. ||೪೦||

ಹಿಂದೆ ನಾನು ಅನುಭವಿಸಿದ ವಿಷಯಭೋಗಗಳಲ್ಲಿ ಯಾವುದರಲ್ಲಿಯೂ ಅಪೂರ್ವವಾದ ಸುಖವು ಕಾಣಲಿಲ್ಲ. ಆದ್ದರಿಂದ ನನಗೆ ಆ ಭೋಗದಲ್ಲಿ ಮತ್ತೆ ಅಪೇಕ್ಷೆಯೇ ಜನಿಸಲಾರದು. ಅಲ್ಲದೆ ನನಗೆ ಈಗ ಆಹಾರದಲ್ಲಿಯೂ ಅಪೇಕ್ಷೆಯಿಲ್ಲ ವಾಗಿದೆ. ||೪೧||

ಅತ್ರ ನಾಟ್ಯೇನ ಗಾನೇನ ಪೂಜಯಾ ಚ ಮಹೇಶ್ವರಃ ।
ಪ್ರೀಣನೀಯೋ ಮಯಾ ಪ್ರಾಪ್ಯಂ ಕೈಲಾಸಸ್ಥಾನಮುತ್ತಮಂ ॥೪೨॥

ಅಪಾರಜನಿದುಃಖಾನಿ ವಿನಶ್ಯಂತಿ ಶಿವಾರ್ಚನಾತ್ ।
ಕೈಲಾಸೇ ತು ವಿಶೇಷೇಣ ಶ್ರೀಮಹಾದೇವಪೂಜಯಾ ॥೪೩॥

ವ್ಯರ್ಥಂ ಜೀವನಮಿತ್ಯವೈಮಿ ಗಿರಿಶಾನಭ್ಯರ್ಚನಾತ್ಕೇವಲಂ
ತತ್ತಾವತ್ಸಫಲಂ ಭವಿಷ್ಯತಿ ತದಾ ವಿಶ್ವೇಶ್ವರಾರಾಧನೇ ।
ಸಂಸಾರೇ ಕಿಮಸಾರಭೂತವಿಷಯೇ ಬುದ್ಧಿಃ ಸತಾಂ ಜಾಯತೇ
ಕಿಂ ತಚ್ಚರ್ವಿತಚರ್ವಣೈರಪಿ ಚಿರಂ ವಾರ್ತಾರಸೈರಪ್ಯಲಂ ॥೪೪॥

ಇತ್ಯುಕ್ತ್ವಾ ವಿರತಾ ತೇನ ವಾರ್ತಾಭಿರಪಿ ಸಾದರಂ ।
ಗಾನನಾಟ್ಯರತಾ ನಾರೀ ಶಿವಾರ್ಚನರತಾಪಿ ಸಾ ॥೪೫॥

---

ಇಲ್ಲಿಯೇ ನರ್ತನದಿಂದಲೂ, ಗಾನದಿಂದಲೂ, ಪೂಜೆಯಿಂದಲೂ ಆ ಮಹೇಶ್ವರನನ್ನು ನಾನು ಸಂತೋಷಪಡಿಸಬೇಕು. ಹಾಗೆಯೇ ಉತ್ತಮವಾದ ಕೈಲಾಸವನ್ನು ಅವನ ಅನುಗ್ರಹದಿಂದ ಸಂಪಾದಿಸಬೇಕು. ॥೪೨॥

ಅಪಾರವಾದ ಜನ್ಮಾಂತರ ಪ್ರಾಪ್ತಿರೂಪವಾದ ದುಃಖಗಳೆಲ್ಲವೂ ಪರಶಿವನ ಪೂಜೆಯಿಂದ ನಾಶವಾಗುವುವು. ವಿಶೇಷವಾಗಿ ಕೈಲಾಸ ಪರ್ವತದಲ್ಲಿ ಆ ಮಹಾದೇವನನ್ನು ಪೂಜಿಸುವುದರಿಂದ ಇನ್ನೂ ವಿಶೇಷವಾಗಿ ಒದಗಿರುವ ದುಃಖಗಳೆಲ್ಲಾ ನಿರ್ಮೂಲವಾಗುವುವು. ॥೪೩॥

ಮಹೇಶ್ವರನನ್ನು ಪೂಜೆಮಾಡದಿರುವವನ ಜನ್ಮವು, ಕೇವಲ ವ್ಯರ್ಥವೆಂದೇ ತಿಳಿಯುವೆನು. ಜಗದೀಶ್ವರನಾದ ಆ ಶಿವನನ್ನು ಪೂಜೆಮಾಡಿದರೆ ಮಾತ್ರ ಆ ಜನ್ಮವು ನಿಜವಾಗಿಯೂ ಸಫಲವೆನಿಸುವುದು. ನಿಸ್ಸಾರವಾದ ವಿಷಯ ಸುಖವುಳ್ಳ ಈ ಸಂಸಾರದಲ್ಲಿ ಸತ್ಪುರುಷರಿಗೂ ಏಕೆ ಬುದ್ಧಿಯುಂಟಾಗುವುದೋ ನಾನು ಕಾಣೆನು. ಆ ಸಂಸಾರದಲ್ಲಿ ಸಕಲ ವಿಷಯಗಳೂ ಚರ್ವಿತಚರ್ವಣವಾಗುವುವೇ ಹೊರತು ಹೊಸದೇನೂ ಇಲ್ಲ. ಆದುದರಿಂದ ಅನುಭವಿಸಿದ್ದನ್ನೇ ಪುನಃಪುನಃ ಅನುಭವಿಸುವ ಆ ಸಂಸಾರ ವಿಷಯಕವಾದ ವೃತ್ತಾಂತಗಳು ಇನ್ನು ಸಾಕು. ॥೪೪॥

ಹೀಗೆ ತನ್ನ ಪತಿಗೆ ಹೇಳಿ ಅವನೊಡನೆ ಆದರ ಪೂರ್ವಕವಾಗಿ ಮಾತನಾಡು

ತಾಂ ವಿಲೋಕ್ಯ ಪ್ರಹೃಷ್ಟಾ ಸಾ ರಾಜಕನ್ಯಾ ಮನೋರಮಾ ।
ಚಕಾರ ವಸತಿಂ ತತ್ರ ಶಿವಾರ್ಚನಪರಾಯಣಾ ॥೪೬॥

ರಾತ್ರೌ ಜಾಗರಣಂ ಕೃತ್ವಾ ನಾಟ್ಯಗಾನಪುರಃಸರಂ ।
ಅವಾಪ ಪರಮಾಂ ಪ್ರೀತಿಂ ಪಶ್ಚಾನ್ಮುಕ್ತಾ ತಯಾ ಸಹ ॥೪೭॥

ಏವಂ ಭಾಗ್ಯೇನ ಸಂಪ್ರಾಪ್ಯ ಜನ್ಮ ಶಂಕರಮಂದಿರೇ ।
ಪೂಜಯಿತ್ವಾ ಮಹಾದೇವಂ ಪ್ರಾಪ್ನುವಂತಿ ಪರಂ ಸುಖಂ ॥೪೮॥

ಅತಃ ಸಂಸಾರವಾರ್ತಾಭಿರಲಂ ಕಮಲಲೋಚನೇ ।
ಪೂಜನೀಯೋ ಮಹಾದೇವೋ ವಿಭವೇ ಸತಿ ಸಾಧನೈಃ ॥೪೯॥

---

ವುದರಲ್ಲಿಯೂ ಉದಾಸೀನಳಾಗಿ, ಆ ಗಂಧರ್ವ ಕನ್ಯೆಯು ಶಿವಪೂಜಾಸಕ್ತಳಾಗಿ ಗಾನ ಮತ್ತು ನರ್ತನ ಇವುಗಳಲ್ಲಿ ತೊಡಗಿದಳು. ॥೪೫॥

ಆ ಗಂಧರ್ವ ಕುಮಾರಿಯನ್ನು ನೋಡಿ ಸಂತೋಷ ಹೊಂದಿ ರಾಜಕುಮಾರಿ ಯಾದ ಆ ಮನೋರಮೆಯೆಂಬುವಳೂ ಅಲ್ಲಿಯೇ ಶಿವಪೂಜಾಪರಾಯಣಳಾಗಿ ವಾಸಮಾಡತೊಡಗಿದಳು. ॥೪೬॥

ರಾತ್ರಿಯೆಲ್ಲಾ ನಾಟ್ಯ ಮತ್ತು ಸಂಗೀತ ಇವುಗಳಲ್ಲಿ ಲೀನಳಾಗಿ ಜಾಗರಣೆ ಮಾಡಿ, ಆತ್ಮತೃಪ್ತಿ ಹೊಂದಿದಳು. ಹೀಗೆ ಆ ಗಂಧರ್ವಕುಮಾರಿಯೂ ರಾಜಕುಮಾರಿ ಯಾದ ಮನೋರಮೆಯೊಡನೆ ಸರ್ವದಾ ಶಿವಪೂಜೆಮಾಡುತ್ತಾ ಇದ್ದು ಕೊನೆಗೆ ಮೋಕ್ಷವನ್ನೈದಿದಳು. ॥೪೭॥

ಹೀಗೆಯೇ ಭಾಗ್ಯವಶದಿಂದ ಮಾನವಜನ್ಮವನ್ನು ಪಡೆದು, ಅದೇ ಸುಕೃತ ಮಹಿಮೆಯಿಂದ ಶಂಕರನನ್ನು ಶಿವದೇವಾಲಯದಲ್ಲಿ ಭಕ್ತಿಪುರಸ್ಸರವಾಗಿ ಪೂಜಿಸಿ, ಮಾನವರು ಉತ್ತಮವಾದ ಸುಖವನ್ನೈದುವರು. ॥೪೮॥

ತಾವರೆಯಂತೆ ಕಣ್ಣುಗಳುಳ್ಳ ನಾರೀಮಣಿಯೇ! ಈ ಕಾರಣಗಳಿಂದ ಸಂಸಾರವಿಷಯಕವಾದ ಸಮಾಚಾರಗಳನ್ನು ದೂರಮಾಡಿ, ಐಶ್ವರ್ಯವಿದ್ದಾಗ ಉಚಿತ ವಾದ ಪೂಜಾಸಾಧನಗಳಿಂದ ಆ ಮಹಾದೇವನನ್ನು ಪೂಜಿಸಬೇಕು. ॥೪೯॥

ತಜ್ಜೀವನಂ ವ್ಯರ್ಥಮಿತಿ ಸ್ಮರಂತಿ
ಯೇನೇಶಪಾದಾಂಬುಜಮರ್ಚಿತಂ ನ ।
ತಜ್ಜೀವನಂ ಧನ್ಯಮಿತಿ ಸ್ಮರಂತಿ
ಯೇನಾರ್ಚಿತಂ ಲಿಂಗಮಪಾರಪುಣ್ಯೈಃ ॥೫೦॥

ಧನ್ಯಂ ಮನ್ಯೇ ಜೀವನಂ ತಸ್ಯ ಲೋಕೇ
ಯಸ್ಯೇಶಾನಧ್ಯಾನಮೇಕಂ ವರೇಣ್ಯಂ ।
ಆಶಾಸ್ಯಂ ಸ್ಯಾದನ್ಯದಾಶಾಸ್ಯಮಸ್ಮಿ
ನ್ಲೋಕೇ ನಾಸ್ತೀತ್ಯೇವ ಮನ್ಯೇ ಸತಾಂ ತು ॥೫೧॥

ವಿರತಾಃ ಸತತಂ ಶಾಂತಾಃ ಪೂಜಯಂತಿ ಸದಾಶಿವಂ ।
ಲಿಂಗಂ ಬಿಲ್ವೈರ್ದಲೈರ್ವಾಪಿ ಫಲೈರಪಿ ಮುಹುರ್ಮುಹುಃ ॥೫೨॥

ಕೋ ವಾ ಶಿವಮನಾರಾಧ್ಯ ಸುಖಂ ಪ್ರಾಪ್ನೋತಿ ಮಾನವಃ ।
ಕ್ಷುಧಿತೋ ಭೋಜನೇನಾಪಿ ವಿನಾ ತೃಪ್ತೋಽಪಿ ಕಿಂ ನರಃ ॥೫೩॥

---

ಆ ಪರಮೇಶನ ಪಾದಕಮಲವನ್ನು ಪೂಜೆಮಾಡದಿರುವವನ ಜನ್ಮವು ವ್ಯರ್ಥವೆಂದು ಹೇಳುವರು. ಅಲ್ಲದೆ ಆ ಪರಶಿವನ ಲಿಂಗವನ್ನು ಅನೇಕ ಪುಣ್ಯವಿಶೇಷಗಳಿಂದ ಪೂಜೆಮಾಡುವ ಭಕ್ತನ ಜೀವನವೇ ಧನ್ಯವೆಂದೂ ದೊಡ್ಡವರು ಹೇಳುತ್ತಿರುವರು. ||೫೧||

ಲೋಕದಲ್ಲಿ ಆ ಸರ್ವೇಶ್ವರನ ಶ್ರೇಷ್ಠವಾದ ಧ್ಯಾನವೊಂದೇ ಯಾವ ಮಾನವನಿಗೆ ಮುಖ್ಯವ್ರತವಾಗಿರುವುದೋ ಅವನೇ ಧನ್ಯನೆಂದು ತಿಳಿಯುವೆನು. ಈ ಲೋಕದಲ್ಲಿ ಸತ್ಪುರುಷರಿಗೆ ಇದಕ್ಕಿಂತಲೂ ಬೇರೆಯಾದ ಉತ್ತಮಕಾರ್ಯವು ಯಾವುದೂ ಇಲ್ಲವೆಂದೇ ನನ್ನ ಭಾವನೆ. ||೫೧||

ಈ ಲೋಕದಲ್ಲಿ ವಿಷಯಸುಖಗಳಿಂದ ವಿರತರಾಗಿ ಶಾಂತಚಿತ್ತರಾಗಿರುವ ಮಾನವರು, ಯಾವಾಗಲೂ ಆ ಸದಾಶಿವನನ್ನು ಬಿಲ್ವದಳಗಳಿಂದಲೂ, ನೀರು, ಹಣ್ಣು, ಮತ್ತು ಇತರ ಪೂಜಾಸಾಮಗ್ರಿಗಳು ಇವುಗಳಿಂದಲೂ ಪದೇ ಪದೇ ಪೂಜೆ ಮಾಡುತ್ತಿರುವರು. ||೫೨||

ಹಸಿವಿನಿಂದ ಪೀಡಿತನಾದ ನರನು ಭೋಜನವಿಲ್ಲದೇ ಎಂದಿಗೂ ತೃಪ್ತ

ಸೌಭಾಗ್ಯಕಾಮಾ ಅಪಿ ಪೂಜಯಂತಿ
ಮಹೇಶ್ವರಂ ಪಾಪವಿನಾಶಕಾಮಃ ।
ತಂ ಸ್ವರ್ಗಕಾಮಾ ಅಪಿ ಪೂಜಯಂತಿ
ತಂ ಮೋಕ್ಷಕಾಮಾ ಅಪಿ ಪೂಜಯಂತಿ ॥೫೪॥

ಸ್ವರ್ಗಾಪವರ್ಗಪ್ರದಮೇಕಮೀಶಂ
ಮತ್ವಾ ಶಿವಾಚಾರರತಾಃ ಪ್ರಶಾಂತಾಃ ।
ಲಿಂಗೇ ಮಹಾದೇವಮುಮಾಸಹಾಯಂ
ಸಮರ್ಚಯಂತಿ ಪ್ರಮಥಾಧಿನಾಥಂ ॥೫೫॥

ಅಲ್ಪಾಯಾಸೇನೈವ ಸಂಸಾರಬಂಧೋ
ವಿಚ್ಛಿನ್ನಃ ಸ್ಯಾದಿತ್ಯತೋ ಲಿಂಗಪೂಜಾಂ ।
ಕುರ್ವಂತೀತಿ ಪ್ರಾಣಿನಃ ಪ್ರಾಪ್ನುವಂತಃ
ಸ್ವಾಭೀಷ್ಟಾರ್ಥಾನ್ತೇ ಪುನಃ ಪೂಜಯಂತಿ ॥೫೬॥

---

ನಾಗನು. ಒಂದು ವೇಳೆ ಹಾಗೆ ತೃಪ್ತಿಹೊಂದಿದರೂ ಆ ಪರಶಿವನನ್ನು ಪೂಜಿಸದ ಮಾನವನು ಎಂದಿಗೂ ಯಾವ ಸುಖವನ್ನೂ ಹೊಂದಲಾರನು. ||೫೩||

ಪಾಪಧ್ವಂಸಕನಾದ ಆ ಪರಮೇಶ್ವರನ ಸೌಭಾಗ್ಯವನ್ನು ಅಪೇಕ್ಷಿಸುವವರೂ, ಪಾಪನಾಶವನ್ನು ಬಯಸುವವರೂ, ಹಾಗೆಯೇ ಸ್ವರ್ಗ ಮತ್ತು ಮೋಕ್ಷ ಇವುಗಳನ್ನು ಇಚ್ಛಿಸುವವರೂ ಸರ್ವದಾ ಪೂಜೆಮಾಡುತ್ತಿರುವರು. ||೫೪||

ಶಿವವ್ರತನಿರತರಾದ ಪ್ರಶಾಂತಮನಸ್ಸುಳ್ಳ ಭಕ್ತರು, ಸ್ವರ್ಗ ಮತ್ತು ಮೋಕ್ಷ ಇವುಗಳನ್ನು ಕರುಣಿಸುವ ಅದ್ವಿತೀಯನಾದ ಮಹಾದೇವನನ್ನು ಉಮಾರಮಣ, ಪ್ರಮಥಗಣಗಳಿಗೊಡೆಯ ಎಂಬ ನಾಮಾಂತರಗಳಿಂದ ಶಿವಲಿಂಗದಲ್ಲಿ ಭಾವಿಸಿ ಪೂಜೆಮಾಡುವರು. ||೫೫||

ಸ್ವಲ್ಪಕ್ಲೇಶದಿಂದಲೇ ಈ ಸಂಸಾರವೆಂಬ ಬಂಧನವು ನಾಶವಾಗುವುದೆಂದು ತಿಳಿದು ಮಾನವರು ಈ ಶಿವಲಿಂಗವನ್ನು ಭಕ್ತಿಪುರಸ್ಸರವಾಗಿ ಪೂಜಿಸುವರು. ಇದಲ್ಲದೇ ಪ್ರಾಣಿಗಳು, ತಮ್ಮ ಸಕಲ ಇಷ್ಟಾರ್ಥಗಳೂ ಆ ಪರಮೇಶ್ವರನೊಬ್ಬನಿಂದಲೇ ಉಂಟಾಯಿತೆಂದು ತಿಳಿದು, ಪುನಃಪುನಃ ಆ ಶಿವಲಿಂಗವನ್ನು ತಪ್ಪದೆ ಪೂಜೆಮಾಡುವರು. ||೫೬||

ಕಷ್ಟಾನಿ ನಶ್ಯಂತ್ಯಖಿಲಾನಿ ತಾನಿ
ಯೈರಿಷ್ಟಲಾಭೋಽಪಿ ಸ ಸರ್ವಥಾಪಿ ।
ಮಹೇಶಲಿಂಗಾರ್ಚನಮಾತ್ರತೋಽತಃ
ಶಿವಾರ್ಚನೇನೈವ ಸುಖಾನಿ ನಿತ್ಯಂ ॥೫೭॥

ಶಿವಪ್ರಸಾದೋಽಪಿ ಶಿವಾರ್ಚನೇನ
ಭವತ್ಯತಸ್ತೇನ ಹಿತಾರ್ಥಸಿದ್ಧಿಃ ।
ನಾನ್ಯೇನ ತತ್ಸಿದ್ಧಿರಿತಿ ಸ್ಮರಾಮಿ
ನಾನ್ಯೇನ ಸಾ ಮುಕ್ತಿಕಥಾಪಿ ನೂನಂ ॥೫೮॥

ಸಂಸಾರದವಸಂಕ್ರಾಂತಾಃ ಪ್ರಾಣಿನಃ ಪರಿತಾಪತಃ ।
ಶಿವಾರ್ಚನಮಹಾವೃಷ್ಟಿಧಾರಾಂ ವಾಂಛಂತಿ ಸಂತತಂ ॥೫೯॥
ಪಾಪಾನಲಮಹಾಜ್ವಾಲಾಜಾಲಾವಿಚ್ಛೇದಸಾಧನಂ ।
ಶಿವಾರ್ಚನರಸೇ ರಕ್ತಾಃ ಪೂಜಯಂತ್ಯಭಿವಾಂಛಿತಂ ॥೬೦॥

---

ಸಕಲ ಕಷ್ಟಗಳೂ ನಾಶವಾಗಿ, ಸರ್ವಪ್ರಕಾರದಿಂಧಲೂ ಭಕ್ತರ ಅಭೀಷ್ಟ ಲಾಭವು ಆ ಮಹೇಶ್ವರನ ಲಿಂಗಪೂಜೆಮಾತ್ರದಿಂದಲೇ ಉಂಟಾಗುವುದಲ್ಲದೆ ಆ ಪರ ಶಿವನ ಪೂಜೆಯಿಂದಲೇ, ನಿತ್ಯಸುಖವೆನಿಸಿದ ಬ್ರಹ್ಮಾನಂದವೂ ಲಭಿಸುವುದು. ॥೫೭॥

ಶಿವನ ಪೂಜೆಯಿಂದಲೇ ಆ ಪರಮೇಶ್ವರನ ಅನುಗ್ರಹವೂ ಆದರಿಂದ ಇಷ್ಟಾರ್ಥಸಿದ್ಧಿಯೂ ಉಂಟಾಗುವುದಲ್ಲದೇ ಬೇರೆ ಯಾವುದರಿಂದಲೂ ಅದು ಸುಲಭ ವಾಗಿ ದೊರೆಯಲಾರದು. ಮೋಕ್ಷಸುಖವು ಆ ಪರಶಿವನಿಂದಲೇ ನಿಜವಾಗಿಯೂ ಉಂಟಾಗುವುದರಿಂದ ಅವನನ್ನೇ ನಾನು ಸದಾ ಸ್ಮರಿಸುವೆನು. ॥೫೮॥

ಸಂಸಾರವೆಂಬ ಕಾಡುಗಿಚ್ಚಿಗೆ ಸಿಕ್ಕಿ ತಾಪಗೊಂಡಿರುವ ಪ್ರಾಣಿಗಳು ಆ ತಾಪ ಪರಿಹಾರಕ್ಕೋಸ್ಕರ ಶಿವಪೂಜಾರೂಪವಾದ ಮಹಾವೃಷ್ಟಿಯ ಧಾರೆಗಳನ್ನು ಯಾವಾ ಗಲೂ ಅಪೇಕ್ಷಿಸುತ್ತಿರುವರು. ॥೫೯॥

ಪಾಪಗಳೆಂಬ ಅಗ್ನಿಜ್ವಾಲೆಯ ಸಮೂಹಗಳನ್ನು ನಾಶಪಡಿಸಲು ಸಾಧನ ಭೂತವಾದ ಆ ಪರಶಿವನನ್ನು ಕೇವಲ ಶಿವಪೂಜಾರಸಮಗ್ನರಾದ ಭಕ್ತರು ಪೂಜೆ ಮಾಡಿ ಬೇಕಾದ ಫಲಗಳನ್ನು ಪಡೆಯುತ್ತಾರೆ. ॥೬೦॥

ಸಂಸಾರಕಷ್ಟೇ ದುಷ್ಟಾನಾಂ ದುರದೃಷ್ಟೈರ್ಮತಿರ್ಭವೇತ್ ।
ಸಾ ಮತಿಃ ಸಹಸಾ ತಾವನ್ನ ನಶ್ಯತ್ಯಶಿವಾರ್ಚನೇ ॥೬೧॥

ಶಿವಾರ್ಚನಾನಲೇನೈವ ಕಷ್ಟರಾಶಿರ್ವಿನಶ್ಯತಿ ।
ಸ ಕಿಂ ಜಲಲವೈಃ ಶಾಂತಃ ಕದಾಚಿದಪಿ ಜಾಯತೇ ॥೬೨॥

ಮಹಾಪ್ರಲಯಕಾಲಾಗ್ನಿಸ್ವರೂಪಾಘಕುಲಕ್ಷಯಃ ।
ಶಿವಾರ್ಚನಮಹಾವೃಷ್ಟಿಪ್ರವಾಹೈಶ್ಚ ಭವಿಷ್ಯತಿ ॥೬೩॥

ಯಾವನ್ನ ಸಂಸಾರಮಹಾಗ್ನಿತಾಪಃ
ತಾವಚ್ಛಿವಾರಾಧನವೃಷ್ಟಿಪೂರಃ ।
ಸಂಪಾದನೀಯಸ್ತ್ವರಯಾ ತದಾ ತು
ತದರ್ಜನಂ ಕಿಂ ಭವತೀಹ ಶಕ್ಯಂ ॥೬೪॥

---

ದುಷ್ಟರಾದ ಕೆಲವರಿಗೆ ಅವರ ದುರದೃಷ್ಟವಶದಿಂದ ಸಂಸಾರಕ್ಲೇಶದಲ್ಲಿ ಬುದ್ಧಿಯುಂಟಾಗುವುದು. ಶಿವಾರ್ಚನೆಯನ್ನು ಮಾಡದೇ ಹೋದರೆ ಆ ಬುದ್ಧಿಯು ಕೂಡಲೇ ನಾಶವಾಗುವುದಿಲ್ಲ. ॥೬೧॥

ಶಿವಪೂಜಾರೂಪವಾದ ಅಗ್ನಿಯಿಂದಲೇ ಆ ಸಂಸಾರವಿಷಯಕವಾದ ಕಷ್ಟಪರಂಪರೆಗಳೆಲ್ಲಾ ನಾಶವಾಗುವುವು. ಇಂತಹ ಸಾಂಸಾರಿಕಕ್ಲೇಶರೂಪವಾದ ಅಗ್ನಿಯು ಎಂದಿಗಾದರೂ ನೀರಿನ ಹನಿಗಳಿಂದ ಶಾಂತವಾದೀತೇ! ಎಂದಿಗೂ ಶಾಂತವಾಗಲಾರದು. ॥೬೨॥

ಮಹಾಪ್ರಳಯಕಾಲದ ಅಗ್ನಿಸ್ವರೂಪವಾಗಿರುವ ಪಾಪರಾಶಿಯು ಆ ಶಿವಪೂಜಾರೂಪವಾದ ಮಹಾವೃಷ್ಟಿಗಳ ಪ್ರವಾಹಗಳಿಂದಲೇ ಶಾಂತವಾಗುವುದು. ॥೬೩॥

ಈ ಸಂಸಾರರೂಪವಾದ ಅಗ್ನಿಯ ತಾಪವು ನಾಶವಾಗುವ ಪರ್ಯಂತ ಶಿವಪೂಜಾರೂಪವಾದ ವೃಷ್ಟಿಯ ಪ್ರವಾಹವನ್ನು ನಾವು ಸಂಪಾದಿಸಿಕೊಳ್ಳಲೇಬೇಕು. ಆದರೆ ಜಾಗ್ರತೆಯಾಗಿ ಅದನ್ನು ಸಂಪಾದಿಸಲು ಹೇಗೆ ಸಾಧ್ಯವೋ, ಅದನ್ನು ನಾನರಿಯೆ ! ॥೬೪॥

ಸಂಸಾರದುಃಖದವಕೋಟಿವಿನಾಶನಾಯ
ಲಿಂಗಾರ್ಚನಾಂಬುಧಿತರಂಗಪರಂಪರಾಣಾಂ ।
ಸೃಷ್ಟಿಃ ಕೃತಾ ಖಲು ಶಿವೇನ ಕೃಪಾರ್ಣವೇನ
ನಾನ್ಯೇನ ತಸ್ಯ ವಿಲಯೋ ಭವತೀತಿ ಮನ್ಯೇ ॥೬೫॥

ಜಂಬೂದ್ವೀಪನಿವಾಸಿನಾಂ ಖಲು ಮಹದ್ಭಾಗ್ಯಂ ಶಿವಾರಾಧನಾ
ದಾಪತ್ಪರ್ವತನಾಶನೇ ಸತಿ ಮುಹುರ್ಭಾಗ್ಯೋದಯೋ ಜಾಯತೇ ।
ಪಶ್ಚಾನ್ಮುಕ್ತಿರಪೀತಿ ಭಾಗ್ಯಮತುಲಂ ಸಂಪ್ರಾಪ್ಯತೇ ಕೇವಲಂ
ಲಿಂಗೇ ಶಂಕರಪೂಜನೇನ ತದಿದಂ ಸಾಕ್ಷಾನ್ನಿಧಾನಂ ಸ್ಮೃತಂ॥೬೬॥

ನ ಸ್ವರ್ಗೇಽಪಿ ತಥಾವಿಧಂ ಸುಖಮಿತಿ ಜ್ಞಾತಂ ಮಯಾ ಸರ್ವಥಾ
ಕೈಲಾಸೇಽಪಿ ನ ಸರ್ವಥಾ ಭುವಿ ಯಥಾ ಲಿಂಗಾರ್ಚನಾಲ್ಲಭ್ಯತೇ ।
ಲಿಂಗಾರಾಧನಪುಣ್ಯಜಾತಜನಿತಃ ಕೈಲಾಸವಾಸೋ ಯತಃ ।
ತಲ್ಲಿಂಗಾರ್ಚನಮೇವ ತಾವದಧುನಾ ಪುಣ್ಯೇಷು ಪುಣ್ಯೋತ್ತಮಂ ॥೬೭॥

---

ಕೃಪಾಸಮುದ್ರನಾದ ಆ ಪರಶಿವನು, ಸಾಂಸಾರಿಕವಾದ ದುಃಖವೆಂಬ ಅನೇಕ ಕಾಡುಗಿಚ್ಚುಗಳನ್ನು ನಾಶಪಡಿಸುವುದಕ್ಕೋಸ್ಕರವಾಗಿಯೇ ಈ ಶಿವಲಿಂಗಪೂಜಾ ರೂಪವಾದ ಸಮುದ್ರ ಪ್ರವಾಹದ ಪರಂಪರೆಗಳನ್ನು ಸೃಷ್ಟಿಮಾಡಿರುವನೋ! ಎಂದು ನಾನು ಊಹಿಸುವೆನು. ಇದರಿಂದಲ್ಲದೇ ಮತ್ತಾವುದರಿಂದಲೂ ಈ ಸಾಂಸಾರಿಕವಾದ ದುಃಖಗಳು ನಾಶವಾಗಲಾರವು. ॥೬೫॥

ಜಂಬೂದ್ವೀಪದಲ್ಲಿ ವಾಸಮಾಡುವ ಜನರಿಗೆ ಒಂದು ಮಹಾಭಾಗ್ಯವೇ ಸರಿ. ಅವರು ಶಿವಪೂಜೆಮಾಡುವುದರಿಂದ ಪರ್ವತದಂತೆ ದೊಡ್ಡವಾಗಿರುವ ವಿಪತ್ತುಗಳೆಲ್ಲಾ ನಾಶವಾಗಿ ಅತಿಶಯವಾದ ಭಾಗ್ಯಪ್ರಾಪ್ತಿಯುಂಟಾಗುವುದು. ಆಮೇಲೆ ಶಾಶ್ವತವಾದ ಮುಕ್ತಿಯೂ ದೊರೆಯುವುದು. ಕೇವಲ ಶಿವಲಿಂಗದಲ್ಲಿ ಆ ಶಂಕರನನ್ನು ಪೂಜೆಮಾಡುವುದರಿಂದಲೇ ಅಸದೃಶವಾದ ಈ ಭಾಗ್ಯವುಂಟಾಗುವುದರಿಂದ ಸಕಲವಾದ ಈ ಮಹಾಭಾಗ್ಯಗಳಿಗೂ ಆ ಶಿವಲಿಂಗಪೂಜೆಯೇ ಮೂಲಕಾರಣವೆಂದು ತಿಳಿಯಬಹುದಲ್ಲವೆ! ॥೬೬॥

ಈ ಭೂಲೋಕದಲ್ಲಿ ಶಿವಲಿಂಗಪೂಜೆಮಾಡಿದರೆ ಉಂಟಾಗುವ ಸುಖವು ಸ್ವರ್ಗದಲ್ಲಿಯಾಗಲೀ, ಕೈಲಾಸದಲ್ಲಿಯಾಗಲೀ, ಎಂದಿಗೂ ದೊರೆಯಲಾರದು.

ಇತಿ ತದ್ವಚನಂ ಶ್ರುತ್ವಾ ಸಾಪಿ ಸಂತುಷ್ಟಮಾನಸಾ ।
ಶಿವಪೂಜಾರತಾ ಜಾತಾ ವಿವಿಧೈಃ ಸಾಧನೈರ್ಮುಹುಃ ॥೬೮॥

ತತಃ ಪ್ರಬೋಧಂ ಸಂಪ್ರಾಪ ಗಣೋಚ್ಚವಚನೈಸ್ತದಾ ।
ಸಮುತ್ಥಾಯಾತಿಚಿಂತಾರ್ತಾ ನಿಮೀಲ್ಯ ನಯನಾಂಬುಜೇ ॥೬೯॥

ತತಃ ಪರಂ ಗಣೈರುಕ್ತಾ ವಿಮಾನವರಮುತ್ತಮಂ ।
ಆರುಹ್ಯಾಯಾಹಿ ಸುಭಗೇ ಕೈಲಾಸಭವನಂ ಪ್ರತಿ ॥೭೦॥

ಇತಿ ತದ್ವಚನಂ ಶ್ರುತ್ವಾ ಸಾ ತಾನಾಹಾತಿವಿಸ್ಮಿತಾ ।
ಯೇಷ್ವಾಕ್ರಾಂತಾಪಿ ತೇಷ್ವಾಶು ಹಿತಾಹಿತಪುರಃಸರಂ ॥೭೧॥

---

ಆ ಕೈಲಾಸವಾಸವೆಂಬುದು ಕೇವಲ ಲಿಂಗಪೂಜಾಚರಣೆಯಿಂದುಂಟಾದ ಪುಣ್ಯವಿಶೇಷ ದಿಂದಲೇ ದೊರೆಯುವುದು. ಆದುದರಿಂದ ಆ ಶಿವಲಿಂಗಪೂಜೆಯೇ ಈಗ ಸಕಲ ಪುಣ್ಯಕಾರ್ಯಗಳಲ್ಲಿಯೂ ಅತ್ಯುತ್ತಮವಾದ ಪುಣ್ಯಪ್ರದವಾಗಿರುವುದು. ॥೬೭॥

ಶಿವಭಕ್ತನ ಈ ರೀತಿಯಾದ ಮಾತುಗಳನ್ನು ಕೇಳಿ ಸಂತುಷ್ಟಾಂತರಂಗ ಳಾದ ಆ ಚಾರಣಸ್ತ್ರೀಯು, ತಾನೂ ನಾನಾವಿಧವಾದ ಪೂಜಾಸಾಧನಗಳಿಂದ ಶಿವಪೂಜಾತತ್ಪರಳಾಗಿ ಮೈಮರೆತಳು. ॥೬೮॥

ಇಷ್ಟಾದನಂತರ ಶಿವಗಣಗಳ ಗಂಭೀರವಾದ ಮಾತುಗಳಿಂದ ಅವಳಿಗೆ ಎಚ್ಚರವಾಯಿತು. ಆಗ ಅವಳು ಎದ್ದು ತಾವರೆಯಂತಿರುವ ತನ್ನ ಕಣ್ಣುಗಳನ್ನು ಹಾಗೆಯೇ ಮುಚ್ಚಿಕೊಂಡೇ ಚಿಂತೆಗೊಳಗಾದಳು. ॥೬೯॥

ಅನಂತರ ಶಿವಗಣಗಳು, "ಎಲೌ ಸೌಭಾಗ್ಯವತಿಯೇ, ಈ ಉತ್ತಮವಾದ ವಿಮಾನವನ್ನೇರಿ ಕೈಲಾಸಪಟ್ಟಣಕ್ಕೆ ತೆರಳುವಳಾಗು" ಎಂದು ಆ ಚಾರಣಸ್ತ್ರೀಗೆ ಹೇಳಿದರು. ॥೭೦॥

ಹೀಗೆ ನುಡಿದ ಶಿವಗಣಗಳ ಮಾತುಗಳನ್ನು ಕೇಳಿ ಆ ಚಾರಣಾಂಗನೆಯು ಅತ್ಯಾಶ್ಚರ್ಯಚಕಿತಳಾದಳು. ಅವರೆಲ್ಲರೂ ಈರೀತಿ ಒಟ್ಟಿಗೆ ಹೇಳಿದರೂ ಅವರಲ್ಲಿ ಹಿತಾಹಿತಪೂರ್ವಕವಾಗಿ ವಿಚಾರಮಾಡುತ್ತಾ ಅವರನ್ನು ಕುರಿತು ಹೀಗೆಂದಳು॥೭೧॥

॥ ಚಾರಣನಾರ್ಯುವಾಚ ॥

ಪುಣ್ಯಸಾಧನಭೂತಸ್ಯ ಶಿವಲಿಂಗಾರ್ಚನಸ್ಯ ಯಃ ।
ವಿಘ್ನಂ ಕರೋತಿ ಕಾ ತಸ್ಯ ಗತಿರ್ಭವತಿ ತದ್ವದ ॥೭೨॥

ಇತಿ ತದ್ವಚನಂ ಶ್ರುತ್ವಾ ಭೃಂಗೀ ಪ್ರಾಹಾತಿವಿಸ್ಮಿತಃ ।
ಶಿವಜ್ಞಾನಾಂಕುರಸ್ಯೇಯಂ ಭೂರಭೂದಿತಿ ಸಾದರಂ ॥೭೩॥

॥ ಭೃಂಗ್ಯುವಾಚ ॥

ಸಮ್ಯಕ್ಪೃಷ್ಟಮಿದಂ ಭದ್ರೇ ಭದ್ರಮಸ್ತು ತವಾಧುನಾ ।
ಶಿವಾರ್ಚನೇ ಕಥಂ ಭಕ್ತಿಸ್ತವ ಜಾತಾ ವಿಮುಕ್ತಿದಾ ॥೭೪॥

ಧನ್ಯಾಸಿ ಕೃತಕೃತ್ಯಾಸಿ ಮಾನ್ಯಾಸಿ ಮನುಜೇಶ್ವರೈಃ ।
ಅಭೂತಪೂರ್ವಾ ತೇ ಬುದ್ಧಿರಧುನಾ ಸಮಭೂತ್ಕಥಂ ॥೭೫॥

---

ಎಲೈ ಗಣೋತ್ತಮರೇ! ಪುಣ್ಯಗಳಿಗೆ ಸಾಧನವಾಗಿರುವ ಶಿವಲಿಂಗಪೂಜೆಗೆ ವಿಘ್ನವನ್ನುಂಟುಮಾಡುವವರಿಗೆ ಉಂಟಾಗುವ ಗತಿಯಾವುದು? ಅದನ್ನು ಮೊದಲು ನನಗೆ ತಿಳಿಸಿ ಎಂದು ಕೇಳಿದಳು. ॥೭೨॥

ಆ ಚಾರಣಾಂಗನೆಯ ಮಾತನ್ನು ಕೇಳಿ ಭೃಂಗಿಯು ಅತ್ಯಾಶ್ಚರ್ಯಹೊಂದಿ, ಇವಳು ಈಗ ನಿಜವಾಗಿ ಶಿವವಿಷಯಕವಾದ ಜ್ಞಾನೋದಯಕ್ಕೆ ಅಂಕುರಸ್ಥಾನಳಾಗಿರುವಳೆಂದು ತಿಳಿದು, ಆದರದಿಂದ ಆ ನಾರಿಯನ್ನು ಕುರಿತು ಮುಂದೆ ಹೇಳುವಂತೆ ತಿಳಿಸಿದನು. ॥೭೩॥

"ಎಲೌ ಮಂಗಳಾಂಗಿಯೇ! ಈಗ ನೀನು ಪ್ರಶ್ನೆಮಾಡಿದುದು ಉಚಿತವಾಗಿದೆ. ನಿನಗೆ ಮಂಗಳವಾಗಲಿ. ಮೋಕ್ಷಪ್ರದವಾದ ಈ ಶಿವಪೂಜಾವಿಷಯದಲ್ಲಿ ನಿನಗೆ ಭಕ್ತಿಯುಂಟಾದ ಬಗೆ ಹೇಗೆ? ॥೭೪॥

ನೀನೇ ಧನ್ಯಳೂ ಕೃತಕೃತ್ಯಳೂ ಆಗಿರುವೆ. ಅಲ್ಲದೇ ಮಾನವಶ್ರೇಷ್ಠರೆಲ್ಲರಿಂದ ನೀನು ಪೂಜ್ಯಳೆನಿಸಿರುವೆ. ಹಿಂದೆ ನಿನಗೆ ಇಲ್ಲದೆ ಇದ್ದ ಈ ಶಿವಪೂಜಾಬುದ್ಧಿಯು ಈಗ ಹೇಗೆ ಉಂಟಾಯಿತು? ॥೭೫॥

ಪ್ರಶ್ನೋತ್ತರಸ್ಯ ಶ್ರವಣಾದಪಿ ಪಾಪವಿನಾಶನಂ ।
ಭವತ್ಯೇವ ನ ಸಂದೇಹಃ ಪ್ರಶ್ನೋಽಪ್ಯಘವಿನಾಶಕಃ ॥೭೬॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಪೂರ್ವಮತ್ರೈವ ಸನಕಶ್ಚಕಾರ ಶಿವಪೂಜನಂ ॥೭೭॥

ರಮ್ಯೈಃ ಸುರಸರಿತ್ತೋಯೈರುತ್ಫುಲ್ಲೈಃ ಕನಕಾಂಬುಜೈಃ ।
ಚಂದನಾದ್ಯೈರಪಾರೈಶ್ಚ ಕನಕೈರಪಿ ನಿರ್ಮಲೈಃ ॥೭೮॥

ಬಿಲ್ವೈರ್ದ್ರೋಣೈರ್ಜಪಾಪುಷ್ಪೈಃ ಕೇತಕೀಕುಸುಮೈರಪಿ ।
ಕರವೀರೈರರ್ಕಪುಷ್ಪೈರ್ನವದೂರ್ವಾಂಕುರೈರಪಿ ॥೭೯॥

ಅರ್ಕೈರ್ಮಂದಾರಕುಸುಮೈರ್ದೇವಕಾಂಚನಸಂಯುತೈಃ ।
ಹೇಮಗಂಧಫಲೀಪುಷ್ಪೈಃ ಪುನ್ನಾಗೈರನಘೈರಪಿ ॥೮೦॥

---

ಈ ಪ್ರಶ್ನೋತ್ತರಗಳ ಶ್ರವಣಮಾತ್ರದಿಂದಲೇ ಪಾಪಗಳೆಲ್ಲವೂ ನಾಶವಾಗುವುವು. ಇದರಲ್ಲಿ ಸಂದೇಹವೇ ಇಲ್ಲ. ಇಷ್ಟೇಕೆ! ಕೇವಲ ಈರೀತಿಯಾದ ಪ್ರಶ್ನೆಯೇ ಸಕಲ ಪಾಪವನ್ನೂ ನಾಶಮಾಡುವುದು. ॥೭೬॥

ಈ ವಿಷಯದಲ್ಲಿ ಒಂದು ಪುರಾತನವಾದ ಇತಿಹಾಸವಿರುವುದು. ಇದೇ ಸ್ಥಳದಲ್ಲಿ ಹಿಂದೆ ಸನಕನೆಂಬ ಮಹಾತ್ಮನು ಒಂದುಸಾರಿ ಭಕ್ತಿಯಿಂದ ಶಿವಪೂಜೆಮಾಡುತ್ತಿದ್ದನು. ॥೭೭॥

ಮನೋಹರವಾದ ದೇವಗಂಗಾನದಿಯ ನೀರು, ಚೆನ್ನಾಗಿ ಅರಳಿದ ಸ್ವರ್ಣಕಮಲಗಳು, ಅಪಾರವಾದ ಚಂದನಾದಿ ಪದಾರ್ಥಗಳು, ಪರಿಶುದ್ಧವಾದ ಚಿನ್ನ ಮುಂತಾದುವುಗಳು ; ॥೭೮॥

ನಿರ್ಮಲವಾದ ಗರಿಕೆಗಳು, ದ್ರೋಣಪುಷ್ಪ, ದಾಸವಾಳದ ಹೂಗಳು, ತಾಳೆ, ಕಣಗಿಲು, ಎಕ್ಕ, ಮುಂತಾದ ಪುಷ್ಪಗಳು ಮತ್ತು ಎಳೆಯ ಚಿಗುರು ಗರಿಕೆಗಳು ; ॥೭೯॥

ಅರ್ಕಪುಷ್ಪಗಳು, ದೇವಕಾಂಚನಪುಷ್ಪಸಮೇತವಾದ ಮಂದಾರಪುಷ್ಪಗಳು, ಸ್ವರ್ಣಮಯವಾದ ಗಂಧಫಲೀಪುಷ್ಪಗಳು, ನಿರ್ದುಷ್ಟವಾದ ಸುರಗೀಹೂವುಗಳು ಇವೇ ಮೊದಲಾದ ಹೂ ಮತ್ತುಪತ್ರೆಗಳಿಂದ ಆ ಪರಶಿವನನ್ನು ಪೂಜೆಮಾಡುತ್ತಿದ್ದನು. (ಗಂಧಫಲೀ=ಬಾಳೆಗಿಡದಂತಿರುವ ಒಂದು ಜಾತಿಯ ಮರದ ಹೂವು.) ॥೮೦॥

ಕರ್ಪೂರದೀಪಮಾಲಾಭಿರ್ಧೂಪಧೂಮ್ರೈರ್ಮನೋಹರೈಃ ।
ಕ್ಷೀರಾನ್ನೈರಪಿ ಪಕ್ವಾನ್ನೈಃ ಕದಲೀಫಲಸಂಯುತೈಃ ॥೮೧॥

ದ್ರಾಕ್ಷಾರಸಾಲಸಂಯುಕ್ತೈಃ ಜಂಬುಜಂಬೀರಸಂಯುತೈಃ ।
ಅನ್ಯೈರಪಿ ಫಲೈರ್ಯುಕ್ತೈಃ ಪೂಜಯಾಮಾಸ ಶಂಕರಂ ॥೮೨॥

ಶಿವಾರ್ಚನಪ್ರಭಾವೇನ ಸಕಂಪಮವನೀತಲಂ ।
ಶಿವಾರ್ಚನತಪೋಮೂರ್ತಿಃ ಕಿಂ ಕರ್ತುಮಭಿವಾಂಛತಿ ॥೮೩॥

ಇದಂ ಪರಂ ತಪಸ್ತಸ್ಮಾತ್ಕಿಂ ವಾ ವಾಂಛತಿ ತತ್ಫಲಂ ।
ಇತಿ ದೇವಾಶ್ಚ ಸಂಕ್ಷುಬ್ಧಾಃ ಕಿಮಯಂ ವಾಂಛತೀತ್ಯಪಿ ॥೮೪॥

ವಿಚಾರೇಣ ಪರಂ ಶ್ರಾಂತಾಃ ಸುರಾ ಅಪಿ ಪರಸ್ಪರಂ ।
ಗಂಧರ್ವಾಃ ಕಿಂನರಾಃ ಶ್ರಾಂತಾಶ್ಚಾರಣಾಃ ಕಮಲಾನನೇ ॥೮೫॥

---

ಕರ್ಪೂರ ರಚಿತವಾದ ದೀಪಸಮೂಹದಿಂದಲೂ, ಕ್ಷೀರಾನ್ನ, ಚೆನ್ನಾಗಿ ಪರಿಪಕ್ವವಾದ ಮಹಾನೈವೇದ್ಯ (ಪಕ್ವಾನ್ನ) ಬಾಳೆಯ ಹಣ್ಣು, ದ್ರಾಕ್ಷಿ, ಕಬ್ಬು, ನೇರಳೆ, ನಿಂಬೇಹಣ್ಣು ಮತ್ತು ಇನ್ನೂ ವಿವಿಧವಾದ ಹಣ್ಣುಹಂಪಲುಗಳಿಂದಲೂ ಆ ಪರಶಿವನನ್ನು ಪೂಜೆಮಾಡುತ್ತಿದ್ದನು. ॥೮೨॥

ಈ ಸನಕನ ಶಿವಪೂಜಾಪ್ರಭಾವದಿಂದ ಭೂಮಿಯೆಲ್ಲಾ ನಡುಗತೊಡಗಿತು. ಶಿವಾರ್ಚನೆಮಾಡುವ ತಪೋಮೂರ್ತಿಯು ಏನುತಾನೇ ಮಾಡಲಾರದು ? ॥೮೩॥

ಈ ಮಹಾತ್ಮನು ಯಾವ ಫಲವನ್ನುದ್ದೇಶಿಸಿ ಈ ರೀತಿ ಉಗ್ರವಾದ ತಪಸ್ಸನ್ನಾಚರಿಸುತ್ತಿರುವನೋ, ಇವನಿಗೆ ಏನು ಬೇಕೆಂಬುದನ್ನು ತಿಳಿಯಲು ದೇವತೆಗಳೆಲ್ಲಾ ಆತುರಗೊಂಡರು. ॥೮೪॥

ಎಲೌ ಕಮಲಮುಖಿಯೇ, ಇದೇ ವಿಚಾರವನ್ನು ಪರಾಮರ್ಶಿಸುವುದರಲ್ಲಿಯೇ ದೇವತೆಗಳು, ಗಂಧರ್ವರು, ಕಿಂನರರೂ ಮತ್ತು ಚಾರಣರು ಇವರೆಲ್ಲರೂ ಪರಸ್ಪರವಾಗಿ ಬಳಲಿಹೋದರು. ॥೮೫॥

ಕಿಂ ವಾ ಪದಂ ವಾಂಛತಿ ಸೋಽಯಮೀಶಂ
ಲಿಂಗೇ ಸಮಭ್ಯರ್ಚ್ಯ ವಿಶೇಷತೋಽದ್ಯ ।
ವೈಕುಂಠವಾಸಾದಿಪದಾಭಿವಾಂಛಾ
ನ ತಸ್ಯ ಲಿಂಗಾರ್ಚನತತ್ಪರಸ್ಯ ॥೮೬॥

ಯತೋಽತಿತುಚ್ಛತ್ವಮತಿಃ ಪ್ರಭೂತಾ
ವೈಕುಂಠಲೋಕೇಽಪಿ ವಿಶೇಷತಸ್ತು ।
ಸ್ವರ್ಗಾದಿಲೋಕಸ್ಯ ನ ತಸ್ಯ ವಾಂಛಾ
ನಿಧಾನಭೂತಸ್ಯ ಸ್ವಸಂಸೃತೇಶ್ಚ ॥೮೭॥

ಏವಂ ಶಿವಾರಾಧನತತ್ಪರೋಽಸೌ
ತದರ್ಥಮೇವಂ ಕಥಮಿಂದುಮೌಲಿಃ ।
ಸಂಪೂಜಿತಃ ಸ್ಯಾತ್ಕಿಮಭೀಪ್ಸಿತಂ ವಾ
ತಸ್ಯಾಸ್ತಿ ನ ಜ್ಞಾಯತ ಏವ ಸತ್ಯಂ ॥೮೮॥

ಅಹರ್ನಿಶಂ ಲಿಂಗಸಮರ್ಚನೇನ
ನಯತ್ಯಯಂ ಕಾಲಮತಃ ಪರಂ ವಾ ।

---

ಈ ಮಹಾನುಭಾವನು ಲಿಂಗದಲ್ಲಿ ಪರಮೇಶ್ವರನನ್ನು ಪೂಜಿಸಿ ಯಾವ ವಿಶೇಷವಾದ ಫಲವನ್ನಪೇಕ್ಷಿಸುವನೋ ತಿಳಿಯದು. ಲಿಂಗಪೂಜಾತತ್ಪರನಾದವನು ವೈಕುಂಠಲೋಕವಾಸವನ್ನೆಂದಿಗೂ ಅಪೇಕ್ಷಿಸಲಾರನು. ॥೮೬॥

ವೈಕುಂಠಲೋಕವು ಅತ್ಯಲ್ಪವೆಂಬ ಭಾವನೆಯಿರುವುದರಿಂದ ಅದನ್ನೆಂದಿಗೂ ಆಶಿಸಲಾರನು. ವಿಶೇಷವಾಗಿ ಸ್ವರ್ಗವೇ ಮುಂತಾದ ಇತರ ಲೋಕಗಳನ್ನಪೇಕ್ಷಿಸುವನೆಂದರೆ ಪುನಃ ಜನನಮರಣರೂಪವಾದ ಸಂಸಾರಪ್ರಾಪ್ತಿಯುಂಟಾಗುವುದರಿಂದ ಅದರ ಅಪೇಕ್ಷೆಯಂತೂ ಅವನಿಗೆ ಇಲ್ಲವೇ ಇಲ್ಲ. ॥೮೭॥

ಹೀಗೆ ಉಗ್ರವಾಗಿ ಶಿವಪೂಜಾನಿರತನಾಗಿರುವ ಈತನು ಚಂದ್ರಮೌಳಿಯನ್ನು ಯಾವ ಪ್ರಯೋಜನಕ್ಕೋಸ್ಕರ ಪೂಜೆಮಾಡುತ್ತಿರುವನೋ, ಇವನಿಗೆ ಏನು ಅಭೀಷ್ಟವೋ ಒಂದೂ ತಿಳಿಯುವುದಿಲ್ಲವಲ್ಲಾ! ಏನುಮಾಡುವುದು! ॥೮೮॥

ಈತನು ಹಗಲೂ ರಾತ್ರಿ ಎಡಬಿಡದೇ ಶಿವಲಿಂಗಪೂಜೆಯಿಂದಲೇ ಕಾಲವನ್ನು ಕಳೆಯುತ್ತಿರುವನು. ಇಷ್ಟಾದರೂ ಕೊನೆಗೂ ಇವನು ಆ ಲಿಂಗಪೂಜೆಯಿಂದ

ನ ಜಾಯತೇ ತದ್ವಿರತಿಃ ಪ್ರಕೃಷ್ಟಾ
ಸ ಲಿಂಗಪೂಜಾ ಸಕಲಾರ್ಥಹೇತುಃ ॥೮೯॥

ಇತಿ ಸರ್ವೇ ವಿಚಾರ್ಯಾದೌ ರಂಭಾಮೂಚುಃ ಪರಸ್ಪರಂ ।
ತತ್ಪೂಜಾಯಾಂ ತ್ವಯಾ ವಿಘ್ನಃ ಕರ್ತವ್ಯ ಇತಿ ಸಾದರಂ ॥೯೦॥

॥ ರಂಭೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ರಂಭಾಪಿ ಭಯವಿಹ್ವಲಾ ।
ತಾನುವಾಚಾತಿಯತ್ನೇನ ಕೃತಾಂಜಲಿಪುಟಾ ತದಾ ॥೯೧॥

ತಪೋನಿಧಿಸ್ತತ್ರ ಶಿವಾರ್ಚನೇನ
ಕಾಲಂ ನಯತ್ಯೇವ ಜಿತೇಂದ್ರಿಯೋಽಪಿ ।
ನ ವಿಘ್ನಮಾತ್ರಾಚರಣೇ ಪ್ರವೃತ್ತಿಃ
ಕಥಂ ಮಮ ಸ್ಯಾದಿತಿ ಖಿನ್ನಚಿತ್ತಾ ॥೯೨॥

---

ವಿರಕ್ತನಾಗುವುದಿಲ್ಲ. ಆ ಶಿವಲಿಂಗಪೂಜೆಯಾದರೋ ಸಕಲಾಭೀಷ್ಟಗಳನ್ನೂ ಕೊಡುತ್ತದೆ. ॥೮೯॥

ಹೀಗೆ ದೇವತೆಗಳೆಲ್ಲರೂ ಮೊದಲು ಪರಸ್ಪರವಾಗಿ ವಿಚಾರಮಾಡಿ, ಏನಾದರೂ ಮಾಡಿ ನೀನು ಆತನ ಪೂಜೆಗೆ ವಿಘ್ನವನ್ನುಂಟುಮಾಡು ಎಂದು ಆದರಪೂರ್ವಕವಾಗಿ ರಂಭೆಯನ್ನು ಕುರಿತು ಹೇಳಿದರು. ॥೯೦॥

ದೇವತೆಗಳು ತನಗೆ ವಹಿಸಿದ ಕಾರ್ಯಭಾರರೂಪವಾದ ಮಾತನ್ನು ಕೇಳಿ ಆ ರಂಭೆಯೂ ಭಯದಿಂದ ಕಾತರಳಾಗಿ, ಆ ದೇವತೆಗಳನ್ನು ಕುರಿತು ಕೈಜೋಡಿಸಿ ಇಂತೆಂದಳು. ॥೯೧॥

“ ಓ ದೇವತೆಗಳಿರಾ! ತಪೋನಿಧಿಯಾದ ಆ ಮಹಾತ್ಮನು ಯಾವಾಗಲೂ ಶಿವಾರ್ಚನೆಮಾಡುತ್ತಾ ಕಾಲಯಾಪನೆ ಮಾಡುತ್ತಿರುವನು. ಅಲ್ಲದೇ ಆತನು ಜಿತೇಂದ್ರಿಯನೂ ಆಗಿರುವನು. ಇಂತಹ ಮಹಾನುಭಾವನಿಗೆ ವಿಘ್ನವನ್ನುಂಟುಮಾಡುವುದರಲ್ಲಿ ನನಗೆ ಸ್ವಲ್ಪಮಾತ್ರವೂ ಪ್ರವೃತ್ತಿಯೇ ಉಂಟಾಗುವುದಿಲ್ಲವಲ್ಲಾ! ಏನು ಮಾಡಲಿ ” ಎಂದು ರಂಭೆಯು ಬಾಡಿದ ಮನಸ್ಸುಳ್ಳವಳಾಗಿ ಹೇಳತೊಡಗಿದಳು. ॥೯೨॥

ಶಿವಪೂಜಾನಿರತನಾದವನಿಗೆ ಗಾಢಾಂಧಕಾರವ್ಯಾಪ್ತವಾದ ರಾತ್ರಿಯೇ

ಯಾಮಿನೀ ವಾಸರಸ್ತಸ್ಯ ಶಿವಾರ್ಚನರತಸ್ಯ ಚ ।
ಕಥಂ ಪ್ರತ್ಯೂಹಲೇಶೋಽಪಿ ಪ್ರಸರಿಷ್ಯತಿ ವಸ್ತುತಃ ॥೯೩॥

ತತ್ರ ಪ್ರತ್ಯೂಹಕರಣೇ ನ ಮನೋಽಪಿ ಪ್ರವರ್ತತೇ ।
ಸ್ವಾರಸ್ಯೇನ ತತಸ್ತತ್ರ ಕಥಂ ವಿಘ್ನೋ ಭವಿಷ್ಯತಿ ॥೯೪॥

ಯಃ ಶಿವಾರ್ಚನವಿಘ್ನಾರ್ಥಂ ಯತತೇ ಮೋಹತಸ್ತದಾ ।
ಪ್ರವೃತ್ತಸ್ಯೈವ ವಿಘ್ನಃ ಸ್ಯಾತ್ಪ್ರತ್ಯುತಾಽಸ್ಯಾಪಕಾರಕಃ ॥೯೫॥

ಶಿವಾರ್ಚನೇನಾಶು ಜಿತಾಘಕೋಟಿ
ರ್ಯಸ್ತತ್ರ ವಿಘ್ನಾವಸರೋಽಪಿ ಕೋ ವಾ ।
ಸೂರ್ಯೋದಯಾನಂತರಮಂಧಕಾರಃ
ಕಿಂ ಲೇಶತೋ ವಾ ಭವತಿ ಪ್ರವೃತ್ತಃ ॥೯೬॥

ಮಹಾಘಶೈಲಕ್ಷಯಹೇತುಭೂತಃ
ಶಿವಾರ್ಚನಾಕಾರಪವಿಃ ಸವಿಘ್ನಾನ್ ।

---

ಹಗಲಿನಂತಿರುವುದರಿಂದ, ದಿವ್ಯ ತೇಜಸ್ವಿಯಾದ ಆ ಮಹಾತ್ಮನಿಗೆ ಅಲ್ಪವಾದ ವಿಘ್ನವಾದರೂ ನನ್ನಿಂದ ಹೇಗೆ ಉಂಟಾದೀತು? ॥೯೩॥

ಅವನ ವಿಷಯದಲ್ಲಿ ವಿಘ್ನವನ್ನುಂಟುಮಾಡಲು ನನ್ನ ಮನಸ್ಸೇ ಪ್ರವರ್ತಿಸುವುದಿಲ್ಲ. ಹೀಗಿರುವಾಗ ಅವನ ಪೂಜೆಗೆ ನಿಜವಾಗಿ ವಿಘ್ನವನ್ನುಂಟುಮಾಡುವ ರಸಾವಿರ್ಭಾವವು ಹೇಗೆತಾನೇ ನನ್ನಿಂದ ನಡೆದೀತು? ॥೯೪॥

ಅಜ್ಞಾನದಿಂದ ಶಿವಪೂಜೆಗೆ ವಿಘ್ನವನ್ನುಂಟುಮಾಡಲು ಪ್ರಯತ್ನಿಸುವರಿಗೇ ವಿಘ್ನಗಳು ಒದಗುವುವಲ್ಲದೆ ಪ್ರತಿಯಾಗಿ ಅಪಕಾರವೂ ಉಂಟಾಗುವುದು. ॥೯೫॥

ಶಿವಪೂಜಾಮಹಿಮೆಯಿಂದ ಸಕಲ ಪಾಪಪ್ರವೃತ್ತಿಗಳು ಕೋಟ್ಯಂತರ ವಿದ್ದರೂ ಕೂಡಲೇ ಧ್ವಂಸವಾಗಿಬಿಡುವುವು. ಹೀಗಿರುವಾಗ ಇನ್ನು ವಿಘ್ನವನ್ನು ಉಂಟುಮಾಡಲು ಅವಕಾಶತಾನೇ ಎಲ್ಲಿ ಬಂತು! ಸೂರ್ಯೋದಯವಾದನಂತರ ಸ್ವಲ್ಪವಾದರೂ ಕತ್ತಲೆಯು ಪ್ರಯತ್ನಪಟ್ಟು ನಿಲ್ಲಲು ಸಾಧ್ಯವಾದೀತೇ! ॥೯೬॥

ಶಿವಪೂಜಾರೂಪವಾದ ವಜ್ರಾಯುಧವು ಮಹಾಪಾಪಗಳೆಂಬ ಬೆಟ್ಟಗಳನ್ನು ನಾಶಪಡಿಸಲು ಸಾಧನಭೂತವಾಗಿರುವುದು. ಹೀಗಿರುವಾಗ ನಾನು ಮಾಡಲಿರುವ

ತೃಣಸ್ವರೂಪಾನಪಹರ್ತುಮಾಶು
ಕಥಂ ನ ಶಕ್ತೋ೯ೀ ವದ ತದ್ವಿಚಾರ್ಯ ॥೯೭॥

ಅಸ್ಮಾಕಂ ಭಾಗ್ಯಹೀನಾನಾಂ ಸರ್ವದಾ ಶಿವಪೂಜನೇ ।
ನ ಬುದ್ಧಿಸದೃಶಂ ಭಾಗ್ಯಂ ಬಹುಪುಣ್ಯಫಲಂ ಖಲು ॥೯೮॥

ಯಃ ಶಿವಾರ್ಚನವಿಘ್ನಾರ್ಥಂ ಮೋಹಾದ್ಯತ್ನಂ ಕರಿಷ್ಯತಿ ।
ಸ ತತ್ಫಲಮವಾಪ್ಯಾಶು ಕಿಂಜೀವತಿ ವಿಶೇಷತಃ ॥೯೯॥

ಯಃ ಶಂಕರಾರಾಧನವಿಘ್ನಹೇತುಃ
ತಜ್ಜೀವನಂ ವ್ಯರ್ಥಮಿತಿ ಸ್ಮರಾಮಿ ।
ಸ ಏವ ತಾವನ್ನರಕೇ ನಿವಾಸಂ
ಕರೋತಿ ಕಲ್ಪಾವಧಿ ಸರ್ವಥಾಪಿ ॥೧೦೦॥

ಮುದಾ ಶಿವಾರ್ಚಕಾನ್ದೃಷ್ಟ್ವಾ ಯೇ ನಮಂತಿ ಪ್ರಯತ್ನತಃ ।
ತೇಽಪಿ ಯಾಂತಿ ಶಿವಂ ನೂನಂ ತೈಃ ಸಹೈವ ಶಿವಾರ್ಚಕೈಃ ॥೧೦೧॥

---

ಈ ಒಂದು ಹುಲ್ಲುಕಡ್ಡಿಗೆ ಸಮಾನವಾದ ವಿಘ್ನವನ್ನು ನಾಶಪಡಿಸಲು ಅವನಿಗೆ ಸಾಧ್ಯವಾಗಲಾರದೆ! ಇದನ್ನು ನೀವೇ ವಿಚಾರಮಾಡಿ ಅಪ್ಪಣೆಕೊಡಿಸಬೇಕು. ॥೯೭॥

ಭಾಗ್ಯಹೀನರಾದ ನಮ್ಮಂತಹವರಿಗೆ ಮಾತ್ರ ಯಾವಾಗಲೂ ಆ ಪರಶಿವನ ಪೂಜೆಯಲ್ಲಿ ಆಸಕ್ತಿಹುಟ್ಟಲಾರದು. ಅಂತಹ ಭಾಗ್ಯ ದೊರೆಯುಬೇಕಾದರೆ ಅಪಾರವಾದ ಮಹಾಪುಣ್ಯಗಳ ರಾಶಿಯೇ ಇರಬೇಕು. ॥೯೮॥

ಅಜ್ಞಾನದಿಂದ ಶಿವಪೂಜೆಗೆ ವಿಘ್ನವನ್ನುಂಟುಮಾಡಲು ಪ್ರಯತ್ನಿಸುವ ಮಾನವನು, ನಿಜವಾಗಿಯೂ ಆ ವಿಘ್ನದ ಫಲವನ್ನು ಹೊಂದಿ ಕುತ್ಸಿತವಾದ ಜೀವನದಿಂದ ಜೀವಿಸುವವನಲ್ಲವೆ! ॥೯೯॥

ಜಗನ್ಮಂಗಳಕರನಾದ ಆ ಪರಶಿವನ ಪೂಜೆಗೆ ವಿಘ್ನವನ್ನುಂಟುಮಾಡುವ ಮಾನವನ ಜೀವನವು ನಿಜವಾಗಿಯೂ ವ್ಯರ್ಥವೆಂದೇ ಭಾವಿಸುವೆನು. ಹೀಗೆ ವಿಘ್ನವನ್ನುಂಟುಮಾಡುವವನು ನಿಜವಾಗಿಯೂ ಕಲ್ಪಪರ್ಯಂತ ನರಕದಲ್ಲಿ ಬಿದ್ದು ನರಳುವನು. ॥೧೦೦॥

ಶಿವನನ್ನು ಪೂಜೆಮಾಡುವವರನ್ನು ನೋಡಿದೊಡನೆ ಸಂತೋಷದಿಂದ

ಶಿವಾರ್ಚಕಃ ಕಿಲಾಪಾರಪಾತಕಾನಲ ಏವ ಸಃ ।
ವಿಘ್ನತೂಲಾಂಶಭಾಗಸ್ಯ ಸ ಕಿಂ ನೈವ ವಿನಾಶಕಃ ॥೧೦೨॥

ಪೂಜನೀಯೋಽಪಿ ವಂದ್ಯೋಽಪಿ ಮಾನ್ಯೋಽಪಿ ಶಿವಪೂಜಕಃ ।
ತದ್ವಿಘ್ನಾಚರಣೇನೈವ ಕೃತಂ ಸ್ಯಾತ್ಪಾತಕಾರ್ಜನಂ ॥೧೦೩॥

ಅಹೋ ದುರ್ಬುದ್ಧಿರುತ್ಪನ್ನಾ ತದ್ವಿಘ್ನಾಯಾತಿಮೋಹತಃ ।
ಪಾಪಂ ತಾದೃಶಬುದ್ಧ್ಯಾಪಿ ಸಮುತ್ಪನ್ನಂ ನ ಸಂಶಯಃ ॥೧೦೪॥

ದೇವತ್ವಮೇತದ್ಭವತಾಂ ವೃಥಾ ಸ್ಯಾ
ತ್ತದ್ವಿಘ್ನಹೇತುತ್ವವಿಚಾರಣೇನ ।
ಕೋ ವಾ ವಿಷಂ ವಾಂಛತಿ ಜೀವನೇಚ್ಛಾಂ
ಕರ್ತುಂ ಪ್ರವೃತ್ತೋಽಪಿ ನರಾಧಮೋಽಪಿ ॥೧೦೫॥

---

ವಿನಯಪೂರ್ವಕವಾಗಿ ಅವರಿಗೆ ನಮಸ್ಕಾರಮಾಡುವವರು, ಆ ಶಿವಪೂಜಕರೊಡನೆಯೇ ನಿಜವಾಗಿಯೂ ಶಿವಸಾನ್ನಿಧ್ಯವನ್ನೈದುವರು. ॥೧೦೧॥

ಶಿವನನ್ನು ಪೂಜಿಸುವವನು ಅಪಾರವಾದ ಪಾಪಗಳಿಗೆ ಅಗ್ನಿಸ್ವರೂಪನೇ ಆಗಿರುವನು. ಹೀಗಿರುವಾಗ ಅವನು ಈ ವಿಘ್ನವೆಂಬ ಹತ್ತಿಯ ಚೂರನ್ನು ನಾಶಪಡಿಸಲಾರನೇ ? ॥೧೦೨॥

ಶಿವಪೂಜಾತತ್ಪರನು ಪೂಜ್ಯನು. ನಮಸ್ಕಾರಾರ್ಹನು ಮತ್ತು ಗೌರವಿಸಲು ಯೋಗ್ಯನಾದವನು. ಇಂತಹ ಶಿವಪೂಜಕನಿಗೆ ವಿಘ್ನವನ್ನುಂಟುಮಾಡುವುದರಿಂದಲೇ ಪಾಪವನ್ನು ಗಳಿಸಿದಂತಾಗುವುದು. ॥೧೦೩॥

ಅಯ್ಯೋ ! ಆ ಮಹಾಶೈವನ ಪೂಜೆಗೆ ವಿಘ್ನವನ್ನುಂಟುಮಾಡುವ ಬುದ್ಧಿಯು ನಿಮಗೆ ಅಜ್ಞಾನದಿಂದುಂಟಾಗಿದೆ. ವಿಘ್ನವನ್ನುಂಟುಮಾಡುವ ಬುದ್ಧಿಯು ನಿಮಗೆ ಬಂದಾಗಲೇ ನಿಜವಾಗಿಯೂ ನೀವು ಪಾಪವನ್ನು ಗಳಿಸಿದಂತಾಯಿತು. ಇದರಲ್ಲಿ ಸಂಶಯವಿಲ್ಲ. ॥೧೦೪॥

ಶಿವಪೂಜಕನಿಗೆ ಪೂಜಾಕಾಲದಲ್ಲಿ ವಿಘ್ನವನ್ನುಂಟುಮಾಡಬಯಸುವ ನಿಮಗೆ ನಿಜವಾಗಿಯೂ ದೇವತ್ವವು ವ್ಯರ್ಥವೇ ಸರಿ ! ಬದುಕಬೇಕೆಂಬ ಆಪೇಕ್ಷೆಯಿಂದ ಪ್ರವರ್ತಿಸುವ ನರಾಧಮನಾದರೂ, ವಿಷವು ನನಗೆ ಬೇಕೆಂದು ಆಪೇಕ್ಷೆಪಡುವನೇ ? ಅದನ್ನು ನೀವು ಯೋಚಿಸಿ. ಶಿವಪೂಜಕನಿಗೆ ವಿಘ್ನವನ್ನುಂಟು

ಇತಿ ತದ್ವಚನಂ ಶ್ರುತ್ವಾ ರಂಭಾಮೂಚುರ್ದಿವೌಕಸಃ ।
ಸತ್ಯಮುಕ್ತಂ ತ್ವಯಾಽಥಾಪಿ ತದ್ವಿಘ್ನೋ ಹೃದಿ ಚಿಂತ್ಯತೇ ॥೧೦೬॥

ಶಿವಾರ್ಚನಾಕಾರತಪಃ ಪ್ರಭಾವಃ
ಪ್ರಕಂಪಯತ್ಯೇವ ಸುರಾನತಸ್ತ್ವಂ ।
ತದ್ವಿಘ್ನಮುತ್ಪಾದಯ ತಾವತಾ ನಃ
ಸ್ವಸ್ಥಂ ಮನಃ ಸ್ಯಾತ್ಖಲು ನಾನ್ಯಥಾ ತು ॥೧೦೭॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭಾವಿ ಭಾವೀತಿ ನಿಶ್ಚಯಾತ್ ।
ಸಾ ಯಯೌ ತತ್ರ ಯತ್ರಾಸ್ತಿ ಸ ಮಹಾದೇವಪೂಜಕಃ ॥೧೦೮॥

ಸಾ ತತ್ರ ಗತ್ವಾ ಸ್ವವಿಲಾಸಹೇತೂನ್
ಸಂಪಾದ್ಯ ತೇನಾಪಿ ವಿಲೋಕಿತಾಪಿ ।

---

ಮಾಡುವುದು ವಿಷಸದೃಶವಾದದ್ದು ಎಂದು ರಂಭೆಯು ದೇವತೆಗಳಿಗೆ ಹೇಳಿದಳು. ॥೧೦೫॥

ರಂಭೆಯಾಡಿದ ಮಾತುಗಳನ್ನು ಲಾಲಿಸಿ, ದೇವತೆಗಳು, "ಎಲೌ ರಂಭೆ! ನೀನು ಹೇಳಿದುದು ನಿಜವಾಗಿಯೂ ಸತ್ಯವೇ. ಆದರೂ ಆ ತಪಸ್ವಿಯ ವಿಷಯದಲ್ಲಿ ವಿಘ್ನವನ್ನುಂಟುಮಾಡಬೇಕೆಂದು ನಮ್ಮ ಹೃದಯದಲ್ಲಿ ಚಿಂತೆಯುಂಟಾಗುತ್ತದೆ. ॥೧೦೬॥

ಶಿವಪೂಜಾರೂಪವಾದ ತಪಃಶಕ್ತಿಯು ದೇವತೆಗಳನ್ನೆಲ್ಲಾ ನಡುಗಿಸುತ್ತಿರುವುದು. ಇದರಿಂದ ಪಾರಾಗಿ ನಮ್ಮ ಮನಸ್ಸು ಶಾಂತವಾಗಿ ಸ್ವಸ್ಥವಾಗಿರುವುದಕ್ಕೋಸ್ಕರವಾದರೂ ನೀನು ಆ ಮಹಾನುಭಾವನ ತಪಸ್ಸಿಗೆ ವಿಘ್ನವನ್ನುಂಟುಮಾಡು ಎಂದು ದೇವತೆಗಳು ಪುನಃ ರಂಭೆಯನ್ನು ಪ್ರೋತ್ಸಾಹಿಸಿದರು. ॥೧೦೭॥

ದೇವತೆಗಳ ಈ ವಚನವನ್ನು ಕೇಳಿ, ಆಗುವುದು ಆಗಿಯೇ ತೀರಬೇಕೆಂದು ನಿಶ್ಚಯಿಸಿ ಆ ಸನಕನು ತಪಸ್ಸುಮಾಡುತ್ತಿದ್ದ ಪ್ರದೇಶಕ್ಕೆ ರಂಭೆಯು ಪ್ರಯಾಣ ಮಾಡಿದಳು. ॥೧೦೮॥

ರಂಭೆಯು ಅಲ್ಲಿಗೆ ಹೋದನಂತರ ತನ್ನ ವಿಲಾಸಕ್ಕೆ ಕಾರಣಭೂತವಾದ ಸಲಕರಣೆಗಳನ್ನು ಸಂಪಾದಿಸಿ, ಅವು ಅವನ ದೃಷ್ಟಿಗೂ ಗೋಚರವಾಗುವಂತೆ

ತತಸ್ತದಂತಃಕರಣಂ ಸಕಂಪಂ
ಜಾತಂ ಸ ಚಿಂತಾಕುಲಚಿತ್ತವೃತ್ತಿಃ ॥೧೦೯॥

ಸ್ಥಿರಂ ಮಮ ಮನಃ ಕಥಂ ಸಪದಿ ಚಂಚಲಂ ಜಾಯತೇ
ಶಿವಾರ್ಚನರತಿರ್ನ ಮೇ ಕಿಮಿದಮದ್ಭುತಂ ದೃಶ್ಯತೇ।
ಅಪೂರ್ವಮಿದಮೀದೃಶಂ ಭವತಿ ನಾನುಭೂತಂ ಪುರಾ
ಕಿಮೇತದಿತಿ ಚಿಂತಯಾ ವಿಗತವಿಶ್ವನಾಥಾರ್ಚನಃ ॥೧೧೦॥

ತತಃ ಪರಂ ಸಮುತ್ಪನ್ನಾ ಕಾಪಿ ವಾಗಶರೀರಿಣೀ।
ಸಾ ಶ್ರುತಾ ರಂಭಯಾ ವಾಣೀ ತಯಾ ವಿಸ್ಮಯಮಾಗತಾ ॥೧೧೧॥

ಅಯಂ ಜಿತೇಂದ್ರಿಯೋ ರಂಭೇ ಸ್ತ್ರೀರೂಪಜ್ಞೋ ನ ಸರ್ವಥಾ।
ಅತ್ರ ಪ್ರವೃತ್ತಿರ್ವಿಫಲಾ ಕೇವಲಂ ಪಾಪಸಾಧನಂ ॥೧೧೨॥

---

ಮಾಡಿದಳು. ಇದರಿಂದ ಆ ಸನಕನ ಅಂತಃಕರಣವು ಚಂಚಲವಾಯಿತು. ಆದರಿಂದ ಆತನೂ ಸ್ವಲ್ಪ ಚಿಂತೆಗೊಳಗಾದನು. ॥೧೦೯॥

ಆಗ ಆ ಸನಕಮುನಿಯೂ, ಇದೇನು! ದೃಢವಾಗಿದ್ದ ನನ್ನ ಮನಸ್ಸು ಇದ್ದಕ್ಕಿದ್ದಹಾಗೆಯೇ ಒಂದೇ ಕ್ಷಣದಲ್ಲಿ ಇಷ್ಟು ಚಂಚಲವಾಯಿತು! ನನ್ನಲ್ಲಿ ಆ ಶಿವಪೂಜಾಸಕ್ತಿಯೇ ಇಲ್ಲವೋ! ಏನೋ ಆಶ್ಚರ್ಯವಾಗಿ ತೋರುತ್ತಿರುವುದು. ಈ ರೀತಿ ಯಾದದ್ದು ಇದೇ ಮೊದಲು. ಹಿಂದೆ ಯಾವಾಗಲೂ ಇಂತಹ ಸ್ಥಿತಿಯನ್ನು ನಾನು ಅನುಭವಿಸಿರಲಿಲ್ಲ. ಇದೇನು! ಈರೀತಿಯಾಯಿತಲ್ಲಾ ಎಂದು ಚಿಂತಾಗ್ರಸ್ತನಾಗಿ ಶಿವಪೂಜೆಯನ್ನು ಬಿಟ್ಟು ಉದಾಸೀನನಾಗಿ ಕುಳಿತನು. ॥೧೧೦॥

ಇಷ್ಟಾದ ನಂತರ ಒಂದು ಅಶರೀರವಾಣಿಯಾಯಿತು. ಅದನ್ನು ಕೇಳಿ ರಂಭೆಯು ಒಡನೆಯೇ ಆಶ್ಚರ್ಯಚಕಿತಳಾದಳು. ॥೧೧೧॥

"ಎಲೌ ರಂಭೆಯೇ! ಇವನು ಜಿತೇಂದ್ರಿಯನು, ಇವನಿಗೆ ಯಾವರೀತಿಯ ಲ್ಲಿಯೂಸ್ತ್ರೀಸ್ವರೂಪಪರಿಜ್ಞಾನವೇ ಇಲ್ಲ. ಇಂತಹವನಲ್ಲಿ ನಿನ್ನ ಪ್ರವೃತ್ತಿಯು ಕೇವಲ ವ್ಯರ್ಥವೇ ಸರಿ. ಅಲ್ಲದೇ ಅದು ಪಾಪಕ್ಕೂ ಕಾರಣವಾಗುವುದು. ॥೧೧೨॥

ಸಂಸಾರವಾಸನಾ ಯಸ್ಯ ತಸ್ಯ ನಾರೀವಿಲೋಕನೇ ।
ಪ್ರೀತಿಃ ಸ್ಯಾದೇವ ಸಹಸಾ ನ ಪ್ರೀತಿಸ್ತ್ವಯಿ ವಸ್ತುತಃ ॥೧೧೩॥

ಶಿಲಾನಾರೀಂ ದೃಷ್ಟ್ವಾ ಯದಿ ಭವತಿ ಬುದ್ಧಿಃ ಕಲುಷಿತಾ
ತದಾ ತಾವದ್ರೂಪಂ ಭವತಿ ತವ ದೃಶ್ಯಂ ಯದಿ ನ ಸಾ ।
ತದಾ ಕಿಂ ತೇ ಕೃತ್ಯಂ ಭ್ರಮಮಪಿ ವಿಹಾಯಾತ್ರ ತರಸಾ
ನ ತಸ್ಯ ಸ್ವರ್ಗೇಚ್ಛಾ ಭವತಿ ಖಲು ಯಾಹಿ ಸ್ವಭವನಂ ॥೧೧೪॥

ಪ್ರಸ್ತರೋ ಯದಿ ತವಾವಲೋಕನಾತ್ಪ್ರೀತಿಮಾನ್ಭವತಿ ತರ್ಹಿ ತನ್ಮನಃ ।
ತ್ವಯ್ಯಪಿ ಪ್ರಸರತೀತಿ ಮೇ ಮತಿಃ ಕಾ ತವಾಪಿ ರಮಣೀಯತಾ ವದ॥೧೧೫॥

---

ಸಂಸಾರ ವಿಷಯಕವಾದ ಆಸಕ್ತಿಯಿರುವವರಿಗೆ ಮಾತ್ರ ಹೆಂಗಸಿನ ದರ್ಶನಾದಿಗಳಿಂದ ಕೂಡಲೇ ಮನೋವಿಕಾರವುಂಟಾಗುವುದು. ಇವನು ವಿರಕ್ತನಾದುದರಿಂದ ನಿನ್ನಲ್ಲಿ ಇವನ ಮನಸ್ಸು ವಸ್ತುತಃ ಪ್ರೀತಿಸಲಾರದು. ॥೧೧೩॥

ಮಾನವನಿಗೆ ಕಲ್ಲಿನಲ್ಲಿ ಮಾಡಿದ ಸ್ತ್ರೀವಿಗ್ರಹವನ್ನು ನೋಡಿ ಮನಸ್ಸು ಚಂಚಲವಾಗಿ ಮೋಹಗೊಳ್ಳುವುದಾದರೆ, ಆಗ ನಿನ್ನ ಈ ಸುಂದರವಾದ ರೂಪನ್ನು ನೋಡಿ ಈತನು ಮುಗ್ಧನಾದಾನು. ಹಾಗಿಲ್ಲದೇ ಕೇವಲ ವಿರಕ್ತನಾಗಿರುವ ಇವನ ವಿಷಯದಲ್ಲಿ ನಿನ್ನ ರೂಪಿಗೂ ಮತ್ತು ಸುಂದರವಾದ ಶರೀರಕ್ಕೂ ಏನೂ ಪ್ರಯೋಜನವು ದೊರೆಯದೆ ಹೋಗುವುದು. ಈಗಲಾದರೂ ನಿನಗುಂಟಾಗಿರುವ ಭ್ರಾಂತಿಯನ್ನು ಬಿಟ್ಟು ನಿನ್ನ ಮನೆಗೆ ತೆರಳು. ಸ್ವರ್ಗವನ್ನೇ ಅಪೇಕ್ಷಿಸದೆ ಇರುವ ಈತನಿಗೆ ನಿನ್ನಲ್ಲಿ ಹೇಗೆ ತಾನೇ ಪ್ರೀತಿಯುಂಟಾದೀತು? ಆದ್ದರಿಂದ ಜಾಗ್ರತೆಯಾಗಿ ಇಲ್ಲಿಂದ ನಿನ್ನ ಮನೆಗೆ ಹಿಂತಿರುಗು. ॥೧೧೪॥

ಕಲ್ಲು ಬಂಡೆಯೇನಾದರೂ ನಿನ್ನನ್ನು ನೋಡಿ ನಿನ್ನಲ್ಲಿ ಪ್ರೀತಿಹೊಂದುವುದಾದರೆ, ಆಗ ಈತನ ಮನಸ್ಸು ನಿನ್ನಲ್ಲಿ ಅನುರಕ್ತವಾಗುವುದೆಂದು ನಾನು ತಿಳಿಯುವೆನು. ಕಲ್ಲಿಗೆ ಸಮಾನವಾದ (ಎಲ್ಲರಲ್ಲಿಯೂ ಒಂದೇ ಸಮನಾದ ಭಾವನೆಯುಳ್ಳ ವಿರಕ್ತಿಹೊಂದಿದ) ಈತನನ್ನು ಹೇಗಿದ್ದರೂ ನೀನು ಅಪೇಕ್ಷಿಸುವುದಾದರೆ ನಿನ್ನ ಈ ದಿವ್ಯಸೌಂದರ್ಯಯುಕ್ತವಾಗಿರುವ, ಯೌವನ ರಮಣೀಯತೆಗೆ ಏನು ತಾನೇ ಪ್ರಯೋಜನವುಂಟೆಂಬುದನ್ನು ನೀನೇ ತಿಳಿಸು. (ಅಂದರೆ ಈತನನ್ನು ಅಪೇಕ್ಷಿಸುವುದರಿಂದ ನಿನ್ನ ರಮಣೀಯತೆಗೆ ಕಳಂಕವೇ ಉಂಟಾಗುವುದೆಂದು ಭಾವ.) ॥೧೧೫॥

ಸ್ಥೂಲೋಪಲಾಲೋಕನತಃ ಸುಖಂ ಚೇ
ತ್ತದಾ ತ್ವದಾಲೋಕನತಃ ಸುಖಂ ಸ್ಯಾತ್ ।
ಕುಚೇಽಪಿ ತಸ್ಯೋಪಲಬುದ್ಧಿರೇವಂ
ಸ ವರ್ತುಲಪ್ರಸ್ತರ ಇತ್ಯವೈತಿ ॥೧೧೬॥

ಸಂಸಾರಿಣಾಮೇವ ಹಿ ಬುದ್ಧಿರಿಷ್ಟಾ
ನಾರೀಷು ಸಂಸಾರವಿರಕ್ತಚಿತ್ತಾಃ ।
ನಾರೀಂ ಪರಂ ಪ್ರಸ್ತರಮೇವ ಮತ್ವಾ
ತಿಷ್ಠಂತಿ ವಿಶ್ವೇಶ್ವರಸಕ್ತಚಿತ್ತಾಃ ॥೧೧೭॥

ನ ಲೋಹಿತಂ ತಸ್ಯ ತಥಾ ಶರೀರೇ
ನ ಮಾಂಸಮಜ್ಜಾದಿಕವಾಸನಾಪಿ ।
ತತಃ ಕಥಂ ವಾ ತ್ವಯಿ ಚಿತ್ತಮಸ್ಯ
ವದಾನುರಕ್ತಂ ವಿರತಂ ವಿಶಿಷ್ಯ ॥೧೧೮॥

---

ಸ್ಥೂಲವಾದ ಒಂದು ಕಲ್ಲನ್ನು ನೋಡಿದರೆ ಸುಖವುಂಟಾಗುವುದಾದರೆ, ಆಗ ನಿನ್ನನ್ನು ನೋಡುವಿಕೆಯಿಂದ ನಿಜವಾಗಿಯೂ ಅವನಿಗೆ ಸುಖವುಂಟಾದೀತು. ನಿನ್ನ ಮನೋಹರವಾದ ಸ್ತನಮಂಡಲದಲ್ಲಿಯೂ ಅವನಿಗೆ ಕಲ್ಲೆಂಬ ಭಾವನೆಯೇ ಹೊರತು ಅನ್ಯಥಾ ಇಲ್ಲ. ಅದು ಒಂದು ದುಂಡಾದ ಕಲ್ಲೆಂದು ತಿಳಿಯುತ್ತಾನೆ. ॥೧೧೬॥

ಕೇವಲ ಸಂಸಾರ ವಿಷಯದಲ್ಲಿ ಅನುಭವವುಳ್ಳವರಿಗೆ ಮಾತ್ರ ಸ್ತ್ರೀಯರಲ್ಲಿ ಪ್ರೀತಿಯುಂಟಾಗುವುದು. ಸ್ತ್ರೀಯರಿಗೂ ಅವರಿಂದ ಆನಂದ ಪ್ರಾಪ್ತಿಯುಂಟಾಗುವುದು. ಆದರೆ ಕೇವಲ ಈ ಸಂಸಾರ ವಿಷಯದಲ್ಲಿ ವಿರಕ್ತಿಹೊಂದಿರುವ ಮನಸ್ಸುಳ್ಳ ಈಶ್ವರಾರಾಧಕರು ನಾರಿಯನ್ನು ಕೇವಲ ಕಲ್ಲಿಗೆ ಸಮಾನವೆಂದೇ ತಿಳಿದು, ಯಾವಾಗಲೂ ಜಗದೊಡೆಯನಾದ ಮಹೇಶ್ವರನಲ್ಲಿಯೇ ಅನುರಕ್ತರಾಗಿರುವರು. ॥೧೧೭॥

ಈ ಶರೀರದಲ್ಲಿ ಇದು ರಕ್ತ, ಇದು ಮಾಂಸಖಂಡಗಳು, ಇದು ಮೇದಸ್ಸು ಮುಂತಾದ ಪರಿಜ್ಞಾನವೇ ಅವನಿಗೆ ಇಲ್ಲ. ಹೀಗಿರುವಾಗ ವಿರಕ್ತನಾದ ಇವನು

ತದ್ದೇಹಚೇಷ್ಟಾಕರಣಾಯ ಚಿತ್ತಂ
ಯದಿ ಪ್ರವೃತ್ತಂ ತವ ಮೋಹತಃ ಸ್ಯಾತ್ ।
ತದಾ ಸ ಶಾಪೇನ ವಿನಾಶಮೇವ
ಕರಿಷ್ಯತೀತಿ ಪ್ರಮಿತಿರ್ಮಮಾಸೀತ್ ॥೧೧೯॥

ನಾಯಂ ಬ್ರಹ್ಮಾ ನಾಪಿ ನಾರಾಯಣೋಽಸಾ
ವಿಂದ್ರಶ್ಚಂದ್ರೋ ಭಾಸುರಗ್ನಿರ್ಯಮೋ ವಾ ।
ವಾಯುರ್ನಾಯಂ ಕಿಂತು ಶೈವಾಗ್ರಗಣ್ಯೋ
ನಾರ್ಯಾಮಸ್ಯ ಪ್ರಸ್ತರೇ ವಾ ಸಮಾಧೀಃ ॥೧೨೦॥

ಭೀತೈರ್ದೇವಗಣೈಸ್ತ್ವಮಸ್ಯ ತಪಸಾ ಸಂಪ್ರೇಷಿತಾ ಕಿಂ ತತೋ
ಭೀತಿರ್ಮಾಸ್ತು ನ ತತ್ಪದೇಷು ಸಹಸಾ ವಾಂಛಾಂ ಕರೋತ್ಯೇವ ನ ।
ತುಚ್ಛತ್ವೇನ ವಿನಿಶ್ಚಿತಾದಿತಿ ಮತಿಂ ಕೃತ್ವಾ ಪ್ರಯಾಹಿ ಪ್ರಿಯೇ
ತಸ್ಯೇಷ್ಟಂ ಶಿವಪಾದಪದ್ಮಭಜನಂ ಕಲ್ಪಾವಸಾನೇಷ್ವಪಿ ॥೧೨೧॥

---

ಹೇಗೆ ತಾನೇ ನಿನ್ನಲ್ಲಿ ಅನುರಕ್ತನಾಗುವನೆಂಬುದನ್ನು ನೀನೇ ವಿಚಾರಮಾಡಿ ಹೇಳು. ॥೧೧೮॥

ಇಷ್ಟಾದರೂ ಅಜ್ಞಾನದಿಂದ ನಿನ್ನ ಮನಸ್ಸೇನಾದರೂ ಅವನ ದೇಹಾಲಿಂಗನ, ಚುಂಬನಾದಿ ವ್ಯಾಪಾರಗಳಲ್ಲಿ ಪ್ರವರ್ತಿಸುವುದಾದರೆ, ಆಗ ಅವನು ಶಾಪ ಕೊಟ್ಟು ನಿನ್ನನ್ನು ನಾಶಮಾಡಿಬಿಡುವನು ಎಂದು ನಾನು ಪ್ರಮಾಣಮಾಡಿ ಹೇಳುತ್ತೇನೆ. ॥೧೧೯॥

ಇವನು ಬ್ರಹ್ಮನಲ್ಲ, ನಾರಾಯಣನೂ ಅಲ್ಲ. ಇಂದ್ರ, ಚಂದ್ರ, ಸೂರ್ಯ, ಅಗ್ನಿ, ಯಮ ಮತ್ತು ವಾಯು ಇವರಲ್ಲಿ ಯಾರೂ ಆಗಿಲ್ಲ. ಕೇವಲ ಶಿವಭಕ್ತಾಗ್ರೇಸರನೇ ಆಗಿರುವನು. ಇವನಿಗೆ ಸ್ತ್ರೀಯರು, ಕಲ್ಲುಗಳು ಇವೆರಡರಲ್ಲಿಯೂ ತಾರತಮ್ಯಜ್ಞಾನವೇ ಇಲ್ಲ. ಎಲ್ಲವೂ ಒಂದೇ ಸಮಾನವಾದದ್ದೆಂದೇ ಭಾವನೆಯುಂಟಾಗುವುದು. ॥೧೨೦॥

ಈ ಮಹಾನುಭಾವನ ತಪಶ್ಚರ್ಯೆಯಿಂದ ಭಯಗೊಂಡ ದೇವತೆಗಳು, ಇವನ ತಪೋವಿಘ್ನಕ್ಕಾಗಿ ನಿನ್ನನ್ನು ಇಲ್ಲಿಗೆ ಕಳುಹಿಸಿರುವರು. ಅಯ್ಯೋ ಪಾಪ ! ಅವರಿಗೆ ಇವನಿಂದ ಯಾವ ರೀತಿಯಾದ ಭಯವೂ ಉಂಟಾಗದಿರಲಿ ! ಆ ದೇವತೆಗಳ

ಇತಿ ತದ್ವಚನಂ ಶ್ರುತ್ವಾ ಸಾ ರಂಭಾಪಿ ತತೋ ಗತಾ ।
ತದ್ವಿಘ್ನಾಚರಣೇ ಪಾಪಂ ಭವತೀತ್ಯಪಿ ನಿಶ್ಚಯಾತ್ ॥೧೨೨॥

ಪುರಾ ತು ಬಹುಭಿರ್ಭ್ರಾಂತೈಃ ಶಿವಾರ್ಚನವಿಘಾತಕೈಃ ।
ಸಂಪ್ರಾಪ್ತೋ ನರಕಾವಾಸಸ್ತೇ ತೇನೈವಾತಿದುಃಖಿತಾಃ ॥೧೨೩॥

ಇತಿ ತದ್ವಚನಂ ಶ್ರುತ್ವಾ ಸಾ ತನೂಹ ಗಣೇಶ್ವರಂ ।
ಅಯಮರ್ಥಸ್ತ್ವಯಾ ಜ್ಞಾತಃ ಸರ್ವಜ್ಞತ್ವಾಭಿಮಾನತಃ ॥೧೨೪॥

ಅಹಂ ಚ ಶಿವಪೂಜಾರ್ಥಂ ಸ್ವಪ್ನೇ ಖಲು ಸಮುದ್ಯತಾ ।
ತದ್ವಿಘ್ನಃ ಕಿಂ ಕೃತೋ ಜ್ಞಾತ್ವಾ ಕಥಂ ವಾ ತೇ ಭ್ರಮೋ ಭವೇತ್ ॥೧೨೫॥

---

ಸ್ಥಾನಗಳು ಅತಿ ತುಚ್ಛವೆಂದು ಇವನು ತಿಳಿದಿರುವುದರಿಂದ ಅವನಿಗೆ ಆ ದೇವ ಪದವಿಯಲ್ಲಿ ಅಪೇಕ್ಷೆಯೇ ಇಲ್ಲ. ಅವನಿಗೆ ಕಲ್ಪದ ಕೊನೆಯವರೆಗೂ ಆ ಪರಶಿವನ ಪಾದಕಮಲಭಜನೆಯೊಂದು ಮಾತ್ರ ಇಷ್ಟವಾದದ್ದೇ ಹೊರತು, ಬೇರೆ ಏನೂ ಬೇಕಿಲ್ಲ. ಆದುದರಿಂದ ಎಲೌ ಪ್ರಿಯಕರಳಾದ ರಂಭೆಯೇ, ನೀನು ನಿಶ್ಚಿಂತೆಯಿಂದ ನಿನ್ನ ವಾಸಸ್ಥಳಕ್ಕೆ ಹಿಂತಿರುಗುವಳಾಗು" ಎಂದು ಅಶರೀರವಾಣಿಯಾಯಿತು.॥೧೨೧॥

ಹೀಗೆ ನುಡಿದ ಅಶರೀರವಾಣಿಯ ಮಾತುಗಳನ್ನು ಕೇಳಿ, ನಿಜವಾಗಿಯೂ ಆ ಸನಕನಿಗೆ ವಿಘ್ನವನ್ನುಂಟುಮಾಡಿದರೆ ಪಾಪವುಂಟೆಂಬುದನ್ನು ನಿಶ್ಚಯಿಸಿ ಆ ರಂಭೆಯು ಅಲ್ಲಿಂದ ಹಿಂತಿರುಗಿದಳು. ॥೧೨೨॥

ಹಿಂದೆ ಅನೇಕ ಮಂದಿ ಭ್ರಾಂತಚಿತ್ತರಾದವರು ಶಿವಪೂಜೆಗೆ ವಿಘ್ನವನ್ನೊಡ್ಡಿ ನರಕವಾಸವನ್ನನುಭವಿಸಿ ಅದರಿಂದ ತುಂಬಾ ದುಃಖಭಾಗಿಗಳಾಗಿರುವರು. ॥೧೨೩॥

ಹೀಗೆ ಭೃಂಗಿಯು ನುಡಿದುದನ್ನು ಕೇಳಿ ಆ ಚಾರಣನ ಸ್ತ್ರೀಯು, ಭೃಂಗಿಯನ್ನು ಕುರಿತು, ಎಲೈ ಗಣೇಶ್ವರನೇ! ನೀನು ಸರ್ವಜ್ಞನೆಂಬ ಅಭಿಮಾನ ವನ್ನು ಹೊಂದಿರುವುದರಿಂದ ನಿನಗೆ ಈ ವಿಷಯವು ತಿಳಿಯಿತು. ॥೧೨೪॥

ನಾನು ಸ್ವಪ್ನದಲ್ಲಿ ಶಿವಪೂಜೆಮಾಡಲು, ಉದ್ಯುಕ್ತಳಾಗಿದ್ದೆನು. ಆದರೆ ಅಷ್ಟರಲ್ಲಿಯೇ ನಿಮ್ಮ ಉಚ್ಚವಾದ ಧ್ವನಿಗಳಿಂದ ನನಗೆ ಎಚ್ಚರವಾಗಿ ಆ ಶಿವಪೂಜೆಗೆ ವಿಘ್ನವುಂಟಾಯಿತು. ಈ ವಿಘ್ನವುಂಟಾಗಲು ಕಾರಣವೇನು ? ನೀನು ಹೇಳಿದಂತೆ ನೋಡುವುದಾದರೆ ನಿನಗೇನಾದರೂ ಭ್ರಾಂತಿಯುಂಟಾಗಿತ್ತೆ ? ಯಾವುದನ್ನೂ ತಿಳಿಸು ಎಂದು ಕೇಳಿದಳು. ॥೧೨೫॥

ಸ್ವಪ್ನೇ ಜಾಗರಣೇ ವಾಪಿ ಶಿವಲಿಂಗಾರ್ಚನಂ ಸಮಂ।
ತದರ್ಚನೇನ ಯತ್ಪುಣ್ಯಂ ತತ್ತುಲ್ಯಮುಭಯೋರಪಿ ॥೧೨೬॥

ಯೇನಾನಂದೇನ ಪೂಜಾಯಾಂ ಪ್ರವೃತ್ತಾ ಲಿಂಗಮಸ್ತಕೇ।
ತದ್ವಿಘ್ನಾಚರಣೇ ಪಾಪಂ ಕಥಂ ತೇ ನ ಭವಿಷ್ಯತಿ ॥೧೨೭॥

ಉತ್ಸಾಹೋಽಪಿ ಮಹಾನ್ವೃತ್ತಃ ಶಿವಲಿಂಗಾರ್ಚನೇ ಮಮ।
ತದುತ್ಸಾಹವಿಘಾತೇನ ತವ ಪಾಪಂ ಭವಿಷ್ಯತಿ ॥೧೨೮॥

ಶಿವಪೂಜನಸಾಮಗ್ರೀ ಯಾ ಸ್ವಪ್ನೇ ಸಾ ಕಥಂ ಮಯಾ।
ಪ್ರಾಪ್ತವ್ಯಾ ತಾದೃಶಂ ಭಾಗ್ಯಂ ನ ಕೃತ್ಯಂ ಖಲು ಸರ್ವಥಾ ॥೧೨೯॥

---

ಕನಸಿನಲ್ಲಾಗಲೀ ಅಥವಾ ಎಚ್ಚರವಾಗಿರುವಾಗಲಾಗಲೀ ಮಾಡಿದ ಶಿವಲಿಂಗಪೂಜೆಯು ಒಂದೇ ಸಮಾನವಾದ ಫಲವನ್ನು ಕೊಡುವುದು. ಸ್ವಪ್ನದಲ್ಲಿ ಪೂಜೆಮಾಡಿದ ಶಿವಲಿಂಗದ ಫಲವೇ, ಎಚ್ಚರವಾದಾಗ ಪೂಜಿಸಿದ ಕ್ರಮಕ್ಕೂ ಫಲವಾಗಿ ಲಭಿಸುವುದು. ಇದರಲ್ಲಿ ಪುಣ್ಯ ವಿಷಯಕವಾದ ತಾರತಮ್ಯವೇನೂ ಇಲ್ಲ. ॥೧೨೬॥

ಯಾವ ಆನಂದ ಪರವಶತೆಯಿಂದ ನಾನು ಆ ಶಿವಲಿಂಗದ ತಲೆಯ ಮೇಲೆ ಪೂಜೆ ಮಾಡಲು ಪ್ರಾರಂಭಿಸಿದೆನೋ, ಅಂತಹ ಸಮಯಕ್ಕೆ ಸರಿಯಾಗಿ ನೀನು ಕೂಗಿ ಆ ಪೂಜೆಗೆ ವಿಘ್ನವನ್ನುಂಟುಮಾಡಿದುದರಿಂದ ನಿನಗೆ ಶಿವಪೂಜಾವಿಘ್ನರೂಪವಾದ ಪಾಪವು ಹೇಗೆತಾನೆ ಉಂಟಾಗಲಾರದು ? ॥೧೨೭॥

ಆ ಶಿವಲಿಂಗವನ್ನು ಪೂಜಿಸುವುದರಲ್ಲಿ ನನಗೆ ತುಂಬಾ ಉತ್ಸಾಹವೂ ಇದ್ದಿತು. ಆ ಮಹೋತ್ಸವವನ್ನು ಹೋಗಲಾಡಿಸಿ ವಿಘ್ನವನ್ನುಂಟುಮಾಡಿದುದರಿಂದ ನಿನಗೆ ಪಾಪವು ಇದ್ದೇ ಇರುವುದು. ॥೧೨೮॥

ಕನಸಿನಲ್ಲಿ ಶಿವಪೂಜೆಮಾಡಲು ನಾನು ಸಿದ್ಧಮಾಡಿಕೊಂಡಿದ್ದ ಪೂಜಾಸಾಮಗ್ರಿಯು ನನಗೆ ಪ್ರತ್ಯಕ್ಷವಾಗಿ ಜಾಗ್ರದವಸ್ಥೆಯಲ್ಲಿ ದೊರೆಯುವಷ್ಟು ಪುಣ್ಯವನ್ನು ನಾನು ಮಾಡಿಲ್ಲವಲ್ಲಾ! ಏನು ಮಾಡುವುದು ! ॥೧೨೯॥

ತಾದೃಶಂ ಲಿಂಗಮುತ್ಕೃಷ್ಟಂ ಸ್ವಪ್ನೇ ದೃಷ್ಟಂ ಮಯಾ ತದಾ ।
ತಲ್ಲಿಂಗಸದೃಶಂ ಲಿಂಗಂ ನಾಸ್ತಿ ಬ್ರಹ್ಮಾಂಡಮಂಡಲೇ ॥೧೩೦॥

ನಕ್ಷತ್ರಲೇಢಿ ತಲ್ಲಿಂಗಂ ಶರಚ್ಚಂದ್ರಸಮಂ ಖಲು ।
ತಾದೃಶಂ ತತ್ರ ವಾ ಲಿಂಗಂ ಕ್ವೇದಂ ಬ್ರಹ್ಮಾಂಡಮಂಡಲೇ ॥೧೩೧॥

ಪ್ರಲಯಾನಲಸಂಕಾಶದೀಪಮಾಲಾಪಿ ಕುತ್ರ ಸಾ ।
ಪುಷ್ಪೋಚ್ಚಯಾಶ್ಚ ತೇ ಕುತ್ರ ಪುಷ್ಪಮಾಲಾಸಮುಚ್ಚಯಾಃ॥೧೩೨॥

ಕುತ್ರೋಪಹಾರಗಿರಯಸ್ತಾದೃಶಃ ಸಂತಿ ತಾನ್ವದ ।
ಕ್ವ ತಾನ್ಯಾಭರಣಾನ್ಯದ್ಯ ಚಂದನಾದೀನಿ ತಾನಿ ವಾ ॥೧೩೩॥

ಕ್ವ ವಾ ದಿಗಂತವಿಶ್ರಾಂತೇ ದುಕೂಲಾನ್ಯಪಿ ಕೋಟಿಶಃ ।
ಪಂಚಾಮೃತಪ್ರವಾಹಾಶ್ಚ ತಾದೃಶಾಃ ಸಂತಿ ಕುತ್ರ ವಾ ॥೧೩೪॥

---

ನಾನು ಕನಸಿನಲ್ಲಿ ಕಂಡ ಉತ್ಕೃಷ್ಟವಾದ ಲಿಂಗಕ್ಕೆ ಸಮಾನವಾದ ಲಿಂಗವು ಈ ಬ್ರಹ್ಮಾಂಡಮಂಡಲದಲ್ಲೆಲ್ಲಿಯೂ ದೊರೆಯದು. ॥೧೩೦॥

ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟು ಶರತ್ಕಾಲದ ಚಂದ್ರನಿಗೆ ಸಮಾನವಾದ ಕಾಂತಿಯಿಂದ ಶೋಭಿಸುತ್ತಿದ್ದ ಆ ರೀತಿಯಾದ ಲಿಂಗವು, ಈ ಮಂಡಲಾಕಾರವಾದ ಬ್ರಹ್ಮಾಂಡದಲ್ಲಿ ಎಲ್ಲಿ ತಾನೇ ದೊರಕೀತು? ॥೧೩೧॥

ಪ್ರಲಯಕಾಲದ ಅಗ್ನಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿದ್ದ, ಆ ದೀಪಮಾಲೆಗಳು ಈಗೆಲ್ಲಿ ಕಾಣುವುವು? ಅಪಾರವಾದ ಆ ಹೂರಾಶಿಗಳೂ ಮತ್ತು ಹೂವಿನ ದಿವ್ಯವಾದ ಹಾರಗಳು ತಾನೇ ಹೇಗೆ ಸಿಕ್ಕುವುವು? ॥೧೩೨॥

ಬೆಟ್ಟಗಳಿಗೆ ಸಮಾನವಾಗಿದ್ದ ಆ ಉಪಹಾರಸಾಮಗ್ರಿಗಳು ಈಗೆಲ್ಲಿ ದೊರೆಯಬೇಕು. ಆಗ ದೊರತಿದ್ದ ಒಡವೆಗಳೂ ದಿವ್ಯವಾದ ಚಂದನವೇ ಮುಂತಾದ ಇತರ ಪೂಜಾಸಾಮಗ್ರಿಗಳೂ ಸಹ ಈಗ ಹೇಗೆ ತಾನೇ ದೊರಕಿಯಾವು? ॥೧೩೩॥

ದಿಕ್ಕಿನ ಕೊನೆಯುವರೆಗೂ ವ್ಯಾಪಿಸುವಷ್ಟು ವಿಶಾಲವಾಗಿದ್ದ ಆ ಕೋಟ್ಯಂತರ ರೇಷ್ಮೆಯ ವಸ್ತ್ರಗಳು ಈಗ ಎಲ್ಲಿ ಬಂದಾವು? ಆಗ ಸಿದ್ಧಪಡಿಸಿದ್ದ ಅಂಥ ಪಂಚಾಮೃತಪದಾರ್ಥಗಳ ಪ್ರವಾಹಗಳೂ ಕೂಡ ಭೂಲೋಕದಲ್ಲಿ ಇರುವುವೇ? ॥೧೩೪॥

ಪುಷ್ಪವೃಷ್ಟಿಶ್ಚ ಸಾ ಕುತ್ರ ಪುನಃ ಪುನರಸಶ್ವರಾ ।
ಬ್ರಹ್ಮಾಂಡಮಂಡಲವ್ಯಾಪ್ತರತ್ನಚ್ಛತ್ರಾಣಿ ಕುತ್ರ ವಾ ॥೧೩೫॥

ಈದೃಶಂ ಪರಮಂ ಭಾಗ್ಯಂ ದೃಷ್ಟ್ವಾ ಹೃಷ್ಟಾಽಸ್ಮಿ ಸಾದರಂ ।
ತದ್ಭಾಗ್ಯಸ್ಯಾಪಿ ಹರಣಂ ಕೃತಮೇವ ತ್ವಯಾ ವದ ॥೧೩೬॥

ಮೂಢಚೇಷ್ಟಾಸಮಾನಾ ತೇ ಚೇಷ್ಟಾಪಿ ಖಲು ಸರ್ವಥಾ ।
ತದಾನಂದವಿನಾಶಾಯ ಪ್ರವೃತ್ತಿಸ್ತೇ ಕಥಂ ವದ ॥೧೩೭॥

ಹಾ ಹತಾಹಮಧುನಾ ಗತಜೀವಾ
ಹಾ ಕಥಂ ಧನಮಿದಂ ಗತಮೇವಂ ।
ಹಾ ಕಥಂ ನು ಕರುಣಾ ಗಿರಿಶಸ್ಯೇ
ತ್ಯದ್ಯ ದುಷ್ಕೃತಕೃತಾ ತವ ವೃತ್ತಿಃ ॥೧೩೮॥

ನ ಯಮೋಽಪಿ ಕರೋತಿ ಲಿಂಗಪೂಜಾ
ಜನಿತಾನಂದವಿಘಾತಮೀದೃಶಸ್ತ್ವಂ ।

---

ಶಾಶ್ವತವಾಗಿಬೀಳುತ್ತಿದ್ದ ಆ ಪುಷ್ಪವೃಷ್ಟಿಯು ತಾನೇ ಈಗ ಪುನಃ ಬಂದೀತೇ! ಬ್ರಹ್ಮಾಂಡಮಂಡಲವನ್ನೇ ವ್ಯಾಪಿಸುವಂತೆ ವಿಶಾಲವಾಗಿದ್ದ ರತ್ನ ಖಚಿತವಾದ ಛತ್ರಿಗಳು ಈಗ ಎಲ್ಲಿ ದೊರೆಯುವುವು? ॥೧೩೫॥

ಇಂತಹ ಪರಮೋತ್ಕೃಷ್ಟವಾದ ಭಾಗ್ಯವನ್ನು ನೋಡಿ ನಾನು ಆದರದಿಂದ ಬಹಳ ಸಂತುಷ್ಟಳಾಗಿದ್ದೆನು. ಅಂತಹ ಭಾಗ್ಯವನ್ನೇ ನೀನು ಈಗ ಅಪಹಾರಮಾಡಿ ಬಿಟ್ಟೆಯಲ್ಲಾ! ಇದು ಉಚಿತವೇ, ನೀನೇ ಹೇಳು. ॥೧೩೬॥

ನಿನ್ನ ಚೇಷ್ಟೆಯು ಕೇವಲ ದಡ್ಡನು ಮಾಡುವ ಕೀಟಲೆಗೆ ಸಮಾನವಾದದ್ದು. ಅಂತಹ ಶಿವಪೂಜಾನಂದವನ್ನು ವಿನಾಶಮಾಡುವುದಕ್ಕೆ ನಿನಗೆ ಹೇಗೆ ಪ್ರವೃತ್ತಿ ಯುಂಟಾಯಿತೋ ಕಾಣೆನು? ॥೧೩೭॥

ಹೋಯಿತು! ನನ್ನ ಪ್ರಾಣಧನವೆಲ್ಲಾ ಹೀಗೆ ಹಾಳಾಯಿತಲ್ಲಾ! ಹೀಗೆ ಇಂತಹ ಅಪಕಾರಮಾಡಿದ ನಿನ್ನಂತಹವರಲ್ಲಿಯೂ ಆ ಮಹೇಶ್ವರನು ಹೇಗೆ ದಯೆಮಾಡುತ್ತಿರುವನೋ ಕಾಣೆನು; ॥೧೩೮॥

ಶಿವಲಿಂಗ ಪೂಜೆಯಿಂದುಂಟಾಗುವ ಆನಂದಕ್ಕೆ ವಿಘ್ನವನ್ನುಂಟುಮಾಡಲು ಆ ಯಮನೂ ಪ್ರಯತ್ನಿಸುವುದಿಲ್ಲ. ಈ ನೀನು ಅವನಿಗಿಂತಲೂ ಕ್ರೂರನು. ಈಗ

ಸುಖಪೂರವಿನಾಶಕೋ ಯಮೋನಾ
ಪೃಥುನಾನೇಯ ಇತಿ ಸ್ವಪಾಪಶಾಂತ್ಯೈ ॥೧೩೯॥

ಕೃತಪಾಪವಿನಾಶಹೇತುಭೂತಾ
ಯಮಲೋಕಸ್ಥಿತಿರೇವ ತೇನ ನೂನಂ ।
ತವ ಯಾತನಯಾ ವಿನಾ ನ ಮುಕ್ತಿಃ
ಖಲು ಪಾಪಸ್ಯ ಶಿವಾರ್ಚನಾಪರಾಧಾತ್ ॥೧೪೦॥

ಹಾ ಹಾ ಹತಾಹಂ ಹತಪುಣ್ಯರಾಶಿ
ಸ್ತತ್ಪುಣ್ಯರಾಶಿಶ್ಚ ಕುತೋ ಮಯಾಽಸ್ಮಾತ್ ।
ಇತ್ಯುಚ್ಚಕೈರ್ವಾಚಮುದೀರ್ಯ ಸೈವ
ಪಪಾತ ಲಿಂಗಾಂಗಣದತ್ತದೇಹಾಂ ॥೧೪೧॥

ತಾಂ ದೃಷ್ಟ್ವಾ ಶೋಕಸಂತಪ್ತಾಂ ಪತಿತಾಮವನೀತಲೇ ।
ತೇ ಸರ್ವೇ ವಿಸ್ಮಯಂ ಪ್ರಾಪ್ತಾಃ ಕಿಮಾಸೀದಿತಿ ಸತ್ವರಂ ॥೧೪೨॥

---

ಸುಖಪ್ರವಾಹವನ್ನು ನಾಶಮಾಡಿದ ಪಾಪವು ಶಾಂತಿಯಾಗುವುದಕ್ಕೋಸ್ಕರ ಆ ಯಮನೇ ನಿನ್ನನ್ನು ತನ್ನ ಲೋಕಕ್ಕೆ ಕರೆದುಕೊಂಡು ಹೋಗಬೇಕು. ||೧೩೯||

ನಿನಗೆ ನಿಶ್ಚಯವಾಗಿಯೂ ಪಾಪರಾಶಿಯನ್ನು, ನಾಶಪಡಿಸುವುದರಲ್ಲಿ ಕಾರಣ ಭೂತವಾಗಿರುವ ಆ ಯಮಲೋಕವಾಸವೇ ಪ್ರಾಪ್ತಿಯಾಗುವುದು. ಶಿವಪೂಜೆಗೆ ವಿಘ್ನವನ್ನುಂಟುಮಾಡಿದ ಅಪರಾಧದಿಂದ ನಿನಗೆ ನಿಜವಾಗಿಯೂ ನರಕಯಾತನೆ ಯಲ್ಲದೇ ಮುಕ್ತಿ ದೊರಕೀತೆ ? ||೧೪೦||

ಅಯ್ಯೋ! ಹತಳಾದೆನು. ನನ್ನ ಆ ಪುಣ್ಯ ಸಮೂಹವೆಲ್ಲವೂ ಧ್ವಂಸವಾಗಿ ಹೋಯಿತು. ಪುನಃ ಅದು ನನಗೆಲ್ಲಿ ದೊರಕೀತು" ಎಂಬುದಾಗಿ ಗಟ್ಟಿಯಾಗಿ ಮಾತುಗಳನ್ನಾಡುತ್ತಾ ಆ ಚಾರಣಾಂಗನೆಯು ಅಲ್ಲಿಯೇ ಶಿವಲಿಂಗಗಳಿದ್ದ ಪ್ರದೇಶ ಗಳಲ್ಲಿ ಶರೀರವು ಬೀಳುವಂತೆ, ನೆಲಕ್ಕೆ ಬಿದ್ದುಬಿಟ್ಟಳು. ||೧೪೧||

ದುಃಖದಿಂದ ಖಿನ್ನಳಾಗಿ ಭೂಮಿಯ ಮೇಲೆ ಬಿದ್ದ ಅವಳನ್ನು ನೋಡಿ ಆ ಶಿವಗಣಗಳೆಲ್ಲವೂ, ಏನಾಯಿತು ? ಇವಳಿಗೆ ಏನು ವಿಪತ್ತೊದಗಿತೆಂದು ಭಯದಿಂದ ಎಲ್ಲರೂ ಆಶ್ಚರ್ಯಚಕಿತರಾಗಿ ಅಲ್ಲಿಯೇ ನೋಡತೊಡಗಿದರು. ||೧೪೨||

ಮಹೇಶಕೃಪಯಾ ಸೇಯಂ ಶಿವಭಕ್ತಿಪರಾಯಣಾ ।
ಜನ್ಮಾರ್ಜಿತಂ ಸುಪುಣ್ಯಂ ಚ ತಸ್ಯಾಃ ಖಲು ಮಹತ್ತರಂ ॥೧೪೩॥

ಅಪಾರೈಃ ಪುಣ್ಯಗಿರಿಭಿರ್ಭಕ್ತಿರೇವಂ ಪ್ರಜಾಯತೇ ।
ತತ್ಪುಣ್ಯಪರಿಪಾಕೋಽಪಿ ಭಕ್ತಿರೂಪೇಣ ವರ್ಧತೇ ॥೧೪೪॥

ಕಾನಿ ಪುಣ್ಯಾನಿ ಚೀರ್ಣಾನಿ ಪುರಾ ತೇಷಾಂ ಫಲಂ ಕಥಂ ।
ಭಕ್ತಿರೂಪಂ ಸಮಾಸಾದ್ಯ ಸಂಪನ್ನಮಧುನಾ ನವಂ ॥೧೪೫॥

ಈದೃಶೀ ಭಕ್ತಿರೇತಸ್ಯಾಃ ಶಂಕರಾನುಗ್ರಹಾತ್ಪರಂ ।
ಸಮುತ್ಪನ್ನಾ ನ ಸಂದೇಹಃ ಸರ್ವಪಾಪವಿನಾಶಿನೀ ॥೧೪೬॥

ದುರ್ಲಭಾ ಭಕ್ತಿರಸ್ಮಾಕಮೀದೃಶೀ ಖಲು ಸರ್ವಥಾ ।
ತ್ಯಕ್ತ್ವಾ ವಿಷಯವಾಂಛಾಂ ಸಾ ಭಕ್ತಿಮಾಪ ಕಥಂ ಶಿವೇ ॥೧೪೭॥

---

ಮಹೇಶ್ವರನ ದಯೆಯಿಂದ ಇವಳು ಶಿವಭಕ್ತಿ ತತ್ಪರಳಾದಳು. ಈಕೆಯು ಪೂರ್ವಜನ್ಮದಲ್ಲಿ ಸಂಪಾದಿಸಿದ್ದ ಪುಣ್ಯವೇ ಈ ಮಹತ್ತರವಾದ ಭಾಗ್ಯವುಂಟಾಗಲು ಕಾರಣವಾಯಿತು. ॥೧೪೩॥

ಅಪಾರವಾದ ಪುಣ್ಯವೆಂಬ ಪರ್ವತಗಳಿಂದ ಈ ರೀತಿ ಭಕ್ತಿರೂಪವಾದ ಪರಿಪಕ್ವಫಲವು ದೊರೆಯುತ್ತದೆ. ॥೧೪೪॥

ಈಕೆಯು ಹಿಂದೆ ಎಂತಹ ಪುಣ್ಯಗಳನ್ನು ಸಂಪಾದಿಸಿದ್ದಳೋ! ಅವುಗಳ ಫಲವೆಂತಹುದೋ! ಅವೆಲ್ಲವೂ ಈಗ ನೂತನವಾಗಿ ಈ ರೀತಿಯಾದ ಭಕ್ತಿರೂಪವನ್ನು ಹೊಂದಿರುತ್ತವೆ. ॥೧೪೫॥

ಇವಳಿಗೆ ಸಕಲ ಪಾಪಗಳನ್ನೂ ನಾಶಮಾಡುವ ಈ ರೀತಿಯಾದ ಶಿವಪೂಜಾ ಭಕ್ತಿಯು ಆ ಶಂಕರನ ಅನುಗ್ರಹವಾದನಂತರವೇ ಉಂಟಾಗಿದೆ. ಇದರಲ್ಲಿ ಸಂದೇಹವೇ ಇಲ್ಲ. ॥೧೪೬॥

ವಿಷಯ ಸುಖಾಭಿಲಾಷೆಯನ್ನೂ ಬಿಟ್ಟು, ಆ ಪರಶಿವನಲ್ಲಿ ಇವಳಿಗೆ ಈ ರೀತಿಯಾದ ಭಕ್ತಿಯುಂಟಾದುದು ತುಂಬಾ ದುರ್ಲಭ. ನಮ್ಮಂತಹವರಿಗೆ ಇಂತಹ ಭಕ್ತಿಯು ದೊರೆಯುವುದು ಕಷ್ಟವೇ ಅಲ್ಲವೆ! ॥೧೪೭॥

ಅಶಾಸ್ಮಭಕ್ತಿರಸ್ಮಾಕಮೀದೃಶೀ ದುರ್ಲಭಾ ಖಲು ।
ವಾಂಛಯಾಪಿ ನ ತತ್ಪ್ರಾಪ್ತಿರ್ಮುನೀನಾಮಪಿ ದುರ್ಲಭಾ ॥೧೪೮॥

ತಪೋ ಘೋರತರಂ ತಪ್ತಂ ವನೇಷು ಮುನಿಪುಂಗವೈಃ ।
ತಥಾಪಿ ತಾದೃಶೀ ಭಕ್ತಿರ್ನ ಪ್ರಾಪ್ತಾ ತತ್ತಪಸ್ಯಯಾ ॥೧೪೯॥

ಅಪಾರಾಣ್ಯಪಿ ದಾನಾನಿ ಕೃತಾನಿ ಜಗತೀತಲೇ ।
ಭೂಪಾಲೈಸ್ತಾದೃಶೀ ಭಕ್ತಿರ್ನ ಪ್ರಾಪ್ತಾ ಶಂಕರೇ ಖಲು ॥೧೫೦॥

ಗೋಕುಲಾನಾಂ ಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೧॥

ರತ್ನಾಭರಣದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೨॥

---

ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಈ ರೀತಿಯಾದ ಶಿವಭಕ್ತಿಯು ನಮ್ಮಂತಹವರಿಗೆ ದುರ್ಲಭವೇ ಸರಿ ; ಕೇವಲ ಅಪೇಕ್ಷೆಯಿಂದ ಮಾತ್ರ ಅದು ಮುನಿಗಳಿಗೂ ದೊರೆಯುವುದು ಕಷ್ಟ. ॥೧೪೮॥

ನಿಬಿಡವಾದ ಘೋರಾರಣ್ಯಗಳಲ್ಲಿ ಮುನಿಶ್ರೇಷ್ಠರು ಅತಿ ಘೋರವಾದ ತಪಸ್ಸನ್ನು ಮಾಡಿರುವರು. ಆ ಘೋರವಾದ ತಪಸ್ಸುಗಳಿಂದಲೂ ಅವರಿಗೆ ಈ ರೀತಿಯಾದ ಭಕ್ತಿಯುಂಟಾಗಿಲ್ಲ. ॥೧೪೯॥

ಅನೇಕ ಮಂದಿ ರಾಜರು ಸಹ ಈ ಭೂಮಂಡಲದಲ್ಲಿ ನಾನಾ ವಿಧವಾದ ದಾನಗಳನ್ನು ಅಪಾರವಾಗಿ ಮಾಡಿರುವರು. ಆದರೂ ಈ ರೀತಿಯಾದ ಶಿವಭಕ್ತಿಯು ಅವರಿಗೆ ಲಭಿಸಿಲ್ಲ. ॥೧೫೦॥

ಆ ಶಂಕರನ ಅನುಗ್ರಹವಿಲ್ಲದೇ ಸಾವಿರಾರು ಗೋದಾನಮಾಡಿದರೂ ಸಹ ಪರಶಿವನಲ್ಲಿ ಈ ರೀತಿಯಾದ ಭಕ್ತಿಯು ಕೂಡಲೇ ಹುಟ್ಟಲಾರದು. ॥೧೫೧॥

ಲೋಕಮಂಗಳಕರನಾದ ಆ ಶಂಕರನ ಅನುಗ್ರಹವೊಂದಿಲ್ಲದೇ ರತ್ನದ ಆಭರಣಗಳನ್ನು ದಾನಮಾಡಿದರೂ ಈ ರೀತಿಯಾದ ಭಕ್ತಿಯು ಈಶ್ವರದಲ್ಲಿ ಉದಯಿಸಲಾರದು- ॥೧೫೨॥

ದುಕೂಲಗಿರಿದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೩॥

ಘೃತಕಂಬಲದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೪॥

ರತ್ನರಾಶಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೫॥

ತುಲಾಕೋಟಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೬॥

ದಿವ್ಯಚಂದನದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೭॥

---

ಆ ಜಗನ್ಮಂಗಳಪ್ರದನಾದ ಶಂಕರನ ಅನುಗ್ರಹವಿಲ್ಲದೇ ಅನೇಕ ಪರ್ವತಕ್ಕೆ ಸಮಾನವಾದ ರೇಷ್ಮೆಯ ವಸ್ತ್ರಗಳ ರಾಶಿಗಳನ್ನೇ ದಾನಮಾಡಿದರೂ ಆ ಶಿವನಲ್ಲಿ ಈ ರೀತಿಯಾದ ಭಕ್ತಿಯುಂಟಾಗಲಾರದು. ॥೧೫೩॥

ತುಪ್ಪ ಮತ್ತು ಕಂಬಳಿ ಇವುಗಳನ್ನು ದಾನಮಾಡಿದರೂ ಆ ಶಂಕರನ ಅನುಗ್ರಹವೊಂದು ಮಾತ್ರ ಇಲ್ಲದಿದ್ದರೆ ಈ ರೀತಿಯಾದ ಭಕ್ತಿಯು ಆ ಪರಶಿವನಲ್ಲಿ ಮಾನವರಿಗೆ ಉಂಟಾಗಲಾರದು. ॥೧೫೪॥

ರತ್ನಗಳ ಸಮೂಹವನ್ನೇ ದಾನಮಾಡಿದರೂ ಆ ಶಂಕರನ ಅನುಗ್ರಹವಿಲ್ಲದಿದ್ದರೆ, ಇಂತಹ ಶಿವಭಕ್ತಿಯು ಶಿವನಲ್ಲಿ ಜಾಗ್ರತೆ ಮಾನವನಿಗೆ ಉಂಟಾಗಲಾರದು. ॥೧೫೫॥

ಕೋಟ್ಯಂತರ ಹತ್ತಿಯ ರಾಶಿಯ ದಾನವನ್ನೇ ಕೊಟ್ಟಾಗ್ಯೂ ಆ ಶಂಕರನ ಅನುಗ್ರಹವು ಮಾತ್ರ ಇಲ್ಲದಿದ್ದರೆ ಶಿವನಲ್ಲಿ ಇಂತಹ ಭಕ್ತಿಯು ಜಾಗ್ರತೆ ಉಂಟಾಗುವುದಿಲ್ಲ. ॥೧೫೬॥

ದಿವ್ಯವಾದ ಚಂದನವನ್ನೇ ದಾನಮಾಡಿದರೂ ಆ ಶಂಕರನ ಅನುಗ್ರಹವೊಂದು ಲಭಿಸದಿದ್ದರೆ ಆ ಈಶ್ವರನಲ್ಲಿ ಎಂದಿಗೂ ಜಾಗ್ರತೆಯಾಗಿ ಈ ರೀತಿಯಾದ ಭಕ್ತಿಯು ಹುಟ್ಟುವುದೇ ಇಲ್ಲ. ॥೧೫೭॥

ಕರ್ಪೂರರಾಶಿದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೮॥

ಕನ್ಯಾಕೋಟಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೫೯॥

ಗಜಕೋಟಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೬೦॥

ವಾಜಿಕೋಟಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೬೧॥

ಅನ್ನರಾಶಿಪ್ರದಾನೈರ್ವಾ ತಾದೃಶೀ ಭಕ್ತಿರೀಶ್ವರೇ ।
ನ ಭವತ್ಯೇವ ಸಹಸಾ ಶಂಕರಾನುಗ್ರಹಂ ವಿನಾ ॥೧೬೨॥

ತೇನ ಸ್ವರೂಪೇಣ ಮಹೇಶ್ವರೋಽಪಿ
ಭಕ್ತಾಘನಾಶಾಯ ಕರೋತಿ ಯತ್ನಂ ।
ಕೇನಾಪಿ ನ ಜ್ಞಾಯತ ಏವ ನೂನಂ
ತಜ್ಜ್ಞಾನಮಪ್ಯಕ್ಷಯಪುಣ್ಯಹೇತುಃ ॥೧೬೩॥

---

ರಾಶಿಗಟ್ಟಲೇ ಕರ್ಪೂರವನ್ನು ದಾನಮಾಡಿದರೂ ಆ ಶಂಕರನ ಅನುಗ್ರಹವಿಲ್ಲದೇ ಈ ರೀತಿಯಾದ ಶಿವಭಕ್ತಿಯು ಕೂಡಲೇ ಉಂಟಾಗುವುದಿಲ್ಲ. ॥೧೫೮॥

ಕೋಟಿ ಕನ್ಯಾದಾನಗಳನ್ನು ಮಾಡಿದರೂ ಆ ಶಂಕರನ ಅನುಗ್ರಹವಿಲ್ಲದೇ ಈ ರೀತಿಯಾದ ಶಿವಭಕ್ತಿಯು ಜನಗಳಿಗೆ ಉಂಟಾಗುವುದಿಲ್ಲ. ॥೧೫೯॥

ಕೋಟಿ ಆನೆಗಳನ್ನೇ ದಾನಮಾಡಿದರೂ ಆ ಶಂಕರನ ಅನುಗ್ರಹವಿಲ್ಲದೆ ಈ ರೀತಿಯಾದ ಶಿವಭಕ್ತಿಯು ಕೂಡಲೇ ಜನಗಳಿಗೆ ಉಂಟಾಗುವುದಿಲ್ಲ. ॥೧೬೦॥

ಕೋಟಿ ಕುದುರೆಗಳನ್ನೇ ದಾನಮಾಡಿದರೂ ಆ ಶಂಕರನ ಅನುಗ್ರಹವಿಲ್ಲದೆ ಈ ರೀತಿಯಾದ ಶಿವಭಕ್ತಿಯು ಜಾಗ್ರತೆ ಉಂಟಾಗುವುದಿಲ್ಲ. ॥೧೬೦॥

ರಾಶಿಗಟ್ಟಲೆ ಅನ್ನಮಾಡಿಸಿ ದಾನಮಾಡಿದರೂ ಆ ಶಂಕರನ ಅನುಗ್ರಹವಿಲ್ಲದೆ ಈ ರೀತಿಯಾದ ಶಿವಭಕ್ತಿಯು ಜಾಗ್ರತೆ ಉಂಟಾಗುವುದಿಲ್ಲ. ॥೧೬೨॥

ಆ ಮಹೇಶ್ವರನು ಯಾವ ರೂಪದಿಂದ ತನ್ನ ಭಕ್ತರ ಪಾಪನಾಶಕ್ಕೋಸ್ಕರ

ಧನ್ಯಾಃ ಕೃತಾರ್ಥಾಶ್ಚ ಶಿವಾರ್ಚನೇನ
ಭವಂತಿ ಮುಕ್ತಾಶ್ಚ ಮಹಾಘಬಂಧಾತ್ ।
ಸಂಸಾರಬಂಧೋಽಪಿ ಸ ನಾಶಮೇತಿ
ಮಹೇಶಲಿಂಗಾರ್ಚನಪುಣ್ಯಲೇಶಾತ್ ॥೧೬೪॥

ಧರ್ಮಾಸ್ತು ಸಂತ್ಯೇವ ಸಹಸ್ರಶೋಽಪಿ
ಕಿಂ ತೈಃ ಫಲಂ ಶಂಕರಪೂಜನೇನ ।
ಯದ್ಯದ್ಭವೇತ್ತತ್ಸಮಮುಷ್ಯನಲ್ಪಂ
ನ ಪುಣ್ಯಮಿತ್ಯಸ್ತಿ ಮತಿಃ ಸ್ವಭಾವಾತ್ ॥೧೬೫॥

ಅಹೋ ಮಹದ್ಭಾಗ್ಯಫಲಪ್ರದಾನೇ
ಸಮರ್ಥಮೇತದ್ಗಿರಿಶಾರ್ಚನಂ ಹಿ ।
ಇದಂ ಕಥಂ ಪುಣ್ಯಮಹಾಬ್ಧಿಪೂರ್ವೈ
ರ್ವಿನಾ ಭವಿಷ್ಯತ್ಯಪಿ ದುರ್ಲಭತ್ವಾತ್ ॥೧೬೬॥

---

ಪ್ರಯತ್ನಿಸುವನೋ ಅದನ್ನು ನಿಜವಾಗಿಯೂ ಯಾರೂ ತಿಳಿಯಲಾರರು. ಒಂದು ವೇಳೆ ತಿಳಿದರೆ ಅದೂ ಶಾಶ್ವತವಾದ ಪುಣ್ಯಕ್ಕೆ ಕಾರಣವಾಗುವುದು. ॥೧೬೩॥

ಧನ್ಯರೂ ಮತ್ತು ಕೃತಕೃತ್ಯರೂ ಆದ ಮಾನವರು ಆ ಶಿವನನ್ನು ಪೂಜಿಸಿ ತಮ್ಮ ಮಹಾಪಾತಕಗಳೆಂಬ ಬಂಧನದಿಂದ ಬಿಡುಗಡೆಹೊಂದಿ ಮುಕ್ತರಾಗುವರು. ಆ ಮಹೇಶ್ವರನ ಲಿಂಗಪೂಜೆಯ ಪುಣ್ಯಲೇಶದಿಂದಲೇ ಈ ಸಂಸಾರಬಂಧನವೂ ಸಹ ನಾಶವಾಗುವುದು. ॥೧೬೪॥

ಲೋಕದಲ್ಲಿ ಸಾವಿರಾರು ಧರ್ಮಗಳಿರುವುವು. ಆದರೆ ಅವುಗಳಿಂದ ಏನು ತಾನೇ ಪ್ರಯೋಜನ? ಶಂಕರನ ಪೂಜೆಯಿಂದ ಬರುವ ಪುಣ್ಯದಲ್ಲಿ ಅತ್ಯಲ್ಪಭಾಗ ಪುಣ್ಯವೂ ಬರುವುದಿಲ್ಲವೆಂದು ನನ್ನ ಬುದ್ಧಿಯು ಸ್ವಭಾವವಾಗಿಯೇ ಹೇಳುತ್ತಿರುವುದು. ಮತ್ತು ಅವುಗಳಿಂದ ಪುಣ್ಯವೇ ಬರುವುದಿಲ್ಲವೆಂದೂ ನನಗೆ ತೋರುವುದು. ॥೧೬೫॥

ಅಹೋ! ಈ ಶಿವಪೂಜೆಯು ಮಹಾಭಾಗ್ಯರೂಪವಾದ ಫಲಗಳನ್ನು ಕೊಡುವುದರಲ್ಲಿ ಸಮರ್ಥವೆನಿಸಿರುವುದು. ಇಂತಹ ಶಿವಪೂಜಾಸಕ್ತಿಯು ದುರ್ಲಭವಾದು

ಏತಲ್ಲಿಂಗವಿಲೋಕನೇನ ಬಹುಧಾ ನಷ್ಟೇಷು ಪಾಪೇಷ್ವಿಯಂ
ತಲ್ಲಿಂಗೇ ಬಹುಪುಣ್ಯರಾಶಿರಧುನಾ ಕ್ಷಿಪ್ತಸ್ತತಃ ಶಂಕರಃ ।
ಸಂತುಷ್ಟೋ ಗಿರಿಶಃ ಸ್ವಭಾವತ ಇತಿ ಜ್ಞೇಯಃ ಸಲಿಂಗಾರ್ಚನಾ
ತ್ಪ್ರೀತಸ್ಸ್ಯಾದಿತಿ ತಸ್ಯ ದಿವ್ಯಮಹಿಮಾ ಜ್ಞೇಯಂ ಕಥಂ ಮಾದೃಶೈಃ॥೧೬೭॥

ಅಸ್ಮಾಭಿರಪಿ ಪುಣ್ಯೇನ ದೃಷ್ಟಂ ಲಿಂಗಮಿದಂ ಶುಭಂ ।
ದಾಸ್ಯತ್ಯೇವ ನ ಸಂದೇಹಃ ಶುಭಲಿಂಗಮಿದಂ ಯತಃ ॥೧೬೮॥

ಶುಭಪ್ರದಾನೋದ್ಯತಮೇವ ಲಿಂಗಂ
ಶಾಂಗಂ ನ ತುಂಗಂ ಕಿಮಿದಂ ಪ್ರಕೃಷ್ಟಂ ।
ಸಮರ್ಜಿತಂ ದೃಷ್ಟಮಘೌಘನಾಶೋ
ವೃತಃ ಪರಂ ಕೌತುಕರಾಶಿಹೇತುಃ ॥೧೬೯॥

---

ದರಿಂದ ಪುಣ್ಯಗಳೆಂಬ ಮಹಾಸಮುದ್ರಗಳ ಪ್ರವಾಹದಿಂದ ಮಾತ್ರ ಇದು ಲಭಿಸುವುದೇ ವಿನಾ ಬೇರೆ ರೀತಿಯಿಂದ ದುರ್ಲಭವೇ ಸರಿ. ॥೧೬೬॥

ಇಲ್ಲಿರುವ ಶಿವಲಿಂಗಗಳನ್ನೆಲ್ಲಾ ಬಹಳವಾಗಿ ಈಕೆಯು ದರ್ಶನಮಾಡಿರುವುದರಿಂದ ಇವಳ ಪಾಪಗಳೆಲ್ಲಾ ನಾಶವಾಗಿ ಅನೇಕ ಪುಣ್ಯರಾಶಿಗಳುಂಟಾದುವು. ಆ ಪುಣ್ಯರಾಶಿಗಳಿಂದಲೇ ಇವಳು ಈಗ ಇಷ್ಟು ಭಕ್ತಿಯುತಳಾಗಿ ಆ ಶಂಕರನನ್ನು ಪೂಜಿಸಿರುವಳು. ಇದರಿಂದ ಗಿರಿಶನು ಸಂತುಷ್ಟನಾದನು. ಸ್ವಭಾವವಾಗಿಯೇ ಲಿಂಗಾರ್ಚನೆಯಿಂದ ಆ ಮಹಾದೇವನು ಪ್ರೀತಿಹೊಂದುವನೆಂಬುದು ತಿಳಿದಮೇಲೆ ಆ ಮಹೇಶನ ದಿವ್ಯಮಹಿಮೆಯನ್ನರಿಯಲು ನಮ್ಮಂತಹವರಿಂದ ಸಾಧ್ಯವಾದೀತೇ! ॥೧೬೭॥

ನಾವೂ ಕೂಡ ನಮ್ಮ ಪುಣ್ಯವಿಶೇಷದಿಂದ ಶುಭಕರವಾದ ಈ ಶಿವಲಿಂಗವನ್ನು ದರ್ಶನಮಾಡಿದೆವು. ಇದು ಶುಭಲಿಂಗವಾದುದರಿಂದ (ಶುಭಕರವಾದ ಲಿಂಗವಾಗಿರುವುದರಿಂದ) ನಮಗೂ ಮಂಗಳವನ್ನು ಕೊಟ್ಟೇ ಕೊಡುತ್ತದೆ. ಇದರಲ್ಲಿ ಸಂದೇಹವೇ ಇಲ್ಲ. ॥೧೬೮॥

ಶುಭವನ್ನುಂಟುಮಾಡುವುದಕ್ಕೋಸ್ಕರವೇ ಉದ್ಯುಕ್ತವಾಗಿರುವ ಶಿವನ ಉನ್ನತವಾದ ಈ ಲಿಂಗವು ಕೇವಲ ಶುಭವನ್ನುಂಟುಮಾಡಿದ ಮಾತ್ರಕ್ಕೆ ಇದರಲ್ಲಿ ಹೆಚ್ಚುಗಾರಿಕೆಯೇನು! ಸ್ವತಃ ಸಂಪಾದಿಸಿರುವುದೂ, ಮತ್ತು ನೋಡಿರುವುದೂ

ಅಚ್ಛೇದ್ಯಸಂಸಾರಮಹಾಘಪಾಶ
ವಿನಾಶಹೇತುಃ ಶಿವಲಿಂಗಪೂಜಾ ।
ದೃಷ್ಟ್ವಾ ಪ್ರಹೃಷ್ಟಂ ಚ ಮನೋ ನಿವೃತ್ತಃ
ಕಷ್ಟಾಂಬುರಾಶಿಃ ಸ ಚ ಪಾಪರಾಶಿಃ ॥೧೭೦॥

ಪ್ರೇರಿತಾಸ್ಸ್ಮಃ ಕಥಂ ವಾದ್ಯ ಮಹೇಶೇನ ಮಹಾತ್ಮನಾ ।
ಏತಲ್ಲಿಂಗಂ ದೃಷ್ಟಮೇವ ಪ್ರಕೃಷ್ಟಾಘವಿನಾಶಕಂ ॥೧೭೧॥

ಅಸ್ಮತ್ಪುಣ್ಯಮಹಾಂಬುಧಿಶ್ಚ ವವೃಧೇ ವಿಶ್ವೇಶ್ವರಾನುಗ್ರಹಾ
ಲ್ಲಿಂಗಂ ದೃಷ್ಟಮಿದಂ ವನೇಽಪಿ ವನಜೈರಭ್ಯರ್ಚಿತಂ ಪುಣ್ಯತಃ ।
ಏತಸ್ಮಾದಧಿಕೋ ನ ಲಾಭ ಇತಿ ಮೇ ತಾವತ್ಪ್ರವೃತ್ತಂ ಮನಃ
ಸಂಸಾರೇಽಪಿ ನ ವಾಧುನಾ ಭವತಿ ನೋ ಲಿಂಗಾರ್ಚನಾಲೋಕನಾತ್॥೧೭೨॥

---

ಆದ ಪಾಪಸಮೂಹಗಳನ್ನು ನಾಶಪಡಿಸುವುದರಲ್ಲಿ ಸಮರ್ಥವಾಗಿರುವುದು. ಇದು ತುಂಬಾ ಆಶ್ಚರ್ಯಹೇತುವೆನಿಸಿದೆ. ॥೧೬೯॥

ಕತ್ತರಿಸಲಸಾಧ್ಯವಾದ, ಸಂಸಾರಸಾಗರಸಂಬಂಧವಾದ ಮಹಾಪಾಪಗಳೆಂಬ ಪಾಶವನ್ನು ನಾಶಪಡಿಸಲು ಕಾರಣಭೂತವಾಗಿರುವ ಈ ಶಿವಲಿಂಗಪೂಜೆಯನ್ನು ನಾನು ನೋಡಿದೆನು. ಇದರಿಂದ ನನ್ನ ಮನಸ್ಸು ಸಂತೋಷ ಹೊಂದಿತಲ್ಲದೇ ನನ್ನ ಪಾಪಸಮೂಹರೂಪವಾದ ಕಷ್ಟವೆಂಬ ಸಮುದ್ರವೂ ಸಹ ನಾಶವಾಯಿತು. ॥೧೭೦॥

ಆ ಮಹೇಶ್ವರನಿಂದ ನಾವು ಹೇಗೆ ಇಲ್ಲಿಗೆ ಪ್ರೇರಿಸಲ್ಪಟ್ಟೆವೋ ತಿಳಿಯದು. ಆದರ ದೆಸೆಯಿಂದ ಉಚ್ಚತರಗತಿಯ ಪಾಪಗಳನ್ನೂ ನಾಶಮಾಡುವ ಈ ಶಿವಲಿಂಗದ ದರ್ಶನವು ನಮಗೆ ದೊರೆಯಿತು. ॥೧೭೧॥

ಆ ವಿಶ್ವೇಶ್ವರನ ಅನುಗ್ರಹದಿಂದ ನಮ್ಮ ಪುಣ್ಯವೆಂಬ ಮಹಾಸಮುದ್ರಗಳೂ ಅಭಿವೃದ್ಧಿಹೊಂದಿದುವು. ಪುಣ್ಯವಿಶೇಷದಿಂದ ಕಮಲಗಳಿಂದ ಪೂಜಿತವಾದ ಮತ್ತು ಉತ್ಕೃಷ್ಟವಾದ ಈ ಶಿವಲಿಂಗವೂ ದೃಷ್ಟಿವಿಷಯವಾಯಿತು. ಇದಕ್ಕಿಂತಲೂ ಹೆಚ್ಚಾದ ಲಾಭವು ಇಲ್ಲವೆಂದು ನನ್ನ ಮನಸ್ಸು ಈಗ ಶಿವಲಿಂಗ ದರ್ಶನದಲ್ಲಿ ಪ್ರವೃತ್ತವಾಗಿದೆ. ಸಂಸಾರದಲ್ಲಿಯೂ ಸಹ ಆ ಶಿವಲಿಂಗಪೂಜಾದರ್ಶನಕ್ಕಿಂತ ಉತ್ಕೃಷ್ಟವಾದ ಪುಣ್ಯವು ಮತ್ತೇನು ತಾನೆ ಇದ್ದೀತು? ॥೧೭೨॥

ನಾರೀಣಾಮಪಿ ಬುದ್ಧಿರದ್ಭುತತಮಾ ಲಿಂಗಾರ್ಚನಾಲೋಕನಾ
ದಸ್ತಾ ಪಾಮರತಾಪಿ ವಾನರಗುಣೋ ನಷ್ಟೋಽಪಿ ತುಷ್ಟಃ ಶಿವಃ ।
ತತ್ಕಷ್ಟಂ ವಿಲಯಂ ಗತಂ ಕಿಮಧುನಾ ಲಿಂಗಂ ವನೇ ದೃಶ್ಯತೇ
ಕರ್ಪೂರಾಗರುಚಂದನಾದಿವಿಲಸದ್ಗಂಧಾನ್ವಿತಂ ಶರ್ಮದಂ ॥೧೭೩॥

ಅಸ್ಮಾಭಿಃ ಶಿವಲಿಂಗಮೂರ್ತಿರಧುನಾ ವಿಶ್ವೇಶ್ವರೋ ದೃಶ್ಯತೇ
ಕಾಶೀಪ್ರಾಪ್ತಿರನೇನ ತಾವದಧುನಾ ಸಂಭಾವಿತಾ ಸರ್ವಥಾ ।
ವೀರೇಶೋ ನವಬಿಲ್ವಪಲ್ಲವಯುತೈರ್ಗಂಗಾಜಲೈರರ್ಚಿತ
ಸ್ತತ್ಪುಣ್ಯೇನ ಕಿಲೇದೃಶಂ ಶಿವಮಹಾಧಿಷ್ಠಾನಮಾಲೋಕಿತಂ ॥೧೭೪॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಶಿವಪೂಜಾವಿಘ್ನಕಾರಿಣಾಂ ಪಾತಕಪ್ರಾಪ್ತಿವರ್ಣನಂ
ನಾಮ ದ್ವಾತ್ರಿಂಶೋಽಧ್ಯಾಯಃ

---

ಸ್ತ್ರೀಯರ ಬುದ್ಧಿಯೂ ಸಹ ಅತ್ಯದ್ಭುತವಾದದ್ದೆಂದೇ ಹೇಳಬೇಕು. ಆ ಶಿವಲಿಂಗದ ದರ್ಶನದ ದೆಸೆಯಿಂದ ಅಜ್ಞಾನವೆಲ್ಲಾ ನಾಶವಾಗಿ ಕಪಿಗೆ ಸಮಾನವಾಗಿದ್ದ ಚೇಷ್ಟಾರೂಪವಾದ ಗುಣಗಳೆಲ್ಲಾ ಅಡಗಿಹೋದವು. ಅಲ್ಲದೇ ಆ ಶಿವನು ಭಕ್ತಿಯಿಂದ ಸ್ತೋತ್ರಮಾಡಲ್ಪಟ್ಟನು. ಅವಳ ಕಷ್ಟವೆಲ್ಲವೂ ನಾಶವಾಯಿತು. ಈಗಲೂ ಕರ್ಪೂರ, ಅಗರು, ಚಂದನ, ಗಂಧ ಮುಂತಾದ ಸಾಮಗ್ರಿಗಳಿಂದ ಪ್ರಕಾಶಿಸು ತ್ತಿರುವ ಸುಖಕರವಾದ ಈ ಶಿವಲಿಂಗವು ಕಾಡಿನಲ್ಲಿ ವಿರಾಜಿಸುತ್ತಿದೆ. ॥೧೭೩॥

ನಾವೂ ಆ ಶಿವಲಿಂಗಮೂರ್ತಿಸ್ವರೂಪನಾದ ವಿಶ್ವೇಶ್ವರನನ್ನು ಈಗ ನೋಡು ತ್ತಿರುವೆವು. ಸಾಮಾನ್ಯವಾಗಿ ಈ ವ್ಯಕ್ತಿಯು ಕಾಶಿಗೆ ಹೋಗಿ ಅಲ್ಲಿ ಆ ವೀರೇಶ್ವರ ನನ್ನು ನೂತನವಾದ ಬಿಲ್ವದಳಗಳಿಂದಲೂ ಪರಿಶುದ್ಧವಾದ ಆ ಗಂಗಾಜಲದಿಂದಲೂ ಪೂಜಿಸಿರಬೇಕು. ಆ ಪುಣ್ಯವಿಶೇಷದಿಂದಲೇ ಈರೀತಿಯಾದ ಮಹಾದೇವನ ಆಶ್ರಯವು ಈಕೆಗೂ ನಮ್ಮ ಕಣ್ಣಿಗೂ ಗೋಚರವಾಯಿತು ಎಂದು ಶಿವಗಣಗಳೆಲ್ಲರೂ ಚಾರಣಸ್ತ್ರೀಯನ್ನು ಹೊಗಳುತ್ತಾ ಹೀಗೆ ಹೇಳಿಕೊಂಡರು. ॥೧೭೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ
ಶಿವಪೂಜೆಗೆ ವಿಘ್ನವನ್ನುಮಾಡುವವರಿಗೆಉಂಟಾಗುವ ಪಾಪವರ್ಣನೆಯೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಓಂ ನಮಶ್ಶಿವಾಯ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ತ್ರಯಸ್ತ್ರಿಂಶೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತೇ ತಾವದುಕ್ತ್ವಾಪಿ ಗಣಾಸ್ತ್ರಿದಶಸಂಯುತಾಃ ।
ಅತಃ ಪರಂ ವಿಧೇಯಂ ವಾ ಕಿಮತ್ರೇತ್ಯತಿವಿಸ್ಮಿತಾಃ ||೧||

ಅಸ್ಮದ್ವಾಕ್ಯಾಚ್ಚ ಸಂಬದ್ಧಾನಸ್ಮಾನೇವ ಚಕಾರ ಸಾ ।
ಅತಃ ಪರಂ ಕಿಮಸ್ಮಾಭಿಃ ಕರ್ತವ್ಯಂ ತನ್ನ ವಿದ್ಮಹೇ ||೨||

ಕಥಂ ವಾ ಶಂಕರಾಜ್ಞಾಯಾಃ ಕರ್ತವ್ಯಂ ಪರಿಪಾಲನಂ ।
ಏತಾಂ ನೇತುಂ ವಯಂ ತಾವದಶಕ್ತಾಃ ಕುಂಠಿತಾ ಗತಿಃ ||೩||

---

## ಮೂವತ್ತುಮೂರನೆಯ ಅಧ್ಯಾಯ

ಪುನಃ ಯಾಜ್ಞವಲ್ಕ್ಯರು ಜನಕಮಹಾರಾಜನಿಗೆ ಹೀಗೆ ಉಪದೇಶಿಸಿದರು. ದೇವತೆಗಳೊಡಗೂಡಿರುವ ಆ ಶಿವಗಣಗಳು ಹೀಗೆ ನುಡಿದು ಮುಂದೆ ಏನು ಮಾಡಬೇಕೆಂಬ ವಿಷಯದಲ್ಲಿ ಏನೂ ತೋರದೆ ಎಲ್ಲರೂ ಸ್ತಬ್ಧರಾಗಿ ನಿಂತುಬಿಟ್ಟರು. ||೧||

ಈ ಚಾರಣಸ್ತ್ರೀಯು ನಮ್ಮ ಮಾತುಗಳಿಂದ ನಮ್ಮನ್ನು ತಪ್ಪಿತಸ್ಥರನ್ನಾಗಿಯೂ ಬಂಧನಯುಕ್ತರನ್ನಾಗಿಯೂ ಮಾಡಿದಳು. ಇನ್ನುಮುಂದೆ ನಾವು ಏನು ಮಾಡಬೇಕೆಂಬುದೇ ತೋರದಂತಾಗಿರುವುದು. ||೨||

ಇವಳನ್ನು ಕರೆದುಕೊಂಡು ಹೋಗಲು ನಾವು ಈಗ ಅಸಮರ್ಥರಾಗಿರುವೆವು. ನಮ್ಮ ಗತಿಯೆಲ್ಲಾ ಸಡಲಿಹೋಗಿದೆ. ಆ ಶಂಕರನ ಅಪ್ಪಣೆಯನ್ನು ನಾವು ಹೇಗೆ ತಾನೆ ಪರಿಪಾಲನೆ ಮಾಡೋಣ ! ಒಂದೂ ತೋರುವುದಿಲ್ಲವಲ್ಲಾ ! ||೩||

ಕದಾಪ್ಯಕುಂಠಿತಾ ಶಕ್ತಿಃ ಕಥಮದ್ಯಾತಿಕುಂಠಿತಾ ।
ಕಿಮುತ್ತರಂ ಪರಂ ದೇಯಮುಮಾಕಾಂತಾಯ ಸತ್ವರಂ ॥೪॥

ಕಥಂ ನಾಕೃತಕಾರ್ಯಾಣಾಮವಜ್ಞಾ ಪ್ರಭುಸನ್ನಿಧೌ ।
ಸಾ ಸೋಢವ್ಯಾ ಕಥಂ ತತ್ರ ನಂದಿಕೇಶ್ವರಸನ್ನಿಧೌ ॥೫॥

ಶಿವಾಜ್ಞೋಲ್ಲಂಘನಾದೇವ ಪಾಪಂ ತಾವದುಪಾಗತಂ ।
ತದುಲ್ಲಂಘನಮಾತ್ರೇಣ ಶಂಕರಃ ಕುಪಿತೋ ಭವೇತ್ ॥೬॥

ಕುಪಿತೇ ಶಂಕರೇ ತಸ್ಯ ಕೋಪಜ್ವಾಲಾಕುಲಂ ಜಗತ್ ।
ಕ್ಷಣಾದ್ದಗ್ಧಂ ಭವತ್ಯೇವ ಕಿಂ ಕರ್ತವ್ಯಮತಃ ಪರಂ ॥೭॥

ಅತ್ಯುಗ್ರಶಾಸನಃ ಶಂಭೋ ಯಸ್ಮಾದುಗ್ರ ಇತಿ ಸ್ಮೃತಃ ।
ಉಗ್ರೋಗ್ರಭಾಲಜ್ವಲನಜ್ವಾಲಾಮಾಲಾಕುಲಂ ಜಗತ್ ॥೮॥

---

ಎಂದೂ ಅಡಗದೇ ಇದ್ದ ನಮ್ಮ ಶಕ್ತಿಯು ಈದಿನವೇಕೆ ಕುಂಠಿತವಾಯಿತೋ ತಿಳಿಯದು. ಆ ಉಮಾರಮಣನ ಸಮೀಪಕ್ಕೆ ಹೋಗಿ ನಾವು ಜಾಗ್ರತೆ ಏನು ತ್ತರವನ್ನು ಕೊಡಬೇಕು! ॥೪॥

ಸ್ವಾಮಿಯ ಸನ್ನಿಧಾನದಲ್ಲಿ ಹೇಳಿದ ಕೆಲಸವನ್ನು ಮಾಡದ ದೂತರಿಗೆ ಹೇಗೆ ತಾನೇ ತಿರಸ್ಕಾರವಲ್ಲದೆ ಪುರಸ್ಕಾರವಿದ್ದೀತು? ಅದರಲ್ಲಿಯೂ ಆ ನಂದಿಕೇಶ್ವರನ ಸನ್ನಿಧಾನದಲ್ಲಿ ಆ ತಿರಸ್ಕಾರವನ್ನು ಸಹಿಸುವುದು ತಾನೆ ಹೇಗೆ? ॥೫॥

ಶಿವನ ಆಜ್ಞೆಯನ್ನು ತಿರಸ್ಕರಿಸಿದ ಮಾತ್ರದಿಂದಲೇ ಮಹಾಪಾಪವುಂಟಾಯಿತು. ಅಲ್ಲದೆ ಈಗ ಈ ಕೆಲಸವನ್ನು ಮಾಡದೆ ಅದನ್ನೂ ಉಲ್ಲಂಘನೆಮಾಡಿದರೆ ನಿಜವಾಗಿಯೂ ಶಂಕರನು ಕೋಪಿಸಿಕೊಳ್ಳುವನು. ॥೬॥

ಶಂಕರನು ಕೋಪಗೊಂಡರೆ ಅವನ ಕೋಪವೆಂಬ ಅಗ್ನಿಯ ಜ್ವಾಲೆಯಿಂದ ವ್ಯಾಪ್ತವಾದ ಈ ಜಗತ್ತು ಒಂದೇ ಕ್ಷಣದಲ್ಲಿ ಭಸ್ಮವಾಗುವುದು. ಇನ್ನು ಮುಂದೆ ನಾವು ಮಾಡುವುದೇನು? ॥೭॥

ಸುಖಸ್ವರೂಪನಾದ ಆ ಮಹೇಶನು ಅತ್ಯಂತ ಉಗ್ರವಾದ ಶಾಸನವುಳ್ಳವನಾದ್ದರಿಂದ ಅವನಿಗೆ ಉಗ್ರನೆಂಬ ಹೆಸರುಂಟಾಗಿದೆ. ಅವನು ಕುಪಿತನಾದರೆ ಅವನ ಫಾಲನೇತ್ರದ ಅಗ್ನಿಜ್ವಾಲೆಗಳ ಸಮೂಹದಿಂದ ಈ ಪ್ರಪಂಚವೆಲ್ಲಾ ದಗ್ಧವಾಗುತ್ತದೆ. ॥೮॥

ಕೋಽಪಿ ತತ್ಕೋಪಜಜ್ವಾಲಾಶಾಮಕೋ ನಾಸ್ತ್ಯತಃ ಪರಂ ।
ಕಿಂ ಕರ್ತವ್ಯಂ ಕ್ವ ಗಂತವ್ಯಂ ಗಮನೇ ವಾ ಕುತಃ ಸುಖಂ ॥೯॥

ನ ಶರಣ್ಯೋಽಸ್ತಿ ಲೋಕೇಷು ಕುಪಿತೇ ಶ್ರೀಮಹೇಶ್ವರೇ ।
ತತ್ಕೋಪಾನಲಸಂದಗ್ಧಂ ಬ್ರಹ್ಮಾಂಡಮಖಿಲಂ ಪುರಾ ॥೧೦॥

ಬ್ರಹ್ಮಾಂಡಮಂಡಲಂ ದಗ್ಧ್ವಾ ಲೀಲಯಾ ಸ ಮಹೇಶ್ವರಃ ।
ಕ್ರೀಡಾಂ ಕರೋತಿ ಶಿವಯಾ ಕೈಲಾಸಮಣಿಮಂಟಪೇ ॥೧೧॥

ನಾಯಾತಿ ಸಹಸಾ ಕೋಪಃ ಶಂಕರಸ್ಯ ಕೃಪಾಂಬುಧೇಃ ।
ಆಯಾತಿ ಚೇತ್ಸ ಕೋಪಃ ಸ್ಯಾದ್ಬ್ರಹ್ಮಾಂಡದಹನಕ್ಷಮಃ ॥೧೨॥

ದಗ್ಧಾನ್ಯನೇಕಧಾ ತಾನಿ ಬ್ರಹ್ಮಾಂಡಾನ್ಯಮಿತಾನ್ಯಪಿ ॥೧೩॥

---

ಆ ಶಂಕರನ ಕೋಪಜ್ವಾಲೆಯನ್ನು ಶಾಂತಿಗೊಳಿಸುವ ಸಮರ್ಥನಾದರೂ ಇರುವನೇ ಆದ್ದರಿಂದ ಏನು ಮಾಡುವುದು. ಎಲ್ಲಿಗೆ ಹೋಗುವುದು ? ಹೋದರೂ ಅಲ್ಲಿಯೂ ಸುಖವೆಲ್ಲಿಯದು? ॥೯॥

ಮಹೇಶ್ವರನು ಕುಪಿತನಾದರೆ ಮೂರುಲೋಕಗಳಲ್ಲಿಯೂ ಯಾರೂ ನಮಗೆ ರಕ್ಷಕರಿಲ್ಲ. ಹಿಂದೆ ಒಂದು ಬಾರಿ ಆ ಮಹಾದೇವನ ಕೋಪಾಗ್ನಿಯಿಂದ ಸಕಲ ಬ್ರಹ್ಮಾಂಡವೂ ಭಸ್ಮವಾಗಿ ಹೋಗಿದ್ದಿತು. ॥೧೦॥

ಮಹೇಶ್ವರನು ಈ ಬ್ರಹ್ಮಾಂಡ ಮಂಡಲವನ್ನೆಲ್ಲಾ ಸುಟ್ಟು ಪಾರ್ವತಿ ಯೊಡನೆ, ಕೈಲಾಸಪರ್ವತದ ರತ್ನಮಂಟಪದಲ್ಲಿ ಲೀಲೆಯಿಂದ ವಿಹರಿಸಲು ಆರಂಭಿ ಸುವನು. ॥೧೧॥

ದಯಾಸಾಗರನಾದ ಆ ಶಂಕರನಿಗೆ ಜಾಗ್ರತೆ ಕೋಪವು ಬರುವುದೇ ಇಲ್ಲ. ಒಂದುವೇಳೆ ಬಂದದ್ದೇ ಆದರೆ ಆ ಕೋಪವು ಈ ಬ್ರಹ್ಮಾಂಡವನ್ನೇ ಸುಡುವಷ್ಟು ಸಾಮರ್ಥ್ಯವುಳ್ಳದ್ದು. ॥೧೨॥

ಆ ಮಹಾದೇವನು ಅನೇಕ ಸಲ ಅಪರಿಮಿತವಾದ ಈ ಬ್ರಹ್ಮಾಂಡಗಳನ್ನೆಲ್ಲಾ ಸುಟ್ಟು ಧ್ವಂಸಮಾಡಿರುವನು. ॥೧೩॥

ಅಪಾರನಾರಾಯಣನಾಶಕೋಽಯ
ಮಪಾರವಾಣೀಪತಿನಾಶಕೋಽಯಂ ।
ಅಪಾರಚಂದ್ರೇಂದ್ರವಿನಾಶಕೋಽಯಂ
ಮೃತ್ಯುಂಜಯೋ ಮೃತ್ಯುವಿನಾಶಕೋಽಯಂ ॥೧೪॥

ಕಲ್ಯಾಣರೂಪೋಽಯಮುಮಾಸಹಾಯಃ
ಕಲ್ಯಾಣದಾತಾ ಕರುಣಾಕರೋಽಯಂ ।
ಯದ್ಯದ್ಯ ದೈವಾತ್ಕುಪಿತಸ್ತದಾನೀಂ
ನ ಕೋಽಪಿ ಸಂರಕ್ಷಕ ಇತ್ಯವೈಮಿ ॥೧೫॥

ನಾರಾಯಣಾದ್ಯಮರಕೋಟಿವಿನಾಶಕೋಽಭೂ
ದ್ಯತ್ಕೋಪಜಾನಲಕಣೋಽಪಿ ಸ ದೇವದೇವಃ ।
ಅಸ್ಮಾಕಮದ್ಯ ಸುಮುಖಃ ಸ ಭವೇತ್ಕಥಂ ವಾ
ಸ್ವೋತ್ಸೃಷ್ಟಕಾರ್ಯವಿಲಯೇ ಸತಿ ಚಂದ್ರಚೂಡಃ ॥೧೬॥

---

ಮೃತ್ಯುಂಜಯನೆನಿಸಿದ ಪರಶಿವನು ಅನೇಕ ಮಂದಿ ನಾರಾಯಣರನ್ನೂ, ಅನೇಕ ಬ್ರಹ್ಮರು, ಚಂದ್ರರು, ದೇವೇಂದ್ರರು, ಮತ್ತು ಸಾಕ್ಷಾನ್ಮೃತ್ಯುದೇವತೆ, ಇವರುಗಳನ್ನೂ ನಾಶಪಡಿಸಿರುವನು. ॥೧೪॥

ಮಂಗಳಸ್ವರೂಪನೂ, ಕರುಣಾಸಮುದ್ರನೂ, ಮತ್ತು ಕಲ್ಯಾಣಪ್ರದನೂ ಆಗಿರುವ ಈ ಉಮಾರಮಣನು ಏನಾದರೂ ಅದೃಷ್ಟವಶದಿಂದ ಕೋಪಗೊಂಡರೆ ಆಗ ಯಾರೂ (ಅವನಿಂದ) ರಕ್ಷಣೆಮಾಡಲಾರರು. ॥೧೫॥

ಆ ಮಹಾದೇವನ ಕೋಪದಿಂದ ಹುಟ್ಟಿದ ಅಗ್ನಿಯ ಒಂದೇ ಒಂದು ಕಣವು ನಾರಾಯಣನೆ ಮುಂತಾದ ಕೋಟ್ಯಂತರ ದೇವತೆಗಳನ್ನೆಲ್ಲಾ ನಾಶಮಾಡುವುದರಲ್ಲಿ ಸಮರ್ಥವಾಗಿರುವುದರಿಂದ, ದೇವದೇವನೂ, ಚಂದ್ರಶೇಖರನೂ ಆದ ಆ ಪರಶಿವನು ತಾನು ಅಪ್ಪಣೆಮಾಡಿದ ಕಾರ್ಯವು ನಡೆಯದೆ ಇರುವಾಗ ಈಗ ನಮಗೆ ಹೇಗೆ ತಾನೇ ಪ್ರಸನ್ನನಾದಾನು ? ॥೧೬॥

ಅಸ್ಮಾಕಂ ದುರದೃಷ್ಟಮೇತದಧುನಾ ಜಾತಂ ಕಿಮೇಷಾ ಮಯಾ
ಗಂತುಂ ಸತ್ವರಮೇವ ಹಸ್ತನಿಹತಾ ಸಾಪ್ಯುತ್ಥಿತಾ ಕೋಪತಃ ।
ತತ್ಕೋಪಾದಪಿ ಪಾಪಮುರ್ಜಿತಮಿದಂ ತತ್ತುಂಗಲಿಂಗಾರ್ಚನಂ
ಸ್ವಪ್ನೇ ಕರ್ತುಮಿಹೋದ್ಯತಾ ಪುನರಪಿ ಕ್ರುದ್ಧಾ ನಿರುದ್ಧಾ ನ ಸಾ ॥೧೭॥

ತತಃಪರಂ ಪುನಃ ಸ್ವಪ್ನೇ ಸಾ ದದರ್ಶ ಶಿವಾರ್ಚಕಂ ।
ತಮಾಹ ಸಾ ಶಿವರತಂ ಪ್ರಣಮ್ಯ ವಿನಯಾನ್ವಿತಾ ॥೧೮॥

ಸ್ವಾಮಿನ್ನದ್ಯಾಧುನಾ ದೃಷ್ಟಂ ಸ್ವಪ್ನೇ ಶಂಕರಮಂದಿರಂ ।
ತತ್ರ ಲಿಂಗಂ ಮಯಾ ದೃಷ್ಟಂ ಪೂಜಿತಂ ತದನಂತರಂ ॥೧೯॥

ಮಯಾಪಿ ಪೂಜಿತಂ ಲಿಂಗಂ ಪುಷ್ಪಾದ್ಯೈಶ್ಚ ಮನೋಹರೈಃ ।
ನರ್ತನಂ ಚ ಕೃತಂ ತತ್ರ ಶಿವಲಿಂಗಾಂಗಣೇ ಮಯಾ ॥೨೦॥

---

ನಮ್ಮದು ಎಂತಹ ದುರದೃಷ್ಟವು. ನಾವು ಇವಳನ್ನು ಜಾಗ್ರತೆಯಾಗಿ ಕರೆದುಕೊಂಡು ಹೋಗೋಣವೆಂದು ಶಬ್ದಮಾಡಿದುದರಿಂದ ಇವಳು ಕೋಪದಿಂದ ಎದ್ದುಬಿಟ್ಟಳು. ಅಲ್ಲದೆ ಸ್ವಪ್ನದಲ್ಲಿ ತನ್ನ ಲಿಂಗಪೂಜೆಗೆ ವಿಘ್ನವನ್ನುಂಟುಮಾಡಿದಿರೆಂದು ನಮ್ಮನ್ನು ಕೋಪದಿಂದ ಗದರಿಸಿದಳು. ಇದರಿಂದ ಬೇರೆ ಪಾಪಸಂಘಟನೆಯಾದಂತಾಯಿತು. ಪುನಃ ತಾನು ಹಿಂದೆ ಸ್ವಪ್ನದಲ್ಲಿ ಮಾಡಲು ಸಿದ್ಧಪಡಿಸಿದ ಶಿವಪೂಜೆಯನ್ನು ಮಾಡುವುದಕ್ಕೋಸ್ಕರ ಕೋಪದಿಂದ ಮಲಗಿ, ಮತ್ತೆ ನಮ್ಮನ್ನೆಲ್ಲಾ ತಡೆದಿರುವಳು. ಇಂದೆಂತಹ ಕಷ್ಟಕ್ಕೆ ಸಿಕ್ಕಿದೆವು ಎಂದು ಯೋಚಿಸುತ್ತಿದ್ದರು. ॥೧೭॥

ಹಾಗೆ ಪುನಃ ಮಲಗಿದ ಆ ಚಾರಣಾಂಗನೆಯು ಸ್ವಪ್ನದಲ್ಲಿ ಅದೇ ಶಿವಪೂಜಾನಿರತನಾದ ಶೈವಶ್ರೇಷ್ಠನನ್ನು ನೋಡಿ ಅವನಿಗೆ ನಮಸ್ಕಾರ ಮಾಡಿದ ನಂತರ ವಿನಯಯುಕ್ತಳಾಗಿ ಅವನನ್ನು ಕುರಿತು ಇಂತೆಂದಳು. ॥೧೮॥

"ಸ್ವಾಮಿ! ಈಗ ನಾನು ನನ್ನ ಸ್ವಪ್ನದಲ್ಲಿ ಶಂಕರನ ಮಂದಿರವನ್ನೂ ಮತ್ತು ಅದರಲ್ಲಿರುವ ಶಿವಲಿಂಗವನ್ನೂ ನೋಡಿ ಭಕ್ತಿಪುರಸ್ಸರವಾಗಿ ಪೂಜೆಮಾಡಿದ್ದೆನು. ಆ ಲಿಂಗದರ್ಶನದಿಂದ ಸಂತುಷ್ಟಳಾದೆನು. ॥೧೯॥

ನಾನೂ ಸಹ ಆ ದಿವ್ಯಲಿಂಗಕ್ಕೆ ಮನೋಹರವಾದ ಪುಷ್ಪವೇ ಮೊದಲಾದ ಪೂಜಾಸಾಮಗ್ರಿಗಳಿಂದ ಪೂಜೆಮಾಡಿ, ಆ ಶಿವಲಿಂಗವಿರುವ ಅಂಗಳದಲ್ಲಿ ನರ್ತನವನ್ನೂ ಮಾಡಿದೆನು. ॥೨೦॥

ತದಾನೀಂ ಯುವತೀ ಕಾಪಿ ದೃಷ್ಟ್ವಾ ನರ್ತನಲಾಲಸಾ ।
ಸಖೀಸಮೂಹಸಂಯುಕ್ತಾ ನಾನಾಭರಣಭೂಷಿತಾ ॥೨೧॥

ತದಾನೀಮಾಗತಸ್ತತ್ರ ತದ್ಭರ್ತಾ ಮದನಾತುರಃ ।
ತಾಮಾಹ ಯುವತೀಂ ಸೋಽಪಿ ಧೃತ್ವಾ ಉತ್ತರಮಾದರಾತ್ ॥೨೨॥

ಏಹಿ ಭದ್ರೇ ಗೃಹಂ ರಮ್ಯೇ ನಾನಾಪುಷ್ಪವಿರಾಜಿತೇ ।
ವಿಲಾಸಸದನೇ ಸ್ಥಿತ್ವಾ ರಾತ್ರಿರ್ನೇಯಾ ಯಥಾಸುಖಂ ॥೨೩॥

ಇತಿ ತದ್ವಚನಂ ಶ್ರುತ್ವಾ ರಮಣೀ ರಮಣಂ ಪ್ರತಿ ।
ಯಾಹಿ ಯಾಹೀತ್ಯುದಾಸೀನವಚನೈರಾಹ ಸತ್ವರಂ ॥೨೪॥

ಉದಾಸೀನವಚಃ ಶ್ರುತ್ವಾ ಸ ಯುವಾ ಮದನಾತುರಃ ।
ಬಲಾದಾರೋಪ್ಯ ಗೌರ್ಯಾನೇ ಯಯೌ ಸ್ವನಗರಂ ಪ್ರತಿ ॥೨೫॥

---

ಆ ಸಮಯದಲ್ಲಿ ಅನೇಕ ಸಖಿಯರೊಡನೆ, ದಿವ್ಯಾಭರಣಭೂಷಿತಳಾಗಿರುವ ಒಬ್ಬ ಯುವತಿಯು ನರ್ತನಾಭಿಲಾಷೆಯಿಂದ ಬಂದಿರುವುದನ್ನು ನೋಡಿದೆನು. ॥೨೧॥

ಅದೇ ಸಮಯದಲ್ಲಿಯೇ ಅಲ್ಲಿಗೆ ಮದನಾತುರನಾದ ಆ ಯುವತಿಯ ಪತಿಯು ಬಂದು ಅವಳ ಉತ್ತರೀಯವನ್ನು ಹಿಡಿದುಕೊಂಡು ಆದರದಿಂದ ಹೀಗೆಂದನು.॥೨೨॥

ಎಲೌ ಪ್ರೇಯಸಿಯೇ, ಏಳು! ಮನೆಗೆ ಹೋಗೋಣ, ನಾನಾಪುಷ್ಪಗಳಿಂದ ಶೋಭಿಸುತ್ತಿರುವ ಮನೋಹರವಾದ ನಮ್ಮ ವಿಲಾಸಗೃಹದಲ್ಲಿ ಸುಖವಾಗಿ ಕಾಲ ಕಳೆಯುತ್ತಾ ವಿಹಾರ ಮಾಡೋಣ, ಎಂದನು. ॥೨೩॥

ಆ ರಮಣಿಯು ಆ ಮಾತನ್ನು ಕೇಳಿ, ತನ್ನ ರಮಣನನ್ನು ಕುರಿತು, "ಎಲೈ ಪತಿಯೇ, ಹೊರಡು, ಜಾಗ್ರತೆ ಇಲ್ಲಿಂದ ಹೊರಡುವನಾಗು" ಎಂಬುದಾಗಿ ಉದಾಸೀನವಾದ ಮಾತುಗಳಿಂದ ಉತ್ತರಕೊಟ್ಟಳು. ॥೨೪॥

ಹಾಗೆ ನಿಷ್ಠುರವಾಗಿ ನುಡಿದ ತನ್ನ ಪ್ರಿಯೆಯ ಮಾತುಗಳನ್ನು ಕೇಳಿ ಮನ್ಮಥಪರವಶನಾಗಿರುವ ಆ ಯುವಕನು ಅವಳನ್ನು ಬಲಾತ್ಕಾರದಿಂದ ತನ್ನ ಎತ್ತಿನ ರಥದ ಮೇಲೆ ಕೂರಿಸಿಕೊಂಡು ತನ್ನ ಪಟ್ಟಣದ ಕಡೆಗೆ ಹೊರಟನು. ॥೨೫॥

ತತಸ್ತನ್ನಗರೇ ದೃಷ್ಟಂ ತಯಾ ಶಂಕರಮಂದಿರಂ ।
ತತಸ್ತಮಾಹ ಸಾ ಬಾಲಾ ಭರ್ತಾರಂ ಮದನಾತುರಂ ॥೨೬॥

ದೃಷ್ಟ್ವೇ ಶಿವಾಲಯೇ ತತ್ರ ಕರ್ತವ್ಯಂ ಲಿಂಗಪೂಜನಂ ।
ಇದಂ ವ್ರತಂ ಮಯಾ ಬಾಲ್ಯೇ ಸ್ವೀಕೃತಂ ಗುರ್ವನುಜ್ಞಯಾ ॥೨೭॥

ಏತದ್ವ್ರತಪರಿತ್ಯಾಗೇ ಪ್ರಾಣಹಾನಿರ್ಭವಿಷ್ಯತಿ ।
ಮರ್ತವ್ಯಂ ವಾ ಮಯಾ ತತ್ರ ನ ತ್ಯಾಜ್ಯಂ ಲಿಂಗಪೂಜನಂ ॥೨೮॥

ಪ್ರಾಣಪ್ರಯಾಣಸಮಯೇ ಪ್ರಾಪ್ತೇಽಪಿ ಶಿವಪೂಜನಂ ।
ನ ತ್ಯಾಜ್ಯಮಿತಿ ಮೇ ಭಕ್ತಿರ್ಜಾತಾ ಬಾಲ್ಯಾವಧಿ ಪ್ರಿಯ ॥೨೯॥

ತದ್ವಿಘ್ನಾಚರಣೋದ್ಯೋಗಸ್ತ್ವಯಾ ಯದಿ ಕೃತಸ್ತದಾ ।
ತವಾಪಿ ನರಕಾವಾಸೋ ಭವಿಷ್ಯತಿ ನ ಸಂಶಯಃ ॥೩೦॥

---

ಹೀಗೆ ಪ್ರಯಾಣ ಹೊರಟು ನಗರವನ್ನು ಸೇರಿದೊಡನೆ ತಮ್ಮ ಊರಿನಲ್ಲಿಯೇ ಇರುವ ಶಿವಮಂದಿರವು ಆ ತರುಣಿಯ ಕಣ್ಣಿಗೆ ಗೋಚರವಾಯಿತು. ಆಗ ಅವಳು ಮದನಾತುರನಾಗಿರುವ ತನ್ನ ಪತಿಯನ್ನು ಕುರಿತು ಹೀಗೆ ಹೇಳಿದಳು. ॥೨೬॥

" ಶಿವಾಲಯವನ್ನು ನೋಡಿದಕೂಡಲೇ ಆ ಶಿವಮಂದಿರದೊಳಗಿರುವ ಶಿವಲಿಂಗ ಪೂಜೆಯನ್ನು ಮಾಡಬೇಕೆಂದು ನಮ್ಮ ಗುರುಗಳು ಉಪದೇಶಮಾಡಿರುವರು. ಆ ವ್ರತವನ್ನು ಪಡೆದು ಅದನ್ನು ಬಾಲ್ಯದಿಂದಲೂ ನಡೆಸಿಕೊಂಡುಬಂದಿರುವೆನು. ॥೨೭॥

ಈ ವ್ರತವನ್ನೇನಾದರೂ ಬಿಟ್ಟರೆ ಪ್ರಾಣಕ್ಕೇ ಹಾನಿಯುಂಟಾಗುವುದು. ನನ್ನ ಪ್ರಾಣವೇ ಹೋದರೂ ಚಿಂತೆಯಿಲ್ಲ. ಶಿವಲಿಂಗಪೂಜೆಯನ್ನು ಮಾತ್ರ ಎಂದಿಗೂ ಬಿಡಲಾರೆನು. ॥೨೮॥

ಎಲೈ ಪ್ರಾಣಪ್ರಿಯನೇ, ಪ್ರಾಣವು ಹೋಗುವ ಸಮಯ ಬಂದಾಗಲೂ ಶಿವಪೂಜೆಯನ್ನು ಬಿಡಬಾರದೆಂಬ ಭಕ್ತಿಯು ನನಗೆ ಬಾಲ್ಯದಿಂದಲೂ ದೃಢವಾಗಿ ಉಂಟಾಗಿರುವುದು. ॥೨೯॥

ನೀನು ಈ ಶಿವಪೂಜೆಗೇನಾದರೂ ವಿಘ್ನವನ್ನುಂಟುಮಾಡಲು ಪ್ರಯತ್ನಿಸುವುದಾದರೆ ನಿನಗೆ ನರಕವಾಸವು ಪ್ರಾಪ್ತವಾಗುವುದು. ಇದರಲ್ಲಿ ಸಂಶಯವೇ ಇಲ್ಲ. ॥೩೦॥

ಶಿವಲಿಂಗಾರ್ಚನೇ ಭಕ್ತಿರ್ನ ಭಾಗ್ಯೇನ ವಿನಾ ತತಃ ।
ಉತ್ಪನ್ನಾಪಿ ಶಿವೇ ಭಕ್ತಿರ್ವಿಘ್ನಿತಾ ದುರದೃಷ್ಟತಃ ॥೩೧॥

ಸಂಸಾರರೂಪವಿಘ್ನೋ ಯಃ ಸ ತಾವದನುವರ್ತತೇ ।
ತತ್ರಾಪಿ ವಿಘ್ನೋ ಮಧ್ಯೇಽಯಂ ಭರ್ತೃರೂಪಃ ಸಮಾಗತಃ ॥೩೨॥

ಕಾಲಭೇದಪರಿಜ್ಞಾನಂ ನ ತೇ ಮದನವಿಹ್ವಲಃ ।
ಶಿವಾರ್ಚನಸ್ಯ ಕಾಲೋಽಯಮಸ್ತಂ ಯಾತಿ ದಿವಾಕರಃ ॥೩೩॥

ಧಿಗ್ಧಿಗ್ಯೌವನಮೇತತ್ತೇ ಧಿಗಿಚ್ಛಾ ಯುವತೀಜನೇ ।
ಗಚ್ಛ ಗಚ್ಛ ದುರಾಚಾರ ಮಂದಿರಂ ಪ್ರತಿ ಸತ್ವರಂ ॥೩೪॥

ಬಲಾನ್ಮಾಂ ನೇತುಮಧುನಾ ಯದಿಚ್ಛಸಿ ತದಾ ವದ ।
ಹಾನಿಃ ಸಂಭಾವಿತೋ ದಗ್ಧೋ ರಥೋಽಪ್ಯಾಶು ಭವಿಷ್ಯತಿ ॥೩೫॥

---

ಸಂಪೂರ್ಣವಾದ ಭಾಗ್ಯವಿಲ್ಲದೇ ಆ ಶಿವಲಿಂಗಪೂಜೆಯಲ್ಲಿ ಭಕ್ತಿಯುಂಟಾಗುವುದಿಲ್ಲ. ಶಿವನಲ್ಲಿ ಭಕ್ತಿಯು ಹುಟ್ಟಿದರೂ ಸಹ ನನ್ನ ದುರದೃಷ್ಟವಶದಿಂದ ಅದಕ್ಕೆ ಈಗ ವಿಘ್ನವುಂಟಾಗುತ್ತಿದೆ. ॥೩೧॥

ಶಿವಾರ್ಚನೆಗೆ ಸಂಸಾರಸ್ವರೂಪವಾದ ವಿಘ್ನವೇ ಹಿಂಬಾಲಿಸಿ ಬರುತ್ತಿದೆ. ಅದರಲ್ಲಿಯೂ ಈಗ ಈ ಭರ್ತೃರೂಪವಾದ (ಗಂಡನೆಂಬ) ವಿಘ್ನವೇ ಇದಕ್ಕೆ ಪ್ರಬಲವಾದ ಅಡ್ಡಿಯಾಗಿದೆ. (ಅಂದರೆ ಸಾಕ್ಷಾತ್ಪತಿಯೇ ಈ ಶಿವಪೂಜೆಗೆ ವಿಘ್ನವನ್ನುಂಟುಮಾಡುತ್ತಿದ್ದಾನೆ.) ॥೩೨॥

ಮನ್ಮಥವಿಕಾರದಿಂದ ಕಾತರನಾಗಿರುವ ನಿನಗೆ ಕಾಲಭೇದದ ಪರಿಜ್ಞಾನವೇ ಇಲ್ಲವಾಗಿದೆ. ಶಿವಪೂಜೆಯನ್ನು ಮಾಡಲು ಅತ್ಯುತ್ತಮವಾದ ಪ್ರದೋಷಕಾಲವು ಮೀರಿಹೋಗುತ್ತಿದೆ. ಸೂರ್ಯನೂ ಸಹ ಮುಳುಗುತ್ತಿರುವನು. ॥೩೩॥

ನಿನ್ನ ಈ ಕೊಬ್ಬಿದ ಯೌವ್ವನಕ್ಕೂ ಯುವತಿಯಲ್ಲಿರುವ ಪ್ರೇಮಾಭಿಲಾಷೆಗೂ ಸಹ ಧಿಕ್ಕಾರವಿರಲಿ; ಎಲೈ ದುರಾಚಾರನೇ, ಜಾಗ್ರತೆಯಾಗಿ ಮನೆಗೆ ಹೊರಡು. ॥೩೪॥

ಬಲಾತ್ಕಾರದಿಂದಲೇನಾದರೂ ನನ್ನನ್ನು ಇಲ್ಲಿಂದ ಕರೆದೊಯ್ಯಲು ಅಪೇಕ್ಷಿಸುವುದಾದರೆ, ಆಗ ನಿನಗೆ ಹಾನಿತಟ್ಟುವುದು. ಅಥವಾ ರಥವು ಭಸ್ಮವಾಗುವುದು. ಈ ಎರಡಲ್ಲಿ ಯಾವುದಾದರೂ ಒಂದು ಕೂಡಲೇ ಸಂಭವಿಸುವುದು. ॥೩೫॥

ಯದಿ ತೇ ಮನ್ಮಥಾವೇಶಸ್ತದಾ ತಾಂ ಗಾರ್ದಭೀಂ ಮೃತಾಂ ।
ಅನುಯಾಹಿ ರತಿಂ ತತ್ರ ಕುರು ತಾವದ್ಯಥೇಚ್ಛಯಾ ॥೩೬॥

ಸಂಸಾರವಿರತಾಂ ನಾರೀಂ ಮೃತಾಮಿವ ವಿಲೋಕಯ ।
ಸುರತಾರ್ಥೇ ಯತಸ್ತಸ್ಯಾಃ ಸುರತೇ ನ ಮತಿ ರ್ಗತಾ ॥೩೭॥

ಮೂಢಾಸ್ತತ್ವಂ ನ ಜಾನಂತಿ ವಿರತಿಶ್ಚ ನ ಜಾಯತೇ ।
ಶಂಕರಾನುಗ್ರಹಾಭಾವಾನ್ಮಹಾದೇವಪರಾಙ್ಮುಖಃ ॥೩೮॥

ಶಂಕರಾನುಗ್ರಹೇ ವೃತ್ತೇ ಸಂಸಾರಾದ್ವಿರತಿರ್ಭವೇತ್ ।
ತದಭಾವೇ ರತಿಸ್ತತ್ರ ಕಲ್ಪಾಂತೇಽಪಿ ನ ಶಾಮ್ಯತಿ ॥೩೯॥

---

ನಿನಗೆ ಅಂತಹ ಪ್ರಬಲವಾದ ಮದನಾವೇಶವಿದ್ದರೆ, ಇಗೋ ಅಲ್ಲಿ ಸತ್ತು ಬಿದ್ದಿರುವ ಹೆಣ್ಣು ಕತ್ತೆಯ ಸಮೀಪಕ್ಕೆ ಹೋಗಿ ಅದರೊಡನೆ ನಿನಗೆ ಮನಸ್ಸು ತೋರಿದಂತೆ ರತಿಕ್ರೀಡೆಯಾಡು. ॥೩೬॥

ಈ ಸಂಸಾರದಲ್ಲಿ ವಿರಕ್ತಿಹೊಂದಿರುವ ಸ್ತ್ರೀಯನ್ನು ಮೃತಳಾಗಿರುವಳೆಂಬ ಭಾವನೆಯಿಂದಲೇ ನೋಡು. ಅವಳಿಗೆ ಈ ಸುರತಕ್ರೀಡೆಯಲ್ಲಿಯೂ ಮತ್ತು ಅದರಿಂದುಂಟಾಗುವ ಸುಖಾಭಿಲಾಷೆಯಲ್ಲಿಯೂ ಯಾವ ರೀತಿಯಾದ ಬುದ್ಧಿಯೂ ಇರುವುದಿಲ್ಲ. ॥೩೭॥

ಆ ಮಹಾದೇವನಲ್ಲಿ ವಿಪರೀತವಾದ ಭಾವನೆಯುಳ್ಳವರಿಗೆ ಅಥವಾ ಪೂಜ್ಯ ಭಾವನೆಯಿಲ್ಲದೇ ಇರುವವವರಿಗೆ, ಆ ಶಂಕರನ ಅನುಗ್ರಹವಿಲ್ಲದೇ ಇರುವುದರಿಂದ ಅಂತಹ ಮೂಢರಿಗೆ ಈಶ್ವರ ತತ್ವವು ತಿಳಿಯದು. ಆದರಿಂದಲೇ ಅವರಿಗೆ ವಿರಕ್ತಿ ಯುಂಟಾಗುವುದಿಲ್ಲ. ॥೩೮॥

ಆ ಶಂಕರನ ಅನುಗ್ರಹವುಂಟಾದರೆ ಮಾತ್ರ ಈ ಸಂಸಾರದಲ್ಲಿ ವಿರಕ್ತಿ ಯೊದಗುವುದು. ಇಲ್ಲದಿದ್ದರೆ ಕಲ್ಪದ ಕೊನೆಯುವರೆಗೂ ಈ ಭೋಗರತಿಯು ಶಾಂತವಾಗುವುದೇ ಇಲ್ಲ" ಎಂದು ನುಡಿದಳು. ॥೩೯॥

ವಾರ್ತಾಭಿರಲಮೇವಾಲಂ ಸಾಯಂಕಾಲಃ ಪ್ರಜಾಯತೇ ।
ಇತಿ ತದ್ವಚನಂ ಶ್ರುತ್ವಾ ಸೂತಂ ಯಾಹೀತ್ಯುವಾಚ ಸಃ ॥೪೦॥

ತತಃ ಸ ತಾಡಯಾಮಾಸ ಹುಂಕಾರೈಃ ಕಶಯಾ ವೃಷಾನ್ ।
ತೇ ಸ ಪ್ರಚಲಿತಾ ಏವ ಬಹುಧಾ ತಾಡಿತಾ ಅಪಿ ॥೪೧॥

ರಥೋ ವಿಭಗ್ನಃ ಸ ತದಾ ತದ್ಭರ್ತಾ ವ್ಯಾಕುಲಸ್ತದಾ ।
ತತಃ ಪ್ರವಿಷ್ಟಾ ತ್ವರಯಾ ಸಾ ಬಾಲಾ ಶಿವಮಂದಿರಂ ॥೪೨॥

ಯುವತೀಂ ಚಲಿತಾಂ ದೃಷ್ಟ್ವಾಪ್ಯನುಗಂತುಂ ಸ ಚೋದ್ಯತಃ ।
ದಂಡರುದ್ಧ ಇವಾತೀವ ಕ್ರುದ್ಧೋಽಭೂತ್ಪ್ರತಿಬಂಧಿತಃ ॥೪೩॥

---

ಅವಳ ಮಾತನ್ನು ಕೇಳಿ, ಈ ಮಾತುಗಳೆಲ್ಲಾ ಹಾಗಿರಲಿ, ಸಾಯಂಕಾಲ ವಾಗುತ್ತ ಬಂದಿತು. ಜಾಗ್ರತೆಯಾಗಿ ಮನೆಗೆ ತಲಪಬೇಕು, ಎಂದು ಹೇಳಿ. ಆ ಯುವಕನು ತನ್ನ ಸೂತನಿಗೆ (ಗಾಡಿಯನ್ನು ಹೊಡೆಯುವವನಿಗೆ) ಜಾಗ್ರತೆಯಾಗಿ ಬಂಡಿಯನ್ನು ಸಾಗಿಸು ಎಂದು ಹೇಳಿದನು. ॥೪೦॥

ತನ್ನ ಸ್ವಾಮಿಯ ಮಾತನ್ನು ಕೇಳಿ ಆ ಸೂತನು ಹುಂಕಾರಮಾಡುತ್ತಾ ಬಂಡಿಯ ಎತ್ತುಗಳನ್ನು ಚಾವಟಿಯಿಂದ ಬಹಳವಾಗಿ ಹೊಡೆದನು. ಆ ಎತ್ತುಗಳೂ ಆ ಏಟುಗಳು ಬಹಳ ತೀಕ್ಷ್ಣತೆಯಿಂದ ಕೂಡಿದ್ದರೂ ಸಹ ಅವು ಮುಂದುವರಿಯಲೇ ಇಲ್ಲ. ॥೪೧॥

ಹಾಗೆಯೇ ಜೋರಾಗಿ ಹೋಗಬೇಕಿದ್ದ ರಥವು ಒಡನೆಯೇ ಮುರಿದು ಚೂರಾ ಯಿತು. ಆಗ ಅವಳ ಪತಿಯು ಬಹಳ ವ್ಯಾಕುಲಕ್ಕೊಳಗಾದನು. ಇದೇ ಸಮಯ ದಲ್ಲಿ ಈ ಬಾಲಿಕೆಯು (ಯುವಕನ ಪತ್ನಿಯು) ಜಾಗ್ರತೆ ಅಲ್ಲಿಂದ ಹೊರಟು ಶಿವಾಲ ಯಕ್ಕೆ ಪ್ರವೇಶಿಸಿದಳು. ॥೪೨॥

ಓಡಿಹೋಗುತ್ತಿದ್ದ ತನ್ನ ಯುವತಿಯನ್ನು ಹಿಂಬಾಲಿಸಲು ಪ್ರಯತ್ನಿಸಿದ ಆ ಯುವಕನು, ಕೋಲುಗಳಿಂದ ಮುಂದೆ ಬರದಂತೆ ತಡೆಯಲ್ಪಟ್ಟವನಂತೆ, ಮುಂದಕ್ಕೆ ಹೋಗದವನಾದನು. ಆದರಿಂದ ಅವನಿಗೆ ಕೋಪವು ಮಿತಿಮೀರಿತು. ॥೪೩॥

ತತಃ ಸಾ ಸರಸಿ ಸ್ನಾತ್ವಾ ಶಿವಾಲಯಗತಾ ಮುದಾ ।
ಉದ್ಧೂಲ್ಯ ಭಸ್ಮನಾಂಗಾನಿ ಧೃತರುದ್ರಾಕ್ಷಭೂಷಣಾ ॥೪೪॥

ದುಕೂಲವಸನಾ ದಿವ್ಯೈರ್ಹಾರೈರೇವ ಮಹೇಶ್ವರಂ ।
ಪೂಜಯಾಮಾಸ ಸಾ ಭಕ್ತ್ಯಾ ಭಸ್ಮನಾ ಚ ಯಥಾವಿಧಿ ॥೪೫॥

ತತಃ ಸಸ್ಮಾರ ಸಾ ಬಾಲಾ ಪೂಜಾದ್ರವ್ಯಮನುತ್ತಮಂ ।
ತದಾಽಪ್ರಾಪ್ಯಾತಿದುಃಖೇನ ಪ್ರಾಹ ವಾಚಂ ಮನೋರಮಾಂ ॥೪೬॥

ಅಹೋ ಗೌರೀಪತೇ ಶಂಭೋ ಪೂಜಾಸಾಧನಮುತ್ತಮಂ ।
ನ ಪ್ರಾಪ್ತಮೀದೃಶಂ ಭಾಗ್ಯಂ ದುರ್ಭಗಾಯಾಃ ಕಥಂ ಪ್ರಭೋ॥೪೭॥

ಕ್ಷೀರೈರಪಾರೈರ್ಘೃತಸಂಯುತೈಸ್ತೈ
ರ್ಲಿಂಗಂ ನ ಸಿಕ್ತಂ ಮಧುನಾ ಚ ದಧ್ನಾ ।

---

ಹೀಗಾದ ಮೇಲೆ ಆ ಬಾಲಿಕೆಯು ಸರೋವರದಲ್ಲಿ ಶುಚಿಯಾಗಿ ಸ್ನಾನ ಮಾಡಿ, ಸಂತೋಷದಿಂದ ಆ ಶಿವಾಲಯಕ್ಕೆ ಬಂದು, ಅಲ್ಲಿ ಭಸ್ಮದಿಂದ ತನ್ನ ಅವಯವಗಳನ್ನೆಲ್ಲಾ ಅಲಂಕರಿಸಿಕೊಂಡು ಕೊರಳಲ್ಲಿ ರುದ್ರಾಕ್ಷಮಾಲಿಕೆಯನ್ನು ಹಾಕಿಕೊಂಡಳು. ||೪೪||

ದಿವ್ಯವಾದ ರೇಷ್ಮೆಬಟ್ಟೆಯನ್ನುಟ್ಟು, ಸುಂದರವಾದ ಹಾರಗಳಿಂದಲೂ ಮತ್ತು ಭಸ್ಮದಿಂದಲೂ ಭಕ್ತಿಪುರಸ್ಸರವಾಗಿ ಆ ಮಹೇಶ್ವರನನ್ನು ಕ್ರಮವಾಗಿ ಪೂಜೆ ಮಾಡಿದಳು. ||೪೫||

ಅನಂತರ ಆ ಬಾಲಿಕೆಯು ಶ್ರೇಷ್ಠವಾದ ಶಿವಪೂಜಾಸಾಮಗ್ರಿಗಳನ್ನು ಮನಸಾ ಜ್ಞಾಪಿಸಿಕೊಂಡಳು. ಆದರೆ ಆಗ ಅದು ದೊರೆಯದೇ ಹೋದದ್ದರಿಂದ ಅತ್ಯಂತ ದುಃಖಿತೆಯಾಗಿ ಮುಂದೆ ಹೇಳುವಂತೆ ಮನೋಹರವಾದ ಮಾತುಗಳನ್ನಾಡಿದಳು. ||೪೬||

ಶಂಭೋ! ಗೌರೀರಮಣ! ನಿನ್ನನ್ನು ಪೂಜೆಮಾಡೋಣವೆಂದರೆ ಉತ್ತಮವಾದ ಪೂಜಾಸಾಮಗ್ರಿಗಳೇ ಈಗ ದೊರೆಯಲಿಲ್ಲವಲ್ಲ! ಪ್ರಭೋ, ನಿರ್ಭಾಗ್ಯಳಾದ ನನಗೆ ಅಂತಹ ಭಾಗ್ಯವು ಹೇಗೆತಾನೇ ಬಂದೀತು ? ||೪೭||

ಅಪಾರವಾದ ತುಪ್ಪದಿಂದ ಬೆರೆದ ಹಾಲು, ಜೇನುತುಪ್ಪ ಮತ್ತು ಮೊಸರು ಇವುಗಳಿಂದ ಈ ನಿನ್ನ ಲಿಂಗಕ್ಕೆ ಅಭಿಷೇಕಮಾಡಲಿಲ್ಲವಲ್ಲ! ಪರ್ವತಕ್ಕೆ ಸಮವಾಗಿ

ನ ಶರ್ಕರಾಪರ್ವತರಾಶಿನೀರೈ
ರಿಹಾಭಿಷಿಕ್ತಂ ತವ ಲಿಂಗಮದ್ಯ ॥೪೮॥

ಪುಷ್ಪೈರನೇಕೈರ್ಘೃತಸಾರಯುಕ್ತೈಃ
ಪಾಟೀರಸಾರೈರಪಿ ನಾರ್ಚನಂ ತೇ ।
ಲಿಂಗಂ ನ ಧೂಪೋದ್ಭವಧೂಮಸಂಕ್ರಾತ್ಯೈ
ಕರ್ಪೂರದೀಪೈಃ ಪ್ರಭಯಾಪಿ ಶಂಭೋ ॥೪೯॥

ದೂರ್ವಾಂಕುರೈರ್ವಾ ನ ಸಮರ್ಚಿತಂ ತೇ
ಲಿಂಗಂ ನ ಬಿಲ್ವೈರಪಿ ಪೂಜಿತಂ ಚ ।
ಅತಃ ಪರಂ ಹಾರಸಮರ್ಪಣೇನ
ಪ್ರೀತೋ ಭವಾದ್ಯಾಖು ಕೃಪಾನಿಧಾನ ॥೫೦॥

ನಾನೋಪಹಾರೈರ್ಮಧುರೈಶ್ಚ ಪಕ್ವೈಃ
ಫಲೈಶ್ಚ ನಾಭ್ಯರ್ಚಿತಮೇವ ಲಿಂಗಂ ।

---

ರುವಷ್ಟು ಸಕ್ಕರೆಯನ್ನು ಈ ಶಿವಲಿಂಗಕ್ಕೆ ಸಮರ್ಪಿಸದೇ ಕೇವಲ ನೀರಿನಿಂದ ಮಾತ್ರ ಈ ನಿನ್ನ ಲಿಂಗವನ್ನು ಅಭಿಷೇಕಮಾಡಬೇಕಾಗಿ ಬಂತಲ್ಲ! ನಾನೆಂತಹ ಭಾಗ್ಯಹೀನಳು. ॥೪೮॥

ನಾನಾವಿಧವಾದ ಹೂಗಳು, ತುಪ್ಪದ ಸಾರದಿಂದ ಯುಕ್ತವಾದ ವಸ್ತುಗಳು ಚಂದನಗಂಧ ಮುಂತಾದವುಗಳು, ಇವುಗಳಿಂದಲೂ ನಿನ್ನನ್ನು ಪೂಜೆಮಾಡಲಿಲ್ಲ ವಲ್ಲಾ! ನಿನ್ನ ಈ ಲಿಂಗಕ್ಕೆ ದಿವ್ಯವಾದ ಧೂಪಗಳನ್ನು ಹೊತ್ತಿಸಿ ಅದರ ಹೊಗೆಯ ಸಮೂಹದಿಂದಲೂ ಕರ್ಪೂರದೀಪಗಳ ಕಾಂತಿಯಿಂದಲೂ ಸೇವೆಮಾಡದಂತಾಯಿ ತಲ್ಲಾ! ಶಂಭೋ, ಎಂತಹ ನಿರ್ಭಾಗ್ಯವತಿಯು ನಾನು. ॥೪೯॥

ಎಳೆಯ ಗರಿಕೆಗಳಿಂದಲಾಗಲೀ, ಬಿಲ್ವಪತ್ರೆಗಳಿಂದಲಾಗಲೀ ಈ ನಿನ್ನ ಲಿಂಗವನ್ನು ಪೂಜಿಸುವ ಭಾಗ್ಯವು ನನಗೆ ಇಲ್ಲದೇ ಹೋಯಿತಲ್ಲಾ. ಓ ಕೃಪಾ ಸಮುದ್ರನೇ, ಇನ್ನು ಮುಂದೆ ಈ ಹಾರ(ಆತ್ಮ)ಸಮರ್ಪಣೆಯಿಂದಲೇ ತೃಪ್ತನಾಗು! ಸ್ವಾಮಿ. ॥೫೦॥

ನಾನಾ ವಿಧವಾದ ಉಪಹಾರಗಳು, ಮಧುರವೂ, ಪಕ್ವವೂ ಆದ ದಿವ್ಯ ಫಲ ಗಳು, ಇವುಗಳಿಂದ ಉನ್ನತವಾದ ಈ ನಿನ್ನ ಲಿಂಗವನ್ನು ಪೂಜೆಮಾಡಲಿಲ್ಲವಲ್ಲಾ!

ತುಂಗಂ ತವೇದಂ ಭವಭಂಗಹೇತುಃ
ಸಂಸಾರಭಂಗಃ ಕಥಮದ್ಯ ವಾ ಸ್ಯಾತ್ ॥೫೧॥

ಸಂಸಾರಭಂಗಾಯ ಶಿವಾರ್ಚನಾನಿ
ಕುರ್ವಂತಿ ಸಂತಃ ಸತತಂ ಮಹೇಶ ।
ದದಾತಿ ಮುಕ್ತಿಂ ಸ ತತಃ ಕೃಪಾಬ್ಧಿಃ
ಸ ತ್ವಂ ಮಹಾಮೋಹವಿನಾಶಕೋಽಪಿ ॥೫೨॥

ಮೋಹೇನ ಸಂಸಾರರತಿಸ್ತತಃ ಸ್ಯಾತ್ತ
ತಶ್ಚ ಭೂಯೋ ನರಕಾದಿಭೋಗಃ ।
ತತಶ್ಚ ತನ್ನಾಶಯ ಮೋಹಮಾದೌ
ಮೋಹಾಂಧಕಾರಾರ್ಕಸಹಸ್ರಮೂರ್ತೇ ॥೫೩॥

ಆರ್ತಿರ್ನಾಶಮುಪೈತಿ ಶಂಕರಕೃಪಯಾ ಲಿಂಗಾರ್ಚನೇ ಸತತಂ
ಲಿಂಗಾರಾಧನಮೇವ ತಾವದಧುನಾ ಕರ್ತವ್ಯಮಿತ್ಯೇವ ಧೀಃ ।

---

ಹೀಗಿರುವಾಗ ಸಾಂಸಾರಿಕ ಭಯವನ್ನು ನಾಶಮಾಡಲು ಕಾರಣವಾದ ಈ ನಿನ್ನ ಲಿಂಗವು ಹೇಗೆ ತಾನೇ ನನಗೆ ಈಗ ಸಂಸಾರ ವಿಷಯಕವಾದ ಬಂಧನವನ್ನು ಹೋಗಲಾಡಿಸೀತು? ॥೫೧॥

ಮಹೇಶ್ವರನೇ, ಸತ್ಪುರುಷರು ಈ ಸಂಸಾರ ಬಂಧನವನ್ನು ಕಳೆದುಕೊಳ್ಳುವುದಕ್ಕೋಸ್ಕರವೇ ಯಾವಾಗಲೂ ಶಿವಪೂಜೆಯನ್ನು ಮಾಡುತ್ತಾರೆ. ಆ ಪೂಜೆಯಿಂದ ಸಂತುಷ್ಟನಾದ ಮತ್ತು ಕೃಪಾಸಮುದ್ರನೆನಿಸಿದ ನೀನು ಅವರಿಗೆ ಅಜ್ಞಾನವನ್ನು ನಾಶಮಾಡಿ ಶಾಶ್ವತವಾದ ಮೋಕ್ಷವನ್ನು ಕರುಣಿಸುವೆ. ॥೫೨॥

ಅಜ್ಞಾನದ ದೆಸೆಯಿಂದ ಮಾನವರಿಗೆ ಈ ಸಂಸಾರ ವಿಷಯಕವಾದ ಅಭಿಲಾಷೆಯೂ, ಅದರಿಂದ ನರಕವೇ ಮುಂತಾದವುಗಳಲ್ಲಿ ವಾಸಿಸಿ ದುಃಖಪಡುವುದೂ ತಪ್ಪಲಾರದು. ಆದುದರಿಂದ, ಅಜ್ಞಾನವೆಂಬ ಅಂಧಕಾರವನ್ನು ತೊಲಗಿಸುವುದರಲ್ಲಿ ಸಹಸ್ರಕಿರಣನಾದ ಸೂರ್ಯನಂತಿರುವ ಮಹಾದೇವನೇ! ಮೊದಲು ನನಗಿರುವ ಈ ಅಜ್ಞಾನವನ್ನು ಹೋಗಲಾಡಿಸು. ॥೫೩॥

ಯಾವಾಗಲೂ ಲಿಂಗಾರ್ಚನೆಮಾಡುವುದರಿಂದ ಆ ಸುಖಸ್ವರೂಪನಾದ ಶಂಕರನ ಅನುಗ್ರಹವುಂಟಾಗಿ ದುಃಖಗಳೆಲ್ಲವೂ ನಾಶವಾಗುವುವು. ಆದುದರಿಂದ ಆ

ಜಾತಾ ಸಾ ಕೃಪಯಾ ತವೈವ ಬಹುಧಾ ವೃದ್ಧಿಂ ಪ್ರಯಾತಿ ಪ್ರಭೋ
ತದ್ವೃದ್ಧ್ಯಾ ಪರಮಿಂದುಶೇಖರ ನ ಸಂಸಾರೇ ರತಿರ್ಜಾಯತೇ ||೫೪||

ಇತಿ ಸ್ತುತ್ವಾ ಮಹಾದೇವಂ ಪ್ರಣತಾಪಿ ಪುನಃ ಪುನಃ ।
ನ ಸಂತುಷ್ಟಾ ಶಿವಾರ್ಚಾಯಾಮಪ್ರಾಪ್ತೇ ಸಾಧನೇ ಸತಿ ||೫೫||

ತದಾನೀಮಾಗತಃ ಕೋಽಪಿ ಕಿಂನರಃ ಶಂಕರಾರ್ಚಕಃ ।
ಶಿವಾರ್ಚನಸ್ಯ ಸಾಮಗ್ರೀಂ ಗೃಹೀತ್ವಾ ವಿವಿಧಾಮಪಿ ||೫೬||

ತಮುದ್ಧೂಲಿತಸರ್ವಾಂಗಂ ರುದ್ರಾಕ್ಷಾಭರಣಾನ್ವಿತಂ ।
ತಮಾಗತಂ ಸಮಾಲೋಕ್ಯ ಹೃಷ್ಟಾ ಶಾಂಭವದರ್ಶನಾತ್ ||೫೭||

ತತಸ್ತತ್ರ ಸಮಾಗತ್ಯ ಲಿಂಗಪೂಜಾಂ ಚಕಾರ ಸಃ ।
ಪಂಚಾಮೃತಾದ್ಯೈರುತ್ಕೃಷ್ಟೈಶ್ಚಂದನೈಃ ಕುಸುಮೈರಪಿ ||೫೮||

---

ಶಿವಲಿಂಗಪೂಜೆಯನ್ನೇ ಮಾಡಬೇಕೆಂಬ ಬುದ್ಧಿಯು ಈಗ ನನಗುಂಟಾಗಿದೆ. ಆ ಬುದ್ಧಿಯೂ ಸಹ ನಿನ್ನ ದಯೆಯಿಂದಲೇ ಮುಂದೆ ಬಹಳವಾಗಿ ಅಭಿವೃದ್ಧಿ ಹೊಂದ ಬೇಕಾಗಿದೆ. ಪ್ರಭೋ, ಚಂದ್ರಶೇಖರನೆನಿಸಿದ ಸ್ವಾಮಿಯೇ, ಆ ಭಕ್ತಿಯು ಹೀಗೆಯೇ ಅಭಿವೃದ್ಧಿ ಹೊಂದುವುದರಿಂದ ಮುಂದೆ ಈ ಸಂಸಾರದಲ್ಲಿ ಆಸಕ್ತಿಯೇ ನನಗೆ ಹುಟ್ಟುವುದಿಲ್ಲ. ||೫೪||

ಈ ರೀತಿ ಮಹಾದೇವನಿಗೆ ಪದೇ ಪದೇ ನಮುಸ್ಕರಿಸಿ ಸ್ತೋತ್ರಮಾಡಿ ದರೂ, ಶಿವಪೂಜೆಗೆ ಬೇಕಾದ ಸಾಧನಗಳೊಂದೂ ಒದಗದೇ ಹೋದುದರಿಂದ ಆ ಬಾಲಿಕೆಯು ಸಂತುಷ್ಟಳಾಗಲಿಲ್ಲ. ||೫೫||

ಅದೇ ಸಮಯಕ್ಕೆ ಸರಿಯಾಗಿ, ಶಿವಪೂಜಕನಾದ ಒಬ್ಬ ಕಿಂನರನು ನಾನಾ ವಿಧವಾದ ಶಿವಪೂಜಾಸಾಮಗ್ರಿಗಳನ್ನು ಹಿಡಿದುಕೊಂಡು ಅಲ್ಲಿಗೆ ಬಂದನು. ||೫೬||

ಸರ್ವಾವಯವಗಳಿಗೂ ವಿಭೂತಿಯನ್ನು ಧರಿಸಿ, ರುದ್ರಾಕ್ಷಮಾಲಾರೂಪವಾದ ಆಭರಣಗಳಿಂದಲಂಕೃತನಾಗಿ ಬಂದಿರುವ ಆ ಮಾಹೇಶ್ವರನ ದರ್ಶನದಿಂದ ಆ ಬಾಲಿ ಕೆಯು ತುಂಬಾ ಸಂತೋಷ ಹೊಂದಿದಳು. ||೫೭||

ಅಲ್ಲಿಗೆ ಬಂದ ನಂತರ ಆ ಕಿನ್ನರನು ಉತ್ಕೃಷ್ಟವಾದ ಪಂಚಾಮೃತವೇ ಮುಂತಾದ ವಸ್ತುಗಳಿಂದಲೂ, ಚಂದನ, ಹೂವು ಮುಂತಾದ ಸಾಮಗ್ರಿಗಳಿಂದಲೂ ಸಹ ಆ ಶಿವಲಿಂಗವನ್ನು ಭಕ್ತಿಯಿಂದ ಪೂಜೆಮಾಡಿದನು. ||೫೮||

ಉಪಹಾರಾದಿಕೈಃ ಸಮ್ಯಕ್ಪೂಜಯಿತ್ವಾ ಮಹೇಶ್ವರಂ ।
ನನರ್ತ ನಾಟ್ಯನಿಪುಣಃ ಶಿವಲಿಂಗಾಂಗಣೇ ಸ್ಥಿತಃ ॥೫೯॥

ತತಃ ಪರಂ ಗಾನಲೋಲೋ ಗಾನೈಃ ಪ್ರೀತಂ ಮಹೇಶ್ವರಂ ।
ಚಕಾರ ಗಾನವಿದ್ಯಾಯಾಸ್ತದರ್ಥಾಭ್ಯಸನಾದಪಿ ॥೬೦॥

ತತಃ ಪರಂ ತಮಾಲೋಕ್ಯ ಬಾಲಾ ಪೂಜಿತಶಂಕರಂ ।
ಏತಾದೃಶಂ ಕಥಂ ಭಾಗ್ಯಮಿತಿ ಚಿಂತಾಸಮಾಕುಲಾ ॥೬೧॥

ತದಾನೀಂ ವ್ಯಾಕುಲಾಂ ಬಾಲಾಂ ಸ ದೃಷ್ಟ್ವಾ ಕಿನ್ನರಸ್ತತಃ ।
ತಾಮಾಹ ವಿನಯೇನೈವ ಕಿಮಂಬಾ ವ್ಯಾಕುಲೇತ್ಯಪಿ ॥೬೨॥

ಖಿನ್ನಾಸಿ ಕಿಮಿಹಾಂಬ ತ್ವಂ ಸರ್ವಖೇದಹರೋ ಹರಃ ।
ನಾರಾಧಿತಃ ಕಿಂ ಖೇದಸ್ಯ ವಾರ್ತಾಮಪಿ ಪರಿತ್ಯಜ ॥೬೩॥

---

ಬಗೆಬಗೆಯಾದ ಉಪಹಾರಸಾಮಗ್ರಿಗಳಿಂದ, ಆ ಮಹೇಶ್ವರನನ್ನು ಭಕ್ತಿಪುರಸ್ಸರವಾಗಿ ಪೂಜಿಸಿ, ಅನಂತರ ನಾಟ್ಯನಿಪುಣನಾದ ಆ ಕಿಂನರನು ಆ ಶಿವಲಿಂಗವಿದ್ದ ಅಂಗಳದಲ್ಲಿ ನರ್ತನವನ್ನೂ ಮಾಡಿದನು. ॥೫೯॥

ಅನಂತರ, ಕೇವಲ ಶಿವಪೂಜೆಗೋಸ್ಕರವಾಗಿಯೇ ಅಭ್ಯಾಸಮಾಡಿದ್ದ ಸಂಗೀತ ವಿದ್ಯೆಯಿಂದ ಗಾನಲೋಲನಾದ ಆ ಕಿಂನರನು ಇಂಪಾದ ತನ್ನ ಗಾನಗಳಿಂದ ಮಹೇಶ್ವರನಿಗೆ ಪ್ರೀತಿಯುಂಟಾಗುವಂತೆ ನರ್ತನಮಾಡಿದನು. ॥೬೦॥

ಕಿಂನರನು ಈರೀತಿಯಾಗಿ ಶಂಕರನನ್ನು ವಿಧಿಪ್ರಕಾರವಾಗಿ ಪೂಜಿಸಿದನಂತರ, ಶಂಕರನನ್ನು ನೋಡಿ ಆ ಬಾಲಿಕೆಯು ಇಂತಹ ಭಾಗ್ಯವು ನನಗೆ ಎಲ್ಲಿ ಬಂದೀತೆಂದು ಚಿಂತೆಗೊಳಗಾದಳು. ॥೬೧॥

ಆಗ, ಹೀಗೆ ವ್ಯಾಕುಲಚಿತ್ತಳಾಗಿರುವ ಈ ಬಾಲಿಕೆಯನ್ನು ನೋಡಿ, ಕಿಂನರನು, ಅಮ್ಮಾ; ಇದೇಕೇ ವ್ಯಾಕುಲಳಾಗಿರುವೆ ? ಎಂದು ವಿನಯದಿಂದ ಪ್ರಶ್ನೆ ಮಾಡಿದನು. ॥೬೨॥

ತಾಯೇ ! ನೀನು, ಏಕೆ ಖಿನ್ನಳಾಗಿರುವೆ ? ಆ ಪರಮೇಶ್ವರನು ಸಕಲ ದುಃಖಗಳನ್ನೂ ನಾಶಮಾಡುವನು. ಏನು ! ಶಿವನನ್ನು ನೀನು ಪೂಜೆಮಾಡಲಿಲ್ಲವೆ ? ಈಗ ದುಃಖಸಮಾಚಾರವನ್ನೇ ಬಿಟ್ಟುಬಿಡು. ॥೬೩॥

ಸಂಸಾರದುಃಖಹರಮೀಶ್ವರಮಾಶು ದೃಷ್ಟ್ವಾ
ಲಿಂಗಂ ಚ ಸಾಯಮುಸಕೃನ್ನವಬಿಲ್ವಪತ್ರೈಃ ।
ಪುಷ್ಪೈಶ್ಚ ಗಂಧಸಹಿತೈಶ್ಚ ಸಮರ್ಚಯಿತ್ವಾ
ಮುಕ್ತೋ ಭವತ್ಯಸಕೃದೇವ ಸಕೃದ್ವಿಲೋಕ್ಯ ॥೬೪॥

ಸಂಸಾರಾರ್ಣವಶೋಷಕಂ ಖಲು ಮಹಾದೇವಾರ್ಚನಂ ಮೇನಿರೇ
ಧನ್ಯಾಃ ಸಂತತಮಿಂದುಶೇಖರಪದಾಂಭೋಜಾರ್ಚನಾತ್ಯಾದರಾಃ ।
ತಲ್ಲಿಂಗಾನವಲೋಕನೇ ಸತಿ ಭವೇದ್ದುಃಖಂ ತದಾಲೋಕನೇ
ತದ್ವಾರ್ತಾಪಿ ನ ಸರ್ವಥೇತಿ ವಿದಿತಂ ತಲ್ಲಿಂಗಮಾಲೋಕಯ ॥೬೫॥

ಶಿವಲಿಂಗವಿಲೋಕನೇ ರತಿ
ರ್ಯದಿ ಜಾತಾ ಬಹುಪುಣ್ಯಪರ್ವತೈಃ ।
ಅಮಿತಂ ಸುಖಮಶ್ನುತೇ ಸದಾ
ನ ಚ ಸಂಸಾರರತಿಶ್ಚ ಸರ್ವಥಾ ॥೬೬॥

---

ಸಂಸಾರಸಂಬಂಧಿಯಾದ ದುಃಖಗಳನ್ನೆಲ್ಲಾ ಧ್ವಂಸಮಾಡುವ ಈಶ್ವರ ಲಿಂಗವನ್ನು ಪ್ರದೋಷಕಾಲಗಳಲ್ಲಿ ಅನೇಕ ಬಾರಿ ಹೊಸ ಬಿಲ್ವಪತ್ರಗಳಿಂದಲೂ, ಸುಗಂಧಯುಕ್ತವಾದ ಪುಷ್ಪಗಳಿಂದಲೂ ಪೂಜಿಸಿ ಅನೇಕ ಬಾರಿಯಾಗಲಿ, ಒಂದೇ ಸಾರಿಯಾಗಲಿ ಆ ಶಿವಲಿಂಗವನ್ನು ದರ್ಶನಮಾಡುವುದರಿಂದ ಮಾನವನು ನಿಜವಾಗಿಯೂ ಮುಕ್ತನಾಗುವನು. ॥೯೪॥

ಯಾವಾಗಲೂ ಚಂದ್ರಶೇಖರನಾದ ಮಹಾದೇವನ ಪಾದಕಮಲಗಳನ್ನು ಪೂಜಿಸುವುದರಲ್ಲಿ ಅತ್ಯಂತ ಆಸಕ್ತಿಯುಳ್ಳ, ಮತ್ತು ಧನ್ಯರೆನಿಸಿದ ಮಹಾಪುರುಷರು ಈ ಮಹಾದೇವನ ಪೂಜೆಯು ಸಂಸಾರವೆಂಬ ಸಮುದ್ರವನ್ನು ನಾಶಮಾಡುವುದೆಂದು ತಿಳಿಯುತ್ತಾರೆ. ಆ ಶಿವಲಿಂಗವನ್ನು ದರ್ಶನಮಾಡದಿದ್ದರೆ ಮಾತ್ರ ದುಃಖವುಂಟು. ದರ್ಶನಮಾಡಿದ ಮಾತ್ರದಿಂದಲೇ ಆ ದುಃಖವೃತ್ತಾಂತವೇ ನಾಶವಾಗಿ ಬಿಡುವುದು. ಆದುದರಿಂದ ಎಲೌ ತಾಯೇ! ಈಗ ಆ ಶಿವಲಿಂಗವನ್ನು ನೀನು ಭಕ್ತಿಯಿಂದ ನೋಡು. ನಿನ್ನ ದುಃಖವೆಲ್ಲಾ ಪರಿಹಾರವಾಗುವುದು. ॥೬೫॥

ಅನೇಕ ಪುಣ್ಯಗಳೆಂಬ ಪರ್ವತಗಳಿಂದ ಆ ಶಿವಲಿಂಗವನ್ನು ನೋಡುವುದರಲ್ಲಿ ಅಭಿಲಾಷೆ ಉಂಟಾಗುವುದು. ಅದರಿಂದಲೇ ಮಾನವನು ಅಪಾರವಾದ ಸುಖ

ಶರೀರಮಾಸಾದ್ಯ ಶಿವಾರ್ಚನೇ ಚೇ
ತ್ಕರೋತಿ ಬುದ್ಧಿಂ ವಿಬುಧಃ ಸ್ವಸಿದ್ಧಿಂ ।
ಪ್ರಾಪ್ನೋತಿ ತತ್ರಾಪಿ ನ ಸಂಶಯೋऽತ್ರ
ಮುಕ್ತೋ ಭವತ್ಯೇವ ಶರೀರಪಾತೇ ॥೬೭॥

ಜೀವನ್ಮುಕ್ತಾಃ ಶಂಕರಾರಾಧಕಾಸ್ತೇ
ತೇಷಾಂ ದುಃಖಂ ಸ್ವಪ್ನಕಾಲೇऽಪಿ ನಾತಃ ।
ದುಃಖಾಂತಂ ತೇ ಪ್ರಾಪ್ನುವಂತ್ಯೇವ ನೂನಂ
ವಾರ್ತಾಂ ತಾವತ್ತೇ ನ ಕುರ್ವಂತಿ ದುಃಖೇ ॥೬೮॥

ಶಂಕರೇ ಸತಿ ಚ ದುಃಖನಾಶಕೇ
ಶಾಂಕರಸ್ಯ ಕಥಮೀದೃಶಂ ವದ ।
ದೌರ್ಮನಸ್ಯಮಪಿ ಶಂಕರೋ ಯತೋ
ನಾಶಯತ್ಯಖಿಲದುಃಖಸಾಗರಂ ॥೬೯॥

---

ವನ್ನು ಹೊಂದುವನು. ಮತ್ತು ಈ ಸಂಸಾರದಲ್ಲಿ ವಿರಕ್ತಿಯೂ ಅವನಿಗೆ ಉಂಟಾಗುವುದು. ॥೬೬॥

ಮಾನವನು ಈ ದಿವ್ಯವಾದ ಶರೀರವನ್ನು ಹೊಂದಿ ಆ ಪರಶಿವನ ಪೂಜೆಯಲ್ಲಿ ಭಕ್ತಿಯನ್ನು ಹೊಂದುವನಾದರೆ ಅವನೇ ಪಂಡಿತನು. ಅವನಿಗೆ ನಿಜವಾಗಿಯೂ ಸರ್ವ ಸಿದ್ಧಿಯುಂಟಾಗುವುದು. ಈ ಶರೀರವು ನಾಶವಾದ ನಂತರ ಅವನಿಗೆ ಸತ್ಯವಾಗಿಯೂ ಮುಕ್ತಿಯು ದೊರೆಯುವುದರಲ್ಲಿ ಸಂದೇಹವಿಲ್ಲ. ॥೬೭॥

ಜೀವನ್ಮುಕ್ತರಾಗುವ ಆ ಶಿವಪೂಜಕರಿಗೆ ಸ್ವಪ್ನಕಾಲದಲ್ಲಿಯೂ ದುಃಖವುಂಟಾಗಲಾರದು. ಅಲ್ಲದೆ ಸಂಸಾರ ಸಂಬಂಧವಾದ ದುಃಖವು ನಾಶವಾಗುವದನ್ನೂ ಅವರು ಕಾಣುವರು. ಅವರು ನಿಜವಾಗಿಯೂ ಮೋಕ್ಷವನ್ನೈದುವರು. ಅವರಿಗೆ ಐಹಿಕವಾದ ದುಃಖಸಮಾಚಾರವೇ ಎಂದಿಗೂ ಉಂಟಾಗಲಾರದು. ॥೬೮॥

ಶಂಕರನು ಸಕಲ ದುಃಖಗಳನ್ನೂ ತಾನೇ ನಾಶಮಾಡುತ್ತಿರುವಾಗ, ಅಂತಹ ಶಂಕರನ ಭಕ್ತನಿಗೆ ಈರೀತಿಯಾದ ತೊಂದರೆಯು ಹೇಗೆ ತಾನೇ ಸಂಭವಿಸೀತು ! ಮಹಾದೇವನು ತನ್ನ ಭಕ್ತರಿಗುಂಟಾಗುವ ದುಃಖವೆಂಬ ಸಾಗರವನ್ನೇ

ತಾವದ್ದುಃಖಪರಂಪರಾತಿಮಹತೀ ಸಂಭಾವಿತಾ ಸರ್ವಥಾ
ಯಾವಚ್ಛಂಕರಲಿಂಗಪೂಜನರತಿರ್ನೋದೇತಿ ಚಿತ್ತೇ ಮುಹುಃ ।
ಸಾ ಚೇತ್ತತ್ಕ್ಷಣಮೇವ ದುಃಖನಿಲಯಃ ಸಂಭಾವಿತಃ ಸರ್ವಥಾ
ತದ್ವಾರ್ತಾಽಪಿ ನ ಜಾಯತೇ ಖಲು ಸತಾಂ ವಿಶ್ವೇಶ್ವರಾರಾಧನೇ ॥೭೦॥

ವಿಶ್ವೇಶಃ ಸ್ಮೃತ ಏವ ನಾದ್ಯ ಸಹಸಾ ವೀರೇಶ್ವರೋ ವಿಸ್ಮೃತಃ
ನ ಧ್ಯಾತಂ ವಿಕಟಾಪದಾಂಬುಜಯುಗಂ ಸಿದ್ಧೇಶ್ವರೀ ನ ಸ್ಮೃತಾ ।
ಢುಂಢೀಶೋಽಪಿ ಸ ವಿಸ್ಮೃತಃ ಕಿಮಿತಿ ವಾ ಶ್ರೀಭೈರವೋ ನ ಸ್ಮೃತೋ
ದುಃಖಾಂಭೋಧಿವಿನಾಶಕಃ ಖಲು ಮಹಾದೇವಃ ಸ್ಮೃತೋಽನುಕ್ಷಣಂ ॥೭೧॥

ಇತಿ ತದ್ವಚನಂ ಶ್ರುತ್ವಾ ಕಾಶೀಸಂಸ್ಮರಣೇ ಸತಿ ।
ವಿಲೋಕಿತಾ ನ ಕಾಶೀತಿ ಸಾಪಿ ದುಃಖಸಮಾಕುಲಾ ॥೭೨॥

---

ಸಂಪೂರ್ಣವಾಗಿ ನಾಶಮಾಡುವನಲ್ಲದೇ ಅವರಿಗುಂಟಾಗಿರುವ ಕೆಟ್ಟ ಮನಸ್ಸನ್ನೂ ಸಹ ತೊಲಗಿಸುವನು. ॥೬೯॥

ಆ ಶಂಕರನ ಲಿಂಗಪೂಜೆಯಲ್ಲಿ ಅಭಿಲಾಷೆಯು ಮನಸ್ಸಿಗೆ ಲಭಿಸುವ ವರೆವಿಗೂ ದೊಡ್ಡದೊಡ್ಡ ದುಃಖಗಳ ಪರಂಪರೆಯು ಮೇಲಿಂದಮೇಲೆ ಒದಗುತ್ತಿರುವುವೇ ವಿನಾ ತಪ್ಪುವುದಿಲ್ಲ. ಶಿವಲಿಂಗಪೂಜೆಯಲ್ಲಿ ಮನಸ್ಸು ಹುಟ್ಟಿದ ಕೂಡಲೇ ಸರ್ವಪ್ರಕಾರದಿಂದಲೂ ಕ್ಷಣಕಾಲದಲ್ಲಿಯೇ ಸಕಲ ದುಃಖಗಳೂ ನಾಶ ಹೊಂದುವುವು. ಆ ವಿಶ್ವೇಶ್ವರನನ್ನು ಪೂಜಿಸಿದ ಸತ್ಪುರುಷರಿಗೆ ಕಷ್ಟದ ಸಮಾಚಾರವೇ ಇರುವುದಿಲ್ಲ. ॥೭೦॥

ಈ ದಿನ ಕಾಶೀವಿಶ್ವೇಶನನ್ನು ಸ್ಮರಣೆಮಾಡಲಿಲ್ಲ. ವೀರೇಶ್ವರನನ್ನೂ ಮರೆತೆನು. ವಿಕಟಾ ಎಂಬ ಪರಮೇಶ್ವರನ ಅಂಶರೂಪವಾದ ದೇವತೆಯ ಪಾದಕಮಲಗಳೆರಡನ್ನೂ ಧ್ಯಾನಿಸಲಿಲ್ಲ. ಆ ಸಿದ್ಧೇಶ್ವರಿಯ ಸ್ಮರಣೆಯೂ ಮರೆತು ಹೋಯಿತು. ಢುಂಡೀಶ, ಮತ್ತು ಶ್ರೀಭೈರವೇಶ್ವರ, ಇವರೂ ಕೂಡ ಏಕೆ ಸ್ಮೃತಿಪಥಕ್ಕೆ ಬರಲಿಲ್ಲವೋ, ಕಾಣೆ. ಆದರೆ ಸಕಲ ದುಃಖವೆಂಬ ಸಮುದ್ರವನ್ನೂ ನಾಶಮಾಡುವ ಆ ಮಹಾದೇವನನ್ನು ಮಾತ್ರ ಪ್ರತಿಕ್ಷಣದಲ್ಲಿಯೂ ತಪ್ಪದೆ ಸ್ಮರಣೆಮಾಡಿದೆನು." ॥೭೧॥

ಎಂದ ಆ ಕಿಂನರರ ಮಾತುಗಳನ್ನು ಕೇಳಿ, ಕಾಶೀಪಟ್ಟಣದ ಹೆಸರು ಸ್ಮರಣೆಗೆ

ಹಾ ಕಾಶೀ ನ ಮಯಾ ದೃಷ್ಟಾ ವಿಶ್ವೇಶನಿಲಯೋ ಮುಹುಃ ।
ಸಂಸಾರಪಾಶಸಂಬಂಧಾತ್ಕಿಂ ಕರ್ತವ್ಯಮತಃ ಪರಂ ॥೭೩॥

ವಿಶ್ವೇಶ್ವರಾರಾಧನಾಯ ನ ಪ್ರವೃತ್ತಂ ಮನೋ ಮಮ ।
ಸಂಸಾರವಾರ್ತಾವಿರತಂ ನ ಮನಃ ಪಾಪಸಂಚಿತಂ ॥೭೪॥

ಶ್ರೀವೀರೇಶ್ವರಲಿಂಗಪೂಜನರತಿರ್ಜಾತಾ ನ ಜನ್ಮಾಂತರೇ
ತೇನೇದಂ ಜನನಂ ಮಮಾಭವದತೋ ನಷ್ಟಂ ವಯೋ ಮೇ ವೃಥಾ।
ಹಾ ಹಾ ಕಿಂ ಹತಜೀವನೇನ ಜನನೀಕ್ಲೇಶಪ್ರದಾನೋದ್ಯತಂ
ವ್ಯರ್ಥಂ ಜನ್ಮ ಶಿವಾರ್ಚನೇನ ರಹಿತಂ ಕಷ್ಟಾತಿಕಷ್ಟಂ ವಯಃ ॥೭೫॥

---

ಬಂದ ಕೂಡಲೇ ಆ ಬಾಲಿಕೆಯು ಅಯ್ಯೋ! ಅಂತಹ ಕಾಶಿಯನ್ನೇ ನಾನು ನೋಡಿಲ್ಲವಲ್ಲಾ! ಎಂದು ಚಿಂತೆಗೊಳಗಾದಳು. ॥೭೨॥

ಅಯ್ಯೋ! ಆ ಕಾಶೀಪಟ್ಟಣವನ್ನೇ ನಾನು ನೋಡಿಲ್ಲ. ಅದರಲ್ಲಿಯೂ ಆವಿಶ್ವೇಶ್ವರನ ದೇವಾಲಯವನ್ನಂತೂ ಪದೇಪದೇ ನೋಡಲು ಅವಕಾಶವೇ ಇಲ್ಲವಲ್ಲ. ಈ ಸಂಸಾರದ ವಶಕ್ಕೆ ಸಿಕ್ಕಿ ಇನ್ನು ಮುಂದೆ ಏನು ತಾನೇ ಮಾಡಲಿ? ॥೭೩॥

ಈ ನನ್ನ ಮನಸ್ಸು ವಿಶ್ವೇಶ್ವರನ ಪೂಜೆಯ ವಿಷಯದಲ್ಲಿ ಪ್ರವೃತ್ತವಾಗಿಲ್ಲ. ಇನ್ನೂ ಪಾಪ ವಿಶೇಷಗಳ ಸಮುದಾಯದಿಂದ ಯುಕ್ತವಾಗಿರುವುದರಿಂದಲೇ ಈ ನನ್ನ ಮನಸ್ಸು ಸಂಸಾರ ವಿಷಯಕವಾದ ಸಮಾಚಾರಗಳಲ್ಲಿ ವೈರಾಗ್ಯವನ್ನು ಪಡೆದಿಲ್ಲ. ॥೭೪॥

ಹಿಂದಿನ ಜನ್ಮದಲ್ಲಿ ಆ ವೀರೇಶ್ವರನ ಲಿಂಗಪೂಜೆಯಲ್ಲಿ ಆಸಕ್ತಿ ಹುಟ್ಟದೇ ಹೋದುದರಿಂದಲೇ, ಈ ಜನ್ಮದಲ್ಲಿ ನನಗೆ ಇಂತಹ ದುಃಖವು ಪ್ರಾಪ್ತವಾಯಿತು. ಇದರಲ್ಲಿಯೂ ನನ್ನ ವಯಸ್ಸೆಲ್ಲಾ ವ್ಯರ್ಥವಾಗಿ ಕಳೆಯಿತು. ಕೇವಲ ಜನನಿಗೆ ಕ್ಲೇಶಕೊಡುವುದಕ್ಕೆ ಮಾತ್ರ ಕಾರಣವಾದ ಈ ಹಾಳು ಜನ್ಮದ ಬಾಳುವಿಕೆಯಿಂದ ಏನು ಪ್ರಯೋಜನ? ಅಯ್ಯೋ! ಶಿವಪೂಜೆಯಿಲ್ಲದೇ ಕಾಲಕಳೆಯುತ್ತಿರುವ ಈ ಜನ್ಮವು ಕೇವಲ ವ್ಯರ್ಥವೇ ಸರಿ. ಅಲ್ಲದೇ ಈ ಜೀವನವಾದರೋ ಅತಿಕಷ್ಟಕ್ಕೀಡಾದುದು. ॥೭೫॥

ಕರ್ಪೂರಗೌರಚರಣಾಂಬುಜರೇಣುಭಿರ್ಮೇ
ನ ಕ್ರೀಡತೀತ್ಯಪಿ ಮನೋ ಮರಣಂ ವರಂ ಮೇ ।
ಕಿಂ ಜೀವನೇನ ಶಿವಪೂಜನವರ್ಜಿತೇನ
ಧಿಗ್ಧಿಗ್ಧಿಗೇತದಧುನಾ ಕಿಮಿಹಾಸ್ತಿ ಕೃತ್ಯಂ ॥೭೬॥

ವಿಶ್ವೇಶ್ವರೋ ನ ನತ ಏವ ನ ವೀಕ್ಷಿತೋಽಪಿ
ಬಿಲ್ವೀದಲೈಶ್ಚ ಕುಸುಮೈರಪಿ ನಾರ್ಜಿತೋಽಪಿ ।
ವ್ಯರ್ಥಂ ಗತಂ ಜನನಮೇತದತಃ ಪರಂ ಕಿಂ
ದಗ್ಧೇ ಗೃಹೇ ನ ಫಲಮಸ್ತಿ ಜಲಾವಸೇಕೈಃ ॥೭೭॥

ಹಾ ಹಾ ಹಂತ ದುರಾತ್ಮನಾ ಕಥಮಭೂತ್ಸಂಗೋಽಪಿ ಚಿತ್ತಂ ಯತಃ
ಸ್ವಸ್ಥಂ ನಾಭವದಿಂದುಶೇಖರಪದಾಂಭೋಜಾರ್ಚನೇ ಸರ್ವಥಾ ।
ತದ್ದಗ್ಧಂ ಭವತು ತ್ರಿಲೋಚನ ಪುನರ್ಜನ್ಮಾಂತರೇ ವಾ ಭವ
ತ್ಪಾದಾಂಭೋಜರಜಃ ಪ್ರಸಾದನಿರತಂ ಚಿತ್ತಂ ಮಮಾಸ್ತು ಪ್ರಭೋ ॥೭೮॥

---

ಕರ್ಪೂರದಂತೆ ಬಿಳುಪಾದ ದೇಹಕಾಂತಿಗಳಿಂದ ಪ್ರಕಾಶಿಸುವ ಆ ಶಿವನ ಅಡಿದಾವರೆಗಳ ಸಂಬಂಧವಾದ ಪರಾಗಗಳಲ್ಲಿ ನನ್ನ ಮನಸ್ಸು ಸ್ವಲ್ಪವಾದರೂ ವಿಹರಿಸದೇ ಹೋದರೆ, ಇದಕ್ಕಿಂತ ಮರಣವೇ ಉತ್ತಮವಾದುದೆಂದು ನನಗೆ ತೋರುವುದು. ಶಿವಪೂಜೆಯಿಲ್ಲದೇ ಬದುಕಿರುವ ಈ ಬಾಳ್ಕೆಯಿಂದ ಏನು ಪ್ರಯೋಜನ ? ಛೀ ! ಈರೀತಿಯಾದ ಬಾಳ್ಕೆಗೆ ಧಿಕ್ಕಾರವಿರಲಿ. ॥೭೬॥

ಆ ವಿಶ್ವೇಶ್ವರನನ್ನು ನಮಸ್ಕರಿಸಲೂ ಇಲ್ಲ. ದರ್ಶನಮಾಡಲೂ ಇಲ್ಲ. ಮತ್ತು ಬಿಲ್ವಪತ್ರೆ, ಹೂವು, ಮುಂತಾದುವುಗಳಿಂದ ಪೂಜೆಯನ್ನೂ ಮಾಡಲಿಲ್ಲ. ಹಾಗೆಯೇ ಈ ಜೀವನವೆಲ್ಲಾ ಕಳೆದುಹೋಯಿತು. ಮನೆಯೇ ಹತ್ತಿ ಉರಿದು ಹೋದಮೇಲೆ, ಈಗ ನೀರನ್ನು ಚುಮುಕಿಸುವುದರಿಂದ ಏನು ತಾನೇ ಫಲವುಂಟು ? ಹಾಗೆಯೇ ಜೀವನವೆಲ್ಲಾ ವ್ಯರ್ಥವಾಗಿ ಕಳೆದು ವಯಸ್ಸಾದ ಮೇಲೆ ಈಗ ನಾನು ಯೋಚಿಸಿ ದರೆ ಅದರಿಂದ ಬರುವ ಫಲವು ತಾನೇ ಏನು ? ॥೭೭॥

ಅಯ್ಯೋ ! ಹಂತ ! ಆ ದುರಾತ್ಮನಾದ ಪತಿಯೊಡನೆ ಹೇಗೆ ನನಗೆ ಸಂಬಂಧ ವುಂಟಾಯಿತೋ ಕಾಣೆನು ; ಅದರ ಫಲವಾಗಿಯೇ ಇನ್ನೂ ನನ್ನ ಮನಸ್ಸು

ಧಿಗ್ಧಿಕ್ಪಾತಕಸಾಗರಾಕರಮಿದಂ ಚಿತ್ತಂ ಧಿಗಾಶು ಪ್ರಭೋ
ತ್ವತ್ಪಾದಾಂಬುರುಹಾರ್ಚನೇನ ರಹಿತಂ ಚೇತಸ್ತದದ್ಯಾಧುನಾ ।
ನಿರ್ಮೂಲಂ ಭವತು ತ್ವದೀಯಕೃಪಯಾ ಚಿತ್ತಾಂತರೇಣಾನ್ವಯೇ
ತೇನಾತ್ರಾದ್ಯ ಮಹೇಶಪೂಜನರತಂ ಚಿತ್ತಂ ಭವೇತ್ಸಾದರಂ ॥೭೯॥

ಹರ ಹರ ಹರ ಪಾಪಂ ಪಾಪನಾಶಾಯ ಯಸ್ಮಾ
ತ್ಪದಮಪಿ ಶಿವ ಶಂಭೋ ಶಂಕರೇ ನ ಪ್ರವೃತ್ತಂ ।
ಯದಿ ಭವತಿ ಮನೋ ಮೇ ಘೋರಸಂಸಾರನಾಶೋ
ಭವತಿ ಭವತಿ ದೃಷ್ಟಿರ್ಮಯ್ಯನಾಥೇ ತವೇಶ ॥೮೦॥

---

ಚಂದ್ರಮೌಳಿಯಾದ ಆ ಪರಮೇಶ್ವರನ ಪಾದಕಮಲ ಪೂಜೆಯಲ್ಲಿ ಸ್ಥಿರವಾಗಿ ನಿಂತಿಲ್ಲ. ಈಗಿನ ಈ ಹಾಳುಜನ್ಮವು ಭಸ್ಮವಾಗಿ ಹೋಗಲಿ; ತ್ರಿಲೋಚನಗಳಿಂದ ಒಪ್ಪುವ ಮಹಾದೇವನೇ! ಮುಂದಿನ ಜನ್ಮದಲ್ಲಾದರೂ ಈ ನನ್ನ ಮನಸ್ಸು ನಿನ್ನ ಅಡಿದಾವರೆಗಳ ಪೂಜೆಯಲ್ಲಿ ಸ್ಥಿರವಾಗಿ ನೆಲಸುವಂತೆ ಅನುಗ್ರಹಿಸು ಪ್ರಭೋ! ||೭೮||

ಪ್ರಭೋ! ಪಾಪಗಳೆಂಬ ಸಮುದ್ರಕ್ಕೆ ಆಶ್ರಯವಾದ ಈ ಮನಸ್ಸು ಹಾಳಾಗಲಿ. ಧ್ವಂಸವಾಗಿ ಹೋಗಲಿ. ನಿನ್ನ ಪಾದಕಮಲಪೂಜೆಯಲ್ಲಿ ಆಸಕ್ತಿಯಿಡದ ಈ ಮನಸ್ಸು ಈಗ ನಿರ್ಮೂಲವಾಗಿ ಹೋಗಲಿ. ನಿನ್ನನುಗ್ರಹದಿಂದ ಬೇರೆಯ ಮನಸ್ಸಿನೊಡನೆ ಅಂದರೆ ಸತ್ಸಹವಾಸವು ಸಂಬಂಧಿಸುವುದೇ ಆದರೆ, ಅದರಿಂದ ಆಗ ನನ್ನ ಮನಸ್ಸು ಮಹೇಶ್ವರನ ಪೂಜೆಯಲ್ಲಿ ಆದರದಿಂದ ಆಸಕ್ತವಾಗಿ ಸ್ಥಿರವಾಗಿ ನಿಲ್ಲುವುದು. ||೭೯||

ಓ ಶಂಭೋ! ಒಂದೇ ಒಂದು ಪದವನ್ನಾದರೂ ನಿನ್ನ ಭಜನಾದಿಗಳಲ್ಲಿ ಉಪಯೋಗಿಸದೇ ಇರುವುದರಿಂದ ಉಂಟಾದ ಮಹಾಪಾಪಗಳನ್ನೆಲ್ಲಾ ಪರಮೇಶ್ವರ ನೆನಿಸಿದ ನೀನು ದಯೆಯಿಂದ ನಾಶಪಡಿಸು. ಅನಾಥಳಾದ ಈ ಜನದಲ್ಲಿ ನಿನ್ನ ಕೃಪಾದೃಷ್ಟಿಯುಂಟಾಗುವುದೇ ಆದರೆ, ಎಲೈ ಸರ್ವೇಶ್ವರನಾದ ಸ್ವಾಮಿಯೇ, ಈ ಸಂಸಾರ ವಿಷಯಕವಾದ ಬಂಧನವೇ ನನಗೆ ಸಂಪೂರ್ಣವಾಗಿ ನಾಶವಾಗಿಬಿಡುವುದು. ||೮೦||

ಇತಿ ತದ್ವಚನಂ ಶ್ರುತ್ವಾ ಕಿನ್ನರೋ ವಿಸ್ಮಿತಸ್ತದಾ ।
ಶಿವಪೂಜನಸಾಮಗ್ರೀಂ ದದೌ ತಸ್ಯೈ ಪ್ರಣಮ್ಯ ಸಃ ॥೮೧॥

ಸಾಮಗ್ರೀಂ ತಾಂ ಸಮಾದಾಯ ಪ್ರಹೃಷ್ಟಾ ಸಾಪಿ ಶಂಕರಂ ।
ಪೂಜಯಾಮಾಸ ಯತ್ನೇನ ಪಂಚಾಕ್ಷರಪುರಃಸರಂ ॥೮೨॥

ತತಃ ಸ ಕಿನ್ನರಃ ಪ್ರಾಹ ತಾಮೇವ ನವಯೌವನಾಂ ।
ಶಿವಾರ್ಚನರತಾಂ ದೃಷ್ಟ್ವಾ ಪ್ರಹೃಷ್ಟೋಽತೀವ ವಿಸ್ಮಿತಃ ॥೮೩॥

॥ ಕಿಂನರ ಉವಾಚ ॥

ಕಿಮಂಬಾಪೇಕ್ಷಿತಂ ಲೋಕೇ ತದ್ವದಾದ್ಯಾಧುನಾ ಮಮ ।
ತತ್ಸರ್ವಮಪಿ ದಾತುಂ ಮೇ ಶಕ್ತಿರಸ್ತಿ ಶಿವಾರ್ಚನಾತ್ ॥೮೪॥

ಅಂಬ ಮಾಂ ಪುತ್ರಭಾವೇನ ಪಶ್ಯ ಪಶ್ಯಾತಿಸಾದರಂ ।
ಶಿವಭಕ್ತಾಸಿ ಮೇ ಮಾತಾ ತತ್ತ್ವಂ ತದಿತಿ ಮೇ ಮತಿಃ ॥೮೫॥

---

ಆ ಬಾಲಿಕೆಯ ವಿವೇಕಯುತವಾದ ಮಾತನ್ನು ಕೇಳಿ ಆ ಕಿನ್ನರನು, ಆಶ್ಚರ್ಯ ಚಕಿತನಾಗಿ ಅವಳಿಗೆ ನಮಸ್ಕಾರಮಾಡಿ, ಶಿವಪೂಜೆಗೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಒದಗಿಸಿ ಕೊಟ್ಟನು. ॥೮೧॥

ಆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಅತಿ ಸಂತೋಷದಿಂದ ಆ ಬಾಲಿಕೆಯು ಶ್ರದ್ಧಾಯುಕ್ತಳಾಗಿ ಶಿವಪಂಚಾಕ್ಷರ ಮಂತ್ರ ಪುರಸ್ಸರವಾಗಿ ಶಿವಲಿಂಗಪೂಜೆಮಾಡಿದಳು. ॥೮೨॥

ಅನಂತರ ಶಿವಪೂಜಾತತ್ಪರಳಾಗಿರುವ ನವಯೌವ್ವನಭರಿತಳಾದ ಬಾಲಿಕೆಯನ್ನು ನೋಡಿ, ಸಂತೋಷವನ್ನೂ ಆಶ್ಚರ್ಯವನ್ನೂ ಹೊಂದಿದವನಾಗಿ ಆ ಕಿಂನರನು ಹೀಗೆಂದನು. ॥೮೩॥

ಅಂಬ! ಈ ಲೋಕದಲ್ಲಿ ನಿನಗೆ ಈಗ ಬೇಕಾದುದನ್ನು ತಿಳಿಸು. ಅವುಗಳೆಲ್ಲವನ್ನೂ ನಾನು ನಿನಗೆ ಕೊಡಲು ಆ ಪರಶಿವನ ಪೂಜಾಸಾಮರ್ಥ್ಯದಿಂದ ಶಕ್ತನಾಗಿರುವೆನು. ॥೮೪॥

ತಾಯೇ! ನನ್ನನ್ನು ಆದರಪೂರ್ವಕವಾಗಿ ಮಗನೆಂಬ ಭಾವನೆಯಿಂದ ನೋಡು. ಅದರಲ್ಲಿಯೂ ನನ್ನ ತಾಯಿಯಂತಿರುವ ನೀನು ಆ ಶಿವನ ಭಕ್ತಳೂ ಆಗಿರುವೆ. ಅದೂ ನಿಜವಾದ ತತ್ತ್ವವು ಎಂದು ನಾನು ತಿಳಿಯುವೆನು. ॥೮೫॥

ಸಂಸಾರವಿರತಾಯಾಸ್ತೇ ಶಿವಲಿಂಗಾರ್ಚನೇ ರತಿಃ ।
ಸಮುತ್ಪನ್ನಾ ತತೋ ನಿತ್ಯಂ ಪೂಜಯಸ್ವ ಮಹೇಶ್ವರಂ ॥೮೬॥

ಮನುಷ್ಯಾಃ ಪ್ರಾಯಶಃ ಸರ್ವೇ ಮಾತಃ ಸಂಸಾರಿಣಸ್ತತಃ ।
ತೈಃ ಸಹೈಕತ್ರ ಸಂವಾಸಃ ಪೂಜಾವಿಘ್ನೋ ಭವಿಷ್ಯತಿ ॥೮೭॥

ವಿಘ್ನಿತಾ ಯದಿ ಪೂಜಾ ಸ್ಯಾತ್ಪುಸಃ ಸಂಸಾರಚೇಷ್ಟಯಾ ।
ನ ಶಿವಾರ್ಚನಮಿತ್ಯಾಶು ಕರ್ತವ್ಯಂ ಶಿವಪೂಜನಂ ॥೮೮॥

ಶ್ರೇಯಃ ಪರಂ ವಿದುರಿದಂ ಶಿವಪೂಜನಂ ತು
ವಿಘ್ನೈರ್ವಿನಾ ಭವತಿ ಚೇದಭಿವಾಂಛಿತಾನಿ ।
ಸಿಧ್ಯಂತಿ ತಾವದಸಕೃತ್ಸಕೃದೇವ ವಾಸ್ತು
ತತ್ಸಿದ್ಧಿದಾಯಕಮಿತಿ ಪ್ರವದಂತಿ ಶೈವಾಃ ॥೮೯॥

---

ಸಂಸಾರ ವಿಷಯದಲ್ಲಿ ವಿರಕ್ತಳಾಗಿರುವ ನಿನಗೆ ಶಿವಲಿಂಗಪೂಜೆಯಲ್ಲಿ ಈ ರೀತಿಯಾದ ಆಸಕ್ತಿಯುಂಟಾಗಿರುವುದರಿಂದ ಪ್ರತಿದಿನವೂ ಮಹೇಶ್ವರನನ್ನು ತಪ್ಪದೆ ಪೂಜೆಮಾಡುತ್ತಿರು. ॥೮೬॥

ಸಾಮಾನ್ಯವಾಗಿ ಮನುಷ್ಯರೆಲ್ಲರೂ ಸಂಸಾರಿಗಳೇ ಆಗಿರುವರು. ಅವರೊಡನೆ ಒಟ್ಟಿಗೆ ವಾಸಮಾಡುವುದರಿಂದಲೇ ಶಿವಪೂಜೆಗೆ ಸಂಪೂರ್ಣ ವಿಘ್ನವುಂಟಾಗುತ್ತದೆ. ॥೮೭॥

ಪುನಃ ಈ ಸಾಂಸಾರಿಕವಾದ ಸಂಭೋಗಾಲಿಂಗನಾದಿ ಚೇಷ್ಟೆಗಳಿಂದ ಪೂಜೆಗೆ ವಿಘ್ನವೇನಾದರೂ ಉಂಟಾದರೆ, ತಿರುಗಿ ನಮಗೆ ಆ ಶಿವಪೂಜೆಯಲ್ಲಿ ಸ್ಥಿರಮನಸ್ಸು ದೊರೆಯಲಾರದು. ಜಾಗ್ರತೆಯಾಗಿ ಶಿವನನ್ನು ಪೂಜಿಸಬೇಕು. ॥೮೮॥

ಆ ಪರಶಿವಪೂಜೆಯೇ ಪರಮ ಶ್ರೇಯಸ್ಸಿಗೆ ಕಾರಣವಾಗಿರುವುದು. ಈ ಶಿವಪೂಜೆಯು ವಿಘ್ನಗಳಿಲ್ಲದೇ ನೆರವೇರಿದರೆ ಸಕಲ ಇಷ್ಟಾರ್ಥಗಳೂ ಅದರಿಂದ ಸಿದ್ಧಿಸುವುವು. ಒಂದು ಸಲವಾಗಲೀ ಅಥವಾ ಅನೇಕ ಸಾರಿಯಾಗಲೀ ಈ ಶಿವನನ್ನು ಪೂಜಿಸುವುದು ಸಕಲ ಸಿದ್ಧಿಗಳನ್ನೂ ಹೊಂದುವುದಕ್ಕೆ ಎಂದು, ಶಾಂಭವರು ಹೇಳುತ್ತಾರೆ. ॥೮೯॥

ಇತಿ ತದ್ವಚನಂ ಶ್ರುತ್ವಾ ಪ್ರಣತಂ ಕಿನ್ನರಂ ಮುಹುಃ ।
ಶಾಂಕರಂ ಪ್ರಾಹ ಸಾ ಸಾಧ್ವೀ ಶ್ರೀಮಹಾದೇವಸನ್ನಿಧೌ ॥೯೦॥

॥ ರಾಜಕನ್ಯೋವಾಚ ॥

ಸಂತಿ ಭಾಗ್ಯಾನ್ಯಪಾರಾಣಿ ತೇಷಾಂ ಸಂಖ್ಯಾ ನ ದೃಶ್ಯತೇ ।
ಶಿವಾರ್ಚನೋಪಯುಕ್ತಾನಿ ನ ಭವಂತೀತಿ ದುಃಖಿತಾ ॥೯೧॥

ತೇನ ದುಃಖೇನ ಸತತಂ ಖಿನ್ನಂ ಮಮ ಮನಸ್ತತಃ ।
ತದ್ದುಃಖನಾಶನೋಪಾಯಶ್ಚಿಂತನೀಯಸ್ತ್ವಯಾಽಧುನಾ ॥೯೨॥

ಸಂತಿ ರತ್ನಾನ್ಯಪಾರಾಣಿ ತೈರೇಕಂ ಶಿವಮಂದಿರಂ ।
ಕರ್ತವ್ಯಮಿತಿ ಮೇ ಬುದ್ಧಿಸ್ತತ್ಕಥಂ ಸ್ಯಾದ್ವದಾಧುನಾ ॥೯೩॥

ಭರ್ತಾ ಕಿಲಾತಿಕ್ರೂರೋ ಮೇ ಸರ್ವದಾ ಮದನಾತುರಃ ।
ಸ ಏವ ಶಿವಪೂಜಾಯಾಂ ವಿಘ್ನಮಾಚರತಿ ಸ್ವತಃ ॥೯೪॥

---

ಕಿನ್ನರನ ಈ ಮಾತುಗಳನ್ನು ಕೇಳಿ ಸಾಧ್ವೀಮಣಿಯಾದ ಆ ರಾಜಕುಮಾರಿಯು ಬಾರಿಬಾರಿಗೂ ನಮಸ್ಕರಿಸುತ್ತಿರುವ ಶಂಕರನ ಭಕ್ತನನ್ನು ಕುರಿತು ಆ ಮಹಾದೇವನ ಸನ್ನಿಧಾನದಲ್ಲಿಯೇ ಹೀಗೆಂದಳು. ॥೯೦॥

ನನಗೆ ಅಪಾರವಾದ ಭಾಗ್ಯಸಂಪತ್ತಿದೆ. ಆ ಭಾಗ್ಯಕ್ಕೆ ಎಣಿಕೆಯೇ ಇಲ್ಲದಿರುವಷ್ಟಿದೆ. ಅಷ್ಟಿದ್ದರೂ ಅದು ಶಿವಪೂಜೆಗೆ ಉಪಯೋಗವಾಗುವುದಿಲ್ಲವಲ್ಲಾ ಎಂದು ನನಗೆ ಬಹಳ ದುಃಖವುಂಟಾಗಿದೆ. ॥೯೧॥

ಇದೇ ದುಃಖದಿಂದ ನನ್ನ ಮನಸ್ಸು ಯಾವಾಗಲೂ ಖಿನ್ನವಾಗಿ ಚಿಂತೆಯಲ್ಲಿ ಮುಳುಗಿಹೋಗಿದೆ. ಈ ದುಃಖವು ನಾಶವಾಗುವ ಉಪಾಯವನ್ನು ಮಾತ್ರ ಈಗ ನೀನು ವಿವರಿಸಿ ಹೇಳಬೇಕು. ॥೯೨॥

ನನ್ನ ಸಮೀಪದಲ್ಲಿ ಅಪಾರವಾದ ರತ್ನಗಳಿವೆ. ಅದರಿಂದ ಒಂದು ಶಿವದೇವಾಲಯವನ್ನು ಕಟ್ಟಿಸಬೇಕೆಂಬ ಬುದ್ಧಿಯು ನನಗುಂಟಾಗಿದೆ. ನೀನು ಈ ಕಾರ್ಯ ನೆರವೇರುವ ಬಗೆ ಹೇಗೆಂಬುದನ್ನು ಹೇಳು. ॥೯೩॥

ನನ್ನ ಗಂಡನು ತುಂಬಾ ಕ್ರೂರನು ಮತ್ತು ಯಾವಾಗಲೂ ಮದನಾತುರನು. ಅವನೇ ಸಾಕ್ಷಾತ್ತಾಗಿ ಈ ಶಿವಪೂಜೆಗೆ ವಿಘ್ನವನ್ನುಂಟುಮಾಡುತ್ತಿರುವನು. ॥೯೪॥

ನ ತಸ್ಯ ಶಿವಪೂಜಾಯಾಂ ವಾಂಛಾ ಸರ್ವಾತ್ಮನಾ ಯತಃ ।
ಜನ್ಮಾಂತರೇಽಪಿ ಸಂಸಾರೀ ಸ ತದ್ವಾಸನಯಾ ಯುತಃ ॥೯೫॥

ಸಂಸಾರವಾಸನಾ ದುಷ್ಟಾ ಸಾ ತಾವದ್ಭೂತಸಂನಿಭಾ ।
ಪಿಶಾಚನಿಕರಾಕಾರಾ ಶಿವಧ್ಯಾನವಿರೋಧಿನೀ ॥೯೬॥

ಪಿಶಾಚಯೋಗೇ ಮಂತ್ರೇಣ ಕದಾಚಿತ್ತನ್ನಿವಾರಣಂ ।
ಭವಿಷ್ಯತಿ ನ ಸಂಸಾರವಾಸನಾ ಚ ನಿವರ್ತತೇ ॥೯೭॥

ಸಂಸಾರವಾಸನೋನ್ಮತ್ತಾಸ್ತ್ಯಕ್ತಶಂಕರಪೂಜನಾಃ ।
ಚರಂತಿ ಮರಣಾಂತೇ ತೇ ಯಾಸ್ಯಂತಿ ಯಮಮಂದಿರಂ ॥೯೮॥

ಶಂಕರಾರ್ಚಾವಿಹೀನೇಭ್ಯಃ ಕಲ್ಪಿತಂ ಯಮಮಂದಿರಂ ।
ಅತಸ್ತದ್ವಾಸನಾಕ್ರಾಂತಾಸ್ತತ್ರ ಯಾಂತಿ ನ ಸಂಶಯಃ ॥೯೯॥

---

ಅವನಿಗಾದರೋ ಆ ಶಿವಪೂಜೆಯಲ್ಲಿ ಸ್ವಲ್ಪವೂ ಅಪೇಕ್ಷೆಯೇ ಇಲ್ಲ. ಅವನು ಜನ್ಮಾಂತರದಲ್ಲಿಯೂ ಸಂಸಾರಿಯೇ ಆಗಿದ್ದನೆಂದು ತೋರುವುದು. ಈಗಲೂ ಆ ಸಂಸಾರವಾಸನೆಯು ಅವನಿಗೆ ತಪ್ಪಿಲ್ಲ. ॥೯೫॥

ದುಷ್ಟವಾದ ಈ ಸಂಸಾರವಾಸನೆಯು ಮಹಾಭೂತಕ್ಕೆ ಸಮಾನವಾದದ್ದು. ಪಿಶಾಚಗಳ ಸಮೂಹದಂತೆ ಸ್ವಭಾವವುಳ್ಳ ಇದು ಶಿವಧ್ಯಾನಕ್ಕೆ ಪೂರ್ಣವಿರೋಧಿಯಾಗಿರುವುದು. ॥೯೬॥

ಒಂದುವೇಳೆ ಪಿಶಾಚವು ಸಂಬಂಧಿಸಿದರೆ ಅದನ್ನು ಮಂತ್ರದ ಬಲದಿಂದ ಹೋಗಲಾಡಿಸಬಹುದು. ಆದರೆ ಈ ಸಂಸಾರವಾಸನೆಯೆಂಬ ದೆವ್ವವು ಮಾತ್ರ ಹೇಗೂ ನಿವಾರಣೆಯಾಗುವುದಿಲ್ಲ. ॥೯೭॥

ಈ ಸಂಸಾರ ವಿಷಯಗಳಲ್ಲಿ ಉನ್ಮತ್ತರಾದ ಜನರು ಆ ಶಂಕರನ ಪೂಜೆಯನ್ನು ಬಿಟ್ಟು ಸುಮ್ಮನೆ ಅಲೆಯುತ್ತಾರೆ. ಆಮೇಲೆ ಮರಣವಾದನಂತರ ಇವರೆಲ್ಲರೂ ಸುಲಭವಾಪ ಯಮನ ಬಲೆಗೆ ಸಿಕ್ಕಿ ನರಕಕ್ಕೆ ತೆರಳುವರು. ॥೯೮॥

ಶಂಕರನ ಪೂಜೆಯನ್ನು ಮಾಡದ ಜನಗಳಿಗೋಸ್ಕರವೇ ಈ ಯಮಮಂದಿರವು ನಿರ್ಮಿಸಲ್ಪಟ್ಟಿದೆ. ಆದ್ದರಿಂದ ಆ ಸಂಸಾರವಾಸನೆಗೊಳಗಾದವರು ಅಲ್ಲಿಗೆ ತಪ್ಪದೇ ಹೋಗುವರು. ॥೯೯॥

ಯತತೇ ಕಾಮಿನೀಯೋಗಂ ಕರ್ತುಂ ಮರ್ತ್ಯೋ ಯಥಾ ತಥಾ।
ನ ಕರೋತಿ ಮಹಾದೇವಪೂಜನೇ ಮತಿಮಾದರಾತ್ ॥೧೦೦॥

ಅಮೃತಂ ಖಲು ತಾವದಕ್ಷರಂ
ಶಿವನಾಮಾನುಗತಂ ತದಾದರಾತ್ ।
ನ ಮನಃ ಪಿಬತೀತಿ ಚಾದ್ಭುತಂ
ರಸನಾ ತತ್ಸಹಕಾರಿಣೀ ತಥಾ ॥೧೦೧॥

ಇತಿ ತದ್ವಚನಂ ಶ್ರುತ್ವಾ ಕಿಂನರೋ ಹೃಷ್ಟಮಾನಸಃ ।
ತಾಮಾಹ ರಾಜತನಯಾಂ ಶಿವಸಂವಿಷ್ಟಮಾನಸಾಂ ॥೧೦೨॥

ರಾಜಕನ್ಯಾಪಿ ಸುಭಗೇ ಸರ್ವಲಕ್ಷಣಸಂಯುತಾ ।
ಶಿವಪೂಜನಸಂಸಕ್ತಾ ಜಾತಾಸಿ ಖಲು ಭಾಗ್ಯತಃ ॥೧೦೩॥

ಅಸಂಸಾರೀ ನ ಕೋಪ್ಯಸ್ತಿ ಮಹಾದೇವಂ ವಿನಾ ವಿಭುಂ ।
ಸರ್ವೇ ಸಂಸಾರಿಣೋ ದೇವಾಃ ಕಿನ್ನರಾಶ್ಚಾರಣಾ ಅಪಿ ॥೧೦೪॥

---

ಮಾನವನು ಸ್ತ್ರೀಯೊಡನೆ ಸಂಭೋಗಮಾಡಲು ಬುದ್ಧಿಯನ್ನುಪಯೋಗಿಸಿ ಪ್ರಯತ್ನಪಡುವಷ್ಟು, ಈ ಶಂಕರನ ಪೂಜೆಯಲ್ಲಿ ಆದರಬುದ್ಧಿಯನ್ನು ತೋರಿಸುವುದಿಲ್ಲ. ॥೧೦೦॥

ಆ ಶಿವನ ನಾಮಗಳಲ್ಲಿರುವ ಅಕ್ಷರಗಳು ಪ್ರತಿಯೊಂದೂ ಅಮೃತವೇ ಆಗಿರುವುವು. ಇಂತಹ ಶಿವನಾಮಗಳೆಂಬ ಅಮೃತವನ್ನು ಮನಸ್ಸೂ ಮತ್ತು ಅದಕ್ಕೆ ಸಹಾಯಕವಾದ ನಾಲಿಗೆಯೂ ಆದರದಿಂದ ಪಾನಮಾಡುವುದಿಲ್ಲನೆಂದರೆ ತುಂಬಾ ಆಶ್ಚರ್ಯವೇ ಸರಿ" ॥೧೦೧॥

ಈ ಮಾತುಗಳನ್ನು ಕೇಳಿ ಕಿಂನರನು, ಸಂತುಷ್ಟವಾದ ಮನಸ್ಸಿನಿಂದ ಶಿವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಅವಳನ್ನು ಕುರಿತು ಹೀಗೆಂದನು. ॥೧೦೨॥

"ಎಲೌ ಸೌಭಾಗ್ಯವತಿಯೇ! ಸರ್ವಲಕ್ಷಣಯುಕ್ತಳಾದ ನೀನು ರಾಜಕುಮಾರಿಯಾಗಿದ್ದರೂ ಶಿವಪೂಜೆಯಲ್ಲಿ ಇಷ್ಟುಆಸಕ್ತಳಾಗಿರುವುದು ನಿನ್ನ ಭಾಗ್ಯವೇಸರಿ. ॥೧೦೩॥

ಸರ್ವವ್ಯಾಪಕನಾದ ಆ ಮಹಾದೇವನೊಬ್ಬನನ್ನು ಬಿಟ್ಟು ಸಂಸಾರದುಃಖ ಬಾಹಿರರಾದವರು ಯಾರೂ ಇಲ್ಲವೇ ಇಲ್ಲವೆಂದು ತಿಳಿ. ಎಲ್ಲಾ ದೇವತೆಗಳೂ, ಕಿನ್ನರರೂ ಮತ್ತು ಚಾರಣರೂ ಸಹ ಸಂಸಾರಿಗಳೇ ಆಗಿರುವರು. ॥೧೦೪॥

ಗಂಧರ್ವಾ ಅಪಿ ಸಿದ್ಧಾಶ್ಚ ಮುನಯೋಽಪ್ಯಂತತಸ್ತತಃ ।
ಅಸಂಸಾರೀ ನ ದೃಷ್ಟೋಽಸ್ತಿ ಸರ್ವೇ ಸಂಸಾರಸಂಕುಲಾಃ ॥೧೦೫॥

ಅಜಾನಿಕೋಽಯಂ ಮಾರ್ಗೋಽಸ್ತಿ ತನ್ಮಾರ್ಗಸ್ಯ ನಿರೋಧನಂ ।
ಅಶಕ್ಯಮೇವ ಸಹಸಾ ತತ್ಪ್ರಯತ್ನೋ ನ ಜಾಯತೇ ॥೧೦೬॥

ಶಂಕರೇಣೈವ ಸೃಷ್ಟೋಽಯಂ ಸಂಸಾರಃ ಸ ತು ಸರ್ವಥಾ ।
ನಾಪಕಾರಾಯ ಧನ್ಯಾನಾಮುಪಕಾರೋಽಪಿ ಜಾಯತೇ ॥೧೦೭॥

ಅಭಾಗ್ಯಾನಾಂ ತು ಸಂಸಾರಾದುಃಖಮೇವ ಪ್ರಜಾಯತೇ ।
ತದೇಕಪ್ರವಣಾನಾಂ ತು ವಿರತಾನಾಂ ನ ಸರ್ವಥಾ ॥೧೦೮॥

ವಿರತಿಶ್ಚ ಭವೇದೇವ ಕಾಲಭೇದೇ ತಥಾ ಸತಿ ।
ತೇನ ದುಃಖೇನ ಸಹಸಾ ವಿವೇಕೋ ನ ಮಹಾತ್ಮನಾಂ ॥೧೦೯॥

---

ಗಂಧರ್ವರೂ, ಸಿದ್ಧರೂ, ಇನ್ನೂ ಒಳಗೆ ವಿಚಾರಮಾಡಿದರೆ, ಮುನಿಜನಗಳೂ ಸಹ ಸಂಸಾರಿಗಳೇ ಹೊರತು ಸಂಸಾರದ ಬಂಧನಕ್ಕೆ ನಿಲುಕದವರಾರೂ ಇಲ್ಲ. ॥೧೦೫॥

ಈ ಸಂಸಾರವು ಅನಾದಿಯಿಂದಲೂ ಬಂದ ಮಾರ್ಗವಾಗಿರುವುದು. ಈ ಮಾರ್ಗವನ್ನು ತಡೆಯಲು ಜಾಗ್ರತೆಯಾಗಿ ಪ್ರಯತ್ನಿಸುವುದು ಅಸಾಧ್ಯವೇ ಸರಿ. ॥೧೦೬॥

ಈ ಸಂಸಾರ ಮಾರ್ಗವನ್ನು ಆ ಶಂಕರನೇ ಸೃಷ್ಟಿಮಾಡಿರುವನು. ಇದರಿಂದ ಕೇವಲ ಅಪಕಾರವೇ ಉಂಟಾಗುವುದೆಂದು ತಿಳಿಯಬೇಡ. ಧನ್ಯರಾದ ಮಹಾತ್ಮರು ಇದರಿಂದ ಉಪಕಾರವನ್ನೂ ಹೊಂದುವರು. ॥೧೦೭॥

ಭಾಗ್ಯಹೀನರಾದವರಿಗೆ ಮಾತ್ರ ಈ ಸಂಸಾರದಿಂದ ದುಃಖ ಉಂಟಾಗುವುದು. ಆದರೆ ಆ ಸಂಸಾರದಲ್ಲಿಯೇ ತತ್ಪರರಾಗಿರುವರಿಗಂತೂ ಸರ್ವಥಾ ಸುಖವು ದುರ್ಲಭವೇ ಸರಿ. ॥೧೦೮॥

ಹಾಗೆಯೇ ಕಾಲವು ಬದಲಾಯಿಸಿದರೆ ಅದರಲ್ಲಿ ವೈರಾಗ್ಯವೂ ಉಂಟಾಗುವುದು. ಮಹಾಪುರುಷರಿಗೂ ಮೊದಲು ಇದೇ ಸಂಸಾರ ದುಃಖದಿಂದ ವಿವೇಕವು ಲಭಿಸುವುದಿಲ್ಲ. ॥೧೦೯॥

ವಿವೇಕೋಽಪಿ ಭವೇದೇವ ಶಂಕರಾನುಗ್ರಹಾತ್ಪರಂ ।
ತೇನ ಸಂಸಾರದುಃಖಾನಿ ನ ಭವಂತ್ಯೇವ ಸರ್ವಥಾ ॥೧೧೦॥

ಸಂತಾನಾರ್ಥೇಽಪಿ ಸಂಸಾರೇ ಪ್ರವರ್ತಂತೇ ಮುನೀಶ್ವರಾಃ ।
ತೇನ ಸಂತತಿವೃದ್ಧಿಶ್ಚೇತ್ಸಾ ಸುಖಾಯ ಭವಿಷ್ಯತಿ ॥೧೧೧॥

ನ ಯಸ್ಯ ಸಂತತಿಸ್ತಸ್ಯ ಪಿತರೋ ದುಃಖಿತಾಸ್ತತಃ ।
ತದ್ದುಃಖನಾಶಸಂತಪ್ತಾ ಭವಿಷ್ಯಂತಿ ನ ಸಂಶಯಃ ॥೧೧೨॥

ಅತ್ರೈವೋದಾಹರಂತೀಮಮಿತಿವೃತ್ತಂ ಪುರಾತನಂ ।
ಗಂಧರ್ವನಗರೇ ಕಶ್ಚಿದ್ವಿಶ್ವಾವಸುರಿತಿ ಸ್ಥಿತಃ ॥೧೧೩॥

ತಸ್ಯೈಶ್ವರ್ಯಂ ಮಹತ್ತಸ್ಯ ಕಲತ್ರಾಣಿ ಬಹೂನ್ಯಪಿ ।
ತೇನ ಸಂಸಾರವಾರ್ತಾಪಿ ತ್ಯಕ್ತಾ ಪರಿಣಯೋತ್ತರಂ ॥೧೧೪॥

---

ಶಂಕರನ ಅನುಗ್ರಹವುಂಟಾದ ನಂತರವೇ ವಿವೇಕವೂ ಅವರಿಗೆ ಒದಗುವುದು. ಈ ವಿವೇಕ ಜ್ಞಾನದಿಂದ ಪುನಃ ಇವರಿಗೆ ಸಂಸಾರದ ದುಃಖಗಳು ಸರ್ವಥಾ ಬರಲಾರವು. ॥೧೧೦॥

ಮುನಿಶ್ರೇಷ್ಠರು ಪ್ರಜಾಸಂತತಿಗೋಸ್ಕರವೇ ಈ ಸಂಸಾರದಲ್ಲಿ ಪ್ರವರ್ತಿಸುವರು. ಇದರಿಂದ ಕೇವಲ ಸಂತತಿಯು ಮಾತ್ರ ವೃದ್ಧಿಯಾದರೆ ಅದು ಸುಖಕ್ಕೆ ಕಾರಣವಾಗುವುದು. ॥೧೧೧॥

ಮಕ್ಕಳಿಲ್ಲದವರ ಪಿತೃದೇವತೆಗಳು ನರಕವನ್ನು ಹೊಂದುವುದರಿಂದ ಆ ನರಕನಿವಾರಣೆಯು ಈ ಸಂಸಾರ ಮತ್ತು ಸಂತಾನ ಇವುಗಳಿಂದಲೇ ಆಗಬೇಕಾಗಿದೆ. ಇಲ್ಲದಿದ್ದರೆ ಆ ಪಿತೃದೇವತೆಗಳು ನಿಜವಾಗಿಯೂ ಈ ದುಃಖದಿಂದ ಸಂತಾಪಪಡುವರು. ॥೧೧೨॥

ಈ ವಿಷಯದಲ್ಲಿಯೇ ಒಂದು ಪುರಾತನವಾದ ಇತಿಹಾಸವುಂಟು. ಗಂಧರ್ವನಗರದಲ್ಲಿ ವಿಶ್ವಾವಸುವೆಂಬ ಒಬ್ಬ ರಾಜನಿದ್ದನು. ಅವನಿಗೆ ಬೇಕಾದಷ್ಟು ಐಶ್ವರ್ಯವೂ, ಅನೇಕ ಮಂದಿ ಪತ್ನಿಯರೂ ಇದ್ದರು. ಅವನು ಕಾರಣಾಂತರಗಳಿಂದ ಮದುವೆಯಾದ ಮೇಲೆ ಈ ಸಾಂಸಾರಿಕವಾದ ವಿಷಯಸುಖವನ್ನೇ ತ್ಯಾಗಮಾಡಿಬಿಟ್ಟನು. ॥೧೧೩-೧೧೪॥

ತತಸ್ತಸ್ಯ ಕಲತ್ರಾಣಾಂ ಸಂಸಾರೇಚ್ಛಾ ಮಹತ್ತರಾ ।
ಜಾತಾ ತಥಾಪಿ ತೈಃ ಸರ್ವೈಃ ಸಂತ್ರಾಸಾನ್ನ ಕೃತಾ ತದಾ ॥೧೧೫॥

ತದ್ಭರ್ತಾಽಪಿ ನ ಸಂಸಾರೇ ಕರೋತಿ ವಿರತಿಂ ತತಃ ।
ಅಕುರ್ವನ್ನಪಿ ಭಾರ್ಯಾಭಿಃ ಸಂಗಂ ತು ನ ಚಕಾರ ಸಃ ॥೧೧೬॥

ಶಿವಾರ್ಚನಪರೋ ನಿತ್ಯಂ ಸರ್ವದಾ ಶಿವಮಂದಿರೇ ।
ಚಕಾರ ವಸತಿಂ ತತ್ರ ನಿಶಾಪನಯನಂ ಚ ಸಃ ॥೧೧೭॥

ಶಿವಧ್ಯಾನಾನುರಕ್ತಸ್ಯ ಧ್ಯಾನಚ್ಛೇದಃ ಕದಾಪಿ ನ ।
ತಥಾ ಚ ತಸ್ಯ ನಾರೀಷು ನ ಜಾತಾ ರತಿಧೀರಪಿ ॥೧೧೮॥

ಏವಮೇವ ವಿನೀತೋಽಪಿ ಕಾಲಸ್ತೇನ ಮಹಾತ್ಮನಾ ।
ಶಿವಾರ್ಚನಾನ್ನ ವಿರತಿಃ ಕಲತ್ರಾಣಾಂ ಚ ತಸ್ಯ ತು ॥೧೧೯॥

---

ಆದರೆ ಅವನ ಪತ್ನಿಯರಿಗೆಲ್ಲಾ ಸಂಸಾರಸುಖಹೊಂದಿರಬೇಕೆಂಬ ಅಪೇಕ್ಷೆಯು ಬಹಳವಾಗಿದ್ದಿತು. ಆದರೂ ಅವರೆಲ್ಲರೂ ರಾಜನ ಭಯದಿಂದ ಏನನ್ನೂ ಮಾಡದವರಾದರು. ॥೧೧೫॥

ಅವರ ಪತಿಯಾದ ಈ ವಿಶ್ವಾವಸುಮಹಾರಾಜನು ಸಂಸಾರದಲ್ಲಿ ವಿರಕ್ತನಾಗಿಲ್ಲದಿದ್ದರೂ ಅವರೊಡನೆ ಸಂಗಮವನ್ನು ಮಾತ್ರ ಬಯಸುತ್ತಿರಲಿಲ್ಲ. ॥೧೧೬॥

ಅವನು ಶಿವಪೂಜಾತತ್ಪರನಾಗಿ ನಿತ್ಯವೂ ಶಿವಮಂದಿರದಲ್ಲಿಯೇ ವಾಸಮಾಡುತ್ತಾ ಅಲ್ಲಿಯೇ ರಾತ್ರಿಯನ್ನೆಲ್ಲಾ ಕಳೆಯುತ್ತಿದ್ದನು. ॥೧೧೭॥

ಸದಾ ಶಿವಧ್ಯಾನತತ್ಪರನಾಗಿದ್ದ ಆ ವಿಶ್ವಾವಸುವಿಗೆ ಯಾವಾಗಲೂ ಶಿವಧ್ಯಾನವು ಭಂಗವಾಗುತ್ತಿರಲಿಲ್ಲ. ಹಾಗೆಯೇ ಅವನಿಗೆ ತನ್ನ ಹೆಂಡತಿಯರಲ್ಲಿ ಸಂಭೋಗಾಭಿಲಾಷೆಯೇ ಹುಟ್ಟಲಿಲ್ಲ. ॥೧೧೮॥

ಈ ಮಹಾತ್ಮನು ಹೀಗೆಯೇ ಅನೇಕಕಾಲ ಕಳೆದರೂ ಶಿವಪೂಜೆಯಲ್ಲಿ ವಿರಕ್ತಿಯಾಗಲೀ, ಅಥವಾ ತನ್ನ ಸ್ತ್ರೀಯರಲ್ಲಿ ಸಂಭೋಗಾಭಿಲಾಷೆಯಾಗಲೀ ಹುಟ್ಟಲಿಲ್ಲ. ॥೧೧೯॥

ತದಾನೀಂ ಪಿತರಸ್ತಸ್ಯ ದ್ವಿಜವೇಷಮುವಾಪ್ಯ ತೇ ।
ಸಮಾಗತಾಃ ಶಿವಧ್ಯಾನನಿರತಾ ಭೂತಿಭೂಷಣಾಃ ॥೧೨೦॥

ರುದ್ರಾಕ್ಷಮಾಲಾವಲಯಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ಮಹಾದೇವ ಮಹೇಶೇತಿ ವದಂತಃ ಸಾದರಂ ಮುದಾ ॥೧೨೧॥

ತಾನ್ದೃಷ್ಟ್ವಾ ಶಿವಪೂಜಾಂತೇ ಪ್ರಹೃಷ್ಟಹೃದಯಸ್ತದಾ ।
ಆಸನಾನಿ ದದೌ ತೇಭ್ಯಃ ಪೂಜಯಾಮಾಸ ಸಾದರಂ ॥೧೨೨॥

ತತಃ ಪರಮುವಾಚಾಪಿ ತಾನ್ದೃಷ್ಟ್ವಾ ವಿನಯಾನ್ಮುದಾ ।
ಕುತಃ ಸಮಾಗತಂ ಕುತ್ರ ಕೃತಂ ಶಂಕರಪೂಜನಂ ॥೧೨೩॥

ಇತಿ ತದ್ವಚನಂ ಶ್ರುತ್ವಾ ತೇ ತಮಾಹುರ್ವಿಚಕ್ಷಣಾಃ ।
ಸ್ವಸ್ತಿಪೂರ್ವಕಮೇವಾದೌ ಶಿವಸ್ಮರಣಪೂರ್ವಕಂ ॥೧೨೪॥

---

ಆಗ ವಿಶ್ವಾವಸುವಿನ ಪಿತೃದೇವತೆಗಳು ಒಂದುಸಾರಿ ಬ್ರಾಹ್ಮಣವೇಷವನ್ನು ಧರಿಸಿ ಶಿವಧ್ಯಾನತತ್ಪರರಾಗಿ, ಭಸ್ಮವನ್ನು ಅಲಂಕರಿಸಿಕೊಂಡು ಈ ರಾಜನ ಸಮೀಪಕ್ಕೆ ಬಂದರು. ॥೧೨೦॥

ರುದ್ರಾಕ್ಷಮಾಲೆಯನ್ನೇ ಕಂಕಣವನ್ನಾಗಿ ಮಾಡಿಕೊಂಡು ಹಣೆಯಲ್ಲಿ ಭಸ್ಮ ತ್ರಿಪುಂಡ್ರಗಳನ್ನು ಹಚ್ಚಿಕೊಂಡು, ಬಾಯಲ್ಲಿ ಮಹಾದೇವ! ಮಹೇಶ! ಎಂಬ ಆ ಶಿವನ ದಿವ್ಯನಾಮಗಳನ್ನು ಉಚ್ಚರಿಸುತ್ತಾ ಸಂತೋಷವಿಶಿಷ್ಟರಾಗಿ ಅಲ್ಲಿಗೆ ಬಂದರು. ॥೧೨೧॥

ತನ್ನ ಶಿವಪೂಜಾಕರ್ಮವು ಮುಗಿದನಂತರ ಆ ವಿಶ್ವಾವಸುವು ಅವರನ್ನು ನೋಡಿ ಸಂತುಷ್ಟಾಂತರಂಗನಾಗಿ, ಅವರಿಗೆ ಉಚಿತವಾದ ಆಸನಗಳನ್ನು ಕೊಟ್ಟು ಆದರಪೂರ್ವಕವಾಗಿ ಅವರನ್ನು ಪೂಜಿಸಿದರು. ॥೧೨೨॥

ಅತಿಥಿ ಸತ್ಕಾರವಾದ ನಂತರ ಅವರನ್ನು ಕುರಿತು ವಿನಯದಿಂದ, ವಿಶ್ವಾವಸುವು "ತಾವು ಎಲ್ಲಿಂದ ಬರೋಣವಾಯಿತು? ಮುಂದಿನ ಪ್ರಯಾಣವು ಯಾವ ಕಡೆಗೆ? ತಮ್ಮ ಊರು ಯಾವುದು? ಶಂಕರನ ಪೂಜೆಯನ್ನು ತಾವು ಎಲ್ಲಿ ಮಾಡಿದಿರಿ?" ಎಂಬುದಾಗಿ ಕುಶಲ ಪ್ರಶ್ನೆಮಾಡಿದನು. ॥೧೨೩॥

ವಿಶ್ವಾವಸುರಾಜನ ಪ್ರಶ್ನೆಗಳನ್ನು ಕೇಳಿ ಬುದ್ಧಿವಂತರಾದ ಆ ಪಿತೃದೇವತೆಗಳು, ಮಂಗಳಾಶಂಸನಪೂರ್ವಕವಾಗಿ ಶಿವಸ್ಮರಣೆಯನ್ನು ಮಾಡುತ್ತಾ ವಿಶ್ವಾವಸುವೊಡನೆ ಹೀಗೆಂದರು. ॥೧೨೪॥

ಸುಮೇರುಶೃಂಗಾದಸ್ಮಾಭಿರಾಗತಂ ಶಿವಪೂಜನಂ ।
ಕೃತಂ ಕೈಲಾಸಸದನೇ ಶಿವಲಿಂಗೇ ಶಿವಾತ್ಮಕೇ ॥೧೨೫॥

ಶಿವಪ್ರಸಾದಸಂಪನ್ನಾಃ ಸರ್ವದಾ ಶಿವಪೂಜಕಾಃ ।
ನ ಚಾಸಾಧ್ಯಂ ಕಿಮಸ್ಮಾಕಂ ಭುವನೇಷು ವಿಶೇಷತಃ ॥೧೨೬॥

ಶಿವಪ್ರಸಾದೇನ ವಯಂ ಸುರಾಣಾಂ
ಪೂಜ್ಯಾಃ ಸದಾ ಪ್ರಾಪ್ತಸಮಸ್ತಕಾಮಾಃ ।
ಸರ್ವೇಷು ಲೋಕೇಷ್ವಪಿ ಸಂವಸಾಮಃ
ಸ್ಮೃತ್ಯಾ ಪರಂ ತತ್ರ ಗತಿರ್ನ ನೂನಂ ॥೧೨೭॥

ಅಸ್ಮಾಭಿರಾಗತಂ ದೈವಾತ್ಸ್ವರ್ಗಲೋಕಮಯತ್ನತಃ ।
ತತ್ರೇಂದ್ರೇಣಾರ್ಚಿತಾಃ ಸರ್ವೇ ವಯಂ ತಾವದ್ಯಥಾವಿಧಿ ॥೧೨೮॥

---

ನಾವು ಸುಮೇರು ಪರ್ವತಶಿಖರದಿಂದ ಹಿಂದಿರುಗಿ ಬಂದಿರುವೆವು. ಕೈಲಾಸ ಪರ್ವತದಲ್ಲಿರುವ, ಶಿವಸ್ವರೂಪವೆನಿಸಿದ ಆ ಪರಶಿವನ ಲಿಂಗವನ್ನು ಪೂಜೆಮಾಡಿದೆವು. ॥೧೨೫॥

ನಾವು ಯಾವಾಗಲೂ ಆ ಪರಶಿವನ ಅನುಗ್ರಹದಿಂದ ಯುಕ್ತರಾಗಿ ಶಿವಪೂಜಕರಾಗಿರುವೆವು. ನಮಗೆ ಈ ಭೂಮಂಡಲದಲ್ಲಿ ಅಸಾಧ್ಯವಾದ ಕಾರ್ಯವೇ ಯಾವುದೂ ಇರುವುದಿಲ್ಲ. ॥೧೨೬॥

ಆ ಪರಶಿವನ ಅನುಗ್ರಹದಿಂದ ನಾವು ದೇವತೆಗಳಿಗೂ ಪೂಜ್ಯರೆನಿಸಿ, ಸಮಸ್ತ ಇಷ್ಟಾರ್ಥಗಳನ್ನೂ ಹೊಂದಿರುವೆವು. ಆದರೆ ಸ್ಮೃತಿಯಲ್ಲಿ ಹೇಳಿದಂತೆ ನಮಗೆ ಉತ್ಕೃಷ್ಟವಾದ ಗತಿಯೇ ನಿಜವಾಗಿಯೂ ಇಲ್ಲವಾಗಿದೆ. (ಅಂದರೆ ನಮ್ಮ ವಂಶದಲ್ಲಿ ಪುತ್ರಸಂತಾನವಿಲ್ಲದೇ ಇರುವುದರಿಂದ ಅಪುತ್ರನಾದವನಿಗೆ ಗತಿಯಿಲ್ಲವೆಂಬ ಸ್ಮೃತಿಯಂತೆ ನಮಗೂ ಸ್ಥಿರವಾದ ಗತಿಯೇ ದೊರೆತಿಲ್ಲ.) ॥೧೨೭॥

ನಾವು ಇಲ್ಲಿಗೆ ಬರುವಾಗ ಹಾಗೆಯೇ ಅನಾಯಾಸವಾಗಿ ಸ್ವರ್ಗಲೋಕಕ್ಕೆ ಹೋಗಿದ್ದೆವು. ಅಲ್ಲಿ ನಮ್ಮೆಲ್ಲರನ್ನೂ ಕಂಡು, ದೇವೇಂದ್ರನು ವಿಧಿಪೂರ್ವಕವಾಗಿ ನಮ್ಮನ್ನು ಪೂಜಿಸಿದನು. ॥೧೨೮॥

ತತಃ ಪರಂ ಗತಂ ಸರ್ವೈರ್ಬ್ರಹ್ಮಲೋಕಮನಾಮಯಂ ।
ತತ್ರಾರ್ಚಿತಾಶ್ಚ ಸರ್ವೇಽಪಿ ಬ್ರಹ್ಮಣಾಪಿ ವಯಂ ತದಾ ॥೧೨೯॥

ತತ್ರಾದ್ಭುತಂ ತದಾ ದೃಷ್ಟಮಸ್ಮಾಭಿರ್ಬ್ರಹ್ಮಮಂದಿರೇ ।
ತದ್ವೃತ್ತಾಂತಂ ಪ್ರಯತ್ನೇನ ವಕ್ಷ್ಯಾಮಃ ಶೃಣು ಸಾದರಂ ॥೧೩೦॥

ತತ್ರ ಬ್ರಹ್ಮಸಭಾಮಧ್ಯೇ ಪ್ರಹೃಷ್ಟಾಃ ಸರ್ವದಾ ಸ್ಥಿತಾಃ ।
ಪ್ರಫುಲ್ಲವದನಾಂಭೋಜಾಃ ಶಿವಧ್ಯಾನಪರಾಯಣಾಃ ॥೧೩೧॥

ಶಿವತತ್ತ್ವಜ್ಞಾನರೂಪಸುಧಾಪಾನಾದಿಸುಂದರಾಃ ।
ತೇಷಾಂ ಪ್ರಭಾವಃ ಕೇನಾಪಿ ಜ್ಞಾತುಮೇವ ನ ಶಕ್ಯತೇ ॥೧೩೨॥

ಹೃದಿ ಧ್ಯಾತ್ವಾ ಮಹಾದೇವಮಾನಂದರಸಸಂಶ್ರಯಾಃ ।
ಶಿವಾನಂದನಿಮಗ್ನಾಸ್ತೇ ನಾನ್ಯಂ ಪಶ್ಯಂತಿ ಸರ್ವಥಾ ॥೧೩೩॥

---

ಅಲ್ಲಿಂದ ನಾವೆಲ್ಲರೂ ಆನಂದಪ್ರದವಾದ ಬ್ರಹ್ಮಲೋಕಕ್ಕೆ ಹೋದೆವು. ಅಲ್ಲಿಯೂ ಬ್ರಹ್ಮನು ನಮ್ಮೆಲ್ಲರನ್ನೂ ಕ್ರಮವಾಗಿ ಉಚಿತವಾದ ಉಪಚಾರಾದಿಗಳಿಂದ ಪೂಜಿಸಿದನು. ॥೧೨೯॥

ಆ ಬ್ರಹ್ಮಲೋಕದಲ್ಲಿ ಒಂದು ಅತ್ಯಾಶ್ಚರ್ಯಕರವಾದ ಸಮಾಚಾರವು ನಡೆಯಿತು. ಆ ವೃತ್ತಾಂತವನ್ನೇ ನಿನಗೆ ಪ್ರೀತಿಯಿಂದ ತಿಳಿಸುವೆವು ಕೇಳು. ॥೧೩೦॥

ಬ್ರಹ್ಮನ ಸಭಾಮಧ್ಯದಲ್ಲಿ ಸಂತೋಷಭರಿತರಾಗಿ ಶಿವಧ್ಯಾನಮಾಡುತ್ತಾ ಅರಳಿದ ಮುಖವೆಂಬ ಕಮಲಗಳಿಂದ ಶೋಭಿಸುತ್ತಿರುವವರೇ ಯಾವಾಗಲೂ ಇರುತ್ತಿರುವರು. ॥೧೩೧॥

ಆ ಪರಶಿವನ ತತ್ತ್ವಜ್ಞಾನವೆಂಬ ಅಮೃತಪಾನದಿಂದ ಸುಂದರರಾಗಿರುವ ಆ ಮಹಾನುಭಾವರ ಮಹಿಮೆಯನ್ನು ತಿಳಿಯುವುದೇ ಯಾರಿಂದಲೂ ಸಾಧ್ಯವಾಗಿಲ್ಲ. ॥೧೩೨॥

ಆ ಮಹಾದೇವನನ್ನು ಹೃದಯದಲ್ಲಿ ಯಾವಾಗಲೂ ಧ್ಯಾನಮಾಡುತ್ತಾ ಆನಂದರಸಪರಿಪೂರ್ಣರಾದ ಅವರು, ಶಿವಾನಂದದಲ್ಲಿ ಮಗ್ನರಾಗಿ, ಬೇರೆ ಯಾರನ್ನೂ ಯಾವ ರೀತಿಯಲ್ಲಿಯೂ ನೋಡುತ್ತಲೇ ಇರಲಿಲ್ಲ. ॥೧೩೩॥

ನ ಶೃಣ್ವಂತಿ ಕಥಾಮನ್ಯಾಂ ರಹಸ್ಯಂ ಶೈವಮುತ್ತಮಂ ।
ಶ್ರುತ್ವಾ ತತ್ವಕಥಾರೂಪಸುಧಯಾ ಹೃಷ್ಟಮಾನಸಾಃ ॥೧೩೪॥

ಪಂಚಾಕ್ಷರಜಪಾಸಕ್ತಾಃ ಶ್ರೀರುದ್ರಾಧ್ಯಯನಪ್ರಿಯಾಃ ।
ಭಸ್ಮೋದ್ಧೂಲಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥೧೩೫॥

ಶಿವಲಿಂಗಾನಿ ದಿವ್ಯಾನಿ ಕೋಮಲೈರ್ದಿವ್ಯಪಲ್ಲವೈಃ ।
ಕುಸುಮೈರಪಿ ಮಂದಾರತರುಜೈಃ ಪೂಜಯಂತಿ ತೇ ॥೧೩೬॥

ತೇ ಧನ್ಯಾಃ ಕೃತಕೃತ್ಯಾಶ್ಚ ಸರ್ವೇ ವೈಕ್ಲವ್ಯವರ್ಜಿತಾಃ ।
ಶೋಕವಾರ್ತಾಂ ನ ಜಾನಂತಿ ಶೋಕಸ್ತೇಷಾಂ ನ ಸರ್ವಥಾ ॥೧೩೭॥

ತತ್ರ ಕೇಚನ ವಿಶ್ವೇಶಂ ಪೂಜಯಂತೋಽಪಿ ಸಾಧನೈಃ ।
ನಿಸ್ತೇಜಸ್ಕಾಃ ಸ್ಥಿತಾಸ್ತೇಷಾಂ ಮನಃ ಶೋಕಸಮನ್ವಿತಂ ॥೧೩೮॥

---

ಬೇರೆ ಯಾವ ದೇವತೆಗಳ ಕಥೆಯನ್ನೂ ಕೇಳದೆ ಆ ಶಿವನ ರಹಸ್ಯವೇ ಉತ್ತಮವಾದುದೆಂದು ಭಾವಿಸುತ್ತಾ ಆ ಶಿವತತ್ವ ಕಥಾರೂಪವಾದ ಅಮೃತಪಾನ ದಿಂದಲೇ ಯಾವಾಗಲೂ ಸಂತುಷ್ಟಾಂತರಂಗರಾಗಿರುವರು. ॥೧೩೪॥

ಸದಾ ಶಿವಪಂಚಾಕ್ಷರಮಂತ್ರಜಪದಲ್ಲಿಯೇ ತತ್ಪರರಾಗಿ, ರುದ್ರಾಧ್ಯಾಯವನ್ನು ಅಧ್ಯಯನ ಮಾಡುವುದರಲ್ಲಿಯೇ ಪ್ರೀತಿಯುಳ್ಳವರಾಗಿ, ಮೈಗೆಲ್ಲಾ ಭಸ್ಮೋ ದ್ಧೂಲನ ಮಾಡಿಕೊಂಡು, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ ಸದಾ ಶಿವಧ್ಯಾನ ದಲ್ಲಿಯೇ ಮಗ್ನರಾಗಿರುವರು. ॥೧೩೫॥

ದಿವ್ಯವೂ ಕೋಮಲವೂ ಆದ ಪತ್ರೆಗಳಿಂದಲೂ, ಮಂದಾರವೃಕ್ಷದ ದಿವ್ಯ ವಾದ ಪುಷ್ಪಗಳಿಂದಲೂ, ಅವರು ಯಾವಾಗಲೂ ಆ ದಿವ್ಯವಾದ ಶಿವಲಿಂಗಗಳನ್ನು ಅವಿಚ್ಛಿನ್ನವಾಗಿ ಪೂಜೆಮಾಡುತ್ತಿರುವರು. ॥೧೩೬॥

ಅವರೇ ಧನ್ಯರು ಮತ್ತು ಕೃತಕೃತ್ಯರು. ಅವರು ಯಾವಾಗಲೂ ದುಃಖಕ್ಕೆ ವಶರಾಗದೆ ಆ ಶೋಕಸಮಾಚಾರವನ್ನೇ ತಿಳಿಯದಂತಿರುವರು. ಅವರಿಗೆ ಎಂದಿಗೂ ಶೋಕವೇ ಉಂಟಾಗುವುದಿಲ್ಲ. ॥೧೩೭॥

ಅವರಲ್ಲಿ ಕೆಲವರು ಮಾತ್ರ ಸಕಲ ಸಾಮಗ್ರಿಗಳಿಂದಲೂ ವಿಶ್ವೇಶ್ವರನನ್ನು ಪೂಜೆಮಾಡುತ್ತಿದ್ದರೂ, ತೇಜೋಹೀನರಾಗಿರುವರು. ಅವರ ಮನಸ್ಸು ಏಕೋ ಶೋಕಕ್ಕೊಳಗಾಗಿರುವುದು. ॥೧೩೮॥

ತದ್ವೀಕ್ಷಣೇನ ಸ್ವಸ್ಥಂ ಚ ಖಿನ್ನಮೇವ ಹಿ ನೋ ಮನಃ ।
ತದಾ ಪೃಷ್ಟೋ ವಿಧಿಃ ಕೇ ತೇ ಖಿನ್ನಾ ಇತ್ಯಸ್ಮದಾದಿಭಿಃ ॥೧೩೯॥

॥ ಬ್ರಹ್ಮೋವಾಚ ॥

ಶೃಣುಧ್ವಂ ಸಾವಧಾನೇನ ವಕ್ಷ್ಯತೇ ಕ್ಲೇಶಕಾರಣಂ ।
ಏತದ್ದೇಶೇ ಸಮುತ್ಪನ್ನಃ ಕಶ್ಚಿಚ್ಛಿವಪರಾಯಣಃ ॥೧೪೦॥

ವಿಶ್ವಾವಸುರಿತಿ ಖ್ಯಾತಃ ಸರ್ವಸೌಭಾಗ್ಯಸಂಯುತಃ ।
ಸದಾ ಶಂಕರಪೂಜಾಯಾಂ ನಿರತೋ ಭಸ್ಮಭೂಷಿತಃ ॥೧೪೧॥

ಕ್ಷಣಾರ್ಧಸ್ಯಾಪಿ ನ ಲಯೋ ವಿನಾ ಶಂಕರಪೂಜಯಾ ।
ನಿತ್ಯಂ ಶಿವಾರ್ಚನೇನೈವ ವಯಸ್ತೇನ ವಿನೀಯತೇ ॥೧೪೨॥

---

ಅವರನ್ನು ನೋಡಿ ಸ್ವಸ್ಥವಾಗಿದ್ದ ನಮ್ಮ ಮನಸ್ಸೂ ಸಹ ಬಹಳ ದುಃಖಕ್ಕೊಳಗಾಯಿತು. ಆಗ ನಾವು ಪಿತಾಮಹನಾದ ಬ್ರಹ್ಮನನ್ನು ಕುರಿತು, "ಪ್ರಭೋ, ಇವರು ಯಾರು ? ಏಕೆ ಇಷ್ಟು ಖಿನ್ನರಾಗಿರುವರು ? ಇವರ ಸಮಾಚಾರವೇನೆಂಬುದಾಗಿ ಪ್ರಶ್ನೆಮಾಡಿದೆವು. ಆಗ ಬ್ರಹ್ಮನು ಹೀಗೆಂದನು. ॥೧೩೯॥

ಎಲೈ ಶಿವತತ್ತ್ವಪ್ರಜ್ಞಶ್ರೇಷ್ಠರೇ, ಸಾವಧಾನವಾಗಿ ಕೇಳಿರಿ. ಇವರ ಕ್ಲೇಶಕ್ಕೆ ಕಾರಣವೇನೆಂಬುದನ್ನು ತಿಳಿಸುವೆನು. ಭೂಲೋಕದಲ್ಲಿ ಶಿವವ್ರತಪರಾಯಣನಾದ ಒಬ್ಬ ಶೈವನು ಹುಟ್ಟಿರುವನು. ॥೧೪೦॥

ಅವನ ಹೆಸರು ವಿಶ್ವಾವಸುವೆಂದು ಪ್ರಸಿದ್ಧವಾಗಿರುವುದು. ಸಕಲ ಸೌಭಾಗ್ಯಸಂಪನ್ನನಾದ ಈತನು ಭಸ್ಮವನ್ನು ತನ್ನ ದೇಹಕ್ಕೆ ಅಲಂಕಾರಮಾಡಿಕೊಂಡು ಯಾವಾಗಲೂ ಆ ಶಂಕರನ ಪೂಜೆಯಲ್ಲಿಯೇ ಕಾಲಯಾಪನಮಾಡುತ್ತಿರುವನು. ॥೧೪೧॥

ಲೋಕ ಶಂಕರನನ್ನು ಪೂಜಿಸದೆ ಒಂದರ್ಧಕ್ಷಣವನ್ನೂ ವ್ಯರ್ಥವಾಗಿ ಅವನು ಕಳೆಯುತ್ತಿಲ್ಲ. ನಿತ್ಯವೂ ಆ ಶಿವಪೂಜೆಯಲ್ಲಿಯೇ ತನ್ನ ವಯಸ್ಸನ್ನೆಲ್ಲಾ ಕಳೆಯುತ್ತಿರುವನು. ॥೧೪೨॥

ನ ಜಹಾತಿ ಶಿವಧ್ಯಾನಂ ಕಾಮುಕಃ ಕಾಮಿನೀಮಿವ ।
ಯುವಾಪಿ ಕಾಮಿನೀಸಂಗಂ ನ ಜಾನಾತ್ಯೇವ ಸರ್ವಥಾ ॥೧೪೩॥

ಶತಂ ತಸ್ಯ ಕಲತ್ರಾಣಾಂ ತದ್ಯೌವನಮನುತ್ತಮಂ ।
ರೂಪಂ ಚ ತೇಷಾಮುತ್ಕೃಷ್ಟಂ ಭಾಗ್ಯಮಪ್ಯವಿನಶ್ವರಂ ॥೧೪೪॥

ಮಂದಿರಾಣ್ಯಪಿ ರತ್ನಾನಾಂ ಪ್ರಾಸಾದಾಶ್ಚ ವಿಶೇಷತಃ ।
ಗೃಹಶೋಭಾ ನ ವಚಸೋ ವಿಷಯಃ ಸರ್ವದಾ ಖಲು ॥೧೪೫॥

ವನಕ್ರೀಡಾಪಿ ಸದನೇ ತೇಷಾಂ ಯದಿ ಕದಾಚನ ।
ಇಚ್ಛಾ ಚೇತ್ತದ್ವನಂ ಸರ್ವಂ ಪುಷ್ಪವೃಂದವಿಜೃಂಭಿತಂ ॥೧೪೬॥

ಪುಷ್ಪಾಣಿ ಯಾನಿ ನಾನ್ಯತ್ರ ತಾನಿ ಪುಷ್ಪಾಣಿ ತದ್ವನೇ ।
ತಿಷ್ಠಂತಿ ಪುಷ್ಪಶೂನ್ಯಾಸ್ತು ತರವಸ್ತದ್ವನೇ ತು ನ ॥೧೪೭॥

---

ಕಾಮುಕನು ಕಾಮುಕಿಯಾದ ನಾರಿಯನ್ನು ಎಡಬಿಡದೆ ಆಶ್ರಯಿಸುವಂತೆ, ಇವನೂ ಆ ಶಿವಧ್ಯಾನವನ್ನು ಅನನ್ಯಮನಸ್ಕನಾಗಿ ನಡೆಸುತ್ತಿರುವನು. ತಾನು ವಯಸ್ಸಿನಲ್ಲಿ ಯುವಕನಾಗಿದ್ದರೂ ಸುಂದರಾಂಗಿಯರ ಸಮಾಗಮವನ್ನೇ ಮಾಡಲು ಇವನಿಗೆ ಮನಸ್ಸುಂಟಾಗಿಲ್ಲ. ॥೧೪೩॥

ಅವನಿಗೆ ನೂರುಮಂದಿ ಪತ್ನಿಯರಿರುವರು. ಅವರೆಲ್ಲರೂ ನಿರ್ದುಷ್ಟವೂ ಸರ್ವೋತ್ಕೃಷ್ಟವೂ ಆದ ಯೌವ್ವನದಿಂದ ತುಂಬಿ ತುಳುಕುತ್ತಿರುವರು. ದಿವ್ಯವಾದ ಸೌಂದರ್ಯವೂ ಅವರಲ್ಲಿ ಕಂಡುಬರುವುದು. ಎಂದಿಗೂ ನಾಶವೇ ಆಗದಿರುವಷ್ಟು ಭಾಗ್ಯವೂ ಅವರಿಗಿರುವುದು. ಅವರಿಗೆ ಏನೂ ಕಡಿಮೆಯಾಗಿಲ್ಲ. ॥೧೪೪॥

ರತ್ನಖಚಿತವಾದ ಅನೇಕ ದಿವ್ಯಪ್ರಾಸಾದಗಳೂ ದೊಡ್ಡದೊಡ್ಡ ಮನೆಗಳೂ ಅವನಿಗೆ ವಿಶೇಷವಾಗಿರುವುವು. ಆ ಮನೆಗಳ ಸೌಭಾಗ್ಯದ ವಿಷಯವನ್ನು ಮಾತುಗಳಿಂದ ತಿಳಿಸುವುದಕ್ಕೇ ಆಗುವುದಿಲ್ಲ. ॥೧೪೫॥

ಅವನೇನಾದರೂ ವನಕ್ರೀಡೆಯಾಡಲಪೇಕ್ಷೆಪಡುವುದಾದರೆ ಅವನ ಮನೆಯ ಸಮೀಪದಲ್ಲಿಯೇ ಇರುವ ಉಪವನದಲ್ಲಿ ಸಕಲ ಪುಷ್ಪಸಮೂಹಗಳೂ ದಿವ್ಯವಾಗಿ ಅರಳಿ ಆನಂದವನ್ನುಂಟುಮಾಡಲು ಸಿದ್ಧವಾಗಿರುತ್ತವೆ. ॥೧೪೬॥

ಅವನ ಉದ್ಯಾನವನದಲ್ಲಿರುವ ಪುಷ್ಪಗಳು ಮತ್ತೆಲ್ಲಿಯೂ ದೊರೆಯಲಾರವು. ಆ ಉದ್ಯಾನದಲ್ಲಿ ಹೂವುಗಳನ್ನು ಬಿಡದ ಮರಗಳೇ ಇಲ್ಲ. ॥೧೪೭॥

ಮಣಿಸೋಪಾನಸಂಬದ್ಧದೀರ್ಘಿಕಾಃ ಸಂತಿ ಕೋಟಿಶಃ ।
ತಸ್ಮಿನ್ವನೇ ಸುರನದೀ ಕುಲ್ಯಾರೂಪೇಣ ವರ್ತತೇ ॥೧೪೮॥

ಪ್ರತಿಪಾದಪಮೂಲೇಽಪಿ ಪೂರ್ಣಾ ಗಂಗಾ ಸ್ವತಸ್ತತಃ ।
ತದ್ವನಾದ್ಬಹಿರಾಯಾತಿ ದೀರ್ಘಿಕಾಸ್ವಪಿ ತಿಷ್ಠತಿ ॥೧೪೯॥

ಸ್ರಗ್ರೂಪಾಣ್ಯೇವ ಪುಷ್ಪಾಣಿ ತಸ್ಮಿನ್ನುದ್ಯಾನಮಂಡಲೇ ।
ತತ್ರಾಸ್ತ್ಯೇಕಂ ಶಿವಸ್ಥಾನಂ ರತ್ನಮಂಡಲಮಂಡಿತಂ ॥೧೫೦॥

ರತ್ನಗೋಪುರಸಂಯುಕ್ತಂ ರತ್ನಪ್ರಾಕಾರಮಂಡಿತಂ ।
ರತ್ನನಂದಿಗಣಾಕೀರ್ಣಂ ರತ್ನನಂದಿಧ್ವಜಾನ್ವಿತಂ ॥೧೫೧॥

ತಸ್ಮಿನ್ನೇವ ಶಿವಸ್ಥಾನೇ ಲಿಂಗಂ ಮಣಿಮಯಂ ಮಹತ್ ।
ತಿಷ್ಠತ್ಯೇಕಂ ತದುತ್ಕೃಷ್ಟಂ ತದ್ದೇವೈರಪಿ ಪೂಜ್ಯತೇ ॥೧೫೨॥

---

ಅಲ್ಲಿ ರತ್ನಮಯವಾದ ಸೋಪಾನಗಳಿಂದ ಯುಕ್ತವಾದ ಅನೇಕ ಸರೋವರಗಳಿರುವುವು. ಆ ವನದಲ್ಲಿಯೇ ಗಂಗಾನದಿಯು ಒಂದು ಸಣ್ಣ ತೊರೆಯಂತೆ ಹರಿಯುತ್ತಿರುವುದು. ॥೧೪೮॥

ಪ್ರತಿಯೊಂದು ಮರದ ಬುಡದಲ್ಲಿಯೂ ಪೂರ್ಣವಾದ ಗಂಗಾನದಿಯು ಸ್ವತಃ ಹರಿಯುತ್ತಾ ಅಲ್ಲಿಂದ ಮುಂದೆ ಬಂದು, ಹೊರಹೊರಟು ಈ ಸರೋವರಗಳಲ್ಲಿಯೇ ಬಂದು ಸೇರುತ್ತದೆ. ॥೧೪೯॥

ಆ ಉದ್ಯಾನವದಲ್ಲಿರುವ ಹೂಗಳೆಲ್ಲವೂ ಮಾಲಾಕಾರವಾಗಿಯೇ ಇರುವುವು. ಅದೇ ಉದ್ಯಾನವನದಲ್ಲಿ ರತ್ನಸಮೂಹಗಳಿಂದ ಅಲಂಕೃತವಾಗಿರುವ ಒಂದು ಶಿವದೇವಾಲಯವಿದೆ. ॥೧೫೦॥

ಆ ದೇವಾಲಯಕ್ಕೆ ರತ್ನಮಯವಾದ ಗೋಪುರ, ರತ್ನಖಚಿತವಾದ ಪ್ರಾಕಾರ ಇವುಗಳು ಸದಾ ಅಲಂಕೃತಗಳಾಗಿರುವುವು. ರತ್ನಮಯವಾದ ನಂದಿಕೇಶ್ವರನ ಗಣಗಳಿಂದ ಈ ದೇವಾಲಯ ವ್ಯಾಪ್ತವಾಗಿರುವುದಲ್ಲದೇ, ರತ್ನದಿಂದಲೇ ನಿರ್ಮಿತವಾದ ನಂದಿಕೇಶ್ವರನ ಧ್ವಜವೂ ಶೋಭಿಸುತ್ತಿರುವುದು. ॥೧೫೧॥

ಅದೇ ದೇವಾಲಯದಲ್ಲಿಯೇ ಮಣಿಮಯವಾದ ಒಂದು ದೊಡ್ಡ ಶಿವಲಿಂಗವಿರುವುದು. ಆ ಉತ್ಕೃಷ್ಟವಾದ ಶಿವಲಿಂಗವನ್ನು ದೇವತೆಗಳೂ ಸದಾ ಪೂಜಿಸುತ್ತಿರುವರು. ॥೧೫೨॥

ನಾಗಲೋಕಾತ್ಸಮಾಗತ್ಯ ಶೇಷಸ್ತಲ್ಲಿಂಗಪೂಜನಂ ।
ಕರೋತಿ ಪ್ರಯತೋ ಭಕ್ತ್ಯಾ ರತ್ನೈರೇವ ಮುಹುರ್ಮುಹುಃ ॥೧೫೩॥

ತತ್ರ ವಿಶ್ವಾವಸುರ್ನಿತ್ಯಂ ಕರೋತಿ ಶಿವಪೂಜನಂ ।
ಆಪಾರವನಪುಷ್ಪೈಸ್ತೈಃ ಸ್ರಗ್ರೂಪೈರನ್ವಹಂ ಮುದಾ ॥೧೫೪॥

ಸ್ವತಸ್ತೇ ತರವಃ ಸರ್ವೇ ಪುಷ್ಪಾಣ್ಯಾನೀಯ ಕೋಟಿಶಃ ।
ಪ್ರಯಚ್ಛಂತಿ ಪ್ರಯತ್ನೇನ ಶಿವಲಿಂಗಾರ್ಚನಾಯ ತೇ ॥೧೫೫॥

ಸ ತೈರಭ್ಯರ್ಚನಂ ಕೃತ್ವಾ ತತ್ಫಲೈರಮೃತೋಪಮೈಃ ।
ಉಪಹಾರೈಶ್ಚ ಸಂಪೂಜ್ಯ ತಿಷ್ಠತ್ಯಾಹಾರವರ್ಜಿತಃ ॥೧೫೬॥

ನ ತಸ್ಯ ವಿಷಯೇ ವಾಂಛಾ ಕಲತ್ರಾಣಿ ನ ಪಶ್ಯತಿ ।
ಪುತ್ರಪೌತ್ರಾದಿವಾಂಛಾಪಿ ತಸ್ಯ ತಾವನ್ನ ಜಾಯತೇ ॥೧೫೭॥

---

ಆದಿಶೇಷನು ನಾಗಲೋಕದಿಂದ ಇಲ್ಲಿಗೆ ಬಂದು ಆ ಶಿವಲಿಂಗವನ್ನು ಪ್ರಯತ್ನಪೂರ್ವಕವಾಗಿ ಭಕ್ತಿಯಿಂದ ರತ್ನಗಳಿಂದಲೇ ಬಾರಿಬಾರಿಗೂ ಪೂಜೆಮಾಡುತ್ತಿರುವನು. ॥೧೫೩॥

ಆ ದೇವಾಲಯದಲ್ಲಿ ವಿಶ್ವಾವಸುರಾಜನು ತನ್ನ ಉದ್ಯಾನವನದಲ್ಲಿ ಬೆಳೆದ ಮಾಲಾರೂಪವಾದ ಹೂಗಳಿಂದ ಪ್ರತಿನಿತ್ಯವೂ ಸಂತೋಷದಿಂದ ಭಕ್ತಿಪೂರ್ವಕವಾಗಿ ಶಿವಪೂಜೆಯನ್ನು ಮಾಡುತ್ತಿರುವನು. ॥೧೫೪॥

ಆ ಉದ್ಯಾನದ ವೃಕ್ಷಗಳು ತಾವಾಗಿಯೇ ಶ್ರದ್ಧೆಯಿಂದ ಶಿವಲಿಂಗಪೂಜೆಗೋಸ್ಕರ ಕೋಟ್ಯಂತರ ಪುಷ್ಪಗಳನ್ನು ತೆಗೆದುಕೊಂಡು ತಂದುಕೊಡುತ್ತಿರುವುವು. ॥೧೫೫॥

ಆ ವಿಶ್ವಾವಸುರಾಜನು ಆ ಪುಷ್ಪಗಳಿಂದಲೂ, ಅಮೃತಸಮಾನವಾದ ಉಪಹಾರಗಳಿಂದಲೂ ಪರಶಿವನನ್ನು ನಿರಾಹಾರನಾಗಿ ಪೂಜಿಸುತ್ತಿರುವನು. ॥೧೫೬॥

ಅವನಿಗೆ ವಿಷಯಸುಖಗಳಲ್ಲಿ ಅಪೇಕ್ಷೆಯೇ ಇಲ್ಲವಾಗಿದೆ. ಅದರಿಂದಲೇ ತನ್ನ ಪತ್ನಿಯರನ್ನು ಆತನು ಪ್ರೀತಿವಿಶ್ವಾಸಗಳಿಂದ ಕಾಮಿಸುತ್ತಿಲ್ಲ. ಅವನಿಗೆ ಮಕ್ಕಳು ಮತ್ತು ಮೊಮ್ಮಕ್ಕಳು, ಇವರ ಅಪೇಕ್ಷೆಯೂ ಸಹ ಇಲ್ಲವಾಗಿದೆ. ॥೧೫೭॥

ತಸ್ಯೈತೇ ಪಿತರಃ ಸರ್ವೇ ತತ್ಕೃತೇಶಾರ್ಚನಾದಿಹ ।
ತಿಷ್ಠಂತ್ಯಥಾಪಿ ತೇ ಖಿನ್ನಾಸ್ತಸ್ಯ ಸಂತತ್ಯಭಾವತಃ ॥೧೫೮॥

ಸಂತತ್ಯಭಾವೇ ತದ್ವಂಶೇ ನಿರುದ್ಧಂ ಶಿವಪೂಜನಂ ।
ತಸ್ಮಿನ್ನಿರುದ್ಧೇ ಪಾತಃ ಸ್ಯಾದಸ್ಮಾಲ್ಲೋಕಾದತಃ ಖಲು ॥೧೫೯॥

ಅಧಃಪಾತಭಯಾದೇತೇ ಖಿನ್ನಾಸ್ತಿಷ್ಠಂತಿ ಸರ್ವದಾ ।
ನ ಪಿಬಂತಿ ಸುಧಾಮೇತೇ ತೇನಾನಂದೋ ನ ಜಾಯತೇ ॥೧೬೦॥

ಶಿವಾರ್ಪಿತಾಪಿ ಸುಸುಧಾ ತೈರನ್ಯಸ್ಮೈ ಪ್ರದೀಯತೇ ।
ಕಿಂ ತಯಾ ಸುಧಯೇತ್ಯೇವ ಸುಧಾವಿಚ್ಛೇದದರ್ಶನಾತ್ ॥೧೬೧॥

ಗೃಹೀತಯಾಪಿ ಸುಧಯಾ ಕದಾಚಿನ್ನ ಸುಖೋದಯಃ ।
ತತ್ಸಂತತಿನಿರೋಧೇನ ದುಃಖಿತಂ ತನ್ಮನೋ ಯತಃ ॥೧೬೨॥

---

ಅವನು ಮಾಡಿದ ಶಿವಪೂಜಾಮಹಿಮೆಯಿಂದಲೇ ಅವನ ಪಿತೃಗಳಾದ ಇವರೆಲ್ಲರೂ ಈ ಲೋಕವನ್ನು ಹೊಂದಿರುವರು. ಆದರೂ ಆ ವಿಶ್ವಾವಸುವಿಗೆ ಸಂತತಿಯಿಲ್ಲದೇ ಇರುವುದರಿಂದ ಈ ರೀತಿ ಇವರು ಖಿನ್ನರಾಗಿರುವರು. ॥೧೫೮॥

ಅವನ ವಂಶದಲ್ಲಿ ಸಂತತಿಯೇ ಇಲ್ಲದೇ ನಿಂತುಹೋದರೆ ಮುಂದೆ ಆ ಶಿವಪೂಜೆಯೂ ನಿಂತುಹೋಗುವುದು. ಹಾಗೆ ಶಿವಪೂಜೆಯು ನಿಂತಮೇಲಂತೂ ಈ ಲೋಕದಿಂದ ಈ ಪಿತೃಗಳಿಗೆ ಅಧೋಲೋಕವಾಸವೇ ಪ್ರಾಪ್ತವಾಗುವುದು. ॥೧೫೯॥

ನಮಗೆ ಅಧೋಗತಿಯುಂಟಾಗುವುದೆಂಬ ಭಯದಿಂದ ಈ ಪಿತೃದೇವತೆಗಳು ಯಾವಾಗಲೂ ಖಿನ್ನರಾಗಿ ಅಮೃತವನ್ನೂ ಸಹ ಪಾನಮಾಡದೇ ಇರುವರು. ಇದರಿಂದ ಅವರಿಗೆ ಆನಂದವೇ ಉಂಟಾಗುತ್ತಿಲ್ಲ. ॥೧೬೦॥

ಇವರು ಆ ಪರಶಿವನಿಗೆ ನಿವೇದನಮಾಡಿದ ಅಮೃತವನ್ನು ಸಹ ಭುಂಜಿಸದೆ, ಖಿನ್ನರಾಗಿ ಇನ್ನುಮುಂದೆ ನಮ್ಮ ನಂಶದಲ್ಲಿ ಸಂತತಿಯೇ ಇಲ್ಲದಿರುವುದರಿಂದ ನಮಗೆ ನಿತ್ಯವೂ ದೊರೆಯುತ್ತಿದ್ದ ಈ ಅಮೃತವು ನಿಂತುಹೋಗುವುದೆಂದು ತಿಳಿದು, ಉದಾಸೀನತೆಯಿಂದ ಆ ಅಮೃತವನ್ನು ಬೇರೆಯವರಿಗೆ ಕೊಡುತ್ತಿರುವರು. ॥೧೬೧॥

ಒಂದುವೇಳೆ ಈಗ ನಾವು ಈ ಅಮೃತವನ್ನು ಪಾನಮಾಡಿದರೂ, ಮುಂದೆ ನಮಗೆ ಇದೇ ರೀತಿಯಾಗಿ ಅಮೃತಪಾನಮಾಡಿಸುವ ನಮ್ಮ ಸಂತತಿಯು ನಮ್ಮ

ಅಮುಮರ್ಥಂ ನ ಜಾನಾತಿ ಸ ವಿಶ್ವಾವಸುರೀಶ್ವರಂ ।
ಪೂಜಯನ್ನನಿಶಂ ತಸ್ಯ ನಾಸ್ತಿ ಸಂಸಾರವಾಸನಾ ॥೧೬೩॥

ಸ ಶಿವಾರ್ಚನಪೀಯೂಷಪಾನಪೀನೋ ನಿರಂತರಂ ।
ತೇನಾಹಾರರಸಸ್ತಾವನ್ನ ಜ್ಞಾತೋಽಪಿ ಕದಾಚನ ॥೧೬೪॥

ಆಹಾರಸೇವನೇನೈವ ಯದಿ ಪುಷ್ಟಾ ಭವೇತ್ತನುಃ ।
ತದಾ ರತಿಃ ಕಲತ್ರೇಷು ಪುಂಸಾಂ ಭವತಿ ವಸ್ತುತಃ ॥೧೬೫॥

ಆಹಾರೋಽಪಿ ನ ರೋಚತೇ ಖಲು ಸದಾ ವಿಶ್ವೇಶಪೂಜಾರತೇ
ಚಿತ್ತೇ ತುಚ್ಛಮತಿಶ್ಚ ಭೋಗವಿಷಯೇ ನಾರೀಜನೇ ದುರ್ಜನೇ ।
ಧನ್ಯಾನಾಂ ಶಿವಲಿಂಗಮಾತ್ರಭಜನೈರ್ನಿತ್ಯಂ ವಯೋ ಯೌವನಂ
ತತ್ತಾವದ್ಧನಮಿತ್ಯವೈಮಿ ಮಹತಾಂ ವಿಶ್ವೇಶ್ವರಾರಾಧನಂ ॥೧೬೬॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ವಿಶ್ವಾವಸುಗಂಧರ್ವಚಾರಿತ್ರವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ವಂಶದಲ್ಲಿ ಇಲ್ಲದಿರುವುದರಿಂದ ನಮಗೆ ಯಾವ ಸುಖವುಂಟಾದೀತೆಂದು ಅವರ ಮನಸ್ಸು ತುಂಬಾ ದುಃಖಕ್ಕೊಳಗಾಗಿದೆ. ॥೧೬೨॥

ವಿಶ್ವಾವಸುರಾಜನಾದರೋ ಈ ಪರಮಾರ್ಥವನ್ನರಿಯದೆ ಸಂಸಾರದಲ್ಲಿ ಸ್ವಲ್ಪವೂ ಅನುರಕ್ತನಾಗದೆ ಸದಾ ಪರಶಿವನನ್ನು ಪೂಜಿಸುವುದರಲ್ಲಿಯೇ ತತ್ಪರನಾಗಿರುವನು. ॥೧೬೩॥

ಅನವರತವೂ ಆ ಶಿವಪೂಜಾಮೃತವನ್ನು ಪಾನಮಾಡುವುದರಲ್ಲಿಯೇ ತೃಪ್ತನಾಗಿ ಕೊಬ್ಬಿರುವ ಆ ವಿಶ್ವಾವಸುವಿಗೆ ಆಹಾರದ ರುಚಿಯೇ ತಿಳಿಯದಾಗಿದೆ.॥೧೬೪॥

ಕೇವಲ ಆಹಾರರಸವನ್ನು ಉಪಭೋಗಿಸುವುದರಿಂದಲೇ ಈ ಶರೀರವು ಪುಷ್ಟವಾಗುವುದಾದರೆ, ಆಗ ಮಾನವರಿಗೆ ತಮ್ಮ ಸ್ತ್ರೀಯರಲ್ಲಿ ಸ್ವಭಾವವಾಗಿಯೇ ರತಿಕ್ರೀಡಾಭಿಲಾಷೆಯುಂಟಾಗುವುದು. ॥೧೬೫॥

ಯಾವಾಗಲೂ ಆ ವಿಶ್ವೇಶ್ವರನ ಪೂಜೆಯಲ್ಲಿಯೇ ಆಸಕ್ತವಾಗಿರುವ ಮನಸ್ಸಿಗೆ ಆಹಾರವೂ ರುಚಿಸುವುದಿಲ್ಲ. ಅವನಿಗೆ ಸ್ತ್ರೀಜನರು ದುಷ್ಟಸ್ವಭಾವದವರೆಂದು

ತಿಳಿದು ಅವರ ಸಂಭೋಗಾದಿ ವಿಷಯಗಳಲ್ಲಿ ತುಚ್ಛವಾದ ಮನೋಭಾವನೆಯುಂಟಾಗಿರುವುದು. ಧನ್ಯರಾದವರಿಗೆ ಮಾತ್ರ ಆ ಶಿವಲಿಂಗಪೂಜೆ ಮತ್ತು ಶಿವಭಜನೆ, ಇವುಗಳಿಂದಲೇ ನಿತ್ಯವೂ ಕಾಲ ಕಳೆಯುವುದು. ಅದು ಯುಕ್ತವೇ ಸರಿ. ಮಹಾಪುರುಷರಾದವರಿಗೆ ಆ ವಿಶ್ವೇಶ್ವರನ ಪೂಜೆಯೇ ಉತ್ಕೃಷ್ಟವೂ ಸರ್ವೋತ್ತಮವೂ ಆಗಿರುವುದೆಂದು ನಾನು ತಿಳಿಯುವೆನು." ಎಂದು ಬ್ರಹ್ಮನು ಹೇಳಿದ ಮಾತನ್ನು ಕಿನ್ನರನು ರಾಜಪುತ್ರಿಗೆ ಹೇಳಿದನೆಂದು ಯಾಜ್ಞವಲ್ಕ್ಯಮಹಾಮುನಿಯು ಜನಕರಾಜನಿಗೆ ತಿಳಿಸಿದನು. ||೧೬೬||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹರಸಂಜ್ಞಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ

ವಿಶ್ವಾವಸುವೆಂಬ ಗಂಧರ್ವನ ಚರಿತ್ರೆಯ ವರ್ಣನೆಯೆಂಬ

ಮೂವತ್ತುಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಚತುಸ್ತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಯಮಪ್ಯತಿದುಃಖಿತಾಃ ।
ಬ್ರಹ್ಮಲೋಕೇಪಿ ನ ಸುಖಂ ಕಿಮೇವಮಿತಿ ವಿಸ್ಮಿತಾಃ ॥೧॥

ಅತಃ ಸಂತತಿರತ್ಯಂತಂ ಪಾವನಾ ಶುದ್ಧವಂಶಜಾ ।
ಸಂಪಾದನೀಯಾ ಯತ್ನೇನ ವಿದ್ಯಾ ವಿನಯಸಂಯುತಾ ॥೨॥

ಶಾಂಭವೀ ಸಂತತಿರ್ಭಾಗ್ಯೈರ್ಯದಿ ತಾವದ್ಭವಿಷ್ಯತಿ ।
ತಯಾ ಶಂಕರಪೂಜಾಯಾಂ ತುಷ್ಟೋ ಭವತಿ ಶಂಕರಃ ॥೩॥

---

## ಮೂವತ್ತುನಾಲ್ಕನೆಯ ಅಧ್ಯಾಯ

ಹೀಗೆಂದ ಆ ಬ್ರಹ್ಮನ ಮಾತನ್ನು ಕೇಳಿ ನಾವು ಬಹಳ ಚಿಂತೆಗೊಳಗಾದೆವು. ನಮಗೆ ಈ ಬ್ರಹ್ಮಲೋಕದಲ್ಲಿಯೂ ಸುಖವು ದೊರೆಯಲಾರದೆ? ಎಂದು ತಿಳಿದು ತುಂಬಾ ಆಶ್ಚರ್ಯಪಟ್ಟೆವು. ಎಂದು ಪಿತೃದೇವತೆಗಳು ವಿಶ್ವಾವಸುವಿಗೆ ಹೇಳಿ, ॥೧॥

ಆದುದರಿಂದ ನಿನಗೆ ಅತಿಶುದ್ಧವಾದ ಸಂತಾನವು ಅವಶ್ಯಕ. ಆ ಸಂತತಿಯು ವಿದ್ಯಾಸಂಪನ್ನವಾಗಿಯೂ ನಮ್ರತೆಯುಳ್ಳದ್ದಾಗಿಯೂ ಇರಬೇಕು. ಎಂದರು. ॥೨॥

ಶಾಂಭವೀ ವಿಭೂತಿಯು ಅದೃಷ್ಟವಶದಿಂದ ಲಭಿಸಿದ್ದೇ ಆದರೆ, ಅಂತಹ ಶೈವಭಕ್ತಿಯುಳ್ಳ ಸಂತತಿಯಿಂದ ಶ್ರೀಶಿವನಿಗೆ ಪೂಜೆ ನಡೆಯುವುದು. ಆಗ ಪರಮೇಶ್ವರನು ತುಷ್ಟನಾಗುತ್ತಾನೆ. ॥೩॥

ಶೈವೀ ಸಂತತಿರ್ಯತ್ರ ತದ್ವಂಶೇ ನ ಶಿವಾರ್ಚನಂ ।
ತದಭಾವೇ ಪತಂತ್ಯೇವ ಪಿತರೋ ನರಕೇ ಪುನಃ ॥೪॥

ಶ್ರುತಿರ್ಯಾ ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರಿತ್ಯಪಿ ।
ತಥಾ ಪ್ರಜಾಪಿ ಯತ್ನೇನ ಸಾಧನೀಯೇತ್ಯಪಿ ಶ್ರುತಂ ॥೫॥

ತಸ್ಮಾದಧೀತ್ಯ ಸ್ನಾಯಾದಿತ್ಯಪಿ ವೇದಾತ್ಪ್ರಜಾಪರಂ ।
ಸಂಪಾದನೀಯಾ ಯತ್ನೇನ ಸಾ ಸುಖಾಯ ಭವಿಷ್ಯತಿ ॥೬॥

ಯದಿದಂ ಪೂಜ್ಯತೇ ಲಿಂಗಂ ತ್ವಯಾ ತಸ್ಯ ಪುನಃ ಕಥಂ ।
ಪೂಜಾ ಭವತಿ ದೇಹಾಂತೇ ತವ ಶೂನ್ಯಮಿದಂ ಭವೇತ್ ॥೭॥

ಪ್ರಜಾಶೂನ್ಯಂ ಗೃಹೇ ಲಿಂಗಂ ಯಸ್ಯ ತಾವದ್ಭವಿಷ್ಯತಿ ।
ತದ್ವಂಶಜಾ ಬ್ರಹ್ಮಲೋಕವಾಸಿನೋಪಿ ಚ್ಯವಂತಿ ತೇ ॥೮॥

---

ಯಾವ ಕುಲದಲ್ಲಿ ಶಿವಭಕ್ತನಾದ ಪುತ್ರನು ಜನಿಸುವುದಿಲ್ಲವೋ ಆ ಸಂತತಿಯಲ್ಲಿ ಶಿವಾರ್ಚನೆ ನಡೆಯುವುದಿಲ್ಲ. ಶೈವಸಂತತಿಯು ಶಿವಪೂಜಾಸಕ್ತವಾಗಿದ್ದರೆ ಆ ಸಂತತಿಯ ಪಿತೃಗಳು ಇನ್ನು ಪುನಃ ನರಕದಲ್ಲಿ ಬೀಳಲಾರರು. ॥೪॥

ಹುಟ್ಟಿತಕ್ಕ ಮನುಷ್ಯನು ಜನ್ಮದಿಂದಲೂ ಕರ್ಮದಿಂದಲೂ, ಆಚಾರದಿಂದಲೂ ಕೂಡ ಬ್ರಾಹ್ಮಣ್ಯವನ್ನು ಹೊಂದುವನು. ಹಾಗೆಯೇ ಪ್ರಯತ್ನಪಟ್ಟು ಸತ್ಪ್ರಜೆಯನ್ನೂ ಸಾಧಿಸಬೇಕು. "ಪ್ರಜಯಾಹಿ ಮನುಷ್ಯಃ ಪೂರ್ಣಃ" ಇತ್ಯಾದಿ ವೇದವಚನಗಳು ಇದಕ್ಕೆ ಪ್ರಮಾಣವಾಗಿವೆ. ॥೫॥

ಆದುದರಿಂದ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ಶ್ರುತಿವಚನವನ್ನನುಸರಿಸಿ ಬ್ರಾಹ್ಮಣನು ಅಧ್ಯಯನ ಮಾಡಬೇಕು. ಬಳಿಕ ಸ್ನಾತಕನಾಗಬೇಕು. ಅನಂತರ ಗೃಹಸ್ಥಾಶ್ರಮವನ್ನು ಆಶ್ರಯಿಸಿ ಸಂತತಿಯನ್ನು ಪಡೆಯಬೇಕು. ಆಗ ಅದು ಸುಖಕ್ಕೆ ತಿರುಗುತ್ತದೆ. ॥೬॥

ಈಗ ನೀನು ಮಕ್ಕಳಿಲ್ಲದವನಾಗಿರುವುದರಿಂದ, ನೀನು ನಡೆಸುತ್ತಿರುವ ಶಿವಾರಾಧನೆಯು ನಿನ್ನ ದೇಹಾನಂತರ ನಿಂತು ಹೋಗುವುದು. ಮುಂದೆ ನಿನ್ನ ವಂಶದಲ್ಲಿ ಶಿವಲಿಂಗ ಪೂಜೆಯು ನಡೆಯುವುದು ಹೇಗೆ? ॥೭॥

ಯಾವನ ಮನೆಯಲ್ಲಿ ಶಿವಲಿಂಗವಿದ್ದು ಸಂತಾನಾಭಿವೃದ್ಧಿ ಇರುವುದಿಲ್ಲವೋ

ಲಿಂಗರೂಪೋ ಮಹಾದೇವಃ ಪೂಜಾಭಾವನಿನಿಶ್ಚಯಾತ್ ।
ತತ್ಪೂಜಕಾಯ ಮುಕ್ತಿಂ ಚ ನ ಪ್ರಯಚ್ಛತಿ ಸರ್ವಥಾ ॥೯॥

ಅವಿಚ್ಛಿನ್ನಾಂ ಲಿಂಗಪೂಜಾಂ ಯಃ ಸಂಪಾದಯಿತುಂ ಕ್ಷಮಃ ।
ತೇನ ಪುತ್ರಃ ಸಮುತ್ಪಾದ್ಯಃ ತೇನ ತಾವನ್ನ ಮುಹ್ಯತಿ ॥೧೦॥

ಯದಿ ಶಂಕರಪೂಜಾಯಾಂ ವಿರತಃ ಸುರತೇ ರತಃ ।
ಸ ಯಾತಿ ನರಕಂ ಘೋರಮನ್ಯಥಾ ಸುಖಮುಶ್ನುತೇ ॥೧೧॥

ಪುತ್ರಾಃ ಸಂಪಾದನೀಯಾಶ್ಚ ಶಿವನಾಮಾಂಕಿತಾಃ ಪ್ರಿಯಾಃ ।
ಪೂಜಾ ಸ್ಯಾತ್ತೈರವಿಚ್ಛಿನ್ನಾ ಲಿಂಗೇ ತತ್ಪೂಜಿತೇ ಸದಾ ॥೧೨॥

---

ಅಂತಹವನ ಪಿತೃಗಳು ಬ್ರಹ್ಮಲೋಕವಾಸಿಗಳಾಗಿದ್ದರೂ ಜಾಗ್ರತೆ ನರಕಕ್ಕೆ ಬೀಳುವರು. ॥೮॥

ಶ್ರೀಮಹೇಶ್ವರನು ಲಿಂಗಸ್ವರೂಪನು. ಅಂತಹ ಶಿವಲಿಂಗಪೂಜೆಯು ಯಾವ ಭಕ್ತನಿಂದ ಮುಂದುವರಿಯುವುದಿಲ್ಲವೋ, ಅಂತಹ ಭಕ್ತನಿಗೆ ಮಹಾದೇವನು ಮುಕ್ತಿಯನ್ನು ಕೊಡುವುದಿಲ್ಲ. ॥೯॥

ಯಾವನು ಅನವರತವೂ ಶಿವಲಿಂಗಪೂಜೆಯನ್ನು ಮಾಡಲು ಸಮರ್ಥನಾಗುವನೆಂದರೆ, ಯಾವಾತನು ಸುಪುತ್ರನನ್ನು ಪಡೆಯುವನೋ ಅವನಿಂದ ಎಂದಿಗೂ ಶಿವಪೂಜೆಯು ನಿಲ್ಲಲಾರದು. ಹುಟ್ಟಿದ ಅಂತಹ ಮಗನಿಂದ ಅವನು ಯಾವಾಗಲೂ ಅಜ್ಞಾನ ನರಕದಲ್ಲಿ ಬೀಳಲಾರನು. ॥೧೦॥

ಶಿವಪೂಜೆಯನ್ನು ಬಿಟ್ಟು ಕೇವಲ ಸುರತೋತ್ಸವದಲ್ಲಿಯೇ ಆಸಕ್ತನಾದ ಮನುಷ್ಯನೂ ಘೋರವಾದ ನರಕಕ್ಕೆ ಹೋಗುತ್ತಾನೆ. ॥೧೧॥

ಪ್ರಿಯರಾದ ಮಕ್ಕಳನ್ನು ಪಡೆಯಬೇಕು. ಮತ್ತು ಅವರಿಗೆ ಶಿವನ ಹೆಸರನ್ನು ಇಡಬೇಕು. ಅವರು ಶಿವಲಿಂಗಕ್ಕೆ ಅನವರತವೂ ಪೂಜೆಮಾಡಬೇಕು. ಮಕ್ಕಳು ಹೀಗೆ ಶಿವಲಿಂಗಪೂಜೆಯನ್ನು ನಡೆಸಿಕೊಂಡು ಬಂದರೆ ಆತನು ಸದಾ ಲಿಂಗಪೂಜೆಮಾಡಿದಂತೆಯೇ ಆಯಿತು. ॥೧೨॥

ಇದಂ ಲಿಂಗಂ ಮಣಿಮಯಂ ತ್ವಯಾ ಸಂಪಾದಿತಂ ಖಲು ।
ಏತತ್ಪೂಜಾತ್ವವಿಚ್ಛಿನ್ನಾ ಕುಲೇ ತವ ಮಹಾಮತೇ ॥೧೩॥

ಅತಿಪ್ರಿಯತಮಂ ಲಿಂಗಂ ತವೇದಂ ಸರ್ವಕಾಮದಂ ।
ಸಂಪಾದಿತಂ ಪ್ರಯತ್ನೇನ ಪೂಜಾಹೀನಂ ಕಥಂ ಭವೇತ್ ॥೧೪॥

ಮಹತೀ ಯದಿ ಪೂಜಾ ಸ್ಯಾತ್ ಲಿಂಗೇಸ್ಮಿನ್ ಬಹುಸಾಧನೈಃ ।
ತದಾ ಮುಕ್ತೇ ತ್ವಯಿ ಸ್ನೇಹಂ ಮಹಾದೇವಃ ಕರಿಷ್ಯತಿ ॥೧೫॥

ಲಿಂಗಾರ್ಚನಮವಿಚ್ಛಿನ್ನಂ ತವ ಪುತ್ರೈಃ ಕೃತಂ ತತಃ ।
ಧನ್ಯೋಽಸೀತಿ ಮಹಾದೇವಸ್ತ್ವಯಿ ತುಷ್ಟೋ ಭವಿಷ್ಯತಿ ॥೧೬॥

ಭಾಗ್ಯೇನ ಶಾಂಭವಾಂಸ್ತ್ವಾವತ್ಸುತಾನ್ ಸಂಪಾದಯಾದರಾತ್ ।
ತೇ ಜಾತಾ ಶಿವವಿದ್ಯಾಂ ಚ ಸಂಪಾದ್ಯಾತಿಪ್ರಯತ್ನತಃ ॥೧೭॥

---

ನೀನು ಈ ರತ್ನಮಯವಾದ ಲಿಂಗವನ್ನು ಸಂಪಾದಿಸಿರುವೆಯಷ್ಟೇ. ನಿನ್ನ ವಂಶದಲ್ಲಿ ಇದರ ಅರ್ಚನೆಯು ವಿಚ್ಛಿತ್ತಿಯಿಲ್ಲದೇ ನಡೆಯಬೇಕು. ॥೧೩॥

ನೀನು ಸಂಪಾದಿಸಿರುವ ಈ ಲಿಂಗವು ನಿನಗೆ ಪ್ರಿಯತಮವಾದುದು. ಅಲ್ಲದೇ ಸಮಸ್ತ ಮಂಗಳದಾಯಕವೂ ಆಗಿದೆ. ಪ್ರಯತ್ನದಿಂದ ಸಂಪಾದನೆ ಮಾಡಿದ ಇದು ಮುಂದೆ ಪೂಜಾಹೀನವಾದರೆ ಆದು ಹೇಗೆ? ॥೧೪॥

ಈ ಶಿವಲಿಂಗವನ್ನು ಮಹತ್ತರಗಳಾದ ಸಾಮಗ್ರಿಗಳಿಂದ ಮುಂದೆಯೂ ಆರಾಧಿಸಿದರೆ, ಆಗ ಶ್ರೀಮಹಾದೇವನು ಮುಕ್ತನಾಗುವ ನಿನ್ನಲ್ಲಿ ಪ್ರೀತಿಯನ್ನಿಡುವನು. ॥೧೫॥

ನಿಮ್ಮ ಮಕ್ಕಳು ಅನವರತವಾಗಿ ಶಿವಪೂಜೆಯನ್ನು ಆಚರಿಸಿದರೆ ಆಗ ನೀನು ಕೃತಕೃತ್ಯನಾಗುವೆ. ಮಹೇಶ್ವರನೂ ಕೂಡ ನಿನ್ನಲ್ಲಿ ಸಂತೃಪ್ತಿ ಹೊಂದುವನು. ॥೧೬॥

ಪುಣ್ಯವಿಶೇಷದಿಂದ ನೀನು ಶಿವನಲ್ಲಿ ಭಕ್ತಿಯಿರುವ ಮಕ್ಕಳನ್ನು ಪಡೆ. ಅವರು ಅತಿ ಪ್ರಯತ್ನದಿಂದ ಶಿವವಿದ್ಯೆಯನ್ನು ಸಂಪಾದಿಸುವರು. ॥೧೭॥

ಶಿವಾರ್ಚನರತಾಸ್ತಾವದ್ಭವಿಷ್ಯಂತಿ ನ ಸಂಶಯಃ ।
ತಾನ್ ದೃಷ್ಟ್ವಾ ತವ ಸಂತೋಷೋ ವೃದ್ಧಿಂ ಯಾಸ್ಯತ್ಯಸಂಶಯಂ ॥೧೮॥

ಶಿವಭಕ್ತಪ್ರಿಯೋಽಸಿ ತ್ವಂ ಶಿವಾರ್ಚನರತಃ ಸದಾ ।
ಶಿವಾರ್ಚನರತಾನಸ್ಮಾನ್ ದೃಷ್ಟ್ವಾ ಪ್ರೀತೋಽಸಿ ಶಾಂಭವ ॥೧೯॥

ಶಿವಾರ್ಚಕತ್ವಂ ಸಂತೋಷಬೀಜಮಸ್ಮಾಸು ದೃಶ್ಯತೇ ।
ತ್ವಯಾ ಸಹ ನ ಸಂಬದ್ಧಃ ಕದಾಪಿ ಖಲು ಬಾಂಧವ ॥೨೦॥

ತಥಾಪಿ ಶಾಂಭವತ್ವೇನ ಸ್ನೇಹಃ ಖಲು ವಿಜೃಂಭತೇ ।
ಯಃ ಕಶ್ಚಿದಸ್ತಿ ಲೋಕೇಽಸ್ಮಿನ್ ಸಾಮಾನ್ಯೇನಾಪಿ ಶಾಂಭವಃ ॥೨೧॥

ತತ್ರಾಪಿ ಮಹತೀ ಪ್ರೀತಿಸ್ತವ ತಾವತ್ಪ್ರಜಾಯತೇ ।
ಯಃ ಶಾಂಭವೋತ್ತಮಃ ಸ್ವೀಯಸ್ತಸ್ಮಿನ್ ಪ್ರೀತಿಸ್ತವಾಧುನಾ ॥೨೨॥

---

ನಿನಗೆ ಜನಿಸುವ ಮಕ್ಕಳು ಶಿವಾರ್ಚನಾಸಕ್ತರಾಗುವರು ಎಂಬುದರಲ್ಲಿ ಸಂದೇಹವಿಲ್ಲ. ಅಂತಹವರನ್ನು ನೋಡುವ ನಿನ್ನ ಸಂತೋಷವು ಇಮ್ಮಡಿಯಾಗಿ ಹೆಚ್ಚುವುದು. ॥೧೮॥

ನೀನು ಶಿವಭಕ್ತರೊಳಗೆಲ್ಲಾ ಪ್ರಿಯತಮನಾಗಿದ್ದೀಯೆ. ಅಲ್ಲದೇ ಪರಮೇಶ್ವರನ ಆರಾಧನೆಯಲ್ಲಿ ಆಸಕ್ತನಾಗಿರುವೆ. ಎಲೈ ಶಾಂಭವನೇ, ಶಂಭುಪೂಜಾ ಪರಾಯಣರಾದ ನಮ್ಮನ್ನು ನೋಡಿ ನೀನು ಸಂತುಷ್ಟನಾಗಿರುವೆ. ॥೧೯॥

ನಮ್ಮಲ್ಲಿ ಸಂತೋಷಕ್ಕೆ ಕಾರಣವಾದ ಶಿವಪೂಜಕತೆಯು ನಿನಗೆ ತೋರುತ್ತಿದೆ. ಎಲೈ! ಬಂಧುವೇ, ನಿನ್ನೊಡನೆ ಯಾವಾಗಲೂ ನಾವು ಸೇರಿರಲಿಲ್ಲವಷ್ಟೇ! ನಮ್ಮ ಪರಿಚಯವೂ ನಿನಗಿಲ್ಲವಾಗಿದೆ. ॥೨೦॥

ಆದರೂ ನೀನು ಪರಶಿವಭಕ್ತನೆಂದು ನಿನ್ನಲ್ಲಿ ವಿಶ್ವಾಸವು ನಮಗೆ ಅಭಿವೃದ್ಧಿಯನ್ನು ಹೊಂದುತ್ತಿದೆ. ಈ ಲೋಕದಲ್ಲಿ ಯಾವನಾದರೂ ಸರಿ. ಸಾಮಾನ್ಯವಾಗಿ ಆತನು ಸದಾಶಿವಭಕ್ತನೆಂದರೆ ನಮಗೆ ಇಷ್ಟನಾದವನೆಂದು ತಿಳಿ. ॥೨೧॥

ಆದರಲ್ಲಿಯೂ ನಿನ್ನಲ್ಲಿ ನಮಗೆ ಬಹಳವಾದ ಪ್ರೀತಿಯುಂಟಾಗುತ್ತದೆ. ಮಹಾದೇವನ ಪ್ರೀತಿಪಾತ್ರನಾದವನು ಯಾವನಾದರೂ ಸರಿ, ಅವನು ತನ್ನವನೇ ಆಗುವನು. ಆತನಲ್ಲಿ ಪ್ರೀತಿಯು ನನಗೂ ನಿನಗೂ ಉಂಟು. ॥೨೨॥

ಕಥಂ ಪ್ರವೃದ್ಧಾ ನ ಭವೇತ್ ಶಾಂಭವಪ್ರವರಶ್ರುತಾ ।
ಶಂಕರಾರಾಧಕಾನ್ ಪುತ್ರಾನಪಾರಾನ್ ಪಶ್ಯ ಸಾದರಂ ॥೨೩॥

ಪೌತ್ರಾನ್ ಪ್ರಪೌತ್ರಾನನಿಶಂ ಸ ಸಂತೋಷೋ ಮಹಾನ್ ಖಲು ।
ಯಸ್ತು ಶಾಂಭವಪುತ್ರಾಣಾಂ ಸಭಾಂ ಪಶ್ಯಂತಿ ಮಾನವಃ ॥೨೪॥

ಸೋಽಪಿ ಮುಕ್ತೋ ಭವತ್ಯೇವ ತತ್ಪಿತಾ ಮುಕ್ತ ಏವ ಹಿ ।
ಧನ್ಯಸ್ತಸ್ಯ ಪಿತಾ ಧನ್ಯಾ ಜನನೀ ತಸ್ಯ ಸಂತತಂ ॥೨೫॥

ಯಸ್ಯ ಭಕ್ತಿರ್ಮಹಾದೇವೇ ತತ್ಕುಲಂ ಧನ್ಯಮುತ್ತಮಂ ।
ಯಸ್ಮಿನ್ ಕುಲೇ ನ ಸಂಜಾತಃ ಶಾಂಭವಾಗ್ರೇಸರೋತ್ತಮಃ ॥೨೬॥

ತತ್ಕುಲಂ ನರಕೇ ತಾವತ್ಪತಿತಂ ನಾತ್ರ ಸಂಶಯಃ ।
ತವ ಪುತ್ರಾ ಭವಿಷ್ಯಂತಿ ಶಾಂಭವಾ ಏವ ಸರ್ವಥಾ ॥೨೭॥

---

ಶಿವಾನುಗ್ರಹವುಳ್ಳವರ ಸಂತತಿಯು ಹೇಗೆ ತಾನೆ ಉತ್ತರೋತ್ತರಾಭಿವೃದ್ಧಿಯನ್ನು ಹೊಂದದೇ ಇದ್ದೀತು? ಶಂಕರಾರಾಧಕರ ಈ ಮಕ್ಕಳನ್ನಾದರೂ ನೋಡು. ಇವರು ಅಗಣಿತರಾಗಿದ್ದಾರೆ. ॥೨೩॥

ಮೊಮ್ಮಕ್ಕಳು, ಮರಿಮಕ್ಕಳು ಇವರನ್ನು ನೋಡಬಾರದೇ! ಮನುಷ್ಯನು ಯಾವನಾದರೂ ಶಿವನ ಸದಾಶ್ರಯವುಳ್ಳವರ ಈ ಮಕ್ಕಳ ಸಮೂಹವನ್ನು ನೋಡಿ ಸಂತೋಷಪಡದೇ ಇರಲಾರನು. ॥೨೪॥

ಹೀಗೆ ಶಾಂಭವ ಪುತ್ರರ ದರ್ಶನವನ್ನು ಮಾಡಿದವನೂ ಧನ್ಯನಾಗುವನು ಅವನ ತಂದೆಯೂ ತಾಯಿಯೂ ಕೂಡ ಕೃತಕೃತ್ಯರೆನಿಸುವರು. ॥೨೫॥

ಯಾವನಿಗೆ ಶಂಕರನಲ್ಲಿ ಭಕ್ತಿಯಿರುವುದೋ ಆತನ ಮನೆತನವು ಧನ್ಯವಾದದ್ದು. ಯಾವನ ವಂಶದಲ್ಲಿ ಶಾಂಭವಶ್ರೇಷ್ಠನು ಹುಟ್ಟುವುದಿಲ್ಲವೋ ಅದು ನರಕಕ್ಕೆ ಸಮಾನವಾದದ್ದು. ॥೨೬॥

ಪರಶಿವಭಕ್ತನು ಹುಟ್ಟದಿರುವ ಕುಲವು ನರಕದಲ್ಲಿ ಬೀಳುವುದು. ನಿನ್ನ ಮಕ್ಕಳು ನಿಶ್ಚಯವಾಗಿಯೂ ಪರಶಿವಭಕ್ತರೇ ಆಗುವರು. ಇದರಲ್ಲಿ ಸಂಶಯಬೇಡ. ॥೨೭॥

ನ ತತ್ರ ಸಂಶಯಃ ಕಾರ್ಯಸ್ತದ್ವಿಜಮಧುನೋಚ್ಯತೇ ।
ಭೂತಿರುದ್ರಾಕ್ಷಪೂತಾಂಗಾಮಂಗನಾಂ ಶಿವತತ್ಪರಾಂ ॥೨೮॥

ಋತುಕಾಲೇ ಶಿವಂ ಧ್ಯಾತ್ವಾ ಸುರತೈಃ ಪ್ರೀಣಯಸ್ವ ತಾಂ ।
ತೇನ ತೇ ಶಾಂಕರಾ ಏವ ಕುಮಾರಾಃ ಕುಶಲಾ ಅಪಿ ॥೨೯॥

ಭವಿಷ್ಯಂತಿ ನ ಸಂದೇಹೋ ಯಥಾ ತವ ಪಿತುರ್ಭವಾನ್ ।
ಏವಂ ಸತಿ ಸುಖಂ ಯತ್ತೇ ಸಂಭವತ್ಯಧುನಾ ಮುಹುಃ ॥೩೦॥

ತತಃ ಸಹಸ್ರಗುಣಿತಂ ಸುಖಂ ತಾವದ್ಭವಿಷ್ಯತಿ ।
ಇತಿ ತದ್ವಚನಂ ಶ್ರುತ್ವಾ ವಿಶ್ವಾವಸುರಘಾಪಹಂ ॥೩೧॥

ತಥಾಸ್ತ್ವಿತ್ಯಾಹ ತಾನಾದೌ ಪೂಜಯಾಮಾಸ ಸಾದರಂ ।
ತದ್ವಾಗಮೃತಧಾರಾಭಿಸ್ತರ್ಪಿತಾಃ ಪಿತರಸ್ತತಃ ॥೩೨॥

---

ಆ ವಿಷಯದಲ್ಲಿ ನಿನಗೆ ಸಂದೇಹ ಬೇಡ. ಕಾರ್ಯಸಿದ್ಧಿಯ ಉಪಾಯವನ್ನು ಹೇಳುತ್ತೇನೆ ಕೇಳು. ವಿಭೂತಿ, ಮತ್ತು ರುದ್ರಾಕ್ಷಿ ಇವುಗಳಿಂದ ಭೂಷಿತಳಾದ ಶಿವ ಭಕ್ತಿಪರಾಯಣೆಯಾದ ಪತ್ನಿಯಲ್ಲಿ ನೀನು ರಮಿಸಬೇಕು. ಹೇಗೆಂದರೆ ಆಕೆಯು ಋತುಸ್ನಾನಮಾಡಿದ ಬಳಿಕ ನೀನು ಶ್ರೀಶಂಕರನನ್ನು ಧ್ಯಾನಿಸಿ ಬಳಿಕ ಸುರತ ಕ್ರೀಡೆಗಳಿಂದ ಆಕೆಯನ್ನು ಸಂತೋಷಗೊಳಿಸಬೇಕು. ಮುಂದೆ ಆವಳಿಂದ ಹುಟ್ಟುವ ಮಕ್ಕಳೆಲ್ಲರೂ ಶಂಕರನಲ್ಲಿ ನಿಜವಾದ ಪ್ರೀತಿಯುನ್ನಿಡುವರು. ಇದು ಸುಳ್ಳಲ್ಲ. ನಿನ್ನ ತಂದೆಯಿಂದ ಜನಿಸಿದ ನೀನೇ ಇದಕ್ಕೆ ಸಾಕ್ಷಿ. ಹೀಗೆ ಮಾಡಿದರೆ ನಿನಗೆ ಸುಖ ವುಂಟಾಗುವುದು. ॥೨೮-೨೯-೩೦॥

ಅಲ್ಲದೆ ಆ ಸಂತಾನದಿಂದ ಸಾವಿರದಷ್ಟು ಹೆಚ್ಚಿನ ಸುಖವು ನಿನಗೆ ಲಭಿಸು ವುದು." ಎಂದು ಹೇಳಿದ ಆ ಪಾಪನಾಶಕವಾದ ಮಾತನ್ನು ಕೇಳಿ ವಿಶ್ವಾವಸುವು ಆಗ ಎಚ್ಚೆತ್ತು ಯೋಚಿಸಿದನು. ॥೩೧॥

ಬಳಿಕ ವಿಶ್ವಾವಸುವು ಹಾಗೆಯೇ ಆಗಲೆಂದು ಒಪ್ಪಿಕೊಂಡು, ವೇಷಾಂತರ ದಿಂದ ಬಂದಿದ್ದ ಪಿತೃದೇವತೆಗಳನ್ನು ಪೂಜಿಸಿದನು. ಪಿತೃದೇವತೆಗಳು ಆತನ ವಚನಾಮೃತದಿಂದ ತೃಪ್ತಿಹೊಂದಿ ಹಿಂದಿರುಗಿದರು. ॥೩೨॥

ತೇ ಯಯುರ್ಬ್ರಹ್ಮಸದನಂ ಸಂತೋಷಪರಿಪೂರಿತಾಃ ।
ತತಃ ಸೋಽಪಿ ಕಳತ್ರೇಷು ಪವಿತ್ರೇಷ್ವತಿಶಾಂಭವಃ ॥೩೩॥

ಋತುಕಾಲೇ ರತಿಂ ಚಕ್ರೇ ಪುತ್ರಾರ್ಥಂ ಶಂಕರಂ ಸ್ಮರನ್ ।
ತತಃ ಪುತ್ರಾಃ ಸಮುತ್ಪನ್ನಾಃ ಶಂಕರಧ್ಯಾನತತ್ಪರಾಃ ॥೩೪॥

ಜಟಾಮಂಡಲವೀತಾಂಗಾಃ ಶಂಗಲಿಂಗಾರ್ಚನಪ್ರಿಯಾಃ ।
ಭೂತಿರೇಖಾಲಸದ್ಭಾಲಾನ್ ಬಾಲಾನಾಲೋಕ್ಯ ಕೇವಲಂ ॥೩೫॥

ಲಂಬಾಲಕಾನ್ ಪ್ರಹೃಷ್ಟೋಽಯಂ ಶಿವಾನಾಮಜಪೋತ್ಸುಕಾನ್ ।
ಉಮಾಕಾಂತ ಮಹಾದೇವ ನೀಲಕಂಠಸದಾಶಿವ ॥೩೬॥

ತ್ರಿಪುರಾಂತಕ ಶರ್ವೇತಿ ನಾಮ ತೇಷಾಂ ಚಕಾರ ಸಃ ।
ಸ ತಾನಧ್ಯಾಪಯಾಮಾಸ ಪುತ್ರಾನ್ ಶಿವರತಾನ್ ಪಿತಾ ॥೩೭॥

ಭೂತಿರುದ್ರಾಕ್ಷಭೂಷಾಢ್ಯಾನ್ ಗೌರೀಪರಿವೃಢೋತ್ಸುಕಾನ್ ।
ಆದಾವಧ್ಯಾಪಯಾಮಾಸ ರುದ್ರಾಧ್ಯಾಯಮಘಾಪಹಂ ॥೩೮॥

---

ಎಲ್ಲ ಪಿತೃ ದೇವತೆಗಳೂ ಬ್ರಹ್ಮಲೋಕಕ್ಕೆ ಬಹು ಹರ್ಷಿತರಾಗಿ ತೆರಳಿದರು. ಆ ವಿಶ್ವಾವಸುವೂ ಅವರ ಉಪದೇಶದಂತೆ ಪವಿತ್ರರಾದ ತನ್ನ ಹೆಂಡಿರಲ್ಲಿ ಋತುಕಾಲವನ್ನರಿತು, ಶ್ರೀಶಂಕರನನ್ನು ಧ್ಯಾನಮಾಡಿದವನಾಗಿ ರತಿಸುಖವನ್ನು ಅನುಭವಿಸಿದನು. ಹಾಗೆ ಆಚರಣೆಮಾಡಿದುದರಿಂದ ಆತನಿಗೆ ಶಂಕರಭಕ್ತರಾದ ಅನೇಕ ಮಕ್ಕಳು ಹುಟ್ಟಿದರು. ॥೩೩-೩೪॥

ಆ ಮಕ್ಕಳು ಜಡೆಗಳಿಂದ ಶೋಭಿತರಾಗಿದ್ದರು. ಮತ್ತು ಶಿವಲಿಂಗಾರ್ಚನೆಯಲ್ಲಿ ಪ್ರೀತಿಯುಳ್ಳವರಾಗಿದ್ದರು. ಹಣೆಯಲ್ಲಿ ವಿಭೂತಿ ರೇಖೆಯಿಂದ ಕಂಗೊಳಿಸುತ್ತಿದ್ದರು. ಅಂತಹವರನ್ನು ನೋಡಿ ಆತನು ಬಹು ಸಂತಸಗೊಂಡನು. ॥೩೫॥

ಜೋಲಾಡುವ ಮುಂಗೂದಲುಗಳಿಂದ ಶೋಭಿತರಾದ ಆ ಮಕ್ಕಳನ್ನು ನೋಡಿ ಸಂತೋಷಗೊಂಡ ಆತನು, ಉಮಾಕಾಂತ, ಮಹಾದೇವ, ನೀಲಕಂಠ, ಸದಾಶಿವ, ತ್ರಿಪುರಾಂತಕ, ಶರ್ವ, ಎಂದು ತನ್ನ ಆರು ಜನ ಮಕ್ಕಳಿಗೆ ಕ್ರಮವಾಗಿ ಆರು ಶಿವನಾಮಗಳನ್ನಿಟ್ಟನು. ॥೩೬-೩೭॥

ವಿಭೂತಿ, ರುದ್ರಾಕ್ಷಿ, ಇವುಗಳಿಂದ ಅಲಂಕೃತರಾದ ಮತ್ತು ಗೌರೀನಾಥನಲ್ಲಿ

ರುದ್ರಸೂಕ್ತಾನ್ಯಪಾರಾಣಿ ರುದ್ರನಾಮಾಂಕಿತಾನ್ಯಪಿ ।
ಶಿವಸ್ತೋತ್ರಾಣಿ ಪುಣ್ಯಾನಿ ತಥಾ ಶಿವಕಥಾಸ್ತಥಾ ॥೩೯॥

ಶಿವಧರ್ಮಾಂಶ್ಚ ವಿವಿಧಾನ್ ಸರ್ವಸಿದ್ಧಿಪ್ರದಾನ್ಯಪಿ ।
ತೇ ಸರ್ವೇ ಶಿವನಾಮಾಂಕವೇದಭಾಗಾವಬೋಧನೈಃ ॥೪೦॥

ಶಿವಾರ್ಚನಪರಾ ಏವ ಜಾತಾಃ ಸರ್ವೇ ಸುತಾಃ ಖಲು ।
ಶಿವಪೂಜಾರತಾನ್ ದೃಷ್ಟ್ವಾ ತಾನ್ ಪುತ್ರಾನತಿಶಾಂಭವಾನ್ ॥೪೧॥

ಪ್ರಹೃಷ್ಟಃ ಪರಮಂ ಪ್ರಾಪ ಸಂತೋಷಂ ಶಿವತತ್ಪರಃ ।
ವಿಲೋಕ್ಯ ತಾನ್ ಮುನೀಂದ್ರಾಂಶ್ಚ ಶಿವಪೂಜನತತ್ಪರಾನ್ ॥೪೨॥

ಸಂತೋಷಂ ಪರಮಂ ಪ್ರಾಪುಸ್ತದ್ದರ್ಶನವಿಶೇಷತಃ ।
ಕದಾಚಿತ್ಸ ಸ್ವಸುತಾನ್ ದೃಷ್ಟ್ವಾ ಶಿವಲಿಂಗಾರ್ಚನಪ್ರಿಯಾನ್ ॥೪೩॥

---

ಆಸಕ್ತರಾದ ಆ ಮಕ್ಕಳಿಗೆ ಮೊದಲು ಪವಿತ್ರವಾದ ರುದ್ರಾಧ್ಯಾಯವನ್ನು ಅಧ್ಯಯನ ಮಾಡಿಸಿದನು. ॥೩೮॥

ಆ ರುದ್ರಸೂಕ್ತಗಳು ಅನಂತಗಳಾಗಿವೆ. ಅವುಗಳೆಲ್ಲಾ ರುದ್ರನಾಮುಗಳಿಂದ ಕೂಡಿವೆ. ಅಂತಹ ರುದ್ರಸೂಕ್ತಗಳನ್ನೂ ಶಿವಸ್ತೋತ್ರಗಳನ್ನೂ ಶಿವಕಥೆಗಳನ್ನು ಅವರಿಗೆ ತಿಳಿಯುವಂತೆ ಹೇಳಿಸಿದನು. ॥೩೯॥

ಹಾಗೆಯೇ ಸರ್ವಸಿದ್ಧಿಪ್ರದಗಳಾದ ಶಿವಧರ್ಮಗಳನ್ನೂ, ಮತ್ತು ಶಿವನಾಮು ಗಳನ್ನು ಬೋಧಿಸುವಂತಹ ವೇದ ಮಂತ್ರಗಳನ್ನೂ ಅಧ್ಯಯನ ಮಾಡಿಸಿದನು. ಇದರಿಂದ ಮಕ್ಕಳೆಲ್ಲರೂ ಶಿವಪೂಜೆಯಲ್ಲಿಯೇ ನಿರತರಾಗುತ್ತ ಬಂದರು. ಅವರನ್ನು ನೋಡಿದ ವಿಶ್ವಾವಸುವಿಗೆ ತುಂಬಾ ಸಂತೋಷವಾಗುತ್ತಿತ್ತು. ಮುನೀಂದ್ರರಂತಿರುವ ಆ ಮಕ್ಕಳು ಸದಾ ಶಿವಪೂಜೆಯಲ್ಲಿ ತೊಡಗಿದ್ದರು. ಅವರನ್ನು ನೋಡಿದ ವಿಶ್ವಾವಸು ವಿಗೆ ಆಗಾಗ ಮಿತಿಮೀರಿದ ಸಂತೋಷವಾಗುತ್ತಿತ್ತು. ॥೪೦-೪೧-೪೨॥

ಋಷಿಗಳೂ ಕೂಡ ಅವರ ದರ್ಶನದಿಂದ ತುಂಬಾ ಸಂತೋಷಪಡುತ್ತಿದ್ದರು. ಒಂದು ಸಲ ಶಿವಪೂಜಕರಾದ ತನ್ನ ಮಕ್ಕಳನ್ನು ವಿಶ್ವಾವಸುವು ನೋಡಿದನು. ಬಳಿಕ, ॥೪೩॥

ಆಲಿಂಗ್ಯ ಸ್ವಸುತಾನಾಹ ಜೀವಜೀವೇತಿ ಸಾದರಂ ।
ತತಸ್ತೇಮಾಹುಸ್ತೇ ಪುತ್ರಾಃ ಪ್ರಣಮ್ಯ ಶಿರಸಾ ಮುದಾ ॥೪೪॥

ಕೃತಾಂಜಲಿಪುಟಾಃ ಸರ್ವೇ ದೃಷ್ಟ್ವಾ ತಾತಂ ಶಿವಾರ್ಚಕಂ ॥೪೫॥

ಪ್ರಸೀದ ತಾತ ವದ ನಃ ಶಿವಧರ್ಮಾನ್ ಸನಾತನಾನ್ ।
ಯದ್ಧರ್ಮಶ್ರವಣಾದೇವ ಶಿವಭಕ್ತಿಃ ಪ್ರಜಾಯತೇ ॥೪೬॥

ಜಾಯತೇ ಸಂಪದಂ ವೃದ್ಧಿರನುವಾರಮಸಂಶಯಂ ।
ಇತಿ ತದ್ವಚನಂ ಶ್ರುತ್ವಾ ಪುತ್ರಾಣಾಂ ವೇದಸಂಮಿತಂ ॥೪೭॥

ಪ್ರಹೃಷ್ಟೋ ಧನ್ಯಮಾತ್ಮಾನಮಮನ್ಯತ ಶಿವಾರ್ಚಕಃ ॥೪೮॥

ಧ್ಯೇಯಃ ಪರಂ ಶಂಕರ ಏವ ಧೀರೈ
ಹರ್ಾರ್ಯೈರಪಾರ್ಯೈರಭಿಸೇವಿತೋಽಯಂ ।
ಅಭೀಷ್ಟದಾನೋದ್ಯತ ಏವ ನಿತ್ಯಂ
ಹಾರಾಯ ಧೀರಾಯ ವಿಶಾರದಾಯ ॥೪೯॥

---

ಆತನು ತನ್ನ ಮಕ್ಕಳನ್ನು ಆಲಂಗಿಸಿಕೊಂಡು, ಮಕ್ಕಳೇ ಚಿರಕಾಲ ಬದುಕಿರಿ, ಎಂದು ಆಶೀರ್ವದಿಸಿದನು. ಆ ಮಕ್ಕಳು ಕೈಮುಗಿದು ವಂದಿಸಿ ತಮ್ಮ ತಂದೆಯೊಡನೆ ಹೀಗೆ ಹೇಳತೊಡಗಿದರು. ॥೪೪-೪೫॥

"ಎಲೈ ! ತಂದೆಯೇ ಪ್ರಸನ್ನನಾಗು. ಶಿವಧರ್ಮಗಳು ಅನಾದಿಯಾಗಿಯೂ ಪವಿತ್ರಗಳಾಗಿಯೂ ಇವೆ. ಅವುಗಳ ಶ್ರವಣಮಾತ್ರದಿಂದಲೇ ಶಿವನಲ್ಲಿ ನಮಗೆ ಭಕ್ತಿ ಯುಂಟಾಗುವುದು. ಅಂತಹ ಶಿವತತ್ತ್ವಗಳನ್ನು ನಮಗೆ ಈಗ ಉಪದೇಶಿಸು ॥೪೬॥

ನಿಶ್ಚಯವಾಗಿಯೂ ಆ ಶಿವಧರ್ಮಗಳನ್ನು ಕೇಳುವುದರಿಂದ ಸಂಪತ್ತು ಲಭಿಸುವುದು. ಇದ್ದ ಸಂಪತ್ತು ಅಭಿವೃದ್ಧಿಹೊಂದುವುದು. ಆದುದರಿಂದ ಅದನ್ನು ನಮಗೆ ಹೇಳು." ಎಂದು ಆ ಬಾಲಕರು ಕೇಳಿಕೊಳ್ಳಲು ಹಾಗೆ ಕೇಳಿದ ಮಕ್ಕಳ ಮಾತಿನಿಂದ ವಿಶ್ವಾವಸುವಿಗೆ ತುಂಬಾ ಸಂತೋಷವಾಯಿತು. ಆಗ ತಾನು ಧನ್ಯನಾದೆನೆಂದು ತಿಳಿದುಕೊಂಡನು. ॥೩೭-೪೮॥

ಶಂಕರನನ್ನು ಜಿತೇಂದ್ರಿಯರಾದ ಧೀರರು ಸದಾ ಚಿಂತಿಸಬೇಕು. ಅನೇಕ ಭಕ್ತರು ಸದಾ ಅವನನ್ನೇ ಸೇವಿಸುತ್ತಿರುವರು. ಧೀರನಾದ ಮಹಾದೇವನು ತನ್ನ ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುವನು. ॥೪೯॥

ಮತ್ತೇಭಪ್ರಗಳಂ ಮದೋದಕಧುನೀಕಲ್ಲೋಲಮಾಲಾಕುಲಾ
ನೀಲಾನೀಲಶಿಲೋಚ್ಚಯೋಚ್ಚಪರಿಘಾಸಂಘಾವೃತೈರ್ನಿರ್ವೃತೈಃ ।
ವ್ಯಾಪ್ತಾಪಾರಪರಾಣಿ ತಾನಿ ಕರಣಾನ್ಯುತ್ಸೃಜ್ಯ ಹಾರಾಃ ಪರಂ
ಹಾರಾಪಾರವಿಚಾರಸಾದರಮನೋ ವೃತ್ತ್ಯಾ ನಿವೃತ್ತ್ಯಾ ಚಿರಂ ॥೫೦॥

ಧ್ಯೇಯಃ ಶಂಕರಪಾದಪಂಕಜಮಜೋಪೇಂದ್ರಾದಿಭಿಃ ಸಾದರಂ
ಧ್ಯೇಯಂ ತತ್ಸದೃಶಂ ನ ವಸ್ತುಭವನೇ ದೃಷ್ಟಃ ಶ್ರುತಂ ವಾ ಸುತಾಃ ।
ತದ್ಧ್ಯಾನೇನ ಸುಖಾಂಬುರಾಶಿರಸಕೃತ್ ಸಂವರ್ಧತೇ ಮಾನಸೇ
ತಸ್ಮಾದೇವ ಭವಂತಿ ತಾವದಸಕೃತ್ ಲೋಕಾಃ ಸಮಸ್ತಾ ಅಪಿ ॥೫೧॥

ತತ್ಪಾದಾಂಬುಜಪೂಜನೇನ ಸುಕೃತಾಂಭೋಧಿಃ ಪ್ರವೃದ್ಧೋ ಭವೇತ್
ಪಾಪಾಪಾರದವಾನಲೋಽಪಿ ಸುತರಾಂ ಶಾಂತೋ ಭವೇದಂತತಃ ।
ಸಂಸಾರಾಶ್ರಮರಾಶಿನಾಶಕಮಿದಂ ವಿಶ್ವೇಶ್ವರಾರಾಧನಂ
ತತ್ಪುತ್ರಾಃ ಸುನಿದಾನಮೇವ ನಿಧಯಸ್ತೇನ ಪ್ರಸೂತಾಃ ಖಲು ॥೫೨॥

---

ಚೆನ್ನಾಗಿ ಮದಿಸಿರುವ ಆನೆಗಳ ಕುಂಭಸ್ಥಳಗಳಿಂದ ಹೊರಹೊಮ್ಮುವ ಮದಧಾರೆಗಳೆಂಬ ದೊಡ್ಡನದಿಯ ತರಂಗಗಳೋಪಾದಿಯಲ್ಲಿ ಶಿವನಿಗೆ ಜಲಾಭಿಷೇಕ ಮಾಡುತ್ತಾ, ಅನೇಕ ಶಿವಭಕ್ತರು ಇಂದ್ರನೀಲಪರ್ವತವನ್ನೇ ಅರ್ಪಿಸುತ್ತಾ ಅನೇಕ ಪೂಜಾಸಾಮಗ್ರಿಗಳಿಂದ ಶಿವನನ್ನು ಸುತ್ತುವರಿಯುವರು. ಅವರ ಮನೋವೃತ್ತಿಗಳು ಅತ್ಯಂತ ನಿರ್ಮಲಗಳಾಗಿಯೂ ಶಿವನಲ್ಲಿ ಆಸಕ್ತಗಳಾಗಿಯೂ ಇವೆ. ಅದರಿಂದಲೇ ಅವರು ದುಃಖಮಿಶ್ರವಲ್ಲದ ಸಂತೋಷದಿಂದ ಉಬ್ಬಿ ಮೆರೆಯುತ್ತಿರುವರು. ||೫೦||

ಬ್ರಹ್ಮ, ವಿಷ್ಣು, ಇಂದ್ರ ಇವರೇ ಮೊದಲಾದವರು ಪೂಜೆಗೈದ ಪರಶಿವನ ಪಾದಪದ್ಮಗಳನ್ನು ಧ್ಯಾನಮಾಡಬೇಕು. ಅದಕ್ಕೆ ಸಮಾನವಾಗಿ ಫಲದಾಯಕವಾದ ಬೇರೆ ಒಂದು ವಸ್ತುವನ್ನೂ ನಾವು ಇಲ್ಲಿನ ವರೆಗೂ ಕೇಳಿಯೂ ಇಲ್ಲ, ನೋಡಿಯೂ ಇಲ್ಲ. ಮಕ್ಕಳಿರಾ, ಆತನನ್ನು ಧ್ಯಾನಿಸಿದರೆ ನಾವು ಬಾರಿಬಾರಿಗೂ ಸೌಖ್ಯವನ್ನು ಹೊಂದಬಹುದು. ಮತ್ತು ನಮ್ಮ ಮನಸ್ಸಿನಲ್ಲಿ ಚಿರಸಂತೋಷವೂ ಲಭಿಸುವುದು. ಆ ಶಿವನಿಂದಲೇ ಎಲ್ಲಾ ಪ್ರಪಂಚವೂ ಸೃಷ್ಟಿಸಲ್ಪಟ್ಟಿದೆ. ||೫೧||

ಆ ಶಿವನ ಪಾದಗಳನ್ನು ಅರ್ಚಿಸುವುದರಿಂದ ಪುಣ್ಯವು ಸಮುದ್ರದ ಹಾಗೆ ವೃದ್ಧಿಹೊಂದಬಹುದು. ಮತ್ತು ಪಾಪಸಮೂಹವೆಂಬ ಕಾಡುಗಿಚ್ಚು ನಾಶವಾಗ

ದೇವೋ ಮಹಾದೇವ ಇತಿ ಪ್ರಸಿದ್ಧೋ
ದೇವೇಷು ಸರ್ವೇಷ್ವಪಿ ತನ್ಮಹಾಂತಂ ।
ಆದಿತ್ಯವರ್ಣಂ ತಮಸಃ ಪರಸ್ತಾತ್
ವದಂತಿ ವೇದಾಶ್ಚ ಮುನೀಶ್ವರಾಶ್ಚ ॥೫೩॥

ಪುತ್ರಾಸ್ಯದೇವ ಸದೃಶೋ ನ ಮಹೇಶ್ವರೋಽಯಂ
ದೇವೋತ್ತಮೋಽಯಮಿತಿ ತೇ ಮತಿರಸ್ತು ನಿತ್ಯಂ ।
ತತ್ರಾಸ್ಯದೇವಸದೃಶತ್ವಮತಿರ್ಯದಿ ಸ್ಯಾತ್
ಸ ನಾಶಹೇತುರಿತಿ ವೇದ ವಿದೋ ವದಂತಿ ॥೫೪॥

ಅತ್ರ್ಯೈವೋದಾಹರಂತೀಮಮಿತಿಹಾಸಂ ಪುರಾತನಂ ।
ಅಸ್ಯ ಶ್ರವಣಮಾತ್ರೇಣ ದೃಢಾ ಭಕ್ತಿಃ ಶಿವೇ ಭವೇತ್ ॥೫೫॥

---

ಬಹುದು. ಈ ವಿಶ್ವೇಶ್ವರನಾದ ಶಿವನಪೂಜೆಮಾಡುವಿಕೆಯು ಸಂಸಾರಜನ್ಯವಾದ ದುಃಖವನ್ನು ನಾಶಗೊಳಿಸುತ್ತದೆ. ಎಲೈ ಮಕ್ಕಳೇ, ಈ ಎಲ್ಲಾ ನಿಧಿಗಳೂ ಆತನ ಅನುಗ್ರಹದಿಂದ ಉಂಟಾದುವೇ ಆಗಿವೆ. ॥೫೨॥

ಶ್ರೀಮಹಾದೇವನು ಎಲ್ಲಾ ದೇವತೆಗಳಲ್ಲಿಯೂ ಪ್ರಾಣಿಗಳಲ್ಲಿಯೂ ಪ್ರತಿಷ್ಠಿತ ನಾಗಿದ್ದಾನೆ. ಈತನ ಅಂತವೇ ತಿಳಿಯದಾಗಿದೆ. ಎಲ್ಲಾ ಋಷಿಗಳು ಮತ್ತು ವೇದಗಳೂ ಕೂಡ, ಶ್ರೀಶಿವನು ಸೂರ್ಯನಂತೆ ತೇಜಸ್ವಿಯೆಂದೂ ಅಜ್ಞಾನಗಳಿಗೆ ದೂರನೆಂದೂ, (ಅಜ್ಞಾನನಾಶಕನೂ ಮತ್ತು ಜ್ಞಾನದೀಪಕನೂ ಎಂದೂ) ಹೇಳು ವರು. ॥೫೩॥

ಮಕ್ಕಳಿರಾ! ಈ ಶಂಕರನಿಗೆ ಸಮನಾದ ಬೇರೊಂದು ದೇವರಿಲ್ಲ; ಯಾವಾ ಗಲೂ ಈತನನ್ನು ದೇವೋತ್ತಮನೆಂದು ತಿಳಿಯಿರಿ. ಇನ್ನು ಬೇರೆ ದೇವರ ಸಾದೃಶ್ಯ ವನ್ನೂ ಈತನಲ್ಲಿ ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಅದು ನಾಶಕ್ಕೆ ಕಾರಣ ವೆಂದು ವೇದಜ್ಞರು ಹೇಳುತ್ತಾರೆ. ॥೫೪॥

ಈ ವಿಷಯದಲ್ಲಿ ಒಂದು ಹಿಂದಿನ ಇತಿಹಾಸವನ್ನು ಹೇಳುವೆನು ಕೇಳಿರಿ. ಇದನ್ನು ಕೇಳಿದವರಿಗೆ ಶಿವನಲ್ಲಿ ನಿಶ್ಚಲವಾದ ಭಕ್ತಿ ಹುಟ್ಟುವುದು. ॥೫೫॥

ಪುರಾ ನಾರಾಯಣಸ್ಯಾಭೂತ್ಕುಮಾರೋ ಮದನಾಭಿದಃ ।
ತಸ್ಯಾನ್ಯದೇವತುಲ್ಯತ್ವಮತಿರಾಸೀನ್ಮಹೇಶ್ವರೇ ॥೫೬॥

ಸೈವಾಭವನ್ಮೃತಿಸ್ತಸ್ಯ ಪ್ರಳಯಾನಿಲಮಾಲಿಕಾ
ತದಾಲೋಕ್ಯಾಪಿ ಮದನೋ ದೂರಾದ್ವಿಹ್ವಲಮಾನಸಃ ॥೫೭॥

ಯಯೌ ವೈಕುಂಠಭವನಂ ಯತ್ರ ನಾರಾಯಣಃ ಪಿತಾ
ತಸ್ಯ ತಂ ಕಂಪಮಾನೋಽಸೌ ನತ್ವಾ ಪ್ರಾಹಾತಿವಿಸ್ಮಿತಃ ॥೫೮॥

॥ ಮದನ ಉವಾಚ ॥

ಮಹಾಪ್ರಳಯಕಾಲೋಽಯಮಾಗತಃ ಪ್ರಳಯಾನಲಃ ।
ಅತಃ ಪರಂ ಕ್ವ ಗಂತವ್ಯಂ ಕೋ ವಾ ಸ್ಯಾತ್ ಶರಣಂ ಪ್ರಭುಃ ॥೫೯॥

ಪಶ್ಯ ಪಶ್ಯಾನಲಜ್ವಾಲಾಂ ದೀರ್ಘಾಂ ವ್ಯಾಪ್ತದಿಗಂತರಾಂ ।
ತನ್ನಿವಾರಣಸಾಮರ್ಥ್ಯಂ ತವ ಕಿಂ ನಾಧುನಾ ವದ ॥೬೦॥

ಚಕ್ರಂ ಪ್ರೇಷಯ ಯತ್ನೇನ ತೇನ ವಾ ತನ್ನಿವಾರಣಂ
ಗದಾಂ ವಾ ತದ್ವಿನಾಶಾಯ ನೋಚೇಜ್ಜೀವನಮೇವ ನ ॥೬೧॥

---

ಹಿಂದೆ ನಾರಾಯಣನಿಗೆ ಮನ್ಮಥನೆಂಬೊಬ್ಬ ಮಗನಿದ್ದನು. ಆತನು ಮಹೇಶ್ವರನಿಗೆ ಸಮನಾದ ಇನ್ನೊಬ್ಬ ದೇವರು ಇರುವನೆಂದು ಭಾವಿಸಿದ್ದನು. ಅಂದರೆ ಆತನು ಶಿವನಲ್ಲಿ ದೇವೋತ್ತಮನೆಂಬ ಬುದ್ಧಿಯನ್ನಿಟ್ಟಿರಲಿಲ್ಲ. ॥೫೬-೫೭॥

ಆತನ ಆ ತಿಳಿವಳಿಕೆಯೇ ಅವನ ನಾಶಕ್ಕೆ ಕಾರಣವಾಯಿತು. ಆತನು ಕೇವಲ ತಮೋಗುಣಸ್ವಭಾವದವನಾಗಿದ್ದನು. ಆಗ ಅಜ್ಞಾನವೆಂಬ ಪ್ರಳಯ ಮೃತ್ಯುವು ಅವನನ್ನು ಹಿಂಬಾಲಿಸಿತು. ಕೂಡಲೇ ಆತನು ಭಯದಿಂದ ವೈಕುಂಠಕ್ಕೆ ಹೋದನು. ಅಲ್ಲಿ ತನ್ನ ತಂದೆಯಾದ ನಾರಾಯಣನನ್ನು ನೋಡಿ ವಿಸ್ಮಯಗೊಂಡು ನಡುಗುತ್ತ ಹೀಗೆಂದನು. ॥೫೮॥

ತಂದೆಯೇ ! ಮಹಾಪ್ರಳಯ ಕಾಲವು ನನ್ನ ಬೆನ್ನುಹತ್ತಿಬರುತ್ತಿದೆ. ಈಗ ನಾನೆಲ್ಲಿ ಹೋಗಲಿ ? ನನ್ನ ರಕ್ಷಕರು ಯಾರು ? ॥೫೯॥

ನೋಡು, ದೀರ್ಘಾಕಾರವಾಗಿ ದಿಕ್ಕುಗಳನ್ನೆಲ್ಲಾ ಕವಿದಿರುವ ಪ್ರಳಯಾಗ್ನಿಯು ಹಿಂಬಾಲಿಸಿ ಬರುತ್ತಿದೆ. ಅದನ್ನು ತಡೆಯುವುದಕ್ಕಾಗಿ ಚಕ್ರವನ್ನಾಗಲಿ, ಗದೆಯನ್ನಾದರೂ ಕಳುಹಿಸು. ಇಲ್ಲದಿದ್ದರೆ ನಾನು ಜೀವಿಸಲು ಸಾಧ್ಯವಾಗುವುದಿಲ್ಲ. ॥೬೦-೬೧॥

ಏತಸ್ಮಿನ್ನಂತರೇ ಕಾಲೇ ಬ್ರಹ್ಮಾಪಿ ಸಮುಪಾಗತಃ ।
ಇಂದ್ರಾದಿದೇವೈಃ ಸಹಿತಃ ಸಕಳತ್ರೈರ್ಗಿರಾ ಸಹ ॥೬೨॥

ಸ ಸಮಾಗತ್ಯ ತಂ ಪ್ರಾಹ ಕಮಲಾಸಹಿತಂ ಹರಿಂ ।
ಪರಿಮ್ಲಾನಮುಖಾಂಭೋಜೋ ಮುಂಚನ್ನಯನಜಂ ಜಲಂ ॥೬೩॥

ಮಂದಂ ಮಂದಂ ಗದ್ಗದಾಭಿಃ ವಾಗ್ಭಿಃ ಕಂಪಾಲುಕೋ ವಿಧಿಃ ।
ತ್ಯಕ್ತ್ವಾ ವಿನಯವಾರ್ತಾಂ ಚ ಕಿಂ ಕರೋಮೀತಿ ಸತ್ವರಂ ॥೬೪॥

ಅತಃ ಪರಂ ಕ್ವ ಗಂತವ್ಯಮಕಸ್ಮಾದಯಮುತ್ಥಿತಃ ।
ಪ್ರಳಯಾಗ್ನಿಃ ಕಿಮಸ್ಮಾಭಿರಪರಾಧಃ ಕೃತಃ ಶಿವೇ ॥೬೫॥

ಮಯಾ ಶಿವಾರ್ಚನಂ ಕೃತ್ವಾ ಸ್ಥಿತಂ ಮತ್ಸದನೇ ಖಲು ।
ಅದ್ಯಾಪರಾಧೋ ನ ಕೃತಃ ಕೋಽಪಿ ರುದ್ರಾಗ್ನಿಕಲ್ಪಕಃ ॥೬೬॥

---

ಅಷ್ಟರಲ್ಲಿ ಬ್ರಹ್ಮನು ಇಂದ್ರಾದಿದೇವತೆಗಳೊಡನೆಯೂ ಮತ್ತು ದೇವತೆಗಳ ಪತ್ನಿಯರೊಡನೆಯೂ ಸರಸ್ವತಿಯೊಡನೆ ಅಲ್ಲಿಗೆ ಬಂದನು. ॥೬೨॥

ಮತ್ತು ಲಕ್ಷ್ಮೀಸಹಿತನಾದ ಶ್ರೀವಿಷ್ಣುವನ್ನು ಕುರಿತು ಬ್ರಹ್ಮನು ಬಾಡಿದ ಮುಖವುಳ್ಳವನಾಗಿ ಕಣ್ಣೀರು ಬಿಡುತ್ತಾ ಹೀಗೆಂದನು. ॥೬೩॥

ಗದ್ಗದ ಕಂಠನಾದ ಬ್ರಹ್ಮನು ಕಾತರನಾಗಿ ನಡುಗುತ್ತಾ ಮುಂದೆ ನಾನೇನು ಮಾಡಲೆಂದು ಮೆಲ್ಲಮೆಲ್ಲನೆ ಗೊಣಗುತ್ತಾ, ॥೬೪॥

" ಇನ್ನು ಮುಂದೆ ನಾವೆಲ್ಲಿಗೆ ಹೋಗೋಣ. ಇದು ನಮಗೆ ಆಕಸ್ಮಿಕವಾಗಿದೆ. ನಾವೇನಾದರೂ ಶಂಕರನಿಗೆ ಅಪರಾಧವನ್ನು ಎಸಗಿದೆವೇ! ಇಂತಹ ಪ್ರಳಯಾಗ್ನಿಯು ನಮಗಾಗಿ ಹುಟ್ಟಿರುವುದಲ್ಲಾ! ॥೬೫॥

ನಾನು ಶಿವಪೂಜೆಯನ್ನು ಮುಗಿಸಿಕೊಂಡು ನನ್ನ ಮನೆಯಲ್ಲಿದ್ದೆ. ರುದ್ರನಿಗೆ ಸಿಟ್ಟು ಬರುವಂತಹ ಯಾವ ತಪ್ಪನ್ನೂ ನಾನು ಮಾಡಿದವನಲ್ಲ. ಆದರೂ ರುದ್ರಾಗ್ನಿಯು ಈಗ ನನ್ನಸುತ್ತಲೂ ಆವರಿಸಿದೆ. ॥೬೬॥

ರೌದ್ರ ಏವಾನಲಃ ಸೋಽಯಂ ಸರ್ವಸಂಹಾರಸಾಧನಂ ।
ಏತದುತ್ಪತ್ತಿಬೀಜಂ ಕಿಂ ಚಿಂತನೀಯಮಿಹಾಧುನಾ ॥೭೮॥

ತ್ವಯಾ ನ ಶಿವಪೂಜಾಯಾಃ ಸಂಕೋಚೋಽದ್ಯ ಕೃತಃ ಖಲು ।
ಶಿವಪೂಜಾಸಾಧನಂ ವಾ ವಿಸ್ಮೃತಂ ನ ಖಲು ತ್ವಯಾ ॥೭೯॥

ಮ್ಲಾನಪುಷ್ಪಪ್ರದಾನಂ ವಾ ನ ಕೃತಂ ಖಲು ಮೋಹತಃ ।
ಕೀಟಾದಿದೂಷಿತೈಃ ಪುಷ್ಪೈರ್ನಾರ್ಚಿತಃ ಖಲು ಶಂಕರಃ ॥೮೦॥

ಉದ್ಧೂಲನಂ ವಾ ನ ಕೃತಂ ಕಿಂ ವಾ ಶಂಕರಪೂಜನೇ ।
ತ್ರಿಪುಂಡ್ರಧಾರಣೇ ಮಂತ್ರೋ ನಾನ್ಯಥಾ ಪಠಿತಃ ಖಲು ॥೮೧॥

ಸ್ವರಹೀನೋ ನ ಮಂತ್ರಃ ಕಿಂ ಪ್ರಯುಕ್ತಃ ಶಂಕರಾರ್ಚನೇ ।
ಅಕ್ಷಾಲಿತೈರ್ಬಿಲ್ವಪತ್ರೈರರ್ಚಿತಃ ಕಿಂ ಮಹೇಶ್ವರಃ ॥೮೨॥

ಭೂತಿಹೀನಂ ಚಂದನಂ ವಾ ಶಂಕರಾಯ ಸಮರ್ಪಿತಂ ।
ಧೂಪದೀಪಪ್ರದಾನಂ ವಾಽನಾದರೇಣ ಕೃತಂ ತ್ವಯಾ ॥೮೩॥

---

ಈ ಪ್ರಳಯಾಗ್ನಿಯು ರುದ್ರನಿಂದ ಹುಟ್ಟಿದುದೇ ಸರಿ. ಇದು ಹುಟ್ಟುವುದಕ್ಕೆ ಕಾರಣವೇನೆಂದು ಯೋಚಿಸಬೇಕು. ಏನಾದರೂ ನೀನು ಶಿವಪೂಜೆಯನ್ನು ಸಂಕ್ಷೇಪಮಾಡಿದೆಯಾ! ಅಥವಾ ಶಿವಪೂಜಾಸಾಮಗ್ರಿಗಳನ್ನು ನೀನು ಮರೆತಿರುವೆಯೋ ? ॥೭೮-೭೯॥

ನೀನು ಬಾಡಿಹೋದ ಹೂಮಾಲಿಕೆಯನ್ನು ಶಿವನಿಗೆ ಅರ್ಪಿಸಲಿಲ್ಲವಷ್ಟೆ! ಕೀಟ ಮೊದಲಾದುವು ರಂಧ್ರಮಾಡಿದ ಹೂಗಳನ್ನೂ ಅರ್ಪಿಸಿರಲಾರೆ. ॥೮೦॥

ನೀನು ಭಸ್ಮಲೇಪವನ್ನು ಶಿವಪೂಜಾಕಾಲದಲ್ಲಿ ಮಾಡಿಕೊಳ್ಳಲಿಲ್ಲವೆ! ನಾನೂ ಸಹ ಭಸ್ಮ ತ್ರಿಪುಂಡ್ರವನ್ನು ಧರಿಸುವಾಗ ತಪ್ಪು ಮಂತ್ರಗಳನ್ನೂ ಉಚ್ಚರಿಸಲಿಲ್ಲ. ॥೮೧॥

ಶಿವಪೂಜೆಮಾಡುವಾಗ ಸ್ವರತಪ್ಪಿದ ಮಂತ್ರಗಳನ್ನು ಹೇಳಲಿಲ್ಲ. ಬಿಲ್ವಪತ್ರೆಗಳನ್ನು ತೊಳೆಯದೇ ಪೂಜೆಮಾಡಲಿಲ್ಲ. ॥೮೨॥

ವಿಭೂತಿಬೆರಸದ ಚಂದನವನ್ನು ನೀನು ಶಿವನಿಗೆ ಅರ್ಪಿಸಲಿಲ್ಲತಾನೆ! ತಿರಸ್ಕಾರದಿಂದ ಅಥವಾ ಅಸಡ್ಡೆಯಿಂದ ಧೂಪವನ್ನು ಸ್ವಾಮಿಗೆ ಆಘ್ರಾಣಿಸಿಲ್ಲವಷ್ಟೆ! ॥೮೩॥

ಪರಿಷ್ಕಾರೋಽದ್ಯ ನ ಕೃತೋಽಪ್ಯಭಿಷಿಕ್ತೋ ನ ಕಿಂ ಶಿವಃ।
ದತ್ತಂ ಕಿಮುಪಹಾರೋಽಪಿ ಕೀಟಕೇಶಾದಿದೂಷಿತಃ ॥೨೪॥

ಶಾಕಾದಿಕಂ ವಾ ನ ಕೃತಂ ಶಿವನೈವೇದ್ಯಸಾಧನಂ।
ನ ದತ್ತಂ ವಾ ಘೃತಂ ಪಾತ್ರೇ ತತ್ಪಾತ್ರಪರಿಶೋಧಕಂ ॥೨೫॥

ಪಂಚಾಕ್ಷರೇಣ ನ ಕೃತಂ ಕಿಂ ನೈವೇದ್ಯನಿವೇದನಂ।
ಧ್ಯಾನಂ ನ ವಾ ಕೃತಂ ಸಮ್ಯಕ್ ವೇದಮಾರ್ಗೇಣ ಶಾಂಭವಂ ॥೨೬॥

ಪ್ರಾಗೇವ ನ ಕೃತಾ ಪೂಜಾ ಮಹೇಶಸ್ಯಾತಿಸಾಗರಂ।
ಮಹೇಶಧ್ಯಾನಸಮಯೇ ಸಾಂಬಾ ಧ್ಯಾತಾಪಿ ಕಿಂ ಮುಹುಃ ॥೨೭॥

ಅಂಬಾ ನಾರಾಧಿತಾ ಭಕ್ತ್ಯಾ ತಯಾ ಕಮಲಯಾಪಿ ವಾ।
ಸಾ ಶಿವಾರಾಧನಾಸಕ್ತಾ ನ ಕಿಮದ್ಯ ಪ್ರಯತ್ನತಃ ॥೨೮॥

ತಯಾ ವಾ ಲಿಂಗಪೂಜಾಯಾಂ ವಿಲಂಬಃ ಕಿಂ ಕೃತೋ ಭವೇತ್।
ಶಿವಾರ್ಚನೋಪಚಾರಾಣಾಂ ಲೋಪಃ ಕಿಂ ವಾ ಕೃತಸ್ತಯಾ ॥೨೯॥

---

ಶಿವನಿಗೆ ಅಭಿಷೇಕಮಾಡಿ ಅಲಂಕಾರವನ್ನು ಮಾಡಲಿಲ್ಲವೆ? ಕೀಟ ಕೇಶಗಳಿರುವ ಉಪಹಾರಗಳನ್ನು ಶಿವನಿಗೆ ಎಂದೂ ನಿವೇದನಮಾಡಲಿಲ್ಲ. ॥೨೪॥

ನೀನು ಶಿವನಿಗಿಷ್ಟವಾದ ಕಾಯಿಪಲ್ಯವನ್ನು ಸಮರ್ಪಿಸಲಿಲ್ಲವೆ! ಅಥವಾ ಚೆನ್ನಾಗಿ ಶುದ್ಧವಾದ ಪಾತ್ರೆಯಲ್ಲಿರುವ ತುಪ್ಪವನ್ನು ನಿವೇದನಮಾಡಲಿಲ್ಲವೇ? ॥೨೫॥

ಪಂಚಾಕ್ಷರ ಮಂತ್ರಪುರಃಸರವಾಗಿ ಶಿವನಿಗೆ ನೈವೇದ್ಯವನ್ನು ಮಾಡಲಿಲ್ಲವೇ? ಅಥವಾ ವೇದಗಳಿಂದ ಉಪದಿಷ್ಟವಾದ ರೀತಿಯಿಂದ ಶಿವನಧ್ಯಾನವನ್ನು ಮಾಡಲಿಲ್ಲವೋ? ॥೨೬॥

ಶಿವಪೂಜೆ ಮತ್ತು ಆತನ ಧ್ಯಾನಕ್ಕೆ ಮೊದಲು ಪಾರ್ವತಿದೇವಿಯನ್ನು ಪೂಜೆಮಾಡಲಿಲ್ಲವೋ ಅಥವಾ ಧ್ಯಾನಮಾಡಲಿಲ್ಲವೋ ಏನೋ? ॥೨೭॥

ಪಾರ್ವತಿಯನ್ನು ಲಕ್ಷ್ಮಿಯೇನಾದರೂ ಪೂಜೆಮಾಡಲಲಸಿದಳೇ? ಅಥವಾ ಲಕ್ಷ್ಮಿಯು ಶಿವನನ್ನು ಆರಾಧನೆಮಾಡಲು ತೊಡಗಲಿಲ್ಲವೋ ಏನು? ॥೨೮॥

ಲಕ್ಷ್ಮೀದೇವಿಯು ಶಿವಲಿಂಗಪೂಜೆಮಾಡುವುದಕ್ಕೆ ತಡಮಾಡಿದಳೇನು? ಅಥವಾ ಶಿವನ ಉಪಚಾರಗಳ ಮಧ್ಯೇ ಯಾವುದಾದರೂ ಲುಪ್ತವಾಯಿತೇ! ॥೨೯॥

ಪ್ರಣತಿರ್ವಿಸ್ಮೃತಾ ಕಿಂ ನು ತಯಾ ಧ್ಯಾನಂ ಕೃತಂ ನ ವಾ ।
ಸಾಂಬಸ್ಯ ಪರಮೇಶಸ್ಯ ಭಕ್ತ್ಯಾತಿವಿನಯೇನ ಚ ॥೮೦॥

ಇತಿ ತದ್ವಚನಂ ಶ್ರುತ್ವಾ ವಿಸ್ಮಿತೋ ವಿಷ್ಣುರಾದರಾತ್ ।
ಸ್ರಾಹ ಮಂದಂ ಸ ಭೀತೋಽಪಿ ವಿಧಿಂ ನಾರಾಯಣಸ್ತದಾ ॥೮೧॥

ಪ್ರಾಣಪ್ರಯಾಣೇಽಪಿ ಮಯಾ ಕಥಂ ವಾ
ತ್ಯಾಜ್ಯಂ ಶಿವಾರಾಧನಮಾದರೇಣ ।
ತ್ಯಾಜ್ಯೇಷು ತಾವನ್ನ ಶಿವಾರ್ಚನಸ್ಯ
ತ್ಯಾಜ್ಯತ್ವಮುಕ್ತಂ ಪ್ರಳಯೇಽಪಿ ನೂನಂ ॥೮೨॥

ಕಿಂ ಪ್ರಾಣೈರ್ಯದಿ ರಕ್ಷಿತೈರ್ಯದಿ ಮಹಾದೇವಾರ್ಚನೇನಾದಠೋ
ದೇಹೇನಾಪಿ ಕಿಮಸ್ತಿ ಕೃತ್ಯಮಧುನಾ ದಾನೈರ್ಧನೈರ್ವಾ ಸುತೈಃ ।
ಯಸ್ಮಿನ್ನೇವ ಕೃತಂ ನ ಶಂಗಭಜನಂ ಕಾಲೇ ತದಾ ಕಿಂ ತನುಃ
ಪೋಷ್ಯಾ ಕಿಂ ತು ವಿಸರ್ಜನೇನ ಪರಮಂ ಪ್ರಾಣಸ್ಯ ಸೌಖ್ಯಂ ಭವೇತ್॥೮೩॥

---

ಶ್ರೀಲಕ್ಷ್ಮಿಯು ಶಿವಪೂಜಾಸಮಯದಲ್ಲಿ ಓಂಕಾರವನ್ನು ಮರೆತಳೇ ಹೇಗೆ? ಅಥವಾ ಸಾಂಬಮೂರ್ತಿಯಾದ ಪರಮೇಶ್ವರನನ್ನು ವಿನಯದಿಂದ ಧ್ಯಾನಿಸ ಲಿಲ್ಲವೋ?" ಎಂದು ಬ್ರಹ್ಮನು ವಿಷ್ಣುವನ್ನು ಪರಿಪರಿಯಾಗಿ ಪ್ರಶ್ನಿಸಿದನು. ॥೮೦॥

ಹಾಗೆ ಬ್ರಹ್ಮನು ಕೇಳಿದ ಪ್ರಶ್ನೆಗಳಿಂದ ವಿಷ್ಣುವಿಗೆ ಆಶ್ಚರ್ಯವಾಯಿತು. ಆಗ ಆತನು ಭೀತನಾದರೂ ಮೆಲ್ಲಮೆಲ್ಲನೆ ಬ್ರಹ್ಮನಿಗೆ ಹೀಗೆ ಹೇಳತೊಡಗಿದನು. ॥೮೧॥

ಪ್ರಾಣಹೋಗುವ ಸಮಯದಲ್ಲಿಯೂ ಶಿವಪೂಜೆಯನ್ನು ನಾವು ಬಿಡ ಲಾರೆವು. ಪ್ರಳಯಕಾಲ ಒಂದು ಹೊರತು ಇತರ ಕಾಲದಲ್ಲಿ ಹೇಗೆ ಆ ಶಿವಪೂಜೆ ಯನ್ನು ಬಿಡಲು ಸಾಧ್ಯವಾದೀತು? ಅವಕಾಶವಿದ್ದರೆ ಆಗಲೂ ಬಿಡಲಾರರು. ॥೮೨॥

ಶ್ರೀಶಿವಪೂಜೆಯಲ್ಲಿ ಅನಾದರವಿರುವ ಈ ಪ್ರಾಣಗಳನ್ನು ರಕ್ಷಿಸಿಯಾದರೂ ಏನು ಫಲ? ಈಗ ಅನೇಕ ಬಗೆಗಳಾದ ದಾನ, ಧರ್ಮ, ಹಣ ಇವುಗಳನ್ನು ಗಳಿಸಿದ ಈ ದೇಹದಿಂದಲಾದರೂ ಪ್ರಯೋಜನವೇನು? ಶ್ರೀಶಂಕರನನ್ನು ಪೂಜೆಮಾಡದ ಕಾಲವು ವ್ಯರ್ಥವೇ ಅಲ್ಲವೆ! ಶಿವಪೂಜಾಪರಿತ್ಯಾಗಮಾಡಿ ಜೀವಿಸುವುದಕ್ಕಿಂತ ಪ್ರಾಣ ಬಿಡುವುದೇ ಉತ್ತಮ. ॥೮೩॥

ಕೋ ವಾ ನ ವಿಹಿತೇ ಕಾಲೇ ಕರೋತಿ ಶಿವಪೂಜನಂ ।
ಆಹಾರಮಪಿ ಸಂತ್ಯಕ್ತ್ವಾ ವಿಶುದ್ಧಜನಕೋದಿತಃ ॥೮೪॥

ಧಿಕ ಜನ್ಮ ತಸ್ಯ ದೌರ್ಭಾಗ್ಯಂ ಯೇನ ನಾರಾಧಿತಃ ಶಿವಃ ।
ಸರ್ವದೇವೋತ್ತಮುತ್ಮೇನ ಶಾಂತೋ ಗೌರೀಮನೋಹರಃ ॥೮೫॥

ತ್ಯಕ್ತ್ವಾ ಶಂಕರಪೂಜನಂ ಯದಿ ಮನಃ ಪಾತುಂ ಸುಧಾಂ ವಾ ತದಾ
ತತ್ತ್ವಾವಜ್ಜ್ವಲನಪ್ರವಿಷ್ಟಮಥವಾ ಚಕ್ರೇಣ ತಚ್ಛೇದ್ಯತಾಂ ।
ಕಿಂ ತೇನಾಪಿ ನ ಯೇನ ಸಾಧುಮನಸಾ ನಾರಾಧಿತಃ ಶಂಕರೋ
ನ ಧ್ಯಾತೋ ನ ನಿರೀಕ್ಷಿತೋಽಪಿ ಮುಹುರಪ್ಯಾದರೇಣಾರ್ಚತಿ ॥೮೬॥

ಲಬ್ಧಂ ತತ್ತಪಸಾ ಮನಃ ಖಲು ಮಯಾ ವಿಶ್ವೇಶ್ವರಾರಾಧನ
ಧ್ಯಾನಾರ್ಥಂ ನಿಯಮೇನ ತದ್ಯದಿ ಶಿವಧ್ಯಾನಾರತಂ ತನ್ಮನಃ ।
ಯಾಸ್ಯತ್ಯೇವ ಲಯಂ ನ ತೇನ ಫಲಮಪ್ಯಸ್ತ್ಯಾಸ್ತಿ ಸರ್ವಾತ್ಮನಾ
ತದ್ಭಾರಾವಹಮೇವ ಶಂಕರಪದಧ್ಯಾನಾನುರಕ್ತಂ ನ ಚೇತ್ ॥೮೭॥

---

ಯುಕ್ತವಾದ ಕಾಲದಲ್ಲಿ ಶಿವಪೂಜೆಮಾಡದಿರುವವನು ಯಾವನಿರುವನು? ಊಟವನ್ನಾದರೂ ಬಿಟ್ಟು ಶುದ್ಧವಾದ ತಂದೆಯ ವಂಶದಲ್ಲಿ ಜನಿಸಿದವರು ತಪ್ಪದೆ ಶಿವಪೂಜೆಯನ್ನು ನಡೆಸುವರು. ॥೮೪॥

ಶಿವನನ್ನು ಪೂಜೆಮಾಡದವನ ಜನ್ಮವು ನಿರರ್ಥಕ. ಶ್ರೀಶಂಕರನು ಎಲ್ಲಾ ದೇವತೆಗಳಿಗೂ ಶ್ರೇಷ್ಠನಾಗಿರುವನು. ಮತ್ತು ಎಲ್ಲರಿಗಿಂತಲೂ ಶಾಂತಮೂರ್ತಿಯು. ॥೮೫॥

ಶ್ರೀಪರಮೇಶ್ವರನನ್ನು ಪೂಜೆಮಾಡುವುದನ್ನು ಬಿಟ್ಟು ಈ ಮನಸ್ಸುಬೇರೆ ಸುಧೆಯನ್ನು ಕುಡಿಯುವುದಕ್ಕೆ ಯತ್ನಿಸಿದರೆ ಆಗ ಅದು ಅಗ್ನಿಯಲ್ಲಿ ಪ್ರವೇಶಿಸಿದಂತೆಯೇ ಎಂದು ತಿಳಿಯಿರಿ. ಅಥವಾ ಚಕ್ರಾಯುಧದಿಂದ ಅದನ್ನು ಖಂಡಿಸಿರಿ. ಒಳ್ಳೆ ಭಾವನೆಯಿಂದ ಶಿವನನ್ನು ಪೂಜಿಸದ ಆ ಮನಸ್ಸಿನಿಂದೇನು ಫಲ? ಮತ್ತು ಶಿವನನ್ನು ಧ್ಯಾನಮಾಡದೆ ಮತ್ತು ದರ್ಶನಮಾಡದಿದ್ದರೆ ಅಂತಹ ಮನಸ್ಸನ್ನು ಸ್ವಲ್ಪವೂ ಆದರಿಸತಕ್ಕುದಲ್ಲ. ॥೮೬॥

ನಾನಾದರೊ ಶ್ರೀಶಂಕರನನ್ನು ಕುರಿತು ತಪಸ್ಸುಮಾಡಿ, ಶಂಕರನನ್ನು ಆರಾಧಿಸಲು ನಿಯಮಗಳನ್ನು ಪಾಲಿಸುತ್ತಾ, ಯಾವಾಗಲೂ ಆತನ ಚಿಂತೆಯಲ್ಲಿಯೇ

ದೇಹಸ್ಯಾಸ್ಯ ವಿಲಕ್ಷಣೇನ ಮಹತಾ ಯತ್ನೇನ ಸಂರಕ್ಷಣಂ
ತಾವತ್ಕಾರ್ಯಮುಪಾಯಕೋಟಿಭಿರಯಂ ಯಾವಚ್ಛಿವಾರಾಧನೇ ।
ಕರ್ತವ್ಯೇ ಸತಿ ಯದ್ವ್ಯಶೋ ಯದಿ ಭವೇತ್ ತತ್ರಾನುಕೂಲಸ್ತದಾ
ನೋಚೇಚ್ಚಕ್ರನಿಘಟ್ಟನೇನ ಶತಶಃ ಛಿನ್ನೋ ಭವೇದೇವ ಹಿ ॥೮೮॥

ಜಿಹ್ವಾ ಚೇದಶಿವಾಭಿಧಾನಮಧುನಾ ಕರ್ತುಂ ಪ್ರವೃತ್ತಾ ತದಾ
ಕಿಂ ತತ್ ಕರ್ತನಮತ್ರ ಸತ್ವರಮತಿಕ್ರೂರೇಣ ಚಕ್ರೇಣ ನಃ ।
ಶುದ್ಧಾ ಸಾ ಶಿವನಾಮಧೇಯಸುಧಯಾ ಸಾಧ್ವೀ ಪ್ರವೃದ್ಧಾ ತಯಾ
ನಾಶೈವಂ ಖಲು ನಾಮ ಗೃಹ್ಯತ ಇತಿ ಜ್ಞಾತಂ ಮುಹುಃ ಸಾದರಂ ॥೮೯॥

ಮಂತ್ರಃ ಕೋಪಿ ನ ವಿಸ್ಮೃತಃ ಶಿವಪದಾಂಭೋಜಾರ್ಚನೇ ಸರ್ವಥಾ
ಪೂಜಾಸಾಧನಮರ್ಜಿತಂ ಚ ಬಹುಧಾ ಕಿಂ ಭಸ್ಮನೋದ್ಧೂಲನಂ ।
ತ್ಯಕ್ತಂ ವಿಸ್ಮೃತಮೇವ ವಾ ಕಿಮಧುನಾ ಫಾಲೇ ತ್ರಿಪುಂಡ್ರಂ ವಿಧೇ
ಪಶ್ಯೇದಂ ನಿಟಿಲಂ ವಿಭೂತಿವಿಪುಲಶ್ರೀಜಾಲಲೋಲಂ ಮುಹುಃ ॥೯೦॥

---

ಇರುವಹಾಗೆ ಈ ಮನಸ್ಸನ್ನು ಹೊಂದಿರುವೆನು. ಶ್ರೀಶಂಕರನ ಭಾವವನ್ನು ಧ್ಯಾನಿಸದೇ ಆತನ ಪದಗಳಲ್ಲಿ ಅನುರಕ್ತವಾಗದೇ ಇರುವ ಈ ಮನಸ್ಸು ಲಯವನ್ನು ಹೊಂದುವುದು. ॥೮೭॥

ಈ ಶರೀರವು ಎಲ್ಲಿಯವರೆಗೆ ಶ್ರೀಮಹಾದೇವನ ಪೂಜೆಯಲ್ಲಿ ಆಸಕ್ತವಾಗುವುದೋ ಅಲ್ಲಿಯತನಕ ಬಹಳ ಪ್ರಯತ್ನದಿಂದಲಾದರೂ ಇದನ್ನು ಕಾಪಾಡಬೇಕು. ಅದಕ್ಕೆ ವಿರುದ್ಧವಾಗಿ ಆಚರಿಸಿದರೆ ಮಾತ್ರ ಅಂತಹ ಶರೀರವನ್ನು ಈ ಚಕ್ರದಿಂದ ಅನೇಕ ಚೂರು ಚೂರಾಗಿ ಕತ್ತರಿಸಬಹುದು. ॥೮೮॥

ಈ ನಾಲಿಗೆಯು ಶಿವನಾಮಸ್ಮರಣೆಮಾಡದಿದ್ದರೆ ನಾವು ಅದನ್ನು ಈ ಕ್ರೂರಚಕ್ರದಿಂದ ಕತ್ತರಿಸುವೆವು. ಆ ರಸನೆಯು ಪರಿಶುದ್ಧವಾಗಿ ಶಿವನಾಮಕೀರ್ತನೆಯಲ್ಲಿ ಪ್ರವೃತ್ತವಾದರೆ ಅದು ಯಾವಾಗಲೂ ಅಶೈವಕೀರ್ತನೆಮಾಡುವುದಿಲ್ಲವೆಂಬುದು ದಿಟ. ಅಂತಹ ನಾಲಗೆಯು ಅಮೃತಪಾನಮಾಡಿದ ಪತಿವ್ರತೆಯಂತೆ ಸರ್ವರಿಗೂ ಪೂಜ್ಯವೆನಿಸುವುದು. ॥೮೯॥

ಶಿವಾರಾಧನೆಯ ಸಂಬಂಧವಾದ ಯಾವ ಮಂತ್ರವನ್ನೂ ನಾನು ಮರೆಯಲಿಲ್ಲ. ಶಿವಪೂಜೆಗೆ ಬೇಕಾದ ಸಾಮಗ್ರಿಗಳನ್ನೆಲ್ಲಾ ನಾನು ಸಂಪಾದಿಸಿರುವೆನು.

ಯದ್ಯಸ್ಮಿನ್ನಿಲಯಾಯ ಮೋಹತಿಮಿರಾಕ್ರಾಂತಂ ಭವೇನ್ಮಾನಸಂ
ತರ್ಹಿ ಸ್ಯಾದಶಿವಾರ್ಚನೋದ್ಯತಮಿದಂ ಭಾಗ್ಯೇತಿಮಂದೇ ಸತಿ ।
ತತ್ಬೃಂದಾರಕವೃಂದವಂದಿತಶಿವಾಕಾಂತಾಂಘ್ರಿಪಂಕೇರುಹ
ಧ್ಯಾನಾನಂದರಸಾಭಿಮಗ್ನಮಸಕೃತ್ಸತ್ಯಂ ತ್ರಿಸತ್ಯಂ ಪುನಃ ॥೯೧॥

ಗೌರೀಕಾಂತಪದಾಂಬುಜೇಪಿ ಶಪಥಸ್ತಾವತ್ಕೃತಃ ಪ್ರಾಜ್ಞ್ಮಯಾ
ಯಸ್ಮಿನ್ನೇವ ದಿನೇ ತ್ರಿಲೋಚನಪದಧ್ಯಾನಾರತಂ ಮನ್ಮನಃ ।
ತಸ್ಮಿನ್ನೇವ ದಿನೇ ಶರೀರಮಸಕೃತ್ ಛಿತ್ವಾಪಿ ಕಾನಾನಲೇ
ಪ್ರಕ್ಷೇಪ್ತವ್ಯಮಿತಿ ಪ್ರಬೋಧಸಹಿತಾ ಸೇಯಂ ಪ್ರತಿಜ್ಞಾ ಮಮ ॥೯೨॥

ಅನ್ಯತ್ಕಿಂ ಮಮ ಕೃತ್ಯಮಸ್ತಿ ಗಿರಿಶಧ್ಯಾನಂ ಶಿವಾಪೂಜನಂ
ತ್ಯಕ್ತ್ವಾ ತೌ ಪಿತರೌ ಮಮೇತಿ ಮುಹುರಪ್ಯತ್ಯಾದರಾದರ್ಚಿತೌ ।
ತಾವೇವಾನ್ವಹಮಿತ್ಯವೇತ್ಯಪಿ ಮನಃ ಕಸ್ಮೈ ಮಯಾ ತತ್ಪುನಃ
ವಕ್ತವ್ಯಂ ಶಿವಪೂಜನಂ ಪ್ರತಿದಿನಂ ಕರ್ತವ್ಯಮಿತ್ಯಾದರಾತ್ ॥೯೩॥

---

ಭಸ್ಮದಿಂದ ಉದ್ಧೂಲನವನ್ನೂ ಮಾಡಿಕೊಂಡಿರುವೆನು. ಶೈವಬಾಹ್ಯವಾದಸಮಾಚಾರ ವೆಲ್ಲವನ್ನೂ ಸಹ ನಾನು ದೂರಕ್ಕೆ ತಳ್ಳಿದ್ದೇನೆ. ಬ್ರಹ್ಮನೇ, ಇಲ್ಲಿ ನೋಡು. ನನ್ನ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ ಧರಿಸಿರುವೆನು. ॥೯೦॥

ಮೋಹವೆಂಬ ತಿಮಿರಾಕ್ರಾಂತವಾದ ಈ ನನ್ನ ಮನಸ್ಸು ಪ್ರಳಯಕ್ಕೆ ಗುರಿ ಯಾದರೆ, ಅದು ಶಿವಪೂಜೆಮಾಡದ ದುರದೃಷ್ಟದ ಪರಿಪಾಕವೆಂದು ತಿಳಿಯಬೇಕು. ದೇವತೆಗಳಿಂದ ಎರಗಲ್ಪಟ್ಟ ಆ ಶಿವಪಾದಾರವಿಂದಗಳನ್ನು ಧ್ಯಾನಮಾಡುತ್ತಾ ಆನಂದಪರವಶವಾದರೆ, ಆಗ ಅದು ನಿಜವಾದ ಆನಂದವನ್ನು ಹೊಂದುವುದು. ॥೯೧॥

ನಾನು ಹಿಂದೆ ಶ್ರೀಗೌರೀಶಂಕರರ ಪಾದದಾಣೆಯಾಗಿಯೂ ಹೀಗೆ ಪ್ರತಿಜ್ಞೆ ಮಾಡಿದ್ದೇನೆ. ನನ್ನ ಮನಸ್ಸು ಶಿವನನ್ನಲ್ಲದೇ ಇನ್ನೊಬ್ಬನನ್ನು ಧ್ಯಾನಿಸುವುದಿಲ್ಲ. ಈ ನನ್ನ ಶರೀರವು ಅನ್ಯಥಾ ಪ್ರವರ್ತಿಸಿದರೆ ಆ ದಿನವೇ ಅದನ್ನು ತುಂಡುಮಾಡಿ ಪ್ರಳಯಾಗ್ನಿಯಲ್ಲಿ ಹಾಕಬೇಕು ಎಂಬುದಾಗಿ ನಾನು ಪ್ರತಿಜ್ಞೆಮಾಡಿರುತ್ತೇನೆ. ॥೯೨॥

ಶಂಕರಧ್ಯಾನವನ್ನು ಬಿಟ್ಟು ಮತ್ತಾವ ಕಾರ್ಯವನ್ನು ನಾನು ಮಾಡಬೇಕು ? ನನಗೆ ಆ ಪಾರ್ವತೀಪರಮೇಶ್ವರರು ತಾಯಿತಂದೆಯರೆಂಬುದು ದಿಟ. ಅವರಿಬ್ಬ ರಿಬ್ಬರನ್ನು ಪ್ರತಿದಿನವೂ ಪೂಜಿಸಬೇಕಲ್ಲದೇ ಬೇರೆ ಕೆಲಸವೇ ಇಲ್ಲ. ಬೇರೆ ಇನ್ನಾರಿಗೆ

ಕಿಂ ಚಾನ್ಯಂ ನ ಚ ರೋಚತೇ ಮಮ ಶಿವಧ್ಯಾನಂ ವಿನಾ ತತ್ಪರಂ
ಸರ್ವತ್ರಾಪ್ಯಶಿವಾನಿ ಹಂತ್ಯನುದಿನಂ ಸಂಪ್ರತ್ಯಪ್ರದಾನೋಽನ್ಮುಖಂ ।
ಸರ್ವಸ್ಯಾಪಿ ಶಿವಂ ದದಾತಿ ಶಿವದಂ ಯಸ್ಮಾತ್ ಸ್ವರೂಪಂ ತಥಾ
ಸಿದ್ಧಂ ತಸ್ಯ ತಥಾ ಸತಿ ಪ್ರಿಯತಮಂ ಸಾಂಬಂ ಪರಂ ಧೀಮಹಿ ॥೯೪॥

ಶಿವಧ್ಯಾನಂ ತಾವದ್ಧನಮಿತಿ ಮತಿರ್ಮೇ ಸಮುದಭೂತ್
ಅತಃ ಕೋ ವಾ ಲೋಕೇ ತ್ಯಜತಿ ಧನಮುಸ್ಯಾರ್ಜಿತಮಹೋ ।
ಧನಂ ವಾ ಸಂತ್ಯಾಜ್ಯಂ ಶಿವದ ಶಿವಪಾದಾಂಬುಜರಜಃ
ಪ್ರಭಾವಧ್ಯಾನಾಖ್ಯಂ ಧನಮತಿಮಹಾದುಸ್ತ್ಯಜಮಪಿ ॥೯೫॥

ಬ್ರಹ್ಮಾಂಡಪ್ರಳಯೋತ್ತರಾಮಿತಶಿವಕ್ರೀಡಾಶ್ರಮಸ್ವೇದಜಾ
ಪಾರಾಂಭೋಧಿನದೀನದಾದಿವಿಲಸತ್ಕಲ್ಲೋಲಮಾಲಾಜಲೈಃ ।
ಸೃಷ್ಟಂ ಯೇನ ಜಗತ್ಪುನಃ ಪುನರುಮಾಕಾಂತಃ ಸ ತಾವನ್ಮಯಾ
ಮಾಯಾತೀತ ಇತಿ ಸ್ಮೃತೋಽಪಿ ಮುಹುರಪ್ಯಾರಾಧಿತಃ ಸಾದರಂ ॥೯೬॥

---

ನಾನು ಪೂಜೆಗೈಯ್ಯಲಿ ? ನನ್ನ ಮನಸ್ಸು ಪ್ರತಿದಿನವೂ ಆ ಮಾತಾಪಿತೃಗಳ ಪಾದ ಧ್ಯಾನದಲ್ಲಿಯೇ ಪ್ರವಹಿಸುತ್ತಿರುವುದು. ॥೯೩॥

ಶಿವನ ಆರಾಧನೆ, ಆತನ ಧ್ಯಾನದಲ್ಲಿ ನಿರತನಾಗುವಿಕೆ, ಇವನ್ನು ಬಿಟ್ಟು ಬೇರೆ ಯದು ನನಗೆ ಎಂದೂ ರುಚಿಸುವುದಿಲ್ಲ. ಶಿವಧ್ಯಾನವು ಅಶುಭವನ್ನು ನಾಶಮಾಡುತ್ತದೆ. ಅದರ ಸ್ವರೂಪವೇ ಮಂಗಳವನ್ನು ಕೊಡಬಲ್ಲುದು. ಆದುದರಿಂದ ಅತ್ಯಂತ ಪ್ರೀತಿಯನ್ನುಂಟುಮಾಡುವ ಸಾಂಬಮೂರ್ತಿಯನ್ನು ಬಿಟ್ಟು ಮತ್ತಾರನ್ನೂ ನಾನು ಧ್ಯಾನಮಾಡುವುದಿಲ್ಲ. ॥೯೪॥

ನನಗೆ ಶ್ರೀಶಂಕರನನ್ನು ಧ್ಯಾನಮಾಡುವುದೇ ಧನಸಂಪತ್ತಾಗಿದೆ. ಲೋಕದಲ್ಲಿ ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಯಾವನಾದರೂ ಬಿಡುತ್ತಾನೆಯೇ ? ಇತರ ಲೌಕಿಕಹಣವನ್ನಾದರೂ ಬಿಡಬಹುದು. ಆದರೆ ಶಿವನ ಪಾದಧೂಳಿಯ ಚಿಂತನಾ ರೂಪವಾದ ನಿಧಿಯನ್ನು ಮಾತ್ರ ಎಂದಿಗೂ ಬಿಡಲು ಸಾಧ್ಯವಿಲ್ಲ. ॥೯೫॥

ಈ ಬ್ರಹ್ಮಾಂಡವೆಲ್ಲಾ ಪ್ರಳಯದಿಂದ ನಾಶವಾದ ಬಳಿಕ, ಪುನಃ ಅದು ಶಿವ ಪಾರ್ವತಿಯರ ಕ್ರೀಡೆಯಿಂದ ಉಂಟಾದ ಬೆವರುಗಳ ಸಮುದ್ರದಿಂದ ನದೀನದ ರೂಪದಲ್ಲಿ ಮತ್ತೆ ಸೃಷ್ಟವಾಗುತ್ತದೆ. ಆದುದರಿಂದ ಮಾಯಾತೀತನು ಆತ

ಇತಿ ತದ್ವಚನಂ ಶ್ರುತ್ವಾ ಬ್ರಹ್ಮಾ ದೃಷ್ಟ್ವಾ ಶಚೀಪತಿಂ ।
ಸೂರ್ಯಾದೀನಪಿ ತಾನಾಹ ಕ್ರೋಧಸಂಕುಲಿತೇಕ್ಷಣಃ ॥೯೭॥

ಭವದ್ಭಿಸ್ತಾವದುನ್ಮತ್ತೈಃ ನ ಕೃತಂ ಶಂಕರಾರ್ಚನಂ ।
ಅತ ಏವಾಗತಃ ಸೋಽಯಂ ಮಹಾಪ್ರಳಯಪಾವಕಃ ॥೯೮॥

ಮಯಾ ಸಮಾರಾಧಿತ ಏವ ಕಾಲೇ
ಸ ಕಾಲಕಾಲೋ ಹರಿಣಾಪಿ ಲಕ್ಷ್ಮ್ಯಾ ।
ಅತಃ ಪರಂ ತಸ್ಯ ಭವದ್ಭಿರೇವ
ಕೃತಾ ನ ಪೂಜೇತಿ ವಿನಿಶ್ಚಯೋ ಮೇ ॥೯೯॥

ಪರಿಶೇಷತ ಏವ ನಿಶ್ಚಯೋಽಯಂ
ಕೃತ ಇತ್ಯತ್ರ ಭವದ್ಭಿರತ್ರ ಪೂಜಾ ।
ನ ಕೃತಾ ಗಿರಿಶಸ್ಸ ಸರ್ವಥಾ
ತತ ಏವಾಯಮುಪೈತಿ ಪಾವಕಃ ॥೧೦೦॥

---

ನೆಂದು ತಿಳಿಯಲ್ಪಟ್ಟರೂ ಆದರದಿಂದ ಆತನನ್ನು ತಪ್ಪದೆ ಪೂಜಿಸುವೆನು." ಎಂದು ವಿಷ್ಣುವು ಹೇಳಿದನು. ॥೯೬॥

ಹೀಗೆ ವಿಷ್ಣುವು ಹೇಳಿದ ಮಾತನ್ನು ಕೇಳಿದ ಬ್ರಹ್ಮನು ಇಂದ್ರ, ಸೂರ್ಯ ಇವರನ್ನು ನೋಡಿ ಸಿಟ್ಟುಗೊಂಡು ಹೀಗೆ ಹೇಳತೊಡಗಿದನು. ॥೯೭॥

ನೀವು ಗರ್ವದಿಂದ ಶಿವಪೂಜೆಯನ್ನು ಸರಿಯಾಗಿಮಾಡಲಿಲ್ಲವೆಂದು ತೋರುತ್ತದೆ. ಅದಕ್ಕಾಗಿ ಈಗ ಪ್ರಳಯಾಗ್ನಿಯು ನಮಗೆ ಪ್ರಾಪ್ತವಾಗಿದೆ. ॥೯೮॥

ನಾನು, ಹರಿ, ಲಕ್ಷ್ಮಿ, ಈ ಮೂವರೂ ಆಯಾ ಕಾಲವನ್ನರಿತು ಶಿವನನ್ನು ಆರಾಧಿಸಿದ್ದೇನೆ. ನೀವಾದರೋ ಆತನ ಪೂಜೆಯನ್ನು ಸರಿಯಾಗಿ ಮಾಡಿಲ್ಲವೆಂದು ಈಗ ನನಗೆ ನಿಶ್ಚಯವಾಯಿತು. ॥೯೯॥

ಪರಿಶೇಷಾನುಮಾನದಿಂದ ನೀವು ಶಿವನಿಗೆ ಅರ್ಚನೆಯನ್ನೆಸಗಲಿಲ್ಲವೆಂದು ನಾನು ನಿಶ್ಚಯಿಸಿರುತ್ತೇನೆ. ಆದುದರಿಂದಲೇ ಈಗ ಈ ಪ್ರಳಯಾಗ್ನಿಯು ಅನಿರೀಕ್ಷಿತವಾಗಿ ನಮಗೆ ಪ್ರಾಪ್ತವಾಗಿದೆ. ॥೧೦೦॥

ಅಹೋ ದುರಾಚಾರರತೈಃ ಸುರೈರ್ವಾ
ಕಿಂ ಕಿನ್ನರೈರ್ವಾ ಫಲಮಸ್ತಿ ಸಖ್ಯೇ ।
ಅಯಂ ಸಮಾಯಾತಿ ಮಹಾನಲೋದ್ಯ
ಶ್ರೀಕಾಲಕಾಲಾಮಲಭಾಲಜಾತಃ ॥೧೦೧॥

ಕಿಂ ವಾ ವಿಧೇಯಮಧುನಾ ಮಧುಸೂದನಾಯ
ಸರ್ವಾನಶಾಂಕರವರಾನ್ ಪ್ರಳಯಾನಲೋಽಯಂ ।
ದಗ್ಧ್ವಾ ನ ಶಾಂತಿಮುಪಯಾಸ್ಯತಿ ಮಾಂ ನ ಮುಂಚ
ತ್ಯೇವಂ ಭವಂತಮಪಿ ಸತ್ಸುರಸಂಗಮೇನ ॥೧೦೨॥

ಹಾ ಹಂತ ಹಂತ ವಿಷಮಃ ಖಲು ಕಾಲ ಏವ
ಶ್ರೀಕಾಲಕಾಲಕಲನಾರಹಿತಃ ಕಿಲಾಯಂ ।
ಗಂತವ್ಯಮಪ್ಯಹಹ ಕುತ್ರ ಕಿಮದ್ಭುತೋಽಗ್ನಿ
ರಾಯಾತಿ ಮೃತ್ಯುಗಣಸಂನಿಭ ಏವ ನೂನಂ ॥೧೦೩॥

---

ಆಹಾ! ದೇವತೆಗಳಿರಾ! ನಿಮ್ಮ ದುಷ್ಟ ನಡತೆಗಳನ್ನೇನು ಹೇಳಲಿ? ಕಿಂನರರು, ಕಿಂಪುರುಷರು, ಇವರೊಡನೆ ಗೆಳತನವನ್ನು ಗಳಿಸಿದರೆ ಯಾವ ಪ್ರಯೋಜನ ಸಿಕ್ಕಿದ ಹಾಗಾಯಿತು. ಈಗ ಶಿವನ ಹಣೆಯಿಂದ ಉತ್ಪನ್ನವಾದ ಪ್ರಳಯಾಗ್ನಿಯು ಬರುತ್ತಿದೆ. ಇದರಿಂದ ಹೇಗೆ ತಪ್ಪಿಸಿಕೊಳ್ಳುವುದು? ತಪ್ಪಿಸುವವರಾರು? ॥೧೦೧॥

ಆಹಾ! ಈಗ ವಿಷ್ಣುವಿನ ರಕ್ಷಣೆಯಾದರೂ ಹೇಗಾದೀತು? ಈ ಪ್ರಳಯಾನಲವು ಎಲ್ಲಾ ಅಶೈವರನ್ನೂ ನಾಶಮಾಡದೇ ಬಿಡದು. ಕೊನೆಗೆ ನನ್ನನ್ನೂ ನಿಮ್ಮನ್ನು ಬಿಡುವುದಿಲ್ಲ. ಹಾಗಾದರೆ ದೇವತಾಂತರಗಳನ್ನು ಭಜಿಸಿದ ನೀವು ಈಗ ಏನು ಮಾಡಬಲ್ಲಿರಿ? ॥೧೦೨॥

ಅಯ್ಯೋ! ಎಂತಹ ವಿಷಮಪರಿಸ್ಥಿತಿಯುಂಟಾಯಿತು? ಯಾವನೋ ಶ್ರೀಕಾಲಕಾಲನಾದ ಶಿವನ ಭಜನೆಯನ್ನು ತಪ್ಪಿದನಲ್ಲಾ. ಅಯ್ಯೋ! ಈಗ ನಾವೆಲ್ಲಿಗೆ ಹೋಗೋಣ? ನಿಶ್ಚಯವಾಗಿಯೂ ಮೃತ್ಯುಗಣವು ಒದಗಿರುತ್ತದೆ. ॥೧೦೩॥

ದಾರೈಃ ಸಹಾದ್ಯ ಭುವನಾನಿ ವಿಸೃಜ್ಯ ದೂರೇ
ಗಂತವ್ಯಮೇವ ಗಮನೇ ಪ್ರಸಲಾಯ್ಯ ದೈವಾತ್ ।
ನಾಯಾತಿ ಚೇದಯಮಿಹ ಪ್ರಳಯಾನಲೋಪಿ
ಸ್ಯಾಜ್ಜೀವನಂ ಖಲು ದಿಗಂತನಿವಾಸತೋ ವಾ ॥೧೦೪॥

॥ ವಿಶ್ವಾವಸುರುವಾಚ ॥

ಇತ್ಯುಕ್ತ್ವಾ ಹರಿಣಾ ಸಾಕಂ ಕುಟುಂಬೇನಾನ್ವಿತೇನ ಸಃ ।
ಸ್ವಪುತ್ರೇಣ ಮಯಾ ದೇವೈಃ ಸಪುತ್ರೈರ್ವನಿತಾನ್ವಿತೈಃ ॥೧೦೫॥

ಸಕುಟುಂಬಾಃ ಸುರಾಃ ಸರ್ವೇ ಸಪುತ್ರಾಃ ಸಾನುಗಾ ಅಪಿ ।
ಯಯುಃ ಪಾತಾಲಮೇವಾಶು ವಿನಾಶಭಯವಿಹ್ವಲಾಃ ॥೧೦೬॥

ತಾನಾಗತಾನ್ ಫಣಿಪತಿರ್ದೃಷ್ಟ್ವಾ ನಾರಾಯಣಾದಿಕಾನ್ ।
ಅತಿಖಿನ್ನಾನುವಾಚೇದಂ ಕಿಮಾಸೀದಿತಿ ಸತ್ವರಂ ॥೧೦೭॥

॥ ದೇವಾ ಊಚುಃ ॥

ಅಸ್ಮಾಸ್ವೇಕೇನ ಕೇನಾಪಿ ಪ್ರಾಯಶೋ ನ ಶಿವೋಽರ್ಚಿತಃ ।
ಅತಃ ಪ್ರಳಯಕಾಲಾಗ್ನಿಃ ಸುರನಾಶಾರ್ಥಮುತ್ಥಿತಃ ॥೧೦೮॥

---

ಈಗ ನಾವು ಹೆಂಡಿರೊಡನೆ ಮನೆಯನ್ನು ಬಿಟ್ಟು ಎಲ್ಲಿಯಾದರೂ ದೂರ ಓಡಿಹೋಗಬೇಕು. ಅಲ್ಲಿಗೂ ಪ್ರಳಯಾಗ್ನಿಯು ಬಿಡದಿದ್ದರೆ ನಮ್ಮ ಜೀವನವು ದಿಗಂತಪ್ರದೇಶಗಳನ್ನು ಆಶ್ರಯಿಸಿ ಬದುಕುವುದು. ಎಂದು ಬ್ರಹ್ಮನು ಚಿಂತಿಸ ತೊಡಗಿದನು. ॥೧೦೪॥

ಹೀಗೆ ಬ್ರಹ್ಮನು ನುಡಿದಮೇಲೆ ವಿಷ್ಣುವು ಲಕ್ಷ್ಮಿಯೊಡನೆಯೂ, ತಮ್ಮ ಕುಟುಂಬದೊಡನೆಯೂ, ದೇವತೆಗಳೂ ಸಹ ತಮ್ಮ ಹೆಂಡಿರು ಮಕ್ಕಳೊಡಗೊಂಡು ಎಲ್ಲರೂ ಪಾತಾಳಲೋಕಕ್ಕೆ ಓಡಿಹೋದರು. ॥೧೦೫-೧೦೬॥

ಅಲ್ಲಿ ನಾಗೇಂದ್ರನು ನಾರಾಯಣ ಮೊದಲಾದವರು ಓಡಿಬಂದು ಖಿನ್ನರಾಗಿರುವುದನ್ನು ನೋಡಿ, ನಿಮಗೆ ಏನಾಯಿತೆಂದು ಪ್ರಶ್ನೆಮಾಡಿದನು. ॥೧೦೭॥

ನಮ್ಮಲ್ಲಿ ಒಬ್ಬನು ಬಹುಶಃ ಶಿವಪೂಜೆಮಾಡುವುದನ್ನು ಬಿಟ್ಟಿರಬೇಕು. ಅದರಿಂದ ನಮ್ಮ ನಾಶಕ್ಕಾಗಿ ಪ್ರಳಯಾಗ್ನಿಯು ಈಗ ನಮ್ಮನ್ನು ಹಿಂಬಾಲಿಸಿದೆ. ಎಂದು ವಿಷ್ಣ್ವಾದಿಗಳು ಆದಿಶೇಷನೊಡನೆ ತಮ್ಮ ಕಷ್ಟವನ್ನು ಹೇಳತೊಡಗಿದರು. ॥೧೦೮॥

ಯಸ್ಯಾಂ ಸಭಾಯಾಮೇಕೋ ವಾ ಪಾತಕೀ ಸಾ ಸಭಾ ಪರಂ ।
ನಿಂದ್ಯಾ ತಾವದ್ಬಹಿಷ್ಕಾರ್ಯಾ ತತ್ಸಂಯೋಗೇನ ವಸ್ತುತಃ ॥೧೦೯॥

ಏವಮೇವ ಸುರಃ ಕೋಽಪಿ ಶಂಕರಾನರ್ಚಕೋ ಯದಿ ।
ತದಾ ಸುರಾಣಾಂ ಸರ್ವೇಷಾಂ ವಿನಾಶಃ ಸಮುಪಸ್ಥಿತಃ ॥೧೧೦॥

ಅತೋ ನ ಶರಣಂ ಲೋಕೇ ಶಂಕರಾನರ್ಚಕಾನ್ವಯಾತ್ ।
ಅಸ್ಮಾಕಮಿತ್ಯಾಗತಂ ಚ ತದ್ಭೀತ್ಯಾ ತವ ಮಂದಿರಂ ॥೧೧೧॥

ಅಮಿತಾಸ್ತೇ ವಿಷಜ್ವಾಲಾಃ ಪ್ರಳಯಾನಿಲನಾಶನೇ ।
ಸ್ತಂಭನೇ ವಾ ಸಮರ್ಥಾಸ್ತೇ ಕುರು ಯತ್ನಂ ತಥಾ ಫಣೇ ॥೧೧೨॥

ಪ್ರಾಯಃ ಕೃತೋಽಪಿ ಯತ್ನಸ್ತೇ ವಿಫಲೋಽದ್ಯ ಭವಿಷ್ಯತಿ ।
ರುದ್ರಕೋಪಾನಲಸ್ತಂಭೇ ಕಃ ಸಮರ್ಥೋ ಜಗತ್ತ್ರಯೇ ॥೧೧೩॥

---

ಒಂದು ಸಭೆಯಲ್ಲಿ ಒಬ್ಬ ಪಾಪಿಯಿದ್ದರೂ ಆತನನ್ನು ನಿಂದಿಸಿ ಹೊರಕ್ಕೆ ತಳ್ಳಬೇಕು. ಆತನ ಸಹವಾಸದಿಂದ ಆ ಸಭೆಯೇ ದೂಷ್ಯವೆನಿಸುವುದು. ದೇವತೆಗಳೊಳಗೆ ಒಬ್ಬನು ಶಿವಪೂಜೆಮಾಡದಿದ್ದರೂ ಅದು ಎಲ್ಲಾ ದೇವತೆಗಳ ನಾಶಕ್ಕೆ ಕಾರಣವೆಂದು ತಿಳಿಯಬೇಕು. ಆದುದರಿಂದ ಲೋಕದಲ್ಲಿ ಅಶೈವರು ಯಾರೂ ನಮಗೆ ರಕ್ಷಕರಾಗಲಾರರು. ಆತನ ಹೆದರಿಕೆಯಿಂದ ನಾವು ಈಗ ನಿನ್ನ ಮಂದಿರಕ್ಕೆ ಬಂದಿದ್ದೇವೆ. ॥೧೦೯-೧೧೦-೧೧೧॥

ಎಲೈ! ನಾಗೇಂದ್ರನೇ, ನಿನ್ನ ವಿಷಜ್ವಾಲೆಗಳು ಹೇರಳವಾಗಿವೆ. ಅವೆಲ್ಲಾ ಪ್ರಳಯಾಗ್ನಿಯನ್ನು ನಾಶಮಾಡಬಲ್ಲವು. ಅಥವಾ ಸ್ತಂಭಿಸುವುವು. ಆದುದರಿಂದ ಅದರ ನಾಶಕ್ಕಾಗಿ ನೀನು ಈಗ ಯತ್ನಮಾಡು. ॥೧೧೨॥

ಸಾಮಾನ್ಯವಾಗಿ ನೀನು ಪ್ರಯತ್ನಮಾಡಿದರೆ ಆ ಪ್ರಳಯಾಗ್ನಿಯು ವಿಫಲವಾಗಲಾರದು. ಏಕೆಂದರೆ ಮೂರು ಲೋಕದಲ್ಲಿಯೂ ರುದ್ರಕೋಪಾಗ್ನಿಗೆ ಪ್ರತೀಕಾರ ಮಾಡುವವರು ಯಾರೂ ಇಲ್ಲ. ॥೧೧೩॥

ಅಸ್ಮಾಕಂ ಕುಂಠಿತಾ ಶಕ್ತಿಃ ಶಿವಾನರ್ಚಕಸಂಗಮಾತ್ ।
ಅತಃ ಪರಂ ಕ್ವ ಗಂತವ್ಯಮತ್ರಾಪ್ಯಾಯಾತಿ ಚೇತ್ಸ ತು ॥೧೧೪॥

ಕೂರ್ಮಸ್ತಿಷ್ಠತಿ ಯತ್ರೈವ ತತ್ರಾಪಿ ಗಮನೇ ಸ ತು ।
ರುದ್ರಕೋಪಾನಲೋ ದೇವಾನ್ ನ ತ್ಯಕ್ಷ್ಯತಿ ನ ಸಂಶಯಃ ॥೧೧೫॥

ಅಕಾಂಡಪ್ರಳಯಃ ಕೋಯಮದ್ಯ ತಾವದುಪಾಗತಃ ।
ಇತ್ಯುಕ್ತ್ವಾ ಕೂರ್ಮನಿಲಯಂ ಪ್ರಾಪುರ್ನಾರಾಯಣಾದಯಃ ॥೧೧೬॥

ಸ ಕೂರ್ಮಃ ಪ್ರಾಹ ತಾನ್ ಭೀತಾನ್ ದೃಷ್ಟ್ವಾ ನಾರಾಯಣಾದಿಕಾನ್ ।
ಕಿಮತ್ರಾಗತಮಿತ್ಯುಚ್ಚೈಃ ಘನಗಂಭೀರಯಾ ಗಿರಾ ॥೧೧೭॥

ತಮಾಹ ಹರಿರತ್ಯುಚ್ಚೈಃ ಕಿಂ ಕ್ರುದ್ಧಃ ಕೂರ್ಮ ಕರ್ಮಣಾ ।
ಪ್ರಳಯಾನಲಭೀತಾನಾಂ ದೃಷ್ಟಮಾಗಮನಂ ನ ಕಿಂ ॥೧೧೮॥

---

ನಾವು ಅಶೈವರ ಸಹವಾಸಮಾಡಿದುದರಿಂದ ನಮ್ಮ ಶಕ್ತಿಯು ಕಡಿಮೆಯಾಯಿತು. ಇನ್ನು ಮುಂದೆ ಎಲ್ಲಿ ಹೋಗೋಣ? ಇಲ್ಲಿಗೂ ಕೂಡ ಆ ಪ್ರಳಯಾಗ್ನಿಯು ಬರುವುದಾದರೆ ನಾವು ಮತ್ತೆಲ್ಲಿಗೆ ಹೋಗುವುದು? ॥೧೧೪॥

ಕೂರ್ಮನು ಇದ್ದಲ್ಲಿಗೆ ಹೋಗೋಣವೆಂದರೆ ಅಲ್ಲಿಯೂ ಸಹ ರುದ್ರನ ಕ್ರೋಧಜ್ಯೋತಿಯು ದೇವತೆಗಳನ್ನು ನಾಶಮಾಡದೇ ಬಿಡದು. ಇದು ನಿಶ್ಚಯ. ॥೧೧೫॥

ಅಕಾಲದಲ್ಲಿ ಎಂತಹ ಕಷ್ಟವು ನಮಗೆ ಉಂಟಾಯಿತು. ಎಂದು ಹೇಳುತ್ತಾ ಆ ನಾರಾಯಣನೇ ಮೊದಲಾದವರು ಆದಿಕೂರ್ಮನಿರುವಲ್ಲಿಗೆ ಓಡಿಹೋದರು. ॥೧೧೬॥

ಆ ಕೂರ್ಮನು, ಹೆದರಿ ಬಂದಿರುವ ನಾರಾಯಣನೇ ಮೊದಲಾದವರನ್ನು ಕಂಡು, ನೀವು ಏತಕ್ಕಾಗಿ ಇಲ್ಲಿಗೆ ಹೀಗೆ ಬಂದಿರೆಂದು ಗಟ್ಟಿಯಾಗಿ ಮೇಘಧ್ವನಿಯಿಂದ ಕೇಳಿದನು. ॥೧೧೭॥

ಆತನು ಹೇಳಿದುದನ್ನು ಕೇಳಿ ಹರಿಯು, "ಎಲೈ ಕೂರ್ಮನೇ, ನಮ್ಮ ಆಗಮನದಿಂದ ನಿನಗೆ ಕೋಪಬಂದಿತೇ? ನಾವೆಲ್ಲರೂ ಪ್ರಳಯಾನಿಲಭೀತಿಯಿಂದ ಬಂದವರೆಂದು ತಿಳಿ. ॥೧೧೮॥

ಪೃಷ್ಟಂ ನ ಕುಶಲಂ ಕಿಂಚಿತ್ಕಿನ್ನೇವಮುಚಿತಂ ತವ ।
ಆರ್ತಾರ್ಯಾರ್ತಿಪ್ರದಾನೇನ ಪುನರಾರ್ತಿರ್ಭವಿಷ್ಯತಿ ॥೧೧೯॥

ತನ್ನಿವರ್ತನಚಿಂತಾಪಿ ಕಾಪಿ ಕಾರ್ಯಾ ತ್ವಯಾ ಖಲು ।
ಇತ್ಯುಕ್ತೋ ಹರಿಣಾ ಸೋಽಪಿ ಕೂರ್ಮಃ ಪ್ರಾಹ ಪುನಃ ಸುರಾನ್ ॥೧೨೦॥

॥ ಶ್ರೀಕೂರ್ಮ ಉವಾಚ ॥

ಯೇನ ನಾರಾಧಿತೋ ರುದ್ರಸ್ತನ್ನಾಶಾಯ ಪರಂ ಮಹಾನ್ ।
ರುದ್ರಕೋಪಾನಲೋ ಜಾತೋ ಸ ನ ಸರ್ವವಿನಾಶಕಃ ॥೧೨೧॥

ರುದ್ರಕೋಪಾನಲೋ ವೇದ ಸರ್ವಜ್ಞೋ ರುದ್ರದೂಷಕಂ ।
ಸ ತಂ ಸಂಹತ್ಯ ಸಹಸಾ ಪ್ರಯಾಸ್ಯತಿ ನ ಸಂಶಯಃ ॥೧೨೨॥

ಸರ್ವೇಷಾಮಪಿ ನಾಶಾಯ ನ ಪ್ರವೃತ್ತಃ ಸ ಸರ್ವಥಾ ।
ಮಹಾಪ್ರಳಯಕಾಲಃ ಕಿಂ ಸೋಽಯಂ ಯೇನ ಭಯಂ ಭವೇತ್ ॥೧೨೩॥

---

ಎಲೈ! ಕೂರ್ಮನೇ, ನೀನು ನಮ್ಮ ಯೋಗಕ್ಷೇಮವನ್ನು ವಿಚಾರಿಸಲಿಲ್ಲ. ಇದು ನಿನಗೆ ಉಚಿತವೇ? ಅಲ್ಲದೇ ಹೀಗೆ ತರ್ಜಿಸುವುದರಿಂದ ಪೀಡಿತರಾದವರಿಗೆ ಮತ್ತೆ ತೊಂದರೆಕೊಟ್ಟರೆ ಅವರ ವ್ಯಥೆ ಮತ್ತೂ ಹೆಚ್ಚುತ್ತದೆಯಲ್ಲವೆ? ॥೧೧೯॥

ಕೂರ್ಮನೇ! ಈಗ ಬಂದಿರುವ ತೊಂದರೆಯನ್ನು ನಿವಾರಿಸಲು ನೀನು ಯೋಚಿಸಬೇಕಲ್ಲದೇ ಬೇರೆ ಆಡಬೇಡ" ಹೀಗೆ ಹೇಳಿದ ವಿಷ್ಣುವನ್ನು ಕುರಿತು ಮತ್ತೆ, ಆದಿಕೂರ್ಮನು ಹೀಗೆ ಹೇಳತೊಡಗಿದನು. ॥೧೨೦॥

"ಎಲೈ ದೇವತೆಗಳಿರಾ, ಯಾವನು ಶಿವನನ್ನು ಪೂಜಿಸಲಿಲ್ಲವೋ ಅವನನ್ನು ಮಾತ್ರ ಸಂಹರಿಸುವುದಕ್ಕಾಗಿ ರುದ್ರಕೋಪಾಗ್ನಿಯು ಅವತರಿಸಿದೆ. ಎಲ್ಲರನ್ನೂ ಅದು ನಾಶಮಾಡುವುದಿಲ್ಲ. ಆ ರುದ್ರಕೋಪಾಗ್ನಿಯು ಎಲ್ಲವನ್ನೂ ಅರಿತಿರುವುದರಿಂದ, ಅದು ರುದ್ರನಿಂದೆ ಮಾಡಿದವರನ್ನು ಮಾತ್ರ ಕೊಂದು ಹೊರಟುಹೋಗುತ್ತದೆ. ॥೧೨೧-೧೨೨॥

ಖಂಡಿತವಾಗಿಯೂ ಪ್ರಳಯಾಗ್ನಿಯು ಎಲ್ಲರನ್ನೂ ನಾಶಮಾಡಲಾರದು. ಶಿವದೂಷಕನನ್ನು ಮಾತ್ರ ಅದು ಸಂಹರಿಸದೇ ಬಿಡದು. ಆದುದರಿಂದ ಭಯವೇತಕ್ಕೆ?" ಎಂದು ಕೂರ್ಮನು ಹೇಳಿದನು. ॥೧೨೩॥

ಇತಿ ತದ್ವಚನಂ ಶ್ರುತ್ವಾ ವಿಸ್ಮಿತೋ ಹರಿರಾಹ ತಂ ।
ಸಮ್ಯಗುಕ್ತ ಮಿತಿಪ್ರೀತಃ ಸವಿಚಾರರತೋಽಭವತ್ ॥೧೨೪॥

ಮಹೇಶಾರ್ಚನಂ ಯೇನ ಕೃತಂ ವಾ ಶಿವದೂಷಣಂ ।
ತನ್ನಾಶಾಯ ಸಮುತ್ಪನ್ನಃ ಸೋಽಯಮಿತ್ಯವಧಾರಿತಃ ॥೧೨೫॥

ಯನ್ನಾಶಾಯ ಯಮಾಯಾತಿ ರುದ್ರಕೋಪಾನಲೋ ಮಹಾನ್ ।
ಸ ಬಹಿಷ್ಕಾರ್ಯ ಏವಾತಸ್ತೇನ ಸ್ಯಾತ್ಸುಖಿನೋ ವಯಂ ॥೧೨೬॥

ಏಕಾರ್ಥಮತ್ರ ಸರ್ವೇಷಾಮದ್ಯ ನಾಶಃ ಕಥಂ ಭವೇತ್ ।
ಅತಃ ಪರಂ ಶಿವದ್ರೋಹೀ ಕಃ ಸುರೇಷ್ವಿತಿ ನಿಶ್ಚಯಃ ॥೧೨೭॥

ನ ದಿವ್ಯೇನ ವಿನಾ ತಾವತ್ ತಸ್ಯ ತಾವದ್ವಿನಿರ್ಣಯಃ ।
ದಿವ್ಯಂ ಕಿಮಸ್ತಿ ವಾ ತೀಕ್ಷ್ಣಮಿತಿ ಚಿಂತಾ ಪ್ರಜಾಯತೇ ॥೧೨೮॥

ಇತಿ ತಾವದ್ವಿಚಾರೇಣ ತಪ್ತತೈಲನಿಮಜ್ಜನಂ ।
ಪರಮಂ ದಿವ್ಯಮಿತ್ಯುಕ್ತ್ವಾ ಹೃಷ್ಟೋ ನಾರಾಯಣಸ್ತದಾ ॥೧೨೯॥

---

ಹೀಗೆ ಕೂರ್ಮನಂದ ಮಾತನ್ನು ಕೇಳಿ ವಿಷ್ಣುವು ತುಂಬಾ ಆಶ್ಚರ್ಯ ಪಟ್ಟು ಹೀಗೆಂದನು. ಎಲೈ ಕೂರ್ಮನೇ, ನೀನು ಚನ್ನಾಗಿ ಹೇಳಿದೆ. ನಿನ್ನ ಮಾತಿನಿಂದ ನಾನು ಪ್ರೀತನಾದೆನು, ಎಂದು ಹೇಳಿ, ವಿಚಾರಮಾಡುತ್ತಾ ಬಳಿಕ ಯಾವನು ಶಿವಾರ್ಚನೆ ಮಾಡಲಿಲ್ಲವೋ ಮತ್ತು ಶಿವದೂಷಣೆಯನ್ನು ಯಾವನು ಮಾಡಿದನೋ ಅಂತಹವನಿಗಾಗಿ ಈ ಪ್ರಳಯಾಗ್ನಿಯು ಹುಟ್ಟಿದೆ. ಎಂದು ನಿಶ್ಚೈಸಿದನು. ॥೧೨೪-೧೨೫॥

ಯಾವನನ್ನು ನಾಶಮಾಡುವುದಕ್ಕಾಗಿ ರುದ್ರಕೋಪಾಗ್ನಿಯು ಬರುತ್ತದೆಯೋ ಅವನನ್ನು ಜಾಗ್ರತೆ ಹೊರಗೆ ಹಾಕಬೇಕು. ನಾವು ಅದರಿಂದ ನೆಮ್ಮದಿಯನ್ನು ಹೊಂದುವೆವು. ಒಬ್ಬನಿಗಾಗಿ ಎಲ್ಲರ ನಾಶವೂ ಆಗಬಾರದು. ಆದುದರಿಂದ ದೇವತೆಗಳಲ್ಲಿ ಶಿವದ್ರೋಹಿಯು ಯಾರೆಂದು ಮೊದಲು ನಿಶ್ಚಯಿಸಬೇಕು. ॥೧೨೭॥

ದಿವ್ಯವಾದ ಒಂದು ಶಿಕ್ಷೆಯಿಲ್ಲದೇ ನಮ್ಮ ಅಪರಾಧವು ತಿಳಿಯುವಂತಿಲ್ಲ. ಅಂತಹ ದೇವಲೋಕದ ಶಿಕ್ಷೆಯಾವುದೆಂದು ಯೋಚಿಸುತ್ತೇನೆ. ಅಂದರೆ ಎಲ್ಲರೂ

ತತಃ ಪರಂ ಸಮಾಹೂಯ ಲಕ್ಷ್ಮೀಕಾಂತಃ ಶಿವಾರ್ಚಕಃ ।
ಚತುರ್ಮುಖಂ ಸಮಾಲೋಕ್ಯ ಪ್ರಾಹ ಸಂತುಷ್ಟಮಾನಸಃ ॥೧೩೦॥

॥ ನಾರಾಯಣ ಉವಾಚ ॥

ದಿವ್ಯೇನ ನಿರ್ಣಯಸ್ತಾವದಶೇಷಸ್ಯ ಭವಿಷ್ಯತಿ ।
ತೇನೈವ ತಾವತ್ತನ್ನಾಶೋ ಭವತ್ವತ್ರಾದರೇಣ ತು ॥೧೩೧॥

ಅಶೈವಾದರಮಾತ್ರೇಣ ಸರ್ವನಾಶೋ ಭವಿಷ್ಯತಿ ।
ನರಕೇಷ್ವಪಿ ಸಂವಾಸೋ ಭವಿಷ್ಯತಿ ನ ಸಂಶಯಃ ॥೧೩೨॥

ಕಿಮಶೈವಾದರೇಣಾಪಿ ಕಾರ್ಯಮತ್ರ ವಿಚಕ್ಷಣೈಃ ।
ತನ್ನಿರ್ಣಯೋತ್ತರಂ ತಸ್ಯ ಮತ್ತೋ ನಾಶೋ ಭವಿಷ್ಯತಿ ॥೧೩೩॥

ಅಶೈವನಾಶನಾಯಾಹಂ ಸೃಷ್ಟಃ ಶಂಕರಲೀಲಯಾ ।
ಅತೋ ಮದೀಯಕಾರ್ಯಸ್ಯ ನ ಕರ್ತಾನ್ಯೋ ಭವಿಷ್ಯತಿ ॥೧೩೪॥

---

ಚನ್ನಾಗಿ ಕಾದ ಎಣ್ಣೆಯಲ್ಲಿ ಮುಳುಗುವುದು ದಿವ್ಯಶಿಕ್ಷೆಯೆಂದು ನನಗೆ ತೋರುತ್ತಿದೆ. ಎಂದು ನಾರಾಯಣನು ಹೇಳುತ್ತಾ ಮನದಲ್ಲಿ ಹರ್ಷಗೊಂಡನು. ॥೧೨೯॥

ಬಳಿಕ ಲಕ್ಷ್ಮೀಕಾಂತನೂ ಶಿವಪೂಜಾಧುರಂಧರನೂ ಆದ ವಿಷ್ಣುವು ಸಂತೋಷದಿಂದ ಬ್ರಹ್ಮನನ್ನು ನೋಡಿ ಹೀಗೆಂದನು. ॥೧೩೦॥

ದಿವ್ಯನಿರ್ಣಯದಿಂದ. ನಾವು ಹಾಗೆ ಆಚರಿಸಿದರೆ ಶಿವಪೂಜಾನಿಂದಕನು ಆದರಿಂದಲೇ ನಾಶಹೊಂದುವನು. ॥೧೩೧॥

ಶಿವದ್ವೇಷಿಯಾಗಿರುವ ಶೈವನಲ್ಲದವನನ್ನು ಆದರಿಸಿದರೆ ಎಲ್ಲರಿಗೂ ಈಗಲೇ ಅವಸಾನ ಬರುವುದು. ಅಲ್ಲದೇ ನರಕದಲ್ಲಿ ಎಲ್ಲಾ ದೇವತೆಗಳೂ ವಾಸಮಾಡಬೇಕಾಗುವುದು. ಇದು ನಿಶ್ಚಯ. ॥೧೩೨॥

ಈಗ ಅಂತಹ ಶಿವದ್ವೇಷಿಯನ್ನು ಆದರಿಸಬೇಕಾದ ಕಾರ್ಯತಾನೇ ಏನಿರುವುದು ? ಮೊದಲು ಅಪರಾಧಿಯಾರೆಂದು ತಿಳಿದರೆ ಒಡನೆಯೇ ಅವರನ್ನು ನಾನೇ ಸಂಹರಿಸುವೆನು. ॥೧೩೩॥

ಶೈವರಲ್ಲದವರನ್ನು ಸಂಹರಿಸಲೋಸುಗ ಈಶ್ವರನು ತನ್ನ ಲೀಲೆಯಿಂದ ನನ್ನನ್ನು ಸೃಷ್ಟಿಸಿರುವನು. ಆದುದರಿಂದ ಅಶೈವರನ್ನು ನಾಶಮಾಡುವುದು ನನ್ನ

ನ ಶಿವದ್ರೋಹಿಣಾ ಸಂಗೋ ಮಂಗಳಾಯ ಭವಿಷ್ಯತಿ ।
ಅಮಂಗಳಪ್ರದತ್ವೇನ ತತ್ಸಂಗೋ ನಿಶ್ಚಿತೋ ಯತಃ ॥೧೩೫॥

ಅಲಂ ಕಿಲಾಶೈವಜನಾನುರಂಜನೈ
ರ್ಮಹಾಘಸಂಪಾದನಹೇತುಭೂತೈಃ ।
ವಶಂಗಮೇನಾಖಿಲದುಃಖಭೋಗೋ
ಭವಿಷ್ಯತೀತ್ಯೇವ ವಿನಿರ್ಣಯೋ ಮೇ ॥೧೩೬॥

ಅಶೈವಸಂಗಾಶುವಿನಾಶನಾಯ
ಯತ್ನಃ ಕೃತಶ್ಚೇತ್ ಸಫಲಂ ನ ಮಹ್ಯಂ ।
ಸುಖಾಯ ತಾವದ್ಭವತೀತಿ ಮನ್ಯೇ
ಧನ್ಯೋಽಪಿ ತೇನೈವ ಭವಾಮಿ ನೂನಂ ॥೧೩೭॥

ಅಶೈವ ಏವಾಖಿಲಪಾಪರೂಪಃ
ತನ್ನಾಶನಾಯಾದ್ಯ ಕೃತಃ ಪ್ರಯತ್ನಃ ।
ಸುಖಪ್ರವಾಹಾನ್ ಜನಯತ್ಯವಶ್ಯಂ
ತನ್ನಾಶನೋಪಾಯವಿನಿಶ್ಚಯೋ ಮೇ ॥೧೩೮॥

---

ಕರ್ತವ್ಯ ನನ್ನ ಕೆಲಸವನ್ನು ಇನ್ನೊಬ್ಬನು ತಡೆಗಟ್ಟುವುದಾಗಲಿ, ತಾನೇ ನಡೆಸುವುದಾಗಲಿ ಹೇಗೆ? ॥೧೩೪॥

ಶಿವನಿಗೆ ವಿರುದ್ಧನಾದವನ ಸಹವಾಸ ಮಾಡುವುದರಿಂದ ಒಳ್ಳೆಯದಾಗಲಾರದು. ಅಮಂಗಳ ಕೊಡತಕ್ಕ ಅಶೈವನ ಸಹವಾಸವನ್ನು ಬಿಡಬೇಕೆಂದು ನಿಶ್ಚಯಿಸಿದೆ. ॥೧೩೫॥

ಶಿವಭಕ್ತನಲ್ಲದವನೊಡನೆ ವ್ಯವಹರಿಸುವುದು ಮಹಾ ಪಾಪಗಳಿಗೆ ಕಾರಣವಾಗುವುದು. ಅಲ್ಲದೇ ಆತನ ಸಂಗದಿಂದ ಅನೇಕ ದುಃಖಗಳನ್ನು ಅನುಭವಿಸಬೇಕಾಗುತ್ತದೆಯೆಂದು ನನ್ನ ಅಭಿಪ್ರಾಯ. ॥೧೩೬॥

ಈಶ್ವರಾರ್ಚನೆ ಮಾಡದವರನ್ನು ಜಾಗ್ರತೇ ನಾಶಮಾಡಲು ಪ್ರಯತ್ನ ಮಾಡಿದರೆ ಯತ್ನವು ಸಿದ್ಧಿಸುವುದೆಂದು ನನಗೆ ತೋರುವುದು. ಅಲ್ಲದೇ ಅದರಿಂದ ನನಗೆ ಸುಖವುಂಟಾಗುವುದು. ನಾನೂ ಧನ್ಯನಾಗುವೆನು. ॥೧೩೭॥

ಈಶ್ವರನಲ್ಲಿ ಭಕ್ತಿಯಿಲ್ಲದವನೇ ಪಾಪಸ್ವರೂಪನು. ಆದುದರಿಂದ ಆತನನ್ನು

ಯತ್ರಾಶೈವಾಃ ಸಂತಿ ತತ್ರೈವ ಗತ್ವಾ
ಚಕ್ರಂ ತಾವತ್ತಚ್ಛಿರಃ ಕೃಂತನಾನಿ ।
ಕೃತ್ವಾ ತಾವದ್ದೂರತೋ ಯಾತಿ ತಾದೃಕ್
ತಸ್ಯ ಶಕ್ತಿಃ ಕುಂಠಿತಾ ತತ್ರ ಸೂನಂ ॥೧೩೯॥

ಪ್ರಬಲಾರಿವಿನಾಶನಾಯ ಚಕ್ರಂ
ಗಿರಿಶೇನಾಪಿ ತಥಾ ಪುರೈವ ಸೃಷ್ಟಂ ।
ಪ್ರಬಲಾರಿರಶಾಂಕರಸ್ತತಃ ಸ್ಯಾತ್
ಖಲು ಚಕ್ರೇಣ ವಿನಾಶ ಏವ ತಸ್ಯ ॥೧೪೦॥

ಚಕ್ರೇಣಾಶೈವನಾಶೇ ಕಥಮಪಿ ನ ಸುಖಾಭಾವಬುದ್ಧಿರ್ಭವಿತ್ರೀ
ತೇನಾನಂದಪ್ರವೃದ್ಧಿರ್ಭವತಿ ಚ ಬಹುಧಾ ತದ್ವಿನಾಶಾಯ ಚಕ್ರಂ ।
ಉದ್ಯುಕ್ತಂ ಚೇತಿ ಮನ್ಯೇ ಸತತಮಪಿ ನ ತತ್ ಕೃತ್ಯಮನ್ಯತ್ಕಿಮೇವಂ
ದುಃಖಂ ನೋ ಭಾವಿ ರೌದ್ರಾದಪಿ ದಹನಕುಲಾದನ್ಯತೋ ವಾ ಯಮಾದ್ವಾ
॥೧೪೧॥

---

ಧ್ವಂಸಮಾಡಬೇಕು. ಆದರಿಂದ ಸೌಭಾಗ್ಯವೂ ಕ್ಷೇಮವೂ ಲಭಿಸುತ್ತದೆ. ಅಂತಹ ವನನ್ನು ನಾಶಮಾಡಬೇಕೆಂದೇ ನನ್ನ ನಿಶ್ಚಯ. ॥೧೩೮॥

ಎಲ್ಲಿ ಅಶೈವರು ವಾಸಿಸುವರೋ ಅಲ್ಲಿಗೇ ಈ ನನ್ನ ಚಕ್ರವು ಹೋಗಿ ಅವರ ತಲೆಗಳನ್ನು ಕತ್ತರಿಸಲಿ. ಅವರ ಶಕ್ತಿಯು ಕೂಡಲೇ ಕುಂಠಿತವಾಗಲಿ.॥೧೩೯॥

ಈ ಚಕ್ರವು ಬಲಿಷ್ಠರಾದ ಶತ್ರುಗಳನ್ನು ನಾಶಗೊಳಿಸುವುದಕ್ಕಾಗಿ ಈಶ್ವರ ನಿಂದಲೇ ಹಿಂದೆ ಸೃಷ್ಟವಾಯಿತು. ನಮಗೆ ಪ್ರಬಲನಾದ ಶತ್ರುವೆಂದರೆ ಈಗ ಅಶೈವನಾದುದರಿಂದ ಆತನ ನಾಶವು ಖಂಡಿತ ಚಕ್ರದಿಂದಲೇ ಸಾಧ್ಯವೆನಿಸುವುದು. ॥೧೪೦॥

ಈ ಚಕ್ರದಿಂದ. ಅಶೈವನ ನಾಶವಾಗದೇ ನಮಗೆ ಸುಖವಿಲ್ಲ. ಮೊದಲು ಅಶೈವನು ನಾಶವಾಗಬೇಕು. ಆದರಿಂದ ನಮಗೆ ಸಂತೋಷವು ಲಭಿಸುವುದು. ಅವರ ವಧೆಗಾಗಿಯೇ ಇರುವ ಈ ಚಕ್ರವು ಈಗ ಉದ್ಯುಕ್ತವಾಯಿತೆಂದೇ ತಿಳಿಯುತ್ತೇನೆ. ಇದನ್ನು ಬಿಟ್ಟು ಬೇರೆಕೃತ್ಯವೀಗ ನಮಗೆ ತೋರುವುದಿಲ್ಲ. ಇದರಿಂದ ಮುಂದೆ ನಮಗೆ ರುದ್ರಾಗ್ನಿಯೇ ಆಗಲಿ ಯಮನೇ ಆಗಲೀ ಭಯಪಡಿಸಲಾರನು. ॥೧೪೧॥

ಧನ್ಯಂ ಜೀವನಮೇವ ತಾವದಧುನಾ ವಿಶ್ವೇಶ್ವರಾರಾಧನ
ಧ್ಯಾನಾತ್ತದ್ದ್ವಿಮುಖಾರ್ತಿಸಾಧನಪರಂ ಚಿತ್ತಂ ಯತೋ ಜಾಯತೇ ।
ಪುಣ್ಯೈರೇವಮುಪಾರ್ಜಿತಂ ಖಲು ಮನಸ್ತೇನಾಸ್ಯ ತೋಷೋ ಮಹಾನ್
ವೃದ್ಧಿಂ ಯಾಸ್ಯತಿ ಸಂಪದಾ ಸಹ ತದಾ ಶ್ರೀವಿಶ್ವನಾಥೇಚ್ಛಯಾ ॥೧೪೨॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಪಾತಾಲಲೋಕಂ ಪ್ರತಿ ದೇವಾದೀನಾಂ ಗಮನವರ್ಣನಂ ನಾಮ
ಚತುಸ್ತ್ರಿಂಶೋಽಧ್ಯಾಯಃ

---

ಈಗ ಈ ನನ್ನ ಜೀವನವು ಶ್ರೀಪರಮೇಶ್ವರನ ಆರಾಧನೆಯಿಂದ ಧನ್ಯವಾಯಿತೆಂದು ತಿಳಿಯುತ್ತೇನೆ. ಪರಶಿವನನ್ನು ದ್ವೇಷಿಸುವವರನ್ನು ವಧೆಮಾಡಲು ನನ್ನ ಮನಸ್ಸು ಪ್ರವರ್ತಿಸುತ್ತಿರುವುದು ನನಗೆ ಮಂಗಳಕ್ಕಾಗಿಯೇ. ಅದರಿಂದ ನನಗೆ ಪುಣ್ಯವೃದ್ಧಿಯಾಗುವುದು. ಮನಸ್ತೃಪ್ತಿಯೂ ನೆಲೆಗೊಳ್ಳುವುದು. ವಿಶ್ವನಾಥನ ಪ್ರೀತಿಯೂ ದೊರೆತು ನನಗೆ ಮತ್ತೂ ಐಶ್ವರ್ಯವು ವೃದ್ಧಿಹೊಂದುವುದು. ಎಂದು ಮಹಾವಿಷ್ಣುವು ಯೋಚಿಸಿದನೆಂಬುದಾಗಿ, ವಿಶ್ವಾವಸುರಾಜನು ತನ್ನ ಮಕ್ಕಳಿಗೆ ಶಿವಪೂಜಾಮಹಿಮೆಯನ್ನು ವಿವರಿಸಿದನು. ॥೧೪೨॥

ಇಲ್ಲಿಗೆ ಶ್ರೀಶಿವರಹಸ್ಯದ ಉತ್ತರಾರ್ಧದಲ್ಲಿ ದೇವತೆಗಳು ಹೆದರಿ ಪಾತಾಳಲೋಕಕ್ಕೆ
ಪ್ರಯಾಣಮಾಡಿದುದರ ವರ್ಣನೆಯೆಂಬ ಮೂವತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃಶ್ಶಿವಾಯ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಪಂಚತ್ರಿಂಶೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತ್ಯುಕ್ತ್ವಾ ಸ ಹರಿಸ್ತತ್ರ ಚತುರ್ಮುಖಮುಖಾನ್ ಸುರಾನ್ ।
ತತ್ರೈವ ದಿವ್ಯಸಾಮಗ್ರೀಸಂಪಾದನರತೋಽಭವತ್ ||೧||

ತತಃ ಸಂಪಾದ್ಯ ಸಾಮಗ್ರೀಂ ದಿವ್ಯಸ್ಯ ಸಹರಿಸ್ತದಾ ।
ತಪ್ತತೈಲಕಟಾಹೇಷು ಪ್ರವಿಷ್ಟಃ ಸ್ವಯಮಾಸ್ತಿಕಃ ||೨||

ಮಹೇಶ್ವರಾನರ್ಚನದೂಷಣಾದ್ಯೈಃ
ಜಾತಾನಿ ಪಾಪಾನಿ ಲಯಂ ಪ್ರಯಾಂತು ।

---

## ಮೂವತ್ತೈದನೆಯ ಅಧ್ಯಾಯ

ಆ ಶ್ರೀಮಹಾವಿಷ್ಣುವು ಹೀಗೆ ಬ್ರಹ್ಮನೇ ಮೊದಲಾದ ದೇವತೆಗಳಿಗೆ ಹೇಳಿ ಅಲ್ಲಿಯೇ ಪರೀಕ್ಷಾರ್ಥವಾದ ದಿವ್ಯಸಾಮಗ್ರಿಗಳನ್ನು ಸಂಪಾದಿಸಲು ತೊಡಗಿದನು.||೧||

ಬಳಿಕ ಆಸ್ತಿಕನಾದ ಹರಿಯು ಪರೀಕ್ಷಾಸಾಮಗ್ರಿಯನ್ನು ಹೊಂದಿಸಿಕೊಂಡನು. ಒಡನೆಯೇ ಚನ್ನಾಗಿ ಕಾಯಿಸಿರುವ ಎಣ್ಣೆಕೊಪ್ಪರಿಗೆಯನ್ನು ಮೊದಲು ತಾನು ಪ್ರವೇಶಿಸಿದನು. ||೨||

ವಿಷ್ಣುವು, ತಾನು ಶಿವನನ್ನು ಪೂಜಿಸದೇ ಇರುವಿಕೆಯಿಂದಲೋ ಅಥವಾ ಶಿವನಿಂದೆಮಾಡಿದವನ ದರ್ಶನದಿಂದಲೋ ಉಂಟಾದ ತನ್ನ ಪಾಪಸಮೂಹವು

ಅನೇನ ದಿವ್ಯೇನ ಮಮೇತಿ ಮತ್ವಾ
ತೇಷು ಪ್ರವಿಷ್ಟಃ ಕಮಲಾನ್ವಿತೋಽಪಿ ॥೩॥

ಪಶ್ಚಾಚ್ಚತುರ್ಮುಖಸ್ತತ್ರ ಪ್ರವಿಷ್ಟಸ್ತದನುಜ್ಞಯಾ ।
ಸರಸ್ವತ್ಯಾ ಸಹ ಪ್ರೀತ್ಯಾ ಶಿವಪೂಜಾಪರಾಯಣಃ ॥೪॥

ಇಂದ್ರಃ ಪುಲೋಮಜಾಯುಕ್ತೋ ಜಯಂತೇನ ಸಮನ್ವಿತಃ ।
ತಪ್ತತೈಲಕಟಾಹೇಷು ಪ್ರವಿಷ್ಟಸ್ತದನುಜ್ಞಯಾ ॥೫॥

ಸೂರ್ಯೋದಯೇ ಪ್ರವಿಷ್ಟಾಸ್ತೇ ಸ್ವಕುಟುಂಬಸಮನ್ವಿತಾಃ ।
ಸ್ವಪುತ್ರೈರಪಿ ಸಂಯುಕ್ತಾಃ ಸ್ವದಾಯಾದಸಮನ್ವಿತಾಃ ॥೬॥

ತದಾ ತೇಷು ಪ್ರವಿಷ್ಟಾಂಸ್ತಾನ್ ಕಟಾಹೇಷು ಸುರಾನ್ ಮುಹುಃ ।
ಪಶ್ಯನ್ ಖಿನ್ನಾನನೋ ಜಾತೋ ಮದನಃ ಶಿವದೂಷಕಃ ॥೭॥

---

ನಾಶವಾಗಲೆಂದು ಯೋಚಿಸಿ ಶ್ರೀಲಕ್ಷ್ಮೀದೇವಿಯೊಡಗೂಡಿ, ಲಕ್ಷ್ಯಮಾಡದೆ ದಿವ್ಯ ಸಾಧನಗಳನ್ನು ಸಂಪಾದಿಸಿಕೊಂಡು ಎಣ್ಣೆಕೊಪ್ಪರಿಗೆಯಲ್ಲಿ ಬಿದ್ದನು. ॥೩॥

ಅದನ್ನು ನೋಡಿ ಬ್ರಹ್ಮನು ವಿಷ್ಣುವಿನ ಅಪ್ಪಣೆಯಮೇರೆಗೆ ಶಿವಪೂಜಾರತನಾದ ಆತನೂ ಸಹ ಸರಸ್ವತಿಯೊಂದಿಗೆ ಆ ಕಾದ ಎಣ್ಣೆಯ ಕಟಾಹವನ್ನು ಪ್ರವೇಶಿಸಿದನು. ॥೪॥

ಹಾಗೆಯೇ ಇಂದ್ರನೂ ಕೂಡ ನಾರಾಯಣನ ಆಜ್ಞೆಯಂತೆ ಶಚೀ ಮತ್ತು ಜಯಂತ ಇವರೊಂದಿಗೆ ತೈಲಕಟಾಹಗಳನ್ನು ಹೊಕ್ಕನು. ॥೫॥

ಸೂರ್ಯನು ಉದಯಿಸುವ ಹೊತ್ತಿಗೆ ಅವರೆಲ್ಲರೂ ತಮ್ಮ ತಮ್ಮ ಕುಟುಂಬ ಸಹಿತರಾಗಿಯೂ ಮತ್ತು ತಮ್ಮ ಜ್ಞಾತಿಗಳೊಡಗೂಡಿಯೂ ಕಾದ ಎಣ್ಣೆಕೊಪ್ಪರಿಗೆಯನ್ನು ಪ್ರವೇಶಿಸಿದರು. ॥೬॥

ಆಗ ಆ ಎಣ್ಣೆ ಕಡಾಣದಲ್ಲಿ ಬಿದ್ದಿರುವ ಅವರೆಲ್ಲರನ್ನೂ ದೇವತೆಗಳನ್ನೂ ಮನ್ಮಥನು ನೋಡಿದನು. ಒಡನೆಯೇ ಶಿವನಿಂದಕನಾದ ಆತನಿಗೆ ಬಹು ದುಃಖವುಂಟಾಯಿತು. ॥೭॥

ತತಃ ಸರ್ವೇ ಸಮುತ್ಥಾಯ ಕಟಾಹೇಭ್ಯಃ ಪ್ರಹರ್ಷಿತಾಃ ।
ತಾನ್ ದೃಷ್ಟ್ವಾ ಸುತರಾಂ ಖಿನ್ನೋ ಮದನೋ ವಿನತಾನನಃ ॥೮॥

ತತಸ್ತಂ ಮದನಂ ದೃಷ್ಟ್ವಾ ದುಷ್ಟಂ ನಾರಾಯಣಸ್ತದಾ ।
ಪ್ರಾಹ ತಂ ಮದನಂ ಮತ್ತಂ ಶಿವನಿಂದಾನಲಾಶ್ರಯಂ ॥೯॥

॥ ನಾರಾಯಣ ಉವಾಚ ॥

ರೇ ! ರೇ ! ಮದನ! ದುರ್ವೃತ್ತ ಕಿಂ ತ್ವಯಾ ದೂಷಿತಃ ಶಿವಃ ।
ಅಯಂ ಪ್ರಳಯಕಾಲಾಗ್ನಿಸ್ತ್ವದರ್ಥಂ ಸಮುಪಾಗತಃ ॥೧೦॥

ರೇ ! ರೇ ! ಮಾರ ! ದುರಾಚಾರ ದುಷ್ಟ ಶಿಷ್ಟವಿದೂಷಕ ।
ಶಿವಃ ಶಿವಪ್ರದತ್ವೇನ ನ ಜ್ಞಾತೋ ನಿಂದಿತಃ ಕಥಂ ॥೧೧॥

ಸರ್ವಾಮರಾಧೀಶ್ವರಮಿಂದುಖಂಡ
ಕರಪ್ರಸಾದಾಕರಶೇಖರಂ ತಂ ।

---

ಬಳಿಕ ಆ ದೇವತೆಗಳೆಲ್ಲರೂ ಎಣ್ಣೆಕೊಪ್ಪರಿಗೆಗಳಿಂದ ಮೇಲೆ ಎದ್ದರು. ಅವರನ್ನು ನೋಡಿ ಅವರೆದುರಿಗೆ ಮನ್ಮಥನು ಅತ್ಯಂತ ದುಃಖದಿಂದ ತಲೆಬಾಗಿ ನಿಂತನು. ॥೮॥

ಆಗ ನಾರಾಯಣನು ದುಷ್ಟನಾದ ಆ ಮದನನನ್ನು ನೋಡಿದನು. ಮತ್ತು ಶಿವನಿಂದೆಯೆಂಬ ಅಗ್ನಿಯಿಂದ ಆವೃತನಾದ ಮದಿಸಿದ ಮನ್ಮಥನೊಡನೆ ಇಂತೆಂದನು. ॥೯॥

ಎಲೈ ಮೂರ್ಖ ಮನ್ಮಥನೇ, ನೀನು ಈಶ್ವರನನ್ನು ನಿಂದಿಸಿದೆಯಾ ? ಆದುದರಿಂದಲೇ ಈ ಪ್ರಳಯಕಾಲದಂತಿರುವ ಅಗ್ನಿಜ್ವಾಲೆಯು ನಿನಗಾಗಿ ಕಾದಿದೆ. ॥೧೦॥

ಎಲೈ ಮದನನೇ, ನೀನು ದುಷ್ಟಾಚಾರವುಳ್ಳವನು. ಮೂರ್ಖನಾದ ನೀನು ಸಾಧುಗಳನ್ನು ದೂಷಿಸುತ್ತಿಯಾ ! ಶಿವನು ಮಂಗಳವನ್ನು ಕೊಡತಕ್ಕವನೆಂಬುದನ್ನು ತಿಳಿಯದೇ ಆತನನ್ನು ಬೈದೆಯಲ್ಲಾ! ಅದು ಹೇಗೆ ? ॥೧೧॥

ಎಲ್ಲಾ ದೇವತೆಗಳಿಗೂ ಶಿವನು ಒಡೆಯನು. ಚಂದ್ರಕಿರಣಗಳಿಂದ ರಂಜಿತವಾದ ಜಟಾಜೂಟವುಳ್ಳ ಆ ಶಂಕರನು ನಮಗೆ ನಾಯಕನು. ಆತನ ಮಹಿಮೆ

ಜಾನಂತಿ ಸರ್ವೇ ಮುನಯಃ ಸುರಾಶ್ಚ
ಸ ನಿಂದಿತಃ ಕಿಂ ಸ್ವವಿನಾಶಕಾಲೇ ॥೧೨॥

ಅಕಾಲಮೃತ್ಯುಃ ಖಲು ಕಾಲಕಾಲ
ನಿಂದಾನಲೋ ನೂನಮುಪೈತಿ ದೂರಾತ್ ।
ತೇನೈವ ದಾಹೋ ಭವಿತಾ ತವೇತಿ
ಹಾ ತಾತ ಕಿಂ ದುಷ್ಕೃತಮೀದೃಶಂ ತೇ ॥೧೩॥

ಮನೋಹರಃ ಸುಂದರವಿಗ್ರಹೋಽಸಿ
ಸೌಂದರ್ಯರಾಶಿಸ್ತ್ವಮಿಹ ತ್ರಿಲೋಕ್ಯಾಂ ।
ಕಥಂ ತವಾಸೀದ್ಗಿರಿಶಾಪರಾಧೋ
ಹಾ ಪುತ್ರ ಹಾ ಪುತ್ರ ಹತೋಽಸ್ಮಿ ॥೧೪॥

ಇದಂ ನ ವಿಜ್ಞಾತಮಹೋ ವಿಚಿತ್ರಂ
ಪುತ್ರೋಽಪಿ ಶತ್ರುತ್ವಮುಪಾಗತಸ್ತ್ವಂ ।
ತ್ರಿನೇತ್ರನಿಂದಾಕರಣೇನ ತಾವತ್
ಚಕ್ರಪ್ರವೃತ್ತಿಸ್ತ್ವಯಿ ನೋಚಿತಾ ಕಿಂ ॥೧೫॥

---

ಯನ್ನು ಮುನಿಗಳು, ದೇವತೆಗಳು, ಮೊದಲಾದ ಸರ್ವರೂ ಚೆನ್ನಾಗಿ ತಿಳಿದಿರುತ್ತಾರೆ. ಅಂತಹವನನ್ನು ನೀನು ಏತಕ್ಕೆ ನಿಂದಿಸಿದೆ? ॥೧೨॥

ಕಾಲಮಥನನಾದ ಶಂಕರನನ್ನು ನಿಂದಿಸುವುದು ಅಕಾಲಮೃತ್ಯುವಿಗೆ ಕಾರಣವಾಗುವುದು. ಆ ನಿಂದೆಯೆಂಬ ಅಗ್ನಿಯು ನಿನ್ನನ್ನು ದಹಿಸುವುದು. ಅಯ್ಯೋ! ಮಗುವೇ, ಎಂತಹ ದುಷ್ಟಕೆಲಸವನ್ನು ಮಾಡಿದೆ! ॥೧೩॥

ಮಗನೇ, ನಿನ್ನ ದೇಹವು ಎಷ್ಟು ಚಲುವಾದುದು! ನೀನು ಈ ಮೂರು ಲೋಕದಲ್ಲಿಯೂ ಸೌಂದರ್ಯ ರಾಶಿಯೆನಿಸಿರುವೆ. ಇಂತಹ ನೀನು ಹೇಗೆ ಅಪಕಾರ ಮಾಡಿದೆ. ಅಯ್ಯೋ, ಪುತ್ರನೇ ನಾನು ಹತನಾದೆನಲ್ಲಾ! ಈ ದಿನ ನನಗೆ ಉಳಿಗಾಲವಿಲ್ಲ. ॥೧೪॥

ಪುತ್ರನೇ, ನಿನಗೆ ಈ ವಿಚಾರವು ತಿಳಿಯದಿರುವುದು ವಿಚಿತ್ರವಾಗಿದೆ. ಮಗನಾದ ನೀನು ಈಗ ನನಗೆ ಶತ್ರುವಾದೆ. ಶ್ರೀಮಹೇಶ್ವರ ನಿಂದೆಯಿಂದ ದೂಷಿತನಾದ ನಿನ್ನಲ್ಲಿ ನಾನು ಈ ಚಕ್ರವನ್ನು ಹೇಗೆ ಪ್ರವರ್ತಿಸಲಿ. ॥೧೫॥

ಮಹೇಶನಿಂದಾಕರಣೋದ್ಯತಾನಾಂ
ನಾಶಾಯ ಸೃಷ್ಟಂ ಖಲು ಚಕ್ರಮಾದೌ ।
ಅತಃ ಪರಂ ಚಕ್ರಮಿದಂ ಶಿರಸ್ತೇ
ಹತ್ವಾ ಶಮಂ ಯಾಸ್ಯತಿ ವಹ್ನಿತುಲ್ಯಂ ॥೧೬॥

ಕೋ ವಾ ಜೀವಿತುಮಿಚ್ಛತಿ ತ್ರಿನಯನಾಹಂಕಾರಶಂಕಾಕರೋ
ರಂಕಾನೇವ ಸ ಪಶ್ಯತಿ ತ್ರಿಪುರಭೂದಾನಾಸಲೋ ಲೀಲಯಾ ।
ಸರ್ವಾನಪ್ಯಮರಾನಪಾರಕುಶಲಃ ಶ್ರೀಕಾಲಕಾಲಃ ಸ್ವಯಂ
ಕಸ್ತೇನಾಪಿ ಸಮಃ ಸುರೇಷು ಸ ಶಿವೋ ದೇವಾಧಿದೇವೋ ಭವಃ ॥೧೭॥

ಖದ್ಯೋತಾನಿವ ಪಶ್ಯತಿ ತ್ರಿನಯನಸ್ತ್ವಸ್ಮಾನ್ ಸುರಾನ್ ಸರ್ವಥಾ
ಕೋ ವಾ ತದ್ಗಣನೀಯತಾಮುಪಗತೋ ಯದ್ಭೃತ್ಯಭೃತ್ಯೈರಪಿ ।
ಬ್ರಹ್ಮಾಂಡಪ್ರಳಯಃ ಕೃತೋಽಪಿ ಬಹುಧಾ ದಗ್ಧಾಃ ಸುರಾಃ ಸೋರಗಾಃ
ಪೂರ್ವಂ ಶಂಕರನಿಂದಯಾ ಭ್ರಮವಶಾತ್ತೇನಾಪಿ ತುಲ್ಯೋಽಸ್ತಿ ಕಃ ॥೧೮॥

---

ಪರಮೇಶ್ವರನನ್ನು ನಿಂದಿಸುವವರ ನಾಶಕ್ಕಾಗಿಯೇ ಈ ಚಕ್ರವು ಹಿಂದೆ ಶಂಕರನಿಂದ ಸೃಷ್ಟವಾಯಿತು. ಆದುದರಿಂದ ಇನ್ನು ಅಗ್ನಿ ಸಮಾನವಾದ ಈ ಚಕ್ರವು ನಿನ್ನ ಶಿರಸ್ಸನ್ನು ಕತ್ತರಿಸಿ ಶಾಂತಿಯನ್ನು ಹೊಂದಲಿ. ॥೧೬॥

ತ್ರಿಲೋಚನನಾದ ಶಿವನ ವಿಷಯದಲ್ಲಿ ಅಹಂಕಾರದಿಂದ ನಡೆದುಕೊಳ್ಳುವವನಿಗೆ ಲೋಕದಲ್ಲಿ ಜೀವನದ ಆಸೆ ಇಲ್ಲವೆಂದು ಹೇಳಬಹುದು. ಅಂತಹವನನ್ನು ಶಿವನು ತ್ರಿಪುರರನ್ನು ಸುಟ್ಟ ದಾನವನಲ ನೋಟದಿಂದ ನೋಡುವನು. ಈ ಎಲ್ಲಾ ದೇವತೆಗಳಿಗೂ ಕ್ಷೇಮವನ್ನು ಉಂಟು ಮಾಡತಕ್ಕವನು ಶ್ರೀಶಂಕರನು. ಅಂತಹ ಸದಾ ಶಿವನೂ ದೇವದೇವನೂ ಆದ ಶಿವನಿಗೆ ಸಮನಾದವನು ಜಗತ್ತಿನಲ್ಲಿ ಯಾರೂ ಇಲ್ಲ. ॥೧೭॥

ಆ ತ್ರಿಲೋಚನನಾದ ಶಂಭುವು ನಮ್ಮೆಲ್ಲಾ ದೇವತೆಗಳನ್ನು ಮಿಣುಕು ಹುಳುಗಳ ಹಾಗೆ ಅಂದರೆ ತೀರ ಲಘುಭೂತರನ್ನಾಗಿ ನೋಡುವನು. ಆತನ ದೂತರ ಸೇವಕರಿಗೂ ನಾವು ಲಕ್ಷ್ಯರಲ್ಲ. ಈ ವಿಶ್ವವು ಆತನಿಂದಲೇ ಲಯವನ್ನು ಹೊಂದುವುದು. ಹಿಂದೆ ಅನೇಕ ಸುರರು, ಅಸುರರು, ನಾಗರು ಮೊದಲಾದವರು ಶ್ರೀಶಂಭು

ಶ್ರೀವಿಶ್ವೇಶ್ವರಸಾಗರೇ ವಯಮಮೀ ನೀರಾಣವಃ ಕೇವಲಂ
ಕಃ ಕಾಲೋಪಿ ಪುರಂದರೋ ವಿಧಿರಪಿ ನ್ಯಗ್ರಸ್ತಥೈವಾಪ್ಯಹಂ।
ತತ್ಕಂಪೇನ ಪರಂ ನಯಾಮಿ ದಿವಸಾನ್ ಮಾಂ ಕಾಲಕಾಲಃ ಕದಾ
ಕರ್ತುಂ ವಾಂಛತಿ ಕಾಲಪಾತ್ರವಶಗಂ ಕ್ರೋಧಾನಲೇನೇತ್ಯಪಿ ॥೧೯॥

ಅಂಧಾಸ್ತಾವದಮೀ ವಯಂ ಸುರಗಣಾಃ ಸರ್ವೇಽಪಿ ವೇದಾಸ್ತಥಾ
ಗಂಧರ್ವಾ ಅಪಿ ಕಿಂನರಾಶ್ಚ ಮುನಯಃ ಸಿದ್ಧಾಶ್ಚ ತದ್ವೈಭವಃ।
ಪಾರಾವಾರಇವಾಮರ್ತ್ಯೈರಪಿ ನ ವಿಜ್ಞಾತೋಽಪ್ಯಗಾಧೋಽಪ್ಯತಃ
ತಂ ದೇವಂ ವಯಮಪ್ರಮೇಯವಿಭವಂ ಗೌರೀಧರಂ ಭಾವಯೇತ್ ॥೨೦॥

ಯದ್ಭಾಲಾನಲಕೋಟಿಕೂಟಪಟಲಾಸಂಗಸ್ಫುಲಿಂಗಾಂಗಜ
ಜ್ವಾಲಾಜಾಲಲವೋಪಿ ಲೋಕವಿಲಯಂ ಕರ್ತುಂ ಪ್ರವೃತ್ತೋಽಧುನಾ।
ತತ್ಸಾಮರ್ಥ್ಯಮಪಾರವೇದನಿಕರಾಗಮ್ಯಂ ಚ ರಮ್ಯಂ ಮಹತ್
ಕಾಮ್ಯಂ ಚೇತಿ ನ ಕಾಮನಾವಿಷಯತಾಂ ಪ್ರಾಪ್ತಃ ಸ ದೇವಶ್ಶಿವಃ ॥೨೧॥

---

ವನ್ನು ದೂಷಿಸಿ ಅದಕ್ಕೆ ತಕ್ಕ ಫಲವನ್ನು ಪಡೆದಿರುವರು. ಆದ್ದರಿಂದ ಶಂಕರನಿಗೆ ಸರಿಸಮನಾಗಿ ಇರಲು ಯಾವನೂ ಸಮರ್ಥನಾಗಿಲ್ಲ. ॥೧೮॥

ಶ್ರೀಗೌರೀಶಂಕರನೆಂಬ (ವಿಶ್ವೇಶ್ವರನೆಂಬ) ಸಮುದ್ರದಲ್ಲಿ ನಾವೆಲ್ಲ ಜಲಪರಮಾಣುಗಳಂತೆ ಇರತಕ್ಕವರು. ಯಮ, ಇಂದ್ರ, ಬ್ರಹ್ಮ ಇವರು ಹೇಗೆ ಆ ಸಾಗರದಲ್ಲಿ ಸಿಕ್ಕಿ, ವ್ಯಾಕುಲರಾಗಿರುವರೋ ಹಾಗೆಯೇ ನಾನೂ ಆಗಿದ್ದೇನೆ. ಎಂದಿಗೆ ಕ್ರೋಧಾಕ್ರಾಂತನಾದ ಶಿವನು ನನ್ನನ್ನು ಕಾಲಪಾಶಕ್ಕೆ ಕಟ್ಟುವನೋ ಎಂಬ ಚಿಂತೆಯಿಂದ ನಾನು ನಡುಗುತ್ತಾ ದಿವಸಗಳನ್ನು ಕಳೆಯುತ್ತಿರುವೆನು. ॥೧೯॥

ದೇವತೆಗಳಾದ ನಾವೆಲ್ಲರೂ ವ್ಯರ್ಥರಾದೆವು. ಎಲ್ಲಾ ವೇದಗಳೂ ತಥ್ಯಾರ್ಥಬೋಧಕಗಳಾಗಲಿಲ್ಲ. ಮುನಿಗಳು, ಗಂಧರ್ವರು, ಕಿಂನರರು, ಸಿದ್ಧರು ಇವರೇ ಮೊದಲಾದವರೆಲ್ಲರೂ ಅಧನ್ಯರು. ಏಕೆಂದರೆ ಸಮುದ್ರದಂತೆ ಅಪಾರವಾದ ಆ ಶಿವವಿಭೂತಿಯನ್ನು ಇವರು ತಿಳಿಯಲಿಲ್ಲ. ಆದುದರಿಂದ ಗಣಿಸಲು ಎಣಿಸಲು ಸಾಧ್ಯವಲ್ಲದಿರುವಷ್ಟು ಮಹಿಮೆಯುಳ್ಳ ಶಂಕರನನ್ನು ಸದಾ ದೇವೋತ್ತಮನೆಂದು ಭಾವಿಸಬೇಕು. ॥೨೦॥

ಯಾವ ಪರಮೇಶ್ವರನ ಹಣೆಯಲ್ಲಿರುವ ಅಗ್ನಿ ನೇತ್ರದ ಜ್ವಾಲೆಗಳ ಕಿಡಿಗಳ ರಾಶಿಯ ಒಂದು ಚಿಕ್ಕ ಭಾಗವಾದರೂ ಅದು ಈ ಜಗತ್ತನ್ನು ಪ್ರಳಯ ಮಾಡ

ವಕ್ತುಂ ಕೋಽಪಿ ಸಹಸ್ರಕೋಟಿರಶನಾಜಾಲಾಶ್ರಯೋ ವಾ ಸ್ವಯಂ
ಸಾಮರ್ಥ್ಯಂ ಗಿರಿಶಸ್ಯ ಶಕ್ತ ಇತಿ ವಾ ಬದ್ಧಃ ಪ್ರವೃದ್ಧೋ ಭವೇತ್ ।
ತಂ ವೇದಾಂತವಚೋವಿಚಾರನಿರತವ್ಯಾಪಾರಸಾರಂ ಹರಂ
ವಂದೇ ಶಂಕರಮಿಂದುಶೇಖರಮುಮಾಹಾರಾದರಂ ಸಾದರಂ ॥೨೨॥

ಧಿಕ್ ಧಿಕ್ ಜೀವನಮೇವ ಮಾರ ತವ ಕಿಂ ತನ್ನಿಂದಯಾ ಜೀವನಂ
ಕಿಂ ಮೇರೋರಪಿ ನಿಂದಕಃ ಪರಮಣುರ್ಹಾ ಹಾ ಕುಬುದ್ಧಿಃ ಕಥಂ ।
ವೃತ್ತಾ ತೇ ವಿಲಯಾಯ ಕೇವಲಮಿಯಂ ಸಾ ಮೃತ್ಯುರಿತ್ಯೇವ ಮೇ
ತನ್ನಿಂದಾಮತಿರಿತ್ಯವೈಮಿ ಧಿಗಿದಂ ತೇ ಜೀವನಂ ದುರ್ಮತೇ ॥೨೩॥

ಇತಿ ತಥ್ಯತ್ರ್ಸನೋದ್ಯುಕ್ತೇ ಸತಿ ನಾರಾಯಣೇ ತದಾ ।
ವಿಧಿರಾಹ ಹರಿಂ ಕೋಪಾತ್ ಭ್ರುಕುಟೀಕುಟಿಲಾನನಃ ॥೨೪॥

---

ಬಲ್ಲದು. ಆದರ ಮಹಿಮೆಯು ವೇದಗಳಿಂದಲೂ ಸಹ ತಿಳಿಯದಾಗಿದೆ. ರಮಣೀಯನಾದ ಮತ್ತು ಆಶ್ಚರ್ಯಕರನಾದ ಆ ಶಿವನು ನಮ್ಮ ಕಾಮಿತಾರ್ಥಗಳನ್ನು ಅನುಗ್ರಹಿಸಲು ಇನ್ನೂ ಪ್ರಾಪ್ತನಾಗಲಿಲ್ಲವಲ್ಲಾ! ॥೨೧॥

ಆ ಗಿರಿಜಾರಮಣನ ಸಾಮರ್ಥ್ಯವನ್ನು ಹೇಳಲು ಒಂದು ಸಾವಿರಕೋಟಿ ನಾಲಿಗೆಯುಳ್ಳವನೂ ಸಹ ಶಕ್ತನಾಗಲಾರನು. ಯಾವಾಗಲೂ ವೇದಾಂತದ ತತ್ವಗಳನ್ನು ವಿಚಾರಿಸುವುದರಲ್ಲಿ ಆಸಕ್ತನಾಗಿರುವ ಚಂದ್ರಶೇಖರನಾದ ಉಮಾಪತಿಯನ್ನು ನಾನು ಸದಾ ಭಜಿಸುತ್ತೇನೆ. ॥೨೨॥

ಎಲೈ ದುರ್ಬುದ್ಧಿಯುಳ್ಳವನೇ, ಮನ್ಮಥನೇ, ನಿನ್ನ ಜೀವನಕ್ಕೆ ಧಿಕ್ಕಾರವಿರಲಿ. ನೀನು ಆ ಶಿವನನ್ನು ಏಕೆ ನಿಂದಿಸಿದೆ? ಪರಮಾಣುಸ್ವರೂಪದಂತೆ ಲಘುವಾದ ನೀನು ಮೇರುಪರ್ವತದಂತಹ ಮಹತ್ತರವಸ್ತುವನ್ನು ನಿಂದಿಸುವುದು ಯುಕ್ತವೇ? ನಿನಗೆ ಈ ಕೆಟ್ಟ ಬುದ್ಧಿಯು ಹೇಗೆ ಉದಯಿಸಿತು? ಈ ನಿನ್ನ ನಡತೆಯಿಂದ ನಿನಗೆ ನಾಶವು ತಪ್ಪುವುದಿಲ್ಲ. ನಿನಗೆ ಮೃತ್ಯುವು ಒದಗಿದೆ ಎಂದೇ ನನ್ನ ಮತ. ದುಷ್ಟನೇ, ಆ ಶಿವನಿಂದೆಮಾಡಿದ ನಿನ್ನ ಜೀವನವು ಧಿಕ್ಕೃತವಾದುದೆಂದು ತಿಳಿ." ಎಂದು ನಾರಾಯಣನು ಮನ್ಮಥನನ್ನು ಹಿಯ್ಯಾಳಿಸಿದನು. ॥೨೩॥

ಹೀಗೆ ವಿಷ್ಣುವು ಮನ್ಮಥನನ್ನು ಹೆದರಿಸುತ್ತಿರಲು ಬ್ರಹ್ಮನು ಕೋಪದಿಂದ ಹುಬ್ಬು ಗಂಟಿಕ್ಕಿಕೊಂಡು ಹರಿಯೊಡನೆ ಹೀಗೆಂದನು. ॥೨೪॥

॥ ಬ್ರಹ್ಮೋವಾಚ ॥

ಕಿಂ ದೃಶ್ಯತೇ ತಚ್ಛಿವನಿಂದಕಾಸ್ಯಂ
ತವಾಪಿ ಕಿಂ ದುರ್ಮತಿರೇವಮಾಸೀತ್ ।
ಪಾಪಿಷ್ಠಚರ್ಯಃ ಶಿವನಿಂದಕೋಽಯಂ
ತದ್ದರ್ಶನೇನಾಪ್ಯಘಕೋಟಯಃ ಸ್ಯುಃ ॥೨೫॥

ಲೋಕೇ ಕೋಪಿ ನ ದೃಷ್ಟ ಏವ ಬಹುಧಾ ದೇವೇಷು ವಾನ್ಯೇಷು ವಾ
ಗೌರೀನಾಯಕನಿಂದಕೋಽತ್ರ ಮದನಂ ತ್ಯಕ್ತ್ವಾ ಪ್ರಮತ್ತಂ ಪರಂ ।
ಏತತ್ಸಂಹರಣಾಯ ತಾವದಧುನಾ ಬ್ರಹ್ಮಾಸ್ತ್ರಮುಪ್ಯಾಗತಂ
ನೂನ ಜೀವನಮಸ್ಯ ನೇತಿ ವಿದಿತಂ ತಜ್ಜೀವನಾಶಾಂ ತ್ಯಜ ॥೨೬॥

ಚಕ್ರೇಣ ತ್ರಿಪುರಾರಿನಿಂದಕಮುಖಚ್ಛೇದೇಸ ತಜ್ಜಿಹ್ವಯಾ
ಸಾಕಂ ತನ್ಮುಖಮಸ್ಯಮೇಧ್ಯಪತಿತಂ ದೃಷ್ಟ್ವಾ ಪ್ರಹೃಷ್ಟಾ ವಯಂ ।
ಯಾಮೋ ಯಾಮ್ಯಪದಂ ಪ್ರಯಾತು ಮದನಸ್ತದ್ದೂತಪಾದಾಹತಃ
ತತ್ರತ್ಕ್ರೂರನಖಾಗ್ರದಾರಿತವಪುಃ ಪಾಪೈಃ ಪರಂತಿಷ್ಠತು ॥೨೭॥

---

ಎಲೈ ಹರಿಯೇ, ಈ ಶಿವದೂಷಕನ ಮುಖವನ್ನು ಏಕೆ ನೋಡುತ್ತಿದ್ದೀಯೆ? ನಿನಗೂ ಕೂಡ ದುರ್ಮತಿ ಒದಗಿತಲ್ಲಾ! ಶಿವನಿಂದೆಮಾಡುವಾತನು ಪಾಪಿ. ಆತನ ದರ್ಶನಮಾತ್ರದಿಂದ ಅನೇಕ ಕೋಟಿ ಪಾಪಗಳು ಸಂಘಟಿಸುವುವು. ॥೨೫॥

ಲೋಕದಲ್ಲಿ ದೇವತೆಗಳಲ್ಲಾಗಲಿ, ಅಥವಾ ಇತರರಲ್ಲಾಗಲಿ ಶಿವನಿಂದಕನಾದವನನ್ನು ನಾನು ನೋಡಿರಲಿಲ್ಲ. ಈಗ ಈ ಮನ್ಮಥನು ಉದಿಸಿರುವನು. ಶಿವನಿಂದಕನಾದ ಈತನನ್ನು ವಧಿಸಲು ನನ್ನ ಬ್ರಹ್ಮಾಸ್ತ್ರವು ಸಿದ್ಧವಾಗಿರುವುದು. ನಿಶ್ಚಯವಾಗಿಯೂ ಇವನಿಗೆ ಇನ್ನು ಜೀವಿತದಲ್ಲಿ ಆಸೆ ಇಡಬೇಡ. ॥೨೬॥

ನಾವು ಹಿಂದೆ ಸದಾಶಿವನನ್ನು ದೂಷಿಸಿದವರ ಶಿರಸ್ಸು ಚಕ್ರದಿಂದ ಕತ್ತರಿಸಲ್ಪಟ್ಟುದನ್ನು ನೋಡಿದೆವು. ಅಲ್ಲದೆ ಚಕ್ರದಿಂದ ಕೃತ್ತವಾದ ಆ ಶಿವದೂಷಕನ ನಾಲಿಗೆ ಸಹಿತವಾದ ಮುಖವು ಅಮೇಧ್ಯದಲ್ಲಿ ಬಿದ್ದಿತು. ಅದನ್ನು ನೋಡಿ ನಾವು ಸಂತೋಷಗೊಂಡೆವು. ಈಗಲೇ ಈ ಮನ್ಮಥನನ್ನು ಶಿವದೂತರು ಕಾಲಿನಿಂದ ಒದೆದು ಯಮನರಕಕ್ಕೆ ಎಳೆದೊಯ್ಯುವರು. ಈ ಪಾಪಿಯು ಅನೇಕ ಪಾಪಗಳೊಂದಿಗೆ ಅಲ್ಲಿಯೇ ಇರಲಿ, ಎಂದು ಬ್ರಹ್ಮನು ಗರ್ಜಿಸಿದನು. ॥೨೭॥

ಇತಿ ತದ್ವಚನಂ ಶ್ರುತ್ವಾ ಕಮಲಾಕುಲಲೋಚನಾ ।
ಕಮಲಾ ಕಮಲಾಕಾಂತಮುಶಾಂತಂ ಮಂದಮಾಹ ಸಾ ॥೨೮॥

॥ ಕಮಲೋವಾಚ ॥

ಅನೇನ ಯದ್ಯಪ್ಯಪರಾಧ ಏವ
ಕೃತಃ ಶಿವಾಕಾಂತವಿನಿಂದಕೇನ ।
ಏತದ್ವಿನಾಶಾಯ ಕಥಂ ಪ್ರವೃತ್ತಿಃ
ಪಿತುಸ್ತವಾಪೀಹ ನಿವೃತ್ತಿರಿಷ್ಟಾ ॥೨೯॥

ಶಿವಾರ್ಚನಾಯಾಮಿಹ ಸ ಪ್ರವೃತ್ತಃ
ಕರ್ತವ್ಯ ಏವಾಶು ವಿಲಂಬಮಾತ್ರಂ ।
ವಿಹಾಯ ಸಾಯಂ ಸಸಹಾಯ ಏವ
ಕರೋತು ವಿಶ್ವೇಶ್ವರಪೂಜನಂ ಚ ॥೩೦॥

ವಿಶ್ವೇಶ್ವರಾರಾಧನಸಕ್ತಚಿತ್ತಂ
ಕುಮಾರಮೇನಂ ಕುರು ಮಾರಮಾಶು ।

---

ಹೀಗೆ ಬ್ರಹ್ಮನು ಹೇಳಿದುದನ್ನು ಕೇಳಿ ಕಮಲದಂತೆ ಕಣ್ಣುಗಳುಳ್ಳ ಲಕ್ಷ್ಮೀ ದೇವಿಯು ಕ್ರುದ್ಧನಾದ ನಾರಾಯಣನೊಂದಿಗೆ ಮೆಲ್ಲನೆ ಹೀಗೆ ಹೇಳತೊಡಗಿದಳು. ॥೨೮॥

ನಾರಾಯಣನೇ, ಈ ಮನ್ಮಥನೇನೋ ಶಿವನನ್ನು ದೂಷಿಸಿ ತಪ್ಪುಮಾಡಿದುದು ನಿಜ. ಆದರೆ ಈತನನ್ನು ಕೊಲ್ಲಲು ತಂದೆಯಾದ ನಿನಗೆ ಪ್ರವೃತ್ತಿಯು ಹೇಗೆ ಉಂಟಾಗುವುದು? ಅಲ್ಲದೇ ನಿನಗೆ ಇವನನ್ನು ನಿರಪರಾಧಿಯನ್ನಾಗಿ ಮಾಡುವ ಆಸೆಯೂ ಇರಬೇಕಲ್ಲವೆ! ೨೯॥

ಈ ಮದನನು ಈಗಲೇ ಶ್ರೀ ಸದಾಶಿವನ ಪೂಜೆಯಲ್ಲಿ ತೊಡಗುವಂತೆ ಏರ್ಪಡಿಸು. ಮತ್ತು ಒಂದು ಕ್ಷಣವನ್ನೂ ಬಿಡದೆ ಶಿವಪೂಜೆಮಾಡುವಂತೆ ಆಜ್ಞಾಪಿಸು. ಅಸಹಾಯನಾದ ಈತನು ಸಾಯಂಕಾಲದಲ್ಲಿ ಸಹಾಯಸಹಿತನಾಗಿ ಶಿವಪೂಜೆಯನ್ನು ಮಾಡಲಿ. ॥೩೦॥

ಪ್ರಿಯನೇ! ಹೇಗಾದರೂ ಮಾಡಿ ವಿಶ್ವೇಶ್ವರನಾದ ಶಿವನ ಅರ್ಚನೆಯಲ್ಲಿ

ಏತತ್ಸಮಃ ಕುತ್ರ ಸುತೋಽಸ್ತಿ ಲೋಕೇ
ಪಶ್ಯಾಸ್ಯ ಸೌಂದರ್ಯಮಪಾರಮೇನಂ ॥೩೧॥

ಕಥಂ ಪುರಾ ಶಿಕ್ಷಿತ ಏವ ನಾಯಂ
ತ್ವಯಾ ವಿರೂಪಾಕ್ಷಸಮರ್ಚನಾಯ ।
ಅಶಿಕ್ಷಯಾ ತಾವದಯಂ ಕಿಲಾಸೀತ್
ವಿಶ್ವೇಶನಿಂದಾನಿರತೋಽಪಿ ಮಾರಃ ॥೩೨॥

ಪಿತ್ರಾ ಸುತಃ ಶಿಕ್ಷಿತ ಏವ ಬಾಲ್ಯೇ
ಸದಾ ಸದಾಚಾರರತಃ ಪರಂ ಸ್ಯಾತ್ ।
ದೋಷಸ್ತ್ವಯಾಯಂ ಜನಕಸ್ಯ ನೂನಂ
ದುಃಖಂ ಕಥಂ ವಾ ತವ ನಾಧುನಾಪಿ ॥೩೩॥

ಪುತ್ರಃ ಶಾಂಭವವಿದ್ಯಯಾ ಯದಿ ಭವೇತ್ ದೈವಾತ್ಪವಿತ್ರಸ್ತದಾ
ತತ್ಪುತ್ರಾನವಲೋಕನೇನ ಜನಕಃ ಕಿಂ ಜೀವನಂ ವಾಂಛತಿ ।
ಸ್ವಸ್ಯಾಪೀತಿ ಕಥಂ ನ ತೇ ಮತಿರಭೂತ್ ಪೂರ್ವಂ ಸುತಃ ಶಿಕ್ಷಿತಃ
ತಾತಾನಂದಸಮೃದ್ಧಿಹೇತುರಿತಿ ಕಿಂ ನ ಜ್ಞಾತ ಏವಾದರಾತ್ ॥೩೪॥

---

ತೊಡಗುವಂತೆ ನಿನ್ನ ಮಗನಾದ ಮನ್ಮಥನಿಗೆ ಬುದ್ಧಿಹೇಳು. ಅಲ್ಲದೇ ಇಷ್ಟು ಸುಂದರನಾದ ಮಗನು ಈ ಮೂರು ಲೋಕದಲ್ಲಿ ಎಲ್ಲಿತಾನೇ ದೊರಕುವನು ? ॥೩೧॥

ಹಿಂದೆ ನೀನು ವಿಶ್ವೇಶ್ವರನನ್ನು ಪೂಜಿಸುವಂತೆ ಈತನಿಗೆ ಶಿಕ್ಷೆಯನ್ನು ವಿಧಿಸಲಿಲ್ಲ. ಆದುದರಿಂದಲೇ ಶಿಕ್ಷೆಯಿಲ್ಲದ ಈ ಹುಡುಗನು ತಪ್ಪುಮಾಡಿರುವನು. ಶಿವನನ್ನು ನಿಂದಿಸಿರುವನು. ॥೩೨॥

ಚಿಕ್ಕಂದಿನಲ್ಲಿ ಈತನನ್ನು ತಂದೆಯಾದ ನೀನು ಶಿಕ್ಷಿಸಿ, ಸನ್ಮಾರ್ಗದಲ್ಲಿ ಒಯ್ದಿದ್ದರೆ ಈತನು ಪರಮೇಶ್ವರನ ಪೂಜೆಯಲ್ಲಿ ಆಸಕ್ತನಾಗುತ್ತಿದ್ದನು. ಈಗ ಆ ದೋಷವು ತಂದೆಯಾದ ನಿನಗೇ ಹೊರತು ಮಗನಿಗಲ್ಲ. ಈಗ ನಿನಗೆ ಹೇಗೆ ತಾನೆ ಆ ದೋಷವು ತಪ್ಪೀತು ! ॥೩೩॥

ಹಿಂದೆಯೇ ಮಗನಿಗೆ ಶೈವವಿದ್ಯಾಭ್ಯಾಸವನ್ನು ಮಾಡಿಸಿದ್ದರೆ ಆತನು ಶುದ್ಧನಾಗುತ್ತಿದ್ದನು. ಅಂತಹ ಮಗನನ್ನು ನೋಡುವುದರಿಂದಲೇ ನಮ್ಮ ಜೀವನವು ಪವಿತ್ರವಾಗಿ ಕಳೆದುಹೋಗುತ್ತಿತ್ತು. ಶಾಂಭವವಿದ್ಯೆಯನ್ನರಿಯದ ಮಗನಿಂದ

ಹಾ ಹಾ ಮಾರಸಮಃ ಕಥಂ ಭುವಿ ಭವೇತ್ ಪುತ್ರಸ್ತ್ರಿನೇತ್ರಾರ್ಚಕಃ
ಸೋಽಯಂ ವೇದಮನ್ಯತೋಽನ್ಯತಾಽನ್ಯತಮಯಂ ಭಾಗ್ಯಂ ತತಃ ಕಿಂ
ಭವೇತ್ ।
ಏತದ್ಭಾಗ್ಯಸಮಂ ನ ಭಾಗ್ಯಮಿತಿ ಮೇ ಭಾತ್ಯೇವ ಸಾ ದುರ್ಭಗಾ
ಯತ್ಪುತ್ರಸ್ಯ ನ ಫಾಲಲೋಚನಪದಾಂಭೋಜಾರ್ಚನಾತ್ಯಾದರಃ ॥೩೫॥

ಇತಿ ತದ್ವಚನಂ ಶ್ರುತ್ವಾ ಹರಿಃ ಖಿನ್ನಃ ಪುನಃ ಪುನಃ ।
ಖೇದಾಶ್ರುಲೋಲನಯನಃ ಕಮಲಾಮಾಹ ದುಃಖಿತಾಂ ॥೩೬॥

ಶಿಕ್ಷಿತೋಽಪಿ ಬಹುಧಾ ಮದನೋಽಯಂ
ನೇಶಪೂಜನರತೋ ರತಿಲೋಲಃ ।
ದುರ್ಭಗೋಽಯಮತ ಏವ ಲಯೋಽಸ್ಯ
ಪ್ರಾಪ್ತ ಏವ ದುರದೃಷ್ಟವಶೇನ ॥೩೭॥

---

ತಂದೆಯ ಜೀವನವೂ ಅವನ ಬಾಳೂ ಕೆಡುವುದು. ಮಗನು ಸುಶಿಕ್ಷಿತನಾದರೆ ಆ ಕೀರ್ತಿಯು ತಂದೆಯ ಆನಂದಾಭಿವೃದ್ಧಿಗೆ ಕಾರಣವೆಂಬ ತಿಳಿವಳಿಕೆ ನಿನಗೂ ಕೂಡ ಉಂಟಾಗಲಿಲ್ಲವಲ್ಲಾ ! ॥೩೪॥

ಅಯ್ಯೋ ! ಲೋಕದಲ್ಲಿ ಮನ್ಮಥನಂತಹ ಮಗನು ದೊರಕುವನೇ ! ಈತನು ಮುಕ್ಕಣ್ಣನ ಅರ್ಚಕನಾಗಿದ್ದರೆ ಅದಕ್ಕಿಂದ ಬೇರೆ ಭಾಗ್ಯವಿಲ್ಲವಾಗಿತ್ತು. ಲಲಾಟ ನೇತ್ರನಾದ ಪರಶಿವನ ಪೂತವಾದ ಪಾದಕಮಲಗಳನ್ನು ಅರ್ಚಿಸುವಿಕೆಗಿಂತ ಬೇರೆ ಐಶ್ವರ್ಯವು ಇಲ್ಲವೆಂದು ನನ್ನ ಅಭಿಪ್ರಾಯ. ಈಶ್ವರಭಕ್ತನಲ್ಲದ ಮಗನನ್ನು ಪಡೆದ ತಾಯಿ ದುರದೃಷ್ಟಳು." ॥೩೫॥

ಹೀಗೆ ಹೇಳಿದ ಲಕ್ಷ್ಮಿಯ ಮಾತನ್ನು ಕೇಳಿ ನಾರಾಯಣನು ಬಹಳ ಖಿನ್ನನಾದನು. ಕಣ್ಣೀರಿನಿಂದ ಚಂಚಲವಾದ ಕಣ್ಣುಳ್ಳ ಹರಿಯು ಖಿನ್ನಳಾದ ಲಕ್ಷ್ಮೀದೇವಿಯೊಡನೆ ಹೀಗೆ ಮಾತನಾಡಿದನು. ॥೩೬॥

" ಹಿಂದೆ ಅನೇಕ ಬಾರಿ ನಾನು ಮದನನನ್ನು ಶಿಕ್ಷಿಸಿದರೂ ಆತನು ರತಿಯೊಡನೆ ವಿಹರಿಸುತ್ತಾ ಇದ್ದು ಶಿವಪೂಜೆಯನ್ನು ಮಾಡಲಿಲ್ಲ. ಆದುದರಿಂದಲೇ ಆತನು ದುರದೃಷ್ಟಶಾಲಿಯು. ದೈವವಶದಿಂದ ಬಂದ ಶಿಕ್ಷೆಯನ್ನು ಈತನು ಅನುಭವಿಸಲೇ ಬೇಕು. ॥೩೭॥

ಶಂಕರಾರ್ಚನಪರೋ ಭವ ಮಾರ
ಪ್ರಾತರಿತ್ಯಪಿ ಮುಹುರ್ಮುಹುರುಕ್ತಃ ।
ಸುಪ್ತ ಏವ ಬಹುಧಾಸ ನ ಕರೋತಿ
ಪ್ರಾತರಿಂದುಮುಕುಟಾಭರಣಾರ್ಚಾಂ ॥೩೮॥

ಶಂಗಲಿಂಗಕಲನಂ ಮದನೋಽಯಂ
ಸಂಗಮೇಽಪಿ ನ ಕರೋತಿ ಕುಶೀಲಃ ।
ದುರ್ಭಗೋಽಯಮಥ ಏವ ನ ಸಾಯಂ
ಶಂಗಲಿಂಗಭಜನಂ ನ ಕರೋತಿ ॥೩೯॥

ಕಿಂ ಕರೋಮಿ ಕಮಲೇ ಮಮ ಭಾಗ್ಯಂ
ತಾದೃಶಂ ಖಲು ನ ಜಾತಮಪಾರಂ ।
ಯೇನ ಮತ್ತನಯತಾಮುಪಯಾತೋ
ನಾಭವದ್ಗಿರಿಶಪೂಜನಶೀಲಃ ॥೪೦॥

ಶೂಲಪಾಣಿಚರಣಾಂಬುಜಪೂಜಾ
ಜೀವನೋ ಯದಿ ಸುತೋಽಪಿ ನ ಜಾತಃ ।
ದುರ್ಭಗಃ ಖಲು ಸ ಏವ ಪಿತಾ ಸ್ಯಾತ್
ಇತ್ಯವೈಮಿ ಕಮಲೇ ಸ ಕುಶೀಲಃ ॥೪೧॥

---

ಮಗನೇ! ಮಾರ, ಪ್ರಾತಃಕಾಲದಲ್ಲಿ ಶ್ರೀಶಂಭುವನ್ನು ಪೂಜಿಸೆಂದು ನಾನು ಅನೇಕ ಬಾರಿ ಹೇಳಿದೆನು. ಆದರೆ ಈತನು ಅದನ್ನು ನಿರ್ಲಕ್ಷಿಸಿ ಬೆಳಗಾದರೂ ಮಲಗಿಕೊಂಡೇ ಇರುತ್ತಿದ್ದನು. ಶಿವಪೂಜೆಯನ್ನು ಆಗ ಮಾಡಲಿಲ್ಲ. ॥೩೮॥

ಈ ಮದನನು ಮಧ್ಯಾಹ್ನಕಾಲಕ್ಕೆ ಮುಂಚೆ ಸಂಗಮಕಾಲದಲ್ಲಿಯೂ ಕೂಡ ಶಿವಪೂಜೆಯನ್ನು ಮಾಡಲಿಲ್ಲ, ಹೋಗಲಿ. ದುರದೃಷ್ಟಶಾಲಿಯಾದ ಈತನು ಸಾಯಂಕಾಲದಲ್ಲಿ ಸಹ ಶಿವಭಜನೆಯನ್ನು ಮಾಡುವುದಕ್ಕೆ ಗಮನವಿಡಲಿಲ್ಲ. ॥೩೯॥

ಪ್ರಿಯೇ! ನನ್ನ ಮಗನಾದ ಮನ್ಮಥನು ಶಿವಪೂಜೆಮಾಡುವ ಸ್ವಭಾವದವನಾಗಲಿಲ್ಲ. ಹಾಗಾಗುವಂತಹ ಅದೃಷ್ಟವು ನನಗಿಲ್ಲ. ಆದುದರಿಂದಲೇ ಈತನು ಶಿವಪೂಜೆಯಲ್ಲಿ ಆಸಕ್ತನಾಗಲಿಲ್ಲ. ॥೪೦॥

ಶೂಲಾಯುಧಧರನಾದ ಶಂಕರಪೂಜೆಯನ್ನು ಮಾಡುತ್ತಾ ಜೀವನ

ಶಂಕರಾರ್ಚನಪರೋ ಯದಿ ಮಾರೋ
ಕಿಂ ಕುಮಾರಗಣನಾಪಿ ಮಮ ಸ್ಯಾತ್ ।
ಕಿಂ ತು ಕೇವಲಮಯಂ ಶಿವ
ಏವೇತ್ಯಾದರೋ ಹರಪದೇಪಿ ಶಪಾಮಿ ॥೪೨॥

ಮಾರಸ್ಯಾಪಿ ಯದಿ ತ್ರಿಲೋಚನಪದಾಂಭೋಜಾರ್ಚನಾತ್ಯಾದರ
ಸ್ತರ್ಹಿಸ್ಯಾತ್ಕುಶಲೀ ಸದಾಪ್ಯಹಮುಹೋ ನೋ ಕಾಲಭೀತಿಃ ಕುತಃ ।
ಭೀತಿರ್ನೋ ಪ್ರಳಯಾನಲಾದಪಿ ತಥಾ ಭಾಗ್ಯಂ ಕುತಃ ಸ್ಯಾದಯಂ
ಭಾಗ್ಯಂ ಶಂಕರಪೂಜನೈರಗಣಿತೈಸ್ಸ್ಯಾದಿತ್ಯವೈಮಿ ಪ್ರಿಯೇ ॥೪೩॥

ಏತದ್ರಕ್ಷಣಸಾಧನಂ ನ ಕಮಲೇ ವಿಶ್ವೇಶ್ವರಾರಾಧನಂ
ಜಾತಂ ಪೂರ್ವಮತಃ ಪರಂ ಕಿಮಧುನಾ ತನ್ನಾಶಕಾಲೇ ಸತಿ ।
ಕಿಂ ತತ್ಪೂಜನಯೋಗ್ಯತಾಪಿ ದಹನಾಕ್ರಾಂತೇ ಕಥಂ ಮಂದಿರೇ
ಕೂಪಸ್ಸ್ಯಾತ್ಖನಿತೋ ಜಲೇನ ಸ ಕಥಂ ತಚ್ಛಾಂತಿಹೇತುರ್ಭವೇತ್ ॥೪೪॥

---

ಸಾಗಿಸುವ ಸ್ವಭಾವವುಳ್ಳ ಮಗನು ಹುಟ್ಟದಿದ್ದರೆ ಅದು ಅವನ ತಂದೆಯ ದುರದೃಷ್ಟ ವೆಂದು ನಾನು ತಿಳಿದಿದ್ದೇನೆ. ॥೪೧॥

ಮನ್ಮಥನು ಶಂಭುಸಮರ್ಚನೆಯಲ್ಲಿ ನಿರತನಾದದ್ದಾದರೆ ಆಗ ಆತನನ್ನು ನಾನು ಮಗನೆಂದು ಗಣಿಸುವೆನು. ಅಲ್ಲದೇ ಆತನನ್ನು ಸಾಕ್ಷಾತ್ಪರಶಿವನೆಂದೇ ಭಾವಿಸುವೆನು. ಕೇವಲ ಶಿವನಪಾದದ ಆಣೆಯಾಗಿಯೂ ಸುಮ್ಮನೆ ಶಿವಪೂಜಾರಹಿತನಾದವನನ್ನು ಶೈವನೆಂದು ಹೇಳಲಾರೆ. ಮತ್ತೂ ಮಗನೆಂದೂ ಎಣಿಸಲಾರೆ. ॥೪೨॥

ಈ ಮದನನಿಗೂ, ಮೂರು ಲೋಕಕ್ಕೂ ಒಡೆಯನಾದ ಶಂಕರನ ಪಾದ ಪೂಜೆಯಲ್ಲಿ ತುಂಬಾ ಆದರವು ಹುಟ್ಟಿದ್ದಾದರೆ, ಆಗ ನಾನು ಕುಶಲಿಯಾಗುವೆನಲ್ಲದೇ ನನಗೂ ಯಮಭೀತಿ ತಪ್ಪುವುದು. ಪ್ರಳಯದಿಂದ ಸಹ ಹೆದರಿಕೆ ನನಗಿಲ್ಲ. ಅಂತಹ ಅದೃಷ್ಟವು ನನಗೆ ಹೇಗೆ ಲಭಿಸೀತು ? ಶ್ರೀಶಂಕರ ಪೂಜೆಯಿಂದ ಉಂಟಾದ ಭಾಗ್ಯವೇ ಭಾಗ್ಯ. ಅದು ಅಪರಿಮಿತವಾದುದು. ॥೪೩॥

ಪ್ರಿಯೇ ! ಈ ಮದನನು ಹಿಂದೆ ತನ್ನನ್ನು ಉಳಿಸುವುದಕ್ಕೆ ಕಾರಣವಾದ ವಿಶ್ವೇಶ್ವರನ ಆರಾಧನೆಯನ್ನು ಮಾಡಲಿಲ್ಲ. ಈಗ ಆತನ ನಾಶಕಾಲವು ಒದಗಿರುವ ಕಾಲದಲ್ಲಿ ಶಿವಪೂಜಾಯೋಗ್ಯತೆಯು ಆತನನ್ನು ನಾಶದಿಂದ ಬಿಡಿಸಲಾರದು.

ಇತಿ ತದ್ವಚನಂ ಶ್ರುತ್ವಾ ಕಮಲಾ ವ್ಯಾಕುಲಾ ಮುಹುಃ ।
ವಿಲಲಾಪ ತಯಾ ಸಾಕಂ ರತೀ ಸುರತಲಾಲಸಾ ॥೪೫॥

ತದ್ವಿಲಾಪಂ ಪರಂ ಶ್ರುತ್ವಾ ವಿಲಲಾಪ ಪುಲೋಮಜಾ ।
ವಾಣೀ ಚ ಚುಕ್ರುಶುರ್ದೇವಾಃ ಕಿಂನರಾ ಅಪಿ ಚುಕ್ರುಶುಃ ॥೪೬॥

ತದ್ರೋದನಧ್ವನಿಯುತಾಃ ಸರ್ವೇಽಪಿ ಗಿರಿಕಂದರಾಃ ।
ಪ್ರತಿಧ್ವನಿಸಮಾಕ್ರಾಂತಾ ತೇ ವಿಲಾಪಾಕುಲಾ ಇವ ॥೪೭॥

ಚಕಂಪೇ ವಸುಧಾ ಚೇಲುಃ ಶೈಲಾ ಅಪಿ ಕುಲಾಚಲಾಃ ।
ದಿಗ್ದಂತಿನಃ ಸಶೇಷಾಸ್ತೇ ಸಕೂರ್ಮಾ ಅಪಿ ಸಿಂಧವಃ ॥೪೮॥

ಧ್ವನಿಃ ಶ್ರುತಃ ಸ ಏವಾಸೀತ್ ಗೌರ್ಯಾ ಕೈಲಾಸಮಂದಿರೇ ।
ಸಾಪಿ ಕಂಪಸಮಾಕ್ರಾಂತಾ ಜಯಾಮಾಹ ವಿಚಕ್ಷಣಾಂ ॥೪೯॥

---

ಮನೆಗೆ ಬೆಂಕಿಹೊತ್ತಿ ಉರಿಯುವ ಕಾಲದಲ್ಲಿ ಬಾವಿ ತೋಡಿ ನೀರನ್ನು ತೆಗೆದು ಬೆಂಕಿಯನ್ನು ಆರಿಸಲು ಸಾಧ್ಯವಾಗಬಹುದೇ ?" ॥೪೪॥

ಹೀಗೆ ವಿಷ್ಣುವು ಹೇಳಿದುದನ್ನು ಕೇಳಿ ಲಕ್ಷ್ಮಿಯು ಬಹಳ ಭಯಭಟ್ಟಳು. ಬಳಿಕ ಸುರತಲೀಲೆಯ ಚಾಪಲ್ಯವುಳ್ಳ ರತಿಯೂ ಸಹ ಲಕ್ಷ್ಮಿಯೊಡನೆ ಗೋಳಿಡ ಲಾರಂಭಿಸಿದಳು. ॥೪೫॥

ಆಕೆಯು ಅಳುತ್ತಿರುವ ಧ್ವನಿಯನ್ನು ಕೇಳಿ ಶಚಿ, ಸರಸ್ವತಿ, ದೇವತೆಗಳು ಕಿಂನ್ನರಸ್ತ್ರೀಯರು, ಇವರೇ ಮೊದಲಾದವರು ಬಹಳವಾಗಿ ದುಃಖಿಸಲಾರಂಭಿ ಸಿದರು. ॥೪೬॥

ಅವರ ದುಃಖಧ್ವನಿಗಳು ಪರ್ವತಗುಹೆಗಳನ್ನೆಲ್ಲಾ ವ್ಯಾಪಿಸಿದುವು. ಆ ರೋದನಧ್ವನಿ ಪ್ರತಿಧ್ವನಿಗಳಂದ ಪರ್ವತಗಳೆಲ್ಲಾ ಅಳುತ್ತಿರುವುವೋ ಎಂದು ಭಾಸ ವಾಗುತ್ತಿದ್ದಿತು. ॥೪೭॥

ಭೂಮಿಯು ಅಲುಗಿತು, ಬೆಟ್ಟಗಳು ನಡುಗಿದುವು, ಕುಲಪರ್ವತಗಳು ಚದುರಿದುವು. ಮಹಾಶೇಷನೊಡನೆ ದಿಗ್ಗಜಗಳು ಹೆದರಿದುವು. ಆದಿಕೂರ್ಮ ಸಹಿತ ವಾಗಿ ಸಮುದ್ರಗಳು ತುಳುಕಿದುವು. ॥೪೮॥

ಆ ರೋದನಶಬ್ದವು ಕೈಲಾಸದಲ್ಲಿರುವ ಗೌರಿಗೂ ಕೇಳಿಸಿತು. ಆಗ ಗೌರಿಯು

|| ಗೌರೀ ಉವಾಚ ||

ಜಯೇ ಕೋಽಯಂ ಧ್ವನಿಃ ಕಸ್ಮಾದುತ್ಪನ್ನಾ ಕಂಪಸಾಧನಂ ।
ಕಿಂ ಕೈಲಾಸಾಚಲಸ್ಯಾಪಿ ವಾರ್ತಾಪ್ಯನ್ಯಸ್ಯ ಕಾ ಭವೇತ್ ||೫೦||

ಸಪ್ತಪಾತಾಲಮೂಲಾನಿ ಭಿತ್ವಾ ಮೂಲಾನಿ ಕೇವಲಂ ।
ಕೈಲಾಸಸ್ಯಾಸ್ಯ ತಿಷ್ಠಂತಿ ಕಂಪಃ ಕಸ್ಮಾದಭೂದ್ವದ ||೫೧||

ರೋದನಧ್ವನಿರೇತಾವಾನಶಾಂತೋ ಗಿರಿಗಹ್ವರೇ ।
ಕಥಮದ್ಯ ಸಮುತ್ಪನ್ನಃ ಪ್ರಳಯಃ ಕಿಮುಪಾಗತಃ ||೫೨||

ಮಹಾಪ್ರಳಯಕಾಲೀನಧ್ವನಿತುಲ್ಯಧ್ವನಿಃ ಖಲು ।
ಸಮುತ್ಪನ್ನೋಽಯಮಧುನಾ ಕಿಂ ಭವಿಷ್ಯತಿ ತದ್ವದ ||೫೩||

ಇತಿ ತದ್ವಚನಂ ಶ್ರುತ್ವಾ ಜಯಾಪ್ಯತ್ಯಂತವಿಸ್ಮಿತಾ ।
ತಾಮಾಹ ಗಿರಿಜೇ ನಾಹಂ ಜಾನಾಮೀತಿ ವಿಶೇಷತಃ ||೫೪||

---

ಗಡಗಡನೆ ನಡುಗುತ್ತ ತನ್ನ ಪ್ರಿಯ ದಾಸಿಯಾದ ಮತ್ತು ಬುದ್ಧಿವಂತಳಾದ ಜಯೆಯೊಡನೆ ಹೀಗೆ ಹೇಳಿದಳು. ||೪೯||

"ಜಯೆ! ಮೈ ನಡುಗಿಸುವಂತಹ ಈ ಧ್ವನಿಯು ಎಲ್ಲಿಂದ ಹುಟ್ಟಿರಬಹುದು? ಈ ಕೈಲಾಸದಿಂದ ಉಂಟಾಯಿತೇ? ಅಥವಾ ಇನ್ನಾವನಿಂದಾದರೂ ಉದ್ಭವಿಸಿತೇ? ಏನು ಸಮಾಚಾರವಿರಬಹುದು? ನೋಡು. ||೫೦||

ಏಳು ಪಾತಾಳದ ಮೂಲಪ್ರದೇಶಗಳನ್ನೂ ಭೇದಿಸಿಕೊಂಡು ಈ ಕೈಲಾಸ ಪರ್ವತದ ಬುಡಭಾಗವನ್ನು ಕೊರೆದು ಬರುವ ಈ ಶಬ್ದವು ಎಲ್ಲಿಂದ ಉತ್ಪನ್ನವಾಯಿತೆಂದು ನನಗೆ ತಿಳಿದು ಹೇಳು. ||೫೧||

ಈ ಅಳುವ ಶಬ್ದವು ಇಷ್ಟುಹೊತ್ತಾದರೂ ಬೆಟ್ಟಗಳ ಗುಹೆಯಲ್ಲಿ ಅಡಗಲಿಲ್ಲ. ಸಖಿ! ಪ್ರಳಯಕಾಲವೇನಾದರೂ ಈಗ ಸಂಭವಿಸಿತೇನು? ||೫೨||

ಈ ಶಬ್ದವು ಮಹಾಪ್ರಳಯಕಾಲದಲ್ಲಿ ಉಂಟಾಗುವ ಶಬ್ದಕ್ಕೆ ಸಮಾನವಾಗಿರುವುದು. ಈಗಲೇ ಪ್ರಲಯವಾಗುವುದೋ ಏನೋ, ಸಖಿ! ಏನಾಗುವುದು ತಿಳಿದು ಹೇಳು." ||೫೩||

ಹೀಗೆಂದ ಗೌರೀದೇವಿಯ ಮಾತನ್ನು ಕೇಳಿ ಜಯೆಯು ಆಶ್ಚರ್ಯಪಡುತ್ತಾ, ಗಿರಿಜೆಯೇ, ನಾನು ಹೆಚ್ಚಿಗೆ ಏನನ್ನೂ ತಿಳಿದವಳಲ್ಲ ಎಂದಳು. ||೫೪||

ತತಃ ಪರಂ ಶನೈರಾಹ ಗಿರಿಜಾ ವಿಜಯೇ ಪರಂ ।
ಗಿರಿಶೋ ವೇದ ಸರ್ವಜ್ಞಃ ಪ್ರಷ್ಟವ್ಯ ಇತಿ ಸಾದರಂ ॥೫೫॥

ತತಸ್ತಾಮಾಹ ವಿಜಯಾ ಗಿರಿಜೇ ಕ್ವ ಮಹೇಶ್ವರಃ ।
ಕ್ವಾಹಂ ಸಾಕಂ ಮಹೇಶೇನ ವಕ್ತುಮಿಚ್ಛಾಮಿ ವಾ ಕಥಂ ॥೫೬॥

ಅಧುನಾ ಶಂಕರಃ ಪ್ರಾಯಃ ಕುಪಿತೋಪ್ಯನ್ಯಥಾ ಕಥಂ ।
ಕೈಲಾಸಾಚಲಕಂಪೋಪಿ ಧರಾಕಂಪೋಪಿ ವಾ ಶಿವೇ ॥೫೭॥

ಪ್ರಾಯಃ ಸುರೇಷು ಯಃ ಕೋಪಿ ದುರಾತ್ಮಾ ತ್ರಿಪುರಾಂತಕೇ ।
ಚಕಾರ ಸುರಸಾಮಾನ್ಯಮತಿಂ ಸ್ವವಿಲಯೋದ್ಯತಃ ॥೫೮॥

ದೇವಾಧಿದೇವೋ ಗಿರಿಜೇ ಧವಸ್ತೇ
ಸರ್ವಾಮರಾರಾಧ್ಯತಮಃ ಸಸೋಮಃ ।
ಅವಾಪ್ತಕಾಮೋಽನ್ಯಸುರಾಸಮಾನಃ
ತ್ರಿಲೋಚನೇಪೀತಿ ವದಂತಿ ವೇದಾಃ ॥೫೯॥

---

ಒಡನೆಯೇ ಗಿರಿಜೆಯು, ವಿಜಯೇ! ಶಂಕರನು ಸರ್ವಜ್ಞನಾದುದರಿಂದ, ಎಲ್ಲವೂ ಅವನಿಗೆ ತಿಳಿದಿದೆ. ಆದುದರಿಂದ ಆತನನ್ನು ಕೇಳಿ ತಿಳಿದುಕೊ ಎಂದು ಅಪ್ಪಣೆಯಿತ್ತಳು. ॥೫೫॥

ಆಗ ವಿಜಯೆಯು, "ಗಿರಿಜೇ! ಮಹೇಶ್ವರನೆಲ್ಲಿ? ನಾನೆಲ್ಲಿ? ನಾನು ಮಹೇಶ್ವರನೊಡನೆ ಮಾತನಾಡುವುದಕ್ಕಾದರೂ ಇಚ್ಛಿಸಬಹುದೇ ? ಅದು ಸಾಧ್ಯವಾದೀತೆ ?" ಎಂದಳು. ॥೫೬॥

ಪ್ರಾಯಃ ಈಗ ಶಿವನು ಸಿಟ್ಟುಗೊಂಡಿರಬಹುದು. ಇಲ್ಲದಿದ್ದರೆ ಕೈಲಾಸ ಪರ್ವತ ಮತ್ತು ಭೂಮಿಯು ಸಹ ಏಕೆ ನಡುಗುತ್ತಿದ್ದುವು ? ॥೫೭॥

ಸಾಮಾನ್ಯವಾಗಿ ಈಗ ದೇವತೆಗಳೊಳಗೆ ಯಾವನೋ ಒಬ್ಬನು ತನ್ನ ನಾಶವಾಗುವುದೆಂದು ತಿಳಿಯದೇ, ಶಂಕರನನ್ನು ಸಾಮಾನ್ಯದೇವನೆಂದು ಭಾವಿಸಿರಬಹುದು. ಅದರಿಂದ ಪರಶಿವನು ಕುಪಿತನಾಗಿರಬಹುದು. ॥೫೮॥

ದೇವಿಯೇ! ದೇವತೆಗಳಿಗೆ ಒಡೆಯನಾದ ಮತ್ತು ಎಲ್ಲಾ ಸುರರಿಂದಲೂ ಪೂಜೆಮಾಡಿಸಿಕೊಳ್ಳುವ ಚಂದ್ರಶೇಖರನು ನಿನಗೆ ಪತಿಯು. ಈತನು ಸಮಸ್ತ

ತಂ ಕಾಲಕಾಲಂ ವಿದುರಿಂದುಮೌಳಿಂ
ಅತಃ ಸ ಮೃತ್ಯುಂಜಯ ಇತ್ಯಪಾರ್ಯೈಃ ।
ವೇದಾಂತವಾಕ್ಯೈಃ ಸ್ತುತ ಏವ ತೇನ
ತುಲ್ಯೋ ನ ಕೋಽಪ್ಯಸ್ತಿ ಸುರೇಷು ಗೌರಿ ॥೬೦॥

ಸುರಾಃ ಪರಂ ಶಂಕರಕಿಂಕರಾಸ್ತೇ
ಸರ್ವೇಽಪ್ಯುಪೇಂದ್ರೇಂದ್ರಚತುರ್ಮುಖಾದ್ಯಾಃ ।
ತಜ್ಜನ್ಮನಾಶಸ್ಥಿತಿಹೇತುಭೂತಃ
ಸ ಭೂತನಾಥಃ ಖಲು ವಿಶ್ವನಾಥಃ ॥೬೧॥

ಯಲ್ಲೀಲಯಾ ವಿಷ್ಣುಚತುರ್ಮುಖಾದ್ಯಾಃ
ಸರ್ವೇ ಸುರಾಃ ಸ್ಥಾವರಜಂಗಮಾದ್ಯಾಃ ।
ಜನ್ಮಸ್ಥಿತಿಂ ನಾಶಮಪಿ ಪ್ರಯಾಂತಿ
ಭವಂತಿ ತಾವದ್ಗಿರಿಪೂಜಕಾಸ್ತೇ ॥೬೨॥

---

ಇಷ್ಟಾರ್ಥಗಳನ್ನೂ ಹೊಂದಿರುವನಲ್ಲದೇ ಸಾಮಾನ್ಯರಾದ ದೇವತೆಗಳಿಗೆ ಈತನು ಸಮಾನನಲ್ಲ ಎಂದು ವೇದಗಳೂ ಹೇಳುತ್ತಿರುವುವು. ॥೫೯॥

ಪಾರ್ವತಿಯೇ! ಆ ಚಂದ್ರಶೇಖರನನ್ನು ಯಮನಿಗೂ ನಾಶಕನೆಂದು ಹೇಳುವರು. ಆದುದರಿಂದಲೇ ಈತನು ಮೃತ್ಯುಂಜಯನೆಂದು ಅನೇಕ ಉಪನಿಷದ್ವಾಕ್ಯಗಳಿಂದ ನಮಗೆ ತಿಳಿದುಬರುತ್ತದೆ. ದೇವತೆಗಳೊಳಗೆ ಇವನಿಗೆ ಸಮಾನನಾದವನು ಒಬ್ಬನೂ ಇಲ್ಲ. ॥೬೦॥

ಗೀರ್ವಾಣರೆಲ್ಲರೂ ಶಂಕರನ ಸೇವಕರು. ಇಂದ್ರ, ವಿಷ್ಣು, ಬ್ರಹ್ಮ ಇವರೇ ಮೊದಲಾದ ಎಲ್ಲಾ ದೇವತೆಗಳು ಶಿವನ ಭೃತ್ಯರು. ಅವರ ಜನ್ಮ, ಸ್ಥಿತಿ ಲಯಗಳಿಗೆ ಶಿವನೇ ಕಾರಣನು. ಆದುದರಿಂದ ಅವನು ಎಲ್ಲಾ ಪ್ರಾಣಿಗಳಿಗೂ ಒಡೆಯನಾಗಿದ್ದಾನೆ; ವಿಶ್ವನಾಥನೂ ಎನಿಸಿದ್ದಾನೆ. ॥೬೧॥

ಯಾವನ ಲೀಲೆಯಿಂದ ವಿಷ್ಣು, ಬ್ರಹ್ಮ ಇವರೇ ಮೊದಲಾದ ಎಲ್ಲಾ ಸುರರೂ ಮತ್ತು ಸ್ಥಾವರಜಂಗಮ ಪ್ರಾಣಿಗಳೂ ತಮ್ಮ ಜನ್ಮ, ಸ್ಥಿತಿ, ಪ್ರಳಯ ಇವುಗಳನ್ನು ಹೊಂದುವರೋ, ಅವರೆಲ್ಲಾ ಆ ಶಿವನನ್ನು ಸರ್ವದಾ ಪೂಜಿಸುವರು. ॥೬೨॥

ಅಪಾರಮೈಶ್ವರ್ಯಮುಮೇ ಶಿವಸ್ಯ
ಮಹೇಶದೃಷ್ಟಿಪ್ರಸರಾಶ್ರಯೋ ಯಃ ।
ಸ ಏವ ಧನ್ಯೋ ಜಗತೀತಲೇಽಸ್ಮಿನ್
ಸದೇವಗಂಧರ್ವಸಮರ್ಚಿತೋಽಪಿ ॥೬೩॥

ಅಪಾರಕಲ್ಯಾಣಗುಣಾರ್ಣವಸ್ಯ
ಮಹೇಶ್ವರಸ್ಯಾಮಿತವಿಕ್ರಮಸ್ಯ ।
ಕೋ ವಾ ಸಮಸ್ಸ್ಯಾದ್ಭುವನೇಷು ಗೌರಿ
ಸ ಸರ್ವದೇವಾರ್ಚಿತಪಾದಪದ್ಮಃ ॥೬೪॥

ಕ್ಷಣೇನ ನಾರಾಯಣಪದ್ಮಜಾದೀನ್
ಶಿವಃ ಸಮುತ್ಪಾದ್ಯ ಸಪಾಲನಂ ಚ ।
ಕೃತ್ವಾಪಿ ಸಂಹಾರವಶಾನ್ ಕರೋತಿ
ಸ್ವಲೀಲಯಾ ಕೇವಲಮಿಂದುಮೌಳಿಃ ॥೬೫॥

---

ಪಾರ್ವತಿಯೇ, ಪರಮೇಶ್ವರನ ಲೀಲಾವಿಭೂತಿಗಳು ಅನಂತಗಳಾಗಿವೆ. ಆತನ ಕೃಪಾದೃಷ್ಟಿಯು ಯಾವನ ಮೇಲೆ ಬೀಳುವುದೋ, ಆತನು ದೇವಗಂಧರ್ವರಿಂದ ಪೂಜ್ಯನಾಗಿದ್ದರೂ ಅವನು ಆಗ ಧನ್ಯನಾಗುವನು. ॥೬೩॥

ಸಖಿ ಗೌರಿಯೇ, ಮಹೇಶನ ಮಹಿಮೆಯು ಅಪಾರವಾದುದು. ಆತನ ಕಲ್ಯಾಣ ಗುಣಗಳು ಸಮುದ್ರದಂತಿವೆ. ಪರಾಕ್ರಮವು ಅಮಿತವಾಗಿದೆ. ಹೀಗಿರುವ ಸರ್ವೇಶ್ವರನಿಗೆ ಸಮನಾದವನು ಹದಿನಾಲ್ಕು ಲೋಕಗಳಲ್ಲಿ ಯಾವನೂ ಇಲ್ಲ. ಆ ಶಿವನು ಸಮಸ್ತ ದೇವಾದಿಗಳಿಗೂ ಪೂಜ್ಯನಾಗಿದ್ದಾನೆ. ॥೬೪॥

ಪರಮೇಶ್ವರನು ಒಂದೇ ಒಂದು ಕ್ಷಣಕಾಲದಲ್ಲಿ ತನ್ನ ಲೀಲೆಯಿಂದ ವಿಷ್ಣು, ಬ್ರಹ್ಮ, ಇವರೇ ಮೊದಲಾದವರನ್ನು ಸೃಷ್ಟಿಸಿ, ರಕ್ಷಿಸಿ, ಬಳಿಕ ನಾಶವನ್ನೂ ಮಾಡುವನು. ಅಷ್ಟು ಸಾಮರ್ಥ್ಯ ಆ ಚಂದ್ರಮೌಳಿಯೊಬ್ಬನಿಗಲ್ಲದೇ ಬೇರೆ ಯಾರಿಗೂ ಬರಲಾರದು. ॥೬೫॥

ಉಮೇ ತಪಸ್ತಾವದಪಾರಮೇತ
ತ್ತ್ವನಾಪಿ ಯೇನೇಂದುಕಲಾವತಂಸಃ ।
ಭರ್ತಾ ತವಾಸೀತ್ಕಮಲಾಪಿ ದಾಸೀ
ದಾಸಾಸ್ಸುರಾಸ್ತೇ ಹರಿಪದ್ಮಜಾದ್ಯಾಃ ॥೬೬॥

ಇದಂ ಮಹದ್ಭಾಗ್ಯಮಹೋ ಭವಾನಿ
ಪ್ರಾಪ್ತಂ ತ್ವಯಾ ಶಂಕರಪೂಜನೇನ ।
ಇತೋಧಿಕಂ ಕಿಂ ವದ ಭಾಗ್ಯಮಂಬ
ಲಂಬೋದರಸ್ತೇ ಸ ಸುತಃ ಕುಮಾರಃ ॥೬೭॥

ಅಂಬಾಸ್ಮಾಕಮಿದಂ ಶಿವೇ ಖಲು ಮಹದ್ಭಾಗ್ಯಂ ಸಭಾಗ್ಯಾ ವಯಂ
ತ್ವತ್ಪಾದಾಂಬುರುಹಾವಲೋಕನಸಮುತ್ಪನ್ನೋರುಧರ್ಮಾಶ್ರಯಾಃ ।
ಧನ್ಯಾ ಏವ ಜಗತ್ರಯೇಪಿ ಬಹುಧಾ ಮಾನ್ಯಾಸ್ತ್ವದೀಯಾ ವಯಂ
ಕಿಂ ನ ಸ್ಯಾತ್ ಕೃತಕೃತ್ಯತಾಮುಪಗತಸ್ತ್ವತ್ಪಾದುಕಾರಾಧಕಃ ॥೬೮॥

---

ದೇವಿಯೇ, ನಿನ್ನ ಘೋರ ತಪಸ್ಸಿನ ಫಲವಾಗಿ ಸಾಕ್ಷಾಚ್ಚಂದ್ರಶೇಖರನೇ ನಿನಗೆ ಪತಿಯಾಗಿರುವನು. ಆದರಿಂದ ದೇವಶ್ರೇಷ್ಠರೆನಿಸಿದ ವಿಷ್ಣು, ಬ್ರಹ್ಮ ಇವರೇ ಮೊದಲಾದವರು ಸೇವಕರಾಗಿಯೂ, ಮಹಾಲಕ್ಷ್ಮಿಯು ನಿನ್ನ ದಾಸಿಯಾಗಿಯೂ ಇದ್ದು ನಿನ್ನನ್ನು ಸೇವಿಸುತ್ತಿರುವರು. ॥೬೬॥

ಭವಾನಿ! ನೀನು ಶಿವಪೂಜೆಯಿಂದಲೇ ಮಹತ್ತಾದ ಭಾಗ್ಯವನ್ನು ಹೀಗೆ ಹೊಂದಿರುವೆ. ಇದಕ್ಕಿಂತಲೂ ಇನ್ನು ಹೆಚ್ಚೇನು ಬೇಕು ಹೇಳು. ನಿನ್ನ ಮಗನು ಒಬ್ಬ ಗಣಪತಿ. ಇನ್ನೊಬ್ಬ ಕುಮಾರಸ್ವಾಮಿ. ಹೀಗಿರುವಾಗ ನೀನೇ ಭಾಗ್ಯಶಾಲಿಯಲ್ಲವೇ ? ॥೬೭॥

ತಾಯಿ, ಗಿರಿಜೇ! ಇದಲ್ಲವೇ ನಿನ್ನ ಭಾಗ್ಯ. ಈಗ ನಾವೆಲ್ಲರೂ ಭಾಗ್ಯಶಾಲಿಗಳೇ ಆದೆವು. ನಿನ್ನ ಪಾದಕಮಲಗಳನ್ನು ದರ್ಶನಮಾಡುವ ಪುಣ್ಯ ನಮಗೆ ಲಭಿಸಿರುವುದು. ಜಗತ್ತಿನಲ್ಲಿ ನಾವೆಲ್ಲರೂ ನಿನ್ನವರೆ ಅಲ್ಲವೇ! ನಿನ್ನ ಪಾದಪದ್ಮಗಳ ಆರಾಧನೆ ಮಾಡಿದವನು ಧನ್ಯನಾಗದಿರನೇ. ॥೬೮॥

ಆದ್ಯಾ ಶಕ್ತಿರುಮೇ ತ್ವಮೇವ ಜನನೀ ಲೋಕಸ್ಯ ಶರ್ವಪ್ರಿಯಾ
ತ್ವಲ್ಲೀಲೇಯಮುಮಾಸಹಾಯಚರಣಾಂಭೋಜಾರ್ಚಕಾಃ ಕೇವಲಂ।
ಸೃಷ್ಟಿಂ ಚ ಪ್ರಳಯಂ ಚ ಕರ್ತುಮಸಕೃತ್ ಶಕ್ತಾಃ ಸ್ಥಿತಿಂ ಸಾ ಪರಂ
ಶಕ್ತಿಃ ಶಂಕರಲೀಲಯೈವ ಭವತೀತ್ಯಸ್ಮಾಕಮಾಸೀನ್ಮತಿಃ ॥೬೯॥

ಭಾಗ್ಯಂ ತೇ ಗಿರಿರಾಜರಾಜತನಯೇ ಕಿಂ ವರ್ಣನೀಯಂ ಮಯಾ
ಯದ್ವೇದಾಂತಗುಣೈರಪಿ ಪ್ರಥಮತೋ ನ ಜ್ಞೇಯಮೇವಾಮರೈಃ।
ಗಂಧರ್ವೈರಪಿ ಕಿಂನರೈರಪಿ ತಥಾ ಸಿದ್ಧೈರ್ಮುನೀಂದ್ರಾದಿಭಿಃ
ದುಜ್ಞೇಯಂ ಖಲು ತನ್ನಪಾರಸಹಿತಂ ತನ್ನಾಶವಾರ್ತಾಪಿ ನ ॥೭೦॥

ಏವಂ ಸಂಭಾಷಣೇನೈವ ಯುಗಾಸ್ತಾವದ್ಗತಾಸ್ತತಃ।
ಶಿವನಿಂದಾನಲಜ್ವಾಲಾ ಪ್ರವಿಷ್ಟಾ ಸುರಮಂದಿರಂ ॥೭೧॥

---

ಪಾರ್ವತಿಯೇ, ನೀನು ಆದಿಶಕ್ತಿಯಾಗಿರುವೆ. ಎಲ್ಲಾ ಲೋಕಕ್ಕೂ ತಾಯಿಯೆನಿಸಿದವಳು ನೀನು. ನಾವು ಸುಮ್ಮನೆ ಶಂಕರಚರಣಾರ್ಚಕರೆನಿಸಿಕೊಂಡಿದ್ದೇವೆ. ಆದರೆ ನಿನ್ನ ಲೀಲೆಯೇ ಎಲ್ಲವನ್ನೂ ನಿರ್ವಹಿಸುತ್ತಿದೆ. ಆ ನಿನ್ನ ಶಕ್ತಿಯು ಜಗತ್ತಿಗೆ ಸೃಷ್ಟಿ ಲಯ ಇವುಗಳನ್ನು ಹೊಂದಿಸಲು ಸಮರ್ಥವಾಗಿದೆ. ಈಶ್ವರನ ಲೀಲಾರೂಪವಾದ ಶಕ್ತಿಯೆಂದರೆ ನೀನಲ್ಲದೇ ಬೇರೆ ಇಲ್ಲ ಎಂದು ನಾವುತಿಳಿದಿದ್ದೇವೆ. ॥೬೯॥

ಪರ್ವತಸಾರ್ವಭೌಮನಾದ ಹಿಮವಂತನ ಮಗಳಾದ ಗೌರಿಯೇ, ನಿನ್ನ ಭಾಗ್ಯವನ್ನು ನಾನೆಂತು ವರ್ಣಿಸಲಿ? ಆ ನಿನ್ನ ಮಹಿಮೆಯನ್ನು ವೇದಾಂತ ಸೂಕ್ತಿಗಳೂ ತಿಳಿಯಲಾರವು. ಹಾಗೆಯೇ ಗಂಧರ್ವರು, ಸಿದ್ಧರೂ, ಮುನಿಗಳು ಇವರೇ ಮೊದಲಾದವರಿಂದಲೂ ಆ ನಿನ್ನ ಭಾಗ್ಯವು ತಿಳಿಯದಾಗಿದೆ. ಆದು ಯಾವ ಕಾಲಕ್ಕೂ ನಾಶಹೊಂದತಕ್ಕದ್ದಲ್ಲ" ಎಂದು ಜಯೆಯು ಗೌರಿಯೊಡನೆ ನುಡಿದಳು. ॥೭೦॥

ಹೀಗೆ ಜಯೆಗೂ ಗೌರಿಗೂ ಸಂವಾದವು ನಡೆಯುತ್ತಿರುವ ಸಮಯದಲ್ಲಿ ಅನೇಕ ಯುಗಗಳು ಕಳೆದುಹೋದವು. ಅಷ್ಟುಹೊತ್ತಿಗೆ ಆ ಶಿವನಿಂದೆಯೆಂಬ ಅಗ್ನಿ ಜ್ವಾಲೆಯು ಸ್ವರ್ಗಲೋಕವನ್ನು ಮುಟ್ಟಿತು. ॥೭೧॥

ವೈಕುಂಠಭವನಂ ಪ್ರಾಪ್ತಾ ಸತ್ಯಲೋಕಂ ತತಃ ಪರಂ ।
ಸ್ವರ್ಗಲೋಕಂ ತತಃ ಪ್ರಾಪ್ತಾ ದಿಗಂತಾನ್ಯಪಿ ಸತ್ವರಂ ॥೭೨॥

ತತಃ ಪರಂ ಪ್ರವಿಷ್ಟಾ ಸಾ ಪಾತಾಲಂ ಭೋಗಿಮಂಡಲಂ ।
ಕಂಪಯಾಮಾಸ ಶೇಷೇಣ ಪ್ರಪಲಾಯ್ಯಾಗತಂ ತತಃ ॥೭೩॥

ಸಾ ಸಪ್ತಪಾತಾಲವಿಭೇದನೇನ
ಸಂಪ್ರಾಪ ಕೂರ್ಮಂ ಸ ಚ ಕಂಪಮಾಪ ।
ತತಃ ಸ ಕೂರ್ಮಪ್ರಳಯಾನಲಂ ತಂ
ಪ್ರಾಹಾತಿಮಂದಃ ಪ್ರಣತೋತಿನಮ್ರಃ ॥೭೪॥

॥ ಕೂರ್ಮ ಉವಾಚ ॥

ನಮೋ ನಮಸ್ತೇ ಪ್ರಳಯಾನಲಾಯ
ನದೀನದಾಂಭೋನಿಧಿಶೋಷಕಾಯ ।
ಭೂಮಂಡಲಾಖಂಡವಿನಾಶಕಾಯ
ಶೈಲೇಂದ್ರಶೃಂಗಾಗ್ರವಿನಾಶಕಾಯ ॥೭೫॥

---

ಬಳಿಕ ಆ ಶಿವನಿಂದಾಗ್ನಿಜ್ವಾಲೆಯು ವೈಕುಂಠ ಲೋಕವನ್ನು ವ್ಯಾಪಿಸಿ, ಹಾಗೆಯೇ ಸ್ವರ್ಗ, ಭೂಮಿ ಮತ್ತು ದಿಗಂತಗಳು ಇವುಗಳನ್ನೆಲ್ಲಾ ವ್ಯಾಪಿಸಿತು. ॥೭೨॥

ಬಳಿಕ ಆ ಶಿವನಿಂದೆಯೆಂಬ ಉರಿಯು ಸರ್ಪಗಳಿಂದ ತುಂಬಿದ ಪಾತಾಳ ಲೋಕವನ್ನು ಹೊಕ್ಕಿತು. ಅಲ್ಲಿ ಮಹಾ ಶೇಷನು ಹೆದರಿ ನಡಗುತ್ತಾ ಅಲ್ಲಿಂದ ಓಡಿ ಹೋದನು. ॥೭೩॥

ಆ ಶಿವನಿಂದಾಗ್ನಿಜ್ವಾಲೆಯು ಏಳು ಪಾತಾಳ ಲೋಕಗಳನ್ನು ಸುತ್ತಿತು. ಹಾಗೆಯೇ ಆದಿಕೂರ್ಮನೂ ಸಹ ಆ ಜ್ವಾಲೆಯಿಂದ ನಡುಗಿದನು. ಆ ಕೂರ್ಮನು ಅದನ್ನು ಪ್ರಳಯಾಗ್ನಿ ಜ್ವಾಲೆಯೆಂದು ತಿಳಿದು ನಮ್ರನಾಗಿ ಅದಕ್ಕೆ ನಮಸ್ಕರಿಸಿ ಹೀಗೆಂದನು. ॥೭೪॥

"ಎಲೈ ! ಪ್ರಳಯಾಗ್ನಿಯೇ ! ನಿನಗೆ ನಮಸ್ಕಾರ. ನೀನು ನದೀ, ನದ, ಸಮುದ್ರ, ಇವುಗಳನ್ನು ಒಣಗಿಸುತ್ತೀಯೆ. ಮತ್ತು ಸಮಸ್ತ ಭೂಮಂಡಲ, ಹಾಗೂ ಗಿರಿ ಶಿಖರವೇ ಮೊದಲಾದುವುಗಳನ್ನು ಸಹ ಧ್ವಂಸ ಮಾಡುವೆ. ಅಂತಹ ನಿನಗೆ ವಂದನೆಗಳು. ॥೭೫॥

ನಮೋ ನಮಃ ಫಾಲವಿಲೋಚನಾಗ್ನಿ
ಪ್ರಭೂತಸೂಕ್ಷ್ಮಾಕ್ರವಯವಾಯ ತುಭ್ಯಂ ।
ತವಾಹುತಿಃ ಸ್ಯಾಜ್ಜಗದೇವ ನೂನಂ
ಆಪೋಶನಾಯಾಬ್ಧಿಜಲಂ ಸಮಸ್ತಂ ॥೭೬॥

ನಾರಾಯಣಃ ಸ್ಯಾದುಪದಂಶ ಏವ
ಚತುರ್ಮುಖಃ ಪೇಯತಯಾ ಪ್ರಸಿದ್ಧಿಃ ।
ಲೇಹ್ಯಸ್ತ್ವನೇಂದ್ರಸ್ತ್ವವಶಕ್ತಿರೇವಂ
ನಮೋ ನಮಸ್ತೇ ವರದ ಪ್ರಸೀದ ॥೭೭॥

ಕಾಲಾನಲತ್ವೇನ ಜಗತ್ತ್ರಯೇಽಪಿ
ನಮಃ ಪ್ರಸಿದ್ಧಾಯ ನಮೋ ನಮಸ್ತೇ ।
ಅದ್ಯಾಧುನೈವ ಪ್ರಣತಾರ್ತಿನಾಶಂ
ಕುರು ಪ್ರಸೀದ ಪ್ರಣತೋಽಸ್ಮಿ ನಿತ್ಯಂ ॥೭೮॥

ಆರ್ತಾರ್ತಿನಾಶಾಯ ತವ ಸ್ವರೂಪಂ
ಸಂಕಲ್ಪಿತಂ ಭಾಲವಿಲೋಚನೇನ ।

---

ಎಲೈ ದಹನನೇ, ನೀನು ತ್ರಿಲೋಚನನಾದ ಶಿವನ ಹಣೆಯಿಂದ ಹುಟ್ಟಿರುವೆ. ನಿನಗೆ ನಮೋನಮಃ. ನಿನಗೆ ಈ ಜಗತ್ತೆಲ್ಲವೂ ಆಹುತಿಯಾಗುವುದು. ಮತ್ತು ಸಮುದ್ರದ ನೀರೇ ನಿನಗೆ ಆಪೋಶನವಾಗುತ್ತದೆ. ॥೭೬॥

ಎಲೈ ಪ್ರಳಯಾಗ್ನಿಜ್ವಾಲೆಯೇ, ನಿನಗೆ ಶ್ರೀನಾರಾಯಣನು ಉಪ್ಪಿನಕಾಯಿಗೆ ಸಮನು. ಬ್ರಹ್ಮನು ಕುಡಿಯತಕ್ಕ ಪಾನಕವಾಗುವನು. ಇಂದ್ರಾದಿಗಳನ್ನು ನೀನು ಲೇಹದಂತೆ ನೆಕ್ಕುವೆ. ಆದುದರಿಂದಲೇ ನಿನ್ನ ಶಕ್ತಿಯು ಅಮಿತವಾಗಿದೆ. ಅಂತಹ ನಿನಗೆ ವಂದನೆಗಳು. ನನಗೆ ಪ್ರಸನ್ನನಾಗು. ॥೭೭॥

ನೀನು ಮೂರುಲೋಕಗಳಲ್ಲಿಯೂ ಕಾಲಾಗ್ನಿಸ್ವರೂಪನೆಂದು ಪ್ರಸಿದ್ಧಿಪಡೆದಿರುವೆ. ಪುನಃ ಪುನಃ ನಿನಗೆ ತಲೆಬಾಗುವೆನು. ನಮಸ್ಕರಿಸಿದವರ ಕಷ್ಟಗಳನ್ನು ನೀನು ನಾಶ ಮಾಡುವೆ. ನೀನು ಈಗ ಶಾಂತಸ್ವಭಾವದವನಾಗು. ॥೭೮॥

ಪರಮೇಶ್ವರನು ಭಕ್ತರ ಕಷ್ಟಗಳನ್ನು ನಾಶಮಾಡುವುದಕ್ಕಾಗಿ ನಿನ್ನನ್ನು ಸೃಷ್ಟಿಸಿರುವನು. ಅವನು ಎಂದೂ ವ್ಯರ್ಥವಾಗಿ ಏನನ್ನೂ ಸೃಷ್ಟಿ ಮಾಡಲಾರನು,

ಸ ಸತ್ಯಸಂಕಲ್ಪ ಇತಿ ಪ್ರಸಿದ್ಧಿಃ
ತಸ್ಮೈ ನಮಸ್ತೇಽಸ್ತು ಪುನರ್ನಮಸ್ತೇ ॥೭೯॥

ಯೇನಾಪರಾಧೋಽಸ್ತಿ ಕೃತಃ ಸ ಏವ
ವಿನಾಶನೀಯ ಸ್ಸ ನ ರಕ್ಷಣೀಯಃ ।
ತದ್ರಕ್ಷಣೇ ಪ್ರತ್ಯುತ ನಾಶ ಏವ
ಸ್ವಸ್ಯಾನುಕೂಲಂ ಖಲು ತತ್ರ ನೇಷ್ಟಂ ॥೮೦॥

ಸರ್ವಸ್ವತಂತ್ರಂ ತಮುಮಾಸಹಾಯಂ
ಮನ್ಯೇ ತದನ್ಯಃ ಪರತಂತ್ರ ಏವ ।
ತ್ವಂ ವಿಷ್ಣುರಿಂದ್ರೋಽಪಿ ವಿಧಿರ್ಯಮೋಽಪಿ
ಸೂರ್ಯೋಽಪಿ ಚಂದ್ರೋಽಪ್ಯಹಮಪ್ಯವಶ್ಯಂ ॥೮೧॥

ಅತ್ರಾಸ್ಮ್ಯಹಂ ಸ್ಥಾಪಿತ ಏವ ಪೂರ್ವಂ
ಮಹೇಶ್ವರೇಣೈವ ಯಮಾಂತಕೇನ ।
ಅತಸ್ತದಾಜ್ಞಾವಶಗಾಯ ಮಹ್ಯಂ
ದಯಾ ವಿಧೇಯಾ ಗಿರಿಶೇನ ನೂನಂ ॥೮೨॥

---

ಎಂದು ಪ್ರಸಿದ್ಧಿ ಇದೆ. ಆದುದರಿಂದ ಈಶಸ್ವರೂಪನಾದ ನಿನಗೆ ನಮಸ್ಕಾರ. ಬಾರಿ ಬಾರಿಗೂ ನಿನ್ನನ್ನು ವಂದಿಸುವೆನು. ॥೭೯॥

ಯಾವನು ತಪ್ಪುಮಾಡಿರುವನೋ ಅವನನ್ನು ವಿನಾಶಮಾಡಲೇ ಬೇಕು. ರಕ್ಷಿಸಲು ಆತನು ಯೋಗ್ಯನಲ್ಲ. ಆತನನ್ನು ರಕ್ಷಿಸಿದರೆ ಸರ್ವನಾಶವೇ ಉಂಟಾಗುತ್ತದೆ. ತನಗೆ ಅನುಕೂಲನು, ಪ್ರತಿಕೂಲನು ಎಂಬ ತಾರತಮ್ಯವನ್ನು ಈ ವಿಷಯದಲ್ಲಿಡಬಾರದು. ॥೮೦॥

ಪ್ರಪಂಚದ ಎಲ್ಲ ಸ್ವಾತಂತ್ರ್ಯವೂ ಆ ಶಿವನಿಗೇ ಅಲ್ಲದೆ ಬೇರೆಯವನಿಗಿಲ್ಲ. ಉಳಿದವರೆಲ್ಲರೂ ಪರಾಧೀನರೇ. ನೀನು, ವಿಷ್ಣು, ಇಂದ್ರ, ಬ್ರಹ್ಮ, ಯಮ, ಸೂರ್ಯ, ಚಂದ್ರ, ನಾನು ಈ ಎಲ್ಲರೂ ಈಶ್ವರನಿಗೆ ಅಧೀನರೇ ಅಲ್ಲವೆ! ॥೮೧॥

ಹಿಂದೆ ನಾನು ಮಹೇಶ್ವರನಿಂದಲೇ ಇಲ್ಲಿ ಸ್ಥಾಪಿಸಲ್ಪಟ್ಟಿದ್ದೇನೆ. ಯಮಾಂತಕನಾದ ಆತನ ಆಜ್ಞೆಗೆ ನಾನು ಅಧೀನನು. ಆದುದರಿಂದ ಶಂಭುವು ನನ್ನನ್ನು ಕರುಣೆಯಿಂದ ರಕ್ಷಿಸುವನು. ॥೮೨॥

ತ್ವಯಾಪಿ ತಾವನ್ನ ದಯಾ ವಿಧೇಯಾ
ಕಿಮದ್ಯ ಮಹ್ಯಂ ಶಿವಪೂಜಕಾಯ ।
ಶಿವಾರ್ಚನಂ ಮೇ ವ್ರತಮಿಂದುಮೌಳೇಃ
ಪಿತಾ ಚ ಮಾತಾ ಚ ಸಖಾ ಚ ಬಂಧುಃ ॥೮೩॥

ಅತ್ರೇದಮತ್ಯದ್ಭುತಶಂಗಲಿಂಗಂ
ಪಶ್ಯಾಧುನಾ ಪಶ್ಯ ಸಮರ್ಚಯಾಶು ।
ಕಾಲಾನಲಾಭಂ ಕಮಲಾಸನಾದ್ಯೈ
ರಿದಂ ಪುರಾ ಪೂಜಿತಮದ್ಯ ಲಿಂಗಂ ॥೮೪॥

ಇದಂ ಪರಂ ಬಿಲ್ವವನಂ ಪ್ರಪಶ್ಯ
ಸರಾಂಸಿ ಪಶ್ಯಾಮೃತಸಂಕುಲಾನಿ ।
ನೀಲೋತ್ಪಲಾನ್ಯತ್ರ ವಿಲೋಕಯಾಶು
ತೈರರ್ಚಯೇಯಂ ಗಿರಿಜಾಸಹಾಯಂ ॥೮೫॥

ದೃಷ್ಟ್ವಾಪಿ ಲಿಂಗಂ ಪುರತೋಽಪಿ ಶಂಗಂ
ಯೋ ನಾರ್ಚಯಿತ್ವಾ ಪ್ರಯತಃ ಪ್ರಯಾತಿ ।

---

ನೀನೂ ನನ್ನನ್ನು ಕರುಣಿಸಲು ಶಕ್ತನಲ್ಲವೆ! ನಾನು ಶಿವಪೂಜಕನಾಗಿರುವೆನು ನನಗೆ ಈಶ್ವರ ಪೂಜೆಯೇ ಮುಖ್ಯವ್ರತವಾಗಿದೆ. ನಮ್ಮ ತಂದೆ, ತಾಯಿ, ಮಿತ್ರ ಮೊದಲಾದವರೆಲ್ಲಾ ಈಶ್ವರನೇ ಹೊರತು ಬೇರೆಯವರಲ್ಲ. ॥೮೩॥

ಇಲ್ಲಿ ನೋಡು! ಅತ್ಯದ್ಭುತವಾದ ಶಿವಲಿಂಗವನ್ನು. ಇದು ಕಾಲಾಗ್ನಿಯಂತಿರುವುದು. ಹಿಂದೆ ವಿಷ್ಣುವು ಇದನ್ನು ಅರ್ಚಿಸಿರುವನು. ನೀನು ಕೂಡ ಇದನ್ನು ಪೂಜಿಸು. ಇದು ಈಗ ನಾನು ಆರಾಧಿಸುವ ಶಿವಲಿಂಗವಾಗಿದೆ. ॥೮೪॥

ಈ ಬಿಲ್ವವೃಕ್ಷಗಳ ತೋಟವನ್ನು ನೋಡು. ಇಲ್ಲಿರುವ ಅಮೃತಸಮಾನವಾದ ನೀರಿನಿಂದ ತುಂಬಿದ ಕೊಳಗಳನ್ನಾದರೂ ನೋಡು. ಮತ್ತು ಕನ್ನೈದಿಲೆಗಳು ಇಲ್ಲಿ ಎಷ್ಟು ಸುಂದರವಾಗಿವೆ! ಆ ಕನ್ನೈದಿಲೆಹೂಗಳಿಂದ ನಾನು ಶಿವಲಿಂಗವನ್ನು ಅರ್ಚಿಸುತ್ತೇನೆ. ॥೮೫॥

ಮುಂದುಗಡೆ ಇರುವ ಈ ಶಿವಲಿಂಗವನ್ನು ದರ್ಶನಮಾಡಿದನಂತರವೂ ಯಾವನು ಇದನ್ನು ಪೂಜಿಸುವುದಿಲ್ಲವೋ, ಅವನು ನಿಜವಾಗಿಯೂ ನಾಶಹೊಂದು

ಸ ಯಾತಿ ನಾಶಂ ನರಕಂ ಪ್ರಯಾತಿ
ತ್ವಯಾಪಿ ತತ್ತ್ವಂ ವಿದಿತಂ ಶಿವಸ್ಯ ॥೮೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸ ತದಾ ಪ್ರಳಯಾನಲಃ ।
ಮೂರ್ತಿಂ ಧೃತ್ವಾ ವಿಶೇಷೇಣ ಪೂಜಯಾಮಾಸ ಶಂಕರಂ ॥೮೭॥

ನೀಲೋತ್ಪಲೈರ್ಬಿಲ್ವಪತ್ರೈಃ ಕಮಲೈರಮಲೈರಪಿ ।
ತತಃ ಪ್ರಣಮ್ಯ ಸಂತುಷ್ಟಃ ಕೂರ್ಮಮಾಹ ಸ ಪಾವಕಃ ॥೮೮॥

॥ ಪ್ರಲಯಾನಲ ಉವಾಚ ॥

ಧನ್ಯೋಽಸಿ ಕೂರ್ಮ ಸತತಂ ಶಿವಪೂಜಾಪರೋ ಭವ ।
ಇದಮುತ್ಕೃಷ್ಟಮಂ ಲಿಂಗಮುಮಾಕಾಂತಂ ಪ್ರಿಯಂ ಖಲು ॥೮೯॥

ಏತಲ್ಲಿಂಗಾರ್ಚನಾಚ್ಛಕ್ತಿಃ ಪ್ರವೃದ್ಧಾ ತೇ ಭವಿಷ್ಯತಿ ।
ಧನ್ಯೋಽಸಿ ಕೃತಮೇತಚ್ಚ ರಕ್ಷಣೀಯಂ ಪ್ರಯತ್ನತಃ ॥೯೦॥

---

ವನು. ಮತ್ತು ನರಕವನ್ನು ಸೇರುವನು. ಈ ತತ್ವವು ನಿನಗೂ ತಿಳಿದೇ ಇದೆ" ಎಂದು ಕೂರ್ಮನು ಹೇಳಿದನು. ॥೮೬॥

ಹಾಗೆ ಹೇಳಿದ ಕೂರ್ಮನ ಮಾತನ್ನು ಕೇಳಿ, ಪ್ರಳಯಾಗ್ನಿಯು ದೇಹವನ್ನು ಧರಿಸಿ, ಹಾಗೆಯೇ ಶಿವಲಿಂಗವನ್ನು ಪೂಜಿಸಲಾರಂಭಿಸಿತು. ॥೮೭॥

ಬಿಲ್ವಪತ್ರೆ, ಕಮಲ ಇವುಗಳಿಂದ ಆ ಪ್ರಳಯಾಗ್ನಿಯು ಶಿವನಿಗೆ ಅರ್ಚನೆಯನ್ನು ನೆರವೇರಿಸಿತು. ಬಳಿಕ ಆ ಕೂರ್ಮನಿಗೆ ತಲೆಬಾಗಿ ಸಂತಸದಿಂದ ಹೀಗೆ ಹೇಳತೊಡಗಿತು. ॥೮೮॥

"ಎಲೈ ಆಮೆಯೇ, ನೀನು ಕೃತಾರ್ಥನು. ಯಾವಾಗಲೂ ಶಿವಲಿಂಗದ ಪೂಜೆಯಲ್ಲಿ ಆಸಕ್ತನಾಗು. ಈ ಉಮಾಪತಿರೂಪವಾದ ಶಿವಲಿಂಗವು ಉತ್ತಮವಾಗಿದೆ. ಮತ್ತು ಈಶ್ವರನಿಗೆ ಪ್ರೀತಿಕರವಾದುದು. ॥೮೯॥

ಈ ಶಿವಲಿಂಗಾರ್ಚನೆಯಿಂದ ನಿನ್ನ ಶಕ್ತಿಯು ಇನ್ನೂ ಹೆಚ್ಚುತ್ತದೆ. ನೀನು ಧನ್ಯನು. ಇದನ್ನು ಯಾವಾಗಲೂ ಪ್ರಯತ್ನದಿಂದ ರಕ್ಷಿಸತಕ್ಕುದು ನಿನ್ನ ಕರ್ತವ್ಯ. ॥೯೦॥

ಏತೈರ್ಬಿಲ್ವದಳೈರ್ನಿತ್ಯಂ ಪೂಜಯಸ್ವ ಮಹೇಶ್ವರಂ ।
ಸ ಏವಾಭೀಷ್ಟದೋ ಲೋಕೇ ಪೂಜಿತಃ ಶಂಕರಃ ಖಲು ॥೯೧॥

ಇತಿ ತದ್ವಚನಂ ಶ್ರುತ್ವಾ ಸ ಕೂರ್ಮಃ ಪ್ರಾಹ ಸಾದರಂ ।
ಅತಿಶ್ರಾಂತೋಽಸಿ ವಿಶ್ರಮ್ಯ ಕಿಯತ್ಕಾಲಂ ಪ್ರಜಾದರಾತ್ ॥೯೨॥

ಮಧುರಾಘೃತಕುಲ್ಯೇಯಂ ಘೃತಂ ಪಿಬ ಯಥೇಚ್ಛಯಾ ।
ಘೃತಾಹಾರಸ್ಯ ತೇ ತಾವದಪಾರಂ ಘೃತಮಸ್ತಿ ಚ ॥೯೩॥

ಯುಗಾಶ್ಚ ಬಹವೋ ಜಾತಾಸ್ತವ ಪರ್ಯಟನಾದಪಿ ।
ಗತಂ ದಿಗಂತಪರ್ಯಂತಂ ತ್ವಯಾತಿಕ್ಷುಧಯಾ ಖಲು ॥೯೪॥

ಅಶನಂ ಕ್ವಾಪಿ ನ ಪ್ರಾಪ್ತಂ ದತ್ತಂ ಕೇನಾಪಿ ನಾಶನಂ ।
ಯಸ್ಮಾದುದ್ವಾಸಿತಾ ಲೋಕಾಃ ಪ್ರಳಯಾನಲಭೀರುಭಿಃ ॥೯೫॥

---

ಎದುರಿಗಿರುವ ಈ ಬಿಲ್ವಚಿಗುರುಗಳಿಂದ ಪ್ರತಿನಿತ್ಯವೂ ಶಿವಲಿಂಗವನ್ನು ಆರಾಧಿಸು. ಆ ಮಹೇಶ್ವರನೇ ನಿನಗೆ ಬೇಕಾದುದನ್ನು ಕೊಡಲು ಸಮರ್ಥನಾಗುವನು. ಲೋಕದಲ್ಲಿ ಶಂಕರನನ್ನು ಪೂಜಿಸಿದರೆ ಬೇಕಾದುದು ದೊರೆಯುವುದಷ್ಟೇ ?" ಎಂದು ಪ್ರಳಯಾಗ್ನಿಯು ಹೇಳಿತು. ॥೯೧॥

ಪ್ರಳಯಾಗ್ನಿಯ ಮಾತನ್ನು ಕೇಳಿ ಕೂರ್ಮವು, "ಎಲೈ ಕಾಲಾಗ್ನಿಯೇ ! ನೀನು ಬಹಳ ಬಳಲಿರುವೆ. ಕೆಲವು ಕಾಲ ಇಲ್ಲಿ ತಂಗಿ ಹೋಗು. ॥೯೨॥

ಇದು ರುಚಿಕರವಾದ ತುಪ್ಪದ ಕಾಲುವೆ. ನೀನು ಬೇಕಾದಷ್ಟು ತುಪ್ಪವನ್ನು ಕುಡಿ. ತುಪ್ಪವೇ ಆಹಾರವಾಗಿ ಉಳ್ಳ ನಿನಗೆ ಇಲ್ಲಿ ಬೇಕಾದಷ್ಟು ತುಪ್ಪವಿದೆ. ॥೯೩॥

ಲೋಕಗಳನ್ನೆಲ್ಲಾ ಸುತ್ತುತ್ತಾ ಇರುವ ನಿನಗೆ ಅನೇಕ ಯುಗಗಳು ಕಳೆದು ಹೋದುವು. ದಿಗಂತದ ವರೆಗೂ ತಿರುಗಿ ಆಯಾಸಪಟ್ಟಿರುವ ನೀನು ತುಂಬಾ ಹಸಿದಿರುವೆಯಲ್ಲವೇ ? ॥೯೪॥

ನಿನಗೆ ಎಲ್ಲಿಯೂ ಭೋಜನ ದೊರಕಲಿಲ್ಲ. ಯಾರೂ ನಿನಗೆ ಆಹಾರವನ್ನು ನೀಡಲಿಲ್ಲ. ಪ್ರಳಯಾಗ್ನಿಗೆ ಹೆದರಿದ ಜನರು ಜಗತ್ತನ್ನು ಬಿಟ್ಟು ಓಡಿದರು" ಎಂದು ಕೂರ್ಮನು ಹೇಳಿದನು. ॥೯೫॥

ಇತಿ ತದ್ವಚನಂ ಶ್ರುತ್ವಾ ಸ ಶ್ರಾಂತಃ ಪ್ರಳಯಾನಿಲಃ ।
ಪಪೌ ಯುಗಾಂತಪರ್ಯಾಪ್ತಂ ತದ್ ಘೃತಂ ಶಂಕರಾರ್ಪಿತಂ ॥೯೬॥

ಮಧು ಪೀತ್ವಾ ತತಃ ಸಾಧು ಸುಧಾಂ ಪೀತ್ವಾ ಪುನಃ ಪುನಃ ।
ಪ್ರಹೃಷ್ಟಃ ಕೂರ್ಮನಾಸಾದ್ಯ ತಮುವಾಚ ಕೃತಾಂಜಲಿಃ ॥೯೭॥

॥ ಪ್ರಳಯಾನಿಲ ಉವಾಚ ॥

ಪುಷ್ಟೋಽಸ್ಮಿ ಘೃತಪಾನೇನ ತುಷ್ಟೋಽಸ್ಮಿ ಗಿರಿಶಾರ್ಚನಾತ್ ।
ಅತೋಽತ್ರ ಗತಕಷ್ಟೋಽಸ್ಮಿ ಶಿಷ್ಟಃ ಪ್ರಾಣೈಃ ಕಿಲಾಧುನಾ ॥೯೮॥

ಯುಗಾನಾಮಯುತಂ ಪ್ರಾಪ್ತಂ ಮಮ ಪರ್ಯಟನಾತ್ಕಿಲ ।
ಶಿವಲಿಂಗಾನಿ ದೃಷ್ಟಾನಿ ವೈಕುಂಠಾದಿಷು ಕೋಟಿಶಃ ॥೯೯॥

ನ ದೃಷ್ಟಮೀದೃಶಂ ಲಿಂಗಂ ಕುತ್ರಾಪಿ ಸುಖಸಂಪದಂ ।
ಭುಕ್ತಿಮುಕ್ತಿಪ್ರದಂ ಲಿಂಗಮಿದಮೇವೇತಿ ಮೇ ಮತಿಃ ॥೧೦೦॥

---

ಹೀಗೆಂದು ಕೂರ್ಮನ ಮಾತನ್ನು ಕೇಳಿ ಬಳಲಿದ ಪ್ರಳಯಾಗ್ನಿಯು ಒಂದು ಯುಗದಿಂದಲೂ ತುಂಬಿ ಶಿವನಿಗೆ ಅರ್ಪಿತವಾಗಿದ್ದ ತುಪ್ಪವನ್ನು ಸಂಪೂರ್ಣ ತೃಪ್ತಿಯುಂಟಾಗುವಂತೆ ಕುಡಿದನು. ॥೯೬॥

ಹಾಗೆಯೇ ಜೇನುತುಪ್ಪವನ್ನೂ ಚೆನ್ನಾಗಿ ತೃಪ್ತಿಯಾಗುವಷ್ಟು ಕುಡಿದನು. ಅಲ್ಲಿಯೇ ಅಮೃತವನ್ನು ಪಾನಮಾಡಿ ಸಂತಸಗೊಂಡು, ಆದಿಕೂರ್ಮನ ಹತ್ತಿರಕ್ಕೆ ಸಾರಿ ಬಂದು ಕೈಮುಗಿದುಕೊಂಡು ಹೀಗೆ ಹೇಳತೊಡಗಿದನು. ॥೯೭॥

"ಅಯ್ಯಾ, ನಾನು ತುಪ್ಪ ಕುಡಿದು ಪುಷ್ಟಿಯಾಗಿದ್ದೇನೆ. ಶ್ರೀಶಂಕರನ ಪೂಜೆಯಿಂದ ಸಂತಸಗೊಂಡೆನು. ಆದುದರಿಂದ ಈಗ ನನ್ನ ಕಷ್ಟವೆಲ್ಲಾ ನಿವೃತ್ತ ವಾಯಿತು. ಮತ್ತು ನನ್ನ ಪ್ರಾಣ ಉಳಿದಂತಾಯಿತು. ॥೯೮॥

ನಾನು ಹೀಗೆ ತಿರುಗುತ್ತಾ ಹತ್ತು ಸಾವಿರ ಯುಗಗಳನ್ನು ಕಳೆದೆನು. ಅನೇಕ ಶಿವಲಿಂಗಗಳನ್ನು ವೈಕುಂಠವೇ ಮೊದಲಾದ ಕಡೆಗಳಲ್ಲಿ ನೋಡಿದೆನು. ॥೯೯॥

ಆದರೆ ಎಲ್ಲಿಯೂ ಈ ತರಹದ ಲಿಂಗವನ್ನು ನೋಡಲಿಲ್ಲ. ಇದು ಸುಖ ಸಂಪತ್ತುಗಳನ್ನು ಕೊಡಬಲ್ಲದು. ಭುಕ್ತಿ ಮತ್ತು ಮುಕ್ತಿ ಇವುಗಳನ್ನನುಗ್ರಹಿಸುವುದು ಎಂದು ನನ್ನ ಅಭಿಪ್ರಾಯ. ॥೧೦೦॥

ಶಿವಾರ್ಚನರತೋಽಸಿ ತ್ವಂ ಶಿವಧರ್ಮಾನ್ ವದಾಧುನಾ ।
ಯದ್ಧರ್ಮಶ್ರವಣಾದೇವ ಸ್ಯಾದೇವ ಭ್ರಮವಿಪ್ಲವಃ ॥೧೦೧॥

ದುಃಖಾನ್ಯಜ್ಞಾನಮೂಲಾನಿ ತನ್ನಾಶೋ ಯೇನ ಜಾಯತೇ ।
ತದ್ಧರ್ಮಾನ್ ವದ ನಿಶ್ಚಿತ್ಯ ಸಖಾಸಿ ತ್ವಂ ಯತೋ ಮಮ ॥೧೦೨॥

ಶಿವಾರ್ಚಕಃ ಸಖಾ ಭ್ರಾತಾ ಪಿತಾ ಮಾತಾ ಚ ಜೀವನಂ ।
ಶಿವಾರ್ಚಕಾತ್ಪರಃ ಕೋ ವಾ ಹಿತವಕ್ತಾ ಜಗತ್ರಯೇ ॥೧೦೩॥

ಇತಿ ತದ್ವಚನಂ ಶ್ರುತ್ವಾ ಕೂರ್ಮೋ ಭಸ್ಮವಿಭೂಷಿತಃ
ರುದ್ರಾಕ್ಷಮಾಲಾಭರಣಃ ಸ್ಮೃತ್ವಾ ಪ್ರಾಹ ಮಹೇಶ್ವರಂ ॥೧೦೪॥

॥ ಕೂರ್ಮ ಉವಾಚ ॥

ಖುತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ
ಉರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥೧೦೫॥

---

ನೀನು ಶಂಕರನ ಆರಾಧನೆಯಲ್ಲಿ ಆಸಕ್ತನಾಗಿದ್ದೀಯೆ. ಈಗ ನನಗೆ ಶಿವ ಧರ್ಮಗಳನ್ನು ಹೇಳು. ಆ ಧರ್ಮಗಳನ್ನು ಕೇಳುವುದರಿಂದ ನನಗೆ ಈ ಅಲೆ ದಾಟವು ತಪ್ಪಬಹುದು. ॥೧೦೧॥

ವಸ್ತುತತ್ತ್ವವಿಚಾರವನ್ನು ತಿಳಿಯದಿರುವುದರಿಂದ ದುಃಖಗಳು ಪದೇ ಪದೇ ಉಂಟಾಗುತ್ತವೆ. ಅಂತಹ ದುಃಖನಾಶಕಗಳಾದ ಶಿವಧರ್ಮಗಳನ್ನು ನನಗೆ ನಿಶ್ಚೈಸಿ ಹೇಳು. ಏಕೆಂದರೆ ನೀನು ನನಗೆ ಆಪ್ತಮಿತ್ರನಾಗಿರುವೆ. ॥೧೦೨॥

ಈ ಮೂರು ಲೋಕಗಳಲ್ಲಿ ನನಗೆ ಶಿವಪೂಜಕನೇ ಸ್ನೇಹಿತನು. ಅಣ್ಣತಮ್ಮಂದಿರು, ತಂದೆ, ತಾಯಿ, ಜೀವನ ಇವೆಲ್ಲವೂ ಅವನೇ ಆಗಿರುತ್ತಾನೆ. ಶಂಕರಾರ್ಚಕರಿಗಿಂತಲೂ ಹಿತ ಬಗೆಯುವರು ನನಗೆ ಬೇರೆ ಇಲ್ಲ. ॥೧೦೩॥

ತನಗೆ ಶಿವಧರ್ಮವನ್ನು ಹೇಳೆಂದು ಕೇಳಿದ ಪ್ರಳಯಾನಲದ ಮಾತುಗಳನ್ನು ಕೇಳಿ ಕೂರ್ಮವು ಭಸ್ಮರುದ್ರಾಕ್ಷಿಗಳನ್ನು ಧರಿಸಿ ಬಳಿಕ ಮಹೇಶ್ವರನನ್ನು ಸ್ಮರಿಸಿಕೊಂಡು ಹೀಗೆ ಶಿವತತ್ತ್ವವನ್ನು ಹೇಳತೊಡಗಿತು. ॥೧೦೪॥

“ಮನಸ್ಸಿನಿಂದಲೂ, ಮಾತಿನಿಂದಲೂ ತೋರಿಬರುವ ಸತ್ಯಸ್ವರೂಪನೇ ನೀನು. ಆದರೆ ನಿನ್ನ ಇಚ್ಛೆಯಂತೆ ನೀನು ಪುರುಷರೂಪವನ್ನೂ ತಾಳುವೆ. ಆಗ

ಏತಾದೃಶಂ ಮಹಾದೇವಂ ಜ್ಞಾತ್ವಾ ಯಃ ಪೂಜಯೇತ್ಸದಾ ।
ಸ ತರತ್ಯೇವ ಸಂಸಾರಸಾಗರಂ ಪಾತಕಾಕರಂ ॥೧೦೬॥

ಸಂಸಾರಪ್ರಳಯಾನಲೇನ ಬಹುಧಾ ತಪ್ತಾಃ ಪರಂ ಶಂಕರಂ
ವಿಸ್ಮೃತ್ಯೈವ ಪುನಃ ಪುನರ್ಜನಿಜರಾನಾಶಾನ್ ಪ್ರಯಾಂತ್ಯೇವ ತೇ।
ತೇಷಾಂ ಶಂಕರಪೂಜನೇನ ಗತಿರಿತ್ಯಜ್ಞಾನಗರ್ತೇ ಪರಂ
ಮಗ್ನಾ ಏವ ಭವಂತಿ ಭಗ್ನಮನಸೋ ಭುಗ್ನಾಶ್ಚ ಸಂಸಾರತಃ॥೧೦೭॥

ಅಹೋ ನ ಜಾನಂತಿ ಮಹೇಶಶಕ್ತಿಂ
ಸಂಸಾರಬಂಧಪ್ರಳಯಪ್ರವೃತ್ತಾಃ ।
ಸ ಶಕ್ತಿರೀಶಸ್ಯ ಪರಂ ಸಮಗ್ರಾ
ಜ್ಞಾತುಂ ನ ಶಕ್ಯಾ ವಿಷಯೋ ನ ವಾಚಃ ॥೧೦೮॥

---

ನಿನ್ನ ವಾಮಭಾಗವೆನಿಸಿದ ಉಮಾರೂಪವು ಪಿಂಗಳವರ್ಣದಿಂದಲೂ, ಪುರುಷಭಾಗ ವೆನಿಸಿದುದು ಕೃಷ್ಣವರ್ಣದಿಂದಲೂ ಶೋಭಿಸುವುದು. ಬ್ರಹ್ಮಸ್ಥಾನದಲ್ಲಿ ನಿನ್ನ ರೇತಸ್ಸೆಲ್ಲವೂ ತಪಸ್ಸುಮಾಡುವಾಗ ನೆಲಸುವುದರಿಂದ ಊರ್ಧ್ವರೇತಸ್ಕನೆನಿಸಿರುವೆ. ನೇತ್ರತ್ರಯದಿಂದಲೂ ಪ್ರಪಂಚರೂಪದಿಂದಲೂ ತೋರಿಬರುವ ನಿನಗೆ ಅನಂತಾನಂತ ವಂದನೆಗಳು. ಎಂದು ಸ್ತುತಿಸಿ, ॥೧೦೫॥

ಇಂತಹ ಮಹೇಶ್ವರನನ್ನು ತತ್ತ್ವಜ್ಞಾನಪುರಸ್ಸರವಾಗಿ ತಿಳಿದು ಪೂಜಿಸಿ ದವನು ಪಾಪಭೂಯಿಷ್ಠವಾದ ಸಂಸಾರಸಾಗರವನ್ನು ದಾಟುವನು. ॥೧೦೬॥

ಅನೇಕರು ಶಂಕರನನ್ನು ಮರೆತು ಪ್ರಳಯಾನಲದಿಂದ ಪೀಡಿತರಾಗಿ ಈ ಸಂಸಾರದಲ್ಲಿ ಜನನ, ಮರಣಗಳನ್ನು ಹೊಂದುತ್ತಾರೆ. ಅವರಿಗಾದರೋ ನಾವು ಶಂಕರನಿಂದ ಮುಕ್ತಿಹೊಂದುವುವೆಂಬ ಭಾವನೆಯು ಕೇವಲ ಅಜ್ಞಾನಮೂಲವಾಗಿದೆ. ಅವರೆಲ್ಲರೂ ತಮ್ಮ ಮನೋರಥಗಳನ್ನು ಹೊಂದದೆ ಜಗತ್ತಿನಲ್ಲಿ ವ್ಯಾಪೃತಮರಾಗಿ ದುಃಖಭಾಗಿಗಳಾಗಿರುವರು. ॥೧೦೭॥

ಜಗತ್ತಿನ ಸಂಸಾರಬಂಧನದಲ್ಲಿ ತೊಳಲುತ್ತಿರುವ ಜನರು ಶಂಭುವಿನ ಮಹಿಮೆಯನ್ನು ತಿಳಿಯಲಾರರು. ಆ ಪರಶಿವನ ಶಕ್ತಿಯಲ್ಲಿ ಎಲ್ಲವನ್ನೂ ತಿಳಿಯಲು ಅಥವಾ ತಿಳಿಸಲು ಸಾಧ್ಯವೇ ಇಲ್ಲವಾಗಿದೆ. ॥೧೦೮॥

ಯಥಾಕಥಂ ಚಿದ್ಗಿರಿಶಾರ್ಚನೇನ
ಕಾಲೋ ವಿನೇಯಃ ಖಲು ಸಾವಧಾನಂ ।
ವಿನಾ ನ ತೇನಾಸ್ತಿ ಚ ಜೀವನಂ ತು
ತದೇವ ತಾವತ್ಖಲು ಜೀವನಂ ಚ

ಅಸ್ಮಾಭಿಃ ಶಿವಲಿಂಗಪೂಜನವಿಧಿಃ ಜ್ಞಾತೋ ನ ಸರ್ವಾತ್ಮನಾ
ಬ್ರಹ್ಮಾದ್ಯೈರಪಿ ಕೇವಲಂ ಶ್ರುತಿಮತಾ ಭೂತಿರ್ಲಲಾಟೇ ಪರಂ ।
ಕಶ್ಚಿದ್ಭಾಗ್ಯತಿ ಭಾಗ್ಯತಃ ಸಸಲಿಲಂ ಬಿಲ್ವೀದಳಂ ದೀಯತೇ
ಲಿಂಗೇ ಮಂಗಳದಾಯಕೇ ಶಿವಶಿವೇತ್ಯುಕ್ತ್ವಾ ನಮೋಂತಂ ಪಠನ್॥೧೧೦॥

ಅಸ್ಮಾಭಿರ್ಮನ ಏವ ತಾವತಧುನಾ ಲಿಂಗೇ ಪ್ರದೇಯಂ ಮುದಾ
ತೇನೈವಾದರತೋ ಮಹೇಶ್ವರಪದಾಂಭೋಜಾರ್ಚನಂ ಸಿದ್ಧ್ಯತಿ ।
ಸಿದ್ಧ್ಯಂತ್ಯೇವ ಫಲಾನಿ ತಾವದಸಕೃದ್ರಮ್ಯಾಣ್ಯಪಾರಾಣ್ಯತಃ
ಚಿತ್ತಂ ಸ್ವಚ್ಛಮಿದಂ ಭವಿಷ್ಯತಿ ಪರಾ ಮುಕ್ತಿರ್ಭವಿತ್ರೀ ತತಃ ॥೧೧೧॥

---

ಗಿರಿಜಾಪತಿಯನ್ನು ಆರಾಧಿಸುತ್ತಾ ನಾವು ಹೇಗೋ ಕಾಲವನ್ನು ನಿಧಾನವಾಗಿ ತಳ್ಳಬೇಕು. ಇಲ್ಲದಿದ್ದರೆ ನಮ್ಮ ಜೀವನವು ಸಾಗಲಾರದು. ಆ ಶಿವನ ಸ್ಮರಣೆಯೇ ನಮ್ಮ ಜೀವಿಕೆಯಾಗಿದೆ. ॥೧೦೯॥

ನಾವು ಶಿವಲಿಂಗಪೂಜೆಯ ಕ್ರಮವನ್ನು ತಿಳಿಯಲಾರೆವು. ಅಷ್ಟೇ ಅಲ್ಲ. ಶ್ರೀಬ್ರಹ್ಮಾದಿಗಳೂ ಸಹ ಅದನ್ನು ಪೂರ್ಣವಾಗಿ ತಿಳಿಯಲಾರರು. ವೇದವನ್ನು ತಿಳಿದವನೂ ಸಹ ವಿಭೂತಿಯು ಪವಿತ್ರವೆಂದು ಹಣೆಯಲ್ಲಿ ಧರಿಸುತ್ತಾನೆ. ಇನ್ನೂ ಸುಕೃತಿಯಾದವನು ಬಿಲ್ವದಳವನ್ನು ಶಿವನಿಗೆ ಅರ್ಪಿಸುವನಲ್ಲದೇ ಮಂಗಳದಾಯಕನಾದ ಶಿವನನ್ನು ಶಿವ, ಶಂಭೋ ಎಂದು ಕೀರ್ತಿಸುತ್ತಾ ನಿನಗೆ ನಮಸ್ಕಾರವೆಂದು ತಲೆಬಾಗುತ್ತಾನೆ. ॥೧೧೦॥

ಈಗ ನಾವು ಶಿವಲಿಂಗದಲ್ಲಿ ಪೂಜ್ಯಬುದ್ಧಿಯನ್ನಿಡಬೇಕು. ಆದರಿಂದಲೇ ಮಹೇಶ್ವರನ ಪೂಜಾಫಲವು ಸಿದ್ಧಿಸುವುದು. ಒಂದುಸಲ ಶಿವನನ್ನು ಮನಸ್ಸಿನಿಂದ ಚಿಂತಿಸಿದರೆ ಅಪಾರ ಫಲಗಳು ಸಿದ್ಧಿಸುವುವು. ಆದರಿಂದ ಈ ಮನಸ್ಸು ಶುದ್ಧಿಹೊಂದುವುದಲ್ಲದೆ ಕೊನೆಗೆ ಮುಕ್ತಿಯೂ ದೊರೆಯುವುದು. ॥೧೧೧॥

ಮಹೇಶಲಿಂಗಾರ್ಚನಮೇಕರೂಪಂ
ಲಬ್ಧಂ ನಿಧಾನಂ ನಿಧಯೋಽಪಿ ತೇನ ।
ನ ವಾಪಿ ತಾವತ್ಪ್ರಭವಂತಿ ಸತ್ಯಂ
ತೇ ಕಿಂ ಪುನಃ ಸಾಪಿ ನ ತೇನ ಮುಕ್ತಿಃ ॥೧೧೨॥

ಲಿಂಗಾತ್ಮಕಂ ಸಾಧನಮೇಕಮೇವ
ಸೃಷ್ಟಂ ಮಹೇಶೇನ ವಿಶೇಷತಸ್ತು ।
ತನ್ಮುಕ್ತಿಬೀಜಂ ಸುಖಬೀಜಮೇಕಂ
ಸರ್ವಾರ್ಥಸಂಪತ್ಕರಮೇಕಮೇವ ॥೧೧೩॥

ಕಿಂ ಕಿಂ ಪುರಾ ಪುಣ್ಯಮುಪಾರಮಾದೌ
ಕೃತಂ ಶಿವಾರಾಧನಬುದ್ಧಿಹೇತುಃ ।
ಇದಂ ಪರಂ ಜೀವನಮೇವ ಪುಣ್ಯಂ
ಧನ್ಯಂ ಶಿವಾರಾಧನಸಾಧನಂ ಮೇ ॥೧೧೪॥

---

ಶ್ರೀಮಹಾದೇವನ ಅರ್ಚನೆಯನ್ನು ಒಂದೇ ರೀತಿಯಲ್ಲಿ ತಪ್ಪದೆ ಆಚರಿಸಬೇಕು ಅದರಿಂದ ಸಕಲ ನಿಧಿಗಳು ಅವನಿಗೆ ದೊರಕುವುವು. ಮತ್ತು ಮತ್ತೂ ಲಭಿಸುವುವು. ಅಸತ್ಯವು ಅದರಲ್ಲಿ ಪ್ರಯುಕ್ತವಾದರೆ ಮುಕ್ತಿಯು ದೊರಕಲಾರದು. ಆದರಿಂದ ಪ್ರಯೋಜನವೂ ಸಿಗಲಾರದು. ॥೧೧೨॥

ಸುಖ ಮತ್ತು ಮೋಕ್ಷ, ಇಷ್ಟಾರ್ಥಗಳ ಸಿದ್ಧಿ ಇವೆಕ್ಕೆಲ್ಲಾ ಸಾಧನವಾದುದೆಂದರೆ ಲಿಂಗಾರ್ಚನೆ ಒಂದೇ ಸರಿ. ಈ ಎಲ್ಲಕ್ಕೂ ಸಾಧನವಾದ ಶಿವಲಿಂಗವನ್ನು ಹಿಂದೆಯೇ ಶಿವನು ಸೃಷ್ಟಿಮಾಡಿದ್ದಾನೆ. ॥೧೧೩॥

ಹಿಂದೆ ಪುಣ್ಯಪ್ರದವಾದ ಯಾವ ಯಾವ ಕರ್ಮಗಳನ್ನು ಮಾಡಿದ್ದೆನೋ ಏನೋ? ಆದರ ಫಲವಾಗಿ ಈಗ ನನಗೆ ಶಿವಪೂಜೆಯಲ್ಲಿ ಬುದ್ಧಿಹುಟ್ಟಿದೆ. ಇನ್ನು ಈ ನನ್ನ ಜೀವನವೇ ಪವಿತ್ರವಾಯಿತು. ನನ್ನ ಶಿವಾರಾಧನ ಸಾಮಗ್ರಿಯು ಸಾರ್ಥಕವಾಯಿತು. ॥೧೧೪॥

ತೇ ಸಾಧವಸ್ತೇ ಕೃತಪುಣ್ಯರೂಪಾಃ
ತೇ ಪುಣ್ಯಮೂಲ್ಯೈಸ್ತು ಪರಂ ಪ್ರವೃದ್ಧಾಃ ।
ಯೇ ಶಂಗಲಿಂಗಾರ್ಚನಸಾಧನೇನ
ಪೂತಾಃ ಪ್ರಹೃಷ್ಟಾಶ್ಚ ತಯಾತಿಪುಷ್ಟಾಃ ॥೧೧೫॥

ಲೋಕೇ ದುರ್ಲಭ ಏವ ಸಾಧುರಿತಿ ಮೇ ಬುದ್ಧಿಃ ಸ ಸಾಧುಃ ಪರಂ
ಶಂಗಾರಾಧನತತ್ಪರಃ ಸಿತಲಸದ್ಭೂತಿತ್ರಿಪುಂಡ್ರಾಂಕಿತಃ ।
ತೇನೈವೇಂದುಕಲಾವತಂಸಭಜನಾನಂದಪ್ರವೃದ್ಧೇನ ಮೇ
ಪ್ರೀತಿರ್ವೃದ್ಧಿಮುಪೈತಿ ತೇನ ಸಹತೇ ಸಂಗಃ ಸದಾ ವಾಂಛಿತಃ ॥೧೧೬॥

ಶಿವಾರ್ಚನಾಲಾಪನಮೇವ ಲೋಕೇ
ಸಂಸಾರದಾವಾನಲಜಾಲರೂಪಂ ।
ಮನ್ಯೇ ತತಸ್ತೇನ ಸಹಾಸ್ತು ಸಂಗಃ
ಸ ಮಂಗಳಾನಾಯಕಲೀಲಯಾ ಸ್ಯಾತ್ ॥೧೧೭॥

---

ಯಾರು ಶಿವಲಿಂಗಾರ್ಚನೆಯ ಸಾಧನಗಳಿಂದ ಪವಿತ್ರರಾಗಿರುವರೋ ಮತ್ತು ಅದರಿಂದ ಹೆಚ್ಚು ಸುಖಸಂಪತ್ತನ್ನು ಹೊಂದಿರುವರೋ, ಅಂತಹವರು ಸತ್ಪುರುಷರೆನಿಸಿಕೊಳ್ಳುವರು. ಅವರು ಪುಣ್ಯರಾಶಿಸ್ವರೂಪಿಗಳೇ. ಅವರೇ ದೊಡ್ಡವರು. ॥೧೧೫॥

ಲೋಕದಲ್ಲಿ ಸಾಧುಪುರುಷನು ದುರ್ಲಭನೆಂದು ನನ್ನ ಅಭಿಪ್ರಾಯ. ಅಂತಹ ಸತ್ಪುರುಷನು ವಿಭೂತಿಭೂಷಿತನಾಗಿಯೂ ಶಿವಪೂಜೆಯಲ್ಲಿ ಆಸಕ್ತನಾಗಿಯೂ ಇರುತ್ತಾನೆ. ಆತನು ಶ್ರೀಚಂದ್ರಶೇಖರನ ಭಜನೆಯಿಂದ ಅಮಿತವಾದ ಸಂತೋಷವನ್ನು ಹೊಂದುವನು. ಮತ್ತು ಹೊಂದಿಸುವನು. ಆತನ ಸಹವಾಸವನ್ನೇ ನಾನು ಯಾವಾಗಲೂ ಅಪೇಕ್ಷಿಸುತ್ತೇನೆ. ॥೧೧೬॥

ಪ್ರಪಂಚದಲ್ಲಿ ಶ್ರೀ ಸದಾಶಿವನ ಕೀರ್ತನೆಯು ಸಂಸಾರವೆಂಬ ಕಾಡು ಗಿಚ್ಚನ್ನು ನಾಶಮಾಡುತ್ತದೆ. ಆದುದರಿಂದ ಸರ್ವಮಂಗಳಾನಾಯಕನಾದ ಶಿವನ ಸಹವಾಸವನ್ನು ನಾನು ಸದಾ ಬಯಸುತ್ತೇನೆ. ಆ ರೀತಿ ಸದಾಶಿವನು ನನ್ನನ್ನು ಅನುಗ್ರಹಿಸಲಿ. ॥೧೧೭॥

ಅಸ್ಮಾಭಿರರ್ಧೇಂದುಕಲಾವತಂಸಪ್ರಭಾವವಿಜ್ಞಾನವಿಶೇಷಶೂನ್ಯೈಃ ।
ಶಂಗಾಂಗಸಂಗೇನ ವಿನೇಯ ಏವ ಕಾಲಃ ಕಥಂಚಿತ್ಕಲಿನಾಶಹೇತುಃ॥೧೧೮॥

ಅಭೂತಪೂರ್ವಂ ಫಲಮೇಕಮೇವ
ಯಚ್ಛಂಗಲಿಂಗಾರ್ಚನಲಕ್ಷಣಂ ಮೇ ।
ಅನೇನ ತಾವತ್ಪ್ರಭವಂತಿ ಲೋಕಾಃ
ಕೀಲಾಲಮಾತ್ರಾರ್ಪಣಶೋಽಪಿ ತತ್ ಸ್ಯಾತ್ ॥೧೧೯॥

ಸ ಕೀಲಾಲಲವೇನಾಪಿ ಕಾಲಕಾಲಃ ಸಮರ್ಚಿತಃ ।
ದದಾತಿ ಮುಕ್ತಿಂ ಭುಕ್ತಿಂ ಚ ಕಿಂ ಪುನಃ ಕುಸುಮಾರ್ಚಿತಃ ॥೧೨೦॥

ಜೀವನೇನಾರ್ಚಿತೋ ಜೀವಾನ್ ಜೀವಯತ್ಯೇವ ಶಂಕರಃ ।
ಅತೋ ಜೀವನಮಾತ್ರೇಣಾಪ್ಯರ್ಚನೀಯಃ ಸದಾಶಿವಃ ॥೧೨೧॥

---

ನಾವು ಅರ್ಧಚಂದ್ರಕಲೆಯನ್ನು ಧರಿಸಿದ ಮಹೇಶ್ವರನ ಮಹಿಮಾವಿಶೇಷವನ್ನು ತಿಳಿಯದವರಾಗಿರುತ್ತೇವೆ. ಶಿವಭಕ್ತನ ಸಹವಾಸವನ್ನಾದರೂ ಮಾಡುತ್ತಾ ಹೇಗೋ ಕಾಲವನ್ನು ಕಳೆಯುವುದು ಕಲಿಯುಗದಲ್ಲಿ ಪಾಪನಾಶಕವಾದುದು.॥೧೧೮॥

ಶಂಭುಲಿಂಗಾರ್ಚನೆಯಿಂದ ಲಭಿಸುವ ಫಲವು ಹಿಂದೆ ಎಂದೂ ನಮಗೆ ಲಭಿಸಿಲ್ಲ. ಇಂತಹ ಮಹತ್ತಾದ ಫಲವನ್ನು ನಾವು ಹೊಂದಿಲ್ಲ. ಈ ಫಲದಿಂದ ಲೋಕವೇ ಉತ್ಪನ್ನವಾಗುತ್ತದೆ. ಆ ಶಿವಪೂಜೆಯ ಫಲವಾದರೋ ಶಂಕರನಿಗೆ ಭಕ್ತಿಯಿಂದ ಒಂದು ತೊಟ್ಟು ನೀರನ್ನು ಅರ್ಪಿಸಿದರೂ ಲಭಿಸುವುದು. ॥೧೧೯॥

ಆ ಕಾಲಮಥನನಿಗೆ ಕೇವಲ ಒಂದು ತೊಟ್ಟು ನೀರನ್ನು ಅರ್ಪಿಸಿದರೂ ಸಾಕು. ಆತನು ಮುಕ್ತಿಯನ್ನೂ, ಸುಖವನ್ನೂ ಬಾರಿಬಾರಿಗೂ ಭಕ್ತರಿಗೆ ದಯಪಾಲಿಸುವನು. ಹೀಗಿರುವಾಗ ಪುಷ್ಪಾರ್ಚನೆ ಮಾಡಿದರೆ ಹೇಳುವುದೇನು ? ॥೧೨೦॥

ಶಂಕರನನ್ನು ಜೀವನದಿಂದ (ನೀರಿನಿಂದ) ಪೂಜಿಸಿದರೆ ಅವನು ಪ್ರಾಣಿಗಳಿಗೆ ಜೀವಗಳನ್ನೇ ಒದಗಿಸುತ್ತಾನೆ. ಆದುದರಿಂದ ಕೇವಲ ನೀರಿನಿಂದಲಾದರೂ ಆತನನ್ನು ತೃಪ್ತಿಪಡಿಸಬಹುದು. ॥೧೨೧॥

ಯದಿ ಸ್ಯಾಜ್ಜೀವನಾಪೇಕ್ಷಾ ಜೀವಾನಾಂ ಜಾತು ಜೀವನೈಃ ।
ಪೂಜನೀಯಃ ಸಕೃದ್ವಾಪಿ ಜೀವನೇ ಸತಿ ಶಂಕರಃ ॥೧೨೨॥

ಕರೋತಿ ಕೌತುಕಂ ಲೋಕೇ ಸ ಗೌರೀಕಾಮುಕಃ ಖಲು ।
ಭಿನ್ನಪತ್ರಾರ್ಪಣೇನಾಪಿ ತುಷ್ಟೋ ಮುಕ್ತಿಂ ಪ್ರಯಚ್ಛತಿ ॥೧೨೩॥

ಕೈವಲ್ಯಕಾಂತಾರಮಣಂ ಕರೋತಿ
ಕರೋತಿ ಭೂಮಂಡಲನಾಯಕಂ ಚ ।
ಸಕೃತ್ ಸ್ಮೃತೋ ವಾ ಪ್ರಣತೋಽಪಿ ಭಕ್ತ್ಯಾ
ಸಮರ್ಚಿತೋ ವಾ ಗಿರಿಜಾಸಹಾಯಃ ॥೧೨೪॥

ಏತಾದೃಶೋಽಯಂ ಗಿರಿಜಾಸಹಾಯಃ
ಕೃಪಾಂಬುರಾಶಿಃ ಸುಕೃತಾತಿಪುಣ್ಯೈಃ ।
ನಿತ್ಯಂ ಸಮಾರಾಧ್ಯತ ಏವ ತೇಭ್ಯೋ
ದದಾತಿ ಮುಕ್ತಿಂ ಪ್ರದದಾತಿ ಸೌಖ್ಯಂ . ॥೧೨೫॥

---

ಜೀವಿಗೆ ತನ್ನ ಜೀವನದಲ್ಲಿ ಆಪೇಕ್ಷೆಯಿರುವುದಾದರೆ ಶ್ರೀಶಂಕರನಿಗೆ ಅಭಿಷೇಕವನ್ನು ಒಂದುಸಾರಿಯಾದರೂ ಮಾಡಿಸಿ ಆತನನ್ನು ಆರಾಧಿಸಬೇಕು. ॥೧೨೨॥

ಪ್ರಪಂಚದಲ್ಲಿ ಶ್ರೀಗಿರಿಜೆಯ ಪ್ರಿಯನಾದ ಶಂಕರನು ಎಲ್ಲರಿಗೂ ತನ್ನ ಲೀಲೆಯಿಂದ ಆಶ್ಚರ್ಯವನ್ನುಂಟುಮಾಡುವನು. ಒಂದು ಹರುಕು ಮುರುಕಾದ ಬಿಲ್ವಪತ್ರೆಯನ್ನು ಅರ್ಪಿಸಿದರೂ ಸಾಕು. ಆತನು ತೃಪ್ತನಾಗುವನು. ಆದಕ್ಕಾಗಿ ಸ್ಥಿರಮುಕ್ತಿಯನ್ನೇ ನೀಡುವನು. ॥೧೨೩॥

ಒಂದು ಬಾರಿಯಾದರೂ ಭಕ್ತಿಯಿಂದ ಶಂಕರನನ್ನು ಪೂಜೆಮಾಡಿದರೆ, ಆತನು ಪ್ರಸನ್ನನಾಗುವನು. ಮುಕ್ತಿಯೆಂಬ ಕಾಂತೆಯೊಡನೆ ವಿಹರಿಸುವಂತೆ ಮಾಡುವನಲ್ಲದೇ ಸಮಸ್ತ ಭೂಮಿಗೂ ಆತನನ್ನು ಒಡೆಯನನ್ನಾಗಿ ಮಾಡುವನು. ॥೧೨೪॥

ಇಂತಹ ಪರಮೇಶ್ವರನು ಅತ್ಯಂತ ದಯಾಳುವು. ಆತನನ್ನು ಆರಾಧಿಸುವುದು ಕೇವಲ ಪುಣ್ಯಫಲಗಳ ಪರಿಪಾಕದಿಂದಲೇ ಹೊರತು ಬೇರೆಯಲ್ಲ. ಗಿರಿಜಾರಮಣನು ಭಕ್ತಿಯಿಂದ ಆರಾಧಿಸಿದವರಿಗೆ ಸುಖ ಮತ್ತು ಮುಕ್ತಿಗಳನ್ನು ದಯಪಾಲಿಸುವನು. ಇದರಲ್ಲಿ ಸಂಶಯವಿಲ್ಲ. ॥೧೨೫॥

ಅಜ್ಞಾಃ ಪರಂ ಶಂಕರಪಾದಪದ್ಮ
ಪ್ರಣಾಮಪೂಜಾನಿರತಾ ನ ನೂನಂ ।
ತೇಷಾಂ ಕೃತಾಂತಾಲಯಪೂರಣಾಯ
ನಿರ್ಮಾಣಮಿತ್ಯೇವ ಮತಿರ್ಮಮಾಭೂತ್ ॥೧೨೬॥

ಲೋಕೇ ಕೋಪಿ ನ ಶಾಂಕರಾರ್ಚನಪರೋ ದುಃಖಾಲಯೋ ಜಾಯತೇ
ಸಂಸಾರನಭಿಭೂತ ಏವ ಸತತಂ ಭುಕ್ತ್ವಾಪಿ ಭೋಗಾನ್ ಬಹೂನ್ ।
ಮುಕ್ತೈಃ ಶಂಕರಕಿಂಕರೈಃ ಸಹ ಸದಾ ಕುರ್ವನ್ ಶಿವಾರಾಧನಂ
ಕೈಲಾಸಾಚಲಮಂದಿರಾಂತರಮಹೋದ್ಯಾನೇ ಪರಂ ಕ್ರೀಡತಿ ॥೧೨೭॥

ಉನ್ಮಾದೇನ ವಿನಾ ಶಿವಾರ್ಚನಪರೋ ಭೂತಿತ್ರಿಪುಂಡ್ರಾಂಕಿತೋ
ರುದ್ರಾಕ್ಷಾಭರಣೋ ರಮಾಪತಿಲಸನ್ನೇತ್ರಾರವಿಂದಾರ್ಚಿತಂ ।
ಸ್ಮೃತ್ವಾ ಶಂಕರಪಾದಪದ್ಮಮನಿಶಂ ಬಿಲ್ವೀದಳೈರರ್ಚಯನ್
ಲಿಂಗೇ ಶಂಕರಮಿಂದುಮೌಳಿಭಜನಾಸಕ್ತಃ ಕೃತಾರ್ಥೋ ಭುವಿ ॥೧೨೮॥

---

ಶಿವನ ಮಹಿಮೆಯನ್ನು ತಿಳಿಯದವರು ಆತನ ಪಾದಪದ್ಮಗಳಲ್ಲಿ ನಿರತರಾಗುವುದಿಲ್ಲ. ಅವರ ಸೃಷ್ಟಿಯು ಕೇವಲ ಯಮನ ಮನೆಯನ್ನು ತುಂಬುವುದಕ್ಕೆ ಹೊರತು ಅವರ ಉದ್ಧಾರಕ್ಕಾಗಿ ಅಲ್ಲ ಎಂದು ನನ್ನ ಅಭಿಪ್ರಾಯ. ॥೧೨೬॥

ಈ ಜಗತ್ತಿನಲ್ಲಿ ಶ್ರೀಮಹಾದೇವನನ್ನು ಅರ್ಚಿಸದವನಿಗೆ ದುಃಖವು ತಪ್ಪಲಾರದು. ಅವನು ಸಂಸಾರದಲ್ಲಿ ಸಿಕ್ಕಿದವನಾಗಿ ದುಃಖಿಸುವನು. ಭಕ್ತಿಯಿಂದ ಯಾವನು ಶಿವನನ್ನು ಪೂಜಿಸುವನೋ, ಅವನು ಪ್ರಪಂಚದಲ್ಲಿ ಅನೇಕ ಸುಖಗಳನ್ನು ಅನುಭವಿಸಿ ಕೊನೆಗೆ ತನ್ನ ಜನ್ಮಾಂತ್ಯದಲ್ಲಿ ಕೈಲಾಸವನ್ನು ಸೇರಿ, ಅಲ್ಲಿನ ಉದ್ಯಾನಾದಿಗಳಲ್ಲಿ ಶಿವಕಿಂಕರರೊಡನೆ ಸಂಚರಿಸುತ್ತಾ ಸೌಖ್ಯ ಹೊಂದುವನು. ॥೧೨೭॥

ಪ್ರಮತ್ತನಾಗಿರದೇ ಮಾನವನು ವಿಭೂತಿಯನ್ನು ಬಳಿದುಕೊಂಡು ಭಸ್ಮತ್ರಿಪುಂಡ್ರವನ್ನಿಟ್ಟುಕೊಂಡು, ರುದ್ರಾಕ್ಷಿಯಿಂದ ಅಲಂಕೃತನಾಗಿ ಶಿವಪೂಜೆಮಾಡಬೇಕು. ಶ್ರೀಶಿವನಪಾದಕಮಲಗಳನ್ನು ಪದೇ ಪದೇ ಸ್ಮರಿಸಿ, ಬಳಿಕ ಬಿಲ್ವದಳಗಳಿಂದ ಪೂಜೆಮಾಡುತ್ತಿರಬೇಕು. ಹೀಗೆ ಚಂದ್ರಶೇಖರನ ಭಜನೆಯಲ್ಲಿ ಆಸಕ್ತನಾದ

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಪ್ರಳಯಾನಲಂ ಪ್ರತಿ ಕೂರ್ಮನಿರೂಪಿತಶಿವಧರ್ಮಾನುವರ್ಣನಂ
ನಾಮ ಪಂಚತ್ರಿಂಶೋಽಧ್ಯಾಯಃ

---

ಅವನೇ ಧನ್ಯನು ಎಂದು ಪ್ರಳಯಾಗ್ನಿಯೊಡನೆ ಕೂರ್ಮನು ಶಿವಪೂಜಾಮಹಿಮೆಯನ್ನು ವಿವರಿಸಿದನು. ||೧೨೮||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಪ್ರಳಯಾನಲ
ಕೂರ್ಮಸಂಭಾಷಣೆಯಲ್ಲಿ ಶಿವಧರ್ಮನಿರೂಪಣೆಯೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಷಟ್ತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಫಾಲಲೋಚನಪಾವಕಃ ।
ಕೂರ್ಮಮಾಹಾತಿಹೃಷ್ಟಾತ್ಮಾ ಸಂತೋಷಂ ಜನಯನ್ಪರಂ ॥೧॥

॥ ಅಗ್ನಿರುವಾಚ ॥

ಧನ್ಯೋಽಸಿ ಶಾಂಕರಾಚಾರರತತತ್ಪರ ಶಾಂಕರ ।
ತ್ವದ್ದರ್ಶನೇನ ಸಂತೋಷಃ ಸಮುಭೂದದ್ಯ ಮೇ ಧ್ರುವಂ ॥೨॥

---

## ಮೂವತ್ತಾರನೆಯ ಅಧ್ಯಾಯ

ಅನಂತರ ಯಾಜ್ಞವಲ್ಕ್ಯಮುನಿಯು ಜನಕರಾಜನನ್ನು ಕುರಿತು ಹೀಗೆಂದನು. ಎಲೈ ರಾಜೇಂದ್ರನೇ, ಆದಿಕೂರ್ಮನ ಆ ಮಾತನ್ನು ಕೇಳಿ, ಸಂತೋಷಗೊಂಡ ಫಾಲಯಾಗ್ನಿಯು, ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾ ಕೂರ್ಮನನ್ನು ಕುರಿತು ಮತ್ತೆ ಹೀಗೆಂದಿತು. ॥೧॥

"ಕೂರ್ಮನೇ, ಶಿವನಿಗೆ ಪ್ರೀತಿಕರವಾದ ಆಚಾರಗಳಲ್ಲಿ ಆಸಕ್ತನಾದ ನೀನು ಭಾಗ್ಯಶಾಲಿಯಾಗಿರುವೆ. ನಿಜವಾಗಿಯೂ ನೀನು ಈಶ್ವರಭಕ್ತಾಗ್ರೇಸರನು. ನಿನ್ನ ದರ್ಶನದಿಂದ ನನಗೆ ಅತ್ಯಂತ ಸಂತೋಷವುಂಟಾಗಿರುವುದು. ॥೨॥

ಘಾಲಲೋಚನಸಂಗೇನ ಯತ್ಸುಖಂ ಸಮುಭೂತ್ಪುರಾ ।
ತತ್ತದ್ವಿಯೋಗತೋ ನಷ್ಟಂ ತೇನ ದುಃಖಮಭೂನ್ಮಮ ॥೩॥

ತದ್ದುಃಖಾಪಗಮೋ ವೃತ್ತೋ ಲಿಂಗಸ್ಯಾಸ್ಯ ವಿಲೋಕನಾತ್ ।
ಏತಲ್ಲಿಂಗಾರ್ಚನೇನಾಪಿ ಶ್ರಮೋಽಪಿ ವಿಗತೋಽಧುನಾ ॥೪॥

ಶಿವೋಪಹಾರಭೂತಸ್ಯ ಘೃತಸ್ಯಾಸ್ಯಾಶನಾದಪಿ ।
ಶಿವೋಪಹಾರಲಾಭೋಽಯಮಪೂರ್ವಃ ಖಲು ದೇಹಿನಾಂ ॥೫॥

ಹರತ್ಯಘಾನ್ಯಪಾರಾಣಿ ದರ್ಶನಾದಪಿ ವಸ್ತುತಃ ।
ಹಾರೋಪಹಾರಸ್ತತ್ಪಾನಭೋಜನೈರ್ಮುಕ್ತಿರಾಪ್ಯತೇ ॥೬॥

ಹಾರೋಪಹಾರಮಾಘ್ರಾಯ ಮುಕ್ತಾಃ ಪೂರ್ವಂ ಮುನೀಶ್ವರಾಃ ।
ಸ ತಾವನ್ಮುಕ್ತಿಕರಣಂ ಯಥಾ ಶಂಕರಪೂಜನಂ ॥೭॥

---

ಈ ಹಿಂದೆ ಈಶ್ವರನ ಸಹವಾಸದಿಂದ ನನಗೆ ಅತಿಶಯವಾದ ಸುಖವು ಲಭಿಸಿದ್ದಿತು. ಅವರ ವಿಯೋಗದಿಂದ ಆ ಸುಖವು ನಷ್ಟವಾಗಿ ಮನಸ್ಸಿನಲ್ಲಿ ಅತ್ಯಂತ ಖೇದವುಂಟಾಯಿತು. ॥೩॥

ಈ ಶಿವಲಿಂಗವನ್ನು ನೋಡಿದುದರಿಂದ ನನ್ನ ಆ ದುಃಖವು ಈಗ ಮಾಯ ವಾಯಿತು. ಅಲ್ಲದೇ ಈ ಶಿವಲಿಂಗವನ್ನು ಅರ್ಚಿಸಿದುದರಿಂದ ನನ್ನ ಮಾರ್ಗಾ ಯಾಸವೂ ದೂರವಾಯಿತು. ॥೪॥

ಶಿವನಿಗೆ ನಿವೇದಿಸಿದ ಈ ಘೃತದ ಭಕ್ಷಣೆಯಿಂದ ನನ್ನ ಹಸಿವು ಶಾಂತ ವಾಯಿತು. ಪ್ರಾಣಿಗಳಿಗೆ ಶಿವನೈವೇದ್ಯವು ಅತ್ಯಂತ ದುರ್ಲಭವಲ್ಲವೇ ! ॥೫॥

ಅದು ದರ್ಶನಮಾತ್ರದಿಂದಲೇ ಭಯಂಕರವಾದ ಪಾತಕಗಳನ್ನು ಹೋಗ ಲಾಡಿಸುವುದು. ಅದರ ಪಾನ ಮತ್ತು ಭಕ್ಷಣಗಳಿಂದಲಾದರೋ ಮೋಕ್ಷವೇ ಲಭಿಸುವುದು. ॥೬॥

ಹಿಂದೆ ಅನೇಕ ಮುನಿಪುಂಗವರು ಶಿವನೈವೇದ್ಯವನ್ನು ಆಘ್ರಾಣಿಸಿ ಮುಕ್ತಿ ಯನ್ನು ಪಡೆದಿರುವರು. ಶಿವಪೂಜೆಯು ಸಾಕ್ಷಾತ್ ಮೋಕ್ಷವನ್ನು ಉಂಟುಮಾಡು ವಂತೆ ಶಿವನೈವೇದ್ಯವೂ ಮೋಕ್ಷವನ್ನು ದಯಪಾಲಿಸುವುದು. ॥೭॥

ಹಾರೋಪಹಾರಾಶನವೀತಪಾಪಾಃ
ಶಿವಸ್ವರೂಪಾಃ ಸುಕೃತಾನುರೂಪಾಃ ।
ವಿಧ್ವಸ್ತಸಂಸಾರವಿಶೇಷತಾಪಾಃ
ಪ್ರನಷ್ಟಕೋಪಾಶ್ಚ ಗತಾತಿಶಾಪಾಃ ॥೮॥

ಕಿಂ ಚ ತ್ವಯಾ ಭೂರಿತರೋಽಪಿ ಭಾರಃ
ಧೃತಃ ಕಥಂ ವಾ ವಿಧೃತೋಽತಿಯತ್ನೈಃ ।
ವಿನಾ ನ ತದ್ಧಾರಣಮಿತ್ಯನ್ವೈಮಿ
ಧೈರ್ಯಂ ಕಥಂ ವಾ ತವ ಜಾತಮೇವಂ ॥೯॥

ಇತಿ ತದ್ವಚನಂ ಶ್ರುತ್ವಾ ಕೂರ್ಮಃ ಪ್ರಾಹಾತಿಹರ್ಷಿತಃ ।
ತಸ್ಯಾಪಿ ಜನಯನ್ತೋಷಂ ಸ್ವರೂಪಕಥನಾದಪಿ ॥೧೦॥

॥ ಕೂರ್ಮ ಉವಾಚ ॥

ಧೃತಾ ಮಹೀ ಶಂಕರಲೀಲಯೈವ
ನಿಮಿತ್ತಮೇವಾಹಮಿತಿ ಪ್ರಯತ್ನಃ ।

---

ಭಾಗ್ಯಶಾಲಿಗಳು ತಮ್ಮ ಸುಕೃತಗಳಿಗೆ ಅನುಗುಣವಾಗಿ, ಶಿವನೈವೇದ್ಯವನ್ನು ಭಕ್ಷಿಸಿ ಸಕಲ ಪಾಪರಾಶಿಗಳನ್ನೂ ಕಳೆದುಕೊಳ್ಳುವರು. ಅವರು ಸಾಕ್ಷಾತ್ ಪರಶಿವನ ಸ್ವರೂಪರೇ ಆಗಿರುವರು. ಅಲ್ಲದೆ ಅವರು ಶಿವನೈವೇದ್ಯದ ಭಕ್ಷಣೆಯ ಮಹಿಮೆಯಿಂದ ಸಂಸಾರದುಃಖಗಳನ್ನು ನಾಶಗೊಳಿಸುವರು. ಅವರಲ್ಲಿ ಕ್ರೋಧವಾಗಲಿ, ಶಾಪದ ಭಯವಾಗಲಿ ಕಾಣುವುದಿಲ್ಲ. ॥೮॥

ಅದಲ್ಲದೇ ನೀನು ಅಧಿಕವಾದ ಭೂಭಾರವನ್ನು ಹೊತ್ತಿರುವೆ. ಅದು ನಿನ್ನ ಮಿಗಿಲಾದ ಪ್ರಯತ್ನದಿಂದಲೇ ಹೊರಲ್ಪಟ್ಟಿದೆಯಲ್ಲದೇ ಪ್ರಯತ್ನವಿಲ್ಲದಿದ್ದರೆ ಆ ಭಾರವನ್ನು ಹೊರುವುದು ಸಾಧ್ಯವಾಗದು. ಇಷ್ಟೊಂದು ಬಲವು ನಿನ್ನಲ್ಲಿ ಹೇಗೆ ಉಂಟಾಯಿತು ?" ॥೯॥

ಪ್ರಲಯಾಗ್ನಿಯ ಆ ಮಾತನ್ನು ಕೇಳಿ, ಆದಿಕೂರ್ಮನು ಅತ್ಯಂತ ಸಂತೋಷಗೊಂಡು ತನ್ನ ನಿಜರೂಪದ ರಹಸ್ಯವನ್ನು ಪ್ರಲಯಾಗ್ನಿಗೆ ತಿಳಿಯಪಡಿಸಿ ಆದರಿಂದ ಅಗ್ನಿಯನ್ನು ಸಂತೋಷಪಡಿಸುವ ಸಲುವಾಗಿ ಹೀಗೆಂದನು. ॥೧೦॥

"ಎಲೈ ಪ್ರಲಯಾಗ್ನಿಯೇ, ಈ ಭೂಮಂಡಲವನ್ನು ಶಂಕರನು ತನ್ನ ಲೀಲೆಯ ಮಹಿಮೆಯಿಂದ ಹೊತ್ತಿರುವನು. ಆದರೆ ಇದನ್ನು ಹೊರುವುದರಲ್ಲಿ

ನ ಕೋಽಪಿ ಮೇ ಪಾವಕೇ ತಾವಕೋ ವಾ
ಲೋಕಸ್ಯ ಕಸ್ಯಾಪಿ ವಿಶೇಷಕಾರ್ಯೇ ॥೧೧॥

ಕಾರ್ಯಾಣಿ ತಾವದ್ಬಹುಧಾ ಭವಂತಿ
ಮಹೇಶಲೀಲಾಪ್ರಸರಾದವಶ್ಯಂ
ಸ ಏವ ಕರ್ತಾಪಿ ಸ ರಕ್ಷಕೋಽಪಿ
ಸ ಏವ ಹಂತಾ ನಿಜಲೀಲಯಾ ಹಿ ॥೧೨॥

ಯಲ್ಲೀಲಾಪ್ರವರಾದ್ಭವಂತಿ ಭುವನಾನ್ಯತ್ಯದ್ಭುತಾನಿ ಪ್ರಭೋಃ
ಶಂಭೋಸ್ತಸ್ಯ ಕಿಮಸ್ತ್ಯಶಕ್ಯಮಧುನಾ ಭೂಧಾರಣಾದೀನ್ಯಪಿ ।
ಯತ್ಪಾದಾಂಬುಜರೇಣುರೇಣುಕಲನಾತ್ಸಂಸಾರಭಾರೋ ಮಹಾನ್
ನಾಶಂ ಯಾತಿ ತದಂಘ್ರಿಪಂಕಜರಜಃಸಂಸೇವನೈಃ ಕಿಂ ಭಯಂ ॥೧೩॥

ತಂ ಪ್ರಾಹುರ್ನಿಗಮಾಃ ಪರಂ ಶಿವಮಿತಿ ವ್ಯಕ್ತೇತರೈರ್ಗದ್ಗದೈಃ
ವಾಕ್ಯೈರಿಂದುಕಲಾವತಂಸಮಗಜಾಕಾಂತಂ ಪ್ರಶಾಂತಂ ಮುಹುಃ ।

---

ನಾನು ನಿಮಿತ್ತಮಾತ್ರನಾಗಿರುವೆನು. ಲೋಕದ ಅದ್ಭುತವಾದ ರಚನೆಯಲ್ಲಿ ನನ್ನ ದಾಗಲಿ ಅಥವಾ ನಿನ್ನದಾಗಲಿ ಯಾವ ಪ್ರಯತ್ನವೂ ಇರುವುದಿಲ್ಲ. ಅವೆಲ್ಲವನ್ನೂ ಶಿವಲೀಲೆಯೆಂದೇ ತಿಳಿ. ॥೧೧॥

ಪರಮೇಶ್ವರನ ಲೀಲಾಮಹಿಮೆಯಿಂದಲೇ ಕಾರ್ಯಗಳು ನಾನಾರೀತಿಯಲ್ಲಿ ನಿಯತವಾಗಿ ಉಂಟಾಗುವುವು. ಅವನೇ, ತನ್ನ ಲೀಲೆಯಿಂದ ಲೋಕಗಳನ್ನು ಸೃಷ್ಟಿಸುವನು. ಸ್ಥಿತಿಕಾಲದಲ್ಲಿ ಅವುಗಳನ್ನು ಸಂರಕ್ಷಿಸುವನು. ಪ್ರಲಯಕಾಲದಲ್ಲಿ ನಾಶಮಾಡುವನು. ॥೧೨॥

ಯಾವ ಭಗವಂತನ ಲೀಲೆಯುಪೆಸೆಯಿಂದ ವಿಲಕ್ಷಣವಾದ ಈ ಲೋಕಗಳು ಉಂಟಾಗುವುವೋ, ಅಂತಹ ಪರಮೇಶ್ವರನಿಗೆ ಯಾವ ಕಾರ್ಯವು ತಾನೇ ಅಸಾಧ್ಯ? ಮಹಾದೇವನ ಪಾದಕಮಲಗಳ ಧೂಳಿಯ ಲೇಶವನ್ನು ಸೇವಿಸುವಮಾತ್ರದಿಂದಲೇ ಸಂಸಾರವು ದೂರವಾಗುವುದು. ಆ ದೇವನ ಅಡಿದಾವರೆಗಳ ಧೂಳನ್ನು ಸೇವಿಸಿದವರಿಗೆ ದುಃಖಭಯವಿರುವುದೇ? ॥೧೩॥

ಚಂದ್ರಶೇಖರನೂ, ಗಿರಿಜಾರಮಣನೂ, ಶಾಂತಮೂರ್ತಿಯೂ ಆದ ಆ ಭಗವಂತನನ್ನು ವೇದಗಳು ಅಸ್ಫುಟವಾದ ವಾಕ್ಯಗಳಿಂದ ಅಜ್ಞಾನ ಸಂಬಂಧದಿಂದ

ತಂ ದೇವೋತ್ತಮಮುಪ್ರಮೇಯವಿಭವಂ ಯಃ ಪೂಜಯೇದಾದರಾ
ದಾನಂದೋದಯ ಏವ ತಸ್ಯ ಹೃದಯೇ ಸಂಸಾರಪೀಡಾ ಕುತಃ ॥೧೪॥

ತಂ ಜಾನಂತಿ ಪರಂ ಪರಾತ್ಪರತರಂ ತೇ ಶಾಂಕರಾಃ ಶಂಕರ
ಧ್ಯಾನಾರಾಧನಪೂಜನಾದಿಕಥನಾಸ್ತೇ ಮಾನಹೀನಾಃ ಪರಂ ।
ಧನ್ಯಂ ತಂ ವಿದುರಿಂದುಶೇಖರಪದಾಂಭೋಜಾರ್ಚಕಂ ತಂ ಪರಂ
ಸಂಸಾರಾರ್ಣವಕರ್ಣಧಾರಗಿರಿಶಶ್ರೀಪಾದಪದ್ಮಾರ್ಚನಂ ॥೧೫॥

ಲೋಕೇ ದುರ್ಲಭಮೇವ ತೇನ ಬಹುಧಾ ಸಂಪತ್ಪ್ರವೃದ್ಧಿರ್ಭವೇ
ದಿಷ್ಟಾವಾಪ್ತಿರನಿಷ್ಟನಾಶನಮಪಿ ವ್ಯಕ್ತಂ ಮದೀಯಂ ವಚಃ ।
ಭ್ರಾಂತಾಃ ಕೇಚನ ಕಾಮಯೇ ತದಧುನಾ ಯಾವನ್ಮಯಾ ಸಾಧಿತಂ
ಸಂಧಾನೇನ ಪರೇಣ ತಾವದಿತಿ ತೇ ತಾವಜ್ಜಗದ್ವಂಚಕಾಃ ॥೧೬॥

---

ದೂರನಾದ ಸಚ್ಚಿದಾನಂದ ಸ್ವರೂಪನೆಂದು ಹೇಳುವುವು. ಅಮಿತವಾದ ಮಹಿಮೆ ಯಿಂದ ಕೂಡಿರುವ ಆ ದೇವೋತ್ತಮನನ್ನು ಯಾವನು ಭಕ್ತಿಯಿಂದ ಪೂಜಿಸು ವನೋ ಅವನ ಚಿತ್ತದಲ್ಲಿ ಶಾಶ್ವತವಾದ ಮೋಕ್ಷಾನಂದವೇ ನೆಲಸುವುದಲ್ಲದೇ ಅವನು ಎಂದಿಗೂ ಸಂಸಾರದುಃಖಕ್ಕೆ ಗುರಿಯಾಗಲಾರನು. ॥೧೪॥

ನಿತ್ಯಮುಕ್ತಸ್ವಭಾವನಾದ ಪರಮೇಶ್ವರನು, ಅಜ್ಞಾನದ ಸಂಬಂಧದಿಂದ ಬಾಹಿರನೆಂದು ಜ್ಞಾನಿಗಳು ತಿಳಿಯುವರು. ಈಶ್ವರ ಭಕ್ತಶ್ರೇಷ್ಠರಾದ ಅವರು, ಅನವರತವೂ, ಶಿವನ ಧ್ಯಾನ, ಪಾದಸೇವೆ, ಪೂಜೆ ಮುಂತಾದ ಸತ್ಕರ್ಮಗಳನ್ನು ಉಪದೇಶಿಸುವುದರಲ್ಲಿಯೇ ಆಸಕ್ತರಾಗಿರುವರು. ಅಲ್ಲದೇ ಅವರು ಮಾನಾಪಮಾನ ಗಳಲ್ಲಿ ಸಮಭಾವನೆಯುಳ್ಳವರಾಗಿರುವರು. ಚಂದ್ರಶೇಖರನ ಅಡಿದಾವರೆಗಳನ್ನು ಅರ್ಚಿಸುವ ಮನುಜನೇ ಧನ್ಯನಾಗಿರುವನೆಂದು ತಿಳಿದವರು ಹೇಳುವರು. ಸಂಸಾರ ವೆಂಬ ಸಮುದ್ರವನ್ನು ದಾಟಿಸುವುದರಲ್ಲಿ ಅಂಬಿಗನಂತಿರುವ ಪರಮೇಶ್ವರನನ್ನು ಅರ್ಚಿಸುವವನೇ ನಿಜವಾಗಿಯೂ ಪರಮ ಧನ್ಯನು. ॥೧೫॥

ಈ ಲೋಕದಲ್ಲಿ ಶಿವಪೂಜೆಯು ದುರ್ಲಭವಾದುದು. ಅದರಿಂದ ನಾನಾ ಬಗೆಯಾದ ಐಶ್ವರ್ಯವು ವೃದ್ಧಿಯನ್ನು ಹೊಂದುವುದು. ಇಷ್ಟಾರ್ಥವು ಸಿದ್ಧಿಸು ವುದು. ಅನಿಷ್ಟಾರ್ಥವು ತೊಲಗುವುದು. ನನ್ನ ಈ ವಚನವನ್ನು ಸತ್ಯವೆಂದು ತಿಳಿ. ಆದರೆ ಕೆಲವು ಜನ ಮೂಢರು ಶಿವಪೂಜೆಯು ಶ್ರೇಯಸ್ಕರವಾದುದಲ್ಲವೆಂದು,

ಕರ್ತಾ ಶಂಕರ ಇತ್ಯನ್ಯೈಮಿ ವಿಮಲೋ ಮಾನಾಭಿಮಾನ್ಯೈರ್ವಿನಾ
ತತ್ತ್ವಜ್ಞಃ ಸ ಇತಿ ತ್ವಯಾಪಿ ವಿದಿತೋ ಲೋಕೈರ್ಮಯಾಪಿ ಧ್ರುವಂ ।
ಅತ್ಯುಚ್ಚೋಪಲಮಧ್ಯಸಂಸ್ಥಿತಮಹಾಮಂಡೂಕನೀರಪ್ರದಃ
ಕೋ ವಾ ತಿಷ್ಠತಿ ಭೂತಲೇಽಪಿ ಚತುರಃ ಸ್ವರ್ಗೇಽಪಿ ಸತ್ಯೇಽಪಿ ವಾ ॥೧೭॥

ವೈಕುಂಠೇಽಪ್ಯತಿಕುಂಠಿತಾಃ ಸುರಗಣಾಃ ಸ್ವಾಂಗಾನಿ ಯೋಗೇಽಪಿ ತೇ
ತಸ್ಮಾದಂಬರಚುಂಬಿಸುಂದರಜಟಾಜೂಟೋದಿತೋ ಧೂರ್ಜಟಿಃ ।
ನಾರೀದುರ್ಭಗಗರ್ಭಧಾರಣಗುಣವ್ಯಾಪಾರಪಾರಂ ಗತೋ
ನೋಪೇಂದ್ರೋ ಜನನೀಕಠೋರಜಠರಾವಾಸಃ ಪ್ರಯಾಸಾಲಸಃ ॥೧೮॥

---

ಭ್ರಾಂತರಾಗಿರುವರು. ನಾವು ಯಾವ ಇಷ್ಟಾರ್ಥಕ್ಕೋಸ್ಕರ ಶಿವನನ್ನು ಏಕಮನಸ್ಸಿನಿಂದ ಧ್ಯಾನಿಸುತ್ತಿರುವೆವೋ, ಆ ಇಷ್ಟಾರ್ಥವನ್ನು ಈಗ ಅನುಭವಿಸುತ್ತಿರುವೆವೆನ್ನುವರು ಶಿವನನ್ನು ಅನನ್ಯಭಕ್ತಿಯಿಂದ ಪೂಜಿಸದೆ ನಿಂದಿಸುವ ಮೂಢರು ಲೋಕವನ್ನೇ ವಂಚಿಸುವವರಾಗುವರು. ಮತ್ತು ಕೇವಲ ಅಜ್ಞಾನಿಗಳೆನಿಸಿಕೊಳ್ಳುವರು. ||೧೬||

ಆ ಶಿವನು ಚರಾಚರಾತ್ಮಕವಾದ ಈ ಜಗತ್ತಿನ ಸೃಷ್ಟಿಕರ್ತನೂ ಮತ್ತು ಮಾನಾಭಿಮಾನರಹಿತನೂ ನಿತ್ಯಶುದ್ಧನೂ ಆಗಿರುವನೆಂದು ತಿಳಿಯುವೆನು. ಅವನು ತತ್ತ್ವಜ್ಞನೆಂಬುದು ನಿರ್ವಿವಾದವಾದುದು. ಸತ್ಯಸಂಕಲ್ಪನಾದ ಆ ಶಿವನು ಉನ್ನತವಾದ ಶಿಲೆಯ ಒಳಭಾಗದಲ್ಲಿರುವ ಕಪ್ಪೆಗಳಿಗೂ ಪ್ರಾಣಧಾರಣೆಗೆ ಉಪಯುಕ್ತವಾದ ನೀರನ್ನು ದಯಪಾಲಿಸುವ ಸಾಮರ್ಥ್ಯವುಳ್ಳವನು. ಇಂತಹ ಸಾಮರ್ಥ್ಯಶಾಲಿಯು ಸ್ವರ್ಗಲೋಕದಲ್ಲಾಗಲಿ ಸತ್ಯಲೋಕದಲ್ಲಾಗಲಿ ಬೇರೊಬ್ಬನು ದೊರಕುವನೇ ! ||೧೭||

ವೈಕುಂಠವಾಸಿಗಳಾದ ದೇವತೆಗಳೂ ಸಹ ತಮ್ಮ ತಮ್ಮ ಕಾರ್ಯನಿರ್ವಹಣದಲ್ಲಿ ಅಸಮರ್ಥರಾಗಿ ಪರಶಿವನ ಸಹಾಯವನ್ನಪೇಕ್ಷಿಸುವರು. ಅದಕ್ಕಾಗಿಯೇ ಪರಮೇಶ್ವರನು ಅಂಬರಪರ್ಯಂತವಾಗಿ ವ್ಯಾಪಿಸಿದ ಜಟಾಜೂಟವುಳ್ಳವನಾಗಿ ಪ್ರಕಾಶಿಸುತ್ತಿರುವನು. ವೈಕುಂಠಾಧಿಪತಿಯಾದ ವಿಷ್ಣುವೂ ಉಪೇಂದ್ರನಾಗಿ ಜನಿಸಲೋಸುಗ ತಾಯಿಯ ಗರ್ಭದಲ್ಲಿ ಬೆಳೆದು ತತ್ಸಂಬಂಧವಾದ ಸಕಲ ದುಃಖಗಳನ್ನೂ ಅನುಭವಿಸಿದನು. ಈ ವಿಧವಾದ ಕ್ಲೇಶಗಳಾವುವೂ ಮಹಾದೇವನಲ್ಲಿ ಎಂದೂ ಕಂಡುಬರಲಾರವು. ||೧೮||

ಇಂದ್ರೋ ವಾ ನ ಚತುರ್ಮುಖೋಽಪಿ ಸ ತಥಾ ಭೂತಸ್ತದನ್ಯಸ್ತ್ರಥಾ
ತಸ್ಮಾದಂಬರಚುಂಬಿಸುಂದರಜಟಾಜೂಟೋದಿತೋ ಧೂರ್ಜಟಿಃ ।
ಆರಕ್ತಾಂಬುದಗರ್ಜಿತಾನ್ವಿತವರಾಸಾರಾಂಕುರೋತ್ಪಾದನ
ವ್ಯಾಪಾರಪ್ರವರಾಪರೋಽತಿಚತುರಃ ಕೋ ವಾ ಮಹೇಶಾದೃತೇ ॥೧೯॥

ಕೋ ವಾ ಸ್ಯಾದಧುನಾ ಶಿವೇತರಸುರೇಷ್ವನ್ಯೇಷು ವಾ ಭೂತಲೇ
ತಸ್ಮಾದಂಬರಚುಂಬಿಸುಂದರಜಟಾಜೂಟೋದಿತೋ ಧೂರ್ಜಟಿಃ ।
ತತ್ತಾವದ್ಗಿರಿಶಂ ಜಗತ್ತ್ರಯಹಿತೇ ತಾವತ್ಪ್ರವೃತ್ತಂ ಪರಂ
ಸಂಸಾರಾಂಬುಧಿತಾರಕಂ ವಿದುರುಮಾಕಾಂತಂ ಪ್ರಶಾಂತಾತ್ರ್ಮಯಾಃ ॥೨೦॥

ತೇ ತಾವತ್ತ್ವದನುಗ್ರಹೇಣ ಹೃದಯೇ ತಂ ಭಾವಯಂತಃ ಪರಂ ।
ಗೌರೀಕಾಂತಮನಂತಶೋಕವಿಲಯಂ ಕರ್ತುಂ ಪ್ರವೃತ್ತಾಶ್ಚಿರಂ ॥೨೧॥

---

ಇಂದ್ರನೇ ಆಗಲಿ, ಚತುರ್ಮುಖಬ್ರಹ್ಮನೇ ಆಗಲಿ, ಮತ್ತಾವ ದೇವತೆಗಳೇ ಆಗಲಿ, ವ್ಯೋಮಕೇಶನಾಗಿ ಆವಿರ್ಭವಿಸುವ ಧೂರ್ಜಟಿಯಂತೆ ಲೋಕರಕ್ಷಣೆಮಾಡಲು ಸಮರ್ಥರಾಗುವುದಿಲ್ಲ. ಭೂಲೋಕವನ್ನು ಮೇಘಗರ್ಜನ, ವೃಷ್ಟಿಪ್ರದಾನ, ಹಾಗೆಯೇ ಸಸ್ಯಾಭಿವೃದ್ಧಿ ಇವುಗಳಿಂದ ಅನಾಯಾಸವಾಗಿ ಕಾಪಾಡುವ ಸಾಮರ್ಥ್ಯವು ಪರಶಿವನಿಗಲ್ಲದೆ ಪ್ರಪಂಚದಲ್ಲಿ ಮತ್ತಾರಿಗಿರುವುದು ? ॥೧೯॥

ಮೂರು ಲೋಕಗಳನ್ನೂ ಉದ್ಧರಿಸುವ ಕಾರ್ಯದಲ್ಲಿ ತತ್ಪರನಾಗುವ, ಹಾಗೆಯೇ ಸಂಸಾರಸಮುದ್ರದಿಂದ ಮಾನವರನ್ನೂ ಉದ್ಧರಿಸುವ, ಸಾಮರ್ಥ್ಯವು ಪರಶಿವನಿಗಲ್ಲದೆ ಮತ್ತಾರಿಗಿರುವುದು ? ಈ ವಿಷಯವನ್ನು ಶಾಂತಾತ್ಮರಾದ ಮಹರ್ಷಿಗಳೇ ವಿವರಿಸಿ ಹೇಳಿರುವರು. ಅಂಬರಚುಂಬಿಯಾದ ಜಟಾಜೂಟಗಳಿಂದ ವಿರಾಜಿಸುವ ಪರಶಿವನನ್ನು ಬಿಟ್ಟರೆ ಜಗತ್ತಿನಲ್ಲಿ ಮತ್ತಾರುತಾನೇ ಅವನಂತೆ ಜಗದ್ರಕ್ಷಕರೆನಿಸುವರು ? ॥೨೦॥

ಈ ಇಂದ್ರಾದಿದೇವತೆಗಳು ನಿನ್ನ ಅನುಗ್ರಹದ ದೆಸೆಯಿಂದ ಶಾಶ್ವತನಾದ ಪರಮೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಅಪಾರವಾದ ಸಂಸಾರದುಃಖವನ್ನು ಹೋಗಲಾಡಿಸಿಕೊಳ್ಳಲು ಪ್ರವೃತ್ತರಾಗಿರುವರು. ॥೨೧॥

ತ್ವಯಾಪಿ ತಾವದ್ಗಿರಿಶಪ್ರಸಾದಾ
ದತ್ರಾಗತಂ ಕಃ ಕಿಮಿಹಾಗತೋಽಸಿ ।
ನಾತ್ರಾಭಿಮಾನಃ ಖಲು ಸಂಮತಸ್ತೇ
ಮಹೇಶಲೀಲೇಯಮಿತಿ ಸ್ಮರಾಮಿ ॥೨೨॥

ತಮೇವ ತಾವನ್ಮಹತೋ ಮಹಾಂತಂ
ಮಹೇಶ್ವರಂ ಪ್ರಾಹುರುಮಾಪತಿಂ ತಂ ।
ಭಜಾಮಿ ತಾವತ್ತದನುಗ್ರಹೇಣ
ತಮೇವ ಲಿಂಗೇಽತ್ರ ಸಮರ್ಚಯಾಮಿ ॥೨೩॥

ಭೂಭಾರಲೇಶೋಽಪಿ ಮಮಾಧುನಾ ಕಿಂ
ಲಿಂಗಾರ್ಚಕಸ್ಯಾಸ್ಯ ಮಹಾನ್ ಬಿಭರ್ತಿ ।
ಮಹೇಶಲೀಲಾಪರಮಿತ್ಯವೈಮಿ
ನೋ ಚೇದ್ಗತಂ ಜೀವನಮೇವ ನೂನಂ ॥೨೪॥

---

ನೀನಾದರೋ ಈಶ್ವರಪ್ರೇರಣೆಯಿಂದಲೇ ಇಲ್ಲಿಗೆ ಬಂದಿರುವೆ. ನೀನಾರು? ಇಲ್ಲಿಗೆ ಏಕೆ ಬಂದಿರುವೆ? ನಿಜವಾಗಿಯೂ ನಿನಗೆ ಇಲ್ಲಿಗೆ ಬರುವ ಇಚ್ಛೆಯು ಇದ್ದಿತೆ? ಆದರೂ ಈಶ್ವರನ ಲೀಲಾಮಹಿಮೆಯಿಂದಲೇ ನೀನು ಇಲ್ಲಿಗೆ ಬಂದಿರುವೆ ಯೆಂದು ತಿಳಿಯುವೆನು. ॥೨೨॥

ಆ ಶಿವನು ತನ್ನ ನಿಜರೂಪದಿಂದ ಮಹತ್ಪರಿಮಾಣವುಳ್ಳ ಸರ್ವವ್ಯಾಪಕ ವಾದ ಆಕಾಶಕ್ಕಿಂತಲೂ ವ್ಯಾಪಕನೆಂದೂ, ಸೋಪಾಧಿಕವಾದ ಸ್ವರೂಪದಿಂದ ಗಿರಿಜಾ ವಲ್ಲಭನೆಂಬ ಆಗಂತುಕವಾದ ರೂಪವನ್ನು ಹೊಂದಿರುವನೆಂದೂ ಜ್ಞಾನಿಗಳು ಹೇಳುವರು. ಅವನ ಅನುಗ್ರಹದಿಂದಲೇ ನಾನು ಆ ಪರಶಿವನನ್ನು ಭಜಿಸುವೆನು. ಅವನನ್ನೇ ಈ ಲಿಂಗದಲ್ಲಿ ಆರಾಧಿಸುವೆನು. ॥೨೩॥

ಶಿವಲಿಂಗವನ್ನು ಅರ್ಚಿಸುವ ನನಗೆ ಅಧಿಕವಾದ ಈ ಭೂಭಾರವೂ ಸಹ ಅಲ್ಪವಾಗಿ ತೋರುವುದು. ಇದು ಈಶ್ವರನ ವಿಲಾಸವೆಂದೇ ತಿಳಿಯುವೆನು. ಅದಿಲ್ಲ ದಿದ್ದರೆ ಇಷ್ಟು ಭಾರವನ್ನು ಹೊತ್ತು ನಾನು ಜೀವಿಸುವುದು ಸಾಧ್ಯವೆನಿಸೀತೆ! ॥೨೪॥

ಕಾಲಸ್ತಾವದ್ಗತೋ ಭೂಯಾನೇವಂ ಸಂಭಾಷಣಾತ್ತಯೋಃ ।
ತದಾನೀಮದ್ಭುತಂ ತೇಜಸ್ತಾಭ್ಯಾಂ ದೃಷ್ಟಂ ಭಯಾವಹಂ ॥೧೫॥

ತಂ ದೃಷ್ಟ್ವಾ ಪಾವಕಃ ಪ್ರಾಹ ತಂ ಕೂರ್ಮಮತಿಭೀಷಣಂ ।
ಕಿಮೇತದಿತ್ಯವಷ್ಟಭ್ಯ ವೃತ್ತಾಂತಂ ವದ ಸಾದರಂ ॥೧೬॥

॥ ಕೂರ್ಮ ಉವಾಚ ॥

ದೇವಾಃ ಸಮಾಗತಾಸ್ತಾವತ್ಸರ್ವೇ ನಾರಾಯಣಾದಯಃ ।
ತ್ವದೀಯೇನ ಭಯೇನೈವ ವ್ಯಾಕುಲಾಃ ಖಲು ಸತ್ತ್ವರಂ ॥೧೭॥

ಶಾಸನೀಯೋಽಪಿ ನಿರ್ಣೀತಸ್ತೈರೇವ ಬಹುಧಾ ತತಃ ।
ತಚ್ಛಾಸನಾಯ ಶಸ್ತ್ರಾಣಿ ಪ್ರಯುಕ್ತಾನಿ ಬಹೂನ್ಯಪಿ ॥೧೮॥

ನಾರಾಯಣಾಸ್ತ್ರಂ ಚಕ್ರಂ ಚ ತದ್ವಿನಾಶಾಯ ಕೇವಲಂ ।
ಪ್ರಯುಕ್ತಂ ವಿಷ್ಣುನಾ ತಾಭ್ಯಾಮಾದೃತೋ ಮದನೋಽಧುನಾ ॥೧೯॥

---

ಈ ರೀತಿ ಅವರ ಸಂಭಾಷಣೆಯಿಂದ ಬಹುಕಾಲವು ಕಳೆಯಿತು. ಆಗ ಅತ್ಯಾಶ್ಚರ್ಯಕರವೂ ಭಯಂಕರವೂ ಆದ ಒಂದಾನೊಂದು ತೇಜೋರಾಶಿಯು ಅವರಿಗೆ ಗೋಚರವಾಯಿತು. ||೧೫||

ಅದನ್ನು ನೋಡಿ ಭಯಗೊಂಡ ಪ್ರಲಯಾಗ್ನಿಯು ಆದಿಕೂರ್ಮನನ್ನು ಬಿಗಿಯಾಗಿ ಅಪ್ಪಿಕೊಂಡು ಅವನನ್ನು ಕುರಿತು, ನಮ್ಮ ಮುಂದೆ ಈ ತೇಜಃಪುಂಜವು ಕಾಣಿಸುತ್ತಿರುವುದಲ್ಲ! ಇದೇನೆಂಬುದನ್ನು ಹೇಳು ಎಂದು ಆದರದಿಂದ ಅರಿಕೆ ಮಾಡಿಕೊಂಡಿತು. ||೧೬||

ಆಗ ಕೂರ್ಮವು ಹೀಗೆಂದಿತು — ಪ್ರಲಯಾಗ್ನಿಯೇ! ವಿಷ್ಣುವೇ ಮುಂತಾದ ದೇವತೆಗಳು ನಿನ್ನ ಭಯದಿಂದ ದುಃಖಿತರಾಗಿ ಶೀಘ್ರವಾಗಿ ಇಲ್ಲಿಗೆ ಬರುತ್ತಿರುವರು ||೧೭||

ಮತ್ತು ಈಶ್ವರದ್ವೇಷಿಯಾದ ಆ ಮನ್ಮಥನನ್ನು ಯಾವ ಬಗೆಯಿಂದ ಲಾದರೂ ಶಿಕ್ಷಿಸಬೇಕೆಂದು ನಿರ್ಣಯಿಸಿ, ಅದಕ್ಕೋಸ್ಕರ ಅನೇಕ ಶಸ್ತ್ರಗಳನ್ನು ಪ್ರಯೋಗಿಸುತ್ತಿರುವರು. ||೧೮||

ಮನ್ಮಥನನ್ನು ಸಂಹರಿಸುವುದಕ್ಕೋಸ್ಕರ ವಿಷ್ಣುವು ನಾರಾಯಣಾಸ್ತ್ರವನ್ನೂ

ಬ್ರಹ್ಮಾಸ್ತ್ರಂ ಬ್ರಹ್ಮಣಾ ತೇನ ಪ್ರಯುಕ್ತಂ ತದ್ವಿನಾಶಕಂ ।
ವಜ್ರಂ ಪ್ರಯುಕ್ತಮಿಂದ್ರೇಣ ತೇಜೋಮಂಡಲಸನ್ನಿಭಂ ॥೩೦॥

ಅನ್ಯೈರಪಿ ಸುರೈಃ ಸರ್ವೈಃ ಸ್ವಸ್ವಶಸ್ತ್ರಾಣಿ ಕೋಟಿಶಃ ।
ಪ್ರಯುಕ್ತಾನ್ಯೇವ ತನ್ನಾಶಸ್ತಾವತಾಪಿ ನ ಜಾಯತೇ ॥೩೧॥

ಮಹಾದೇವಪ್ರಸಾದೇನ ಲಬ್ಧಃ ಕಮಲಯಾ ಪುರಾ ।
ಸ ಮಾರಸ್ತಸ್ಯ ಸಂಹಾರಶ್ಚಕ್ರಾದ್ಯೈರ್ನ ಪ್ರಜಾಯತೇ ॥೩೨॥

ತೇನ ಶಂಕರನಿಂದಾ ಚೇನ್ನ ಕೃತಾ ತರ್ಹಿ ತತ್ಸಮಃ ।
ಕೋ ವಾ ಸ್ವರ್ಗಾದಿಲೋಕೇಷು ಸ ತಾವದ್ಭೂರಿವಿಕ್ರಮಃ ॥೩೩॥

ಯಸ್ಯ ಸ್ಮರಣಮಾತ್ರೇಣ ಮುನಯೋಽಪಿ ತಪಃ ಪರಂ ।
ತ್ಯಕ್ತ್ವಾ ದಾರಾದರಾ ಏವ ಭವಂತಿ ಪ್ರತಿವಾಸರಂ ॥೩೪॥

---

ಮತ್ತು ಚಕ್ರವನ್ನೂ ಪ್ರಯೋಗಿಸಿದನು. ಆದರೂ ಅದರಿಂದ ಮನ್ಮಥನಿಗೆ ಯಾವ ಬಗೆಯ ಕಷ್ಟವೂ ಉಂಟಾಗಲಿಲ್ಲ. ॥೨೯॥

ಅದರಂತೆ ಬ್ರಹ್ಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಇಂದ್ರನು ಅತ್ಯಂತ ಕಾಂತಿಯುಕ್ತವಾದ ವಜ್ರಾಯುಧದಿಂದ ಹೊಡೆದನು. ॥೩೦॥

ಹಾಗೆಯೇ ಇತರ ದೇವತೆಗಳೂ ಅನೇಕ ತಮ್ಮ ತಮ್ಮ ಆಯುಧಗಳನ್ನು ಮದನನ ಮೇಲೆ ಪ್ರಯೋಗಿಸಿದರು. ಆದರೂ ಅವುಗಳಿಂದ ಮನ್ಮಥನು ಹತನಾಗ ಲಿಲ್ಲ. ॥೩೧॥

ಹಿಂದೆ ಲಕ್ಷ್ಮಿಯು ಈಶ್ವರನ ಅನುಗ್ರಹದಿಂದಲೇ ಮನ್ಮಥನನ್ನು ಪುತ್ರ ನನ್ನಾಗಿ ಪಡೆದಳು. ಆದುದರಿಂದಲೇ ಚಕ್ರವೇ ಮುಂತಾದ ಆಯುಧಗಳಿಂದ ಅವ ನನ್ನು ಸಂಹರಿಸುವುದು ಅಸಾಧ್ಯವಾಗಿರುವುದು. ॥೩೨॥

ಮದನನು ಶಿವನನ್ನು ನಿಂದಿಸದಿದ್ದರೆ ಅವನಿಗೆ ಸದೃಶನಾದ ಪರಾಕ್ರಮಿಯು ಸ್ವರ್ಗಾದಿಲೋಕಗಳಲ್ಲೇ ಸಿಕ್ಕುತ್ತಿರಲಿಲ್ಲ. ಈಗಲೂ ಅವನು ಅಮಿತವಾದ ಪರಾ ಕ್ರಮದಿಂದ ಕೂಡಿರುವನು. ॥೩೩॥

ಆ ಮನ್ಮಥನ ಸ್ಮರಣಮಾತ್ರದಿಂದಲೇ ತಪಸ್ಸಿನಲ್ಲಿ ಆಸಕ್ತರಾದ ಋಷಿ ಶ್ರೇಷ್ಠರು ತಮ್ಮ ತಪಸ್ಸನ್ನು ಬದಿಗೊತ್ತಿ ಸ್ತ್ರೀಲೋಲುಪರಾಗಿ ಕಾಲವನ್ನು ಕಳೆಯು ವರು. ॥೩೪॥

ಶಸ್ತ್ರಾಣಿ ತಸ್ಯ ಪುಷ್ಪಾಣಿ ಕೋಮಲಾನ್ಯಮಲಾನ್ಯಪಿ ।
ತಾನಿ ಮೌನಿಮನಶ್ಶೈಲಾನ್ಭಿಂದಂತೀತ್ಯೇತದದ್ಭುತಂ ॥೩೫॥

ಸೌಂದರ್ಯರಾಶಿರೇವಾಯಂ ಮದನೋ ಮದವಿಹ್ವಲಾನ್ ।
ಮುನೀನ್ಕರೋತಿ ಸಹಸಾ ಸ ದುರ್ಜೇಯೋ ನ ಸಂಶಯಃ ॥೩೬॥

ಶಸ್ತ್ರಂ ಪ್ರಯೋಕ್ತುಂ ಮದನಃ ಶಕ್ತಸ್ತ್ವಯ್ಯಪಿ ಸತ್ವರಂ ।
ಯೇನ ಸ್ವಾಹಾಲಿಂಗನೇನ ನೇಯಃ ಕಾಲೋ ಮಹಾನಪಿ ॥೩೭॥

ದೈವಾತ್ಸ ತಾವದಧುನಾ ಶಸ್ತ್ರಮಂಡಲಸಂವೃತಃ ।
ಭವಂತಂ ನ ವಿನಾಜಾತಿ ಸ್ವನಾಶಾಯ ಸಮಾಗತಂ ॥೩೮॥

ಮದನೋ ಯದಿ ಧೀರಂ ತ್ವಾಂ ದೈವಾತ್ಪಶ್ಯತಿ ತೇ ತದಾ ।
ಅಂಗನಾಲಿಂಗನಾಸಕ್ತೋ ಭವಿಷ್ಯತಿ ನ ಸಂಶಯಃ ॥೩೯॥

---

ಪರಿಶುದ್ಧವಾಗಿಯೂ ಮೃದುವಾಗಿಯೂ ಇರುವ ಪುಷ್ಪಗಳೇ ಅವನ ಆಯುಧಗಳಾಗಿರುವುವು. ಆದರೂ ಅವು ಶಾಂತಚಿತ್ತರಾದ ಮುನಿಗಳ, ಪರ್ವತದಂತೆ ಕಠಿಣವಾಗಿರುವ ಮನಸ್ಸನ್ನೂ ಸಹ ಸುಲಭವಾಗಿ ಭೇದಿಸಬಲ್ಲವು. ಇದು ವಿಸ್ಮಯಜನಕವಾದುದಲ್ಲವೆ! ॥೩೫॥

ಸೌಂದರ್ಯಗಳ ನೆಲೆಯಾಗಿರುವ ಆ ಮನ್ಮಥನು ಮುನಿವರ್ಯರನ್ನು ಸಹ ಕ್ಷಣಕಾಲದೊಳಗಾಗಿ ಕಾಮವಿಕಾರಕ್ಕೆ ಗುರಿಪಡಿಸುವನು. ಹೀಗಿರುವಾಗ ಅವನನ್ನು ಜಯಿಸುವುದು ಸುಲಭಸಾಧ್ಯವೆ? ॥೩೬॥

ಎಲೈ ಪ್ರಲಯಾಗ್ನಿಯೇ, ಆ ಮನ್ಮಥನು ನಿನ್ನಲ್ಲಿಯೂ ತನ್ನ ಬಾಣಗಳನ್ನು ಪ್ರಯೋಗಿಸಬಲ್ಲನು. ಆದರಿಂದ ನಿನ್ನ ರಮಣಿಯಾದ ಸ್ವಾಹಾದೇವಿಯನ್ನು ಬಿಗಿಯಾಗಿ ಅಪ್ಪಿಕೊಂಡು, ನೀನು ದೀರ್ಘಕಾಲವನ್ನು ಕಳೆಯಬೇಕಾದೀತು! ॥೩೭॥

ಅವನ ನಾಶಕ್ಕೋಸ್ಕರ ಇಲ್ಲಿಗೆ ಬಂದಿರುವ ನಿನ್ನನ್ನು ಕಾಣನು. ನಿನ್ನ ಭಾಗ್ಯವಿಶೇಷದ ಮಹಿಮೆಯಿಂದ ಆ ಮದನನು ಆಯುಧಗಳ ಸಮುದಾಯದ ಮಧ್ಯದಲ್ಲಿ ಇರುವುದರಿಂದ, ನೀನು ಎಲ್ಲಿರುವೆಯೆಂಬುದನ್ನು ತಿಳಿದಿರುವುದಿಲ್ಲ. ॥೩೮॥

ಆ ಮದನನು ಧೈರ್ಯಶಾಲಿಯಾದ ನಿನ್ನನ್ನು ಅಕಸ್ಮಾತ್ತಾಗಿ, ಒಂದು ಸಾರಿ ನೋಡಿದರೂ ಸಾಕು. ಆಗ ನೀನು, ನಿನ್ನ ಪ್ರಿಯತಮೆಯ ಆಲಿಂಗನದಲ್ಲಿ ಆಸಕ್ತನಾಗುವೆ. ಇದರಲ್ಲಿ ಸಂಶಯವಿಲ್ಲ. ॥೩೯॥

ತದಾ ತೇ ಕಾರ್ಯಹಾನಿಃ ಸ್ಯಾತ್ಸ್ವಾಮಿದ್ರೋಹಃ ಪ್ರಜಾಯತೇ ।
ಸ್ವಾಮಿಕಾರ್ಯಾರ್ಥಮಾಗತ್ಯ ತದ್ವಿರೋಧಪ್ರವರ್ತನಾತ್ ॥೪೦॥

ಕಿಂ ಚ ಸ್ಮಾರಂ ಸ್ವರೂಪಂ ತ್ವಂ ಮಾ ಮಾ ಸ್ಮರ ವಿಶೇಷತಃ ।
ತಸ್ಯ ಸ್ಮರಣಮಾತ್ರೇಣ ಮನಃ ಸ್ಯಾತ್ಕಾಮಿನೀವಶಂ ॥೪೧॥

ಅಕಸ್ಮಾದ್ಯಾಹಿ ತನ್ಮೂರ್ಧ್ನಿ ಪತಿತ್ವಾ ಭಸ್ಮಸಾತ್ಕುರು ।
ತಾವತಾ ತವ ಕೀರ್ತಿಃ ಸ್ಯಾದಪಕೀರ್ತಿಃ ಕಿಲಾನ್ಯಥಾ ॥೪೨॥

ತದ್ದೃಷ್ಟಿರಧುನಾ ತಾವನ್ನೋರ್ಧ್ವದೇಶಂ ಗತಾ ತತಃ ।
ಅಧುನಾವಸರಸ್ತಸ್ಯ ಮೂರ್ಧ್ನಿ ತೇ ಪತನೇ ಖಲು ॥೪೩॥

ತತ್ಸೌಂದರ್ಯವಿಲೋಕನಾಯ ಯದಿ ತೇ ಚಿತ್ತಂ ಪ್ರವೃತ್ತಂ ತದಾ
ದೈವಾದದ್ಭುತಮಿತ್ಯುಪೇಕ್ಷ್ಯ ಸಹಸಾ ಕಾರ್ಯಂ ಮಹೇಶಸ್ಯ ವಾ ।
ತರ್ಹಿ ಸ್ಯಾತ್ತವ ಹಾನಿರೇವ ವಿಜಯಸ್ತಸ್ಯಾದ್ಭುತಃ ಸ್ಯಾದತಃ
ಸರ್ವಂ ಕಾರ್ಯಮನಾಕುಲಂ ಭವತಿ ಕಿಂ ಶಂಭೋಃ ಪ್ರಭೋಃ ಕೇವಲಂ ॥೪೪॥

---

ಆಗ ನಿನ್ನ ಕಾರ್ಯಕ್ಕೆ ಅಡಚಣೆಯುಂಟಾಗಿ, ಪ್ರಭುವಾದ ಪರಮೇಶ್ವರನ ಕಾರ್ಯವನ್ನು ಸಾಧಿಸಲು ಬಂದು, ವಿರುದ್ಧವಾದ ಮಾರ್ಗದಲ್ಲಿ ಪ್ರವರ್ತಿಸಿದುದರಿಂದ ಸ್ವಾಮಿದ್ರೋಹವನ್ನೆಸಗಿದಂತಾಗುವುದು. ॥೪೦॥

ಅದಲ್ಲದೇ, ನೀನು ಮನ್ಮಥನ ಸ್ವರೂಪವನ್ನು ಸಹ ಸ್ಮರಿಸಬೇಡ. ಏಕೆಂದರೆ, ಅವನನ್ನು ಸ್ಮರಿಸಿದ ಮಾತ್ರದಿಂದಲೇ, ಮನಸ್ಸು ಸ್ತ್ರೀಯರ ವಶವಾಗುವುದು. ॥೪೧॥

ಆದುದರಿಂದ ನೀನು, ಅನಿರೀಕ್ಷಿತವಾಗಿ, ಮದನನ ಶಿರಸ್ಸಿನ ಮೇಲೆ ಬಿದ್ದು, ಅವನನ್ನು ದಹಿಸು. ಅದರಿಂದಲೇ ನಿನ್ನ ಕಾರ್ಯವು ಕೈಗೂಡಿ ನಿನಗೆ ಕೀರ್ತಿಯು ಲಭಿಸುವುದಲ್ಲದೇ, ಅನ್ಯಥಾ ದೊರೆಯಲಾರದು. ॥೪೨॥

ಈಗ ಅವನು, ಮೇಲ್ಭಾಗದ ಲೋಕಗಳನ್ನು ನೋಡುತ್ತಿರುವುದಿಲ್ಲ. ಆದುದರಿಂದ ಈಗಲೇ ನಿನಗೆ ಅವನ ಮೇಲೆ ಬೀಳುವ ಸದವಕಾಶವು ಪ್ರಾಪ್ತವಾಗಿರುವುದು. ॥೪೩॥

ನೀನು, ನಿನ್ನ ಪ್ರಭುವಾದ ಮಹೇಶ್ವರನ ಮಹತ್ತರವಾದ ಕಾರ್ಯವನ್ನು ಅಲ್ಲಗಳೆದು, ಮನ್ಮಥನ ಸೌಂದರ್ಯವನ್ನು ನೋಡಲು ಪ್ರವೃತ್ತನಾದವನೇ ಆದರೆ,

ಕಿಂ ಚಾನ್ಯಚ್ಛಿವನಿಂದಕಸ್ಯ ಸಹಸಾ ದೃಶ್ಯಾ ನ ದೃಶ್ಯಾ ತನುಃ
ತತ್ಪಾಪಿಷ್ಠವಿಲೋಕನಾದಪಿ ಭವೇತ್ಪಾಸ ಯಾತನಾ ತೇ ಯಯಾ ।
ನಿಸ್ತಾರೋ ನ ಭವೇದತಃ ಪರಮಪಿ ತ್ಯಾಜ್ಯೋ ಭ್ರಮಃ ಸರ್ವಥಾ
ಪಾಪಿಷ್ಠಾನವಲೋಕನೇನ ಸಮಯೋ ನೇಯಃ ಕಿಯಾನ್ಪಾ ತಥಾ ॥೪೫॥

ಕಿಂ ಚಾಹತ್ಯ ತ್ವಯಾ ತಾವನ್ನಗಂತವ್ಯಂ ಪ್ರಯತ್ನತಃ ।
ತತ್ಸನ್ನಿಧಾನಾದಪಿ ತೇ ಪಾತಕಂ ಸ್ಯಾದಸಂಶಯಂ ॥೪೬॥

ಶಿವನಿಂದಕಮಾಲೋಕ್ಯ ದೂರಾದಪಿ ವಿವೇಕಿನಃ ।
ಪ್ರಾಯಶ್ಚಿತ್ತಾರ್ಥಮುದ್ಯೋಗಂ ಕುರ್ವಂತ್ಯೇವ ವಿಶೇಷತಃ ॥೪೭॥

---

ನಿನ್ನ ಪ್ರಭುವಿನ ಕಾರ್ಯವು ಕೈಮಿಾರಿ ನಿನಗೆ ಕೆಡಕಾದೀತು ! ಅದರಿಂದ ಮನ್ಮಥನು ಜಯಶಾಲಿಯಾಗುವನು. ಸ್ವಾಮಿಯಾದ ಶಿವನ ಯಾವ ಕಾರ್ಯವಾದರೂ ವಿಫಲ ವಾಗುವುದು ಉಚಿತವೇ? ॥೪೪॥

ಇದಲ್ಲದೇ, ಶಿವದ್ವೇಷಿಯ ಶರೀರವನ್ನು ಯಾವ ಬಗೆಯಿಂದಲೂ, ದರ್ಶನ ಮಾಡುವುದು ಸರಿಯಲ್ಲ. ಆ ಪಾಪಿಷ್ಠನನ್ನು ನೋಡುವುದರಿಂದಲೇ ಅಸಹ್ಯವಾದ ಯಾತನೆಯನ್ನನುಭವಿಸಬೇಕಾಗುವುದು. ಮತ್ತು ಸಂಸಾರ ದುಃಖದಿಂದ ಎಂದಿಗೂ ಬಿಡುಗಡೆಯುಂಟಾಗುವುದಿಲ್ಲ. ಆದುದರಿಂದ ಶಿವನು ದೂಷ್ಯನೆಂಬ ತಪ್ಪುತಿಳಿವಳಿಕೆ ಯನ್ನು ಇನ್ನಾದರೂ ತ್ಯಜಿಸಬೇಕು. ಪಾಪಿಷ್ಠರನ್ನು ನೋಡದೇ ನಮ್ಮ ಕಾಲ ವನ್ನು ತಿಳಿಯಬೇಕು. ॥೪೫॥

ಆದುದರಿಂದ ನೀನು ಶಿವನಿಂದಕನಾದ ಮನ್ಮಥನನ್ನು ನಾಶಗೊಳಿಸದೆ ಇಲ್ಲಿಂದ ಹೋಗುವುದು ಉಚಿತವಲ್ಲ. ಅವನಿರುವ ಕಡೆಯಲ್ಲಿದ್ದರೇ ನಿನಗೆ ಪಾಪವು ಸಂಘಟಿಸುವುದು. ಇದರಲ್ಲಿ ಸಂಶಯವಿಲ್ಲ. ॥೪೬॥

ಜ್ಞಾನಿಗಳು ದೂರದಿಂದ ಶಿವದ್ವೇಷಿಯನ್ನು ನೋಡಿದರೂ ಅದರಿಂದುಂಟಾದ ಪಾಪವನ್ನು ಹೋಗಲಾಡಿಸುವುದಕ್ಕೋಸ್ಕರ ಪ್ರಾಯಶ್ಚಿತ್ತವನ್ನು ಆಚರಿಸಲು ಯತ್ನಿಸುವರು. ॥೪೭॥

ಲಯಂ ಪ್ರಯಾಂತಿ ಪಾಪಾನಿ ಪ್ರಾಯಶ್ಚಿತ್ತಶತೈರಪಿ ।
ಶಿವನಿಂದಾತಿರಿಕ್ತಾನಿ ಸಾ ತಾವದ್ಯಾತನಾವಹಾ ॥೪೮॥

ತವ ಶಂಕರಭಕ್ತಸ್ಯ ಶಿವನಿಂದಕಸಂಗಮಃ ।
ಅಯುಕ್ತ ಏವ ಸಹಸಾ ಸ ನ ಕಾರ್ಯೋ ಮಹಾತ್ಮನಾ ॥೪೯॥

ಮಹಾನುಭಾವಾಃ ಶಿವನಿಂದಕಾನಾ
ಮಿಚ್ಛಂತಿ ನಾಶಂ ಸ್ವತ ಏವ ನಾಶಃ ।
ತದಿಚ್ಛಯಾ ಕೇವಲಯಾಪಿ ಕಿಂ ನ
ತತೋ ನ ತತ್ಸಂಗತಿರಿಷ್ಟಹೇತುಃ ॥೫೦॥

ತೇಜಃಸ್ವರೂಪಸ್ಯ ತವೋಗ್ರತೇಜೋ
ಯತ್ರಸ್ಯ ಲೇಶೋಽಪ್ಯಣುತೋಽಪ್ಯಣುಃ ಸ್ಯಾತ್ ।
ಸ ಏವ ತನ್ನಾಶಕತಾಮುಪೇತ್ಯ
ಕರೋತು ಕಾರ್ಯಂ ತವ ಸಾವಧಾನಂ ॥೫೧॥

---

ಶಿವನಿಂದೆಯನ್ನೊಂದನ್ನು ಬಿಟ್ಟು, ಇನ್ನುಳಿದ ಯಾವ ಪಾಪಗಳಾದರೂ, ನೂರಾರು ಪ್ರಾಯಶ್ಚಿತ್ತಗಳನ್ನು ಆಚರಿಸುವುದರಿಂದ ಶಾಂತವಾಗುವುವು. ಶಿವ ನಿಂದೆಯು ಮಾತ್ರ ಎಂದಿಗೂ ಅತ್ಯಂತ ದುಃಖವನ್ನುಂಟುಮಾಡದೆ ಬಿಡದು. ॥೪೮॥

ಈಶ್ವರಭಕ್ತನಾದ ನಿನಗೆ ಶಿವನಿಂದಕನ ಸಹವಾಸವು ಯುಕ್ತವಾದುದಲ್ಲ. ಶ್ರೇಷ್ಠನಾದ ಮಹಾತ್ಮನು ಶಿವದ್ವೇಷಿಯ ಸಹವಾಸವನ್ನು ಎಂದೂ ಬೆಳಸಬಾರದು. ॥೪೯॥

ಮಹಾತ್ಮರಾದವರು ಶಿವದ್ವೇಷಿಗಳ ನಾಶವನ್ನು ಬಯಸುವರು. ಅವರ ಇಚ್ಛಾಮಾತ್ರದಿಂದಲೇ ಶಿವನಿಂದಕರು ನಾಶಹೊಂದುವುದಿಲ್ಲವೇ? ಆದುದರಿಂದ ಶಿವನಿಂದಕರ ಸಹವಾಸವು ಶ್ರೇಯಸ್ಕರವಲ್ಲ. ॥೫೦॥

ನೀನು ತೇಜೋರೂಪನಾಗಿರುವೆಯಾದುದರಿಂದ ನಿನ್ನ ಭಯಂಕರವಾದ ತೇಜಸ್ಸಿನ ಅತ್ಯಲ್ಪವಾದ ಅಂಶವೂ ಸಹ ಮನ್ಮಥನನ್ನು ದಹಿಸುವುದರಲ್ಲಿ ಸಮರ್ಥ ವಾದೀತು. ಆದುದರಿಂದ ನಿನ್ನ ಅಲ್ಪವಾದ ತೇಜಸ್ಸೇ, ಮನ್ಮಥನನ್ನು ನಾಶಗೊಳಿಸುವ ಕಾರ್ಯದಲ್ಲಿ ಜಾಗರೂಕತೆಯಿಂದ ಈಗ ಪ್ರವರ್ತಿಸಲಿ. ॥೫೧॥

ಇತಿ ತದ್ವಚನಂ ಶ್ರುತ್ವಾ ಸ್ವಹಿತಂ ಮುಕ್ತಿಸಾಧನಂ ।
ಸಂತುಷ್ಟಂ ಪ್ರಾಹ ತಂ ಕೂರ್ಮಂ ಫಾಲಲೋಚನಪಾವಕಃ ॥೫೨॥

ಕೃತಕೃತ್ಯೋಽಸಿ ಕೂರ್ಮ ತ್ವಂ ಕರ್ಮಣಾ ಮಹತಾಧುನಾ ।
ಹಿತೋಪದೇಶಕಸ್ತ್ವಂ ಮೇ ತ್ವತ್ತುಲ್ಯೋ ನ ಸಖಾ ಮಮ ॥೫೩॥

ಪಾಪಲೇಶರಹಿತೋಽಸಿ ಸರ್ವಥಾ
ಕೂರ್ಮ ತೇ ಮತಿರುಮಾಪತಿಂ ಪರಂ ।
ವಾಂಛತೀತಿ ತವ ಭಾಗ್ಯಮೀದೃಶಂ
ದುರ್ಲಭಂ ಜಗತಿ ದೇಹಿನಾಮಿದಂ ॥೫೪॥

ಜನ್ಮಾಂತರಾರಾಧಿತಶಂಕರಾಣಾಂ
ಸಾ ಶಾಂಕರೀ ಭಕ್ತಿರುದೇತಿ ಯಾ ಸ್ಯಾತ್ ।
ಆನಂದಹೇತುಃ ಸುಕೃತಾಬ್ಧಿಸೇತುಃ
ಸಾ ತಾವದತ್ಯದ್ಭುತಧರ್ಮಕೇತುಃ ॥೫೫॥

---

ಆದಿಕೂರ್ಮನ ಹಿತಕರವಾಗಿಯೂ ಮೋಕ್ಷಸಾಧಕವಾಗಿಯೂ ಇರುವ ಮಾತನ್ನು ಕೇಳಿ, ಪ್ರಲಯಾಗ್ನಿಯು ಸಂತೋಷಗೊಂಡು ಕೂರ್ಮನನ್ನು ಕುರಿತು ಹೀಗೆಂದಿತು. ॥೫೨॥

ಕೂರ್ಮನೇ, ನೀನು ಶ್ರೇಷ್ಠವಾದ ಶಿವಾರ್ಚನೆಯೆಂಬ ಕರ್ಮವನ್ನು ಕೈಗೊಂಡಿರುವುದರಿಂದ ಪರಮಧನ್ಯನಾಗಿರುವೆ. ನಿನ್ನಂತೆ ಹಿತೋಪದೇಶಕನಾದ ಸ್ನೇಹಿತನು ನನಗೆ ಇನ್ನೊಬ್ಬನಿಲ್ಲ. ॥೫೩॥

ಆದಿಕೂರ್ಮನೇ, ನಿನ್ನಲ್ಲಿ ಅಲ್ಪವಾದ ಪಾಪವೂ ಕಾಣುವುದಿಲ್ಲ. ನಿನ್ನ ಚಿತ್ತವು ಶ್ರೇಷ್ಠನಾದ ಪರಮೇಶ್ವರನನ್ನು ಸಾಕ್ಷಾತ್ಕರಿಸಬಯಸುವುದು. ನಿನಗೆ ಸಂಭವಿಸಿರುವ ಈ ಭಾಗ್ಯವಿಶೇಷವು ಪ್ರಾಣಿಸಾಮಾನ್ಯಕ್ಕೆ ದುರ್ಲಭವಾದುದಲ್ಲವೆ! ॥೫೪॥

ಕಳೆದ ಜನ್ಮದಲ್ಲಿ ಈಶ್ವರನನ್ನು ಆರಾಧಿಸಿದವರಿಗೆ ಈ ಜನ್ಮದಲ್ಲಿ ಶಿವನಲ್ಲಿ ದೃಢಭಕ್ತಿಯುಂಟಾಗುವುದು. ಅದು ಆನಂದಕ್ಕೆ ಕಾರಣವೂ, ಸುಕೃತಪರಂಪರೆಗಳೆಂಬ ಸಮುದ್ರಕ್ಕೆ ಸೇತುವೆಯೂ, ಮಹತ್ತರವಾದ ಧಾರ್ಮಿಕಕಾರ್ಯಗಳಿಗೆ ಹೆಗ್ಗುರುತೂ ಆಗಿರುವುದು. ॥೫೫॥

ಇತ್ಯುಕ್ತ್ವಾ ವಚನೇ ತಸ್ಯ ಕೃತ್ವಾ ವಿಶ್ವಾಸಮಾಸ್ತಿಕಃ ।
ಹರಫಾಲಾನಲಸ್ತೇಜಃ ಸಸರ್ಜಾಣುತರಂ ತದಾ ॥೫೬॥

ತ್ಯಕ್ತಂ ತದೈವ ತತ್ತೇಜಃ ಪ್ರವೃದ್ಧಂ ಭುವನತ್ರಯಂ ।
ದಗ್ಧುಂ ಸಮರ್ಥಮಭವತ್ತೇನ ಭೀತಾಃ ಸುರಾ ಅಪಿ ॥೫೭॥

ಕಿಮದ್ಭುತಮಿಹಾಯಾತಿ ತೇಜೋಮಂಡಲಮುನ್ನತಂ ।
ಬ್ರಹ್ಮಾಂಡಮಂಡಲಂ ಸರ್ವಂ ದಗ್ಧುಮಿಚ್ಛತಿ ಲೀಲಯಾ ॥೫೮॥

ಕ್ವ ಗಂತವ್ಯಮಿತೋಽಸ್ಮಾಭಿರ್ನ ಮಾರ್ಗೋ ಗಮನೇಽಧುನಾ ।
ಸರ್ವಾನ್ ಲೋಕಾನಿದಂ ವ್ಯಾಪ್ಯ ತಿಷ್ಠತೀತಿ ಭಯಾಕುಲಃ ॥೫೯॥

ಸ ಕೂರ್ಮೋಽಪಿ ವಿಲೋಕ್ಯಾಶು ತತ್ತೇಜೋಭಯವಿಹ್ವಲಃ ।
ಶಿವಪ್ರಭಾವಂ ಸಸ್ಮಾರ ಸರ್ವೋಪದ್ರವನಾಶಕಂ ॥೬೦॥

---

ಹೀಗೆಂದು ಹೇಳಿ ಪ್ರಲಯಾಗ್ನಿಯು ಕೂರ್ಮನ ಮಾತಿನಲ್ಲಿ ನಂಬಿಕೆ ಯನ್ನಿಟ್ಟು ತನ್ನ ಅತ್ಯಲ್ಪವಾದ ತೇಜಸ್ಸನ್ನು ಹೊರಗೆಡವಿತು. ॥೫೬॥

ಈ ರೀತಿಯಲ್ಲಿ ಪ್ರಲಯಾಗ್ನಿಯಿಂದ ವಿಸರ್ಜಿಸಲ್ಪಟ್ಟ ಉಗ್ರವಾದ ಆ ತೇಜಃ ಕಣವು ಮೂರುಲೋಕಗಳನ್ನು ದಹಿಸುವಷ್ಟು ವೃದ್ಧಿಹೊಂದಿತು. ಆದರಿಂದ ದೇವತೆಗಳೂ ಭಯಗೊಂಡರು. ॥೫೭॥

ಮತ್ತು ಅವರು ಹೀಗೆ ಯೋಚಿಸಿದರು — ಇದೇನಾಶ್ಚರ್ಯ ! ಅತ್ಯುನ್ನತವಾದ ತೇಜಃಸಮುದಾಯವು ಇಲ್ಲಿ ಬರುತ್ತಿರುವುದಲ್ಲ? ಇದು ಅನಾಯಾಸವಾಗಿ ಈ ಬ್ರಹ್ಮಾಂಡವನ್ನೇ ಸುಡಲು ಇಚ್ಛಿಸುವುದೋ ಎಂಬಂತೆ ಕಾಣುತ್ತಿರುವುದು. ॥೫೮॥

ಈಗ ನಾವು ಯಾವ ಪ್ರದೇಶಕ್ಕೆ ಹೋಗೋಣ ! ಇಲ್ಲಿಂದ ಹೊರಬೀಳಲು ಸರಿಯಾದ ದಾರಿಯೇ ಇರುವುದಿಲ್ಲವಲ್ಲಾ! ಭಯಂಕರವಾದ ಈ ತೇಜೋರಾಶಿಯು ಸಕಲ ಲೋಕಗಳನ್ನು ಎಲ್ಲೆಡೆಯಲ್ಲಿಯೂ ಆಕ್ರಮಿಸಿರುವುದು. ಹೀಗೆನ್ನುತ್ತಾ ಅವರು ಭಯಚಕಿತರಾದರು. ॥೫೯॥

ಆ ಆದಿಕೂರ್ಮನೂ ಸಹ ತೇಜಸ್ಸನ್ನು ನೋಡಿದೊಡನೆಯೇ ಭೀತನಾಗಿ ಸಕಲ ಕಷ್ಟಗಳನ್ನೂ ಹೋಗಲಾಡಿಸುವ ಶಿವಮಹಿಮೆಯನ್ನು ಸ್ಮರಿಸಿದನು. ॥೬೦॥

ತತಸ್ತತ್ಪಾವಕೋತ್ಪನ್ನಪಾವಕಾಂಶೋಽತಿಭೀಷಣಃ ।
ಪ್ರಾಹ ತಂ ಪಾವಕಂ ಕೃತ್ಯಂ ವದ ಮಹ್ಯಮಿತಿ ಸ್ಮರನ್ ॥೬೧॥

ಬ್ರಹ್ಮಾಂಡಾನ್ಯೇಕದಾ ದಗ್ಧುಂ ಸೃಷ್ಟಃ ಕಿಮಹಮಿದ್ಯ್ಧತಂ ।
ಯದ್ವಾ ಕ್ರಮೇಣ ತದ್ದಾಹಃ ಕರ್ತವ್ಯೋ ವದ ಸತ್ವರಂ ॥೬೨॥

ಮತ್ತೇಜಃಪ್ರಭವಾ ಏವ ಕಣಾಃ ಸಂತ್ಯತ್ರ ಕೋಟಿಶಃ ।
ತತ್ಕಣಾನಾಂ ಪ್ರಭಾವೋಽಪಿ ವರ್ಣನಾವಿಷಯೋ ನ ಮೇ ॥೬೩॥

ತತ್ರಾತ್ಯಲ್ಪಃ ಕಣೋಽಗ್ರಸ್ತು ಸೋಽಪಿ ಬ್ರಹ್ಮಾಂಡಮಂಡಲಂ ।
ದಗ್ಧುಂ ಸಮರ್ಥ ಏವೇತಿ ಪ್ರಧಾವತಿ ಪುರಃ ಪುರಃ ॥೬೪॥

ಕೋ ವಾ ಮದಾಹುತಿರ್ಭೂಯಾದಿಂದ್ರೋಪೇಂದ್ರಾದಿಷು ಸ್ಥಿತಃ ।
ಅನ್ಯಥಾ ಸರ್ವವಿಲಯಃ ಕರ್ತವ್ಯ ಇತಿ ಸತ್ವರಂ ॥೬೫॥

---

ಬಳಿಕ ಪ್ರಲಯಾಗ್ನಿಯಿಂದ ಉಂಟಾದ ಭಯಂಕರವಾದ ತೇಜಸ್ಸಿನ ಅಂಶವು ಅಗ್ನಿಯನ್ನು ಕುರಿತು, "ನನ್ನಿಂದ ಆಗಬೇಕಾದ ಕಾರ್ಯವೇನಿರುವುದು" ಎಂದು ಕೇಳಿತು. ॥೬೧॥

ಅದು ಪುನಃ ಹೀಗೆಂದಿತು—ಬ್ರಹ್ಮಾಂಡವನ್ನು ಒಂದೇಕಾಲದಲ್ಲಿ ದಹಿಸುವುದಕ್ಕೋಸ್ಕರ ನೀನು ನನ್ನನ್ನು ಸೃಷ್ಟಿಸಿರುವೆಯೋ? ಅಥವಾ ಕ್ರಮವರಿತು ದಹಿಸಲು ಅಪ್ಪಣೆಕೊಡುವೆಯಾ! ಎಂಬುದನ್ನು ಶೀಘ್ರವಾಗಿ ಹೇಳು. ॥೬೨॥

ನನ್ನ ತೇಜಸ್ಸಿನಿಂದ ಅಸಂಖ್ಯಾತವಾದ ಅಗ್ನಿಕಣಗಳು ಹುಟ್ಟಿರುವುವು. ಅವುಗಳ ಪ್ರಭಾವವನ್ನು ವರ್ಣಿಸಲು ನಾನು ಅಶಕ್ತನಾಗಿರುವೆನು. ॥೬೩॥

ನನ್ನ ಅಗ್ನಿಕಣಗಳ ಒಂದೊಂದು ಅಗ್ರಭಾಗವೂ ಸಹ ಬ್ರಹ್ಮಾಂಡವನ್ನೇ ಸುಡಲು ಸಮರ್ಥವಾಗಿರುವುದು. ಅದು ತನ್ನ ಶಕ್ತಿಯನ್ನು ತಿಳಿದು ತಾನಾಗಿಯೇ ಮುಂದೆ ಮುಂದೆ ಓಡುತ್ತಿರುವುದು. ॥೬೪॥

ಇಂದ್ರ, ವಿಷ್ಣು ಮುಂತಾದ ದೇವತೆಗಳ ನಡುವೆ ಯಾರು ಈಗ ನನಗೆ ಆಹಾರವಾಗಿ ದೊರಕುವರು? ಅದಿಲ್ಲದಿದ್ದರೆ ಸಕಲ ಪ್ರಾಣಿವರ್ಗವನ್ನೂ ಈಗಲೇ ದಹಿಸುವುದರಲ್ಲಿ ನಾನು ಕಾತುರನಾಗಿದ್ದೇನೆ. ॥೬೫॥

ಜಗತ್ಸಂಹರಣೇ ತಾವದಾಯಾಸೋಽಪಿ ನ ಮೇ ತತಃ ।
ಸಮರ್ಥ ಏವ ಸೃಷ್ಟಿರ್ಮೇ ಕಿಮರ್ಥಂ ವಾ ಕೃತಾ ವದ ॥೩೬॥

ನ ಮತ್ಪ್ರಸಾರವಿಷಯಃ ಕೋಽಪಿ ದೃಷ್ಟೋ ಜಗತ್ರಯೇ ।
ಸರ್ಜನಂ ಚ ಕೃತಂ ಕೇನ ಹೇತುನಾ ವದ ಸಾದರಂ ॥೩೭॥

ಕೋ ವಾ ಫಲಮನುದ್ದಿಶ್ಯ ವಿವೇಕೇನ ಪ್ರವರ್ತತೇ ।
ಮತ್ಸರ್ಜನಸ್ಯ ಕಿಂ ಕಾರ್ಯಮುದ್ಭೃತಂ ತದ್ವದಾಧುನಾ ॥೩೮॥

ಇತಿ ತದ್ವಚನಂ ಶ್ರುತ್ವಾ ಕೂರ್ಮೋ ವಿಸ್ಮಿತಮಾನಸಃ ।
ಕಾಲಾನಲೋಽಪಿ ತಂ ದೃಷ್ಟ್ವಾ ಪ್ರಾಹ ಗಂಭೀರಯಾ ಗಿರಾ ॥೩೯॥

॥ ಕಾಲಾನಲ ಉವಾಚ ॥

ಮಾರಶ್ಚಕಾರ ಸೋನ್ಮಾದೋ ನಿಂದಾಂ ಗೌರೀಪತೇಸ್ತತಃ ।
ಸಂಜ್ವಾಲಯಾತಿಯತ್ನೇನ ಗತ್ವಾ ತನ್ಮಸ್ತಕಾಶ್ರಿತಃ ॥೪೦॥

---

ನನಗೆ ಈ ಜಗತ್ತನ್ನು ಸಂಹರಿಸುವುದರಲ್ಲಿ ಯಾವ ಬಗೆಯ ಆಯಾಸವೂ ಇಲ್ಲ. ನಾನು ಅದರಲ್ಲಿ ಅತ್ಯಂತ ಸಮರ್ಥನಾಗಿರುವೆನು. ಈಗ ನನ್ನನ್ನೇಕೆ ಸೃಷ್ಟಿಸಿರುವೆ ಯೆಂಬುದನ್ನು ಹೇಳು. ॥೩೬॥

ಲೋಕತ್ರಯದಲ್ಲಿ ನಾನು ಯಾರನ್ನು ನಾಶಪಡಿಸಬೇಕೆಂಬುದು ನನಗೆ ತಿಳಿದಿರುವುದಿಲ್ಲವಾದುದರಿಂದ ನನ್ನನ್ನು ಸೃಷ್ಟಿಸಿರುವ ಕಾರಣವೇನೆಂಬುದನ್ನು ಪ್ರೀತಿಯಿಂದ ಈಗಲೇ ಹೇಳು. ॥೩೭॥

ವಿವೇಕಶಾಲಿಯಾದ ಯಾವ ಮನುಜನು ತಾನೇ ಪ್ರಯೋಜನವನ್ನು ಉದ್ದೇಶಿಸದೇ ಕಾರ್ಯದಲ್ಲಿ ಪ್ರವೃತ್ತನಾಗುವನು? ಆದುದರಿಂದ ನನ್ನಿಂದ ಯಾವ ಕಾರ್ಯವನ್ನು ಸಾಧಿಸಬೇಕೆಂಬ ಉದ್ದೇಶದಿಂದ ನೀನು ನನ್ನನ್ನು ಸೃಷ್ಟಿಸಿರುವೆ. ಅದನ್ನು ಹೇಳು. ಎನಲು ॥೩೮॥

ಅಗ್ನಿಯ ಈ ಮಾತನ್ನು ಕೇಳಿ ಕೂರ್ಮನು ಅಚ್ಚರಿಗೊಂಡನು. ಪ್ರಲಯಾಗ್ನಿಯೂ ತನ್ನಿಂದ ಉಂಟಾದ ಆ ಅಗ್ನಿಯನ್ನು ನೋಡಿ ಗಂಭೀರವಾದ ವಾಣಿಯಿಂದ ಹೀಗೆಂದಿತು. ॥೩೯॥

"ಎಲೈ, ಅಗ್ನಿಯೇ! ಈಗ ಮದೋನ್ಮತ್ತನಾದ ಮನ್ಮಥನು, ಉಮಾರಮಣ

ಅನ್ಯದೇವಸಮತ್ವೇನ ಜ್ಞಾತಸ್ತೇನ ಮಹೇಶ್ವರಃ ।
ಇಯಂ ಮಹೇಶನಿಂದಾ ಸ್ಯಾತ್ತದ್ವಿನಾಶಾಯ ಕೇವಲಂ ॥೭೧॥

ಇತಿ ತದ್ವಚನಂ ಶ್ರುತ್ವಾ ಸ ಕೋಪೇನಾಹ ತಂ ತತಃ ।
ಕಿಮೇತದರ್ಥಂ ಯುಕ್ತಾ ತೇ ಮಮ ಸೃಷ್ಟಿರ್ವಿಶೇಷತಃ ॥೭೨॥

ಮದೀಯಕಣಲೇಶೇನಾಪ್ಯಮರಾದ್ಯನ್ವಿತಂ ಜಗತ್ ।
ದಗ್ಧಂ ಕಾನದ್ಭವತ್ಯೇವ ಶಿವಲೀಲಾಪಿ ತಾದೃಶೀ ॥೭೩॥

ಭವೇದ್ಗುರುತರಂ ಕಾರ್ಯಂ ಯದಿ ತರ್ಹ್ಯಸ್ತು ಸರ್ಜನಂ ।
ಮಮಾಪ್ಯತ್ಯಲ್ಪಕಾರ್ಯಾರ್ಥಂ ಸೃಷ್ಟಿರೇವ ಕಥಂ ಮತಾ ॥೭೪॥

ನಖಚ್ಛೇದ್ಯೇ ವಸ್ತುನ್ಯಪಿ ಕುಲಿಶಮಾದಾಯ ಯತತೇ
ಪುಮಾನ್ ಲೋಕೇ ಕೋ ವಾ ಬಲಮಪಿ ಕಿಮತ್ಯಲ್ಪವಿಷಯೇ ।

---

ನಾದ ಶಿವನನ್ನು ನಿಂದಿಸಿರುವನು. ಈಗಲೇ ನೀನು ಅವನ ಶಿರಸ್ಸನ್ನು ಆವರಿಸಿ ಅವನನ್ನು ಚೆನ್ನಾಗಿ ದಹಿಸು. ॥೭೦॥

ಉನ್ಮತ್ತನಾದ ಆ ಮನ್ಮಥನು, ಪೂಜ್ಯತಮನಾದ ಪರಮೇಶ್ವರನನ್ನು ಇಂದ್ರಾದಿದೇವತೆಗಳಿಗೆ ಸಮಾನನೆಂದು ತಿಳಿದಿರುವನು. ಅದೂ ಸಹ ಶಿವನಿಂದೆಯೇ. ಅವನು ಕೈಗೊಂಡ ಈ ಈಶ್ವರನಿಂದೆಯೇ ಅವನ ನಾಶಕ್ಕೆ ಕಾರಣವಾಯಿತು. ॥೭೧॥

ಪ್ರಲಯಾಗ್ನಿಯ ಆ ಮಾತನ್ನು ಕೇಳಿ ಅಗ್ನಿಕಣವು ಕೋಪಗೊಂಡು ಅದನ್ನು ಕುರಿತು ಹೀಗೆಂದಿತು. "ಅತ್ಯಲ್ಪವಾದ ಈ ಕಾರ್ಯವನ್ನು ಸಾಧಿಸುವ ಸಲುವಾಗಿ ನೀನು ನನ್ನನ್ನು ಸೃಷ್ಟಿಸಿರುವುದು ಉಚಿತವೇ? ॥೭೨॥

ನನ್ನ ಒಂದಾನೊಂದು, ಅತ್ಯಲ್ಪವಾದ ಕಣದಿಂದಲೇ ದೇವತೆಗಳಿಂದ ಕೂಡಿದ ಸಕಲ ಪ್ರಪಂಚವೂ ಕ್ಷಣಕಾಲದಲ್ಲಿ ದಹಿಸಿ ಹೋಗುವುದು. ಪರಮೇಶ್ವರನ ಲೀಲಾ ಮಹಿಮೆಯೇ ಆ ರೀತಿಯಲ್ಲಿರುವುದು. ॥೭೩॥

ಪ್ರಬಲವಾದ ಕಾರ್ಯವನ್ನು ಸಾಧಿಸಬೇಕಾಗಿದ್ದರೆ ಆಗ ನನ್ನನ್ನು ಸೃಷ್ಟಿಸುವುದು ಯೋಗ್ಯವಾದುದು. ಕ್ಷುದ್ರವಾದ ಈ ಕಾರ್ಯಕ್ಕೋಸ್ಕರ ನನ್ನನ್ನೇಕೆ ಸೃಷ್ಟಿಸಿದೆ? ಅದು ನಿನಗೆ ಸಮ್ಮತವೇ? ॥೭೪॥

ಲೋಕದಲ್ಲಿ ಉಗುರಿನಿಂದ ಕತ್ತರಿಸಲು ಯೋಗ್ಯವಾದ ವಸ್ತುವನ್ನು ವಜ್ರಾಯುಧದಿಂದ ಭೇದಿಸಲು ಯಾವನಾದರೂ ಪ್ರಯತ್ನಿಸುವನೇ? ಅತ್ಯಲ್ಪವಾದ

ಗಿರಿಂ ಕೋ ವಾ ಲೋಕಾಚಲಸದೃಶಮಾದಾಯ ಮಶಕಂ
ನಿಹಂತುಂ ಶಕ್ತೋ ವಾ ಭವತಿ ಯತಮಾನೋಽತಿಸುಮತಿಃ ॥೭೫॥

ಹಂತವ್ಯಃ ಶಿವನಿಂದಕೋ ವಿಧಿರಪಿ ಶ್ರೀಮಾನ್ ಹರಿರ್ವಾ ಮಯಾ
ಕಿಂ ಚೇಂದ್ರಾದಿಮರುದ್ಗಣೋಽಪಿ ಗಿರಿಶಸ್ಮೃತ್ಯಾ ಪರಂ ಲೀಲಯಾ ।
ಹಂತುಂ ಶಂಕರ ಏವ ತಾವದಧುನಾ ನೂನಂ ಪ್ರವೃತ್ತಃ ಪರಂ
ಲೋಕೇ ಶಂಕರನಿಂದಕೋಽಪಿ ಸ ಪುನಃ ಕಿಂ ಜೀವತೀತಿ ಭ್ರಮಃ ॥೭೬॥

ಇತಿ ತದ್ವಚನಂ ಶ್ರುತ್ವಾಪ್ಯಭಿನಂದ್ಯಾಪಿ ಸಾದರಂ ।
ಮಾರನಾಶಂ ಕುರುಷ್ವೇತಿ ಪ್ರಾಹ ಫಾಲಾನಲಸ್ತದಾ ॥೭೭॥

ತತಸ್ತದಾಕರ್ಣ್ಯ ಸ ಪಾವಕೋ ವಚೋ
ಹಿತಾವಹಂ ಸ್ವಾಮಿತತೇಜಸಃ ಕಣಂ ।
ತಂ ಪ್ರೇರಯಾಮಾಸ ರತೀಪತಿಸ್ತ್ವಯಾ
ಸ ನಾಶನೀಯೋ ಭವತೀತಿ ವೇಗಾತ್ ॥೭೮॥

---

ಕಾರ್ಯದಲ್ಲಿ ಪ್ರಬಲವಾದ ಸಾಧನವನ್ನು ಉಪಯೋಗಿಸುವುದು ಅನುಚಿತವಲ್ಲವೇ ? ಲೋಕಾಚಲ ಪರ್ವತದಂತೆ ವಿಶಾಲವೂ ಉನ್ನತವೂ ಆದ ಪರ್ವತವನ್ನು ತಂದು ವಿವೇಕಿಯಾದವನು ಅದರಿಂದ ಚಿಕ್ಕದಾದ ಸೊಣವನ್ನು ಕೊಲ್ಲಲು ಪ್ರಯತ್ನಿಸುವನೇ ? ॥೭೫॥

ಬ್ರಹ್ಮನಾಗಲಿ ವಿಷ್ಣುವೇ ಆಗಲಿ ಶಿವನನ್ನು ದ್ವೇಷಿಸಿದರೆ ಅವರನ್ನು ನಾನು ಲೀಲಾಜಾಲವಾಗಿ ಶಿವಸ್ಮರಣಮಹಿಮೆಯಿಂದ ಸಂಹರಿಸುವೆನು. ಅವರನ್ನು ಸಂಹರಿಸಲು, ಸಾಕ್ಷಾತ್ ಶಿವನೇ ಪ್ರವೃತ್ತನಾಗುವನು. ಶಿವನನ್ನು ದ್ವೇಷಿಸುವವನು ಈ ಲೋಕದಲ್ಲಿ ಜೀವಿಸುವನೆಂಬುದು ತಪ್ಪುತಿಳುವಳಿಕೆಯಾಗಿರುವುದು. ॥೭೬॥

ಅಗ್ನಿಕಣದ ಆ ಮಾತನ್ನು ಕೇಳಿ ಪ್ರಲಯಾಗ್ನಿಯು ಅದನ್ನು ಅಕ್ಕರೆಯಿಂದ ಶ್ಲಾಘಿಸಿ, ಎಲೈ ಅಗ್ನಿಕಣವೇ, " ನೀನು ಮನ್ಮಥನನ್ನು ಸಂಹರಿಸು " ಎಂಬುದಾಗಿ ಅಪ್ಪಣೆಯಿತ್ತಿತು. ॥೭೭॥

ಬಳಿಕ ಪ್ರಲಯಾಗ್ನಿಯ ಹಿತಕರವಾದ ಆ ಮಾತನ್ನು ಕೇಳಿ, ತನ್ನ ಒಂದಾನೊಂದು ಭಯಂಕರವಾದ ತೇಜಃಕಣವನ್ನು ಕುರಿತು " ನೀನು ರತಿಯ ಪ್ರಿಯತಮನಾದ ಮನ್ಮಥನನ್ನು ಸಂಹರಿಸು " ಎಂದು ಪ್ರೇರಿಸಿ ಕಳುಹಿಸಿತು. ॥೭೮॥

ತತ್ಪ್ರೇರಿತಃ ಸೋಽಗ್ನಿಕಣಃ ಪ್ರವೃದ್ಧೋ
ವಿವೇಶ ಪಂಚಾಯುಧಮೂರ್ಧ್ನಿ ತೇನ ।
ನಾರಾಯಣಾಸ್ತ್ರಾದಿಕಶಸ್ತ್ರಜಾಲಂ
ಖದ್ಯೋತಸಂಕಾಶಮಭೂತ್ಪುರಸ್ತಾತ್ ॥೭೯॥

ತತಃ ಸ ಭಸ್ಮಸಾಜ್ಜಾತೋ ಮದನಃ ಶಿವನಿಂದಕಃ ।
ತಂ ದಗ್ಧ್ವಾ ಸ ಗತೋ ವಹ್ನಿಃ ಶಾಂತಃ ಕೋಲಾಹಲೋಽಪಿ ಸಃ॥೮೦॥

ಹತೋಽಧುನಾಯಂ ಶಿವನಿಂದಕೋಽತ್ರ
ಮಾರಃ ಪ್ರಮತ್ತಃ ಶಿವಲೀಲಯೇತಿ ।
ಗತಾಃ ಸುರಾಃ ಸ್ವಸ್ವಕಲತ್ರಯುಕ್ತಾಃ
ಸ್ವಕಂ ಪರಂ ವಾ ಸಮವಾಪ್ತಮೋದಾಃ ॥೮೧॥

ತತಃ ಪರಂ ಸ್ವಸ್ವಪದಾಶ್ರಿತಾಸ್ತೇ
ಸ್ಮರಂತ ಏವಾದ್ಭುತವೀರ್ಯಮೈಶಂ ।
ಕಂಪಾಯಮಾನಾಃ ಶಿವಪಾದಪದ್ಮಂ
ಸ್ಮೃತ್ವಾ ಸ್ಥಿತಾಸ್ತೇ ಪರಮಾದರೇಣ ॥೮೨॥

---

ಪ್ರಲಯಾಗ್ನಿಯಿಂದ ಪ್ರೇರಿಸಲ್ಪಟ್ಟ ಆ ಅಗ್ನಿಕಣವು ದೊಡ್ಡದಾಗಿ ಪ್ರಜ್ವಲಿಸಿ ಮನ್ಮಥನ ಶಿರಸ್ಸನ್ನು ಪ್ರವೇಶಿಸಿತು. ಆದರ ಭಯಂಕರವಾದ ತೇಜಸ್ಸಿನಿಂದ ನಾರಾಯಣಾಸ್ತ್ರಗಳೇ ಮುಂತಾದ ಆಯುಧಗಳು ದೀಪದ ಹುಳುವಿನಂತೆ ಅತ್ಯಲ್ಪ ವಾದ ಪ್ರಕಾಶದಿಂದ ತೋರಿಬಂದುವು. ॥೭೯॥

ಬಳಿಕ ಶಿವನಿಂದಕನಾದ ಮನ್ಮಥನು ಅಗ್ನಿಜ್ವಾಲೆಯಿಂದ ದಹಿಸಿ ಭಸ್ಮಾವ ಶೇಷನಾದನು. ಅಗ್ನಿಕಣವು ಅವನನ್ನು ದಹಿಸಿ ಹಾಗೆಯೇ ಶಾಂತವಾಯಿತು. ಆದರೊಂದಿಗೆ ಕೋಲಾಹಲವೂ ನಿಂತುಹೋಯಿತು. ॥೮೦॥

ತರುವಾಯ ದೇವತೆಗಳೆಲ್ಲರೂ "ಮದೋನ್ಮತ್ತನಾಗಿ ಶಿವನನ್ನು ದೂಷಿಸಿದ ಮನ್ಮಥನು ಈಗ ಹತನಾದನು" ಎಂದು ಹೇಳುತ್ತಾ ಸಂತೋಷಗೊಂಡವರಾಗಿ ತಮ್ಮ ತಮ್ಮ ವಾಸಸ್ಥಳಗಳನ್ನು ಕುರಿತು ತೆರಳಿದರು. ॥೮೧॥

ಭಯಸಾಗರದಿಂದ ಪಾರಾಗಿ ಹಿಂದಿರುಗಿದ ಆ ದೇವತೆಗಳು ಈಶ್ವರನ

ಅತಃ ಪರಂ ಶಂಕರಪೂಜಯಾಯಂ
ನೇಯುಃ ಕಿಯಾನ್ ಕಾಲ ಇತಿ ಪ್ರಬುದ್ಧಾಃ ।
ಬುದ್ಧಾಃ ಶಿವಾರಾಧನತತ್ಪರಾಸ್ತೇ
ವಿಶ್ವಾಸಮಾದಾಯ ಹೃದಿ ಪ್ರಧಾನಂ ॥೮೩॥

ರೇ ರೇ ಕುಮಾರಾಃ ಸುರವೃಂದವಂದ್ಯೋ
ಗೌರೀಸಹಾಯಃ ಸ ಸುರಾಗ್ರಗಣ್ಯಃ ।
ನ ತತ್ಸಮಃ ಕೋಽಪಿ ಸುರೇಷು ದೃಷ್ಟೋ
ನಾರಾಯಣಾದಿಷ್ವಪಿ ಸತ್ಯಮೇವ ॥೮೪॥

ಶಿವಂ ಸರ್ವೋತ್ತಮಂ ಮತ್ವಾ ಭಜಧ್ವಮತಿಯತ್ನತಃ ।
ಅನ್ಯಥಾ ಮದನಾವಸ್ಥಾ ಭವಿಷ್ಯತಿ ನ ಸಂಶಯಃ ॥೮೫॥

---

ಅವ್ಯಾಹತವಾದ ಶಕ್ತಿಯನ್ನು ಸ್ಮರಿಸುತ್ತಾ, ಭಯದಿಂದ ನಡುಗಿದವರಾಗಿ ಶಿವನ ಪಾದಕಮಲವನ್ನು ಸ್ಮರಿಸಿ ಸುಖವಾಗಿದ್ದರು. ||೮೨||

ಬಳಿಕ ಆ ದೇವತೆಗಳು ಜಾಗರೂಕರಾಗಿ ಇನ್ನು ಮುಂದಾದರೂ ನಾವು ಶಿವನನ್ನು ಆರಾಧಿಸುತ್ತಲೇ ಕಾಲವನ್ನು ಕಳೆಯಬೇಕು ಎಂದು ನಿಶ್ಚಯಿಸಿ ಶಿವನಲ್ಲಿ ದೃಢವಾದ ಭಕ್ತಿಯಿಟ್ಟು ಶಿವನನ್ನು ಆರಾಧಿಸುತ್ತಾ ಜ್ಞಾನಿಗಳಾದರು." ಎಂದು ವಿಶ್ವಾವಸುವು ತನ್ನ ಮಕ್ಕಳಿಗೆ ಶಿವಮಹಿಮೆಯನ್ನು ಈರೀತಿ ಬೋಧಿಸಿದನು. ||೮೩||

ಎಲೈ, ಕುಮಾರರೇ! ಗಿರಿಜಾವಲ್ಲಭನಾದ ಪರಮೇಶ್ವರನು ದೇವತೆಗಳಿಗೂ ಪೂಜ್ಯನಾಗಿರುವನಲ್ಲದೇ ದೇವತೆಗಳಲ್ಲಿ ಶ್ರೇಷ್ಠತಮನೆನಿಸಿರುವನು. ವಿಷ್ಣುವೇ ಮೊದಲಾದ ದೇವತೆಗಳಲ್ಲಿ ಶಿವನಿಗೆ ಸದೃಶನಾದ ದೇವತೆಯು ಯಾರೂ ಕಾಣುವುದಿಲ್ಲ. ||೮೪||

ಶಿವನು ಸರ್ವಶ್ರೇಷ್ಠನಾಗಿರುವನೆಂದು ತಿಳಿದು, ಅತ್ಯಂತ ಭಕ್ತಿಯಿಂದ ಅವನನ್ನು ಸೇವಿಸಿರಿ. ಹಾಗಿಲ್ಲದಿದ್ದರೆ, ಮನ್ಮಥನಿಗುಂಟಾದ ಅವಸ್ಥೆಯೇ ನಿಮಗೂ ಸಂಭವಿಸುವುದು. ಇದರಲ್ಲಿ ಸಂಶಯವಿಲ್ಲ. ||೮೫||

ಶಂಕರೇ ಸರ್ವದಾ ಪ್ರೀತಿರ್ವಿಧೇಯಃ ಸ ದಯಾರ್ಣವಃ ।
ಅಪರ್ಣಾರಮಣಃ ಪ್ರೀತಃ ಪ್ರಣತೋ ಮುಕ್ತಿದಾಯಕಃ ॥೮೬॥

ಪ್ರೀತಶ್ಚೇತ್ಸ ದದಾತಿ ಶೈಲತನಯಾಕಾಂತಃ ಪ್ರಭುತ್ವಂ ಪರಂ
ಲೋಕಾನಾಮವಿನಶ್ವರಂ ಸತತಮಪ್ಯಂತೇ ತು ಮುಕ್ತಿಂ ಪರಾ ।
ತಂ ತಾವನ್ನಿಗಮಾಂತವಾಕ್ಯವಿನುತಂ ಸಂತಃ ಕೃತಾರ್ಥಾಃ ಪರಂ
ಸಂಸಾರಾದ್ವಿರತಾಃ ಪ್ರಯಾಂತಿ ಶರಣಂ ದೇವಾಗ್ರಗಣ್ಯಂ ಮುಹುಃ ॥೮೭॥

ಯಾವತ್ಪೂಜಾ ಸಾವಧಾನಂ ಕ್ರಿಯತೇ ಗಿರಿಜಾಪತೇಃ ।
ತಾವನ್ಮಹಾಗ್ನಿವಾರ್ತಾಪಿ ಹಾನಿರ್ದೂರತರಾ ಯತಃ ॥೮೮॥
ಶಂಕರಾರಾಧನೋದ್ಯುಕ್ತೇ ಸಿದ್ಧಯಃ ಸ್ಯುಃ ಪದೇ ಪದೇ ।
ತತೋ ನ ದುಃಖವಾರ್ತಾಪಿ ಭೋ ಪುತ್ರಾಃ ಶಂಭುಪೂಜಕಾಃ ॥೮೯॥

---

ಶಿವನಲ್ಲಿ ಸದಾ ಭಕ್ತಿಭಾವನೆಯನ್ನಿಡಬೇಕು. ಅವನು ಕೃಪಾಸಾಗರನಾಗಿರುವನು. ಭಕ್ತಿಯಿಂದಲೇ ಅವನು ಸುಪ್ರೀತನಾಗುವನು. ಅವನನ್ನು ನಮಸ್ಕರಿಸಿದರೆ ನಿಜವಾಗಿಯೂ ಮುಕ್ತಿಯು ಸಂಭವಿಸುವುದು. ॥೮೬॥

ಪಾರ್ವತೀವಲ್ಲಭನಾದ ಶಿವನು ಸುಪ್ರೀತನಾದರೆ, ಭಕ್ತನನ್ನು ಮೂರು ಲೋಕಗಳಿಗೂ ಸ್ವಾಮಿಯಾಗುವಂತೆ ಅನುಗ್ರಹಿಸುವನಲ್ಲದೇ ಅಂತ್ಯದಲ್ಲಿ ಶಾಶ್ವತವಾದ ಮೋಕ್ಷ ಪದವಿಯನ್ನು ದಯಪಾಲಿಸುವನು. ಅದರಿಂದಲೇ ಸತ್ಪುರುಷರು ಸಂಸಾರದಲ್ಲಿ ವೈರಾಗ್ಯವನ್ನು ತಾಳಿ, ವೇದಾಂತವೇದ್ಯನಾದ ಶಿವನನ್ನು ಮರೆಹೊಕ್ಕು, ಕೃತಕೃತ್ಯರಾಗುವರು. ॥೮೭॥

ಎಲ್ಲಿಯ ವರೆಗೆ ಭಕ್ತನು ಶಿವನನ್ನು ಏಕಾಗ್ರತೆಯಿಂದ ಪೂಜಿಸುವನೋ, ಅದುವರೆಗೆ ಪ್ರಲಯಾಗ್ನಿಯ ಭಯವು ಅವನಿಗೆ ಲೇಶವೂ ಇರುವುದಿಲ್ಲ. ಮತ್ತು ಆತನಿಗೆ ಆಪತ್ತಿನ ಸುಳಿವೇ ಕಾಣುವುದಿಲ್ಲ. ॥೮೮॥

ಎಲೈ, ಈಶ್ವರಾರಾಧಕರಾದ ಪುತ್ರರೇ! ಈಶ್ವರಾರಾಧನೆಯಲ್ಲಿ ಉದ್ಯುಕ್ತರಾದರೆ, ಹೆಜ್ಜೆ ಹೆಜ್ಜೆಗೂ, ಇಷ್ಟಾರ್ಥಗಳು ಸಿದ್ಧಿಸುವುವು. ಬಳಿಕ ದುಃಖಪ್ರಾಪ್ತಿಯ ಸಂಭವವೇ ಇರುವುದಿಲ್ಲ. ॥೮೯॥

ಶಿವಪೂಜಾಸಾಧನಾನಿ ಕುಸುಮಾನಿ ವನೇ ವನೇ।
ಅತಿರಮ್ಯಾಣಿ ತಿಷ್ಠಂತಿ ಪೂಜಯಧ್ವಂ ಸದಾಶಿವಂ ॥೯೦॥

ಅರುಣೋದಯವೇಲಾಯಾಂ ಕುರುಧ್ವಂ ಶಿವಚಿಂತನಂ ।
ಧ್ಯೇಯಃ ಸಾಂಬೋ ಮಹಾದೇವಃ ಸರ್ವಮಂಗಳವಿಗ್ರಹಃ ॥೯೧॥

ತತಃ ಸ್ನಾತ್ವಾ ಭಸ್ಮನಾಪಿ ಸಮ್ಯಗುದ್ಧೂಲ್ಯ ಸಾದರಂ ।
ತ್ರಿಪುಂಡ್ರಧಾರಣಂ ಕಾರ್ಯಂ ಕಾರ್ಯಂ ರುದ್ರಾಕ್ಷಧಾರಣಂ ॥೯೨॥

ತತಃ ಪರಂ ಶಂಕರಮಂದಿರೇಷು
ಸಮ್ಯಕ್ ಶಿವಾರಾಧನಸಾಧನಾನಿ ।
ಸಂಪಾದ್ಯ ಪೂಜಾ ವಿವಿಧೈರ್ವಿಧಾನೈಃ
ಕಾರ್ಯಾ ಪ್ರಯತ್ನೇನ ಚ ಶಾಂಗಲಿಂಗೇ ॥೯೩॥

ಶಿವಲಿಂಗಾರ್ಚನಂ ಕಾಲೇ ಕಾಲೇ ಕಾರ್ಯಂ ನಿರಂತರಂ ।
ತೇನೈವ ಪಾಪನಾಶಃ ಸ್ಯಾತ್ಸುಖಂ ಮುಕ್ತಿಶ್ಚ ಜಾಯತೇ ॥೯೪॥

---

ಎಲೈ, ಪುತ್ರರೇ! ಪ್ರತಿಯೊಂದು ವನದಲ್ಲಿಯೂ, ಶಿವಪೂಜೆಗೆ ಉಪಯುಕ್ತವಾದ ಕೋಮಲವಾದ ಹೂವುಗಳು ದೊರಕುವುವು. ಅವುಗಳನ್ನು ಸಂಗ್ರಹಿಸಿ, ಶಿವನನ್ನು ಆರಾಧಿಸಿರಿ. ॥೯೦॥

ಅರುಣೋದಯವಾಗುವ ಸಮಯದಲ್ಲಿ ಶಿವನನ್ನು ಧ್ಯಾನಿಸಿರಿ. ಆ ಶಿವನು ಮಂಗಳ ಮೂರ್ತಿಯೂ, ಅರ್ಧನಾರೀಶ್ವರಸ್ವರೂಪನೂ ಆಗಿರುವನೆಂದು ಭಾವಿಸಿ ಧ್ಯಾನಮಾಡಿರಿ. ॥೯೧॥

ಬಳಿಕ, ಸ್ನಾನವನ್ನಾಚರಿಸಿ, ಶರೀರದ ಆದ್ಯಂತವೂ ಭಸ್ಮವನ್ನು ಲೇಪಿಸಿಕೊಂಡು, ಭಸ್ಮತ್ರಿಪುಂಡ್ರವನ್ನೂ ಮತ್ತು ರುದ್ರಾಕ್ಷಗಳನ್ನೂ ಧರಿಸಬೇಕು. ॥೯೨॥

ಅನಂತರ ಶಿವಪೂಜೆಯ ಸಾಮಗ್ರಿಗಳನ್ನು ಸಂಗ್ರಹಿಸಿ, ಶಿವಾಲಯಕ್ಕೆ ತೆರಳಿ, ನಾನಾ ಬಗೆಗಳಿಂದ ಶಿವಲಿಂಗವನ್ನು ಪೂಜಿಸಬೇಕು. ॥೯೩॥

ಕಾಲವನ್ನು ಮೀರದೇ ಆಯಾ ಕಾಲಗಳಲ್ಲಿ ತಪ್ಪದೇ ಶಿವಲಿಂಗವನ್ನು ಅರ್ಚಿಸಬೇಕು. ಅದರಿಂದಲೇ ಪಾಪವು ಕ್ಷಯಿಸುವುದು. ಜೀವನದಲ್ಲಿ ಸುಖವು ದೊರಕುವುದು. ಅಂತ್ಯದಲ್ಲಿ ಮೋಕ್ಷವು ಲಭಿಸುವುದು. ॥೯೪॥

ಯದ್ಯಪ್ಯತ್ಯಂತಸುಲಭಂ ಶಾಂಭವಾನಾಂ ಶಿವಾರ್ಚನಂ ।
ತಥಾಪಿ ದುರ್ಲಭಂ ಮನ್ಯೇ ಪ್ರಮಾದೇ ಸತಿ ಸರ್ವಥಾ ॥೯೫॥

ಅಪ್ರಮಾದೇನ ಕರ್ತವ್ಯಂ ಶ್ರೀಮಹಾದೇವಪೂಜನಂ ।
ಸ್ವಪ್ನೇಽಪ್ಯನ್ಯಸುರಾರ್ಚಾಯಾಮಾದರಸ್ತ್ಯಾಜ್ಯ ಏವ ಹಿ ॥೯೬॥

ತ್ಯಾಜ್ಯಂ ಸರ್ವಾತ್ಮನಾ ತ್ಯಾಜ್ಯಂ ಶಿವಾನ್ಯಸುರಪೂಜನಂ ।
ಸ್ವಪ್ನೇಽಪಿ ಶಿವಪೂಜೈವ ಕರ್ತವ್ಯಾತಿಪ್ರಯತ್ನತಃ ॥೯೭॥

ಅಶಿವಾನಿ ಭವಿಷ್ಯಂತಿ ಶಿವಾನ್ಯಸುರಪೂಜನಾತ್ ।
ಅತಸ್ತನ್ನೈವ ಕರ್ತವ್ಯಂ ನ ಕರ್ತವ್ಯಂ ಕದಾಚನ ॥೯೮॥

ವಾಂಛಿತಂ ಶಿವಮಸ್ಮಾಕಮತಃ ಕಾರ್ಯಂ ಶಿವಾರ್ಚನಂ ।
ಯತಃ ಸ್ವಯಂ ಶಿವಂ ಕ್ಷೀರಂ ಕಾಮಧೇನುಃ ಶಿವಾರ್ಚನಂ ॥೯೯॥

---

ಈಶ್ವರ ಭಕ್ತರಿಗೆ ಶಿವಾರ್ಚನೆಯು ಅತ್ಯಂತ ಸುಲಭವೇ ಆಗಿರುವುದು. ಆದರೂ ಅದನ್ನು ಜಾಗರೂಕತೆಯಿಂದ, ಕಾಲಕ್ಕೆ ಸರಿಯಾಗಿ ಆಚರಿಸದವರಿಗೆ ಅದು ದುರ್ಲಭವೆಂದೇ ತಿಳಿಯುವೆನು. ॥೯೫॥

ಕಾಲಕ್ಕೆ ಸರಿಯಾಗಿ ತಪ್ಪದೇ ವಿಧಿವತ್ತಾಗಿ ಈಶ್ವರನನ್ನು ಪೂಜಿಸಬೇಕು. ಇತರ ದೇವತೆಗಳ ಪೂಜೆಯನ್ನು ಸ್ವಪ್ನದಲ್ಲಿಯೂ ಬಯಸಬಾರದು. ॥೯೬॥

ಈಶ್ವರನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸುವುದನ್ನು ಸರ್ವ ಪ್ರಯತ್ನಗಳಿಂದಲೂ ತ್ಯಜಿಸಬೇಕು. ಪ್ರಯತ್ನಪಟ್ಟು ಸ್ವಪ್ನದಲ್ಲಿಯೂ ಶಿವನನ್ನೇ ಪೂಜಿಸಬೇಕು. ॥೯೭॥

ಶಿವನನ್ನು ಬಿಟ್ಟು, ಇತರ ದೇವತೆಗಳನ್ನು ಆರಾಧಿಸುವುದರಿಂದ ಪಾಪಗಳು ಸಂಘಟಿಸುವುವು. ಆದುದರಿಂದ, ಇತರ ದೇವತೆಗಳನ್ನು ಎಂದಿಗೂ ಪೂಜಿಸಬಾರದು. ॥೯೮॥

ಕಲ್ಯಾಣ ಪ್ರಾಪ್ತಿಯೇ ನಮ್ಮ ಇಷ್ಟಾರ್ಥವು. ಆದುದರಿಂದಲೇ ಮಂಗಳ ಮೂರ್ತಿಯಾದ ಶಿವನನ್ನು ಅರ್ಚಿಸಬೇಕು. ಶಿವಪೂಜೆಯೇ ಕಾಮಧೇನುವಾಗಿರುವುದು. ಅದರಿಂದ ಲಭಿಸುವ ಮಂಗಳವೇ ಕ್ಷೀರರೂಪವಾಗಿರುವುದು. ॥೯೯॥

ಶಿವಾರ್ಚನಸ್ಯ ಮಹಿಮಾ ನ ಜ್ಞಾತೋ ಬ್ರಹ್ಮಣಾಪ್ಯತಃ ।
ತಜ್ಜ್ಞಾನವಿರಹೇಽಪ್ಯಾಶು ಕರ್ತವ್ಯಂ ಶಿವಪೂಜನಂ ॥೧೦೦॥

ಕಾಲಾಂತರೇ ಮಯಾ ಕಾರ್ಯಂ ಶಿವಪೂಜನಮಿತ್ಯಪಿ ।
ಆಲಸ್ಯಂ ನೈವ ಕರ್ತವ್ಯಂ ಕಾಲೋಽತಿಕಠಿನೋ ಯತಃ ॥೧೦೧॥

ಕ್ವ ತಾವದಾಯುರಸ್ಮಾಕಮಿತ್ಯೇವಾದ್ಭುತಚಿಂತಯಾ ।
ಕರ್ತವ್ಯಮತಿಯತ್ನೇನ ಸತ್ವರಂ ಶಿವಪೂಜನಂ ॥೧೦೨॥

ವಿಷಮಪ್ಯಮೃತಂ ಭೂಯಾದಾಲಸ್ಯೇನ ತತಃ ಸುತಾಃ ।
ಕರ್ತವ್ಯಮತಿಯತ್ನೇನ ಲಿಂಗೇ ಶಂಗಾರ್ಚನಂ ಮುದಾ ॥೧೦೩॥

ಶಾಂಗಲಿಂಗಾರ್ಚನಂ ಲೋಕೇ ಸರ್ವಥಾ ದುರ್ಲಭಂ ಸುತಾಃ ।
ವಿಘ್ನಾನಪಿ ನಿರಾಕೃತ್ಯ ಕುರ್ವಂತಿ ಶಿವಪೂಜನಂ ॥೧೦೪॥

---

ಶಿವಪೂಜೆಯ ಮಹಿಮೆಯನ್ನು ಬ್ರಹ್ಮನೂ ಸರಿಯಾಗಿ ಅರಿತಿರುವುದಿಲ್ಲ. ಆದರಿಂದ ಶಿವಪೂಜಾಮಹಿಮೆಯನ್ನು ತಿಳಿಯದವರೂ ಸಹ ಶಿವನನ್ನು ಪೂಜಿಸಲೇ ಬೇಕು. ॥೧೦೦॥

ಈ ಸಮಯದಲ್ಲಿಲ್ಲದಿದ್ದರೆ ಮುಂದೆ ಎಂದಾದರೂ ನಾನು ಶಿವನನ್ನು ಆರಾಧಿಸುವೆನು ಹೀಗೆಂದು ಸಂಕಲ್ಪಿಸಿ, ಉದಾಸೀನಭಾವನೆಯನ್ನು ತಾಳದೆ, ಪ್ರತಿಕ್ಷಣದಲ್ಲಿಯೂ ಜಾಗರೂಕನಾಗಿದ್ದು, ಶಿವನನ್ನು ಆರಾಧಿಸಬೇಕು. ಏಕೆಂದರೆ ಯಮನು ಅತಿ ಭಯಂಕರನಾಗಿರುವನು. ಕಾಲವು ಮಿಂಚಿನಂತೆ ಹಾರಿಹೋಗುವುದು. ॥೧೦೧॥

"ಜೀವಿತವು ಅಲ್ಪಪರಿಮಾಣವುಳ್ಳದ್ದು. ಮುಂದೆ ಒಂದಾನೊಂದು ಕಾಲದಲ್ಲಿ ಶಿವಪೂಜೆಯನ್ನು ಮಾಡಬೇಕಾಗಿದ್ದರೆ, ನಮಗೆ ದೀರ್ಘವಾದ ಆಯುಸ್ಸು ಇರುವುದೇ ? ಎಂದಿಗೂ ಇಲ್ಲ." ಹೀಗೆಂದು ಚಿಂತಿಸಿ, ಆ ಕಾಲದಲ್ಲಿಯೇ ಆದಷ್ಟು ಜಾಗ್ರತೆಯಾಗಿ ಶಿವಪೂಜೆಯನ್ನು ನೆರವೇರಿಸಬೇಕು. ॥೧೦೨॥

ಎಲೈ, ಕುಮಾರರೇ ! ಆಲಸ್ಯದಿಂದ, ಅಮೃತವೂ ವಿಷವಾಗಿ ಪರಿಣಮಿವುದು. ಆದುದರಿಂದ ನಿದಾಸಿಸದೆ ಲಬ್ಧವಾದ ಕಾಲದಲ್ಲಿ ಶಿವನನ್ನು ಶ್ರದ್ಧೆಯಿಂದ ಅರ್ಚಿಸಬೇಕು. ॥೧೦೩॥

ಪುತ್ರರೇ ! ಲೋಕದಲ್ಲಿ, ಈಶ್ವರಲಿಂಗವನ್ನು ಅರ್ಚಿಸುವ ಸುಯೋಗವು ದೊರಕುವುದೇ ದುರ್ಲಭ. ಆದುದರಿಂದ ಜ್ಞಾನಿಗಳು ತಮಗೆ ಯಾವ ಬಗೆಯ ಆತಂಕ

ಶಿವಾರ್ಚನಸ್ಯ ಸಮಯೇ ಯದಿ ವಿಘ್ನೋ ಭವಿಷ್ಯತಿ ।
ತದಾ ತನ್ನಾಶಯಿತ್ವೈವ ಕರ್ತವ್ಯಂ ಶಿವಪೂಜನಂ ॥೧೦೫॥

ಶಿವಾರ್ಚನಂ ಖಲು ಶ್ರೇಯಃ ಶ್ರೇಯಸಾಂ ವಿಘ್ನಸಂಭವಃ ।
ಸಂಭಾವಿತಂ ತತಸ್ತಸ್ಯ ನಾಶೋಽಪಿ ಶಿವಪೂಜಯಾ ॥೧೦೬॥

ಶಿವಾರ್ಚನಂ ಪರಂ ತಾವತ್ಸರ್ವಾರಿಷ್ಟವಿನಾಶಕಂ ।
ಸರ್ವೇಷ್ಟದಾಯಕಂ ಚೇತಿ ಕರ್ತವ್ಯಂ ಶಿವಪೂಜನಂ ॥೧೦೭॥

ಶಿವಾರ್ಚನಸಮಂ ಲೋಕೇ ಕಿಂ ವಾ ಪುಣ್ಯಂ ಭವಿಷ್ಯತಿ ।
ತತ್ಪುಣ್ಯೋತ್ತಮಮಿತ್ಯೇವ ಜ್ಞಾತವ್ಯಂ ಸರ್ವಥಾ ಬುಧೈಃ ॥೧೦೮॥

ಯೇನ ಕೇನಾಪಿ ವಾ ಭಕ್ತ್ಯಾ ಕೃತಂ ಯದಿ ಶಿವಾರ್ಚನಂ ।
ತದಾ ದದಾತಿ ಗೌರೀಶಸ್ತಸ್ಮೈ ಮುಕ್ತಿಮಸಂಶಯಂ ॥೧೦೯॥

---

ಗಳು ಸಂಭವಿಸಿದರೂ, ಅವುಗಳನ್ನು (ಹೋಗಲಾಡಿಸಿ) ಲೆಕ್ಕಿಸದೇ ಶಿವನನ್ನು ಆರಾಧಿಸುವರು. ॥೧೦೪॥

ಶಿವಪೂಜೆಯ ಸಮಯದಲ್ಲಿ, ವಿಘ್ನವು ಸಂಭವಿಸಿದರೆ ಈಶ್ವರಾರಾಧನೆಯ ಮಹಿಮೆಯಿಂದ ಅದು ದೂರವಾಗುವುದು. ಆದುದರಿಂದ ಧೈರ್ಯವಾಗಿ ಪೂಜೆಯನ್ನು ಮುಂದುವರಿಸಬೇಕು. ॥೧೦೫॥

ಈಶ್ವರಾರಾಧನೆಯು ಶ್ರೇಯಸ್ಸಿಗೆ ಕಾರಣವಾದುದು. ಲೋಕದಲ್ಲಿ ಶ್ರೇಯಸ್ಕರವಾದ ಕಾರ್ಯಗಳಿಗೆ ವಿಘ್ನವು ಸಂಭವಿಸುವುದು ಸ್ವಾಭಾವಿಕ. ಆದರೂ ಶಿವಪೂಜೆಯ ಪ್ರಭಾವದಿಂದ ಆ ವಿಘ್ನವು ನಾಶವನ್ನು ಹೊಂದುವುದು. ॥೧೦೬॥

ಈಶ್ವರಾರಾಧನೆಯಿಂದ, ವಿಘ್ನಗಳು ತೊಲಗುವುವು. ಇಷ್ಟಾರ್ಥಗಳು ಸಿದ್ಧಿಸುವುವು. ಆದುದರಿಂದ ತಪ್ಪದೇ ಈಶ್ವರನನ್ನು ಆರಾಧಿಸಬೇಕು. ॥೧೦೭॥

ಲೋಕದಲ್ಲಿ, ಶಿವಾರ್ಚನೆಗೆ ಸದೃಶವಾದ ಪುಣ್ಯಕರ್ಮವು ಮತ್ತೊಂದಿರುವುದೇ ? ಶಿವಾರ್ಚನೆಯೇ ಪುಣ್ಯಕರ್ಮಗಳಲ್ಲೆಲ್ಲಾ ಶ್ರೇಷ್ಠವಾದುದೆಂದು ವಿವೇಕಿಗಳು ತಿಳಿಯಬೇಕು. ॥೧೦೮॥

ಯಾವ ಮನುಜನೇ ಆಗಲಿ. ಭಕ್ತಿಯಿಂದ ಶಿವನನ್ನು ಪೂಜಿಸಿದರೆ ಗಿರಿಜಾವಲ್ಲಭನಾದ ಶಿವನು, ಅವನಿಗೆ ಮೋಕ್ಷವನ್ನು ದಯಪಾಲಿಸುವನು. ಇದರಲ್ಲಿ ಸಂಶಯವಿಲ್ಲ. ॥೧೦೯॥

ಅಪಾರಸುಕೃತಾಂಬುಧಿರ್ಯದಿ ಭವೇತ್ಪ್ರವೃದ್ಧಸ್ತದಾ
ಶಿವಾರ್ಚನರತಿರ್ಭವೇದಿತಿ ಮತಿಃ ಪ್ರವೃದ್ಧಾ ತತಃ ।
ಅವಶ್ಯಮಸಕೃತ್ಸ್ಮೃತಃ ಪ್ರಣತ ಏವ ವಾ ಪೂಜಿತೋ
ದದಾತಿ ಪರಮಂ ಪದಂ ಗಿರಿಶ ಇತ್ಯನೈಮಿ ಧ್ರುವಂ ॥೧೧೦॥

ವಿನಾಶಯತಿ ಪಾತಕಾಮಿತಮಹಾಗಿರೀನೇಕದಾ
ಸ್ಮೃತೋಽಪಿ ಗಿರಿಶಃ ಸ್ಮೃತಃ ಸಕೃದಪಾರಪುಣ್ಯಪ್ರದಃ ।
ಸ ಏವ ಮುನಿಪುಂಗವೈರ್ಮನಸಿ ಸರ್ವದಾ ಪೂಜ್ಯತೇ
ಸ ಏವ ಮುನಿಪುಂಗವೈರಪಿ ಸಮಾಧಿನಿಷ್ಠೈರಪಿ ॥೧೧೧॥

ಅಪೂರ್ವಮೀಶಾರ್ಚನಮೇವಮೇವ
ಲೋಕೇ ಪ್ರಸಿದ್ಧಂ ಸಕಲಾರ್ಥಹೇತುಃ ।
ತತ್ತುಲ್ಯಮನ್ಯನ್ನ ಮಯಾಪಿ ದೃಷ್ಟಂ
ವೇದೈರ್ನ ದೃಷ್ಟಂ ಸುರಪುಂಗವೈರ್ವಾ ॥೧೧೨॥

---

ಜನ್ಮಾಂತರಗಳಲ್ಲಿ ಸಂಪಾದಿಸಿದ ಪುಣ್ಯರಾಶಿಗಳಿದ್ದರೆ, ಈ ಜನ್ಮದಲ್ಲಿ ಈಶ್ವರಾರ್ಚನೆಯಲ್ಲಿ ಆಸಕ್ತಿಯುಂಟಾಗುವುದೆಂದು ನಾನು ತಿಳಿಯುವೆನು. ಭಕ್ತನು ಶಿವನನ್ನು ಸ್ಮರಿಸಲಿ, ವಂದಿಸಲಿ, ಅಥವಾ ಪೂಜಿಸಲಿ. ಹೇಗಾದರೂ ಶಿವನು, ಅಲ್ಪವಾದ ಸೇವೆಗೂ ಪ್ರಸನ್ನನಾಗಿ ಶಾಶ್ವತವಾದ ಮೋಕ್ಷವನ್ನು ದಯಪಾಲಿಸುವನು. ಇದು ನಿಜ. ॥೧೧೦॥

ಅಮಿತವಾದ ಪುಣ್ಯವನ್ನು ದಯಪಾಲಿಸುವ ಶಂಕರನನ್ನು, ಸ್ಮರಿಸಿದರೂ ಅಥವಾ ಸ್ತುತಿಸಿದರೂ ಅವನು, ಪರ್ವತದಂತೆ ಮಹತ್ತರವಾದ ಪಾಪರಾಶಿಗಳನ್ನು ನಾಶಮಾಡುವನು. ಮುನಿಶ್ರೇಷ್ಠರು, ಯಾವಾಗಲೂ ಅವನನ್ನೇ ತಮ್ಮ ಚಿತ್ತದಲ್ಲಿ ಧ್ಯಾನಿಸುವರು. ಚಿತ್ತಸಮಾಧಿಯನ್ನು ಹೊಂದಿರುವ ಮುನಿಪುಂಗವರೂ ಸಹ ಅವನನ್ನು ಭಕ್ತಿಯಿಂದ ಆರಾಧಿಸುವರು. ॥೧೧೧॥

ಈರೀತಿ ಅಪೂರ್ವ ಫಲವನ್ನು ಕೊಡುವ, ಈಶ್ವರಾರಾಧನೆಯು ಸಕಲ ಇಷ್ಟಾರ್ಥಗಳಿಗೂ ಕಾರಣವಾಗಿರುವುದೆಂದು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಈಶ್ವರಾರಾಧನೆಗೆ ಸದೃಶವಾದ ಸತ್ಕರ್ಮವನ್ನು ನಾನೆಲ್ಲಿಯೂ ನೋಡಿರುವುದಿಲ್ಲ. ॥೧೧೨॥

ನ ಯಾಗದಾನಾಧ್ಯಯನಾದಿಭಿರ್ವಾ
ಲಿಂಗಾರ್ಚನಾರಾಧನಪುಣ್ಯತುಲ್ಯಂ ।
ಪುಣ್ಯಂ ಭವಿಷ್ಯತ್ಯತ ಏವ ತಾವ
ತ್ತತ್ಪುಣ್ಯಪುಣ್ಯಂ ವಿದುರಾಸ್ತಿಕಾಸ್ತು ॥೧೧೩॥

ರಹಸ್ಯಮನ್ಯದ್ವಕ್ಷ್ಯಾಮಿ ಶೃಣುಧ್ವಮತಿಸಾದರಂ ।
ಶ್ರುತೇ ತಸ್ಮಿಂಚ್ಛಿವಾಚಾರೇ ಭಕ್ತಿವೃದ್ಧಿರ್ಭವಿಷ್ಯತಿ ॥೧೧೪॥

ಯಾ ಶಿವಾರ್ಚನಸಾಮಗ್ರೀ ಸಾ ಸರ್ವಾ ಭೂತಿಪಾವನಾ ।
ಕರ್ತವ್ಯಾ ಮೂಲಮಂತ್ರೇಣ ತಯಾ ತುಷ್ಟೋ ಭವೇಚ್ಛಿವಃ ॥೧೧೫॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ವಿಜಯಾನಗರೇ ಕಶ್ಚಿತ್ ಸ್ಥಿತಃ ಶಾಂಭವಪುಂಗವಃ ॥೧೧೬॥

---

ಯಜ್ಞದಾನಾದಿಗಳನ್ನು ಅನುಷ್ಠಾನಮಾಡುವುದರಿಂದಲಾಗಲಿ, ವೇದಾಧ್ಯಯನಗಳಿಂದಲಾಗಲಿ, ಈಶ್ವರಲಿಂಗಾರ್ಚನೆಯಿಂದುಂಟಾಗುವ ಪುಣ್ಯಕ್ಕೆ ಸದೃಶವಾದ ಪುಣ್ಯವು ಲಭಿಸಲಾರದು. ಆದುದರಿಂದಲೇ ಆಸ್ತಿಕ ಮಹಾಜನರು, ಶಿವಲಿಂಗಾರ್ಚನೆಯೇ ಶ್ರೇಷ್ಠತಮವಾದ ಕರ್ಮವೆಂದು ತಿಳಿಯುವರು. ಇದಕ್ಕಿಂತ ದೊಡ್ಡದಾದುದು ವೇದಗಳಲ್ಲಿಯೂ ಕಾಣುವುದಿಲ್ಲ, ದೇವತೆಗಳೂ ಅರಿತಿಲ್ಲ. ॥೧೧೩॥

ಪುತ್ರರೇ! ಇನ್ನೊಂದು ರಹಸ್ಯವನ್ನು ನಿಮಗೆ ಹೇಳುವೆನು. ಪ್ರೀತಿಯಿಂದ ಅದನ್ನು ಕೇಳಿರಿ. ಈಶ್ವರನ ಮಹಿಮೆಯನ್ನು ಕೇಳಿದೊಡನೆಯೇ ಭಕ್ತಿಯು ವೃದ್ಧಿ ಹೊಂದುವುದು. ॥೧೧೪॥

ಈಶ್ವರಪೂಜೆಗೆ ಬೇಕಾಗುವ ಸಾಮಗ್ರಿಗಳನ್ನು ಮೊದಲು ಶಿವಮೂಲಮಂತ್ರವನ್ನು ಹೇಳುತ್ತಾ ಭಸ್ಮದಿಂದ ಶುದ್ಧಿಗೊಳಿಸಬೇಕು. ಅದರಿಂದ ಶಿವನು ಸುಪ್ರೀತನಾಗುವನು. ॥೧೧೫॥

ಈ ವಿಷಯವಾಗಿ, ಪೂರ್ವಕಾಲದಲ್ಲಿ ನಡೆದ ಒಂದಾನೊಂದು ಇತಿಹಾಸವನ್ನು ಕೇಳಿರಿ. ಹಿಂದೆ ವಿಜಯನಗರವೆಂಬ ಪಟ್ಟಣದಲ್ಲಿ ಪರಶಿವಭಕ್ತಾಗ್ರೇಸರನಾದ ಮಾನವನೊಬ್ಬನಿದ್ದನು ॥೧೧೬॥

ಸ ಸಮಾರಾಧಯನ್ನೇವ ಭಾವಲಿಂಗಂ ಶಿವಾತ್ಮಕಂ ।
ಭಸ್ಮೋದ್ಧೂಲಿತಸರ್ವಾಂಗೋ ದದರ್ಶ ಸ್ವಪ್ನಮೇಕದಾ ॥೧೧೭॥

ತೇನ ತೀರ್ಥೇಶ್ವರೋ ದೃಷ್ಟಃ ಸ್ವಪ್ನೇ ಸರ್ವಸುರೇಶ್ವರಃ ।
ದೃಷ್ಟಾಶ್ಚ ಶಾಂಭವಾಸ್ತತ್ರ ಶಿವಧ್ಯಾನಪರಾಯಣಾಃ ॥೧೧೮॥

ಭಸ್ಮೋದ್ಧೂಲನರುದ್ರಾಕ್ಷತ್ರಿಪುಂಡ್ರಾಂಕಿತಮಸ್ತಕಾಃ ।
ಶಿವಲಿಂಗಾರ್ಚನೇನೈವ ಸಂತುಷ್ಟಾಸ್ಸತತಂ ಮುದಾ ॥೧೧೯॥

ತಲ್ಲಿಂಗಂ ಪೂಜಿತಂ ದೃಷ್ಟಂ ವಿಮಲೈರ್ಬಿಲ್ವಪಲ್ಲವೈಃ ।
ನೀಲೋತ್ಪಲೈಃ ಪುಂಡರೀಕೈಃ ಕುಂದೈಶ್ಚ ಕುಮುದೈರಪಿ ॥೧೨೦॥

ರತ್ನಾಭರಣಸಂಯುಕ್ತಂ ದುಕೂಲಪರಿವೇಷ್ಟಿತಂ ।
ದಿವ್ಯೋಪಹಾರಸಂಕೀರ್ಣಂ ಫಲರಾಜಿವಿರಾಜಿತಂ ॥೧೨೧॥

---

ಅವನು ತನ್ನ ಸರ್ವಾಂಗಗಳನ್ನು ಭಸ್ಮದಿಂದ ಲೇಪಿಸಿ ಭಾವಲಿಂಗವನ್ನು ಸರ್ವದಾ ಆರಾಧಿಸುತ್ತಿದ್ದನು. ಹೀಗಿರುತ್ತಿರಲು, ಅವನು ಒಂದು ದಿನ ಒಂದಾನೊಂದು ಸ್ವಪ್ನವನ್ನು ಕಂಡನು. ॥೧೧೭॥

ಸ್ವಪ್ನದಲ್ಲಿ ಅವನಿಗೆ ಒಂದಾನೊಂದು ಶಿವಕ್ಷೇತ್ರವೂ ಅದರಲ್ಲಿ ದೇವಶ್ರೇಷ್ಠವಾದ ಶಿವಲಿಂಗವೂ ಗೋಚರಿಸಿತು. ಮತ್ತು ಅಲ್ಲಿಯೇ ಈಶ್ವರಧ್ಯಾನದಲ್ಲಿ ನಿಮಗ್ನರಾದ ಕೆಲವು ಮಂದಿ ಈಶ್ವರ ಭಕ್ತರನ್ನೂ ನೋಡಿದನು. ॥೧೧೮॥

ಆ ಭಕ್ತರು, ಸರ್ವಾಂಗಗಳಲ್ಲಿಯೂ ಭಸ್ಮವನ್ನು ಲೇಪಿಸಿಕೊಂಡು ರುದ್ರಾಕ್ಷಗಳನ್ನು ಧರಿಸಿ, ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನು ಇಟ್ಟಿದ್ದರು. ಅವರು ಅನವರತವೂ ಭಕ್ತಿಯಿಂದ ಶಿವಲಿಂಗವನ್ನು ಆರಾಧಿಸುತ್ತಾ, ಸಂತೋಷದಿಂದ ವಾಸವಾಗಿದ್ದರು. ॥೧೧೯॥

ಅವರು, ಪರಿಶುದ್ಧವಾದ ಬಿಲ್ವಪತ್ರೆಗಳಿಂದಲೂ, ನೀಲೋತ್ಪಲಗಳಿಂದಲೂ, ಶ್ವೇತಕಮಲಗಳಿಂದಲೂ, ಮಾಗಿ ಮಲ್ಲಿಗೆಯ ಹೂವುಗಳಿಂದಲೂ, ಶಿವಲಿಂಗವನ್ನು ಪೂಜಿಸಿದ್ದನ್ನು ಈತನು ನೋಡಿದನು. ॥೧೨೦॥

ಆಶಿವಲಿಂಗವು ರತ್ನಾಭರಣಗಳಿಂದ ಅಲಂಕೃತವಾಗಿದ್ದಿತು. ಅದರ ಸುತ್ತಲೂ ಪಟ್ಟೆಯ ವಸ್ತ್ರಗಳನ್ನು ಹೊದಿಸಿದ್ದರು. ಹತ್ತಿರದಲ್ಲಿ ನಾನಾ ಬಗೆಯ ಪಕ್ವಾನ್ನಗಳೂ ಹಣ್ಣು ಹಂಪಲುಗಳೂ, ನೈವೇದ್ಯಕ್ಕಾಗಿ ಇಡಲ್ಪಟ್ಟಿದ್ದುವು. ॥೧೨೧॥

ಧೂಪಧೂಮಸಮಾಕ್ರಾಂತಂ ಪುಷ್ಪಗಂಧವಿರಾಜಿತಂ ।
ಕರ್ಪೂರದೀಪಮಾಲಾಭಿಃ ಪರಿತಃ ಪರಿವೇಷ್ಟಿತಂ ॥೧೨೨॥

ವೇದೈರ್ಮೂರ್ತಿಧರೈರೇವ ಸ್ತುತಂ ಸರ್ವಾರ್ಥಸಿದ್ಧಿದಂ ।
ಸರ್ವಮಂಗಳದಂ ನಿತ್ಯಂ ಸ್ಮರಣೇನಾಪಿ ತತ್ಪರಂ ॥೧೨೩॥

ಗೀತನಾಟ್ಯಸಮಾರಂಭತೂರ್ಯಧ್ವನಿವಿರಾಜಿತಂ ।
ದೇವದುಂದುಭಿನಿರ್ಘೋಷಪ್ರತಿಧ್ವನಿವಿರಾಜಿತಂ ॥೧೨೪॥

ದೇವಗಂಧರ್ವನಾರೀಣಾಂ ಸಮೂಹೈಶ್ಚ ವಿರಾಜಿತಂ ।
ಗೌರೀಪೂಜನಸಂಸಕ್ತಸುರನಾರೀಸಮನ್ವಿತಂ ॥೧೨೫॥

ತಾದೃಶಂ ಮಂದಿರಂ ದೃಷ್ಟ್ವಾ ತೀರ್ಥೇಶಸ್ಯ ಸ ಶಾಂಭವಃ ।
ಪೂಜಾಂ ತೀರ್ಥೇಶಲಿಂಗಸ್ಯ ಚಕಾರಾತೀವ ಭಕ್ತಿತಃ ॥೧೨೬॥

---

ಶಿವಲಿಂಗದ ಸಮೀಪದಲ್ಲಿ ಧೂಪದ ಹೊಗೆಯು ಆವರಿಸಿದ್ದಿತು. ಹೂವುಗಳು ಸುಗಂಧವನ್ನು ಬೀರುತ್ತಿದ್ದವು. ಶಿವಲಿಂಗದ ಸುತ್ತಲೂ ಕರ್ಪೂರದ ದೀಪಗಳು ಸಾಲು ಸಾಲಾಗಿ ಉರಿಯುತ್ತಿದ್ದವು. ॥೧೨೨॥

ವೇದಗಳು ಸಶರೀರಗಳಾಗಿರುವಂತೆ, ವೇದಜ್ಞರು ಸಕಲ ಕಲ್ಯಾಣಗಳನ್ನೂ ಉಂಟುಮಾಡುವ ಮತ್ತು ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸುವ ಶಿವಲಿಂಗವನ್ನು ಸ್ತುತಿಸುತ್ತಿದ್ದರು. ॥೧೨೩॥

ಗೀತ, ನಾಟ್ಯ, ವಾದ್ಯಘೋಷ ಇವುಗಳಿಂದ ಕೂಡಿದ ದೇವದುಂದುಭಿಗಳ ಧ್ವನಿಯು ಅಲ್ಲಿ ಪ್ರತಿ ಧ್ವನಿಯನ್ನುಂಟುಮಾಡುತ್ತಿದ್ದಿತು. ॥೧೨೪॥

ಅನೇಕ ಮಂದಿ ದೇವತಾಸ್ತ್ರೀಯರೂ ಮತ್ತು ಗಂಧರ್ವಸ್ತ್ರೀಯರೂ ಗುಂಪು ಗುಂಪಾಗಿ ಶಿವಲಿಂಗದ ಸನ್ನಿಧಿಯಲ್ಲಿ ನಿಂತಿದ್ದರು. ಕೆಲವು ಮಂದಿ ದೇವತಾ ಸ್ತ್ರೀಯರು ಪಾರ್ವತಿಯನ್ನು ಪೂಜಿಸುತ್ತಿದ್ದರು. ॥೧೨೫॥

ಈಶ್ವರನ ಅಂತಹ ಭವ್ಯಮಂದಿರವನ್ನು ನೋಡಿ ಆ ಶಾಂಭವನು ಅತ್ಯಂತ ಭಕ್ತಿಯಿಂದ ತೀರ್ಥೇಶ್ವರಲಿಂಗವನ್ನು ಪೂಜಿಸಿದ್ದನ್ನು ಇವನು ಕಂಡನು. ॥೧೨೬॥

ಪಂಚಾಮೃತಾಭಿಷೇಕಾದ್ಯೈಶ್ಚಂದನೈಶ್ಚ ಮನೋಹರೈಃ ।
ದುಕೂಲೈಃ ಕುಸುಮೈರ್ದಿವ್ಯೈರ್ಮಂದಾರಾದ್ಯೈರ್ವಿಶೇಷತಃ ॥೧೨೭॥

ಧೂಪದೀಪಾದಿಭಿರ್ಭವ್ಯೈರ್ನೈವೇದ್ಯೈರಪಿ ಸಾದರಂ ।
ನೀರಾಜನೈಶ್ಚ ವಿವಿಧೈರ್ದಿವ್ಯಕರ್ಪೂರಸಂಭವೈಃ ॥೧೨೮॥

ಪ್ರದಕ್ಷಿಣನಮಸ್ಕಾರಾನ್ ಕೃತ್ವಾ ಭಕ್ತಿಪುರಃಸರಂ ।
ಉಪವಿಷ್ಟಃ ಶಿವಂ ಪಶ್ಯನ್ ಜಪನ್ ಪಂಚಾಕ್ಷರಂ ಪರಂ ॥೧೨೯॥

ತಾವನ್ನಿಯಮಮಾಸಾದ್ಯ ತೃಷಿತೇನ ಜಲಾನ್ಯಪಿ ।
ನ ಪೀತಾನ್ಯೇವ ತೇನಾತಃ ಪಿಪಾಸಾ ವೃದ್ಧಿಮಾಪ ಸಾ ॥೧೩೦॥

ತತಃ ಪರಂ ಸಮಾನೀತಂ ಪಾನೀಯಮತಿಶೋಭನಂ ।
ಕೃತ್ವಾ ಶಿವಾರ್ಪಣಂ ಪಾತುಂ ಸ ಚಕಾರ ಮತಿಂ ತದಾ ॥೧೩೧॥

---

ಪಂಚಾಮೃತಾಭಿಷೇಕ, ಚಂದನ, ಪಟ್ಟವಸ್ತ್ರ, ಮಂದಾರಾದಿ ಪುಷ್ಪಗಳು ಮುಂತಾದುವುಗಳಿಂದಲೂ ಆತನು ಶಿವನನ್ನು ಸೇವಿಸುತ್ತಿದ್ದನು. ॥೧೨೭॥

ದಿವ್ಯವಾದ ಧೂಪದೀಪಗಳಿಂದಲೂ, ಪಕ್ವವಾದ ನೈವೇದ್ಯಗಳಿಂದಲೂ, ಕರ್ಪೂರದಿಂದ ಕೂಡಿರುವ ನೀರಾಜನಗಳಿಂದಲೂ ಪರಮೇಶ್ವರನನ್ನು ಆರಾಧಿಸಿದನು. ॥೧೨೮॥

ಬಳಿಕ ಅತ್ಯಂತ ಭಕ್ತಿಯಿಂದ ಶಿವಲಿಂಗಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಶಿವನನ್ನೇ ನೋಡುತ್ತಾ ಶಿವಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಕುಳಿತುಕೊಂಡನು. ॥೧೨೯॥

ಇಷ್ಟೊಂದು ಕಾಲವು ಕಳೆದರೂ, ಅವನು ಅನ್ನಪಾನಾದಿಗಳ ನಿಯಮವನ್ನು ಕೈಗೊಂಡು ಆಹಾರಾದಿಗಳನ್ನು ತೊರೆದಿದ್ದನು. ಒಂದುಸಾರಿ ಅವನಿಗೆ ಬಾಯಾರಿಕೆ ಅಧಿಕವಾಯಿತು. ಆದರೂ ಅವನು ನೀರನ್ನು ಕುಡಿಯಲಿಲ್ಲ. ಅವನ ನೀರಡಿಕೆಯು ಬರುಬರುತ್ತಾ ಹೆಚ್ಚಾಯಿತು. ॥೧೩೦॥

ತರುವಾಯ ಆ ದೇವಾಲಯದಲ್ಲಿದ್ದ ಈಶ್ವರಭಕ್ತರು ಅವನ ಬಳಿಗೆ ರುಚಿಕರವಾದ ಪಾನೀಯವನ್ನು ತಂದಿರಿಸಲು, ಅವನು ಅದನ್ನು ಮೊದಲು ಶಿವನಿಗೆ ಅರ್ಪಿಸಿ, ಬಳಿಕ ತಾನು ಕುಡಿಯಬೇಕೆಂದು ಸಂಕಲ್ಪಿಸಿದನು. ॥೧೩೧॥

ತದಾನೀಮಾಗತಃ ಕೋಽಪಿ ತಸ್ಮಾದ್ಗಿರಿಶಮಂದಿರಾತ್ ।
ಭೂತಿರುದ್ರಾಕ್ಷವೀತಾಂಗಃ ಶಿವನಾಮಜಪೋತ್ಸುಕಃ ॥೧೩೨॥

ಸ ಏವಾಗತ್ಯ ತಂ ಪ್ರಾಹ ಶಾಂಭವಾಗ್ರೇಸರಂ ಪ್ರತಿ ।
ಮಾ ಮಾ ಪಿಬ ಜಲಂ ವಿಪ್ರ ತದೀಶಾನಾರ್ಪಿತಂ ಯತಃ ॥೧೩೩॥

ಶಿವಭಕ್ತೋಽಸಿ ಧನ್ಯೋಽಸಿ ಶಂಕರಾನರ್ಪಿತಂ ಜಲಂ ।
ಪಾತುಮಿಚ್ಛಸಿ ಕಿಂ ತತ್ತು ಗಿರಿಶಾಯ ಸಮರ್ಪಯ ॥೧೩೪॥

ತಜ್ಜಲಂ ಭೂತಿಸಂಯುಕ್ತಂ ಕುರು ಭಸ್ಮವಿವರ್ಜಿತಂ ।
ನ ಗೃಹ್ಣಾತಿ ಜಲಂ ಶಂಭುರ್ಗಾಂಗಂ ವಾ ಕಿಮುತೇತರತ್ ॥೧೩೫॥

ಯಜ್ಜಲಂ ಭೂತಿಸಂಯುಕ್ತಂ ನ ಭವಿಷ್ಯತಿ ತಜ್ಜಲಂ ।
ಅದೇಯಂ ಶಂಕರಾಯೇತಿ ನ ಜ್ಞಾತಂ ಕಿಂ ತ್ವಯಾ ಪುರಾ ॥೧೩೬॥

---

ಆಗ, ವಿಭೂತಿ ಮತ್ತು ರುದ್ರಾಕ್ಷಗಳನ್ನು ಧರಿಸಿ ಶಿವನಾಮಗಳನ್ನು ಜಪಿಸುವುದರಲ್ಲಿಯೇ ಆಸಕ್ತನಾದ ಒಬ್ಬಾನೊಬ್ಬ ಈಶ್ವರಭಕ್ತನು ಆ ದೇವಾಲಯದಿಂದ ಹಠಾತ್ತಾಗಿ ಬಂದನು. ॥೧೩೨॥

ಹಾಗೆ ಬಂದು ಅವನು, ಆ ಭಕ್ತನ ಹತ್ತಿರ ನಿಂದು, ಅವನನ್ನು ಕುರಿತು, "ಈ ನೀರು ಶಿವನಿಗೋಸ್ಕರ ತರಿಸಲ್ಪಡದೆ ಇರುವುದರಿಂದ ನೀನು ಇದನ್ನು ಕುಡಿಯಬೇಡ" ಎಂದನು. ॥೧೩೩॥

ಈಶ್ವರಭಕ್ತನಾದ ನೀನು ಪರಮಧನ್ಯನಾಗಿರುವೆ. ಅಂತಹ ನೀನು ಶಿವನಿಗೆ ನಿವೇದಿಸದೇ ಇರುವ ಈ ಜಲವನ್ನು ಕುಡಿಯಬೇಕೆಂದು ಇಚ್ಛಿಸುವುದು ನ್ಯಾಯವೇ? ಈ ಪಾನೀಯವನ್ನು ಈಗಲೇ ಶಿವನಿಗೆ ಸಮರ್ಪಿಸು. ॥೧೩೪॥

ಆ ನೀರಿನಲ್ಲಿ ವಿಭೂತಿಯನ್ನು ಸೇರಿಸಿ ಅದನ್ನು ಶಿವನಿಗೆ ಮೊದಲು ಅರ್ಪಿಸಬೇಕು. ಗಂಗಾನದಿಯ ನೀರಾದರೂ ಸಹ, ಅದು ವಿಭೂತಿಯುಕ್ತವಾಗದಿದ್ದರೆ, ಅದನ್ನು ಶಿವನು ಸ್ವೀಕರಿಸುವುದಿಲ್ಲ. ಹೀಗಿರುವಾಗ ಇನ್ನಿತರ ನೀರನ್ನು ಅವನು ಸೇವಿಸುವನೇ? ॥೧೩೫॥

ವಿಭೂತಿಯನ್ನು ಸೇರಿಸದಿರುವ ಜಲವನ್ನು ಶಿವನಿಗೆ ಅರ್ಪಿಸಬಾರದೆಂಬುದನ್ನು ನೀನು ಈ ಹಿಂದೆ ತಿಳಿದಿರಲಿಲ್ಲವೇ? ॥೧೩೬॥

ಯದ್ಯದ್ದೇಯಂ ಮಹೇಶಾಯ ತದ್ಭಸ್ಮರಹಿತಂ ಯದಿ ।
ಸ ಗೃಹ್ಣಾತಿ ಮಹಾದೇವಸ್ತತೋ ಮಾ ಪಿಬ ತಜ್ಜಲಂ ॥೧೩೭॥

ತತಃ ಪರಂ ವಿಭೂತಿರ್ವಾ ಕ್ವಾಸ್ತೀತ್ಯುಕ್ತಃ ಸ ಶಾಂಕರಃ ।
ಪ್ರಾಹ ಭೂತಿಂ ಗೃಹಾಣೇತಿ ಶಾಂಭವಾಯ ಮಹಾತ್ಮನೇ ॥೧೩೮॥

ತತೋ ಗೃಹೀತ್ವಾ ತಂ ಭೂತಿಂ ಭೂತಿದಾಮತಿಭಕ್ತಿತಃ ।
ಪ್ರಕ್ಷಿಪಜ್ಜಲಮಧ್ಯೇ ತಾಂ ಮೂಲಮಂತ್ರೇಣ ಸಾದರಂ ॥೧೩೯॥

ತತಸ್ತೇನೈವ ಮಂತ್ರೇಣ ತತ್ಕೃತ್ವಾ ಶಂಕರಾರ್ಪಣಂ ।
ಪಪೌ ಶಿವಂ ಸ್ಮರನ್ನೇವ ಕೃತಾರ್ಥೋಽಸ್ಮೀತಿ ಸಾದರಂ ॥೧೪೦॥

ತತ್ರ ಸ್ಥಿತ್ವಾ ಕಿಯತ್ಕಾಲಂ ಶಿವಧರ್ಮಾನ್ವಿಶೇಷತಃ ।
ಸ ತಸ್ಮಾದೇವ ಶುಶ್ರಾವ ಸರ್ವಪಾಪವಿನಾಶಕಾನ್ ॥೧೪೧॥

---

ಪರಮೇಶ್ವರನಿಗೆ ಯಾವ ವಸ್ತುವನ್ನು ಅರ್ಪಿಸಿದರೂ ಅದರಲ್ಲಿ ವಿಭೂತಿಯನ್ನು ಸೇರಿಸದಿದ್ದರೆ, ಅದನ್ನು ಶಂಕರನು ಸ್ವೀಕರಿಸುವುದಿಲ್ಲ. ಆದುದರಿಂದ ಈಗ ನೀನು ಈ ಉದಕವನ್ನು ಕುಡಿಯಬೇಡ. ಎನ್ನಲು ||೧೩೭||

ಬಳಿಕ ಈ ಭಕ್ತನು, ವಿಭೂತಿ ಎಲ್ಲಿರುವುದು ? ಅದು ನನಗೆ ದೊರೆಯುವುದೆಂತು ? ಎಂದು ಹೇಳಲು, ಆ ಭಕ್ತನು, ಇಗೋ ಈ ವಿಭೂತಿಯನ್ನು ತೆಗೆದುಕೊ ಎಂದು ಭಸ್ಮವನ್ನು ಅವನಿಗಿತ್ತನು. ||೧೩೮||

ತರುವಾಯ, ಇವನು, ಐಶ್ವರ್ಯಪ್ರದವಾದ ಆ ವಿಭೂತಿಯನ್ನು ತೆಗೆದುಕೊಂಡು, ಮೂಲಮಂತ್ರವನ್ನುಚ್ಚರಿಸುತ್ತಾ ಅದನ್ನು ಆ ನೀರಿನೊಳಕ್ಕೆ ಬೆರಸಿದನು. ||೧೩೯||

ಬಳಿಕ ಅದೇ ಮೂಲಮಂತ್ರದಿಂದ ಭಸ್ಮಮಿಶ್ರಿತವಾದ ಆ ಉದಕವನ್ನು ಶಿವನಿಗೆ ಅರ್ಪಿಸಿ ಶೈವನನ್ನು ಸ್ಮರಿಸುತ್ತಾ "ನಾನು ಈದಿವಸ ಕೃತಕೃತ್ಯನಾದೆನು" ಎಂದು ಭಾವಿಸಿ ಭಕ್ತಿಯಿಂದ ಆ ಉದಕವನ್ನು ಪಾನಮಾಡಿದನು. ||೧೪೦||

ಕೊಂಚಕಾಲದವರೆಗೆ ಅಲ್ಲಿಯೇ ಇದ್ದು ಆ ಭಕ್ತನ ದೆಸೆಯಿಂದ ಸಕಲ ಪಾಪಗಳನ್ನು ಹೋಗಲಾಡಿಸುವ ಶಿವಮಹಾತ್ಮ್ಯವನ್ನು ಕೇಳಿ ತಿಳಿದುಕೊಂಡನು. ||೧೪೧||

ಧರ್ಮೋಪದೇಶಕೇ ತಸ್ಮಿಂಸ್ತಸ್ಯಾಭೂದ್ಗಿರಿಶತ್ವಧೀಃ ।
ತೇನ ಧರ್ಮೇಷು ವಿಶ್ವಾಸಸ್ತದುಕ್ತೇಷ್ವಭವತ್ತದಾ ॥೧೪೨॥

ತತಃ ಪರಂ ಸಮುತ್ಥಾಯ ತಂ ಪ್ರಣಮ್ಯಾತಿಭಕ್ತಿತಃ ।
ತ್ವಮೇವ ಗುರುರಿತ್ಯುಕ್ತ್ವಾ ತ್ಯಕ್ತನಿದ್ರೋಽಪ್ಯಭೂದ್ದ್ವಿಜಃ ॥೧೪೩॥

ತಸ್ಮಾತ್ಕುಮಾರಾಃ ಸರ್ವಾಣಿ ಪುಷ್ಪಾದೀನಿ ವಿಶೇಷತಃ ।
ಭೂತಿಯುಕ್ತಾನಿ ದೇಯಾನಿ ಮೂಲಮಂತ್ರೇಣ ಶಂಭವೇ ॥೧೪೪॥

ಅಪೂತಮಪಿ ಪೂತಂ ಸ್ಯಾದ್ಭಸ್ಮನಾ ಸಂಯುತಂ ಯದಿ ।
ತಸ್ಮಾದ್ಭಸ್ಮಯುತಂ ದೇಯಂ ಲಿಂಗೇ ಬಿಲ್ವಾದಿಕಂ ಸುತಾಃ ॥೧೪೫॥

ಯದಿ ಸ್ಯಾದ್ಭಸ್ಮರಹಿತಂ ಪೀಯೂಷಮಪಿ ತತ್ಪರಃ ।
ವಿಷಮಿತ್ಯವಗಂತವ್ಯಂ ತತೋ ನೇಶಾರ್ಪಣಂ ಹಿ ತತ್ ॥೧೪೬॥

---

ಧರ್ಮೋಪದೇಶಕನಾದ ಆ ಭಕ್ತನು ಸಾಕ್ಷಾತ್ ಶಿವನೇ ಆಗಿರುವನೆಂದು ಈ ಬ್ರಾಹ್ಮಣನು ತಿಳಿದುಕೊಂಡನು. ಆದುದರಿಂದ ಅವನು ಉಪದೇಶಿಸಿದ ಧರ್ಮಗಳಲ್ಲಿ ಇವನಿಗೆ ದೃಢವಾದ ನಂಬಿಕೆಯುಂಟಾಯಿತು. ॥೧೪೨॥

ತರುವಾಯ ಮೇಲಕ್ಕೆದ್ದು ಧರ್ಮೋಪದೇಶಕನಾದ ಆ ಭಕ್ತನನ್ನು ವಂದಿಸಿ, ನೀನೇ ನನ್ನ ಗುರುವಾಗಿರುವೆ, ಎಂದು ಹೇಳಿದನು. ಅಷ್ಟರೊಳಗೆ ಆ ದ್ವಿಜನು ನಿದ್ದೆಯಿಂದ ಎಚ್ಚೆತ್ತನು." ॥೧೪೩॥

ಎಲೈ ಕುಮಾರರೇ, ಆದುದರಿಂದ ಶಿವನಿಗೆ ಅರ್ಪಿಸುವ ಪುಷ್ಪಗಳೇ ಮುಂತಾದುವುಗಳನ್ನು ಮೊದಲು ವಿಭೂತಿಯಿಂದ ಪವಿತ್ರೀಕರಿಸಿ ಮೂಲಮಂತ್ರವನ್ನು ಉಚ್ಚರಿಸುತ್ತಾ ಅವುಗಳನ್ನು ಶಿವನಿಗೆ ಅರ್ಪಿಸಬೇಕು. ॥೧೪೪॥

ಎಲೈ ಪುತ್ರರೇ, ಅಶುದ್ಧವಾದ ವಸ್ತುವಾದರೂ ಸಹ ಭಸ್ಮದಿಂದ ಕೂಡಿದುದಾದರೆ ಅದು ಶುದ್ಧವಾಗುವುದು. ಆದುದರಿಂದ ಬಿಲ್ವಪತ್ರೆಯೇ ಮುಂತಾದ ಪೂಜಾದ್ರವ್ಯವನ್ನು ಭಸ್ಮದಿಂದ ಶುದ್ಧಿಗೊಳಿಸಿ ಬಳಿಕ ಅದನ್ನು ಲಿಂಗಕ್ಕೆ ಅರ್ಪಿಸಬೇಕು. ॥೧೪೫॥

ವಿಭೂತಿಯಿಂದ ರಹಿತವಾದರೆ ಅಮೃತವೂ ಸಹ ವಿಷವಾಗಿ ಪರಿಣಮಿಸುವುದೆಂದು ತಿಳಿಯಬೇಕು. ಆದುದರಿಂದ ವಿಭೂತಿರಹಿತವಾದ ಆ ಅಮೃತವೂ ಕೂಡ ಶಿವನಿಗೆ ನಿವೇದಿಸಲು ಯೋಗ್ಯವಲ್ಲ. ॥೧೪೬॥

ಹಾರೇಷ್ವಪಿ ದುಕೂಲೇಷು ಸುವರ್ಣಾಭರಣೇಷ್ವಪಿ ।
ಭೂತಿರ್ದೇಯಾ ಪ್ರಯತ್ನೇನ ಮಹೇಶವಿನಿವೇದನೇ ॥೧೪೭॥

ಶಿವೇ ನೈವೇದ್ಯಪಾಕಾರ್ಥಂ ಪ್ರವೃತ್ತೈರ್ಭೂತಿಸಂಯುತೈಃ ।
ಪಾಕಾಗಾರಪ್ರವೇಶೋಽಪಿ ಕರ್ತವ್ಯೋ ಯತ್ನಪೂರ್ವಕಂ ॥೧೪೮॥

ಪಾಕಾಗಾರೇಽಪಿ ದೇಯಂ ಸ್ಯಾದ್ಭಸ್ಮ ಕಿಂಚಿಜ್ಜಲಾನ್ವಿತಂ ।
ಶಾಕೇ ಜಲೇ ತಂಡುಲೇಷು ಮುದ್ಗಾದಿಷ್ವಪಿ ಯತ್ನತಃ ॥೧೪೯॥

ತೇನ ಕೀಟಾದಿಸಂಬಂಧದೋಷೋಽಪಿ ಸ ವಿನಶ್ಯತಿ ।
ಭೂತಿರ್ನೈವೇದ್ಯಪಾತ್ರೇಽಪಿ ಪ್ರದೇಯಾ ಜಲಸಂಯುತಾ ॥೧೫೦॥

ಭೂತಿರುದ್ರಾಕ್ಷಪೂತಾಂಗೈರ್ನೈವೇದ್ಯಮಪಿ ಯತ್ಸ್ಕೃತಂ ।
ತದ್ಗೃಹ್ಣಾತಿ ಮಹಾದೇವಸ್ತದೇವ ಹಿ ಸುಧಾಮಯಂ ॥೧೫೧॥

---

ಹಾರಗಳು, ಪಟ್ಟವಸ್ತ್ರಗಳು, ಇನ್ನಿತರ ಆಭರಣಗಳು ಇವುಗಳನ್ನು ಭಕ್ತಿಯಿಂದ ಶಿವನಿಗೆ ನಿವೇದಿಸುವ ಕಾಲದಲ್ಲಿ ಅವುಗಳ ಮೇಲೆ ವಿಭೂತಿಯನ್ನು ಇರಿಸಿ ಬಳಿಕ ಶಂಕರನಿಗೆ ಅರ್ಪಿಸಬೇಕು. ॥೧೪೭॥

ಶಿವನಿಗೆ ನಿವೇದಿಸಲು ಯೋಗ್ಯವಾದ ಆ ಉಪಹಾರಗಳನ್ನು ಸಿದ್ಧಪಡಿಸುವ ಪಾಚಕರು ಪಾಕಶಾಲೆಯನ್ನು ಪ್ರವೇಶಿಸುವಾಗ ತಪ್ಪದೇ ವಿಭೂತಿಯನ್ನು ಧರಿಸಿಯೇ ಪ್ರವೇಶಿಸಬೇಕು. ॥೧೪೮॥

ಭಸ್ಮವನ್ನು ನೀರಿನಲ್ಲಿ ಕದಡಿ ಅದನ್ನು ಪಾಕಶಾಲೆಯಲ್ಲಿ ಪ್ರೋಕ್ಷಿಸಬೇಕು. ಹಾಗೆಯೇ ಕಾಯಿಪಲ್ಯ, ನೀರು, ಅಕ್ಕಿ, ಹೆಸರು, ಉದ್ದು ಮುಂತಾದ ಪಾಕೋಪಯುಕ್ತವಾದ ಪದಾರ್ಥಗಳನ್ನು ಮೊದಲು ಭಸ್ಮದಿಂದ ಶುದ್ಧಿಗೊಳಿಸಬೇಕು. ॥೧೪೯॥

ಹಾಗೆ ಮಾಡುವುದರಿಂದ, ಕ್ರಿಮಿಕೀಟಾದಿಗಳಿಂದುಂಟಾಗುವ ಬಾಧೆಯು ತಪ್ಪುವುದು. ನೈವೇದ್ಯವನ್ನಿರಿಸುವ ಪಾತ್ರೆಯಲ್ಲಿಯೂ ಸಹ, ಜಲಮಿಶ್ರಿತವಾದ ವಿಭೂತಿಯನ್ನು ಹಾಕಬೇಕು. ॥೧೫೦॥

ವಿಭೂತಿ, ರುದ್ರಾಕ್ಷ, ಇವುಗಳನ್ನು ಧರಿಸಿದವರು ಸಿದ್ಧಗೊಳಿಸಿದ ನೈವೇದ್ಯವನ್ನು. ಶಿವನು ಸಂತೋಷದಿಂದ ಸ್ವೀಕರಿಸುವನು. ಅದು ಅವನಿಗೆ ಅಮೃತವಂತಿರುವುದು. ॥೧೫೧॥

ಕಿಂ ತಯಾ ಸುಧಯಾ ಪುತ್ರಾಃ ಕಿಂಚಿದ್ಭಸ್ಮಾನ್ವಿತಂ ಯದಿ ।
ಜಲಮಪ್ಯರ್ಪಿತಂ ಭಕ್ತ್ಯಾ ತದೀಶಾಯ ಸುಧಾಂ ವಿದುಃ ॥೧೫೨॥

ಪೂಜನಂ ಚ ಮಹೇಶಸ್ಯ ಭೂತಿರುದ್ರಾಕ್ಷಭೂಷಣೈಃ ।
ಕರ್ತವ್ಯಮತಿಯತ್ನೇನ ಮೂಲಮಂತ್ರೇಣ ಭಕ್ತಿತಃ ॥೧೫೩॥

ಯಃ ಪಂಚಾಕ್ಷರಮುಚ್ಚರನ್ನತಿಸಿತಾಂ ಭೂತಿಂ ವಹನ್ ಮಸ್ತಕೇ
ಭಾಲೇ ವಕ್ಷಸಿ ಬಾಹುದಂಡಯುಗಲೇ ರುದ್ರಾಕ್ಷಮಾಲಾಮಪಿ ।
ಶರ್ವಾರಾಧನತತ್ಪರೋ ಜಲಲವೈರ್ಬಿಲ್ವೈಶ್ಚ ದೂರ್ವಾಂಕುರೈಃ
ಪುಷ್ಪೈರ್ವಾ ಸ ಶಿವಂ ಪ್ರಯಾತಿ ಸ ಪರಂ ಧನ್ಯೋತ್ತಮೋ ವಸ್ತುತಃ॥೧೫೪॥

ತ್ಯಜ ತ್ಯಜ ತಟಿನ್ನಟೀವಿಧಿವಧೂಟಿಕಾಚೇಟಿಕಾ
ವಿಕಾರಕರಮಿಂದಿರಾರುಚಿರಭೂವಿಹಾರಂ ಪರಂ ।

---

ಎಲೈ, ಕುಮಾರರೇ ! ಕೇವಲವಾದ ಉದಕವಾದರೂ ಸರಿ. ಅದು ವಿಭೂತಿಯಿಂದ ಮಿಶ್ರಿತವಾಗಿದ್ದರೆ, ಅದನ್ನೇ ಈಶ್ವರನಿಗೆ ಭಕ್ತಿಯಿಂದ ನಿವೇದಿಸಬೇಕು. ಅದು ಅವನಿಗೆ ಅಮೃತಪ್ರಾಯವಾಗುವುದು. ವಿಭೂತಿಯಿಂದ ಕೂಡಿರುವ ಶಿವನೈವೇದ್ಯವೇ ಅಮೃತವು. ಅದನ್ನು ಬಿಟ್ಟು ಬೇರೆಯ ಅಮೃತವಿರುವುದಿಲ್ಲವೆಂದು ಜ್ಞಾನಿಗಳು ಹೇಳುವರು. ॥೧೫೨॥

ವಿಭೂತಿ, ರುದ್ರಾಕ್ಷ, ಇವುಗಳನ್ನು ಧರಿಸಿ, ತಪ್ಪದೇ ಶಿವನ ಮೂಲಮಂತ್ರವನ್ನುಚ್ಚರಿಸುತ್ತಾ ಶಿವನನ್ನು ಭಕ್ತಿಯಿಂದ ಪೂಜಿಸಬೇಕು. ॥೧೫೩॥

ಯಾವ ಭಕ್ತನು, ಶಿವಪಂಚಾಕ್ಷರ ಮಂತ್ರವನ್ನುಚ್ಚರಿಸುತ್ತಾ ಶಿರಸ್ಸು, ಹಣೆ, ವಕ್ಷಃಸ್ಥಲ, ಭುಜ, ಕೈತೋಳು ಇವುಗಳಲ್ಲಿ ಪರಿಶುದ್ಧವಾದ ವಿಭೂತಿಯನ್ನೂ ಮತ್ತು ರುದ್ರಾಕ್ಷಮಾಲೆಯನ್ನೂ ಧರಿಸಿ, ಉದಕ, ಬಿಲ್ವಪತ್ರೆ, ದೂರ್ವೆ, ಹೂವು, ಇವುಗಳಿಂದ ಈಶ್ವರನನ್ನು ಪೂಜಿಸುವುದರಲ್ಲಿ ಆಸಕ್ತನಾಗುವನೋ, ಅವನು, ಅಂತ್ಯಕಾಲದಲ್ಲಿ ಶಿವಸಾನ್ನಿಧ್ಯವನ್ನು ಹೊಂದುವನು. ಅವನೇ ನಿಜವಾಗಿಯೂ ಪುಣ್ಯಶಾಲಿಗಳಲ್ಲಿ ಶ್ರೇಷ್ಠತಮನೆನಿಸಿಕೊಳ್ಳುವನು. ॥೧೫೪॥

ಎಲೈ ಮಕ್ಕಳಿರಾ, ಮಿಂಚಿನಂತೆ ಚಂಚಲಳಾದ ಲಕ್ಷ್ಮೀವಿಲಾಸದಿಂದಲೂ, ಬ್ರಹ್ಮನ ರಾಣಿಯೆನಿಸಿದ ಸರಸ್ವತಿಯ ಬೆಡಗಿನಿಂದಲೂ ತುಂಬಿ ತುಳುಕಾಡುವ ಮನೋಹರವಾದ ಈ ಭೂಲೋಕದ ಸುಖವೆಲ್ಲಾ ಕ್ಷಣಿಕವಾದುದು. ಅದಕ್ಕಾಗಿಯೇ

ಭಜಾಶು ಭಜ ಧೂರ್ಜಟಿಂ ಪಟುಕೃಪೀಟಿಯೋನಿಸ್ಫುರ
ಲ್ಲಲಾಟಪಟಲೋಲ್ಲಸತ್ಸಮಭಿಭೂತಭಾನುಪ್ರಭಂ ॥೧೫೫॥

ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ಮನ್ಮಥ
ದಹನ ವಿಶ್ವಾವಸುಪುತ್ರಸಂವಾದೇ ಶಿವಧರ್ಮಾನುವರ್ಣನೇ
ಸರ್ವಪದಾರ್ಥೇಷು ಭೂತಿಂ ದತ್ವಾ ಶಿವಾಯಾರ್ಪಯೇ
ದಿತಿ ನಿರೂಪಣಂ ನಾಮ ಷಟ್ತ್ರಿಂಶೋಽಧ್ಯಾಯಃ

---

ಮೊದಲು ಇವುಗಳನ್ನು ದೂರಮಾಡಿರಿ. ಹಣೆಯಲ್ಲಿ ಉರಿಯುವ ಅಗ್ನಿಯನ್ನಿಟ್ಟು ಅದರ ಪ್ರತಿಭೆಯಿಂದ ಸೂರ್ಯನನ್ನೂ ಮಂಕುಗೊಳಿಸುವ ಮಹಾದೇವನ ಸ್ವರೂಪವನ್ನು ಧ್ಯಾನಿಸುತ್ತಾ ಕಾಲವನ್ನು ಕಳೆಯಿರಿ. ಅದರಿಂದ ನಿಮಗೆ ಶಾಶ್ವತವಾದ ಆನಂದವು ಲಭಿಸುವುದು" ಎಂದು ವಿಶ್ವಾವಸುವು ತನ್ನ ಮಕ್ಕಳಿಗೆ ಶಿವಮಹಿಮೆಯನ್ನು ವಿವರಿಸಿ ಹೇಳಿದನು. ॥೧೫೫॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಮನ್ಮಥದಹನಮತ್ತು
ವಿಶ್ವಾವಸು ಅವನ ಪುತ್ರರ ಪರಸ್ಪರ ಸಂಭಾಷಣೆಯನ್ನು ವಿವರಿಸುವ ಮತ್ತು
ಸಕಲ ಪದಾರ್ಥಗಳಲ್ಲಿಯೂ ವಿಭೂತಿಬೆರಿಸಿಯೇ ಶಿವನಿಗೆ ನಿವೇದಿಸ
ಬೇಕೆಂಬ ವಿಷಯದಿಂದೊಳಗೊಂಡ,
ಮೂವತ್ತಾರನೆಯ ಅಧ್ಯಾಯವು ಕೊನೆಗಂಡಿತು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಸಪ್ತತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

**ಇತಿ ಪಿತ್ರಾ ಕೃತಾಂ ಶಿಕ್ಷಾಂ ಗೃಹೀತ್ವಾ ಶಿರಸಾ ಸುತಾಃ ।**
**ಪ್ರಣಮ್ಯೋಚುಃ ಪರಂ ತಾತಂ ಶಿವಭಕ್ತರತಂ ಮುದಾ ॥೧॥**

**ಧನ್ಯಾಃ ಸ್ಮಃ ಕೃತಕೃತ್ಯಾಃ ಸ್ಮೋ ಯಸ್ಮಾದಸ್ಮಾಕಮಾಸ್ತಿಕಃ ।**
**ಜನಕೋ ಗಿರಿಜಾಕಾಂತಪಾದುಕಾರಾಧನೋತ್ಸುಕಃ ॥೨॥**

**ಭವಂತಿ ಕರ್ಮಪಾಕೇನ ಬಹವೋ ಜನಕಾ ಅಪಿ ।**
**ಶಾಂಕರೋ ಜನಕೋ ಲೋಕೇ ಭವತ್ಯತ್ಯಂತದುರ್ಲಭಃ ॥೩॥**

---

## ಮೂವತ್ತೇಳನೆಯ ಅಧ್ಯಾಯ

ಬಳಿಕ ಯಾಜ್ಞವಲ್ಕ್ಯಮುನಿಯು ಜನಕರಾಜನನ್ನು ಕುರಿತು ಹೀಗೆಂದನು :— ತಂದೆಯಾದ ವಿಶ್ವಾವಸುವಿನ ಹಿತೋಪದೇಶವನ್ನು ಶ್ರದ್ಧೆಯಿಂದ ಗ್ರಹಿಸಿ, ವಿಶ್ವಾವಸುವಿನ ಮಕ್ಕಳು, ಪೂಜ್ಯನೂ, ಈಶ್ವರಭಕ್ತಾಗ್ರಣಿಯೂ ಆದ ತಂದೆಗೆ ವಂದಿಸಿ ಹೀಗೆಂದರು. ॥೧॥

ಪಿತೃವರ್ಯನೇ ? ನಮ್ಮ ತಂದೆಯಾದ ನೀನು, ಉಮಾರಮಣನಾದ ಪರಮೇಶ್ವರನ ಪಾದಸೇವಕನಾಗಿರುವೆಯಾದುದರಿಂದ ನಿನ್ನ ಮಕ್ಕಳಾದ ನಾವೇ ಪುಣ್ಯಶಾಲಿಗಳು. ನಾವೇ ಕೃತಾರ್ಥರು. ॥೨॥

ಲೋಕದಲ್ಲಿ ಜನರು ತಮ್ಮ ತಮ್ಮ ಪ್ರಾರಬ್ಧಕರ್ಮಗಳ ವಶದಿಂದ ಅನೇಕ

ಅನಾದಿಭೂತೇ ಸಂಸಾರೇ ಸರ್ವದುಃಖಾಕರೋಽಪಿ ನಃ ।
ಜನಕಾಶ್ಚಾಭವನ್ಪೂರ್ವಮೀದೃಶೋ ಜನಕಃ ಕುತಃ ॥೪॥

ಯದಿ ಸ್ಯಾಚ್ಛಾಂಕರಸ್ತಾತಃ ಪೂರ್ವಪೂರ್ವಭವೇ ತದಾ ।
ಜನಿರೇವ ತತೋ ನ ಸ್ಯಾದ್ದೇಹಯೋಗೋಽಪಿ ದುಸ್ಸಹಃ ॥೫॥

ತಪಃ ಫಲಿತಮಸ್ಮಾಕಂ ತ್ವತ್ಪುತ್ರತ್ವಪ್ರಭಾವತಃ ।
ಅತಃ ಪರಂ ನ ದುಃಖಾನಿ ಪಿತಃ ಸಂಭಾವಿತಾನ್ಯಪಿ ॥೬॥

ಅಭ್ಯಸ್ತಾ ಶಾಂಭವೀ ವಿದ್ಯಾ ಪರಂ ತ್ವತ್ಕೃಪಯಾ ತಯಾ ।
ವಿದ್ಯಯಾ ಕೇವಲಂ ತಾತ ದುಃಖಸಂಭಾವನಾಪಿ ನ ॥೭॥

ಅತಃ ಪರಮನೇನೈವ ಜನ್ಮನಾ ಮುಕ್ತಿರೇವ ನಃ ।
ಭವಿಷ್ಯತಿ ನ ಸಂದೇಹಃ ಶಿವಭಕ್ತಸುತತ್ವತಃ ॥೮॥

---

ಜನ್ಮಗಳನ್ನೆತ್ತಿ ಅನೇಕ ಜನ ತಂದೆಯರನ್ನು ಹೊಂದುವರು. ಆದರೆ, ಈಶ್ವರಭಕ್ತನಾದ ಜನಕನು ಲಭಿಸುವುದು ದುರ್ಲಭ. ॥೩॥

ಅನಾದಿಯಾದ ಮತ್ತು ಸಕಲದುಃಖಗಳಿಗೆ ಆಶ್ರಯವಾದ ಈ ಜನ್ಮ ಪರಂಪರೆಯಲ್ಲಿ ಇದುವರೆಗೆ ನಮಗೆ ಅನೇಕ ಜನಕರು ಲಭಿಸಿದ್ದರು. ಆದರೆ, ಇಂತಹ ಈಶ್ವರಭಕ್ತನಾದ ಜನಕನು ಇದುವರೆಗೂ ನಮಗೆ ದೊರಕಿರಲಿಲ್ಲ. ॥೪॥

ಹಿಂದಿನ ಜನ್ಮಗಳಲ್ಲಿ ನಮಗೆ ಈಶ್ವರಭಕ್ತನಾದ ತಂದೆಯು ದೊರಕಿದ್ದರೆ, ಈಗ, ಸಹಿಸಲಸಾಧ್ಯವಾದ ಈ ಜನ್ಮವು ನಮಗೆ ಬರುತ್ತಲೇ ಇರಲಿಲ್ಲ. ॥೫॥

ಜನಕನೇ! ಈ ಜನ್ಮದಲ್ಲಿ ನಾವು ನಿನ್ನ ಪುತ್ರರಾಗಿ ಜನಿಸಿರುವುದರಿಂದ ನಮ್ಮ ಪೂರ್ವಜನ್ಮದ ತಪಸ್ಸು ಫಲಿಸಿದಂತಾಗಿರುವುದು. ಇನ್ನು ಮುಂದೆ ಬಗೆಬಗೆಯಾದ ಸಂಸಾರದುಃಖಗಳು ಎಂದಿಗೂ ಸಂಭವಿಸಲಾರವು. ॥೬॥

ಪಿತೃವರ್ಯನೇ! ನಿನ್ನ ಅನುಗ್ರಹದಿಂದ, ಶ್ರೇಷ್ಠತಮವಾದ ಶಿವವಿದ್ಯೆಯನ್ನು ಚೆನ್ನಾಗಿ ಅರಿತಿರುವೆವು. ಆ ವಿದ್ಯೆಯ ಪ್ರಭಾವದಿಂದ ಇನ್ನು ನಮಗೆ ದುಃಖಗಳ ಸುಳಿವೇ ಇರುವುದಿಲ್ಲ. ॥೭॥

ಈಶ್ವರ ಭಕ್ತನಾದ ನಿನಗೆ ಮಕ್ಕಳಾಗಿ ಜನಿಸಿರುವುದರಿಂದ ನಮಗೆ ಈ ಜನ್ಮದಲ್ಲಿಯೇ ಮೋಕ್ಷವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ. ॥೮॥

ಯೇ ಶಾಂಕರಕುಮಾರಾಸ್ತೇ ಕುಮಾರೇಣ ಸಹಾದರಾತ್ ।
ಕ್ರೀಡಾಂ ಕುರ್ವಂತಿ ತೇ ತಾವದ್ಧನ್ಯಾ ಧನ್ಯಾ ಇತಿ ಸ್ಮೃತಾಃ ॥೯॥

ಹಾರೋಪಹಾರರಸಪುಷ್ಟಶರೀರಯೋಗಾ
ಜ್ಞಾತಂ ಶರೀರಮಿತಿ ಜನ್ಮಜರಾವಿನಾಶಾಃ ।
ನೈವ ಸ್ಪೃಶಂತಿ ಸಕೃದಪ್ಯತ ಏವ ಧನ್ಯಾಃ
ಸರ್ವೇಽಪಿ ಶಾಂಕರಕುಮಾರವರಾಃ ಕುಮಾರಾಃ ॥೧೦॥

ಅಸ್ಮಾಭಿರಿಂದುಶಕಲಾಭರಣಾರ್ಚನೇನ
ನೇಯಃ ಕಿಯಾನಪಿ ಖಲಃ ಖಲು ಕಾಲ ಏವ ।
ತಂ ಕಾಲಕಾಲಕಲನೇನ ನಯಂತಿ ಕಾಲಂ
ತೇನೈವ ಕಾಲಜನಿತಾಪಿ ನ ಭೀತಿರೇವ ॥೧೧॥

---

ಯಾರು ಈಶ್ವರಭಕ್ತಾಗ್ರಣಿಯ ಮಕ್ಕಳಾಗಿ ಜನಿಸಿ, ಅಂತ್ಯದಲ್ಲಿ ಮೋಕ್ಷವನ್ನು ಹೊಂದುವರೋ ಅವರು ಈಶ್ವರನ ಸಾನ್ನಿಧ್ಯದಲ್ಲಿ ಈಶ್ವರ ಪುತ್ರನಾದ ಕುಮಾರಸ್ವಾಮಿಯೊಂದಿಗೆ ವಿಹರಿಸುವರು. ಅಂತಹವರನ್ನು ಅತ್ಯಂತ ಪುಣ್ಯಶಾಲಿಗಳೆಂದು ತಿಳಿಯುವರು. ॥೯॥

ಈಶ್ವರ ಭಕ್ತಾಗ್ರಣಿಯಿಂದ ಜನಿಸಿದ ಪುತ್ರರ ದಿವ್ಯವಾದ ಶರೀರಾವಯವಗಳು ಈಶ್ವರನೈವೇದ್ಯದ ಭಕ್ಷಣೆಯಿಂದ ಬೆಳೆದವುಗಳು. ಆದುದರಿಂದಲೇ ಅವರಿಗೆ ಜನ್ಮ, ಜರಾ, ಮರಣಗಳೆಂಬ ವಿಕಾರಗಳು ಸಂಭವಿಸುವುದಿಲ್ಲ. ಮತ್ತೂ ಅವರು ಅತ್ಯಂತ ಪುಣ್ಯಶಾಲಿಗಳು. ಅಂತ್ಯದಲ್ಲಿ ಅವರು ಈಶ್ವರಸಾನ್ನಿಧ್ಯವನ್ನು ಹೊಂದಿ ಕುಮಾರಸ್ವಾಮಿಯಂತೆ ಈಶ್ವರನಿಗೆ ಪ್ರಿಯರಾಗುವರು. ॥೧೦॥

ಈಗ ನಾವು ಚಂದ್ರಶೇಖರನ ಆರಾಧನೆಯಿಂದ ಕಠಿನವಾದ ಈ ಕಾಲವನ್ನು ಕಳೆಯಬೇಕಾಗಿರುವುದು. ಸತ್ಪುರುಷರು ಮೃತ್ಯುಂಜಯನಾದ ಪರಶಿವನನ್ನು ಧ್ಯಾನಿಸುತ್ತಾ ತಮ್ಮ ಕಾಲವನ್ನು ಕಳೆಯುತ್ತಿರುವರು. ಆದುದರಿಂದಲೇ ಅವರಿಗೆ ಮೃತ್ಯುಭಯವಿರುವುದಿಲ್ಲ. ॥೧೧॥

ಸಂಸಾರದುಃಖವಿನಿವಾರಕಮಿಂದುಮೌಳಿ
ಮಾಖಂಡಲಾದಿಸುರವಂದಿತಪಾದಮೂಲಂ ।
ಆಜಾನುದೀರ್ಘಕರಪದ್ಮಧೃತೋರ್ಧ್ವಶೂಲಂ
ವಂದಾಮಹೇ ಗಲತಲಾಮಲನೀಲಜಾಲಂ ॥೧೨॥

ದೇವಾಧಿದೇವ ಇತಿ ಶಂಕರ ಏವ ವೇದೈಃ
ವೃಂದಾರಕೈರಪಿ ತಥಾ ಮುನಿಸಿದ್ಧವೃಂದೈಃ ।
ಯಃ ಸಂಸ್ತುತೋ ಮುಹುರಪಾರಗುಣಪ್ರವಾಹ
ಸ್ತಂ ತಾವದಾದರವರೈರ್ಹರಮಾಶ್ರಯಾಮಃ ॥೧೩॥

ಯಃ ಫಾಲಲೋಚನ ಇತಿ ಪ್ರಥಿತಃ ಸುರೇಷು
ಯಶ್ಚಂದ್ರಖಂಡಲಲಿತೋನ್ನತದೀರ್ಘಮೌಲಿಃ ।
ಯಃ ಸರ್ವದೇವಮುನಿಕಿನ್ನರಸಿದ್ಧಸೇವ್ಯ
ಸ್ತಂ ಶೈಲರಾಜತನಯಾಪತಿಮಾಶ್ರಯಾಮಃ ॥೧೪॥

---

ಸಂಸಾರದುಃಖಗಳನ್ನು ಹೋಗಲಾಡಿಸುವವನೂ, ಇಂದ್ರಾದಿದೇವತೆಗಳಿಂದಲೂ ವಂದಿತವಾದ ಪಾದತಲದಿಂದ ಶೋಭಿಸುವವನೂ, ಚಂದ್ರಶೇಖರನೂ, ಆಜಾನುಬಾಹುವೂ, ಕೈಗಳಿಂದ ತನ್ನ ತ್ರಿಶೂಲವನ್ನು ಮೇಲಕ್ಕೆ ಹಿಡಿದೆತ್ತಿರುವವನೂ, ನೀಲಕಂಠನೂ ಆದ ಆ ಪರಶಿವನಿಗೆ ನಮಸ್ಕರಿಸುವೆವು. ॥೧೨॥

ವೇದಗಳು, ದೇವತೆಗಳು, ಮುನಿಗಳು ಮತ್ತು ಸಿದ್ಧರು, ಯಾವ ಶಿವನನ್ನೇ ದೇವಾಧಿದೇವನೆಂದು ಸ್ತುತಿಸಿರುವರೋ, ಅನಂತ ಕಲ್ಯಾಣಗುಣಗಳಿಗೆ ಆಶ್ರಯನಾದ ಆ ಶಿವನನ್ನು ನಾವು ಪ್ರೀತಿಯಿಂದ ಮೊರೆಹೊಗುವೆವು. ॥೧೩॥

ಯಾವ ದೇವನು ಮುಕ್ಕಣ್ಣನೆಂದು ದೇವತೆಗಳಲ್ಲಿ ಪ್ರಸಿದ್ಧಿಹೊಂದಿರುವನೋ, ಯಾವನು ಬಾಲಚಂದ್ರನನ್ನು ತನ್ನ ಶಿರಸ್ಸಿನಲ್ಲಿ ಧರಿಸಿ, ಉನ್ನತವೂ ದೀರ್ಘವೂ ಆದ ಕಿರೀಟದಿಂದ ಶೋಭಿಸುವನೋ ಮತ್ತು, ಯಾವ ದೇವನನ್ನು ಸಕಲ ದೇವತೆಗಳು, ಮುನಿಗಳು, ಕಿನ್ನರರು, ಸಿದ್ಧರು ಆರಾಧಿಸುವರೋ ಗಿರಿಜಾವಲ್ಲಭನಾದ ಅಂತಹ ಪರಶಿವನನ್ನು ನಾವು ಆಶ್ರಯಿಸುವೆವು. ॥೧೪॥

ಯಃ ಸೃಷ್ಟಿಪಾಲನವಿನಾಶಕರೋಽತಿಶೂರೋ
ಗೌರೀವಿಹಾರಚತುರೋ ಮುಹುರಾದರೇಣ ।
ಯಃ ಕಾಲಜಾತಭಯಜಾತನಿವಾರಕೋಽಪಿ
ತಂ ನೀಲಕಂಠಮನಿಶಂ ಶರಣಂ ವ್ರಜಾಮಃ ॥೧೫॥

ಅಸ್ಮಾಭಿರೀಶ್ವರಪದಾಂಬುಜರೇಣುಗೌರೈಃ
ಗೌರೀಕರಾನನವಿಲೋಚನಚಿಂತನೇನ ।
ನೇಯಂ ವಯೋ ನ ವಯಮನ್ಯದುಪಾಶ್ರಯಾಮಃ
ಪ್ರಾಣಪ್ರಯಾಣಸಮಯೇಽಪಿ ಶಿವೇ ಶಪಾಮಃ ॥೧೬॥

ಗೌರೀಮನೋರಮಣಚಾರುತರಾಂಘ್ರಿಪದ್ಮ
ಸದ್ಮಾನುಧಾವನವಿಧಾನಮನಃಪ್ರಸಾದೈಃ ।
ಅಸ್ತಾವಸಾದಗಿರಯೋ ಗಿರಿರಾಜಕನ್ಯಾ
ವಿನ್ಯಸ್ತಹಸ್ತಮನಿಶಂ ಶರಣಂ ವ್ರಜಾಮಃ ॥೧೭॥

---

ಯಾವ ದೇವನು, ಜಗತ್ತಿನ, ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿ ಅತ್ಯಂತ ಶೂರನೂ ಆಗಿರುವನೋ, ಯಾವನು ಪ್ರೇಯಸಿಯಾದ ಗಿರಿಜೆಯೊಂದಿಗೆ ತನ್ನ ಹಾವಭಾವಗಳನ್ನು ತೋರ್ಪಡಿಸಿ ವಿಹರಿಸುವುದಲ್ಲಿ ನಿಪುಣನಾಗಿರುವನೋ, ಮತ್ತು ಯಾವ ದೇವನು ಮೃತ್ಯುವಿನಿಂದುಂಟಾಗುವ ಭಯಪರಂಪರೆಗಳನ್ನು ಹೋಗಲಾಡಿಸುವ ಸಾಮರ್ಥ್ಯವನ್ನು ಹೊಂದಿರುವನೋ, ನೀಲಕಂಠನಾದ ಆ ಪರಶಿವನನ್ನು ನಾವು ಮೊರೆಹೋಗುವೆವು. ॥೧೫॥

ಈಶ್ವರನ ಅಡಿದಾವರೆಗಳ ಧೂಳಿನಿಂದ ಪರಿಶುದ್ಧರಾದ ನಮಗೆ ಶಿವನ ವಲ್ಲಭೆಯಾದ ಪಾರ್ವತಿಯ ಕೈಗಳು, ಸುಂದರವಾದ ಮುಖ, ಮತ್ತು ನೇತ್ರಗಳು ಇವುಗಳ ಧ್ಯಾನದಿಂದಲೇ ಕಾಲವನ್ನು ಕಳೆಯುವುದು ಯೋಗ್ಯವಾಗಿರುವುದು. ಅದನ್ನು ಬಿಟ್ಟು ನಾವು ಇನ್ನೇನನ್ನೂ ಆಶ್ರಯಿಸಲಾರೆವು. ಈ ಪ್ರಾಣಗಳು ಈ ಶರೀರವನ್ನು ತೊರೆದು ಹೋಗುವ ಕಾಲದಲ್ಲೂ ನಾವು ಶಿವನನ್ನೇ ಆರಾಧಿಸುವೆವಲ್ಲದೇ ಇನ್ನಾವ ದೇವತೆಗಳನ್ನೂ ಆರಾಧಿಸಲಾರೆವು. ॥೧೬॥

ಗೌರೀಮನೋಹ್ಲಾದಕರನಾದ ಮಹಾದೇವನ ಪಾದಪದ್ಮಗಳಲ್ಲಿ ನಮ್ಮ ಮನಸ್ಸನ್ನು ಸ್ಥಿರವಾಗಿರಿಸಿ, ತನ್ಮೂಲಕ ಚಿತ್ತಶುದ್ಧಿಯನ್ನೂ ಪಡೆದು ನಮ್ಮ ಪಾಪ

ಗೌರೀಮನೋರಮಣಚಾರುಭುಜಾಂತರಾಳ
ಕಾಶ್ಮೀರಸಾರಘನಸಾರರಸಾತಿಗೌರಂ ।
ಹಾರಾತಿಧೀರತರುಣಾರುಣರೇಣುವಾಣೀ
ಪೂರಾತಿಶೋಣಚರಣಾಂಬುರುಹಂ ಭಜಾಮಃ ॥೧೮॥

ಇತಿ ಪುತ್ರವಚೋವೀಚೀಪ್ರಪಂಚಚತುರಾದರಃ ।
ಹಾರೋ ವಿಶ್ವಾವಸುಃ ಪ್ರೀತಃ ಕುಮಾರಾನಾಹ ವಿಸ್ಮಿತಃ ॥೧೯॥

ಧನ್ಯಂ ಮಮಾಪಿ ಭವತಾಮಪಿ ಸಂಗಮೇನ
ಜನ್ಮೇದಮುತ್ತಮಕುಲಪ್ರಭವಸ್ಯ ಭಾವ್ಯೈಃ ।
ಸಂಭಾವಿತಃ ಖಲು ಸಮಾಗಮಮುತ್ಸ್ಯಪೇಂದ್ರೋ
ಬ್ರಹ್ಮಾಪಿ ವೇದ ತದಿದಂ ಸಫಲಂ ಶರೀರಂ ॥೨೦॥

---

ಪರ್ವತಗಳನ್ನೆಲ್ಲಾ ನೀಗಿಕೊಂಡು, ಪಾರ್ವತಿಯನ್ನು ಆಲಂಗಿಸಿಕೊಂಡಿರುವ ಮಹಾದೇವನನ್ನು ಸರ್ವದಾ ಧ್ಯಾನಮಾಡೋಣ. ಮತ್ತು ಅವನನ್ನೇ ಮೊರೆ ಹೊಂದೋಣ. ॥೧೭॥

ಪಾರ್ವತೀಪತಿಯಾದ ಮಹಾದೇವನ ಭುಜಾಂತರಾಳದಲ್ಲಿರುವ ಪಾರ್ವತಿಯು ಕಾಶ್ಮೀರ ದೇಶದ ಶ್ರೀಗಂಧಸಾರದಿಂದ ಶುಭ್ರವರ್ಣವಿಶಿಷ್ಟಳಾಗಿ ರಂಜಿಸುತ್ತಿರುವಳು. ಆ ದೇವಿಯಂತೆಯೇ ಶುಭ್ರವಾದ ಕಾಂತಿಯಿಂದ ಬೆಳಗುತ್ತಾ, ಬಾಲ ಸೂರ್ಯನಂತೆ ಕೆಂಪಾಗಿರುವ ಕುಂಕುಮ ಚೂರ್ಣದಿಂದ ರಂಜಿತವಾಗಿರುವ ಶಂಕರನ ಪಾದಕಮಲಗಳನ್ನು ನಾವು ಸರ್ವದಾ ನಂಬಿ ಅವನ ಕೃಪಾತಿಶಯವನ್ನೂ ಸಂಪಾದಿಸಲು ಯತ್ನಿಸುವೆವು." ॥೧೮॥

ಈರೀತಿಯಲ್ಲಿ, ಅಲೆಗಳಂತೆ ಅವ್ಯಾಹತವಾಗಿ ಮಾತನಾಡಿದ ಮಕ್ಕಳ ವಾಕ್ಚಾತುರ್ಯವನ್ನು ನೋಡಿ ವಿಶ್ವಾವಸುವು ಅಚ್ಚರಿಗೊಂಡನು. ಮಕ್ಕಳ ಮಧುರವಾದ ವಾಣಿಯಿಂದ ಅವನು ಸಂತೋಷಭರಿತನಾಗಿ ಅವರನ್ನು ಕುರಿತು ಹೀಗೆಂದನು. ॥೧೯॥

" ಎಲೈ, ಪುತ್ರರೇ! ನನ್ನ ಮತ್ತು ನಿಮ್ಮ ಈ ಪರಸ್ಪರ ಪಿತೃಪುತ್ರಭಾವವು ಒದಗಿದುದರಿಂದ ಈ ಜನ್ಮವು ಸಾರ್ಥಕವಾಯಿತು. ನಮ್ಮ ನಿಮ್ಮ ಈ ಸಂಮೇಲನವು

ಏತಚ್ಛರೀರಮನಿಶಂ ಶಿವಪೂಜನೇನ
ತಾವತ್ಪವಿತ್ರಮಧುನಾ ಶಿವಪೂಜಕಾನಾಂ ।
ಯುಷ್ಮಾಕಮುಷ್ಯಭಿನವಾಮಿತಹಾರವಾರ್ತಾ
ಪೀಯೂಷಪಾನಪರಿಪುಷ್ಟಮತಿಪ್ರಕೃಷ್ಟಂ ॥೨೧॥

ಶ್ರೀವಿಶ್ವನಾಥಭಜನಸ್ಯ ಫಲಂ ನ ಜಾನೇ
ಕಿಂ ಕಿಂ ಭವತ್ಯನುಪಮಂ ಪರಿಮಾಣಶೂನ್ಯಂ ।
ಏಷಾತಿಶಾಂಭವಸಭಾ ಮುಹುರಾದರೇಣ
ದೃಶ್ಯಾ ದೃಶಾಮಭಿನವಾಮೃತಮಿತ್ಯವೈಮಿ ॥೨೨॥

ಕಾಲೋಽಪಿ ಶಾಂಭವಸಭಾಭಿನವಾಭಿಮಾನ
ವಾರ್ತಾನಿವೃತ್ತನಿಜದೂತಸಮೂಹವೃತ್ತಿಂ ।
ಶ್ರುತ್ವಾಪಿ ತೃಪ್ತಹೃದಯೋ ನಿಲಯೇ ಸ್ವಕೀಯೇ
ವಾರ್ತಾಂ ಕರಿಷ್ಯತಿ ಮುಹುರ್ಮುಹುರಿಂದುಮೌಳೇಃ ॥೨೩॥

---

ಮುಂದಿನ ಶುಭಪರಂಪರೆಗಳನ್ನು ಸೂಚಿಸುವುದು. ನಮ್ಮ ಈ ಶರೀರಗಳು ಕೃತಾರ್ಥ ವಾಗಿರುವುವೆಂಬುದನ್ನು ಬ್ರಹ್ಮ ಮತ್ತು ವಿಷ್ಣು ಇವರಿಬ್ಬರೂ ಅರಿತಿರುವರು. ಮತ್ತೂ ತಾವು ಹಾಗಿರಲು ಅಪೇಕ್ಷಿಸುವರು. ॥೨೦॥

ಈಶ್ವರಾರ್ಚಕರಾದ ಭಕ್ತರ ಶರೀರವು ಅನವರತವೂ ಶಿವನನ್ನು ಆರಾಧಿಸು ವುದರಿಂದ ಅತ್ಯಂತ ಪವಿತ್ರವಾಗುವುದು. ಅದರಲ್ಲಿಯೂ ನಿಮ್ಮ ಶರೀರವು, ಈಶ್ವರ ಕಥೆಯೆಂಬ, ಮಧುರವಾದ ಸುಧೆಯನ್ನು ಪಾನಮಾಡಿ ತೃಪ್ತಿಯನ್ನು ಹೊಂದಿ, ಅತ್ಯಂತ ನಿರ್ಮಲವಾಗಿರುವುದು. ॥೨೧॥

ಈಶ್ವರ ಸೇವೆಯ ಫಲದ ಮಹಿಮೆಯನ್ನೇ ನಾನು ಅರಿಯಲು ಅಸಮರ್ಥ ನಾಗಿರುವೆನು. ಶಿವಸೇವೆಯಿಂದ ಯಾವ ಯಾವ ಬಗೆಯ ಫಲಗಳು ಉಂಟಾಗುವು ವೆಂಬುದನ್ನು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ, ಆ ಫಲವು ಅಪರಿಮಿತವಾಗಿರು ವುದು. ಈಶ್ವರ ಭಕ್ತಾಗ್ರೇಸರರಿಂದ ಕೂಡಿರುವ ಶೈವಸಭೆಯನ್ನು, ಬಾರಿಬಾರಿಗೂ, ಅವಲೋಕಿಸುತ್ತಿದ್ದರೂ ಅದು ನೇತ್ರಗಳಿಗೆ ಹೊಸಹೊಸದಾದ ಅಮೃತಲಹರಿಗ ಳಂತೆ ತೋರುತ್ತಿರುವುದು. ಎಂದು ನಾನು ತಿಳಿಯುವೆನು. ॥೨೨॥

ಈಶ್ವರಭಕ್ತರು, ಗುಂಪುಗುಂಪಾಗಿ ಕೂಡಿ ತಮ್ಮ ಸಭೆಯಲ್ಲಿ ಶಿವಕಥೆಯನ್ನು ಅತ್ಯಂತ ಅಭಿಮಾನದಿಂದ ಲಾಲಿಸುತ್ತಿರುವರೆಂಬ ಅಂಶವನ್ನು ಯಮನು ತನ್ನ

ಅಸ್ಮಾಭಿಃ ಶಿವಲಿಂಗಪೂಜನರತೈರೇಕತ್ರ ನಿತ್ಯಂ ಸದಾ
ಸ್ಥಾತವ್ಯಂ ನಿಯಮೇನ ಶಂಕರಕಥಾಲಾಪೈರ್ವಿನೇಯೋ ಮುಹುಃ ।
ಕಾಲಃ ಕಾಲಭಯಾವಹಃ ಸ ಹಿ ಮಹಾದೇವಾರ್ಚನಾತ್ಯಾದರೋ
ದೂರೇ ತಿಷ್ಠತಿ ನಿಷ್ಠುರೋಽಪಿ ಸ ಶಿವಾಚಾರವ್ರತಾತ್ಯಾದರಃ ॥೨೪॥

ಯೇ ಸಂಸಾರಪರಾಭವಾಯ ಬಹವೋ ಭಾವಾಃ ಪ್ರವೃತ್ತಾಃ ಪುರಾ
ತೇ ತಾವದ್ಗಿರಿಶಾರ್ಚನೇನ ಗಿರಿಶಧ್ಯಾನಾಮೃತೈಃ ಕೇವಲಂ ।
ಸಂತುಷ್ಟಾಃ ಪ್ರಚರಂತಿ ಸಂತತಮುಮಾಕಾಂತಂ ನಿತಾಂತಂ ಹೃದಿ
ಧ್ಯಾತ್ವಾತ್ಯಕ್ತಶಿವೇತರಾಮರಕಥಾವಾರ್ತಾಃ ಕೃತಾರ್ಥಾಃ ಪರಂ ॥೨೫॥

ಏವಂ ಪುತ್ರೈಶ್ಚ ಪೌತ್ರೈಶ್ಚ ಪ್ರಪೌತ್ರೈಶ್ಚಿತ್ರಕರ್ಮಭಿಃ
ಶಾಂಭವೈರನ್ವಿತೋ ರೇಜೇ ವಿಶ್ವಾವಸುರಿತೋ ಯಥಾ ॥೨೬॥

---

ದೂತರ ಮೂಲಕ ಕೇಳಿದ ಮಾತ್ರದಿಂದಲೇ ಅತ್ಯಂತತೃಪ್ತಿಯನ್ನು ಹೊಂದಿ, ತನ್ನ ಆಲಯದಲ್ಲಿ ಕುಳಿತುಕೊಂಡು ಬಾರಿಬಾರಿಗೂ ಪರಮೇಶ್ವರನ ಮಹಿಮೆಯನ್ನು ಹೊಗಳುವನು. ॥೨೩॥

ಶಿವಲಿಂಗ ಪೂಜೆಯಲ್ಲಿ ಆಸಕ್ತರಾದ ನಾವೆಲ್ಲರೂ ಒಂದೇ ಸ್ಥಳದಲ್ಲಿ ಬಿಟ್ಟು, ಅನವರತವೂ ತಪ್ಪದೇ ಶಿವಕಥಾಸಂಕೀರ್ತನದಿಂದ ಕಾಲವನ್ನು ಕಳೆಯಬೇಕು. ಈಶ್ವರಾರ್ಚಕರನ್ನು ಆದರಿಸುವ ಯಮನು ನಮ್ಮನ್ನು ಹಿಂಸಿಸಲಾರನು. ಮೃತ್ಯುವು ಪಾಪಿಗಳಿಗೆ ಭಯಂಕರನಾಗಿ ತೋರಿದರೂ, ಈಶ್ವರ ಪ್ರಿಯವಾದ ಕರ್ಮಾಚರಣೆಗಳಲ್ಲಿ ಬದ್ಧಶ್ರದ್ಧನಾಗಿರುವನು. ॥೨೪॥

ಈ ಹಿಂದೆ, ಸಂಸಾರ ಕ್ಲೇಶಗಳನ್ನು ಹೋಗಲಾಡಿಸುವುದಕ್ಕೋಸ್ಕರ ಪ್ರವೃತ್ತರಾದ ಈಶ್ವರ ಭಕ್ತರು ಶಿವನನ್ನು ಪೂಜಿಸಿ ಈಶ್ವರಧ್ಯಾನಾಮೃತವನ್ನು ಪಾನಮಾಡುವುದರಿಂದಲೇ ತೃಪ್ತರಾಗಿ ಅನವರತವೂ ಉಮಾರಮಣನಾದ ಶಿವನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಇತರ ದೇವತೆಗಳ ಕಥೆಯನ್ನು ತಿರಸ್ಕರಿಸಿ ಈಶ್ವರನನ್ನೇ ಮುಖ್ಯ ದೇವತೆಯೆಂದು ನಂಬಿ ಸಂಚರಿಸಿರುವರು. ಅವರೇ ಅತ್ಯಂತ ಧನ್ಯರು."॥೨೫॥

ಈ ರೀತಿಯಲ್ಲಿ ಈಶ್ವರ ಭಕ್ತನಾದ ಆ ವಿಶ್ವಾವಸುವು, ಶಿವಪ್ರಿಯವಾದ ಮತ್ತು ಬಗೆಬಗೆಯಾದ ಸದಾಚಾರಗಳಿಂದ ಶೋಭಿಸುತ್ತಿರುವ ಮಕ್ಕಳು, ಮೊಮ್ಮಕ್ಕಳು ಮತ್ತು ಮರಿಮಕ್ಕಳೊಡನೆ ಈ ಲೋಕದಲ್ಲಿ ಬಹುಕಾಲ ಆನಂದವನ್ನನುಭವಿಸುತ್ತಾ ಕೊನೆಗೆ ಮುಕ್ತನಾದನು. ॥೨೬॥

ತಸ್ಮಾದಂಬ ತ್ವಯಾ ತಾವಚ್ಚಿರಂ ಶಂಕರಪೂಜಯಾ ।
ಕಾಲೋ ನೇಯಃ ಕುಮಾರಾಸ್ತೇ ಭವಿಷ್ಯಂತ್ಯೇವ ಶಾಂಕರಾಃ ॥೨೭॥

ಯದಿ ಸಂಸಾರವಾರ್ತಾಭಿಃ ಸದಾ ಮಗ್ನಂ ಮನಸ್ತ್ವದಾ ।
ನರಾಕಾವಾಸ ಏವೇತಿ ಶಂಕರಂ ತಾವದರ್ಚಯ ॥೨೮॥

ಇತಿ ಗಂಧರ್ವವಾಕ್ಯಾನಿ ಶ್ರುತ್ವಾ ಸಾ ರಾಜಕನ್ಯಕಾ ।
ತಮಾಹ ಹಾರಗಂಧರ್ವಂ ಸಗರ್ವಂ ಶರ್ವಪೂಜಯಾ ॥೨೯॥

ಸತ್ಯಮುಕ್ತಂ ತಥಾ ತಾವದಿತಿಹಾಸಃ ಪುರಾತನಃ ।
ಶ್ರುತಃ ಪಾಪಾಪಹಾರಾಯ ಸ ಸಂಪದ್ವೃದ್ಧಿಸಾಧನಂ ॥೩೦॥

ಕ್ವ ವಿಶ್ವಾವಸುಭಾಗ್ಯೇನ ಸಮಂ ಭಾಗ್ಯಂ ಭವಿಷ್ಯತಿ ।
ಶಾಂಕರಾಗ್ರೇಸರಾರಾಧ್ಯಃ ಶಿವಾರಾಧನಲಾಲಸಃ ॥೩೧॥

---

ಓ, ಜನನಿಯೇ! ಆದುದರಿಂದ ನೀನೂ ಸಹ, ಆ ವಿಶ್ವಾವಸುವಿನಂತೆ ಅನವರತವೂ ಶಂಕರನನ್ನು ಆರಾಧಿಸುತ್ತಾ ಕಾಲವನ್ನು ಕಳೆ. ನಿನ್ನ ಪುತ್ರರು ಪರಮಶಿವ ಭಕ್ತರಾಗುವರು. ಇದರಲ್ಲಿ ಸಂಶಯವಿಲ್ಲ. ॥೨೭॥

ಚಿತ್ತವು ಯಾವಾಗಲೂ, ಸಾಂಸಾರಿಕ ವಿಷಯಗಳಲ್ಲೇ ಮಗ್ನವಾಗಿದ್ದರೆ, ಅಂತ್ಯಕಾಲದಲ್ಲಿ ನರಕವೇ ಪ್ರಾಪ್ತವಾಗುವುದು. ಆದುದರಿಂದ ಇನ್ನಾದರೂ ಭಕ್ತಿಯಿಂದ ಶಿವನನ್ನು ಆರಾಧಿಸು. ಎಂದು ಆ ಗಂಧರ್ವನು ಉಪದೇಶಿಸಲು ॥೨೮॥

ಬಳಿಕ, ಆ ರಾಜಕನ್ಯೆಯು ಗಂಧರ್ವನ ಆ ಮಾತುಗಳನ್ನು ಕೇಳಿ ಈಶ್ವರ ಪೂಜೆಯಿಂದ ಗರ್ವಿಷ್ಠನಾದ ಆ ಭಕ್ತನನ್ನು ಕುರಿತು ಹೀಗೆಂದಳು. ॥೨೯॥

ಗಂಧರ್ವನೇ ! ನೀನು ಸತ್ಯವನ್ನು ನುಡಿದಿರುವೆ. ನಿನ್ನಿಂದ ನಾನು ಪಾಪ ನಾಶಕರವಾದ ಮತ್ತು ಪ್ರಾಚೀನವಾದ ಇತಿಹಾಸವೊಂದನ್ನು ಕೇಳಿದೆನು. ಅದು ಸಂಪತ್ತನ್ನು ವೃದ್ಧಿಗೊಳಿಸುವುದರಲ್ಲಿ ಶ್ರೇಷ್ಠವಾದ ಸಾಧನವಾಗಿರುವುದು. ॥೩೦॥

ವಿಶ್ವಾವಸುವಿನ ಭಾಗ್ಯಕ್ಕೆ ಸದೃಶವಾದ ಭಾಗ್ಯವು ಯಾರಿಗಿರುವುದು ? ಈಶ್ವರಾರಾಧನೆಯಲ್ಲಿ ನಿಮಗ್ನನಾದವನು ಈಶ್ವರ ಭಕ್ತಾಗ್ರೇಸರರಿಗೂ ಪೂಜ್ಯನಾಗಿರುವನು. ॥೩೧॥

ಯತ್ಪುಣ್ಯಮರ್ಜಿತಂ ತೇನ ಶಂಕರಾರಾಧನೈರ್ಮುಹುಃ ।
ತತ್ಪುಣ್ಯೇನೈವ ತತ್ಪುತ್ರಾಸ್ತಾದೃಶಾಃ ಶಾಂಕರಾಃ ಖಲು ॥೩೨॥

ತತ್ಕಲತ್ರೈಶ್ಚ ಬಹುಧಾ ತ್ರಿನೇತ್ರಾರಾಧನಂ ಕೃತಂ ।
ತೇನಾಪಿ ಪುಣ್ಯಪುಂಜೇನ ಕುಮಾರಾಃ ಶಾಂಕರಾಃ ಖಲು ॥೩೩॥

ಅತ್ಯುತ್ಕೃಷ್ಟಂ ಬೀಜಮಾಸಾದ್ಯ ಕಾಲೇ
ಭೂರುತ್ಕೃಷ್ಟಾ ಕೃಷ್ಟಪಚ್ಯಾ ಮನೋಜ್ಞಾನ್ ।
ಸೂತೇ ಕಿಂ ತೈರ್ವಾಂಕುರಾನ್ ತತ್ರ ದುಷ್ಟೈ
ರ್ಬೀಜೈಸ್ತೇಷಾಂ ಜನ್ಮ ವಾ ಕಿಂ ವದಾಶು ॥೩೪॥

ಕುಮಾರಾಃ ಶಾಂಕರಾಸ್ತಾವದ್ವಸ್ತುತಃ ಪುಣ್ಯಮೂರ್ತಯಃ ।
ತ ಏವ ಪಾವನಾಸ್ತೇಷಾಂ ದರ್ಶನಾದಘಸಂಕ್ಷಯಃ ॥೩೫॥

ಪುಣ್ಯಮಾಕಾರಮಾಸಾದ್ಯ ಶಾಂಕರಃ ಶಂಕರಾರ್ಚನಂ ।
ಕರೋತೀತಿ ಮತಿಸ್ತಾವತ್ಸತಾಮೇವೋಪಜಾಯತೇ ॥೩೬॥

---

ಮಾನವನು ಅನವರತವೂ ಶಿವನನ್ನು ಸೇವಿಸಿದುದರಿಂದ ಉಂಟಾದ ಪುಣ್ಯದ ಮಹಿಮೆಯಿಂದಲೇ ಅವನ ಪುತ್ರರು ಈಶ್ವರನ ಪರಮಭಕ್ತರಾಗುವರು. ॥೩೨॥

ಅವನ ಪತ್ನಿಯರು, ನಾನಾ ಬಗೆಯಿಂದ ಶಿವನನ್ನು ಆರಾಧಿಸುವುದರಿಂದಲೂ ಪುಣ್ಯಸಂಪತ್ತಿನಿಂದಲೂ ಅವರ ಪುತ್ರರು, ಈಶ್ವರ ಭಕ್ತರಾಗುವರು. ಇದು ನಿಶ್ಚಯ. ॥೩೩॥

ಭೂಮಿಯನ್ನು ಚೆನ್ನಾಗಿ ಉತ್ತು, ಸರಿಯಾದ ಕಾಲವನ್ನು ನಿರೀಕ್ಷಿಸಿ, ಆ ಭೂಮಿಯಲ್ಲಿ ಉತ್ಕೃಷ್ಟವಾದ ಬೀಜವನ್ನು ಬಿತ್ತಿದರೆ ಆಗ ಆ ಭೂಮಿಯು ಸಫಲವಾದ ಮೊಳಕೆಗಳನ್ನು ಹೊಂದುವುದು. ಆದರೆ, ಹುಸಿಯಾದ ಬೀಜಗಳನ್ನು ಬಿತ್ತಿದಸೆ ಅವುಗಳಲ್ಲಿ ಒಳ್ಳೆಯ ಅಂಕುರಗಳು ಉದ್ಭವಿಸುವುವೇ ; ಹೇಳು ॥೩೪॥

ಈಶ್ವರಭಕ್ತರಾದ ಆ ಪುತ್ರರು, ನಿಜವಾಗಿಯೂ ಪುಣ್ಯಮೂರ್ತಿಗಳು. ಅವರೇ ಪವಿತ್ರರು. ಅವರ ದರ್ಶನದಿಂದ ಪಾಪಗಳು ನಿರ್ಮೂಲವಾಗಿ ಕ್ಷಯಿಸುವುವು. ॥೩೫॥

ಈಶ್ವರಭಕ್ತನು, ತನ್ನ ಪೂರ್ವಜನ್ಮದ ಸುಕೃತವಿಶೇಷದ ಮಹಿಮೆಯಿಂದ, ಈ ಜನ್ಮದಲ್ಲಿ, ಭಾಗ್ಯಶಾಲಿಗಳ ಮನೆಯಲ್ಲಿ ಜನಿಸಿ ಶಿವನನ್ನು ಆರಾಧಿಸುವನೆಂಬು

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಶೃಣು ತಸ್ಯ ಶ್ರವಣತಃ ಶಾಂಕರೋ ಜಾಯತೇ ನರಃ ॥೩೭॥

ತತ್ಕಥಾಕಥನೇನಾಪಿ ಮುಹುರಾನಂದರಾಶಯಃ ।
ಉದ್ವೇಲಾ ಏವ ಸಹಸಾ ಭವಿಷ್ಯಂತಿ ನ ಸಂಶಯಃ ॥೩೮॥

ಭಾಗ್ಯಂ ಕಿಲ ಮಮಾದ್ಯಾಪಿ ಶಾಂಕರಃ ಶಂಕರಾಲಯೇ ।
ಹೃಷ್ಟಃ ಪ್ರಹೃಷ್ಟಸ್ತೇನೈವ ಶಾಂಕರಃ ಖಲು ಶಾಂಕರಃ ॥೩೯॥

ಇತಿಹಾಸೋ ವಕ್ಷ್ಯಮಾಣೋ ಬ್ರಹ್ಮಲೋಕಾದಿಷು ಶ್ರುತಃ ।
ಸ ಮಯಾ ಸಂಶ್ರುತಃ ಪೂರ್ವಂ ಕದಾಚಿತ್ಪಾಪನಾಶಕಃ ॥೪೦॥

ಪಿತಾ ಮಮ ಮಹಾದೇವಪೂಜನಾಸಕ್ತಮಾನಸಃ ।
ತೇನಾರ್ಜಿತಂ ಬಹುಧನಂ ರತ್ನರಾಶಿಸಮನ್ವಿತಂ ॥೪೧॥

---

ದನ್ನು ಸತ್ಪುರುಷರೇ ತಿಳಿದುಕೊಳ್ಳುವರಲ್ಲದೇ ಪಾಮರರಿಗೆ ಆ ಬುದ್ಧಿಯು ಉದಯಿಸಲಾರದು. ॥೩೬॥

ಈ ವಿಷಯದಲ್ಲಿ, ಪ್ರಾಚೀನಕಾಲದಲ್ಲಿ ನಡೆದ ಒಂದಾನೊಂದು ಇತಿಹಾಸವನ್ನು ಪೂರ್ವಿಕರು ಉದಾಹರಿಸುವರು. ಅದನ್ನು ಕೇಳು. ಅದರ ಶ್ರವಣದಿಂದ ಮನುಜನು ಈಶ್ವರ ಭಕ್ತನಾಗುವನು. ॥೩೭॥

ಆ ಕಥೆಯನ್ನು ಹೇಳುವ ಮಾತ್ರದಿಂದಲೇ, ಆನಂದರಾಶಿಯು ಉಕ್ಕಿ ಉಕ್ಕಿ ಬರುವುದು. ಇದರಲ್ಲಿ ಸಂಶಯವಿಲ್ಲ. ॥೩೮॥

ಈಶ್ವರ ಭಕ್ತನು ಶಿವಾಲಯದಲ್ಲಿ ಶಿವನನ್ನು ಆರಾಧಿಸುತ್ತಾ ಸಂತೋಷದಿಂದ ಕಾಲವನ್ನು ಕಳೆಯುವನು. ಶಿವಭಕ್ತನೆಂದರೆ ಅವನೇ ಅಲ್ಲವೇ. ಇದೀಗ ಅವನ ದರ್ಶನವು ನನಗೆ ಲಭಿಸಿರುವುದು, ಪೂರ್ವಜನ್ಮದ ಸುಕೃತದ ಮಹಿಮೆಯಿಂದಲ್ಲವೆ! ॥೩೯॥

ಮುಂದೆ ಹೇಳುವ ಇತಿಹಾಸವು ಬ್ರಹ್ಮಲೋಕವೇ ಮುಂತಾದ ಲೋಕಗಳಲ್ಲಿ ಪ್ರಸಿದ್ಧವಾಗಿರುವುದು. ನಾನು ಒಂದಾನೊಂದುಕಾಲದಲ್ಲಿ ಪಾಪನಾಶಕವಾದ ಆ ಇತಿಹಾಸವನ್ನು ಸಾವಧಾನದಿಂದ ಕೇಳಿರುವೆನು. ॥೪೦॥

ನನ್ನ ತಂದೆಯು, ಅನವರತವೂ ಈಶ್ವರಾರ್ಚನೆಯಲ್ಲಿಯೇ ನಿಮಗ್ನನಾಗಿರು

ಕುಬೇರಃ ಸ್ವಯಮಾಗತ್ಯ ಮತ್ಪಿತುಃ ಸದನೇ ಮುದಾ ।
ಸದಾ ಸಖ್ಯಂ ಚಕಾರಾತೋ ಜಾತೋ ಧನಪತಿಸ್ತತಃ ॥೪೨॥

ಧರ್ಮಧೇನುರಿತಿ ಖ್ಯಾತೋ ಮತ್ಪಿತಾ ಭುವನತ್ರಯೇ ।
ಸ ತು ಶಾಂಕರಧರ್ಮಾಣಾಮುತ್ಪತ್ತಿಸ್ಥಾನಮೇವ ಹಿ ॥೪೩॥

ತಾದೃಶಸ್ಯ ಪಿತುರ್ಗೇಹೇ ಮಮಾಸ್ತಿ ಶಿವಮಂದಿರಂ ।
ಅಪಾರರತ್ನರಚಿತಂ ರತ್ನಛಾಯಾವಿಜೃಂಭಿತಂ ॥೪೪॥

ರತ್ನಪ್ರಾಕಾರಪರಿಘಾಶೋಭಾರಾಜಿವಿರಾಜಿತಂ ।
ತತ್ಪ್ರಾಕಾರವೃತೇ ದೇಶೇ ವನಮೇಕಮಶೋಕಭೂಃ ॥೪೫॥

---

ತ್ತಿದ್ದನು. ಈಶ್ವರಾರ್ಚನೆಗೋಸ್ಕರ, ಅವನು ಹೇರಳವಾದ ಹಣವನ್ನು ಗಳಿಸಿದ್ದನು. ಅದರಲ್ಲಿ ಅನಮೂಲ್ಯವಾದ ರತ್ನಗಳೂ ಇದ್ದುವು. ॥೪೧॥

ಕುಬೇರನು ನನ್ನ ತಂದೆಯ ಮನೆಗೆ ತಾನಾಗಿಯೇ ಬಂದು ಅವನೊಂದಿಗೆ ಸ್ನೇಹಭಾವದಿಂದ ಇರುತ್ತಿದ್ದನು. ಆದರಿಂದಲೇ ಕುಬೇರನು ಐಶ್ವರ್ಯವಂತನಾಗಿ ಧನಪತಿಯೆನಿಸಿಕೊಂಡನು. ॥೪೨॥

ನನ್ನ ತಂದೆಯು ದಾನಮಾಡುವುದರಲ್ಲಿ, ಕಾಮಧೇನುವಾಗಿರುವನೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧನಾಗಿದ್ದನು. ಅವನೇ, ಈಶ್ವರಪ್ರಿಯವಾದ ಸತ್ಕರ್ಮಾಚರಣೆಗಳಿಗೆ ನೆಲೆಯಾಗಿದ್ದನು. ॥೪೩॥

ಅಷ್ಟೊಂದು ಧನಿಕನೂ, ಈಶ್ವರಾರಾಧಕನೂ ಆದ ನನ್ನ ಪಿತೃಗೃಹದಲ್ಲಿ, ರತ್ನಖಚಿತವಾಗಿಯೂ ರತ್ನಗಳ ಕಾಂತಿಯಿಂದ ಪ್ರಕಾಶಿಸುವುದೂ ಆದ ಒಂದಾನೊಂದು ಶಿವದೇವಾಲಯವಿದ್ದಿತು. ॥೪೪॥

ಆ ದೇವಾಲಯದ ಸುತ್ತಲೂ, ರತ್ನಖಚಿತವಾದ ಕೋಟೆ ಕಂದಕಗಳಿದ್ದವು. ಆ ಕೋಟೆಯ ಒಳಭಾಗದಲ್ಲಿ, ಸುಖಸಾಧನವಾಗಿ ಶೋಭಿಸುತ್ತಿದ್ದ ಒಂದಾನೊಂದು ಉದ್ಯಾನವನವಿದ್ದಿತು. ॥೪೫॥

ರಸಾಲಶಾಲಹಿಂತಾಲತಮಾಲಪರಿವೇಷ್ಟಿತಂ ।
ತತ್ರೋರುಬಿಲ್ವತರವೋ ಬಾಲಬಿಲ್ವಮಹೀರುಹಾಃ ॥೪೬॥

ನಾಗಪುನ್ನಾಗತರವೋ ಸಪೂಗತರವಃ ಪರಂ ।
ಕೇತಕೀಮಾಧವೀಜಾಜೀಮಾಲತೀಮಾಲಿಕಾವೃತಂ ॥೪೭॥
ಸುವರ್ಣಚಂಪಕಾಕ್ರಾಂತಶತಸತ್ರತರುಶ್ರಿತಂ ।
ಧತ್ತೂರದ್ರೋಣಸಂಕೀರ್ಣಂ ಭೃಂಗರಾಜವಿರಾಜಿತಂ ॥೪೮॥

ಉತ್ಫುಲ್ಲಹೇಮಾಮಲಪದ್ಮರೇಣು
ಕಿಂಜಲ್ಕಸಂವೀತಸರೋವರಾಣಿ ।
ರಮ್ಯಾಣ್ಯಪಾರಾಣಿ ಮರಾಲರಾಜೀ
ವಿರಾಜಮಾನಾನಿ ವಸಂತಿ ತತ್ರ ॥೪೯॥

---

ವನದ ಸುತ್ತುಮುತ್ತಲೂ, ಮಾವು, ತಾಳೆ, ಹಿಂತಾಲ, ಹೊಂಗೆ, ಮುಂತಾದ ವೃಕ್ಷಗಳಿದ್ದವು. ಮಧ್ಯದಲ್ಲಿ, ಉನ್ನತವಾದ ದೊಡ್ಡದೊಡ್ಡ ಬಿಲ್ವವೃಕ್ಷಗಳೂ ಮತ್ತು ಕೋಮಲವಾದ ಚಿಕ್ಕಚಿಕ್ಕ ಬಿಲ್ವಗಿಡಗಳೂ ಕಾಣುತ್ತಿದ್ದುವು. ॥೪೬॥

ಅದರಲ್ಲಿ, ವನದ ಕೆಲವೆಡೆಗಳಲ್ಲಿ, ನಾಗ, ಪುನ್ನಾಗ, ಪೂಗ (ಅಡಕೆಯ ಮರ) ವೃಕ್ಷಗಳೂ, ಕೇದಿಗೆಯ ಹೂವುಗಳೂ, ಮಾಧವೀ, ಜಾಜೀ, ಮಾಲತೀ ಮುಂತಾದ ಹೂವಿನ ಬಳ್ಳಿಗಳೂ ಇದ್ದುವು. ॥೪೭॥

ಚಿನ್ನದಂತೆ ಹೊಂಬಣ್ಣದಿಂದ ಕಂಗೊಳಿಸುತ್ತಿರುವ ಸಂಪಿಗೆಯ ಹೂವುಗಳಿಂದೊಡಗೂಡಿರುವ ವೃಕ್ಷಗಳು ಆ ವನದಲ್ಲಿ ಹೇರಳವಾಗಿದ್ದುವು. ಅಲ್ಲದೇ ಕಮಲದ ಬಳ್ಳಿಗಳು ನಿಬಿಡವಾಗಿ ಹಬ್ಬಿದ್ದುವು. ಮತ್ತು ವನವು ಧತ್ತೂರ, ತುಂಬೆ, ಭೃಂಗರಾಜ ಮುಂತಾದ ಹೂವುಗಳಿಂದ ಶೋಭಿಸುತ್ತಿದ್ದಿತು. ॥೪೮॥

ಅಲ್ಲಿ ಅನೇಕ ಮನೋಹರವಾದ ಸರೋವರಗಳಿದ್ದುವು. ಅವು ಸುವರ್ಣದಂತೆ ಕಾಂತಿಮಯವಾಗಿ, ಅರಳಿದ ಕಮಲಗಳಿಂದಲೂ ಮತ್ತು ಅವುಗಳ ಕೇಸರಗಳಿಂದಲೂ ಶೋಭಿಸುತ್ತಿದ್ದುವು. ಅವುಗಳ ತೀರದಲ್ಲಿ ಹಂಸಗಳು ಸಾಲುಸಾಲಾಗಿ ಸಂಚರಿಸುತ್ತಿದ್ದುವು. ॥೪೯॥

ತೇ ತಾವತ್ತರವಃ ಸ್ವತಃ ಶಿವ ಮಹಾದೇವೇತಿ ನಾಮಾಮೃತಂ
ಪೀತ್ವಾ ವೃದ್ಧಿಮುಪೇತ್ಯ ಗುಚ್ಛನಿವಹೈಸ್ತಾರಾಪತಿಸ್ಪರ್ಧಯಾ ।
ತತ್ರಾರ್ಥೇಂದುಕಲಾವತಂಸಭಜನಂ ಫುಲ್ಲಪ್ರಸೂನೈರ್ನವೈಃ
ಪ್ರೀತ್ಯೈವಾನುದಿನಂ ಪ್ರಗಾವಧಿ ಮುಹುಃ ಕುರ್ವಂತಿ ನೃತ್ಯಂ ತದಾ ॥೫೦॥

ತಸ್ಮಿನ್ನೇವ ವನೇ ಮನೋಹರವನೇ ಧೀರಾಃ ಪರಂ ಶಾಂಕರಾಃ
ಶಾಂಗಂ ಲಿಂಗಮುಪೇತ್ಯ ಸತ್ಯಹೃದಯಾಃ ಸತ್ಯಾಶ್ರಯಂ ಶಂಕರಂ ।
ಧ್ಯಾತ್ವಾ ಯಾಂತಿ ನ ಮಾನಸಂ ಪ್ರತಿ ನ ವಾ ಗಂಗಾತಟಂ ವೋತ್ಕಟಂ
ವೈಕುಂಠಾದಿಕವಾಟಪಾಟನಧುನೀಧಾಟೀವರಾಟಾವೃತಂ ॥೫೧॥

ಮತ್ತಾತಸ್ತಮಪಾರಪುಷ್ಪವಿಲಸನ್ಮಾಲಾಕುಲಾತ್ಯಾಕುಲಾ
ನೀಲಾನೀಲವಿಲೋಲಬಾಲವಿಲಸಲ್ಲೀಲಾಲಿಮಾಲಾಪ್ರಭಾಃ ।

---

ಅಲ್ಲಿರುವ ವೃಕ್ಷಗಳು ತಾವಾಗಿಯೇ ಶಿವ, ಮಹಾದೇವ ಎಂದು ಶಿವನನ್ನು ಧ್ಯಾನಿಸುತ್ತಾ, ಶಿವನಾಮಾಮೃತವನ್ನು ಆಕಂಠವಾಗಿ ಪಾನಮಾಡಿ, ಶುಕ್ಲಪಕ್ಷದಲ್ಲಿ ತನ್ನ ಅಮೃತಕಲೆಗಳಿಂದ ಪ್ರತಿದಿನವೂ ಅಭಿವೃದ್ಧಿಯನ್ನು ಹೊಂದುತ್ತಿರುವ ಚಂದ್ರನೊಂದಿಗೆ ಸ್ಪರ್ಧೆ ಮಾಡುವುವೋ ಎಂಬಂತೆ ವೃದ್ಧಿಗೊಳ್ಳುತ್ತಿರುವುವು. ಅವು ಆ ವನದಲ್ಲಿ ಚೆನ್ನಾಗಿ ಅರಳಿರುವ ನೂತನವಾದ ಹೂವುಗಳಿಂದ ಚಂದ್ರಶೇಖರನನ್ನು, ಪ್ರತಿದಿನವೂ ರಾತ್ರಿಯಿಂದ ಪ್ರಾತಃಕಾಲದವರೆಗೂ ಅರ್ಚಿಸಿ ಬಳಿಕ ನೃತ್ಯವನ್ನಭಿನಯಿಸುವುವೋ ಎಂಬಂತೆ ತೂಗಾಡುತ್ತಿರುವುವು. ॥೫೦॥

ಸ್ವಚ್ಛವಾದ ಉದಕದಿಂದ ಕೂಡಿರುವ ಆ ವನದಲ್ಲಿ ದೃಢಮನಸ್ಕರಾದ ಅನೇಕಮಂದಿ ಈಶ್ವರಭಕ್ತರಿರುವರು. ಸತ್ಯವ್ರತರಾದ ಅವರು ಈಶ್ವರಲಿಂಗದ ಸನ್ನಿಧಿಯನ್ನು ಪಡೆದು ಅಲ್ಲಿ ಸತ್ಯಮೂರ್ತಿಯಾದ ಶಿವನನ್ನು ಸದಾ ಧ್ಯಾನಿಸುತ್ತಾ ಕಾಲಕಳೆಯುತ್ತಿರುವರು. ಅವರು ಶಿವನ ಸನ್ನಿಧಿಯನ್ನು ಬಿಟ್ಟು ಮಾನಸಸರೋವರವನ್ನಾಗಲಿ ಅಥವಾ ವೈಕುಂಠಾದಿಲೋಕಗಳನ್ನು ಹೊಂದಿಸುವ ಭೂಲೋಕಗಾಮಿಯಾದ ಗಂಗಾನದಿಯ ದಡವನ್ನಾಗಲಿ ಹೋಗಬಯಸುತ್ತಿರಲಿಲ್ಲ. ॥೫೧॥

ಶಿವಾಲಯದ ಬಳಿಯಲ್ಲಿದ್ದ ಉದ್ಯಾನವನದಲ್ಲಿ ದುಂಬಿಗಳು ಸಾಲುಸಾಲಾಗಿ ಬಂದು ಹೂವುಗಳ ರುಚಿಕರವಾದ ಮಕರಂದವನ್ನು ಪಾನಮಾಡುತ್ತಿದ್ದುವು. ಅವು ಸ್ವತಃ ನೀಲವರ್ಣದಿಂದ ಕೂಡಿಕೊಂಡು ಕಪ್ಪಾಗಿಯೂ, ಮನೋಹರವಾಗಿಯೂ

ಯಾಸ್ತಾಭಿಃ ಶಿವಮಂದಿರಾಂತವಿಲಸನ್ನೀಲಪ್ರಭಾಸ್ಪರ್ಧಯಾ
ತಾವದ್ಭಿಃ ಸ ಚಕಾರ ತತ್ರ ಯಮುನಾಗಂಗಾಪ್ರವಾಹಭ್ರಮಂ ॥೫೨॥

ತೈರೇವ ಪ್ರಸವೈರ್ಮಹೇಶಸದನಾನ್ಯಾಪೂರ್ಯತೂರ್ಯಧ್ವನಿ
ವ್ಯಾಪಾರಪ್ರವರಾನ್ವಿತಾನ್ಯಪಿ ಕರೋತ್ಯತ್ಯಾದರೋ ಹಾರಭೂಃ ।
ತದ್ಭಾಗ್ಯಾಂಬುಧಯಃ ಪ್ರವೃದ್ಧಿಮಗಮನ್ ತತ್ಪೂಜಯಾ ಕೇವಲಂ
ತತ್ತುಲ್ಯೋ ನ ಜಗತ್ತ್ರಯೇಽಪಿ ಗಿರಿಶಶ್ರೀಪಾದುಕಾರಾಧಕಃ ॥೫೩॥

ತಸ್ಮಿನ್ನೇವ ವನೇ ತಾತಃ ಶಾಂಕರೈಃ ಸಹ ಸರ್ವದಾ ।
ಕರೋತಿ ಪೂಜನಂ ಶಂಭೋಃ ಶೃಣೋತ್ಯಪಿ ಕಥಾಂ ಪ್ರಭೋಃ ॥೫೪॥

---

ಇದ್ದು ನೀಲವರ್ಣದ ಕಾಂತಿರಾಶಿಯನ್ನು ಬೀರುತ್ತಿದ್ದುವು. ನೀಲಮಣಿಗಳಿಂದ ರಚಿಸಲ್ಪಟ್ಟ ಶಿವಾಲಯವೂ ಸಹ ತನ್ನ ಕಾಂತಿಯನ್ನು ಎಲ್ಲೆಡೆಯಲ್ಲಿಯೂ ಪ್ರಸರಿಸುವಂತೆ ಕಾಣಿಸುತ್ತಿದ್ದಿತು. ಶುಭ್ರವಾದ ಧವಳಕಾಂತಿಯಿಂದ ರಂಜಿಸುವ ಪುಷ್ಪಮಾಲೆಗಳ ಮಧ್ಯದಲ್ಲಿ ಅದನ್ನು ನೋಡಿದರೆ, ನೀಲಮಣಿಗಳಿಂದ ಕೆತ್ತಲ್ಪಟ್ಟ ಶಿವಾಲಯದ ಕಾಂತಿರಾಶಿಯು ದುಂಬಿಗಳ ದೇಹಕಾಂತಿಯೊಂದಿಗೆ ಸ್ಪರ್ಧೆಯನ್ನೆಸಗುತ್ತಿರುವುದೋ ಎಂಬಂತೆ ಭಾಸವಾಗುತ್ತಿದ್ದಿತು. ನನ್ನ ತಂದೆಯು ದೇವಾಲಯಕ್ಕೆ ಈಶ್ವರಾರಾಧನೆಗೋಸ್ಕರ ತೆರಳಿದಾಗ ಈ ಎರಡು ವರ್ಣಕಾಂತಿಗಳ ಸಂಗಮವನ್ನು ನೋಡಿ, ಇದೇನು ಗಂಗಾ ಯಮುನಾನದಿಗಳ ಸಂಗಮವೋ ಎಂದು ಭ್ರಾಂತನಾಗುತ್ತಿದ್ದನು. ॥೫೨॥

ಈಶ್ವರಭಕ್ತಾಗ್ರಣಿಯಾದ ಅವನು ಆ ಉದ್ಯಾನವನದಲ್ಲಿದ್ದ ಹೂವುಗಳಿಂದಲೇ ಶಿವದೇವಾಲಯವನ್ನು ಅಲಂಕರಿಸಿ ವಾದ್ಯಧ್ವನಿಗಳಿಂದ ದೇವಾಲಯಗಳನ್ನು ಪ್ರತಿಧ್ವನಿಗೊಳಿಸುತ್ತಿದ್ದನು. ಅವನ ಶಿವಪೂಜೆಯ ಮಹಿಮೆಯಿಂದಲೇ ಮನೆಯಲ್ಲಿ ಭಾಗ್ಯರಾಶಿಗಳು ಅಭಿವೃದ್ಧಿಗೊಳ್ಳುತ್ತಿದ್ದುವು. ಮೂರು ಲೋಕಗಳಲ್ಲಿ ಅವನಂತೆ ಈಶ್ವರಪಾದಸೇವೆಯಲ್ಲಿ ನಿರತನಾದ ಇನ್ನೊಬ್ಬ ಭಕ್ತನು ಕಾಣುತ್ತಿರಲಿಲ್ಲ. ॥೫೩॥

ನನ್ನ ತಂದೆಯು ಅದೇ ವನದಲ್ಲಿ ಅನವರತವೂ ಈಶ್ವರಭಕ್ತರಿಂದೊಡಗೂಡಿ ಶಿವನನ್ನು ಪೂಜಿಸುವನಲ್ಲದೇ ಅಲ್ಲಿ ಶಿವಕಥಾಮೃತವನ್ನು ಆದರದಿಂದ ಪಾನಮಾಡುವನು. ॥೫೪॥

ತತ್ರ ತಾವತ್ಕಥಾ ಕಾಪಿ ಶ್ರುತಾ ಸಾತೀವ ಪಾವನಾ ।
ನಾರದೋಕ್ತಾ ವಿಶೇಷೇಣ ಶಿವಭಕ್ತಿರಸಾಶ್ರಯಾ ॥೫೫॥

॥ ಶ್ರೀನಾರದ ಉವಾಚ ॥

ಪುರಾ ಪುಣ್ಯವತಾಂ ಲೋಕೇ ಪುಣ್ಯಾನ್ಯೇವ ಪರಸ್ಪರಂ ।
ಸುಮೇರುಶಿಖರೇ ಸ್ಥಿತ್ವಾ ಮೂರ್ತಿಂ ಧೃತ್ವಾ ಜಗುಃ ಶಿವಂ ॥೫೬॥

ತತ್ರಾತ್ಯದ್ಭುತಪುಣ್ಯಮೂರ್ತಿರಸಕೃತ್ಸ್ಮೃತ್ವಾ ಮಹೇಶಂ ಪರಂ
ಸ್ತುತ್ವಾ ಶಂಕರಪೂಜನಾಯ ನ ತಥಾ ಸತ್ಸಾಧನಾನೀತ್ಯಪಿ
ತತ್ಪ್ರಾಪ್ತ್ಯರ್ಥಮತಃ ಪರಂ ಕಿಮಧುನಾ ಕರ್ತವ್ಯಮಿತ್ಯಾಹ ತಾನ್
ಪುಣ್ಯಾಕಾರವರಾನಪಾರಗಿರಿಶಧ್ಯಾನೋಲ್ಲಸತ್ಸಾಗರಾತ್ ॥೫೭॥

॥ ಪುಣ್ಯಮೂರ್ತಿರುವಾಚ ॥

ಅಸ್ಮಾಭಿರ್ಗಿರಿಶಾರ್ಚನಾಯ ನ ತಥಾ ಪ್ರಾಪ್ತಾನಿ ರತ್ನಾದಿಕಾ
ನ್ಯುತ್ಕೃಷ್ಟಾನ್ಯಪಿ ಸಾಧನಾನಿ ಬಹುಧಾಪ್ರಾಪ್ತಾನಿ ಕೈಸ್ಸಾಧನೈಃ ।

---

ಹೀಗಿರುತ್ತಿರಲು ಅಲ್ಲಿ ಒಂದಾನೊಂದು ದಿನ ದೇವರ್ಷಿಯಾದ ನಾರದನ ಮೂಲಕ, ಭಕ್ತಿರಸವನ್ನು ಹೊರಗೆಡಹುವಂತಹ ಒಂದಾನೊಂದು ಈಶ್ವರ ಕಥೆಯನ್ನು ಕೇಳಿದೆವು. ಅದು ಅತ್ಯಂತ ಪವಿತ್ರವಾದುದು. ॥೫೫॥

ನಾರದಮುನಿಯು ಕಥೆಯನ್ನು ಉಪಕ್ರಮಿಸುತ್ತಾ ಹೀಗೆಂದನು.—ಹಿಂದೆ ಒಂದಾನೊಂದು ಸಮಯದಲ್ಲಿ ಪುಣ್ಯಶಾಲಿಗಳಾದವರು ವಾಸವಾಗಿರುವ ಲೋಕದಲ್ಲಿ (ಸ್ವರ್ಗಲೋಕದಲ್ಲಿ) ಪುಣ್ಯವು ಶರೀರಗಳನ್ನು ಧರಿಸಿ ಮೇರುಪರ್ವತದ ಅಗ್ರದಲ್ಲಿ ನಿಂತು, ಶಿವಕಥೆಯನ್ನು ಗಾನಮಾಡಿತು. ॥೫೬॥

ಆ ಪುಣ್ಯಮೂರ್ತಿಗಳ ನಡುವೆ, ಅತ್ಯಂತ ಜ್ಞಾನಿಯಾದ ಒಂದಾನೊಂದು ಪುಣ್ಯಮೂರ್ತಿಯು ಅನೇಕ ಬಾರಿ ಪರಮೇಶ್ವರನನ್ನು ಸ್ಮರಿಸಿ ಸ್ತುತಿಸಿ, ಉಳಿದ ಸಂಗಡಿಗರಾದ ಪುಣ್ಯಮೂರ್ತಿಗಳನ್ನು ಕುರಿತು "ಶಿವಪೂಜೆಗೆ ಉಪಯುಕ್ತವಾದ ಸಾಧನಗಳಾವುವು? ಮತ್ತು ಶಿವಸನ್ನಿಧಿಯನ್ನು ಪಡೆಯಲು ಯೋಗ್ಯವಾದ ಮುಖ್ಯ ಸಾಧನಗಳಾವುವು?" ಎಂದು ಪ್ರಶ್ನಿಸಿತು. ॥೫೭॥

ಬಳಿಕ ಪುಣ್ಯಮೂರ್ತಿಯು ಪುನಃ ಹೀಗೆಂದಿತು.—ನಾವು, ಈಶ್ವರಾರಾಧನೆಗೆ ಬೇಕಾಗುವ ಮುಖ್ಯಸಾಮಗ್ರಿಗಳನ್ನು ಹೊಂದಿರುವುದಿಲ್ಲ. ನಮ್ಮಲ್ಲಿ, ಶ್ರೇಷ್ಠವಾದ

ಶಂಗಾರಾಧನಸಾಧನೈರಪಿ ವಿನಾ ಕಿಂ ಜೀವನೇನಾಪ್ಯಹೋ
ವ್ಯರ್ಥಂ ಜನ್ಮ ಮಹೇಶಲಿಂಗಭಜನಾಭಾವೇ ಭವೇ ಭಾವನಂ ॥೫೮॥

ರತ್ನಾಕರೇ ಸಂತಿ ಮನೋಹರಾಣಿ
ರತ್ನಾನಿ ತಾವತ್ಪಲು ನೂತನಾನಿ ।
ತೈರೇವ ಲಿಂಗಾರ್ಚನಮದ್ಯ ಕಾರ್ಯಂ
ಪ್ರೀತಃ ಶಿವೋ ರತ್ನಸಮರ್ಪಣೇನ ॥೫೯॥

ಯದ್ವಾ ವನೇ ಕೋಮಲಬಿಲ್ವಮಾಲಾಃ
ಸಂಪಾದನೀಯಾಃ ಶಿವಪೂಜನಾಯ ।
ಯದ್ವಾ ಸುವರ್ಣಾಮಲಪದ್ಮಮಾಲಾ
ಸಂಪಾದನೀಯಾ ಕನಕಾದಿಮಾಲಾ ॥೬೦॥

ಉತ್ಫುಲ್ಲನೀಲೋತ್ಪಲಮಾಲಯಾ ವಾ
ಸಮರ್ಚನೀಯೋ ಗಿರಿಜಾಸಹಾಯಃ ।

---

ರತ್ನಗಳಿಲ್ಲ. ಇವುಗಳನ್ನು ಸಂಪಾದಿಸುವ ಬಗೆ ಹೇಗೆ? ಈಶ್ವರಾರಾಧನೆಯ ಸಾಮಗ್ರಿಗಳಿಲ್ಲದಿದ್ದರೆ, ಈ ಜೀವನದಿಂದೇನು ಪ್ರಯೋಜನ? ಈಶ್ವರಾರಾಧನೆಯನ್ನೊಂದನ್ನು ಆಚರಿಸದಿದ್ದರೆ ಈ ಸಂಸಾರದಲ್ಲಿ ಜನ್ಮವನ್ನೆತ್ತುವುದು ವ್ಯರ್ಥ. ॥೫೮॥

ರತ್ನಗಳಿಗೆ ಆಶ್ರಯನೆಂದೆನಿಸಿಕೊಂಡಿರುವ ಸಮುದ್ರದಲ್ಲಿ, ಅಮೂಲ್ಯ ಸುಂದರವೂ, ನೂತನವೂ ಆದ ರತ್ನಗಳಿರುವುವು. ಅವುಗಳಿಂದಲೇ ಈಗ ನಾವು ಈಶ್ವರಲಿಂಗವನ್ನು ಅರ್ಚಿಸಬೇಕು. ಸುರತ್ನಗಳನ್ನು ಅರ್ಪಿಸುವುದರಿಂದ ಶಿವನು ಸುಪ್ರೀತನಾಗುವನು. ॥೫೯॥

ಅದಿಲ್ಲದಿದ್ದರೆ, ಅರಣ್ಯಕ್ಕೆ ಹೋಗಿ, ಶಿವಪೂಜೆಗೋಸ್ಕರ, ಮೃದುವಾದ, ಬಿಲ್ವಪತ್ರೆಗಳ ಮಾಲಿಕೆಗಳನ್ನು ಸಂಗ್ರಹಿಸಬೇಕು. ಅಥವಾ, ಸ್ವರ್ಣಮಯವಾದ ಪದ್ಮಗಳ ಮಾಲೆಯನ್ನಾಗಲಿ, ಕೇವಲ ಸುವರ್ಣಖಚಿತವಾದ ಮಾಲಿಕೆಯನ್ನಾಗಲಿ ಸಂಪಾದಿಸಬೇಕು. ॥೬೦॥

ಚೆನ್ನಾಗಿ ಅರಳಿರುವ ಕನ್ನೈದಿಲೆಗಳಿಂದ ರಚಿಸಲ್ಪಟ್ಟ ಮಾಲಿಕೆಯಿಂದಲಾದರೂ ಗಿರಿಜಾವಲ್ಲಭನಾದ ಶಿವನನ್ನು ಅರ್ಚಿಸಬೇಕು. ಅಲ್ಲದೇ ಮಂದಾರ,

ಮಂದಾರಕುಂದಾದಿಭಿರರ್ಚನೀಯಃ
ಕಿಮದ್ಯ ಸದ್ಯಃ ಸ ಮುದೇಂದುಮೌಳಿಃ ॥೬೧॥

ಮೃಗಮದರಸಧಾರಾಸಾರಕರ್ಪೂರಧಾರಾ
ಪರಿವೃತಘನಸಾರಾಪಾರಪಾಟೀರಧಾರಾ ।
ಶಿವಶಿರಸಿ ವಿಧೇಯಾ ತುಂಗಲಿಂಗಸ್ವರೂಪೇ
ಸಕೃದಪಿ ಸುಕೃತಾಂಭೋರಾಶಿಸಂಜೀವನಾಯ ॥೬೨॥

ಇತ್ಯಾಲೋಚ್ಯ ಯಯುಃ ಸರ್ವೇ ಸ್ಮೃತ್ವಾ ಶಂಕರಪಾದುಕೇ ।
ರತ್ನಾಕರಾಯ ರತ್ನಾನಿ ಪ್ರಾಪ್ತುಮುತ್ಕೃತ್ತಮಾನ್ಯಪಿ ॥೬೩॥

ತತಃ ಸಾಗರತೀರೇ ತೈರ್ಹಾಟಕೇಶ್ವರಮಂದಿರಂ ।
ದೃಷ್ಟ್ವಾ ಪ್ರಹೃಷ್ಟಾಸ್ತತ್ಪೂಜಾಂ ಚಕ್ರುಃ ಪುಷ್ಪಾದಿಭಿರ್ನವೈಃ ॥೬೪॥

ತತಸ್ತಲ್ಲಿಂಗಪೂಜಾರ್ಥಂ ಸಾಗರೋಽಪಿ ಸಮಾಗತಃ ।
ಚಕಾರ ರತ್ನೈರ್ವಿವಿಧೈಃ ಭೂತಿಪೂತೈಃ ಶಿವಾರ್ಚನಂ ॥೬೫॥

---

ಮಾಗಿಯ ಮಲ್ಲಿಗೆ, ಮುಂತಾದ ಸುಗಂಧಯುಕ್ತವಾದ ಹೂವುಗಳಿಂದಲಾದರೂ ಶಿವನನ್ನು ಪೂಜಿಸಬೇಕು. ಆಗ, ಚಂದ್ರಶೇಖರನು ಕ್ಷಿಪ್ರದಲ್ಲಿಯೇ ಸಂತುಷ್ಟನಾಗುವನು. ॥೬೧॥

ನಮ್ಮ ಸುಕೃತಗಳನ್ನು ಅಭಿವೃದ್ಧಿಗೊಳಿಸುವುದಕ್ಕೋಸ್ಕರ, ಕಸ್ತೂರಿಯರಸ ಕರ್ಪೂರಧಾರೆ, ಮುಂತಾದ ಸುಗಂಧ ದ್ರವ್ಯಗಳಿಂದ ಕೂಡಿರುವ ಚಂದನೋದಕದ ಪ್ರವಾಹದಿಂದ ಲಿಂಗರೂಪನಾದ ಶಿವನ ಅಭಿಷೇಕವನ್ನು ಮಾಡಬೇಕು. ॥೬೨॥

ಹೀಗೆಂದು ಆಲೋಚಿಸಿ, ಅವರೆಲ್ಲರೂ, ಶಿವನ ಪಾದಗಳನ್ನು ಸ್ಮರಿಸಿ ಅಮೂಲ್ಯವಾದ ರತ್ನಗಳನ್ನು ಸಂಗ್ರಹಿಸುವುದಕ್ಕೋಸ್ಕರ, ಸಮುದ್ರಕ್ಕೆ ತೆರಳಿದರು. ॥೬೩॥

ಬಳಿಕ ಸಮುದ್ರದ ದಡವನ್ನು ಕುರಿತು ತೆರಳಿದ ಅವರು, ಅಲ್ಲಿ ಹಾಟಕೇಶ್ವರನ ದೇವಾಲಯವನ್ನು ನೋಡಿ ಸಂತೋಷಗೊಂಡವರಾಗಿ ನೂತನವಾದ ಪುಷ್ಪಾದಿಗಳಿಂದ ಹಾಟಕೇಶ್ವರನನ್ನು ಪೂಜಿಸಿದರು. ॥೬೪॥

ಸಮುದ್ರರಾಜನೂ ಸಹ ಅಲ್ಲಿಗೆ ಬಂದು, ಭಸ್ಮದಿಂದ ಶುದ್ಧಿಗೊಳಿಸಿದ ಅಮೂಲ್ಯವಾದ ರತ್ನಗಳಿಂದ ಶಿವನನ್ನು ಪೂಜಿಸಿದನು. ॥೬೫॥

ಕೃತ್ವಾ ಬಿಲ್ವದಲೈಃ ಪೂಜಾಮಖಂಡೈರತಿಕೋಮಲೈಃ ।
ತಥಾ ಪಂಚಾಮೃತಾದ್ಯೈಶ್ಚ ಬಹುಭಿರ್ಯತ್ನಪೂರ್ವಕಂ ॥೬೬॥

ಸ ಪೂಜಾಂತೇ ಪ್ರಣಮ್ಯಾಶು ಕೃತ್ವಾ ನಾಟ್ಯಂ ಪ್ರಯತ್ನತಃ ।
ದಧ್ಯೌ ಚಂದ್ರಕಲಾಜೂಟಂ ಪಂಚಾಕ್ಷರಪುರಃಸರಂ ॥೬೭॥

ತತಸ್ತುಷ್ಟಾವ ಸ ಮುದಾ ಸಾಗರಃ ಶಂಕರಂ ಪರಂ ।
ರುದ್ರಾಧ್ಯಾಯೈಶ್ಚ ಸೂಕ್ತೈಶ್ಚ ರೌದ್ರೈರ್ಭದ್ರಪದೈರ್ಮುದಾ ॥೬೮॥

ಏವಂ ಸಂಪೂಜ್ಯ ತಲ್ಲಿಂಗಂ ಶಾಂಗಮಾಲಿಂಗ್ಯ ಸಾದರಂ ।
ಪ್ರಾಹ ಪ್ರಸೀದ ಭಗವನ್ನಿತಿ ಕುರ್ವಂಸ್ತದಾ ಸ್ತುತಿಂ ॥೬೯॥

॥ ರತ್ನಾಕರ ಉವಾಚ ॥

ಕ್ವ ಮಹೇಶ್ವರತಾ ಕ್ವ ಶಂಭುತಾ
ಕ್ವ ಕೃಪಾಸಾಗರತಾ ಕ್ವ ಚಾಜ್ಞತಾ ।
ಕ್ವ ನಿರಂತರದೀನಬಂಧುತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೦॥

---

ಅವನು ಅಖಂಡವಾಗಿಯೂ ಮೃದುವಾಗಿಯೂ ಇರುವ ಬಿಲ್ವದಲಗಳಿಂದಲೂ ಶಿವನನ್ನು ಅರ್ಚಿಸಿದನು. ॥೬೬॥

ಪೂಜೆಯು ನೆರವೇರಿದ ಬಳಿಕ ಸಮುದ್ರರಾಜನು ಶಿವನನ್ನು ನಮಸ್ಕರಿಸಿ ಶೀಘ್ರವಾಗಿ ಭಕ್ತಿಪುರಃಸರವಾಗಿ ನಾಟ್ಯವನ್ನಭಿನಯಿಸಿ, ಶಿವಪಂಚಾಕ್ಷರಮಂತ್ರದಿಂದ ಚಂದ್ರಶೇಖರನನ್ನು ಧ್ಯಾನಿಸಿದನು. ॥೬೭॥

ತರುವಾಯ ಸಮುದ್ರರಾಜನು ಕಲ್ಯಾಣಕರವಾದ ರುದ್ರಾಧ್ಯಾಯಗಳಿಂದಲೂ ಮತ್ತು ರುದ್ರಸೂಕ್ತಗಳಿಂದಲೂ ಪರಶಿವನನ್ನು ಸ್ತುತಿಸಿದನು. ॥೬೮॥

ಈ ರೀತಿಯಲ್ಲಿ ಶಿವಲಿಂಗವನ್ನು ಆದರಭಾವನೆಯಿಂದ ಪೂಜಿಸಿ ಶಿವನನ್ನು ಸ್ತುತಿಸುತ್ತಾ, ಓ ಭಗವಂತನೇ, ಪ್ರಸನ್ನನಾಗು ಎಂದು, ॥೬೯॥

ಸಮುದ್ರರಾಜನು ಶಿವಸನ್ನಿಧಿಯಲ್ಲಿ ಹೀಗೆ ಪ್ರಾರ್ಥಿಸಿದನು. "ಓ ಶಿವನೇ, ನಿನ್ನ ಅವ್ಯಾಹತವಾದ ಸ್ವಾಮಿತ್ವವೆಲ್ಲಿ? ಶಂಭುತ್ವವೆಲ್ಲಿ? ನಿನ್ನ ದಯಾನಿಧಿತ್ವವೆಲ್ಲಿ? ನನ್ನ ಅಜ್ಞತೆಯೆಲ್ಲಿ? ಜಾಗರೂಕತೆಯಿಂದ ಅನವರತವೂ ದೀನರನ್ನು

ಕ್ವ ಲಲಾಟಕೃಪೀಟಯೋನಿತಾ
ಕ್ವ ಜಟಾಜೂಟತಟೇಂದುಖಂಡತಾ ।
ಕ್ವ ತಟಿತ್ತ್ರಟನೀವಧೂಟಿತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೨೧॥

ಕ್ವ ಚತುರ್ದಶಲೋಕನಾಥತಾ
ತ್ರಿದಶಾಧೀಶ್ವರತಾ ದಯಾರ್ದ್ರತಾ ।
ಕ್ವ ವಿಲಕ್ಷಣದಕ್ಷತಾಪಿ ತೇ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೨೨॥

ಕ್ವ ತವಾಮಿತವೇದವೇದ್ಯತಾ
ಕ್ವ ಶಿವಾಪಾರಗುಣಾಂಬುರಾಶಿತಾ ।
ಕ್ವ ವಿಪದ್ಗಣಶೈಲವಜ್ರತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೨೩॥

---

ರಕ್ಷಿಸುವನಿನಗೂ, ನನ್ನ ಅಜ್ಞತೆಗೂ ನಿನ್ನ ಉದಾರವಾದ ಗುಣಗಳಿಗೂ ಸಾಮ್ಯವಿರುವುದೇ! ಇನ್ನೂ ನನ್ನಲ್ಲಿ ನೀನು ಕಠಿಣಹೃದಯನಾಗಿರುವೆಯೇ, ಅದೇಕೆ? ॥೨೦॥

ಓ ಪ್ರಭುವೇ, ಜಗತ್ಪ್ರಭುವಾದ ನೀನು ಹಣೆಯಲ್ಲಿ ಭಯಂಕರವಾದ ಅಗ್ನಿಯನ್ನು ಧರಿಸಿರುವೆ. ಜಟೆಗಳ ಅಗ್ರಭಾಗದಲ್ಲಿ ಬಾಲಚಂದ್ರನನ್ನು ಹೊಂದಿರುವೆ. ಮತ್ತು ಜಟೆಗಳ ಮಧ್ಯದಲ್ಲಿ ದೇವಗಂಗೆಯನ್ನು ಅಡಗಿಸಿರುವೆ. ಉದಾರನಾದ ನೀನು ಭಕ್ತನಾದ ನನ್ನಲ್ಲಿ ಈಗಲಾದರೂ ದಯೆದೋರಲಾರೆಯಾ? ॥೨೧॥

ಹದಿನಾಲ್ಕು ಲೋಕಗಳಿಗೂ ಸ್ವಾಮಿಯಾದ ನಿನ್ನ ಮಹಿಮೆಯನ್ನು ವರ್ಣಿಸಲು ಸಾಧ್ಯವೇ? ನೀನು ದೇವತೆಗಳಿಗೆ ಸ್ವಾಮಿಯೂ, ದಯಾಲುವೂ ಆಗಿರುವೆ. ನಿನ್ನ ಸಾಮರ್ಥ್ಯವು ಲೋಕವಿಲಕ್ಷಣವಾಗಿರುವುದು. ಆದರೂ ಇದುವರೆಗೂ ನನ್ನಲ್ಲೇಕೆ ನಿನ್ನ ಕೃಪಾಕಟಾಕ್ಷವು ಪ್ರಸರಿಸಿಲ್ಲ? ॥೨೨॥

ನಿನ್ನ ಮಹಿಮೆಯನ್ನು ಸಕಲ ವೇದಗಳೂ ಸಹ ಮುಕ್ತಕಂಠದಿಂದ ಜನರಿಗೆ ಬೋಧಿಸುತ್ತಿರುವುವು: ನಿನ್ನ ಅನಂತಕಲ್ಯಾಣಗುಣಗಳನ್ನು ವರ್ಣಿಸಲು ಸಾಧ್ಯವಿಲ್ಲ.

ಕ್ವ ತವಾದ್ಭುತಭೂತಿಹೇತುತಾ
ಕ್ವ ವಿಭೂತಿವ್ರತಪೂತತಾ ತತಾ ।
ಕ್ವ ತವಾಮಿತಪುಣ್ಯಕೀರ್ತಿತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೪॥

ಕ್ವ ಸುರಾಸುರವರ್ಗವಂದ್ಯತಾ
ಕ್ವ ಮಹಾಶೈವಮಹಾರ್ಹಣಾರ್ಹತಾ ।
ಕ್ವ ಮಹೋತ್ಸವದಾನಲೋಲತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೫॥

ಕ್ವ ತವ ತ್ರಿಪುರಾರಿತಾ ಖಲು
ಕ್ವ ಮಹಾಶೂಲವಿರಾಜಮಾನತಾ ।
ಕ್ವ ಸುಮೇರುಪಿನಾಕಪಾಣಿತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೬॥

---

ಭಕ್ತರ ಕಷ್ಟಪರಂಪರೆಗಳನ್ನು ಕ್ಷಿಪ್ರವಾಗಿ ನಾಶಗೊಳಿಸುವ ನಿನ್ನ ಸಾಮರ್ಥ್ಯವನ್ನು ಏನೆಂದು ಹೇಳಲಿ! ನನ್ನಲ್ಲೇಕೆ ಇನ್ನೂ ದಯೆದೋರಲಿಲ್ಲ. ॥೭೩॥

ನೀನು ಭಕ್ತರಿಗೆ ಅಪಾರವಾದ ಐಶ್ವರ್ಯವನ್ನು ನೀಡುವೆ. ನಿನ್ನ ದೇಹವು ಭಸ್ಮಧಾರಣೆಯಿಂದ ಪವಿತ್ರವಾಗಿರುವುದು. ನಿನ್ನ ಅಪಾರವಾದ ಕೀರ್ತಿಯನ್ನು ಹೊಗಳಲು ಅಶಕ್ಯವಾಗಿರುವುದು. ಆದರೂ ನನ್ನಲ್ಲೇಕೆ ಇದುವರೆಗೂ ದಯೆದೋರ ಲಿಲ್ಲ? ಸ್ವಾಮಿ. ॥೭೪॥

ದೇವತೆಗಳು ಮತ್ತು ರಾಕ್ಷಸರು ನಿನ್ನನ್ನು ವಂದಿಸುವರು. ಈಶ್ವರಭಕ್ತಾ ಗ್ರೇಸರರು ನಿನ್ನನ್ನು ಪರಮಪೂಜ್ಯನನ್ನಾಗಿ ತಿಳಿದಿರುವರು. ನಿನ್ನ ಸಾನ್ನಿಧ್ಯವನ್ನು ಪಡೆದ ಭಕ್ತರಿಗೆ ನೀನು ಅಪಾರವಾದ ಆನಂದವನ್ನು ದಯಪಾಲಿಸುವೆ. ಹೀಗಿರು ತ್ತಿರಲು ನಿನ್ನ ಅಪಾರವಾದ ಮಹಿಮೆಯನ್ನು ಏನೆಂದು ಹೇಳಲಿ! ಇನ್ನಾದರೂ ನನ್ನಲ್ಲಿ ದಯೆದೋರಲಾರೆಯಾ! ॥೭೫॥

ನೀನು ಈ ಹಿಂದೆ ತ್ರಿಪುರಾಸುರನನ್ನು ಸಂಹರಿಸಿದುದರಿಂದ ತ್ರಿಪುರಾರಿ ಯೆಂಬ ಅನ್ವರ್ಥನಾಮಧೇಯವನ್ನು ಪಡೆದಿರುವೆಯಲ್ಲವೇ! ಶತ್ರುಭಯಂಕರವಾದ

ಕ್ವ ತವಾಮರಸುಂದರೀಕರ
ಪ್ರಕರಾಪಾರಸರೋಜಪೂಜ್ಯತಾ ।
ಕ್ವ ಸುಮೇರುಶರಾಸನೇಜ್ಯತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೭॥

ಕ್ವ ತವಾಮಿತಕಾಲಕಾಲತಾ
ಕ್ವ ಚ ಹಾಲಾಹಲನೀಲಕಂಠತಾ ।
ಕ್ವ ದಿಗಂಬರತಾಪಿ ಸಾಂಬತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೮॥

---

ಶೂಲವನ್ನು ನೀನು ಧರಿಸಿರುವೆ. ಮಹಾಮಹಿಮನಾದ ನೀನು ತ್ರಿಪುರಸಂಹಾರ ಕಾಲದಲ್ಲಿ ಸುಮೇರುಪರ್ವತವನ್ನೇ ಧನುಸ್ಸಿನರೂಪದಿಂದ ಕೈಯ್ಯಲ್ಲಿ ಧರಿಸಿದೆ. ನಿನ್ನ ಮಹಿಮೆಯು ವರ್ಣನಾತೀತವಾಗಿರುವುದಲ್ಲವೇ ! ಆದರೂ ನನ್ನಲ್ಲೇಕೆ ದಯೆದೋರುವುದಿಲ್ಲ. ॥೭೬॥

ದೇವತಾಸ್ತ್ರೀಯರು ನಿನ್ನನ್ನು ತಮ್ಮ ಸುಂದರವಾದ ಕೈಗಳಲ್ಲಿ ಕಮಲಗಳನ್ನು ಹಿಡಿದುಕೊಂಡು ಅವುಗಳಿಂದ ಅರ್ಚಿಸುವರು. ಇದು ನಿನ್ನ ಮಹಿಮಾತಿಶಯವಲ್ಲವೇ! ತ್ರಿಪುರಸಂಹಾರಸಮಯದಲ್ಲಿ ಸುಮೇರುಪರ್ವತವನ್ನೇ ಧನುಸ್ಸನ್ನಾಗಿ ಉಪಯೋಗಿಸಿ ಅದರಲ್ಲಿ ಹೆದೆಯನ್ನು ಏರಿಸಿದೆ. ಇದಲ್ಲವೇ ನಿನ್ನ ಮಹಿಮೆ. ಇನ್ನಾದರೂ ನನ್ನಲ್ಲಿ ದಯೆದೋರದಿರುವೆಯಾ ! ॥೭೭॥

ಸಕಲ ಪ್ರಾಣಿಗಳಿಗೂ ಮೃತ್ಯುವೆಂದೆನಿಸಿಕೊಂಡಿರುವ ಯಮನನ್ನೇ ನೀನು ಜಯಿಸಿ ಮೃತ್ಯುಂಜಯನೆಂಬ ಹೆಸರನ್ನು ಪಡೆದಿರುವೆ. ನಿನ್ನ ಸಾಮರ್ಥ್ಯವನ್ನು ವರ್ಣಿಸಲು ನಾನು ಶಕ್ತನೇ ! ಕ್ರೂರವಾದ ವಿಷವನ್ನು ಕಂಠದಲ್ಲಿ ಧರಿಸಿ, ನೀಲಕಂಠನೆಂಬ ಸಂಜ್ಞೆಯನ್ನು ಹೊಂದಿರುವೆ. ದಿಕ್ಕುಗಳೇ ನಿನ್ನ ಉಡುಪು. ಹೀಗಿದ್ದರೂ, ನೀನು ಪಾರ್ವತಿಯೊಡನೆ ಕುಟುಂಬಿಯಾಗಿರುವೆ. ಅಪಾರ ಮಹಿಮನಾದ ನೀನು ನನ್ನಲ್ಲಿ ದಯೆತೋರದಿರುವ ಕಾರಣವೇನು. ॥೭೮॥

ಕ್ವ ಪರಾತ್ಪರತಾಪಿ ನಿತ್ರಪಾ
ಕ್ವ ವರೋರಃಸರರಾಜಹಾರತಾ ।
ಕ್ವ ತವೋನ್ನತಪಂಚವಕ್ತ್ರತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೭೯॥

ಕ್ವ ಶಿವಾರ್ಚಕಜೀವನಾರ್ಥಿತಾ
ಕ್ವ ಮಹಾತಾಪವನಾಗ್ನಿತಾಪಿ ತೇ ।
ಕ್ವ ಶಿವವ್ರತಚಿತ್ರಸಂಗಿತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೮೦॥

ಕ್ವ ಭವಾಂಬುಧಿಕರ್ಣಧಾರತಾ
ಕ್ವ ಮಹಾಮೃತ್ಯುಭಯಾಪಹಾರಿತಾ ।
ಕ್ವ ಶಿವಾರ್ಚಕಕಲ್ಪವೃಕ್ಷತಾ
ಕ್ವ ಶಿವಾದ್ಯಾಪ್ಯಕೃಪೈವ ಮಯ್ಯಪಿ ॥೮೧॥

---

ನೀನು, ಆದಿಶಕ್ತಿಯೆಂದೆನಿಸಿಕೊಂಡಿರುವ ಮಾಯೆಗೆ ಅಧೀನನಾಗದೆ ಅಸಂಗನಾಗಿರುವೆ. ಆದರೂ, ನಿನ್ನ ಏಕಾಂತಭಕ್ತರೊಂದಿಗೆ, ಸಂಗವನ್ನು ಬೆಳೆಸಿ, ಅವರ ಹಿತೈಷಿಯಾಗಿರುವೆ. ವಕ್ಷಃಸ್ಥಲದಲ್ಲಿ ಸರ್ಪರಾಜನನ್ನೇ ಹಾರವನ್ನಾಗಿ ಧರಿಸಿರುವೆ. ನೀನು, ಉನ್ನತವಾದ ಅಘೋರಾದಿ ಐದು ಮುಖಗಳನ್ನು ಧರಿಸಿರುವೆ. ಇದಲ್ಲವೇ ನಿನ್ನ ಮಹಿಮೆ. ಆದರೂ ನೀನು ಇದುವರೆಗೂ ನನ್ನಲ್ಲೇಕೆ ದಯೆದೋರಿರುವುದಿಲ್ಲ. ॥೭೯॥

ಭಕ್ತವತ್ಸಲನಾದ ನೀನು, ನಿನ್ನನ್ನು ಅರ್ಚಿಸುವವರಿಗೆ ಪೂರ್ಣವಾದ ಆಯುಸ್ಸನ್ನು ದಯಪಾಲಿಸುವೆ. ಅಗ್ನಿಯು ಕ್ಷಣಕಾಲದಲ್ಲಿ, ಘೋರವಾದ ಅರಣ್ಯವನ್ನು ನಾಶಮಾಡುವಂತೆ ನೀನು, ಭಕ್ತರ ಪಾಪರಾಶಿಗಳನ್ನು ಕ್ಷಿಪ್ರವಾಗಿ ನಾಶಗೊಳಿಸುವೆ. ಮತ್ತು ಈಶ್ವರನ ಏಕಾಂತಭಕ್ತರಾದವರ ಹೃದಯದಲ್ಲಿ ಸದಾ ನೆಲಸಿರುವೆ. ಇನ್ನಾದರೂ, ನನ್ನಲ್ಲಿ ದಯೆದೋರು. ॥೮೦॥

ನೀನು ಸಂಸಾರವೆಂಬ ಸಮುದ್ರಕ್ಕೆ ಅಂಬಿಗನಾಗಿರುವೆ. ನಿನ್ನನ್ನು ಭಜಿಸುವವರಿಗೆ ಯಮಭಯವನ್ನೂ ಸಹ ಹೋಗಲಾಡಿಸುವೆ. ಈಶ್ವರಾರಾಧಕರ ಅಭೀಷ್ಟ

ಕಿಂ ತತ್ಕಾರುಣಿಕತ್ವಮುಪ್ಯಘಕುಲಾರಣ್ಯಾನಲತ್ವಂ ಚ ತೇ
ಕಿಂ ತ್ವದ್ಭಕ್ತವಿಮೋಕ್ಷದತ್ವಮಪಿ ತೇ ನೀತಂ ಗತಂ ವಾ ಸ್ವತಃ।
ತಚ್ಛೇದಸ್ತಿ ವಶೇ ತವಾಪಿ ಕಿಮಿತಿ ತ್ವತ್ಪಾದುಕಾರಾಧಕಂ
ಮಾಮುಪ್ಯೇವಮುಪೇಕ್ಷ್ಯ ತಿಷ್ಠಸಿ ಕಥಂ ಶ್ರೀನೀಲಕಂಠಾಧುನಾ॥೮೨॥

ವಿಶ್ವಸ್ಯೇಂದುಕಲಾವತಂಸಮಸಕೃದ್ಬಿಲ್ವೀದಲೈಃ ಕೋಮಲೈ
ರ್ಗಂಗಾತುಂಗತರಂಗಶೀತಲಜಲೈರ್ವೀರೇಶಲಿಂಗಂ ಮುದಾ।
ಪ್ರಾಣಾದ್ಯೈರುಪಹಾರತಾಮುಪಗತೈರಭ್ಯರ್ಚಿತಂ ಕಿಂ ಮಯಾ
ಶ್ರೀವೀರೇಶ ನ ದುರ್ದಶಾ ಪರಿಹೃತಾ ಸಂಸಾರಜಾತಾರ್ಜಿತಾ ॥೮೩॥

ಇತಿ ಸ್ತುತ್ವಾ ಮಹಾದೇವಂ ಪ್ರಣಮ್ಯ ಚ ಪುನಃ ಪುನಃ।
ಗಂತುಮಭ್ಯುದ್ಯತಸ್ತತ್ರ ಸ ದದರ್ಶ ಶಿವಾರ್ಚಕಾನ್ ॥೮೪॥

---

ಗಳನ್ನು ನೆರವೇರಿಸುವುದರಲ್ಲಿ ಕಲ್ಪವೃಕ್ಷದಂತಿರುವೆ. ಉದಾರನಾದ ನೀನು ನನ್ನಲ್ಲಿ ಇನ್ನೂ ಕಠೋರನಾಗಿರುವೆಯಲ್ಲ! ಇದು ಉಚಿತವೇ! ॥೮೧॥

ನಿನ್ನ ದಯಾರ್ದ್ರತೆಯನ್ನು ಏನೆಂದು ಹೇಳಲಿ! ನೀನು ಪಾಪರಾಶಿಗಳೆಂಬ ವನವನ್ನು ದಹಿಸುವುದರಲ್ಲಿ ಅಗ್ನಿಯಂತಿರುವೆ. ಭಕ್ತರಿಗೆ ಮೋಕ್ಷವನ್ನು ದಯಪಾಲಿಸುವ ನಿನ್ನ ಸಾಮರ್ಥ್ಯವು ಕಾರಣಾಂತರದಿಂದ ನಾಶವಾಯಿತೇ! ಅಥವಾ ಸ್ವತಂತ್ರವಾಗಿಯೇ ನಷ್ಟವಾಗಿರುವುದೇ? ಓ, ನೀಲಕಂಠನೇ, ನಿನ್ನ ಏಕಾಂತ ಭಕ್ತನಾದ ನನ್ನನ್ನೂ ಸಹ ನೀನು ಮರೆತಿರುವೆಯಲ್ಲ. ಇದು ನಿನಗೆ ಶೋಭಿಸುವುದೇ? ॥೮೨॥

ಓ, ಪ್ರಭುವೇ, ಚಂದ್ರಶೇಖರನಾದ ನಿನ್ನನ್ನೇ ನಂಬಿ, ಮೃದುವಾದ ಬಿಲ್ವಪತ್ರಿಗಳಿಂದಲೂ, ಮತ್ತು ಗಂಗಾನದಿಯ ಉನ್ನತವಾದ ಅಲೆಗಳಲ್ಲಿ ಉಕ್ಕಿಬರುವ ತಂಪಾದ ನೀರುಗಳಿಂದಲೂ, ನಿನ್ನನ್ನು ಪೂಜಿಸಿ, ನನ್ನ ಪ್ರಾಣಾದಿಪಂಚವಾಯುಗಳನ್ನೆಲ್ಲ ಉಪಹಾರವನ್ನಾಗಿ ಒಪ್ಪಿಸಿ, ನಿನ್ನನ್ನು ಆರಾಧಿಸಲಿಲ್ಲವೇ! ಆದರೂ, ಈಗ ದುಃಸಹವಾದ ಸಂಸಾರದಿಂದುಂಟಾದ ನನ್ನ ಈ ಕೆಟ್ಟ ಅವಸ್ಥೆಯು ದೂರವಾಗಲಿಲ್ಲವಲ್ಲಾ!" ॥೮೩॥

ಈ ಪ್ರಕಾರವಾಗಿ ಸ್ತೋತ್ರಮಾಡಿ ಈಶ್ವರಾರಾಧನೆಯಲ್ಲಿ ಆದರವುಳ್ಳ ಸಮುದ್ರರಾಜನು, ಶಿವನಿಗೆ ಪುನಃ ಪುನಃ ನಮಸ್ಕರಿಸಿ ತನ್ನ ವಾಸಸ್ಥಳಕ್ಕೆ ಹೋಗ

ಭಸ್ಮೋದ್ಧೂಲಿತಸರ್ವಾಂಗಾನ್ ತ್ರಿಪುಂಡ್ರಾಂಕಿತಮಸ್ತಕಾನ್ ।
ರುದ್ರಾಕ್ಷಮಾಲಾಭರಣಾಂಚ್ಛಿವಲಿಂಗಾರ್ಚನಪ್ರಿಯಾನ್ ॥೮೫॥

ಶಿವನಾಮಸುಧಾಧಾರಾಪಾನಪೀನಾನ್ಮನೋಹರಾನ್ ।
ಶಿವಧ್ಯಾನಸುಧಾರಾಶಿಕಲ್ಲೋಲಾಲೋಲಮಾನಸಾನ್ ॥೮೬॥

ಅಪೂರ್ವಾನಮಿತಾನ್ದೃಷ್ಟ್ವಾ ಸಾಗರಃ ಪ್ರಣತೋ ಮುಹುಃ ।
ತಾನುವಾಚ ಮಹಾಭಾಗಾನ್ಕೇ ಯೂಯಮಿತಿ ಸಾದರಂ ॥೮೭॥

ಶಿವಾರ್ಚನಧ್ಯಾನವಿಧೂತಪಾಪಾಃ
ಪುಣ್ಯಪ್ರಸಾರೂಪಕೃಪಾಸ್ವರೂಪಾಃ ।
ಯೇ ತ್ವತ್ಪಾದುಕಾರಾಧಕಸಕ್ತಚಿತ್ತಾ
ಸ್ತದ್ಭೃತ್ಯಭೃತ್ಯಾ ಇತಿ ಸಂಸ್ಮರಾಸ್ಮಾನ್ ॥೮೮॥

---

ಉದ್ಯುಕ್ತನಾದನು. ಅಷ್ಟರೊಳಗೆ, ಅವನು ಸರ್ವಾಂಗಗಳಲ್ಲಿಯೂ ಭಸ್ಮವನ್ನು ಲೇಪಿಸಿ, ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲೆಗಳಿಂದಲಂಕೃತ ರಾದ ಕೆಲವು ಮಂದಿ ಪರಶಿವಭಕ್ತರನ್ನು ನೋಡಿದನು. ॥೮೪-೮೫॥

ಅಲ್ಲದೇ ಅವರು ಪುಣ್ಯಮೂರ್ತಿಗಳು. ಶಿವನಾಮವೆಂಬ ಸುಧೆಯನ್ನು ಆ ಕಂಠವಾಗಿ ಪಾನಮಾಡಿ, ತೃಪ್ತಿಯನ್ನು ಹೊಂದಿದವರಾಗಿಯೂ ತೇಜಸ್ವಿಗಳಾಗಿಯೂ ಇದ್ದರು. ಅವರ ಚಿತ್ತವು ಶಿವಧ್ಯಾನವೆಂಬ ಅಮೃತಪ್ರವಾಹದ ತೆರೆಗಳಲ್ಲಿ ಮುಳು ಗಿದ್ದಿತು. ॥೮೬॥

ಹಿಂದೆಂದೂ ಕಾಣಿಸಿಕೊಳ್ಳದವರಾಗಿದ್ದು, ಆಗ ಅಸಂಖ್ಯಾತರಾಗಿ ಬಂದಿರುವ ಅವರನ್ನು ನೋಡಿ, ಸಮುದ್ರನು, ಮತ್ತೆ ಮತ್ತೆ ಅವರಿಗೆ ನಮಸ್ಕರಿಸಿ, ಅವರನ್ನು ಕುರಿತು “ ನೀವು ಯಾರು ” ಎಂದು ಪ್ರಶ್ನಿಸಿದನು. ॥೮೭॥

ಆಗ ಪುಣ್ಯಮೂರ್ತಿಗಳು ಅವನನ್ನು ಕುರಿತು ಹೀಗೆಂದುವು. ಸಮುದ್ರ ರಾಜನೇ ! ನಾವು ಈಶ್ವರಾರಾಧನೆ, ಧ್ಯಾನ ಮುಂತಾದುವುಗಳಿಂದ ನಮ್ಮ ಅಪಾರ ವಾದ ಪಾಪಗಳನ್ನು ಹೋಗಲಾಡಿಸಿಕೊಂಡು ಪುಣ್ಯವಿಗ್ರಹಗಳಾಗಿ ಕಾರುಣ್ಯಸ್ವರೂಪ ರಾಗಿರುವೆವು. ಆದರೆ ನಿನ್ನ ಪಾದಗಳನ್ನು ಸೇವಿಸುವುದರಲ್ಲಿ ಆಸಕ್ತರಾಗಿರುವ ನಿನ್ನ ಸೇವಕರಿಗೂ ನಾವು ಸೇವಕರಾಗಿರುವೆವೆಂದು ತಿಳಿ. ॥೮೮॥

ಅಸ್ಮಾಕಮಿಷ್ಟಂ ಶಿವಧರ್ಮಧರ್ಮ
ಧರ್ಮಾಂಘ್ರಿಪದ್ಮಾರ್ಚನಮಾದರೇಣ ।
ತ್ವತ್ಸಂಗತಿಸ್ತಾವದಪೇಕ್ಷಿತಾತೋ
ದೃಷ್ಟಸ್ತ್ವಮಸ್ಮಾಭಿರುದಾರಹಾರಃ ॥೮೯॥

ಇದಂ ದಿನಂ ಧನ್ಯಮಭೂದಿದಾನೀ
ಮತಃ ಪರಂ ಧನ್ಯಮಿದಂ ಶರೀರಂ ।
ಧನ್ಯೇ ಚ ನೇತ್ರೇ ಗಿರಿಶಾರ್ಚಕಾಂಘ್ರಿ
ಸರೋಜಸಂದರ್ಶನಮಾತ್ರತೋಽಪಿ ॥೯೦॥

ಅತಃ ಪರಂ ಶಾಂಭವಪುಂಗವತ್ವ
ಮಂಭೋನಿಧೇ ಶಂಕರಧರ್ಮತತ್ತ್ವಂ ।
ವದಾಧುನಾ ಯೇನ ವಯಂ ಪುನೀತಾಃ (?)
ಕುಲಂ ಚ ಧನ್ಯಂ ಮಮ ಮಾನಸಂ ಚ ॥೯೧॥

---

ಈಶ್ವರಪ್ರಿಯವಾದ ವಿಭೂತಿಧಾರಣೆಯೇ ಮುಂತಾದ ಸದಾಚಾರಗಳಲ್ಲಿ ಆಸಕ್ತರಾದ ಭಕ್ತರ ಅಡಿದಾವರೆಗಳ ಸೇವೆಯನ್ನು ನಾವು ಅಪೇಕ್ಷಿಸುವೆವು. ಅದಕ್ಕೋಸ್ಕರವೇ ನಾವು ನಿನ್ನೊಂದಿಗೆ ಸ್ನೇಹವನ್ನು ಬೆಳೆಸಲು ಬಯಸುವೆವು. ಆದುದರಿಂದಲೇ ಈಗ ಉದಾರನೂ, ಈಶ್ವರಭಕ್ತನೂ ಆದ ನೀನು ನಮಗೆ ಕಾಣಿಸಿಕೊಂಡಿರುವೆ. ॥೮೯॥

ಈ ದಿವಸವೇ ನಮಗೆ ಸುದಿನ. ನಮ್ಮ ಈ ಶರೀರವು ಇಂದು ಪವಿತ್ರವಾಗಿರುವುದು. ನಮ್ಮ ಈ ನೇತ್ರಗಳು, ಈಶ್ವರನ ಆರಾಧಕನಾದ ನಿನ್ನ ಅಡಿದಾವರೆಗಳ ದರ್ಶನಮಾತ್ರದಿಂದಲೇ ಕೃತಕೃತ್ಯಗಳಾದುವು. ॥೯೦॥

ಈಶ್ವರ ಭಕ್ತಾಗ್ರೇಸರನೇ! ಇನ್ನು ಮುಂದೆ ನೀನು, ನಮಗೆ ಪರಮೇಶ್ವರನಿಗೆ ಪ್ರಿಯವಾದ ಧರ್ಮಗಳ ರಹಸ್ಯವನ್ನೂ ಶಾಂಭವನಿಗಿರಬೇಕಾದ ಸದಾಚಾರಗಳನ್ನೂ ತಿಳಿಯಹೇಳು. ಅದರಿಂದ ನಾವು ಪವಿತ್ರರಾಗುವೆವಲ್ಲದೇ ನಮ್ಮ ವಂಶವೂ ಪರಿಶುದ್ಧವಾಗುವುದು. ॥೯೧॥

ದೈವಾತ್ತ್ವದಭ್ಯಾಗಮನಂ ಕಿಲಾಸೀ
ದದ್ಯೇಂದುಖಂಡಾಭರಣಾರ್ಚನಾಯ ।
ಅಸ್ಮಾಭಿರಪ್ಯಾಗತಮೇವ ತೇನ
ಯೋಗೋ ಘೃತಕ್ಷೀರಸಿತಾನ್ವಯಾಭಃ ॥೯೨॥

ಕ್ವತ್ಯಸ್ತ್ವಂ ಗಿರಿಶಾರ್ಚಕೋತ್ತಮತಮಃ ಕ್ವತ್ಯಾಃ ಪರಂ ವಾ ವಯಂ
ತ್ವತ್ಸಂಗೋಽಯಮಪೂರ್ವ ಏವ ಕಿಮಯಂ ಯೋಗೋ ನ ಮುಕ್ತಿಪ್ರದಃ ।
ವಾಂಛಾಶಾಂಗವರಾಂಗಸಂಗವಿಷಯಂ ಪ್ರಾಪ್ಯಾಧುನಾ ಸ್ವರ್ಧುನೀ
ಸ್ಪರ್ಧಾಮೇವ ಕರೋತಿ ಸಾಧು ಬಹುಧಾಪ್ಯರ್ಧೇಂದುಖಂಡಾಲಯೇ॥೯೩॥

ಸಂಸಾರಾಪಾರಪಾಶವ್ಯತಿಕರವಿಲಯೋಪಾಯ ಏವಾಯಮಸ್ಮ
ಚ್ಛ್ರೀಶಾಂಗಾಸಂಗ ಏವ ಸ್ವಯಮಪಿ ನಯಮಾಯಾಮಪೀಡಾಹರಃ ಕಿಂ ।
ಅಸ್ಮಾಕಂ ವಾಂಛಿತಂ ವಾ ಕಿಮಪಿ ತದಿತರನ್ನೇತಿ ಮನ್ಯೇ ತದನ್ಯ
ತ್ಕಿಂ ವಾ ಲೋಕೇಽಪಿ ಶೋಕವ್ಯಪನಯನಿಯತಃ ಸ್ವಾಚರಾಚಾರಮೇಕಂ
॥೯೪॥

---

ದೈವಯೋಗದಿಂದ ನಾವಿಬ್ಬರೂ ಇಲ್ಲಿ ಈಶ್ವರನನ್ನು ಪೂಜಿಸುವುದಕ್ಕೋಸ್ಕರ ಬಂದಿರುವೆವು. ನಮ್ಮ ಮತ್ತು ನಿನ್ನ ಪರಸ್ಪರಸಮ್ಮೇಲನವು, ತುಪ್ಪ, ಹಾಲು ಮತ್ತು ಕಲ್ಲುಸಕ್ಕರೆ ಇವುಗಳ ಪರಸ್ಪರ ಸಂಯೋಗದಂತೆ ಇಷ್ಟಫಲಪ್ರದವಾಗಿರುವುದು. ॥೯೧॥

ಈಶ್ವರಾರಾಧಕರಲ್ಲಿ ಶ್ರೇಷ್ಠತಮನಾದ ನೀನು ವಾಸವಾಗಿರುವುದೆಲ್ಲಿ? ನಮ್ಮ ವಾಸಸ್ಥಾನವೆಲ್ಲಿ? ಹೀಗಿದ್ದರೂ, ನಮ್ಮಿಬ್ಬರಿಗೆ ! ಹಿಂದೆಂದೂ ಸಂಭವಿಸದಿರುವ ಈ ಸಂಘಟನೆಯು, ನಮಗೆ ಮೋಕ್ಷವನ್ನು ದಯಪಾಲಿಸುವುದಾಗಿರುವುದಲ್ಲವೇ ? ನಮ್ಮ ಮನೋರಥವು ಈಶ್ವರಭಕ್ತನಾದ ನಿನ್ನ ಸಹವಾಸದಿಂದ ನೆರವೇರಿ, ಚಂದ್ರಶೇಖರನ ಜಟಾಜೂಟದಲ್ಲಿ ಅಡಗಿರುವ ದೇವಗಂಗೆಯೊಂದಿಗೆ ಸ್ಪರ್ಧೆಯನ್ನೆಸಗುತ್ತಿರುವುದೋ ಎಂಬಂತಿರುವುದು. ॥೯೩॥

ಈಶ್ವರಾರಾಧಕನಾದ ನಿನ್ನೊಂದಿಗೆ ನಮಗೆ ಒದಗಿದ ಈ ಸಹವಾಸವು ಸಂಸಾರವೆಂಬ ದೃಢವಾದ ಪಾಶವನ್ನು ಕಿತ್ತೆಸೆಯುವುದರಲ್ಲಿ ಶ್ರೇಷ್ಠವಾದ ಸಾಧನ ವಾಗಿರುವುದಲ್ಲದೇ, ಮೃತ್ಯುಭಯವನ್ನು ಹೋಗಲಾಡಿಸುವುದರಲ್ಲಿಯೂ ಸಮರ್ಥ

ಇತಿ ತದ್ವಚನಂ ಶ್ರುತ್ವಾ ಹೃಷ್ಟೋ ರತ್ನಾಕರಸ್ತದಾ ।
ಅಭಿವಾದ್ಯಾತಿಯತ್ನೇನ ಶಾಂಕರಾನಾಹ ತಾನ್ಮುದಾ ॥೯೫॥

॥ ರತ್ನಾಕರ ಉವಾಚ ॥

ಅಪೂರ್ವಮಿದಮದ್ಭುತಂ ಖಲು ಶಿವಾರ್ಚಕಾಲೋಕನಂ
ದದಾತಿ ಮುದಮಾದರಾತ್ಪ್ರತಿಪದಂ ವಿನೋದಾವಹಂ ।
ಮುಹುರ್ಮುಹುರಪೇಕ್ಷಿತಂ ಭವತಿ ದುಸ್ತ್ಯಜಂ ಸರ್ವಥಾ
ಕೃತಾರ್ಥಮಧುನಾ ಮನಃ ಕಿಮಿತಿ ವರ್ಣನೀಯಂ ಮಯಾ ॥೯೬॥

ಇತಿ ತದ್ವಚನಂ ಶ್ರುತ್ವಾ ತೇ ತಂ ಶಂಕರಪೂಜಕಂ ।
ಪ್ರಾಹುರ್ಲಿಂಗಸ್ಯ ಮಾಹಾತ್ಮ್ಯಂ ಕಿಮಸ್ಯೇತಿ ಮುಹುರ್ಮುಹುಃ ॥೯೭॥

---

ವಾಗಿರುವುದು. ಈಗ ನಮ್ಮ ಅಭೀಷ್ಟವೇ ಅದು. ಇದಕ್ಕಿಂತಲೂ ಇತರವಾದ ಇನ್ನಾವುದನ್ನು ನಾವು ಬಯಸುವೆವು? ಈ ಲೋಕದಲ್ಲಿ ಸಂಸಾರವೆಂಬ ಶೋಕರಾಶಿಯನ್ನು ಹೋಗಲಾಡಿಸುವುದರಲ್ಲಿ ಬದ್ಧಶ್ರದ್ಧನಾದ ಮನುಷ್ಯನು ಈಶ್ವರಪ್ರಿಯವಾದ ಸದಾಚಾರವನ್ನೊಂದನ್ನು ಬಿಟ್ಟು ಮತ್ತೇನನ್ನು ಅಪೇಕ್ಷಿಸುವನು? ॥೯೪॥

ಪುಣ್ಯಮೂರ್ತಿಗಳ ಆ ಮಾತನ್ನು ಕೇಳಿ, ಸಮುದ್ರರಾಜನು ಸಂತೋಷಗೊಂಡವನಾಗಿ, ಈಶ್ವರಭಕ್ತರಾದ ಅವರನ್ನು ಭಕ್ತಿಯಿಂದ ವಂದಿಸಿ ಅವರೊಡನೆ ಪ್ರೀತಿಯಿಂದ ಹೀಗೆಂದನು. ॥೯೫॥

ಎಲೈ, ಪುಣ್ಯಮೂರ್ತಿಗಳೇ! ಈಶ್ವರಾರಾಧಕರಾದ ನಿಮ್ಮ ಮಹತ್ತರವಾದ ದರ್ಶನವು ಹಿಂದೆಂದೂ ಸಂಭವಿಸಿರಲಿಲ್ಲ. ಅದು ಹೆಜ್ಜೆ ಹೆಜ್ಜೆಗೂ ಆನಂದದಾಯಕವಾಗಿ ನಿಲ್ಲುವುದು. ನನ್ನ ಚಿತ್ತವು ಬಾರಿಬಾರಿಗೂ ನಿಮ್ಮ ದರ್ಶನವನ್ನು ಅಪೇಕ್ಷಿಸುವುದು. ಅದು ಮಂಗಳಪ್ರದವಾದುದೇ ಸರಿ. ಈಗ ನನ್ನ ಮನಸ್ಸು ಕೃತಾರ್ಥವೆನಿಸಿರುವುದು. ಇದಕ್ಕಿಂತಲೂ ಅಧಿಕವಾಗಿ ಏನು ಹೇಳಲಿ! ॥೯೬॥

ರತ್ನಾಕರನ ಆ ಮಾತನ್ನು ಕೇಳಿ, ಪುಣ್ಯಮೂರ್ತಿಗಳು, ಈಶ್ವರಾರಾಧಕನಾದ ಅವನನ್ನು ಕುರಿತು, "ನಮಗೆ ಈ ಹಾಟಕೇಶ್ವರಲಿಂಗದ ಮಹಿಮೆಯನ್ನು ವಿಸ್ತಾರವಾಗಿ ತಿಳಿಯಪಡಿಸು" ಎಂದು ಪ್ರಾರ್ಥಿಸಿದವು. ॥೯೭॥

ತದ್ವಾಕ್ಯಾಮೃತಪಾನಪೀನಮನಸಾ ತೇನಾಪಿ ಸದ್ಯಃ ಸ್ಮೃತ
ಸ್ತಸ್ಯಾಭೂನ್ಮಹಿಮಾ ಸ ಏವ ನಿಗಮೈಃ ಸರ್ವೈಃ ಸ್ತುತಃ ಸಂತತಂ ।
ಸಂವಕ್ತುಂ ಸಿತಭೂತಿಭೂಷಿತವಪುಃ ಸ್ಪೃಷ್ಟ್ವಾ ಸ್ವಲಿಂಗಂ ಮುಹುಃ
ಹೃಷ್ಟಃ ಪ್ರಾಹ ಶಿವಾಭಿಧಾನಸುಧಯಾ ವೀತೋಽತಿಪೂತೋಽಂಬುಧಿಃ ॥೯೮॥

ಏತನ್ನಾಮಾನಿ ರಮ್ಯಾಣಿ ಲಿಂಗಸ್ಯಾಸ್ಯ ವಿಶೇಷತಃ ।
ಶ್ರೋತವ್ಯಾನಿ ಪ್ರಯತ್ನೇನ ಪಾಪನಾಶಕರಾಣ್ಯಪಿ ॥೯೯॥

ಹಾಟಕಂ ಜಾತಮೇತಸ್ಮಾತ್ತ್ರಟಿತ್ಕೋಟಿಮನೋಹರಂ ।
ತೇನೇದಂ ಹಾಟಕೇಶಾಖ್ಯಂ ಲಿಂಗಮಿತ್ಯುಚ್ಯತೇ ಬುಧೈಃ ॥೧೦೦॥

ಏತಸ್ಮಾದ್ಯದಭೂದ್ಧೇಮ ತೇನಾಭೂನ್ಮೇರುರುತ್ತಮಃ ।
ಸರ್ವಾಮರಾಲಯೋ ಜಾತಃ ಸ ತಾವದತಿಸುಂದರಃ ॥೧೦೧॥

---

ಪುಣ್ಯಮೂರ್ತಿಗಳು, ಹೀಗೆಂದು ಪ್ರಾರ್ಥಿಸಲು ಅವರ ವಚನಾಮೃತವನ್ನು ಪಾನಮಾಡಿ ಸಂತೃಪ್ತನಾದ ರತ್ನಾಕರನು, ಕೂಡಲೇ ಸಕಲ ವೇದಗಳೂ, ಮುಕ್ತ ಕಂಠದಿಂದ ಸ್ತುತಿಸುವ ಶಿವನ ಮಹಿಮೆಯನ್ನು ಮನಸಾ ಸ್ಮರಿಸಿದನು. ಬಳಿಕ, ಅದನ್ನು ಇವರಿಗೆ ತಿಳಿಯಪಡಿಸುವುದಕ್ಕೋಸ್ಕರ, ದೇಹದ ಆದ್ಯಂತವನ್ನು ಭಸ್ಮದಿಂದ ಲೇಪಿಸಿ ಶಿವಲಿಂಗವನ್ನು ಸ್ಪರ್ಶಿಸಿ, ಶಿವನಾಮಾಮೃತದಲ್ಲಿ ತೇಲುವವನಾಗಿ ಸಂತೋಷದಿಂದ ಹೀಗೆ ಹೇಳಲುಪಕ್ರಮಿಸಿದನು. ॥೯೮

ಎಲೈ ಪುಣ್ಯಮೂರ್ತಿಗಳೇ! ಶಿವಲಿಂಗದ ನಾಮಗಳೇ ಸ್ವಾಭಾವಿಕವಾಗಿ ಮನೋಹರವಾದವುಗಳು. ಅದರಲ್ಲಿಯೂ, ಈ ಹಾಟಕೇಶ್ವರಲಿಂಗದ ನಾಮಾವಳಿಗಳು ಅತ್ಯಂತ ರಮ್ಯವಾಗಿರುವುವು. ಪಾಪನಾಶಕರಗಳಾದ ಅವುಗಳನ್ನು, ಆದರದಿಂದ ಕೇಳಿರಿ. ॥೯೯॥

ಹಿಂದೆ, ಈ ಶಿವಲಿಂಗದಿಂದ ಮಿಂಚಿನಂತೆ ಥಳಥಳಿಸುತ್ತಿರುವ ಸುವರ್ಣವು ಪ್ರಾದುರ್ಭವಿಸಿತು. ಆದುದರಿಂದಲೇ ಜ್ಞಾನಿಗಳು ಈ ಲಿಂಗವನ್ನು ಹಾಟಕೇಶ್ವರ ಎಂಬ ಹೆಸರಿನಿಂದ ವ್ಯವಹರಿಸುವರು (ಹಾಟಕ, ಎಂದರೆ ಸುವರ್ಣ) ॥೧೦೦॥

ಈ ಲಿಂಗದಿಂದ ಉದ್ಭವಿಸಿದ ಸುವರ್ಣದಿಂದಲೇ ಮೇರುಪರ್ವತವು ನಿರ್ಮಿತವಾಯಿತು. ಅದು ಸಕಲ ದೇವತೆಗಳಿಗೂ ಆಶ್ರಯವಾಗಿದೆ. ಸ್ವರ್ಗಲೋಕವೂ

ಸ ಭೂಮಂಡಲಮಧ್ಯಸ್ಥೋ ಭೂಸದ್ಮಸ್ತಂಭಸಂನಿಭಃ ।
ತತ್ರಾಮರಾಣಾಂ ಸರ್ವೇಷಾಂ ತಿಷ್ಠಂತಿ ಸದನಾನ್ಯಪಿ ॥೧೦೨॥

ತಸ್ಯೈವ ಸಾಗರಾಃ ಸರ್ವೇ ಪರಿಘುತ್ವಮುಪಾಗತಾಃ ।
ತನ್ಮೂಲಭಾಗನಿಲಯಾ ಸಪ್ತದ್ವೀಪಾ ವಸುಂಧರಾ ॥೧೦೩॥

ಸುಮೇರುಸಾನುನಿಲಯಃ ಕಶ್ಚಿದಸ್ತಿ ಯಮಾಲಯಃ ।
ಯಮಾಲಯಸ್ಯ ಮೂಲೇ ತು ತಿಷ್ಠತ್ಯಂಗಾರವಾಹಿನೀ ॥೧೦೪॥

ವಿಷಜ್ವಾಲಾ ರಸಾಕ್ರಾಂತಾ ಕಾಪಿ ಸರ್ಪತರಂಗಿಣೀ ।
ಮಹಾಪರ್ವತಸಂಕಾಶವೃಶ್ಚಿಕಾಣಾಂ ತರಂಗಿಣೀ ॥೧೦೫॥

---

ಸಹ ಇದರಿಂದಲೇ ರಚಿಸಲ್ಪಟ್ಟಿತು. ಆ ಸ್ವರ್ಗಲೋಕವು ಇದರ ಪ್ರಭಾವದಿಂದಲೇ ಈಗ ಅತ್ಯಂತ ಸುಂದರವಾಗಿರುವುದು. ॥೧೦೧॥

ಆ ಮೇರುಪರ್ವತವು ಭೂಲೋಕವೆಂಬ ಮನೆಗೆ ಆಧಾರಸ್ತಂಭದಂತೆ ಭೂಮಿಯ ಮಧ್ಯದಲ್ಲಿರುವುದು. ಅಲ್ಲಿ ಸಕಲ ದೇವತೆಗಳ ಆವಾಸಸ್ಥಾನಗಳೂ ಇರುವುವು. ॥೧೦೨॥

ಸಮುದ್ರಗಳೆಲ್ಲವೂ ಕೋಟೆಯ ಕಂದಕದಂತಿದ್ದು ಮೇರುಪರ್ವತವನ್ನು ಸುತ್ತಲೂ ಆವರಿಸಿರುವುವು. ಅದರ ಕೆಳಭಾಗದಲ್ಲಿ ಸಪ್ತದ್ವೀಪಗಳಿಂದ ಕೂಡಿದ ಭೂಲೋಕವಿರುವುದು. ॥೧೦೩॥

ಆ ಪರ್ವತದ ತಪ್ಪಲುಗಳಲ್ಲಿ ಯಮನ ವಾಸಸ್ಥಾನವಾಗಿರುವ ಒಂದಾನೊಂದು ಪ್ರದೇಶವಿರುವುದು. ಆ ಯಮಾಲಯದ ಕೆಳಭಾಗದಲ್ಲಿ ವಿಲಕ್ಷಣವಾದ ಒಂದು ನದಿಯು ಪ್ರವಹಿಸುತ್ತಿರುವುದು. ॥೧೦೪॥

ಒಂದು ಪ್ರದೇಶದಲ್ಲಿ ಕ್ರೂರವಾದ ವಿಷಜ್ವಾಲೆಗಳನ್ನು ಕಾರುತ್ತಿರುವ ಸರ್ಪಗಳಿಂದ ಕೂಡಿರುವ ನದಿಯು ಅಲ್ಲಿ ಹರಿಯುತ್ತಿರುವುದು. ಇನ್ನೊಂದು ಕಡೆಯಲ್ಲಿ ಉನ್ನತವಾದ ಪರ್ವತದಂತೆ ರಾಶಿರಾಶಿಯಾಗಿ ಬಿದ್ದಿರುವ ಚೇಳುಗಳಿಂದ ತುಂಬಿ ಆ ನದಿಯು ಪ್ರವಹಿಸುತ್ತಲಿರುವುದು. ॥೧೦೫॥

ಕಂಟಕಾನಾಂ ಚ ತೀಕ್ಷ್ಣಾನಾಂ ತಿಷ್ಠತ್ಯೇಕಾ ತರಂಗಿಣೀ ।
ಕಂಟಕಾನಾಂ ಚ ತೀಕ್ಷ್ಣಾನಾಂ ಪರಿತಃ ಸಂತಿ ಪರ್ವತಾಃ ॥೧೦೬॥

ತತ್ತತ್ತರಂಗಿಣೀತೀರೇ ಪಿಶಾಚಾಃ ಸಂತಿ ಕೋಟಿಶಃ ।
ತದಾಲೋಕನಮಾತ್ರೇಣ ಭೀತಿರ್ಭವತಿ ದುಃಸಹಾ ॥೧೦೭॥

ತಸ್ಮಿನ್ಯಮಾಲಯೇ ಸಂತಿ ರಮ್ಯಾಣಿ ಸದನಾನ್ಯಪಿ ।
ಮಣಿಮುಕ್ತಾಮಯಾನ್ಯೇವ ಸುಧಾಯುಕ್ತಾನಿ ಕೋಟಿಶಃ ॥೧೦೮॥

ತತ್ರೋದ್ಯಾನಾನಿ ಸಂತ್ಯೇವ ತಾನಿ ಕಲ್ಪತರುವ್ರಜೇ ।
ಸಮಾಕ್ರಾಂತಾನ್ಯಪಾರಾಣಿ ದಿವ್ಯಪುಷ್ಪಯುತಾನ್ಯಪಿ ॥೧೦೯॥

ತೇಷ್ವೇವ ಬಿಲ್ವತರವಃ ಕೋಟಿಶಸ್ಸಂತಿ ಶೋಭನಾಃ ।
ತೇಷಾಂ ಪ್ರಭಾವಃ ಕೇನಾಪಿ ವಕ್ತುಮೇವ ನ ಶಕ್ಯತೇ ॥೧೧೦॥

---

ಮತ್ತೊಂದು ಪ್ರದೇಶದಲ್ಲಿ ತೀಕ್ಷ್ಣವಾದ ಮುಳ್ಳುಗಳಿಂದ ತುಂಬಿದ ಮತ್ತೊಂದು ದೊಡ್ಡ ನದಿಯು ಹರಿಯುತ್ತಿರುವುದು. ಆ ನದಿಯ ಸುತ್ತಲೂ ತೀಕ್ಷ್ಣವಾದ ಮುಳ್ಳುಗಳ ಪರ್ವತಗಳೇ ಕಾಣುತ್ತಿರುವುವು. ॥೧೦೬॥

ಆಯಾ ನದಿಗಳ ತೀರದಲ್ಲಿ ಅಸಂಖ್ಯಾತವಾದ ಪಿಶಾಚಿಗಳು ವಾಸವಾಗಿರುವುವು. ಅವುಗಳನ್ನು ನೋಡಿದ ಮಾತ್ರದಿಂದಲೇ ಸಹಿಸಲಸಾಧ್ಯವಾದ ಭಯವುಂಟಾಗುವುದು. ॥೧೦೭॥

ಆ ಯಮಾಲಯದಲ್ಲಿ ರತ್ನ, ಮುತ್ತು, ಮುಂತಾದ ಅಮೂಲ್ಯವಾದ ವಸ್ತುಗಳಿಂದ ರಚಿಸಲ್ಪಟ್ಟ ಅನೇಕ ಸುಂದರವಾದ ಅಂತರ್ಗೃಹಗಳಿರುವುವು. ಅವುಗಳಲ್ಲಿ ಅಮೃತವಿರುವುದು. ॥೧೦೮॥

ಅಲ್ಲಿ ಅನೇಕ ಸುಂದರವಾದ ಉದ್ಯಾನವನಗಳಿರುವುವು. ಅವುಗಳಲ್ಲಿ ಅಸಂಖ್ಯಾತ ಕಲ್ಪವೃಕ್ಷಗಳಿರುವುವು. ಆ ವೃಕ್ಷಗಳು ಅತ್ಯಂತ ಸುಗಂಧವಾದ ಹೂವುಗಳಿಂದ ಶೋಭಿಸುತ್ತಿರುವುವು. ॥೧೦೯॥

ಅದೇ ಉದ್ಯಾನವನಗಳಲ್ಲಿಯೇ, ಮನೋಹರವಾದ ಅನೇಕ ಬಿಲ್ವವೃಕ್ಷಗಳಿರುವುವು. ಅವುಗಳ ಮಹಿಮೆಯನ್ನು ಯಾರಿಂದಲೂ ವರ್ಣಿಸಲು ಸಾಧ್ಯವಿರುವುದಿಲ್ಲ. ॥೧೧೦॥

ತತ್ರೈವ ತಾವಚ್ಛಿವಮಂದಿರಾಣಿ ತಿಷ್ಠಂತಿ ರಮ್ಯಾಣಿ ಮಣಿಪ್ರಭಾಭಿಃ।
ಛನ್ನಾನಿ ದಿವ್ಯಪ್ರಸವೈರಪಾರೈಃ ಸುಧಾಸಮುದ್ರೈಶ್ಚ ಸಮಾವೃತಾನಿ ॥೧೧॥

ತತ್ರಾತಿಶಾಂಕರಾಃ ಸಂತಿ ಶಿವಾರಾಧನತತ್ಪರಾಃ ।
ತಸ್ಮಾದ್ವಿನಿರ್ಗಮಸ್ತೇಷಾಂ ಕದಾಚಿಜ್ಜಾಯತೇ ಮುದಾ ॥೧೨॥

ರಮ್ಯಾಣಿ ದೃಷ್ಟ್ವಾ ಶಿವಮಂದಿರಾಣಿ
ನ ಜಾಯತೇ ಜಾತು ಮನೋ ನಿವೃತ್ತಂ ।
ತತ್ರೈವ ತಾವನ್ನಿಯಮೇನ ನಿತ್ಯಂ
ಯಮಃ ಶಿವಾರಾಧನತತ್ಪರೋಽಭೂತ್ ॥೧೩॥

ಯಮಃ ಸ ತತ್ರೈವ ಶಿವಾರ್ಚನೇನ
ಕಾಲಂ ನಯತ್ಯೇವ ಶಿವಾರ್ಚಕಾಶ್ಚ ।
ತತ್ರೈವ ತಿಷ್ಠಂತಿ ಶಿವಾಲಯೇಭ್ಯಃ
ಶುಭಾನಿ ಸಂಪ್ರಾಪ್ಯ ಸುಖಾನಿ ನಿತ್ಯಂ ॥೧೪॥

---

ಅಲ್ಲಿ, ಸುಂದರವಾದ ಅನೇಕ ಶಿವದೇವಾಲಯಗಳಿರುವುವು. ಅವು ರತ್ನಗಳ ಕಾಂತಿಗಳಿಂದ ಮುಚ್ಚಲ್ಪಟ್ಟಿವೆ. ಅವುಗಳ ಮೇಲೆ ಸುಗಂಧಯುಕ್ತವಾದ ಹೂವುಗಳ ರಾಶಿಗಳೇ ಕಾಣುವುವು. ಅಲ್ಲದೇ, ಆ ದೇವಾಲಯಗಳ ಸುತ್ತಲೂ, ಅಮೃತ ಸಮುದ್ರವೇ ಆವರಿಸಿರುವುದು. ॥೧೧॥

ಆ ದೇವಾಲಯಗಳಲ್ಲಿ, ಈಶ್ವರಾರಾಧನಾಸಕ್ತರಾದ ಅನೇಕ ಭಕ್ತಾಗ್ರೇಸರರಿರುವರು. ಒಂದಾನೊಂದು ಸಮಯದಲ್ಲಿ, ಅವರು ದೇವಾಲಯದಿಂದ ಹೊರಕ್ಕೆ ಬರುವರು. ॥೧೨॥

ಸುಂದರವಾದ ಆ ಶಿವದೇವಾಲಯಗಳನ್ನು ನೋಡಿ ಮನಸ್ಸು ಎಂದಿಗೂ ತೃಪ್ತಿಯನ್ನು ಹೊಂದಲಾರದು. ಅಲ್ಲಿಯೇ, ಯಮನು ತಪ್ಪದೇ ನಿತ್ಯವೂ ಶಿವಪೂಜೆಯಲ್ಲಿ ಆಸಕ್ತನಾಗಿರುವನು. ಅವನ ಮನಸ್ಸು ಅಲ್ಲಿಂದ ಬಿಟ್ಟು ಬೇರೆ ಕಾರ್ಯಗಳಲ್ಲಿ ಸುಲಭವಾಗಿ ಪ್ರವರ್ತಿಸಲಾರದು. ॥೧೩॥

ಯಮನು ಅಲ್ಲಿಯೇ ವಾಸವಾಗಿದ್ದು, ಈಶ್ವರಾರಾಧನೆಯಿಂದ ಕಾಲವನ್ನು ಕಳೆಯುತ್ತಿರುವನು. ಅದರಂತೆಯೇ, ಅನೇಕ ಈಶ್ವರಾರಾಧಕರು ಅಲ್ಲಿ ಶಿವನನ್ನು ಆರಾಧಿಸುತ್ತಾ ಅತ್ಯಂತ ಸುಖದಿಂದ ಕಾಲವನ್ನು ಕಳೆಯುತ್ತಿರುವರು. ॥೧೪॥

ಯಮೋ ಯತ್ರಾಸ್ತಿ ಸಂತುಷ್ಟೋ ರತ್ನಶಂಕರಮಂದಿರೇ ।
ತತ್ರಾದ್ಭುತಂ ಲಿಂಗಮೇಕಂ ರಮ್ಯಂ ಮಣಿಮಯಂ ಯತಃ ॥೧೧೫॥

ತತ್ಪೂಜನೇನ ಸಂತುಷ್ಟೋ ಯಮಃ ಪ್ರತಿದಿನಂ ಮುಹುಃ ।
ತತ್ಪೂಜಾನಂತರಂ ಕಾರ್ಯಂ ಕರೋತ್ಯನ್ಯಚ್ಛಿವಾಜ್ಞಯಾ ॥೧೧೬॥

ತಲ್ಲಿಂಗದರ್ಶನಾದೇವ ಕಾರ್ಯಾಕಾರ್ಯವಿನಿರ್ಣಯಃ ।
ಚಿತ್ರಗುಪ್ತಾದಿಕಾನಾಂ ಚ ಯಮಸ್ಯಾಪಿ ವಿಶೇಷತಃ ॥೧೧೭॥

ತದಧೋಧೋಂಧಕಾರಾಂಧುಸಿಂಧುಬಂಧುರಕೋಟಯಃ ।
ತಿಷ್ಠಂತಿ ತಪ್ತಶೈಲಾಶ್ಚ ಪ್ರಲಯಾನಲಸನ್ನಿಭಾಃ ॥೧೧೮॥

ವಿಷಜ್ವಾಲಾಂಧವಃ ಕೇಽಪಿ ಕೇಽಪಿ ವೃಶ್ಚಿಕಸಿಂಧವಃ ।
ಅಮೇಧ್ಯಾಂಧುಗಣಾಃ ಕೇಽಪಿ ರೇತೋಮೂತ್ರಾಂಧವಸ್ತತಃ ॥೧೧೯॥

---

ಯಮನು, ರತ್ನಖಚಿತವಾದ ಯಾವ ಶಿವಾಲಯದಲ್ಲಿ ವಾಸಿಸುತ್ತಿರುವನೋ, ಅದೇ ಶಿವಾಲಯದಲ್ಲಿ, ಸುಂದರವಾದ ಮತ್ತು ರತ್ನಖಚಿತವಾದ ಒಂದಾನೊಂದು ಈಶ್ವರಲಿಂಗವಿರುವುದು. ॥೧೧೫॥

ಪ್ರತಿದಿನ ಈಶ್ವರನನ್ನು ಆರಾಧಿಸುವುದರಿಂದಲೇ, ಸಂತೋಷಭರಿತನಾಗುವ ಯಮನು, ಪೂಜೆಯು ನೆರವೇರಿದ ಬಳಿಕ, ಶಿವನ ಅನುಮತಿಯಿಂದ ತನ್ನ ಕರ್ತವ್ಯಗಳನ್ನು ನೆರವೇರಿಸುವನು. ॥೧೧೬॥

ಯಮನೂ, ಮತ್ತು ಚಿತ್ರಗುಪ್ತಾದಿಗಳು, ಆ ಶಿವಲಿಂಗದ ದರ್ಶನವಾದ ಬಳಿಕವೇ, ತಮ್ಮ ಕರ್ತವ್ಯಾಕರ್ತವ್ಯಗಳನ್ನು ನಿಶ್ಚಯಿಸುವರು. ॥೧೧೭॥

ಅದರ ಅತ್ಯಂತ ಕೆಳಭಾಗದಲ್ಲಿ ವಿಷಜ್ವಾಲೆಗಳನ್ನು ಕಾರುತ್ತಿರುವ, ಅಸಂಖ್ಯಾತವಾದ, ಮತ್ತು ವಿಶಾಲವಾದ ನದಿಗಳು ಪ್ರವಹಿಸುತ್ತಿರುವುವು. ಅದಲ್ಲದೇ ಅಲ್ಲಲ್ಲಿ, ಕೆಂಪಾಗಿ ಕಾದಕೆಂಡದಂತೆ ತಾಪವನ್ನುಂಟುಮಾಡುವ ಮತ್ತು ಪ್ರಲಯಕಾಲದ ಅಗ್ನಿಗೆ ಸದೃಶವಾದ ಅನೇಕ ಪರ್ವತಗಳಿರುವುವು. ॥೧೧೮॥

ಮತ್ತು ಅಲ್ಲಿ ವಿಷಜ್ವಾಲೆಗಳಿಂದ ಕೂಡಿಕೊಂಡಿರುವ ಕೆಲವು ಕೂಪಗಳೂ, ಚೇಳುಗಳಿಂದ ಕೂಡಿರುವ ನದಿಗಳೂ, ಅಮೇಧ್ಯದಿಂದ ತುಂಬಿರುವ ಬಾವಿಗಳೂ

ತಪ್ತಲೋಹಿತಪೂಯಾದಿಸಿಂಧವಃ ಸಂತಿ ಕೋಟಿಶಃ ।
ಕ್ರಿಮಿಕೀಟಾಂಧವಃ ಸಂತಿ ವಜ್ರಪಂತಾಬ್ಧಿಕೋಟಯಃ ॥೧೨೦॥

ಸಂತಪ್ತಭಿಂಡಿವಾಲಾದ್ರಿಕೋಟಯಃ ಸಂತಿ ಭೀಷಣಾಃ ।
ಸಂತಪ್ತಶಸ್ತ್ರಗಿರಯಃ ಸಂತಿ ತತ್ರಾತಿಭೀಷಣಾಃ ॥೧೨೧॥

ತಪ್ತಲೋಹಾಂಗನಾಃ ಸಂತಿ ಕೋಟಿಶಸ್ತತ್ರ ದುಃಸಹಾಃ ।
ಸಂತಿ ತತ್ರೈವ ಸಂತಪ್ತಶರಪಂಜರಕೋಟಯಃ ॥೧೨೨॥

ಅಶಾಂಭವಾನಾಂ ಸರ್ವೇಷಾಂ ತೇ ತಾವದ್ಭಯದಾಃ ಸದಾ ।
ತದರ್ಥಮೇವಂ ನಿರ್ಮಾಣಂ ತೇಷಾಮಿತಿ ವಿನಿಶ್ಚಯಃ ॥೧೨೩॥

---

ಇರುವುವು. ಕೆಲವೆಡೆಗಳಲ್ಲಿ, ರೇತಸ್ಸು ಮತ್ತು ಮೂತ್ರಗಳಿಂದ ಅಸಹ್ಯವಾಗಿರುವ ಕೊಳಗಳೂ ಕಂಡುಬರುತ್ತಿವೆ. ॥೧೧೯॥

ಒಂದು ಕಡೆ, ಕೆಂಪಾಗಿ ಕಾದಿರುವ ಕಬ್ಬಿಣದ ರಸದಿಂದ ಕೂಡಿರುವ ನದಿಗಳಿರುವುವು. ಇನ್ನೊಂದು ಕಡೆ ಕ್ರಿಮಿಕೀಟಗಳಿಂದ ತುಂಬಿತುಳುಕುತ್ತಿರುವ ಬಾವಿಗಳೂ, ಮತ್ತೊಂದು ಕಡೆ ಕಾಣುತ್ತಿರುವುವು. ॥೧೨೦॥

ಕೆಲವೆಡೆಗಳಲ್ಲಿ, ಕೆಂಪಾಗಿ ಕಾದಿರುವ ಉದ್ದವಾದ ಕಬ್ಬಿಣದ ಸರಳುಗಳ ಪರ್ವತಗಳನೇಕವಿರುವುವು. ಇನ್ನು ಕೆಲವೆಡೆಗಳಲ್ಲಿ, ಚೆನ್ನಾಗಿ ಕಾದು ಭಯಂಕರವಾಗಿ ಕಾಣಿಸುವ ಆಯುಧಗಳ ಪರ್ವತಗಳಿರುವುವು. ॥೧೨೧॥

ಅಲ್ಲಿ, ಕೆಂಪಾಗಿ ಕಾದ ಕಬ್ಬಿಣದಿಂದ ರಚಿಸಲ್ಪಟ್ಟ, ಕಬ್ಬಿಣದ ಸ್ತ್ರೀವಿಗ್ರಹಗಳು ಅಸಂಖ್ಯಾತವಾಗಿರುವುವು. ಅವುಗಳನ್ನು ನೋಡಿದ ಮಾತ್ರದಿಂದಲೇ ದಾರುಣವಾದ ವೇದನೆಯುಂಟಾಗುವುದು. ಮತ್ತು ಅಲ್ಲಿ, ಲೋಹದಿಂದ ನಿರ್ಮಿಸಲ್ಪಟ್ಟ ಬಾಣಗಳ ಪಂಜರಗಳಿರುವುವು. ಅವೂ ಸಹ ಕೆಂಪಾಗಿ ಕಾದಿರುತ್ತವೆ. ॥೧೨೨॥

ಈ ವಸ್ತುಗಳೆಲ್ಲಾ ಈಶ್ವರದ್ವೇಷಿಗಳಾದವರಿಗೆ ಅತ್ಯಂತ ಭಯವನ್ನುಂಟು ಮಾಡುವುವು. ಅವು ಈಶ್ವರದ್ವೇಷಿಗಳಿಗೆ ಯಾತನೆಯನ್ನುಂಟುಮಾಡುವುದಕ್ಕೋಸ್ಕರವೇ ನಿರ್ಮಿಸಲ್ಪಟ್ಟಿರುವುವು. ॥೧೨೩॥

ತನ್ನಿರ್ಮಾಣೇನ ಸಂತುಷ್ಟಃ ಕಾಲಕಾಲಾಜ್ಞಯಾ ಯಮಃ ।
ತದ್ರಕ್ಷಕಾಃ ಕಾಲದೂತಾಃ ಕೋಟಿಶೋ ಗಣನಾಪಿ ನ ॥೧೨೪॥

ಅಶಾಂಭವಾನ್ಸಮಾನೀಯ ಪಾತಯಂತಿ ಪ್ರಯತ್ನತಃ ।
ತೇಷು ತೇಷು ಪ್ರದೇಶೇಷು ಕೋಟಿಶಃ ಕ್ರೋಧಪೂರ್ವಕಂ ॥೧೨೫॥

ಅಶಾಂಭವಮುಖೇ ದೃಷ್ಟೇ ಯಮದೂತಮುಖಾನ್ಯಪಿ ।
ಅಗ್ನಿಕಲ್ಪಾನಿ ಜಾಯಂತೇ ಸರ್ವದಾ ಯಮಶಾಸನಾತ್ ॥೧೨೬॥

ಯಮಶಾಸನವಾರ್ತಾಪಿ ಸ್ವದೂತಾನ್ಪ್ರತಿ ಯಾ ಪುರಾ ।
ಕೃತಾ ಸಾಪಿ ಪರಂ ಶ್ರಾವ್ಯಾ ತೇನ ಭಕ್ತಿರ್ಭವೇ ಭವೇತ್ ॥೧೨೭॥

ಯೈಃ ಸಂತ್ಯಕ್ತಂ ಫಾಲಭಾಗೇ ತ್ರಿಪುಂಡ್ರಂ
ರುದ್ರಾಕ್ಷಾಣಾಂ ಧಾರಣಂ ಸರ್ವಥಾಪಿ ।

---

ಈಶ್ವರಾಜ್ಞೆಗನುಸಾರವಾಗಿ ಯಮನು ಅವುಗಳನ್ನು ನಿರ್ಮಿಸಿ ಸಂತೋಷ ದಿಂದಿರುವನು. ಅವುಗಳನ್ನು ರಕ್ಷಿಸಲು ಅನೇಕ ಯಮದೂತರನ್ನು ನೇಮಿಸಲಾಗಿದೆ. ಅವರನ್ನು ಲೆಕ್ಕಿಸುವುದೇ ಅಸಾಧ್ಯವಾಗಿದೆ. ॥೧೨೪॥

ಯಮದೂತರು, ಶಿವದ್ವೇಷಿಗಳಾದವರನ್ನು ಬಲಾತ್ಕಾರದಿಂದ ಹಿಡಿದೆಳೆದು, ಭಯಂಕರವಾದ ಆ ಪ್ರದೇಶಗಳಲ್ಲಿ ಸಿಟ್ಟಿನಿಂದ ಬೀಳಿಸುವರು. ಹಾಗೆ ದುಃಖವನ್ನು ಅನುಭವಿಸುವವರೂ ಅನೇಕರಿರುವರು. ॥೧೨೫॥

ಶಿವದ್ವೇಷಿಗಳಾದ ಜನರ ಮುಖಗಳನ್ನು ನೋಡಿದೊಡನೆಯೇ, ಯಮನ ಆಜ್ಞಾಧಾರಕರಾದ ಯಮದೂತರ ಮುಖಗಳು ಸಹ ಕ್ರೋಧಾವೇಶದಿಂದ ಅಗ್ನಿ ಯಂತೆ ಕೆಂಪಾಗಿ ಉರಿಯುವುವು. ॥೧೨೬॥

ಹಿಂದೆ ಒಂದಾನೊಂದು ಕಾಲದಲ್ಲಿ ಈಶ್ವರನು ತನ್ನ ದೂತರನ್ನು ಕುರಿತು, ಯಮನನ್ನು ಶಿಕ್ಷಿಸುವಂತೆ ಆಜ್ಞೆಯನ್ನಿತ್ತಿದ್ದನು. ಅಂದಿನಿಂದ ಯಮನು ತನ್ನ ದೂತರನ್ನು ಕುರಿತು, ಶಿವದ್ವೇಷಿಗಳಾದ ಜನರನ್ನು ಶಿಕ್ಷಿಸುವಂತೆ ಆಜ್ಞೆಯನ್ನಿತ್ತಿ ರುವನು. ಅದನ್ನು ಕೇಳಿದೊಡನೆಯೇ, ಶಿವನಲ್ಲಿ ಭಕ್ತಿಯುದಯಿಸುವುದು. ॥೧೨೭॥

ಯಾರು, ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನೂ, ಕಂಠದಲ್ಲಿ ರುದ್ರಾಕ್ಷಗಳನ್ನೂ ಧರಿಸುವುದಿಲ್ಲವೋ, ಅಂತಹವರು ಭಯಂಕರವಾದ ಯಮಲೋಕದ ಆ ಪ್ರದೇಶ

ತೈಸ್ತೇ ದೇಶಾಸ್ಸರ್ವಥಾ ವ್ಯಾಪೃತಾಸ್ತೇ
ದುಃಖಾಪಾರಾಂಭೋಧಿಮಗ್ನಾ ವಸಂತಿ ॥೧೨೮॥

ಯೈರುದ್ಧೂಳನಮಾದರೇಣ ನ ಕೃತಂ ಭಾಲೇ ತ್ರಿಪುಂಡ್ರಂ ಮುದಾ
ರುದ್ರಾಕ್ಷಾಭರಣಂ ಚ ಕರ್ಣಯುಗಳೇ ಕಂಠೇಽಪಿ ಬಾಹುದ್ವಯೇ ।
ತೇ ಸಂಪ್ರಾಪ್ಯ ತಥಾವಿಧಸ್ಥಲಕುಲವ್ಯಾಪಾರದೀನಾಃ ಪರಂ
ತಿಷ್ಠಂತ್ಯೇವ ತದರ್ಥಮೇವ ರಚನಾ ತೇಷಾಂ ಯತಃ ಸಂಮತಾ ॥೧೨೯॥

ಯೈರ್ಲಿಂಗಾರ್ಚನಮಾದರೇಣ ನ ಕೃತಂ ಪ್ರಾತಃ ಪ್ರದೋಷೇಷು ವಾ
ತೈರೇವಾಮಿತಪಾತಕಾಘನಿಲಯೈರ್ದುಃಖಾಲಯೇ ಸಂತತಂ ।
ತತ್ರದ್ದುಃಸಹಯಾತನಾಸ್ಥಲಕುಲವ್ಯಾಪಾರದುಃಖೈಃ ಪರಂ
ದುರ್ಜೀರ್ಯಃ ಸಮಯೋ ವಿನೇಯ ಇತಿ ತೇ ತೇಭ್ಯೋ ನ ನಿರ್ಯಾಂತ್ಯಪಿ
॥೧೩೦॥

---

ಗಳನ್ನು ಪಡೆದು, ಅಲ್ಲಿ ದಾರುಣವಾದ ದುಃಖಗಳನ್ನು ಅನುಭವಿಸುತ್ತಾ ಬಹುಕಾಲ ದವರೆಗೆ ವಾಸಿಸುವರು. ॥೧೨೮॥

ಯಾರು ಆದರದಿಂದ ತಮ್ಮ ಶರೀರವಾದ್ಯಂತವೂ ಭಸ್ಮವನ್ನು ಲೇಪಿಸಿಕೊಳ್ಳುವುದಿಲ್ಲವೋ, ಮತ್ತು ಹಣೆಯಲ್ಲಿ ವಿಭೂತಿಯ ತ್ರಿಪುಂಡ್ರಗಳನ್ನು ಧರಿಸುವುದಿಲ್ಲವೋ, ಹಾಗೆಯೇ ಕಂಠ, ಬಾಹು ಮುಂತಾದ ಪ್ರದೇಶಗಳನ್ನು ರುದ್ರಾಕ್ಷಿಗಳಿಂದ ಅಲಂಕರಿಸುವುದಿಲ್ಲವೋ, ಅವರು, ಹಿಂದೆ ಹೇಳಿದ ಭಯಂಕರವಾದ ಪ್ರದೇಶವನ್ನು ಹೊಂದಿ, ಅಲ್ಲಿ ಭಯಂಕರವಾದ ದುಃಖಕ್ಕೆ ಗುರಿಯಾಗುವರು. ಅವರಿಗೋಸ್ಕರವೇ ಆ ಪ್ರದೇಶಗಳು ನಿರ್ಮಿಸಲ್ಪಟ್ಟಿರುವುವು. ॥೧೨೯॥

ಯಾರು, ಪ್ರಾತಃಕಾಲದಲ್ಲಿಯೂ, ಮತ್ತು ಪ್ರದೋಷಕಾಲಗಳಲ್ಲಿಯೂ, ಶಿವಲಿಂಗವನ್ನು ಭಕ್ತಿಯಿಂದ ಪೂಜಿಸುವುದಿಲ್ಲವೋ, ಅಪಾರವಾದ ಪಾಪಗಳಿಗೆ ಗುರಿಯಾದ ಅವರು, ತೀವ್ರವಾದ ಯಾತನೆಗಳಿಗೆ ನೆಲೆಯಾದ ಈ ಯಮಾಲಯವನ್ನು ಪಡೆದು ಅಲ್ಲಿ ಭಯಂಕರವಾದ ಯಾತನೆಗಳನ್ನು ಅನುಭವಿಸುತ್ತಾ ಕಾಲವನ್ನು ಕಳೆಯುವರು. ಯಮಾಲಯಕ್ಕೆ ಹೋದ ಅವರು ಬಳಿಕ ಹಿಂದಿರುಗುವಂತಿಲ್ಲ. ॥೧೩೦॥

ಯೇ ಪಂಚಾಕ್ಷರಮಂತ್ರರಾಜಜಪತಃ ಪೂತಾ ನ ತೇ ಸರ್ವಥಾ
ತೇ ತೇಷ್ವಗ್ನಿಮಹಾಗ್ನಿಸಿಂಧುಷು ಸದಾ ತಿಷ್ಠಂತಿ ವಿಷ್ಠಾಶನಾಃ ।
ತೇಭ್ಯಸ್ತ್ವೈಶ್ಚ ನಿವಾರಿತಾ ಅಪಿ ನ ಕೈರತ್ಯಚ್ಯುತಾ ಯಾತನಾ
ಪ್ರಾಪ್ತವ್ಯಾ ಖಲು ಕಲ್ಪಕೋಟಿಗಣಸಾ ನಾಸ್ತ್ಯೇವ ಸರ್ವಾತ್ಮನಾ ॥೧೩೧॥

ನೀತೋ ಯೈರ್ನ ದುರಾತ್ಮಭಿಃ ಖಲು ನಿಭಃ ಕಾಲಕ್ಷಣಂ ವಾ ಮುಧಾ
ಶ್ರೀಮೃತ್ಯುಂಜಯಪೂಜನೇನ ಸುಕೃತಾಂಭೋಧಿಪ್ರವೃದ್ಧ್ಯೈ ಸದಾ ।
ತೇ ತಾವನ್ನಿರಯಂ ಪ್ರಯಾಂತಿ ಸಹಸಾ ತನ್ನಿರ್ಗಮೋ ದುರ್ಗಮ
ಸ್ತೇ ಕಿಂ ದುರ್ಭಗದುರ್ಭಗಾ ಅಪಿ ನ ತೇ ದುಃಖಾಲಯಾಸ್ತ್ವಾಸಲಾಃ॥೧೩೨॥

ಶ್ರೀಕಾಶೀನಗರಾದಿಶಂಕರಪುರೀವಾಸಪ್ರಭಾವಪ್ರಥಾ
ಬೋಧಾಪಾರಕಥಾಸುಧಾನಿಧಿಲಸತ್ಕರ್ಣಾರ್ಣವಾಸ್ಪೂರ್ಣತಃ ।
ಆನಂದಾಮೃತಧಾರಯಾ ಶಿವಕಥಾಸಾರಪ್ರಪಾಜಾತಯಾ
ತುಷ್ಟಾಸ್ತತ್ರ ನಯಂತಿ ಶಂಕರರತಾಸ್ತೇ ಯಾಂತಿ ತಂ ಶಂಕರಂ ॥೧೩೩॥

---

ಯಾರು, ಮಂತ್ರಗಳಲ್ಲಿ ಶ್ರೇಷ್ಠವೆಂದೆನಿಸಿಕೊಂಡಿರುವ ಶಿವಪಂಚಾಕ್ಷರೀಮಂತ್ರ ವನ್ನು ಜಪಿಸಿ ಪರಿಶುದ್ಧರಾಗಿರುವುದಿಲ್ಲವೋ, ಅವರು, ಅಪಾರವಾದ ಅಗ್ನಿ ನದಿ ಗಳಲ್ಲಿ ಬಿದ್ದೂ, ಅಮೇಧ್ಯವನ್ನು ಭಕ್ಷಿಸುತ್ತಾ ವಾಸಿಸುವರು. ಅವರು ಆ ಯಾತ ನೆಯನ್ನು ಬೇಡವೆಂದರೂ, ಈಶ್ವರ ಸಂಕಲ್ಪಕ್ಕೊಳಪಟ್ಟು, ಅದನ್ನು ಅನುಭವಿಸಲೇ ಬೇಕಾಗುವುದು. ಅದನ್ನು ತಪ್ಪಿಸುವ ಸಾಮರ್ಥ್ಯವು ಯಾರಿಗೂ ಇರುವುದಿಲ್ಲ. ಯಾತನೆಯನ್ನು ಅನುಭವಿಸುವ ಕಾಲವನ್ನು ಲೆಕ್ಕಿಸಲು ಸಾಧ್ಯವೇ ಇಲ್ಲ. ॥೧೩೧॥

ಯಾವ ದುರಾತ್ಮರು, ತಮ್ಮ ಪುಣ್ಯಗಳನ್ನು ಅಭಿವೃದ್ಧಿಗೊಳಿಸುವುದ ಕ್ಕೋಸ್ಕರ, ಅಲ್ಪವಾದ ಕಾಲವನ್ನಾದರೂ ಶಿವಪೂಜೆಯಲ್ಲಿ ಕಳೆಯಲು ಅಪೇಕ್ಷಿ ಸರೋ, ಅವರು ನಿಶ್ಚಯವಾಗಿಯೂ ನರಕವನ್ನು ಹೊಂದುವರು. ಮತ್ತು ಅವರು ಅಲ್ಲಿಂದ ಹಿಂತಿರುಗುವಂತಿಲ್ಲ. ಅವರು, ಪಾಪಿಗಳಲ್ಲಿ ಅತ್ಯಂತ ಅಧಮರೆನಿಸುವರು. ಸಕಲ ದುಃಖಗಳಿಗೂ ಅವರೇ ನೆಲೆಯಾಗುವರು. ॥೧೩೨॥

ಪುಣ್ಯಶಾಲಿಗಳಾದ ಈಶ್ವರಭಕ್ತರು, ಶ್ರೀಶಿವನು ನೆಲಸಿರುವ ಕಾಶೀನಗರವೇ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ವಾಸಮಾಡಿ, ಅನವರತವೂ, ಶಿವಕಥಾ ಶ್ರವಣ

ಯೇ ಯೇ ಶಂಕರಪೂಜಕಾಃ ಕತಿಪಯಗ್ರಾಮಾಶ್ರಯಾಃ ಸಂತತಂ
ಲಿಂಗಾರಾಧನತತ್ಪರಾಃ ಶಿವಜನಾಸಂಗೋತ್ಸವಾಃ ಸಂತತಂ ।
ತಂ ದೃಷ್ಟ್ವಾ ಯಮಮೇವ ಸುಂದರತಮಂ ಧೀರಂ ಪ್ರಸನ್ನಂ ಪರಂ
ಹೃಷ್ಟಾಸ್ತೇನ ಸಮರ್ಚಿತಾಃ ಶಿವಪದಂ ಯಾಂತೀತಿ ಸತ್ಯಂ ವಚಃ ॥೧೩೪॥

ಶಾಂಕರಾನ್ ಪ್ರತಿ ಯಮೋ ನ ಯಮೋಽಸೌ
ಧರ್ಮ ಏವ ಪರಮಃ ಸ ತು ತೇಷಾಂ ।
ಸೇವಕಃ ಖಲು ಸ ತತ್ಪದಪದ್ಮಾ
ರಾಧನಾತಿನಿಪುಣಃ ಸ ಗುಣೀ ಚ ॥೧೩೫॥

ಶೂಲಪಾಣಿಚರಣಸ್ಮರಣಂ ಚೇ
ತ್ಪಾಪಿನಾಪಿ ಯದಿ ದೈವವಶೇನ ।

---

ಮಾಡುತ್ತಾ, ಅದರಿಂದುಂಟಾಗುವ ಆನಂದಾಮೃತದ ಸವಿಯನ್ನು ಅನುಭವಿಸುತ್ತಾ, ಸುಖವಾಗಿ ಕಾಲವನ್ನು ಕಳೆಯುವರು. ಈಶ್ವರನಲ್ಲಿಯೇ ಆಸಕ್ತರಾದ ಅವರು, ಅಂತ್ಯದಲ್ಲಿ ಪವಿತ್ರವಾದ ಶಿವಸಾನ್ನಿಧ್ಯವನ್ನು ಪಡೆಯುವರು. ಅವರಿಗೆ ಎಂದೂ ನರಕಭಯವಿರುವುದಿಲ್ಲ. ॥೧೩೩॥

ಗ್ರಾಮವಾಸಿಗಳಾದ ಈಶ್ವರಾರಾಧಕರೆಲ್ಲರೂ, ಈಶ್ವರ ಲಿಂಗಾರಾಧನೆಯಲ್ಲಿಯೇ ಆಸಕ್ತರಾಗಿ, ಈಶ್ವರ ಭಕ್ತರೊಂದಿಗೆ ಸಂಗವನ್ನು ಬೆಳೆಸಿ ಆನಂದಭರಿತರಾಗಿ, ಅಂತ್ಯದಲ್ಲಿ ಸುಂದರನೂ, ಗಂಭೀರನೂ, ಧೀರನೂ, ಆದ ಯಮನನ್ನು ಸಂದರ್ಶಿಸಿ ಅವನಿಂದ ಪೂಜಿಸಲ್ಪಟ್ಟವರಾಗಿ ಈಶ್ವರ ಸಾನ್ನಿಧ್ಯವನ್ನು ಹೊಂದುವರು. ಇದು ಸತ್ಯ. ॥೧೩೪॥

ಯಮನು ದುಷ್ಟರನ್ನು ನಿಗ್ರಹಿಸುವವನಾದರೂ ಈಶ್ವರಾರಾಧಕರನ್ನು ಶಿಕ್ಷಿಸುವುದಿಲ್ಲ. ಏಕೆಂದರೆ, ಈಶ್ವರನನ್ನು ಆರಾಧಿಸುವುದೇ ಅವರಿಗೆ ವಿಹಿತವಾದ ಧರ್ಮವಾಗಿರುವುದು. ಯಮನು ಈಶ್ವರಾರ್ಚಕರ ಸೇವಕನಾಗಿದ್ದು ಅವರ ಪಾದ ಪದ್ಮಗಳನ್ನು ಪೂಜಿಸುವನಲ್ಲದೆ, ಗುಣಶಾಲಿಯೂ ಆಗಿರುವನು. ಅಂತಹವನು ಈಶ್ವರಾರಾಧಕರನ್ನು ಹಿಂಸಿಸುವನೇ? ॥೧೩೫॥

ಪಾಪಿಯಾದರೂ ದೈವಾಧೀನತೆಯಿಂದ, ಈಶ್ವರನ ಪಾದಗಳನ್ನು ಸ್ಮರಿಸಿ,

ಶೈವಸಂಗತಿಮವಾಪ್ಯ ಕೃತಾರ್ಥ
ಸ್ತರ್ಹಿ ಸಂಸದಿ ಮಹಾರ್ಹತಮಃ ಸ್ಯಾತ್ ॥೧೩೬॥

ಯಮೋಽಪಿ ಸಾಕ್ಷಾನ್ನ ಯಮಾಂತಕಾರ್ಚಾ
ಪರಾಯಣಾನ್ನಿಷ್ಠುರದೃಷ್ಟಿಪಾತೈಃ ।
ನ ಪಶ್ಯತೀತಿ ಸ್ಫುಟಮೇತದುಕ್ತಂ
ಶ್ರೀನೀಲಕಂಠಾರ್ಚನಭಕ್ತಿಲೇಶಾತ್ ॥೧೩೭॥

ಲಿಂಗಾರಾಧನತತ್ಪರಸ್ಯ ಮಹಿಮಾ ನ ಜ್ಞಾಯತೇ ಸರ್ವಥಾ
ತಾವತ್ಸಾಧು ಯಮೋ ನ ವೇದ ನ ವಿಧಿರ್ನಾರಾಯಣೋ ವಾ ತತ್ ।
ತತ್ಸಾಮರ್ಥ್ಯವಿಶೇಷಲೇಶಕಲನಾತ್ಕಾಲೋಽಪಿ ತತ್ಪೂಜನ
ವ್ಯಾಸಕ್ತೋ ಭವತೀತಿ ಕೇವಲಮಹಂ ಜಾನೇ ನ ಜಾನೇ ಕಥಂ ॥೧೩೮॥

ಯಃ ಶರ್ವಂ ಸಕೃದಪ್ಯಖರ್ವಹೃದಯಾನಂದೇನ ಸಂಪೂಜಯೇ
ತ್ತತ್ಪಾದಾರ್ಚನತತ್ಪರಂ ಯದಿ ಮನಸ್ತರ್ಹಿ ಪ್ರಸನ್ನಃ ಶಿವಃ ।

---

ಈಶ್ವರಭಕ್ತರ ಸಹವಾಸವನ್ನು ಬೆಳೆಸಿದುದೇ ಆದರೆ, ಅವನು ವಿದ್ವದ್ಗೋಷ್ಠಿಯಲ್ಲಿ ಶ್ರೇಷ್ಠತಮನೆಂದು ಪರಿಗಣಿಸಲ್ಪಡುವನು. ॥೧೩೬॥

ಮೃತ್ಯುಂಜಯನಾದ ಶಿವನನ್ನು ಅರ್ಚಿಸುವವರನ್ನು ಯಮನೂ ತನ್ನ ಕಠೋರವಾದ ನೇತ್ರಗಳಿಂದ ನೋಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಈಶ್ವರಭಕ್ತಿಯ ಮಹಿಮೆಯಿಂದ, ಯಮನು ಅವರಿಗೆ ಯಾವ ತೊಂದರೆಯನ್ನೂ ಉಂಟುಮಾಡಲಾರನು. ॥೧೩೭॥

ಶಿವಲಿಂಗಾರ್ಚನೆಯಲ್ಲಿ ಆಸಕ್ತನಾದವನ ಮಹಿಮೆಯನ್ನು ತಿಳಿಯಲು, ಎಂದಿಗೂ ಸಾಧ್ಯವಿಲ್ಲ. ಅದನ್ನು ಯಮ, ಬ್ರಹ್ಮ, ವಿಷ್ಣು ಇವರಾರೂ ಅರಿಯಲಾರರು. ಆದುದರಿಂದಲೇ, ಈಶ್ವರಾರಾಧಕನ ಅಲ್ಪವಾದ ಮಹಿಮೆಯನ್ನು ಆಲೋಚಿಸುವ ಮಾತ್ರದಿಂದಲೇ, ಯಮನೂ ಸಹ, ಅವರನ್ನು ಪೂಜಿಸುವುದರಲ್ಲಿ ಆಸಕ್ತನಾನಾಗುವನೆಂಬ ಅಂಶವನ್ನು ಮಾತ್ರ ನಾನು ದೃಢವಾಗಿ ಹೇಳಬಲ್ಲೆನು. ಅದಕ್ಕೆ ಕಾರಣವನ್ನು ಮಾತ್ರ ನಾನು ಅರಿಯಲಾರೆ. ॥೧೩೮॥

ಯಾವನು, ವಿಶಾಲವಾದ ಮನೋಭಾವನೆಯಿಂದ ಶಿವನನ್ನು ಅರ್ಚಿಸುವನೋ ಅವನೇ ಧನ್ಯನು. ಚಿತ್ತವು ಈಶ್ವರಾರಾಧನೆಯಲ್ಲಿ ಆಸಕ್ತವಾದ ಮಾತ್ರ

ಆಸನ್ನಸ್ಮರಣೇನ ಕೇವಲಮುಮಾಕಾಂತಃ ಸ ಶಾಂತಸ್ತತಃ
ಸಂತಸ್ತತ್ಪದಪಂಕಜಂ ಹೃದಿ ಮುಹುರ್ಧ್ಯಾತ್ವಾ ವಸಂತಿ ಧ್ರುವಂ ॥೧೩೯॥

ಯೋ ಬಿಲ್ವಾಂಕುರಪೂಜಯಾಪಿ ಸಕೃದಸ್ಯಾರ್ತಿಂ ಹರತ್ಯನ್ವಹಂ
ಪ್ರೀತ್ಯಾ ಸಂತತಮಂತಕಾಂತಕಪದಾಂಭೋಜಾರ್ಚನಾತ್ಯಾದರಃ।
ಸಂಸಾರಾದಘಸಾಗರಾದಪಿ ತರತ್ಯತ್ಯದ್ಭುತಂ ಕೇವಲಂ
ತತ್ಪಾದಸ್ಮರಣೇನ ಮುಕ್ತಿರಿತಿ ಮೇ ಬುದ್ಧಿಃ ಪ್ರವೃದ್ಧಾ ಖಲು ॥೧೪೦॥

ಸಂಸಾರಾನ್ನ ಬಿಭೇತಿ ಪಾತಕಕುಲಾತ್ಕಾಲಾನಲಾತ್ಕಾಲತ
ಸ್ತದ್ದೂತಾಮಿತವಿಕ್ರಮಾದಪಿ ಮಹಾದೇವಾರ್ಚಕಃ ಕೇವಲಂ।
ಕಾಲೇನಾಪಿ ಸಮರ್ಚಿತೋ ಭವತಿ ತಂ ಕಃ ಕಾಲಕಾಲಾರ್ಚಕಂ
ಭಕ್ತ್ಯಾ ನಾರ್ಚಯತಿ ಪ್ರಸನ್ನಹೃದಯಂ ತ್ಯಕ್ತ್ವಾ ಪರಂ ದುರ್ಜನಂ॥೧೪೧॥

---

ದಿಂದಲೇ ಶಿವನು ಪ್ರಸನ್ನನಾಗುವನು. ತನ್ನನ್ನು ಸ್ಮರಿಸಿದ ಮಾತ್ರದಿಂದಲೇ ಅವನು ಸಂತುಷ್ಟನಾಗುವನು. ದುದರಿಂದಲೇ ಸತ್ಪುರುಷರು, ಶಿವನ ಅಡಿದಾವರೆಗಳನ್ನು ಮನಸ್ಸಿನಲ್ಲಿ ಸದಾ ಧ್ಯಾನಿಸುತ್ತಾ ಕಾಲವನ್ನು ಕಳೆಯುವರು. ॥೧೩೯॥

ಯಾವ ದೇವನು, ಬಿಲ್ವಾಂಕುರಗಳಿಂದ ಪೂಜಿಸಿದ ಮಾತ್ರದಿಂದಲೇ ಮನೋವ್ಯಾಧಿಯನ್ನು ಹೋಗಲಾಡಿಸುವನೋ, ಮೃತ್ಯುಂಜಯನಾದ ಆ ದೇವ ದೇವನ, ಅಡಿದಾವರೆಗಳ ಪೂಜೆಯಲ್ಲಿ ಆಸಕ್ತನಾದ ಭಕ್ತನು, ಸಂಸಾರ ಸಾಗರದಿಂದ ಪಾರಾಗುವನು. ಶಿವ ಪಾದಸ್ಮರಣೆಯಿಂದಲೇ ಮುಕ್ತಿಯು ಲಭಿಸುವುದೆಂದು ನಾನು ನಿಶ್ಚಯಿಸಿರುವೆನು. ॥೧೪೦॥

ಈಶ್ವರಾರಾಧಕನು, ಪಾಪಗಳಿಗಾಗಲಿ ಯಮನಿಗಾಗಲಿ ಅಥವಾ ಯಮದೂತರಿಗಾಗಲಿ ಹೆದರುವುದಿಲ್ಲ. ಅದಲ್ಲದೇ ಈಶ್ವರಾರಾಧಕನನ್ನು ಯಮನೂ ಸಹ ಅರ್ಚಿಸುವನು. ಹೀಗಿರುವಾಗ ದುರ್ಜನನನ್ನೊಬ್ಬನನ್ನು ಬಿಟ್ಟು, ಇನ್ನಾರು ತಾನೇ ಮೃತ್ಯುಂಜಯನಾದ ಪರಶಿವನನ್ನು ಅರ್ಚಿಸಲಾರರು ? ಮೃತ್ಯುಂಜಯಾರ್ಚನೆಯಲ್ಲಿ ವಿಮುಖನಾದವನು ಕೇವಲ ದುಷ್ಟನಲ್ಲವೇ? ॥೧೪೧॥

ಮಹೋತ್ಸವಪದಂ ಪರಂ ಶಿವಪದಾಂಬುಜಾರಾಧನಂ
ತದೇವ ಧನಮುತ್ತಮಂ ಜನಿಜರಾತಿದುಃಖಾಪಹಂ ।
ತದುತ್ತಮಕುಲೋದ್ಭವೈಃ ಕೃತಮಘೌಘತೂಲಾನಲಂ
ಸುಧಾಪಿ ತದಿತಿ ಸ್ಮೃತಂ ಪರಮದುಃಖಹಾನೋಽಸ್ಮ್ರೃಖಂ ॥೧೪೩॥

ಅಹೋ ಖಲಜನಃ ಪರಂ ಶಿವಪದಾಂಬುಜಾರಾಧನ
ಪ್ರಸಾದವಿಭವಂ ಪರಂ ನ ಚ ವಿಚಾರಯತ್ಯೇವ ಸಃ ।
ಅತಃ ಪತತಿ ದುಷ್ಕೃತಪ್ರಬಲವಕ್ತ್ರನಕ್ರಾಕರೇ
ಸ ಶೋಕಕುಲಸಾಗರೇ ಸಪದಿ ಸಾಂಧಕಾರೇ ಮುಹುಃ ॥೧೪೪॥

ಸಂತಪ್ತಾಯಸಭಿಂಡಿವಾಲಲಗುಡವ್ಯಾಲಸ್ಫುರನ್ಮಂಡಲೇ
ಚಂಡಾಲಾಃ ಖಲು ಚಂದ್ರಖಂಡವಿಮಲಾಲಂಕಾರನಿಂದಾರತಾಃ ।

---

ಈಶ್ವರನ ಪಾದಕಮಲಗಳ ಅರ್ಚನೆಯೇ ನಿರತಿಶಯವಾದ ಆನಂದವನ್ನು ಕೊಡುವುದಲ್ಲದೇ, ಅದು ಜನ್ಮಜರಾಮರಣಗಳೆಂಬ ದುಃಖಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳದು. ಆದರಿಂದಲೇ ಅದು ಉತ್ತಮವಾದ ಧನವಾಗಿರುವುದು. ಸತ್ಕುಲಪ್ರಸೂತರಾದ ಜ್ಞಾನಿಗಳು, ಈಶ್ವರಾರಾಧನೆಯೇ ಪಾಪರಾಶಿಗಳೆಂಬ ಅರಳಗೆ ಅಗ್ನಿಯಂತೆ ಇರುವುದೆಂದು ಭಾವಿಸಿರುವರು. ಮತ್ತು ಅಪಾರವಾದ ಸಾಂಸಾರಿಕ ದುಃಖವನ್ನು ಹೋಗಲಾಡಿಸುವ ಶಿವಾರಾಧನೆಯೇ ಅವರಿಗೆ ಅಮೃತವೆನಿಸಿರುವುದು. ॥೧೪೩॥

ಅಯ್ಯೋ, ದುರ್ಜನರು ಶಿವನ ಅಡಿದಾವರೆಗಳ ಆರಾಧನೆಯಿಂದುಂಟಾಗುವ ಶಿವಾನುಗ್ರಹದ ಮಹಿಮೆಯನ್ನು ಅರಿಯದವರಾಗಿರುವರು. ಆದುದರಿಂದಲೇ ಅವರು, ಪಾಪಗಳೆಂಬ ವಿಶಾಲವಾದ ಮುಖವುಳ್ಳ ಮೊಸಳೆಗಳಿಂದ ಕೂಡಿರುವ ಶೋಕಪರಂಪರೆಗಳಿಗೆ ನೆಲೆಯಾದ ಅಜ್ಞಾನವೆಂಬ ಅಂಧಕಾರದಿಂದ ಮುಸುಕಿರುವ ಸಂಸಾರ ಸಾಗರದಲ್ಲಿ ಬಿದ್ದು ಅದರಿಂದ ಪಾರುಗಾಣದಿರುವರು. ॥೧೪೪॥

ಯಾರು, ಚಂದ್ರಶೇಖರನಾದ ಶಿವನನ್ನು ನಿಂದಿಸುವುದರಲ್ಲಿಯೇ ಆಸಕ್ತರಾಗುವರೋ, ಮತ್ತು ಯಾರು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸದೇ, ಕಂಠ, ಕಿವಿಗಳಲ್ಲಿ ರುದ್ರಾಕ್ಷಿಗಳನ್ನು ಹಾಕಿಕೊಳ್ಳದೆ ಪವಿತ್ರವಾದ ಶಿವಪಂಚಾಕ್ಷರ ಮಂತ್ರವನ್ನು

ತಿಷ್ಠಂತ್ಯೇವ ಮುಹುರ್ಮುಹುರ್ನಭಸಿ ತಂ ಯೈರ್ವಾ ಲಲಾಟೇ ಧೃತಂ
ರುದ್ರಾಕ್ಷೋಽಪಿ ಸ ಕಂಠಕರ್ಣಯುಗಲೇ ಜಪ್ತೋ ನ ಪಂಚಾಕ್ಷರಃ॥೧೪೪॥

ಭಜಂತಿ ವಿಮಲಾಶಯಾಃ ಶಿವಮುಮಾಸಹಾಯಂ ಪರಂ
ಸ ಏವ ಸಮಯೇ ಮುಹುರ್ಮಮ ಸಹಾಯ ಇತ್ಯಾದರಾತ್ ।
ತಮಂತಕರಿಪುಂ ಮುಹುಃ ಸ್ಮರತಿ ಯಃ ಪ್ರಯಾಣಕ್ಷಣೇ
ಸ ತಾವದಪರಾಜಿತೋ ಹಿತಹಿತಂ ಪ್ರಯಾತಿ ಧ್ರುವಂ ॥೧೪೫॥

ಪರ್ಯಾಪ್ತಾ ಖಲು ಕಾಮನಾಪಿ ಸತತಂ ಕಾಮಾರಿಪಾದಾಂಬುಜ
ಧ್ಯಾನಾದೇವ ಭವತ್ಯಪಾರಮಹಿಮಾ ಕಾಮಾರಿರಿತ್ಯಾದರಾತ್ ।
ವೇದೋ ವೇದವಿಧಿರ್ನ ವೇದ ಸ ಮುಧಾ ನಾರಾಯಣೋ ವಾ ಪರಂ
ಕಾಮಾರಿಸ್ಮರಣಪ್ರವೀಣಮನಸಾ ಜ್ಞೇಯಃ ಕಥಂಚಿತ್ಖಲು ॥೧೪೬॥

---

ಜಪಿಸದೇ ಇರುವರೋ, ಚಂಡಾಲರಂತಿರುವ ಅವರು ಚಕ್ರಾಕಾರವಾಗಿ ಸುತ್ತುತ್ತಿರುವ ಕೆಂಪಾಗಿ ಕಾದ ಕಬ್ಬಿಣದ ಸರಳುಗಳ ನಡುವೆ ನಿಂತು, ಅವುಗಳ ಹೊಡೆತಗಳಿಗೆ ಗುರಿಯಾಗುವರು. ॥೧೪೪॥

ಆಪತ್ಕಾಲದಲ್ಲಿ ನನಗೆ ಶಿವನೇ ಸಹಾಯವನ್ನು ನೀಡುವವನಾಗಿರುವನೆಂದು ತಿಳಿದು ನಿರ್ಮಲಚಿತ್ತರಾದ ಸತ್ಪುರುಷರು, ಉಮಾರಮಣನಾದ ಪರಶಿವನನ್ನು ಪ್ರೀತಿಯಿಂದ ಸೇವಿಸುವರು. ಯಾವನು ಮೃತ್ಯುಂಜಯನಾದ ಆ ಶಿವನನ್ನು ಸ್ಮರಿಸುವನೋ, ಅವನು ಮರಣಕಾಲದಲ್ಲಿ ಮೃತ್ಯುವನ್ನು ಗೆದ್ದು ನಿರತಿಶಯವಾದ ಆನಂದವನ್ನುಂಟುಮಾಡುವ ಶಿವಪದವಿಯನ್ನು ಸೇರುವನು. ಇದು ನಿಜ. ॥೧೪೫॥

ಮನ್ಮಥ ಶತ್ರುವಾದ ಪರಮೇಶ್ವರನ ಮಹಿಮೆಯು ವರ್ಣನಾತೀತವಾಗಿರುವುದು. ಅವನ ಅಡಿದಾವರೆಗಳ ಧ್ಯಾನದಿಂದಲೇ ಸಕಲ ಮನೋರಥಗಳೂ ಈಡೇರುವುವು. ಆ ಪರಶಿವನ ಮಹಿಮೆಯನ್ನು, ವೇದಗಳಾಗಲಿ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೇ ಆಗಲಿ ತಿಳಿಯಲಶಕ್ತರಾಗಿರುವರು. ಆದರೆ, ಅನವರತವೂ ಶಿವನನ್ನೇ ಯಾವನು ಧ್ಯಾನಿಸುವನೋ ಅವನು ಮಾತ್ರ ಅತ್ಯಂತ ಪ್ರಯಾಸದಿಂದ ಅದನ್ನು ಅರಿಯಲು ಸಮರ್ಥನಾಗುವನು. ॥೧೪೬॥

ಅನ್ಯಾರ್ಧೇಂದುಕಲಾವತಂಸಚರಣಧ್ಯಾನಾಮೃತಾಸ್ವಾದನಾ
ತೃಪ್ತೋ ಮಾನಸರಾಜಹಂಸ ಇತಿ ಮೇ ಚಿಂತಾ ಕೃತಾಂತಾತ್ಕುತಃ ।
ಸಂಸಾರಾದಪಿ ಭೀರ್ನ ಮೇ ನ ಚ ಮಹಾವ್ಯಾಧಿಪ್ರವಾಹಾದಪಿ
ವ್ಯಾಲೇಭ್ಯೋಽಪಿ ನ ದುಷ್ಕೃತೈರಪಿ ಕೃತೈರ್ಭೂತೈರಸಂತೈರಪಿ ॥೧೪೭॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಸಾಗರಶಿವಭಕ್ತಸಂವಾದೇ ಹಾಟಕೇಶ್ವರಮಾಹಾತ್ಮ್ಯೇ ಯಮಪುರೀ
ವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ

---

ಈಗ, ನನ್ನ ಚಿತ್ತವೆಂಬ ರಾಜಹಂಸವು, ಚಂದ್ರಶೇಖರನಾದ ಪರಶಿವನ ಅಡಿದಾವರೆಗಳ ಧ್ಯಾನವೆಂಬ ಅಮೃತವನ್ನು ಸವಿಯುವುದರಿಂದ ತೃಪ್ತಿಯನ್ನು ಹೊಂದಿರುವುದು. ಆದುದರಿಂದ ನನಗೆ ಮೃತ್ಯುವಿನ ಭಯವೆಲ್ಲಿಂದ? ಅದಲ್ಲದೇ, ನನಗೆ ಸಂಸಾರದಿಂದಾಗಲಿ, ಅಥವಾ ಪ್ರಬಲವಾದ ರೋಗಗಳಿಂದಾಗಲಿ, ಕ್ರೂರವಾದ ಸರ್ಪಗಳಿಂದಾಗಲಿ, ಪಾಪರಾಶಿಗಳಿಂದಾಗಲಿ, ಅಲ್ಪವಾದ ಭಯವೂ ಇರುವುದಿಲ್ಲ." ಎಂದು ರತ್ನಾಕರನು ಪುಣ್ಯಮೂರ್ತಿಗಳಿಗೆ ಹಾಟಕೇಶ್ವರ ಮಹಿಮೆಯನ್ನು ವಿವರಿಸ ನೆಂದು ಯಾಜ್ಞವಲ್ಕ್ಯಮಹರ್ಷಿಗಳು ಜನಕರಾಜನಿಗೆ ಶಿವಮಹಿಮೆಯನ್ನು ಬೋಧಿಸಿದರು. ॥೧೪೭॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಅಂಶದ ಎರಡನೆಯ ಭಾಗದಲ್ಲಿ ಸಮುದ್ರ ಮತ್ತು ಶಿವಭಕ್ತರ ಸಂವಾದದಲ್ಲಿ, ಹಾಟಕೇಶ್ವರ ಮಾಹಾತ್ಮ್ಯೆಯಲ್ಲಿ ಯಮಪುರೀ ವರ್ಣನೆಯೆಂಬ ಮೂವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಅಷ್ಟತ್ರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಯತ್ಸಾನುಭಾಗೇ ಯಮಮಂದಿರಾಣಿ
ತದೂರ್ಧ್ವಭಾಗೇ ಪವನಸ್ಯ ಗೇಹಾಃ ।
ತದೂರ್ಧ್ವಭಾಗೇಷ್ವನಲಸ್ಯ ಗೇಹಾ
ಸ್ತದೂರ್ಧ್ವಭಾಗೇ ವರುಣಸ್ಯ ಗೇಹಾಃ ॥೧॥

ತದೂರ್ಧ್ವಭಾಗೇ ಖಲು ನಿಋತೇಶ್ಚ
ತದೂರ್ಧ್ವಭಾಗೇ ಧನದಸ್ಯ ಗೇಹಾಃ ।
ತದೂರ್ಧ್ವಭಾಗೇಷು ಶಚೀಪತೇಶ್ಚ
ತದೂರ್ಧ್ವಭಾಗೇ ಖಲು ಸತ್ಯಲೋಕಃ ॥೨॥

---

## ಮೂವತ್ತೆಂಟನೆಯ ಅಧ್ಯಾಯ

ಶ್ರೀ ಯಾಜ್ಞವಲ್ಕ್ಯಮಹರ್ಷಿಗಳು ಜನಕರಾಜನಿಗೆ ಮೇರುಪರ್ವತದ ಮಹಿಮೆಯನ್ನು ಈರೀತಿ ಮುಂದುವರಿಸಿದರು. ಈ ಪರ್ವತದ ತಪ್ಪಲುಪ್ರದೇಶದಲ್ಲಿ ಯಮಮಂದಿರವೂ ಅದರಮೇಲೆ ವಾಯುಗೃಹವೂ, ಅದಕ್ಕೆ ಮೇಲೆ ಅಗ್ನಿಗೃಹ, ವರುಣಗೃಹ ಹೀಗೆ ದೇವತಾಮಂದಿರಗಳು ಕಂಡುಬರುವುವು. ॥೧॥

ವರುಣಗೃಹದಿಂದ ಮೇಲ್ಮೇಲೆ ನಿಋತಿ, ಕುಬೇರ, ಇಂದ್ರ, ಬ್ರಹ್ಮ ಇವರ ಆಶ್ರಯಸ್ಥಾನಗಳಿರುವುವು. ॥೨॥

ವೈಕುಂಠಲೋಕೋಪಿ ತದೂರ್ಧ್ವಭಾಗೇ
ಸೂರ್ಯಸ್ಯ ಲೋಕೋಪಿ ತದೂರ್ಧ್ವಭಾಗೇ ।
ನಕ್ಷತ್ರಲೋಕೋಪಿ ತದೂರ್ಧ್ವಭಾಗೇ
ಸುಧಾಂಶುಲೋಕೋಪಿ ತದೂರ್ಧ್ವಭಾಗೇ ॥೩॥

ಈಶಾನಲೋಕೋಪಿ ತದೂರ್ಧ್ವಭಾಗೇ
ತ್ರಿಶೂಲಗೇಹೋಪಿ ತದೂರ್ಧ್ವಭಾಗೇ ।
ತದೂರ್ಧ್ವಭಾಗೇಷ್ವನಲಾಂಬುರಾಶಿಃ
ಸುಮೇರುಶೃಂಗಪ್ರತಿಭಾಭಿಭೂತಃ ॥೪॥

ಸುಮೇರುಶೃಂಗಾಗ್ರವಿರಾಜಮಾನಃ
ಕೈಲಾಸಲೋಕಸ್ಸ ವರೋ ವರಿಷ್ಠಃ ।
ಸುಮೇರುಶೃಂಗಾಣ್ಯಮಿತಾನಿ ತೇಷು
ಸರ್ವಾಣಿ ಕಾರ್ತಸ್ವರಮಂದಿರಾಣಿ ॥೫॥

ತಾನ್ಯೇವ ತಾವತ್ಖಲು ಸುಂದರಾಣಿ
ರಮ್ಯಾಣಿ ಹರ್ಮ್ಯಾಣ್ಯಪಿ ತತ್ರ ತಾನಿ ।
ಸಂಖ್ಯಾವಿಹೀನಾನಿ ವಿಚಿತ್ರಚಿತ್ರ
ವ್ಯಾಪ್ತಾನಿ ಚಿತ್ರಪ್ರತಿಮಾನ್ವಿತಾನಿ ॥೬॥

---

ಹಾಗೆಯೇ ವಿಷ್ಣುಲೋಕವಾದ ವೈಕುಂಠ, ಸೂರ್ಯಲೋಕ, ನಕ್ಷತ್ರಲೋಕ, ಚಂದ್ರಲೋಕಗಳು ಮೇಲ್ಮೇಲೆ ಕಂಡುಬರುವುವು. ॥೩॥

ಅಲ್ಲಿಂದ ಮೇಲೆ ಈಶಾನಲೋಕ, ತ್ರಿಶೂಲಗೃಹ, ಅಗ್ನಿ ಮತ್ತು ಜಲರಾಶಿ ಇವುಗಳು ಮೇರುಪರ್ವತದ ಶಿಖರಗಳ ಕಾಂತಿಯಿಂದ ಕೂಡಿದವುಗಳಾಗಿ ಮೇಲೆ ಮೇಲೆ ಪ್ರಕಾಶಿಸುತ್ತಿರುವುವು. ॥೪॥

ಮೇರುಪರ್ವತ ಶಿಖರದ ತುದಿಯಲ್ಲಿ ಪ್ರಕಾಶಿಸುವುದೇ ಕೈಲಾಸಲೋಕ. ಅದೇ ಬಹು ಶ್ರೇಷ್ಠವಾದ ಲೋಕ. ಅದರ ಸುತ್ತಲೂ ಮೇರುಶಿಖರಗಳು ಸುವರ್ಣಮಯಗಳಾಗಿ ಶೋಭಿಸುತ್ತಿರುವುವು. ॥೫॥

ಆ ಕೈಲಾಸಲೋಕದಲ್ಲಿರುವ ಎಲ್ಲ ಉಪ್ಪರಿಗೆ ಮನೆಗಳೂ ಬಹು ಸುಂದರವಾದವುಗಳೇ. ಗಣನೆಯಾದರೋ ಸಂಖ್ಯಾತೀತವಾಗಿದೆ. ಪ್ರತಿಯುಪ್ಪರಿಗೆಗಳೂ ಚಿತ್ರ

ತತ್ರೋದ್ಯಾನವನಾನಿ ಸಂತಿ ವಿಪುಲಾನ್ಯಂತೋ ನ ತೇಷಾಂ ಶ್ರುತೋ
ದೃಷ್ಟೋ ವಾ ತರವೋಽಪಿ ತತ್ರ ಬಹವೋ ನಾನ್ಯತ್ರ ಯೇ ಸರ್ವಥಾ ।
ತೇ ತಾವತ್ಸತತಂ ಫಲೈರಭಿನವೈಃ ಪುಷ್ಪೋಚ್ಚಯೈಃ ಸಂಕುಲಾಃ
ಸರ್ವರ್ತುಪ್ರಭವಾಃ ಪ್ರಭೂತವಿಭವಾಸ್ತೇ ತಾವದತ್ಯುನ್ನತಾಃ ॥೭॥

ತೇ ತಾವದ್ವಿನತಾ ಭವಂತಿ ಬಹುಧಾ ವಿಶ್ವೇಶ್ವರಾರಾಧನೇ
ಕರ್ತವ್ಯೇ ಸತಿ ಸಂಚರಂತಿ ಬಹವೋ ಲಿಂಗೇಷು ತುಂಗೇಷು ತೇ ।
ಛತ್ರಂತ್ಯಚ್ಛಸುಗುಚ್ಛರಂಜಿತನಿಜಛಾಯಾಘಟದಿವ್ಯಾವೃತಾ
ನ್ಯಾಲಿಂಗ್ಯ ಪ್ರಸವಾರ್ಚಿತಾನಿ ಸತತಂ ಕುರ್ವಂತಿ ತೇ ತೇ ಸ್ವತಃ ॥೮॥

ತತ್ರಾಪಾರಮರಂದಸುಂದರಸರಿತ್ಕುಲ್ಯಾಮೃತಾಂಧುಪ್ರಭಾ
ಸಿಂಧುವ್ರಾತವಿರಾಜಮಾನವನಜೈರಭ್ಯರ್ಚ್ಯತೇ ಶಂಕರಃ ।
ತತ್ತೀರೇ ಶಿವಲಿಂಗಸುಂದರಲಸನ್ಮಂದಾರವಾಟೀತಟೇ
ಪಾಟೀರಪ್ರವವಾಹಿನೀಮೃಗಮದಾಪಾರಪ್ರವಾಹಾನ್ವಿತೇ ॥೯॥

---

ವಿಚಿತ್ರಗಳಾದ ಅಲಂಕಾರಗಳಿಂದಲೂ, ವಿಧವಿಧವಾದ ದೇವತಾ ಪ್ರತಿಮೆಗಳಿಂದಲೂ ಕಂಗೊಳಿಸುತ್ತಿರುವುವು. ॥೬॥

ಆ ಕೈಲಾಸದಲ್ಲಿರುವ ಉದ್ಯಾನಗಳಿಗೆ ಆದ್ಯಂತಗಳೇ ಇಲ್ಲದಂತಾಗಿದೆ. ಅಲ್ಲಿರುವ ವೃಕ್ಷಸಮೂಹವನ್ನು ಇನ್ನೆಲ್ಲಿಯೂ ನೋಡುವಂತೆಯೇ ಇಲ್ಲ. ಕೇಳುವಂತೆಯೂ ಇಲ್ಲ. ಆ ವೃಕ್ಷಗಳಾದರೋ ಸದಾಕಾಲದಲ್ಲಿಯೂ ಫಲಭರಿತಗಳಾಗಿದ್ದು, ಋತುಭೇದವಿಲ್ಲದೆ ಸರ್ವದಾ ಫಲಪುಷ್ಪಗಳ ಸೌಂದರ್ಯವನ್ನು ಬೀರುತ್ತಾ, ಅತ್ಯುನ್ನತಗಳೆನಿಸಿವೆ. ॥೭॥

ಆ ವೃಕ್ಷಗಳು ಉದ್ಯಾನದ ವೃಕ್ಷಮೂಲಗಳಲ್ಲಿರುವ ಶಿವಲಿಂಗಗಳನ್ನು ಪೂಜಿಸುವ ಸಲುವಾಗಿ, ಸದಾ ಬಗ್ಗಿ ನಮಸ್ಕರಿಸುತ್ತಿವೆಯೋ ಎಂಬಂತೆ ಕಾಣುತ್ತಿವೆ. ಮತ್ತು ತಮ್ಮ ನೆರಳಿನಿಂದ ತಾವೇ ಶಿವಲಿಂಗಗಳಿಗೆ ಛತ್ರಿಗಳಂತಾಗಿವೆ. ತಮ್ಮ ಹೂವುಗಳನ್ನು ಶಿವಲಿಂಗಗಳ ಮೇಲೆ ಎರಚುತ್ತಾ ಶಿವಲಿಂಗಾರಾಧಕರಂತೆ ತಾವೂ ಧನ್ಯವಾಗುತ್ತಿವೆ. ॥೮॥

ಅಲ್ಲಿ, ಅತಿಶಯವಾದ ಮಕರಂದ ಕೊಳದಲ್ಲಿಯೇ ಬೆಳೆದು ನಿಂತಿರುವಂತೆ ಕಾಣುವ ಕಮಲಗಳಿಂದ ಅಲ್ಲಿರುವ ಶಿವಲಿಂಗಗಳು ಸದಾ ಅರ್ಚಿಸಲ್ಪಟ್ಟಿರುತ್ತವೆ.

ತತ್ರೈಕೈಕಮಣಿಪ್ರಭಾವಿರಚಿತಾಃ ಪ್ರಾಸಾದದೇಶಾಃ ಪರಂ
ತೇಷಾಂ ತಾವದಪಾರಕಾಂತಿಸರಿತಾಸಂಗೋತಿತುಂಗೇಷ್ವಪಿ ।
ಲಿಂಗೇಷು ಪ್ರಥಿತೇಷು ತೇಷು ಗಿರಿಜಾ ಪೂಜಾಂ ಕರೋತ್ಯಾದರಾ
ಸೌವರ್ಣೈಃ ಕಮಲೈಸ್ತಥಾ ಮಣಿಮಯೈರುತ್ಫುಲ್ಲಪುಷ್ಪೈರಪಿ ॥೧೦॥

ಮಣಿಪ್ರಸವಪೂಜಿತೋ ಭವತಿ ಶಂಕರಸ್ಸರ್ವದಾ
ವಿಹಾರಸದನಾಲಯೇ ಗಿರಿಜಯಾ ಸಮೇತಸ್ಸದಾ ।
ಜಹಾತಿ ನ ಪದಂ ಮುದಾ ತದಿದಮುತ್ತಮಂ ಸರ್ವದಾ
ಮಣಿಪ್ರವರರಂಜಿತಂ ಕುಸುಮವೃಷ್ಟಿಸಂಘಾವೃತಂ ॥೧೧॥

ಮಣಿಪ್ರಭಾಮಂಡಲಮಂಡಿತಾನಿ
ಹರ್ಮ್ಯಾಣಿ ತೇಷಾಂ ಗಣನಾ ಕುತಸ್ಸ್ಯಾತ್ ।

---

ಆ ಕಮಲದ ಕೊಳಗಳ ತೀರಭಾಗದಲ್ಲಿ, ಶ್ರೀಗಂಧದ ರಸ, ಮತ್ತು ಕಸ್ತೂರಿಮಿಶ್ರಿತ ವಾದ ಪ್ರವಾಹವೂ, ಅದರ ಪಕ್ಕದಲ್ಲಿ ಮಂದಾರವೃಕ್ಷಗಳೂ, ಅವುಗಳ ಬುಡದಲ್ಲಿ ಹೊಳೆಯುವ ಶಿವಲಿಂಗಗಳೂ ಪ್ರಕಾಶಿಸುತ್ತಿವೆ. ॥೯॥

ಮತ್ತು ದಿವ್ಯವಾದ ಒಂದೊಂದೇ ರತ್ನಗಳಿಂದ ವಿನಿರ್ಮಿತವಾದ ದಿವ್ಯ ಭವನ ಗಳು ಅಲ್ಲಿ ಹೇರಳವಾಗಿರುವುವು. ಅವುಗಳ ಪಕ್ಕದಲ್ಲೆಲ್ಲಾ ಮನೋಹರವಾದ ನದಿಗಳು ಹರಿಯುತ್ತಿರುವುವು. ಆ ನದಿಗಳ ಅಕ್ಕಪಕ್ಕದಲ್ಲಿಯೇ ಎತ್ತರವಾಗಿ ಕಂಡು ಬರುವ ಮಣಿಮಯವಾದ ಶಿವಲಿಂಗಗಳೂ ಕಂಗೊಳಿಸುತ್ತಿರುವುವು. ಇಂತಹ ಶಿವಲಿಂಗಗಳನ್ನು ಗಿರಿಜೆಯು ಸದಾ ಸುವರ್ಣಕಮಲಗಳಿಂದ ಪೂಜಿಸುತ್ತಿರುವಳು. ॥೧೦॥

ಹಾಗೆ ರತ್ನಮಯವಾದ ಪುಷ್ಪಗಳಿಂದ ಪೂಜಿತನಾದ ಶಂಕರನು ಅಲ್ಲಿ ಸರ್ವದಾ ಪಾರ್ವತಿಯೊಡನೆ ಕೂಡಿದವನಾಗಿ ವಿಹರಿಸುವನು. ಅಲ್ಲದೆ ರತ್ನಗಳಿಂದ ರಂಜಿತವೂ, ಕುಸುಮವೃಷ್ಟಿಗಳಿಂದ ಸುಗಂಧಯುಕ್ತವೂ ಆದ ಆ ಪ್ರದೇಶವನ್ನು ಶಂಕರನೂ ಬಿಡದೆ, ಅಲ್ಲಿಯೇ ವಿಹರಿಸುವನು. ॥೧೧॥

ಅಲ್ಲಿನ ಉಪ್ಪರಿಗೆ ಮನೆಗಳು ರತ್ನಕಾಂತಿಗಳಿಂದ ಅಲಂಕೃತವಾಗಿ ಅಸಂಖ್ಯಾತ ವಾಗಿರುವುದರಿಂದ ಅವುಗಳನ್ನು ಎಣಿಸಲು ಸಾಧ್ಯವೇ ಇಲ್ಲ. ಕಾಂತಿಯಿಂದ ತುಂಬಿ ಮುಳುಗಿಹೋಗಿರುವಂತಿರುವ ಆ ಮನೆಗಳ ಎತ್ತರ ಮತ್ತು ಅಗಲ ಇವುಗಳು

ಆಯೂಮುನಷ್ಟೌನ್ನತ್ಯಮಪಿ ಪ್ರಭಾಭಿ
ರ್ನ ಜ್ಞಾಯತೇ ವೃದ್ಧಿಮಪಿ ಪ್ರಯಾಂತಿ ॥೧೨॥

ನ ತತ್ರ ಚಂಡಾಂಶುಕರಪ್ರಚಾರಃ
ಸುಧಾಕರಾಂಶುಪ್ರಸವೋಽಪಿ ನಾತಃ ।
ವಿದ್ಯುದ್ಗಣಾನಾಂ ಚ ನ ತತ್ರ ವಾರ್ತಾ
ತಾರಾಗಣಾನಾಂ ಚ ನ ತತ್ರ ವಾರ್ತಾ ॥೧೩॥

ಮಹೇಶ್ವರಾಪಾರಶರೀರಕಾಂತ್ಯಾ
ದೀಪ್ತಾನಿ ತಾವತ್ಖಲು ಮಂದಿರಾಣಿ ।
ಹರ್ಮ್ಯಾಣ್ಯಪಾರಾಣ್ಯಪಿ ಸುಂದರಾಣಿ
ಹಾರಾಣಿ ಹಾರಪ್ರವರಾವೃತಾನಿ ॥೧೪॥

ಯತ್ರೈವಾಯುತಯೋಜನೋನ್ನತಮಣಿಸ್ತಂಭಾರ್ಬುದಾನ್ಯರ್ಬುದಾ
ಶ್ರೀಸಿಂಹಾಸನಮಂಚಕೋಟಿಘಟಿತಂ ಯತ್ಸುಂದರಂ ಮಂದಿರಂ ।
ತತ್ರಾನರ್ಘ್ಯನರತ್ನಕಾಂತಿವಿಲಸತ್ತಲ್ಪಾವೃತಂ ಕಲ್ಪಜಾ
ಪಾರಾತ್ಯುತ್ತಮಗಂಧಸಿಂಧುಸಹಿತಂ ತತ್ರಾಂಬಿಕಾ ಕ್ರೀಡತಿ ॥೧೫॥

---

ತಿಳಿಯುವಂತೆಯೇ ಇಲ್ಲ. ಸದಾ ವೃದ್ಧಿಗೊಳ್ಳುತ್ತಿರುವಂತೆಯೇ ತೋರುವುದು. ॥೧೨॥

ಅಲ್ಲಿ ಸೂರ್ಯ, ಚಂದ್ರ ಇವರ ಕಿರಣಗಳಾಗಲಿ, ಮಿಂಚಿನ ಹೊಳಪಾಗಲಿ, ನಕ್ಷತ್ರಗಳ ಕಾಂತಿಯಾಗಲಿ ಬೀಳುವಂತೆಯೂ ಇಲ್ಲ. ಬೀಳುವುದೂ ಇಲ್ಲ. ॥೧೩॥

ಇದಲ್ಲದೆ ಸ್ವಯಂ ಮಹೇಶ್ವರನ ದೇಹಕಾಂತಿಯಿಂದ ಹೊರಟ ತೇಜಸ್ಸಾದರೋ, ಅಂತಹ ಸುಂದರಗಳಾದ ಉಪ್ಪರಿಗೆ ಮನೆಗಳನ್ನು ಸಹ ಮುಚ್ಚಿಬಿಡುವಂತಿದೆ. ಮತ್ತು ಆ ಹರಸಂಬಂಧವಾದ ತೇಜಸ್ಸು ಹಾರದಂತಾಗಿ ಎಲ್ಲ ವಸ್ತುಗಳನ್ನೂ ಮುಚ್ಚಿಕೊಂಡಿದೆ. ॥೧೪॥

ಪಾರ್ವತಿಯು ಕ್ರೀಡಿಸುವ ಆ ದಿವ್ಯಹರ್ಮ್ಯಗಳಲ್ಲಿ ಕೋಟ್ಯಂತರಸಂಖ್ಯೆಯ ಮಣಿಸ್ತಂಭಗಳೂ, ಅಸಂಖ್ಯಾತವಾದ ಸಿಂಹಾಸನಗಳ ಸಾಲುಗಳೂ, ರತ್ನಕಾಂತಿಯಿಂದ ಮಿರುಗುವ ಮಂಚಗಳೂ, ಅವುಗಳ ಮೇಲಿನ ದಿವ್ಯಸುಗಂಧದಿಂದ ಗಮಗಮಿಸುವ ಶಯನಗಳೂ ಹೇರಳವಾಗಿರುವುವು. ॥೧೫॥

ಸಂಪೂರ್ಣಾಮಿತಶಾರದಾ ಸ್ಪೃಡಸುಧಾರಶ್ಮಿಪ್ರಭಾಮಂಡಲ
ವ್ಯಾಪಾರಾಃ ಖಗತಾರಕಾ ಇವ ತದಾ ತಿಷ್ಠಂತಿ ಯತ್ಕಾಂತಿಭಿಃ ।
ತತ್ತಾವದ್ಗಿರಿರಾಜರಾಜತನಯಾಕಾಂತಿಶ್ರಿತಂ ಸಂತತಂ
ಸ್ವಾಂತಂ ಮೇ ಸುತನೋತಿ ಶಂತತಮತಸ್ತಂ ಚಿಂತಯಾಮಿ ಸ್ವತಃ ॥೧೬॥

ವೈಕುಂಠಾದಿಕರತ್ನಕಾಂತಿಭವನಾವಾಸಾಸ್ಸುರಾಸ್ತಂ ಶಿವಂ
ಧ್ಯಾತ್ವಾ ಸಾಂಬಮಹರ್ನಿಶಂ ಶಿವಕಥಾಲಾಪೈಃ ಪರಂ ಚೇತಸಿ ।
ಸ್ವಚ್ಛೇ ತತ್ಪದಸದ್ಮಚಿಂತನಗತಕ್ಲೇಶಾಃ ಶಿವಾರಾಧನಂ
ಕೃತ್ವಾ ಸಂತತಚಂದ್ರಚೂಡಚರಣಧ್ಯಾನಾಂಬುರಾಶಿಂ ಶ್ರಿತಾಃ ॥೧೭॥

ನಿತ್ಯಂ ಸುರಾಣಾಮಪಿ ಮಂದಿರೇಷು
ಲಿಂಗಾನಿ ಯಾನ್ಯಪ್ರತಿಮಾನಿ ತೇಷು ।
ಕುರ್ವಂತಿ ಪೂಜಾಮಸುರಾಃ ಪ್ರಭಾತೇ
ಸಾಂಬಂ ವಿಶೇಷೇಣ ವಿಶಿಷ್ಟವೃತ್ತ್ಯಾ ॥೧೮॥

---

ಶರತ್ಕಾಲದಲ್ಲಿ ಹೊಳೆಯುವ ಅತಿಸುಂದರವಾದ ಚಂದ್ರಮಂಡಲವು ಚಂದ್ರಶೇಖರನಾದ ಮಹೇಶ್ವರನ ದೇಹಕಾಂತಿಯಿಂದ ಒಂದು ಸಣ್ಣ ನಕ್ಷತ್ರದಂತೆ ಕಂಡು ಬರುವುದು. ಹೀಗೆ ಚಂದ್ರನ ಕಾಂತಿಯನ್ನೇ ಮಂಕುಗೊಳಿಸುವ ಪಾರ್ವತೀಪತಿಯಾದ ಶಂಕರನ ಸ್ವರೂಪವನ್ನು ನಾನು ಸರ್ವದಾ ಶಾಂತಮನಸ್ಸಿನಿಂದ ಸ್ಮರಿಸುತ್ತಿರುವೆನು. ಅದೇ ನನಗೆ ಚಿರಶಾಂತಿಯನ್ನೀಯುವುದು. ॥೧೬॥

ವೈಕುಂಠವೇ ಮೊದಲಾದ ದೇವಲೋಕಗಳಲ್ಲಿ ವಾಸಿಸುವ ವಿಷ್ಣುವೇ ಮೊದಲಾದ ನಾಯಕರು ಸರ್ವದಾ ಪರಶಿವನ ಕಥಾಲಾಪಗಳಿಂದಲೇ ಕಾಲಕಳೆಯುವರು. ಅಲ್ಲದೆ ನಿರ್ಮಲವಾದ ತಮ್ಮ ಹೃದಯಕಮಲದಲ್ಲಿ ಯಾವಾಗಲೂ ಶಂಕರನ ಪಾದಪದ್ಮವನ್ನೇ ಧ್ಯಾನಿಸುತ್ತಾ, ಅದರಿಂದ ಸಕಲ ಮನಃಕ್ಲೇಶಗಳನ್ನೆಲ್ಲಾ ಕಳೆದುಕೊಂಡು ಶಿವಾರಾಧನತತ್ಪರರಾಗಿ ಶಿವಧ್ಯಾನನಿರತರಾಗಿರುವರು. ॥೧೭॥

ಪ್ರತಿ ದೇವತೆಗಳ ಮನೆಗಳಲ್ಲಿಯೂ ಅಸಪ್ರಶವಾದ ಪೂಜ್ಯಶಿವಲಿಂಗಗಳಿರುವುವು. ಪ್ರತಿದಿನವೂ ಪ್ರಾತಃಕಾಲದಲ್ಲಿ ಸಕಲದೇವತೆಗಳೂ ವಿಶೇಷರೀತಿಯಿಂದ ಶಂಕರನನ್ನು ಪೂಜಿಸದೆ ಮತ್ತೆ ಯಾವ ಕೆಲಸವನ್ನೂ ಮಾಡಲಾರರು. ॥೧೮॥

ದೇವಾನಾಮಪಿ ಭಾಗ್ಯಮಿಂದುಶಕಲಾಲಂಕಾರಪಾದಾಂಬುಜ
ಧ್ಯಾನಾದೇವ ತದರ್ಚನಾದವಿರತಂ ಸೌಖ್ಯಂ ಸುರಾಣಾಮಪಿ ।
ದೇವಾನಾಮಧಿದೈವತಂ ಶಿವ ಇತಿ ಪ್ರಾಹುರ್ಮುನೀಂದ್ರಾಸ್ಸುರಾ
ಸ್ಸರ್ವೇ ತೇ ನಿಗಮಾಶ್ಚ ತದ್ಭಜನತೋ ಮುಕ್ತಿಃ ಪರಾ ಜಾಯತೇ ॥೧೯॥

ತಸ್ಮಿನ್ನೇವ ಸುಮೇರುಶೃಂಗನಿಲಯೇ ಸ್ಥಿತ್ವಾ ಶಿವಾಸಂಯುತೋ
ಲೋಕೋತ್ಪಾದನಪಾಲನಾದಿಕಮುಮಾಕಾಂತಃ ಸ್ವಲೀಲಾಲವೈಃ ।
ಕೃತ್ವಾ ತಿಷ್ಠತಿ ತಂ ಪರಾತ್ಪರಮಿತಿ ಪ್ರಾಹುಸ್ತದನ್ಯೇ ಸುರಾ
ಸ್ತಲ್ಲಿಂಗಾರ್ಚನತತ್ಪರಾಃ ಶಿವರತಾಸ್ತೇ ನ ಸ್ವತಂತ್ರಾಃ ಸ್ವತಃ ॥೨೦॥

ಸ್ವತಂತ್ರಸ್ತ್ರಿನೇತ್ರಸ್ತಥಾ ತತ್ಕಲತ್ರಂ
ಪವಿತ್ರಂ ಸ್ವತಂತ್ರಂ ವಿಚಿತ್ರಂ ತದೇವ ।
ಜಗಜ್ಜಾಲನಿರ್ಮಾಣನಿರ್ವಾಣದಾನೇ
ಸಮರ್ಥಂ ತದೇವೇಂದುಮೌಲಿಪ್ರಸಾದಾತ್ ॥೨೧॥

---

ದೇವತೆಗಳೆಲ್ಲರೂ ಚಂದ್ರಶೇಖರನಾದ ಶಂಕರನ ಧ್ಯಾನವನ್ನೇ ಒಂದು ಭಾಗ್ಯವೆಂದು ತಿಳಿದಿರುವರು. ಶಿವಾರ್ಚನೆಯೇ ನಿತ್ಯಸುಖವೆಂದು ಗಣಿಸಿರುವರು. ವೇದಗಳೂ, ಮಹರ್ಷಿಗಳೂ, ದೇವತೆಗಳೆಲ್ಲೆಲ್ಲಾ ಶಿವನೇ ಶ್ರೇಷ್ಠನೆಂದು ಸಾರುತ್ತಿರುವರು. ಇಂತಹ ದೇವಾಧಿದೇವನಾದ ಶಂಕರನ ಭಜನೆಯಿಂದಲೇ ಶಾಶ್ವತವಾದ ಮುಕ್ತಿಯು ಲಭಿಸುವುದು. ॥೧೯॥

ಪರಮಪೂಜ್ಯನಾದ ಶಂಕರನು ಮೇರುಪರ್ವತದ ಶಿಖರದಲ್ಲಿ ಪಾರ್ವತಿಯೊಡಗೂಡಿ, ಲೋಕದ ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳ ವಿಷಯವಾಗಿ ವಿಮರ್ಶಿಮಾಡುವನು. ಆಗ ಲೋಕಶಂಕರನಾದ ಪರಶಿವನನ್ನು ಶಿವಲಿಂಗಾರ್ಚಕರಾದ ಸಕಲ ದೇವತೆಗಳೂ ಪರಾತ್ಪರಸ್ವರೂಪನೆಂದು ತಿಳಿದು ಸರ್ವದಾ ಧ್ಯಾನಿಸುತ್ತಿರುವರು. ಏಕೆಂದರೆ ಅವರು ಶಿವಾಧೀನರು, ಮತ್ತು ಶಿವಲಿಂಗಪೂಜಾತತ್ಪರರು. ॥೨೦॥

ತ್ರಿನೇತ್ರಧಾರಿಯಾದ ಶಂಕರನು ಹೇಗೆ ಸ್ವತಂತ್ರನೋ ಅದೇ ರೀತಿ ಶಂಕರ ಪತ್ನಿಯಾದ ಪಾರ್ವತಿಯೂ ಸ್ವತಂತ್ರಳಾದವಳು. ಪಾವಿತ್ರ್ಯದಲ್ಲಿಯೂ, ವಿಚಿತ್ರ ಸೃಷ್ಟಿಕಾರ್ಯದಲ್ಲಿಯೂ ಮುಂದುವರಿದವಳು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿ ಸಕಲ

ಭಜಂತ್ಯನ್ಯಮಜ್ಞಾಶ್ಶಿವಾನ್ಯಂ ಸುರಂ ತೇ
ನ ತೇ ಗರ್ಭವಾಸಾದಿದುಃಖಾನಿ ತಸ್ಯ ।
ಸ್ಮರಂತೀತಿ ಮನ್ಯೇ ಮಹಾಮೋಹಪಾತ
ಪ್ರಬದ್ಧಸ್ವಚಿತ್ತಾಃ ಪ್ರಮತ್ತಾಸ್ತತಸ್ತೇ ॥೨೨॥

ಯೋ ಜನ್ಮಾದಿಕದುಃಖಭಾಜನತಯಾ ಜ್ಞಾತೋಽಸ್ತಿ ಗರ್ಭಾಶ್ರಿತೋ
ತದ್ಯೋನಿವ್ರಣಪೂಯಪೂರಿತತನುಸ್ತದ್ಯೋನಿಮಾರ್ಗಾಗತಃ ।
ಕಂಸಾದಿಪ್ರಬಲಾತಿಶತ್ರುನಿಹತಃ ಕಿಂ ಪೂಜಿತೋ ದುರ್ದಶಾಂ ।
ಶ್ರೇಯಾಂಸ್ತಾನ್ನ ದದಾತಿ ತಿಷ್ಠತಿ ಶಿವೇ ನಾನ್ಯಂ ಭಜಾಮೋ ವಯಂ ॥೨೩॥

ನತ್ವಾ ಮೃತ್ಯುಂಜಯೋ ಮರ್ತ್ಯೋ ನ ಮೃತ್ಯುಮುಪಯಾಸ್ಯತಿ ।
ಮರ್ತ್ಯಲೋಕಮನುಪ್ರಾಪ್ಯ ತೇನ ಮೃತ್ಯುಂಜಯೋ ಭವೇತ್ ॥೨೪॥

---

ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ಶಂಕರಾನುಗ್ರಹದಿಂದ ಪಾರ್ವತಿಯು ಅಷ್ಟೇ ಸಮರ್ಥಳೆನಿಸಿಕೊಂಡಿರುವಳು. ॥೨೧॥

ಅನೇಕರು ಮಾಯಾಪಾಶದಿಂದ ಬದ್ಧರಾಗಿ ವಿವೇಕವನ್ನು ಪಡೆಯದೆ ಶಿವನನ್ನು ಬಿಟ್ಟು ಬೇರೆ ಬೇರೆ ದೇವತೆಗಳನ್ನು ಭಜಿಸುವರು. ಅದರಿಂದ ಅವರು ಎಂದೂ ಪುನರ್ಜನ್ಮವಿಲ್ಲದ ಶಾಶ್ವತ ಮುಕ್ತಿಯನ್ನು ಹೊಂದಲಾರರು. ಎಷ್ಟೋ ವರ್ಷಗಳ ಮೇಲೆ ಈ ತತ್ತ್ವವನ್ನು ತಿಳಿದು ಅನಂತರ ಶಿವಧ್ಯಾನಕ್ಕೆ ಮತ್ತೆ ಪ್ರಾರಂಭಿಸುವರು. ॥೨೨॥

ಜನ್ಮಗಳನ್ನು ಮತ್ತೆ ಪಡೆಯುವುದೆಂಬುದು ಬಹು ದುಃಖಭೂಯಿಷ್ಠವಾದುದು. ಸ್ತ್ರೀಗರ್ಭವನ್ನು ಅತ್ಯಂತ ಕಷ್ಟದಿಂದ ಸೇರಿ ಸ್ತ್ರೀಯೋನಿದ್ವಾರದಿಂದ ರಕ್ತಕೀವುಗಳ ಮೂಲಕವಾಗಿ ಭೂಮಿಯಲ್ಲಿ ಬಿದ್ದು, ಆಗಲೂ ವಿವೇಕವನ್ನು ಪಡೆಯದೆ ಕಂಸಾರಿಯಾದ ಶ್ರೀಕೃಷ್ಣನೇ ಮೊದಲಾದ ಸಾಮಾನ್ಯ ದೇವತೆಗಳನ್ನು ಆರಾಧಿಸುವರು. ಅದರಿಂದಲೂ ಮುಕ್ತಿಯನ್ನು ಪಡೆಯದೆ ಪುನರ್ಜನ್ಮಧಾರಣೆಗೆ ಅವಕಾಶ ಮಾಡಿಕೊಳ್ಳುವರು. ನಾವಂತೂ ಶಂಕರನನ್ನು ಬಿಟ್ಟು ಮತ್ತಾರನ್ನೂ ಎಂದೂ ಭಜಿಸಲಾರೆವು. ॥೨೩॥

ಮೃತ್ಯುಂಜಯನಾದ ಶಂಕರನನ್ನು ಭಜಿಸಿದ ಮನುಷ್ಯನು ಎಂದೂ ಮೃತ್ಯುವಿಗೆ ವಶವಾಗಲಾರನು. ಒಂದುವೇಳೆ ಮರ್ತ್ಯಲೋಕಕ್ಕೆ ಬಂದರೂ ಅಲ್ಲಿ ಅವನೇ

ಮೃತ್ಯುಂಜಯಂ ಸಂತತಮಾಶ್ರಯಾಮೋ
ಮೃತ್ಯುರ್ಬಿಭೇತ್ಯೇವ ಯತಃ ಸ್ವತೋಽಪಿ ।
ತ್ಯಕ್ತ್ವಾ ನ ಮೃತ್ಯುಂಜಯಮನ್ಯದೇವಂ
ಸ್ವಪ್ನೇಽಪಿ ಪಶ್ಯಾಮಿ ಶೃಣೋಮಿ ನಾಹಂ ॥೨೫॥

ದೃಶ್ಯಂತೇ ಬಹವಶ್ಶಿವೇತರಸುರಾವಜ್ಞಾಮುಕ್ತ್ವಾ ಮುಹು
ರ್ಮೋಹೇನ್ನೈವ ತಮರ್ಚಯಂತಿ ಬಹುಧಾ ಯೋನಿಪ್ರವೇಶೇಚ್ಛಯಾ ।
ತೇ ಕಿಂ ನಾರಕಿಣೋ ನ ದುಃಖನಿಲಯಾಸ್ತೇಷಾಂ ಶಿವಾವಜ್ಞಯಾ
ದುರ್ಜ್ಞಾನೇ ಸತಿ ದುಃಖಮೇವ ಸತತಂ ತದ್ದುರ್ಭಗಾಣಾಂ ನ ಕಿಂ ॥೨೬॥

ನ ಜಾನಂತ್ಯೇವ ಬಹವಃ ಪ್ರಭಾವಂ ಭುವಿ ಶಾಂಭವಂ ।
ಅತಃ ಪತಂತಿ ನರಕೇ ಯೋನಿಮಾರ್ಗವಿನಿರ್ಗತಾಃ ॥೨೭॥

---

ಮೃತ್ಯುಂಜಯಸ್ವರೂಪನಾಗಿ ಮೆರೆಯುವನು. ಅಂದರೆ ಮೃತ್ಯುವನ್ನು ಜಯಿಸಿ ಬಿಡುವನು. ॥೨೪॥

ನಾನು ಸ್ವಪ್ನದಲ್ಲಿಯೂ ಮೃತ್ಯುಂಜಯನಾದ ಶಂಕರನನ್ನು ಬಿಟ್ಟು ಮತ್ತಾರನ್ನೂ ಶರಣುಹೊಂದುವುದಿಲ್ಲ. ಏಕೆಂದರೆ ಮೃತ್ಯುನಾಶಕನಾದವನು ಶಂಕರನಲ್ಲದೆ ಮತ್ತಾರಿರುವರು? ಶಂಕರನಿಗಲ್ಲದೆ ಇನ್ನು ಯಾರಿಗೂ ಮೃತ್ಯುವು ಹೆದರಲಾರದು. ॥೨೫॥

ಅನೇಕರು ಈಶ್ವರನನ್ನು ಆರಾಧಿಸದೆ ಇತರ ಸಾಮಾನ್ಯ ದೇವತೆಗಳನ್ನೇ ಪೂಜಿಸುತ್ತಾ ಕಾಲಕಳೆಯುವರು. ಅಂತಹವರಿಗೆ ಎಂದೂ ಪುನಃ ಜನ್ಮಪ್ರಾಪ್ತಿಯು ತಪ್ಪುವುದಿಲ್ಲ. ಅಲ್ಲದೆ ಅವರು ನರಕವನ್ನೂ ಪ್ರವೇಶಿಸುವರು. ಪದೇ ಪದೇ ದುಃಖವನ್ನು ಅನುಭವಿಸುವರು. ಹೀಗಾಗಿ ಆವರು ದುರದೃಷ್ಟಶಾಲಿಗಳೆನಿಸಿಕೊಳ್ಳಲಾರರೇ! ॥೨೬॥

ಅನೇಕ ಜನರು ಶಂಭುವಿನ ಮಹಿಮೆಯನ್ನು ತಿಳಿಯದವರಾಗಿ ಶಿವಾರಾಧನ ತತ್ಪರರಾಗದೇ ಕೊನೆಗೆ ಯೋನಿಮಾರ್ಗವನ್ನು ಅಂದರೆ ಮತ್ತೆ ಭೂಮಿಯಲ್ಲಿ ಜನ್ಮವನ್ನು ಪಡೆಯುತ್ತಾರೆ. ಮತ್ತು ನರಕವಾಸವನ್ನು ಹೊಂದುವರು ಎಂಬುದರಲ್ಲಿ ಸಂದೇಹವಿಲ್ಲ. ॥೨೭॥

ಯೋ ಯೋನಿಮಾರ್ಗಪರಿಮಾರ್ಗಣಸಕ್ತಚಿತ್ತೋ
ಮತ್ತಪ್ರಮತ್ತಪರಿಸೇವಿತಚಿತ್ತವೃತ್ತಿಃ ।
ನೀಚಾನುವೃತ್ತಿನಿರತಃ ಸ ಕಥಂ ಮಹೇಶಂ
ಜಾನಾತಿ ಜಂತುರಶಿವಾರ್ಚನಪಾಪರೂಪಃ ॥೨೮॥

ನ ಜಾನಂತಿ ಮೃಡಂ ಮೂಢಾಃ ಶಿವಾಪರಿವೃಢಂ ದೃಢಂ ।
ನರಕೇ ಭಿಂಡಿಪಾಲೇಷು ತಪ್ತೇಷು ಪ್ರತಪಂತಿ ತೇ ॥೨೯॥

ಯಮಕಿಂಕರಪಾದಘಾತಶಂಕಾ
ನ ಭವತ್ಯೇವ ಹಿ ಶಂಕರಾರ್ಚಕಾನಾಂ ।
ಅತ ಏವ ಭಜಾಮಹೇ ಮಹೇಶಂ
ಮುಹುರರ್ಧೇಂದುಕಲಾವತಂಸಮೀಶಂ ॥೩೦॥

ಅಸ್ಮಾಭಿರೇವಮನಿಶಂ ಶಿವನಾಮಧೇಯ
ಪೀಯೂಷಪಾನನಿರತಾ ರಸನಾಪಿ ಲಬ್ಧಾ ।

---

ಈ ರೀತಿ ಮತ್ತೆ ಮತ್ತೆ ಜನ್ಮತಾಳುವುದರಲ್ಲಿಯೇ ಆಸಕ್ತನಾಗಿ ಅಹಂಭಾವದಿಂದ ಕಲಕಿದ ಚಿತ್ತವೃತ್ತಿಯುಳ್ಳವನಾಗಿ, ನೀಚಾಶ್ರಯದಲ್ಲಿ ಕಾಲಕಳೆಯುತ್ತಾ ಉದರಭರಣಗೈಯ್ಯುವ ಮನುಷ್ಯನು ಕೇವಲ ಪಾಪಿಷ್ಠನಲ್ಲವೆ? ಅಂತಹವನು ಶಿವಮಹಿಮೆಯನ್ನು ಅರಿಯುವುದು ಹೇಗೆ? ಅವನು ಶಿವಾರ್ಚನೆಮಾಡದಿರುವ ಒಂದು ಮಹಾಪಾಪರಾಶಿಯೆಂದು ಪರಿಗಣಿಸಬೇಕು. ॥೨೮॥

ಪಾರ್ವತೀಪತಿಯಾದ ಶಂಕರನನ್ನು ಸರಿಯಾಗಿ ಧ್ಯಾನಮಾಡದೇ ಮೂಢರು, ತಪ್ತಭಿಂಡಿಪಾಲವೇ ಮೊದಲಾದ ಮಹಾ ಮಹಾ ನರಕಗಳಲ್ಲಿ ಬಿದ್ದು ಬಳಲಿ ವೃಥಾ ಶ್ರಮಪಡುವರು. ॥೨೯॥

ಯಾರು ಈಶ್ವರಪೂಜೆಯಲ್ಲಿಯೇ ದೃಢಚಿತ್ತವುಳ್ಳವರಾಗಿ ಕಾಲಕಳೆಯುವರೋ, ಅವರಿಗೆ ಎಂದೂ ಯಮಕಿಂಕರರ ಪಾದತಾಡನದ ಸ್ಮರಣೆಯೇ ಇರುವುದಿಲ್ಲ. ಅದರಿಂದಲೇ ನಾನು ಸಕಲ ದೇವತಾರಾಧನೆಯನ್ನೂ ಬಿಟ್ಟು, ಕೇವಲ ಅರ್ಧಚಂದ್ರಕಲಾಧರನಾದ ಪರಮೇಶ್ವರನನ್ನೇ ಸರ್ವದಾ ಚಿಂತಿಸುತ್ತಿರುವೆನು. ॥೩೦॥

ನಮ್ಮ ನಾಲಿಗೆಯು ಶಿವನಾಮಸ್ಮರಣೆಯೆಂಬ ಅಮೃತಪಾನದಿಂದ ತೃಪ್ತಿಪಡೆದದ್ದಾಗಿ, ಈಗ ಹಾಲು, ತುಪ್ಪ, ಸಕ್ಕರೆ ಮುಂತಾದುವುಗಳ ಸವಿಯನ್ನು ಸಹ

ದುಗ್ಧಂ ಸ ವಾಂಛತಿ ಘೃತೇನ ಯುತಂ ನ ಜಿಹ್ವಾ
ಸಾ ಶರ್ಕರಾಮತಿಸಿತಾಮಪಿ ತೇನ ತೃಪ್ತಾ ॥೩೧॥

ಯೇನಾಶು ಪೀತಮಸಕೃತ್ ಘೃತದುಗ್ಧಜಾಲಂ
ತೇನಾರನಾಲಕಲನಂ ಕ್ರಿಯತೇ ಕಥಂ ವಾ ।
ತಸ್ಮಾದುಮಾಪತಿಪದಾಂಬುಜಚಿಂತನೇನ
ನೇಯಂ ದಿನಂ ತದಿತರಾಮರಹಾನಪೂರ್ವಂ ॥೩೨॥

ಮಹಾದೇವಃ ಪರೋ ದೇವೋ ಮಹಾದೇವಃ ಪರಾತ್ಪರಃ ।
ಮಹಾದೇವಃ ಪರಂ ಜ್ಞಾನಂ ಮಹಾದೇವೋ ಮಹಾನತಃ ॥೩೩॥

ಮಹಾದೇವೋ ರಸಸ್ತಾವನ್ಮಹಾತ್ಮಾ ಮಹತಾಮಪಿ ।
ಸೇವನೀಯಃ ಪ್ರಯತ್ನೇನ ಮಹಾದೇವೋ ಮನೋಹರಃ ॥೩೪॥

ಮಹಾದೇವವಿಹಾರಾಣಾಂ ಸ್ಥಲಂ ಶಾಂಭವಮಾನಸಂ ।
ಅತಸ್ಸಂಪೂಜ್ಯ ಸತತಂ ಶಾಂಭವಾಶ್ಶಿವತತ್ಪರಾಃ ॥೩೫॥

---

ಅನುಭವಿಸುವುದರಲ್ಲಿ ಆಸೆಪಡಲಾರದು. ಶಿವನಾಮಸ್ಮರಣೆಯು ಎಲ್ಲಕ್ಕಿಂತಲೂ ಮಧುರವಾದದ್ದಲ್ಲವೆ! ॥೩೧॥

ರುಚಿಕರವಾದ ಹಾಲು, ತುಪ್ಪ ಇವುಗಳ ಸವಿಯುನ್ನು ಕಂಡವರು ಎಂದಾದರೂ ಗಂಜಿಯನ್ನು ಕುಡಿಯಲು ಇಷ್ಟಪಡುವರೆ! ಹಾಗೆಯೇ ಈಶ್ವರನಾಮಾಮೃತ ಪಾನ ಮಾಡಿದವರು ಇತರ ದೇವತೆಗಳ ನಾಮಸ್ಮರಣೆಗೆ ಎಂದೂ ಗಮನ ಕೊಡುವುದಿಲ್ಲ. ॥೩೨॥

ಪರಮ ಪೂಜ್ಯನೂ, ಪರಾತ್ಪರ ವಸ್ತುವೂ, ಪರಮಜ್ಞಾನ ಸ್ವರೂಪನೂ, ಮಹಾ ಮಹಾ ವಸ್ತುಗಳಿಗೆಲ್ಲಾ ಅಧಿಷ್ಠಾನನೆನಿಸಿರುವವನೂ, ಮಹಾರಸಸ್ವರೂಪಿಯಾದವನೂ, ಮನೋಹರನೂ ಆದವನು ಮಹೇಶ್ವರನೇ ಹೊರತು ಮತ್ತೆ ಬೇರೆ ಯಾವ ದೇವತೆಗಳೂ ಅಲ್ಲ. ಆದ್ದರಿಂದ ಆ ಮಹಾದೇವನನ್ನೇ ಸರ್ವದಾ ಎಲ್ಲರೂ ಸೇವಿಸಬೇಕು. ॥೩೩-೩೪॥

ಅಂತಹ ಮಹಾದೇವನನು ಸ್ಥಿರವಾಗಿ ನೆಲಸಿ ವಿಹರಿಸುವುದು ಶಾಂಭವರ ಅಂತಃಕರಣದಲ್ಲಿ ಮಾತ್ರ. ಅದಕ್ಕಾಗಿ ಅಂತಹ ಮಹಾದೇವಸ್ವರೂಪರನ್ನೂ ಶಿವಪ್ರೀತ್ಯರ್ಥವಾಗಿ ಪೂಜಿಸಬೇಕು. ॥೩೫॥

ಶಿವಾಭಿಮಾನಸ್ಥಲಮೇಕಮೇವ
ತದೇಕಮೇಕಾಂತಶಿವಾರ್ಚಕಸ್ಯ ।
ಶಿವಾರ್ಚಕಾದಪ್ಯಧಿಕೋಽಸ್ತಿ ಕೋ ವಾ
ಯತಸ್ಸ ಏವಾಪ್ರತಿಮಪ್ರಭಾವಃ ॥೩೬॥

ತಂ ಭಾವಮೇವಾಪ್ರತಿಮಪ್ರಭಾವಂ
ಮನ್ಯೇ ಸುರಾಣಾಮಪಿ ಸೇವನೀಯಂ ।
ಸ ಏವ ಮೃತ್ಯುಂಜಯಪೂಜನೇನ
ಧನ್ಯೋಽಪಿ ಮಾನ್ಯೋಽಪಿ ಮಹಾನುಭಾವಃ ॥೩೭॥

ಯೋ ಯಸ್ತಿಷ್ಠತಿ ಶಾಂಕರೋ ಭುವಿ ಸ ಮೇ ಪೂಜ್ಯಃ ಸ ಪೂಜಾರ್ಹತಾಂ
ಪ್ರಾಪ್ತಶ್ಶಂಕರಪೂಜಯಾ ಸುರಗಣಾಸ್ತತ್ಪೂಜನೈಃ ಪಾವನಾಃ ।
ತತ್ಪಾದಪ್ರಣತಾಸ್ತದಂಘ್ರಿಜರಜೋಲೇಶಪ್ರಸಾದಂ ಪರಂ
ವಾಂಛಂತ್ಯೇವ ಸುಧಾಂ ಸುಧಾಮಪಿ ಮುಹುಸ್ತ್ಯಕ್ತ್ವಾ ವೃಥೇತ್ಯಾದರಾತ್ ॥೩೮॥

---

ಈಶ್ವರನಿಗೆ ಅಭಿಮಾನ ಪಾತ್ರವಾದ ಸ್ಥಲವೆಂದರೆ ಈಶ್ವರನ ಭಕ್ತನ ಹೃದಯ ಕುಹರವೊಂದೇ. ಅದರಿಂದಲೇ ಈಶ್ವರನ ಆರಾಧಕರಿಗಿಂತ ಶ್ರೇಷ್ಠವಾದ ವಸ್ತುವು ಬೇರೊಂದಿಲ್ಲವೆಂದು ಹೇಳುವರು. ॥೩೬॥

ಈಶ್ವರನ ಸೇವಕನೇ ನಿಜವಾದ ಪ್ರಭಾವಶಾಲಿಯು. ಅವನೇ ಸಕಲ ದೇವತೆಗಳಿಗೂ ಪೂಜ್ಯನೆನಿಸಿದವನು. ಅವನೂ ಸಹ ಮೃತ್ಯುಂಜಯನನ್ನು ಸಂಪೂರ್ಣವಾಗಿ ಆರಾಧಿಸಿದ್ದರಿಂದಲೇ, ಧನ್ಯನೂ, ಮಾನ್ಯನೂ, ಮಹಾನುಭಾವನೂ, ಎನಿಸಿ ಜಗದ್ವಿಖ್ಯಾತನೆನಿಸಿರುವನು. ॥೩೭॥

ಈಶ್ವರ ಪೂಜಕನು ಭೂಲೋಕದಲ್ಲಿ ಎಲ್ಲಿದ್ದರೂ ಅವನು ನನಗೆ ಪೂಜ್ಯನೇ. ಪೂಜಾರ್ಹತೆಯನ್ನೂ ಆತನು ಪಡೆದುದೂ ಶಂಕರಪೂಜೆಯಿಂದಲೇ ಅಲ್ಲವೆ! ಅಂತಹ ಈಶ್ವರ ಭಕ್ತನನ್ನು ದೇವತೆಗಳು ಸಹ ಸರ್ವದಾ ಪೂಜಿಸುತ್ತಿರುವರು. ಈಶ್ವರ ಪೂಜಕರ ಪಾದಪದ್ಮದ ಧೂಳಿನ ಸ್ಪರ್ಶವನ್ನೇ ಅಮೃತವೆಂದು ತಿಳಿದು, ಸುಕೃತಿಗಳು ಪ್ರಸಿದ್ಧವಾದ ಅಮೃತವನ್ನು ಸಹ ದೂರಮಾಡಿ ಅದನ್ನೇ ಬಯಸುತ್ತಿರುವರು. ॥೩೮॥

ಕಾಲಾದ್ಭೀತಿಃ ಕಾಲಕಾಲಾರ್ಚನಾದ್ಯೈ
ರ್ನಾಭೂದ್ಭೀತಃ ಪ್ರತ್ಯುತಾಸ್ಮಾದ್ಯಮೋಽಪಿ ।
ತಸ್ಮಾತ್ಕೋಽ ವಾ ಕಾಲಕಾಲಾನ್ಯದೇವಂ
ಮೋಹಾದ್ಧ್ಯಾತುಂ ಪೂಜಿತುಂ ವಾ ಪ್ರವೃತ್ತಃ ॥೩೯॥

ಪ್ರವೃತ್ತಿರೀಶಾನ್ಯಸುರಾರ್ಚನೇಷು
ತಸ್ಮಾಚ್ಛಿವಾರಾಧನತತ್ಪರಾಣಾಂ ।
ಯಸ್ಮಾಚ್ಛಿವಾನ್ಯಾಮರರೂಪಬುದ್ಧಿ
ರ್ಹಾನಾಯ ತಾವದ್ಭವತೀತಿ ಮನ್ಯೇ ॥೪೦॥

ಅಸದ್ವಸ್ತುಹಾನಾಯ ಸದ್ವಸ್ತುಬುದ್ಧಿಃ
ಪ್ರವೃದ್ಧಾಪಿ ತತ್ಕಾರ್ಯಹೇತುಃ ಸ್ವತಸ್ಸ್ಯಾತ್ ।
ಉಪಾದಾನಮುಪ್ಯಸ್ತಿ ಸದ್ಧಾನವೃದ್ಧ್ಯೈ
ಸದಿತ್ಯೇವ ಬುದ್ಧಿಶ್ಶಿವಬ್ರಹ್ಮಣೀತಿ ॥೪೧॥

---

ಕಾಲಕಾಲನಾದ ಶಂಕರನನ್ನು ಅರ್ಚಿಸುವುದರಿಂದ, ಯಮನಿಗೂ ಯಾರೂ ಹೆದರಬೇಕಾಗುವುದಿಲ್ಲ. ಅದಕ್ಕೆ ಬದಲಾಗಿ ಯಮನೇ ಈ ಭಕ್ತರಿಗೆ ಹೆದರುವನು. ಹೀಗಿರುವಾಗ ಯಾವನು ತಾನೇ ಪರಶಿವನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸಲು ತೊಡಗುವನು ? ಒಂದು ವೇಳೆ ಹಾಗೆ ತೊಡಗಿದರೆ ಅದು ಕೇವಲ ಅಜ್ಞಾನವಲ್ಲವೇ ! ॥೩೯॥

ಶಿವಾರಾಧನೆಯಲ್ಲಿಯೇ ತೊಡಗಿರುವವರಿಗೆ ಶಿವಭಿನ್ನವಾದ ಇತರ ದೇವತಾ ಸೇವನೆಯಲ್ಲಿ ಬುದ್ಧಿಯೊದಗುವುದೂ, ಅಲ್ಲದೆ ಶಿವಾತಿರಿಕ್ತ ದೇವತೆಗಳ ರೂಪ ಬುದ್ಧಿಯು ಶಿವನಲ್ಲಿ ಬರುವುದೂ, ಇವೆಲ್ಲವೂ ಯಾವುದೋ ಒಂದು ಹಾನಿಗಾಗಿಯೇ ಹೊರತು ಒಳ್ಳೆಯದಕ್ಕಲ್ಲ. ॥೪೦॥

ಸೃಷ್ಟಿಲಯಗಳಿಗೆ ಆಶ್ರಯವಾಗಿರುವ ಅಸದ್ರೂಪವಾದ ಈ ಜಗತ್ತಿಗೆ, ಉಪಾದಾನಕಾರಣವಾಗಿರುವುದು ಸದ್ವಸ್ತುವೆನಿಸಿದ ಪರಬ್ರಹ್ಮವೆಂದೇ ತಿಳಿಯಬೇಕು. ಆ ಸದ್ವಸ್ತುಜ್ಞಾನದಿಂದಲೇ ಕಾರ್ಯರೂಪವಾದ ಅಸದ್ವಸ್ತುಗಳ ತ್ಯಾಗದಲ್ಲಿ ಬುದ್ಧಿಯುಂಟಾಗುವುದು. ಶಿವಾತ್ಮಕವಾದ ಆ ಪರಬ್ರಹ್ಮವಸ್ತುವೇ ಸದ್ವಸ್ತುವೆಂದು ಭಾವಿಸಬೇಕು.

ಯದ್ಬ್ರಹ್ಮ ತತ್ತ್ವಾವದುಮಾಸಹಾಯ
ಸ್ವರೂಪಮಾಸಾದ್ಯ ಹೃದಿ ಪ್ರವಿಷ್ಟಂ ।
ಕಷ್ಟಾನಿ ದುಷ್ಟಾನಿ ನಿರಾಕರೋತಿ
ತತ್ಕಷ್ಟನಾಶಾಯ ಯತಃ ಪ್ರವೃತ್ತಂ ॥೪೨॥

ಅಶಿವಾರ್ಚನಭಾವನಾನಿವೃತ್ತಿ
ರ್ಯದಿ ಜಾತಾ ಬಹುಪುಣ್ಯಸಂಚಯೈಃ ।
ಶಿವ ಏವ ತದಾ ವಿಚಿಂತನೀಯೋ
ಮನಸಃ ಸೃಷ್ಟಿರಪೀಶಪೂಜನಾಯ ॥೪೩॥

ಮನೋ ಮಹೇಶೇನ ಯದಾ ಪ್ರಕೃಷ್ಟಂ
ಸೃಷ್ಟಂ ತದಾ ತಸ್ಯ ಶಿವಾರ್ಚನೇನ ।
ಗತೋ ಭವತ್ಯೇವ ಸಕಾಲಕಾಲಂ
ಕಿಂ ಕಾಲಕಾಲಪ್ರವಣಸ್ಯ ತಸ್ಯ ॥೪೪॥

---

ಪರಬ್ರಹ್ಮವಸ್ತುವೆಂದು ಹೇಳಿಸಿಕೊಳ್ಳುವ, ನಿರ್ಗುಣವೂ ನಿರಾಕಾರವೂ ಆದ ವಸ್ತುವೇ ಭಕ್ತರ ಸಕಲ ಕಷ್ಟನಷ್ಟಗಳನ್ನೂ ಹೋಗಲಾಡಿಸಿ, ಅವರಿಗೆ ಆನಂದ ವನ್ನು ಒದಗಿಸಲೋಸುಗ, ಸೋಪಾಧಿಕವಾದ ಉಮಾಪತಿಯಾದ ಪರಶಿವನ ಸ್ವರೂಪದಿಂದ ಭಕ್ತರ ಹೃದಯಕುಹರದಲ್ಲಿ ಸ್ಫುರಿಸುವುದು. ॥೪೨॥

ಶಿವಾರ್ಚನೆಯಲ್ಲಿ ಪ್ರವೃತ್ತಿಯೊದಗುವುದೂ, ಶಿವೇತರ ದೇವತಾರಾಧನೆಯಲ್ಲಿ ನಿವೃತ್ತಿಲಭಿಸುವುದೂ, ಬಹು ಪುಣ್ಯಸಂಚಯದ ಫಲವೆಂದು ತಿಳಿಯಬೇಕು. ಆ ವಿಧವಾದ ಪ್ರವೃತ್ತಿ ನಿವೃತ್ತಿಗಳಿಗೆ ಕಾರಣವಾದ ಮನಸ್ಸನ್ನು ಸೃಷ್ಟಿಸಿರುವವನೇ ಪರಮೇಶ್ವರನೆಂದು ಭಾವಿಸಬೇಕು. ಸರ್ವವೂ ಶಿವಸ್ವರೂಪವೆಂದು ಅರಿಯುವುದೇ ನಿಜವಾದ ಶಿವಾರಾಧಕನ ಸ್ವರೂಪಯೋಗ್ಯತೆಯೆಂದು ಅರಿಯಬೇಕು. ॥೪೩॥

ಈಶ್ವರನೇ ಸಾಕ್ಷಾತ್ತಾಗಿ ಯಾವಾಗ ಮನುಷ್ಯರ ಮನಸ್ಸನ್ನು ಸೃಷ್ಟಿಮಾಡಿ ದನೋ, ಆಗಲೇ ಮನಸ್ಸಿಗೆ ಶಿವಾರ್ಚನೆಯು ಮುಖ್ಯ ಕರ್ತವ್ಯವಾಯಿತು. ಅಂತಹ ಕಾಲಕಾಲನಾದ ಮಹೇಶ್ವರನನ್ನು ಧ್ಯಾನಿಸದೇ ಕಾಲವನ್ನು ಕಳೆದ ಮನಸ್ಸಿಗೆ ಅದಕ್ಕಿಂತಲೂ ಪಾಪಕೃತ್ಯವು ಮತ್ತಾವುದಿರುವುದು? ॥೪೪॥

ಕಾಲಾಂತಕಾರಾಧಕಪಾದುಕಾರ್ಚಾ
ಚರ್ಚಾಪಿ ವರ್ಚಶ್ಚಿರಮಾತನೋತಿ ।
ತೇನೈವ ಪಾಪೌಘಲಯೋಽಪಿ ತೇನ
ಸ್ವರ್ಗೋಽಪಿ ಮುಕ್ತಿಶ್ಚ ಭವತ್ಯವಶ್ಯಂ ॥೪೫॥

ಅಹೋ ವದಂತಿ ಪ್ರಮಥಾಧಿನಾಥಾಃ
ಕೃತ್ವಾ ಕಥಂಚಿದ್ಗಿರಿಶಾರ್ಚನಾನಿ ।
ಧನ್ಯಾಃ ಪರಂ ಶಂಕರಪೂಜನೇನ
ನಯಂತಿ ತಾವದ್ದಿವಸಾನಪೀತಿ ॥೪೬॥

ಇದಂ ಪರಂ ಭಾಗ್ಯಮಿತಿ ಸ್ಮರಂತಃ
ಸಂಸಾರವಾರ್ತಾಮಪಿ ವಿಸ್ಮರಂತಃ ।
ಮಹೇಶನಾಮಾನಿ ಸದಾ ಜಪಂತಃ
ಶಿವಾಲಯೇಷು ಪ್ರಚರಂತಿ ಸಂತಃ ॥೪೭॥

---

ಕಾಲಕಾಲನಾದ ಪರಶಿವನ ಪಾದುಕಾದ್ವಯಗಳ ಸ್ಮರಣೆಯಿಂದಲೇ ಭಕ್ತನು ಶಾಶ್ವತವಾದ ತೇಜಸ್ಸನ್ನು ಪಡೆಯುವನು. ಆತನ ಸಕಲ ಪಾಪಗಳೂ ನಿವಾರಣೆ ಯಾಗುವುದಲ್ಲದೆ ಆತನಿಗೆ ಸ್ವರ್ಗವಾಸವೂ, ಹಾಗೆಯೇ ಶಾಶ್ವತವಾದ ಮುಕ್ತಿಯೂ ದೊರಕುವುದು ಎಂಬುದರಲ್ಲಿ ಸಂಶಯವೇ ಇಲ್ಲ. ॥೪೫॥

ಪ್ರಮಥಾಧಿಪರೂ ಕಷ್ಟಪಟ್ಟು ಈಶ್ವರಾರಾಧನೆ ಮಾಡಿ ಅದರಿಂದ ತಾವು ಧನ್ಯರೆನಿಸಿಕೊಂಡಿರುವರು. ಮತ್ತು ಆನಂದಮಯತೆಯಿಂದ ಅವರು ಕಾಲವನ್ನು ಸುಲಭವಾಗಿ ತಳ್ಳುತ್ತಿರುವರು. ಅವರೇ ಧನ್ಯರಲ್ಲವೆ ! ॥೪೬॥

ಸತ್ಪುರುಷರಾದವರು, ಶಿವಾರ್ಚನೆಯೇ ತಮ್ಮ ಪರಮಭಾಗ್ಯವೆಂದು ನಂಬು ವರು. ಆದರಿಂದ ಅವರು ಸಂಸಾರದ ಸಕಲ ದುಃಖಗಳನ್ನು ಕಳೆದುಕೊಳ್ಳುವರು. ಮಹೇಶ್ವರನ ನಾಮಗಳನ್ನೇ ಸರ್ವದಾ ಜಪಿಸುತ್ತಾ, ಶಿವಾಲಯಗಳಲ್ಲಿಯೇ ಯಾವಾ ಗಲೂ ಸಂಚರಿಸುತ್ತಾ ಕಾಲಕಳೆಯುವರು. ॥೪೭॥

ಸಂತಸ್ತಾವತ್ಸಂತತಂ ಶಾಂತಮೀಶಂ
ಸ್ಮೃತ್ವಾ ಸ್ಮೃತ್ವಾ ದೇವದೇವಂ ಚ ಮತ್ವಾ ।
ದತ್ವಾ ಚಿತ್ತಂ ಶಾಂಕರೇ ಸಾಧು ನತ್ವಾ
ಕೃತ್ವಾ ಪೂಜಾಂ ಯಾಂತಿ ಸಾಂಬಂ ಮಹೇಶಂ ॥೪೮॥

ಅಪರ್ಣಾರಮಣಂ ಮತ್ವಾ ಕೃಪಾರ್ಣವಮನಾಮಯಂ ।
ಮಹಾಮೃತ್ಯುಂಜಯಂ ಶೈವಾಃ ಪೂಜಯಂತಿ ಪ್ರಯತ್ನತಃ ॥೪೯॥

ಕಶ್ಚಾಂಭವೇನ ಸದೃಶಸ್ತತ್ತತ್ತ್ವಜ್ಞೋ ಭವಿಷ್ಯತಿ
ತೇನ ತತ್ತ್ವಂ ಯಥಾ ಜ್ಞಾತಂ ತಥಾ ನಾನ್ಯೇನ ಬುದ್ಧ್ಯತೇ ॥೫೦॥

ಶಿವಂ ಶಿವಂಕರತ್ವೇನ ಜ್ಞಾತ್ವಾ ಕೇವಲಮವ್ಯಯಂ ।
ಸರ್ವಮನ್ಯತ್ಪರಿತ್ಯಜ್ಯ ನಿರಾತಂಕೋಧಿತಿಷ್ಠತಿ ॥೫೧॥

ಮಹದ್ಭಾಗ್ಯಮಿತಿ ಜ್ಞಾತಂ ಶಾಂಭವಂ ಜನ್ಮ ಕೇವಲಂ ।
ಜನ್ಮನಾಮುತ್ತಮಂ ಜನ್ಮ ಶಾಂಭವಂ ತತ್ಕಿಲೋತ್ತಮಂ ॥೫೨॥

---

ಸತ್ಪುರುಷರಾದವರು ಯಾವಾಗಲೂ ಶಾಂತ ಮೂರ್ತಿಯಾದ ಶಂಕರನ ಆಕಾರವನ್ನೇ ಸ್ಮರಿಸುತ್ತಾ, ದೇವದೇವನಾದ ಅವನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ಸರ್ವದಾ ಅವನನ್ನೇ ಸ್ಮರಿಸುತ್ತಾ, ಪಾರ್ವತೀ ಪತಿಯಾದ ಶಂಭುವನ್ನೇ ಪೂಜಿಸುತ್ತಾ ಕಾಲಕಳೆಯುವರು. ॥೪೮॥

ಪಾರ್ವತೀಪತಿಯಾದ ಶಂಕರನೇ ದಯಾಸಮುದ್ರನೆಂದರಿತು, ಈಶ್ವರ ಪೂಜಕರು ಬಹು ಭಯಭಕ್ತಿಯಿಂದ ಆ ಮೃತ್ಯುಂಜಯನನ್ನೇ ಆರಾಧಿಸುವರು. ಹೀಗಿರುವಾಗ ಶಂಕರನಿಗಿಂತ ಬೇರೆಯಾದ, ಸಕಲ ತತ್ವವನ್ನೂ ತಿಳಿದ ದೇವದೇವನು ಮತ್ತಾರಿರುವನು ? ತತ್ಸದೃಶರಾದ ತತ್ತ್ವಜ್ಞರು ಇಲ್ಲವೆಂಬುದೇ ನಿಜವಾದ ಅಭಿಪ್ರಾಯ. ॥೪೯-೫೦॥

ಈಶ್ವರ ಸೇವಕನು, ಶಿವನೇ ಸಕಲ ಕಲ್ಯಾಣ ಪ್ರದನಾದವನು, ಮತ್ತೂ ನಾಶರಹಿತವಾದ ಪರಬ್ರಹ್ಮವಸ್ತುವು ಎಂದರಿತು ಸರ್ವವನ್ನೂ ಬಿಟ್ಟು, ಶಂಕರ ಜ್ಞಾನ ವೊಂದನ್ನೇ ಆಶ್ರಯಿಸಿ, ಸಕಲದುಃಖಗಳಿಂದಲೂ ದೂರನಾಗುವನು. ಅಲ್ಲದೆ ಶಂಭು ಸೇವಕನು ನನ್ನ ಜನ್ಮವೇ ಉತ್ತಮವಾದುದೆಂದೂ, ಉತ್ತಮ ಜನ್ಮವೆಂದರೆ ಈಶ್ವರ

ಶಾಂಭವಂ ಜನ್ಮ ಸಂಪ್ರಾಪ್ಯ ಶಂಭುಪೂಜಾಂ ಕರೋತಿ ಯಃ ।
ಸ ಏವ ಧನ್ಯಶ್ಶ್ರೇಷ್ಠಶ್ಚ ವರಿಷ್ಠೋಽಪಿ ವಸಿಷ್ಠತಃ ॥೫೩॥

ಸರ್ವಕಷ್ಟವಿನಾಶಾಯ ಶಿಪಿವಿಷ್ಟಾರ್ಚನೇ ರತಾಃ ।
ಭವಂತಿ ಬಹವೋ ಲೋಕೇ ಮುಕ್ತಾಸ್ತೇ ಸರ್ವಥಾ ಧ್ರುವಂ ॥೫೪॥

ಶಿವಸ್ಮರಣಮಾತ್ರೇಣ ಜೀವನ್ಮುಕ್ತೋ ಭವೇನ್ನರಃ ।
ಶಿವಶಬ್ದೋಚ್ಚಾರಣೇನ ದೇವಪೂಜ್ಯೋ ಭವಿಷ್ಯತಿ ॥೫೫॥

ಶಿವನಾಮಾಮೃತಾಸಕ್ತಜಿಹ್ವಾಲೋಲಮನಾಕುಲಂ ।
ಪ್ರಣಮಂತಿ ಸುರಾಸ್ಸರ್ವೇ ಮುಹುರ್ದೃಷ್ಟ್ವಾಪಿ ದೂರತಃ ॥೫೬॥

ಇಂದ್ರಾದಿದೇವಪೂಜ್ಯತ್ವಂ ಯೋ ವಾಂಛತಿ ನರೋಽಪಿ ಸನ್ ।
ಸ ಪೂಜಯತಿ ಗೌರೀಶಂ ಲಿಂಗರೂಪಮನಾಮಯಂ ॥೫೭॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಶೃಣುಧ್ವಂ ಸಾವಧಾನೇನ ಶಿವಧ್ಯಾನಪುರಸ್ಸರಂ ॥೫೮॥

---

ಭಕ್ತರ ಜನ್ಮವೆಂದೇ ಭಾವಿಸಿ ಸದಾಶಿವಾರ್ಚನೆಯಿಂದ ಸರ್ವದಾ ತೃಪ್ತಿಗೊಳ್ಳುವನು. ॥೫೧-೫೨॥

ಯಾವನು ಶಾಂಭವವಂಶದಲ್ಲಿ ಜನಿಸಿ ಸರ್ವದಾ ಶಂಕರಾರಾಧನೆಯಲ್ಲಿಯೇ ಕಾಲ ಕಳೆಯುವನೋ, ಆತನು ವಸಿಷ್ಠನಿಗಿಂತಲೂ ಶ್ರೇಷ್ಠನೆನಿಸಿಕೊಳ್ಳುವನು. ಅನೇಕ ಜನರು ಲೋಕದಲ್ಲಿ ತಮ್ಮ ಕಷ್ಟನಿವಾರಣೆಗಾಗಿ ಶಂಕರನನ್ನೂ ಆರಾಧಿಸಿ, ತಮ್ಮ ಕಷ್ಟನಷ್ಟಗಳಿಂದ ಮುಕ್ತರಾಗಿರುವರು. ॥೫೩-೫೪॥

ಶಿವಸ್ಮರಣೆಯಿಂದಲೇ ಮನುಷ್ಯನು ಜೀವನ್ಮುಕ್ತನಾಗಬಹುದು. ಶಿವಶಬ್ದೋಚ್ಚಾರಣೆಯಿಂದಲೇ ಭಕ್ತನು ಸಕಲ ದೇವತಾ ಪೂಜ್ಯನೆನಿಸಿಕೊಳ್ಳುವನು. ಆಸಕ್ತಿಯುಳ್ಳ ನಾಲಿಗೆಯಿಂದ ಶಿವನಾಮವೆಂಬ ಅಮೃತಪಾನಮಾಡಿದಂತಹ ಪುಣ್ಯ ಶರೀರಿಯನ್ನು ದೂರದಿಂದಲೇ ನೋಡಿ ಸಕಲ ದೇವತೆಗಳೂ ವಂದನೆಮಾಡುವರು. ಇದಲ್ಲವೇ ಈಶ್ವರಪೂಜೆಯ ಫಲ! ॥೫೫-೫೬॥

ಯಾರು ಇಂದ್ರಾದಿಗಳಂತೆ ದೇವಶ್ರೇಷ್ಠರೆನಿಸಿಕೊಳ್ಳಬೇಕೆಂದು ಅಪೇಕ್ಷಿಸುವರೋ, ಅಂತಹವರು ಈಶ್ವರಲಿಂಗರೂಪವಾದ ಪವಿತ್ರ ಶಿವಮೂರ್ತಿಯನ್ನು

ಪುರಾ ರೇವಾಸರಿತ್ತೀರೇ ದ್ವಿಜಃ ಕೋಽಪಿ ಸ ಶಾಂಕರಃ ।
ಸಕುಟುಂಬಃ ಸಾಂಬಪೂಜಾಂ ಚಕಾರ ಶಿವತತ್ಪರಃ ॥೫೯॥

ದೂರ್ವಾಂಕುರೈರಭಿನವೈರ್ಧತ್ತೂರಪ್ರಭವೈರಪಿ ।
ಪೂಜಯಾಮಾಸ ಗಿರಿಶಂ ನವಬಿಲ್ವೀದಲೈರಪಿ ॥೬೦॥

ಏವಂ ಕಾಲೇ ನಯತ್ಯೇವ ಕಾಲಕಾಲಾರ್ಚನೇ ಮುದಾ ।
ಆಹಾರಮಪಿ ಸಂತ್ಯಕ್ತ್ವಾ ಸ್ಥಿತಶ್ಶರ್ವಮನುಸ್ಮರನ್ ॥೬೧॥

॥ ದ್ವಿಜಭಾರ್ಯೋವಾಚ ॥

ತಾದೃಶಂ ಶಾಂಭವಂ ದೃಷ್ಟ್ವಾ ತತ್ಕುಟುಂಬಮುವಾಚ ತಂ ।
ಪ್ರಣಿಪತ್ಯ ಪ್ರಯತ್ನೇನ ಕೃತಾಂಜಲಿಪುಟಾ ಮುಹುಃ ॥೬೨॥

ಸ್ವಾಮಿನ್ಮಾಂ ಪ್ರಣತಾಂ ಪಶ್ಯ ದೀನವತ್ಸಲವತ್ಸಲ ।
ವಿಜ್ಞಪ್ತಿರೇಷಾ ಶ್ರೋತವ್ಯಾ ನೈಷ್ಠುರ್ಯಂ ತ್ಯಜ ಮಯ್ಯಪಿ ॥೬೩॥

---

ಆರಾಧಿಸುವರು. ಈ ಸಂದರ್ಭದಲ್ಲಿ ಹೇಳಬೇಕಾದ ಒಂದು ಇತಿಹಾಸವನ್ನು ಹೇಳುವೆನು. ಈಶ್ವರಧ್ಯಾನಪುರಸ್ಸರವಾಗಿ ಅದನ್ನು ಸಾವಧಾನದಿಂದ ಕೇಳು. ॥೫೭-೫೮॥

ಹಿಂದೆ ರೇವಾನದೀ ತೀರದಲ್ಲಿ ಸತ್ಯವ್ರತನೆಂಬ ಬ್ರಾಹ್ಮಣನೊಬ್ಬನು ಕುಟುಂಬ ಪರಿವೃತನಾಗಿ ಸರ್ವದಾ ಶಿವಪೂಜೆಯಲ್ಲಿಯೇ ಆಸಕ್ತನಾಗಿದ್ದನು. ಆತನು ನಿತ್ಯವೂ ದೂರ್ವಾಂಕುರ, ದತ್ತೂರೀ ಹೂವು, ಬಿಲ್ವದಳ ಇವುಗಳಿಂದ ಈಶ್ವರನನ್ನು ಸದಾ ಪೂಜಿಸುತ್ತಲೇ ಇದ್ದನು. ॥೫೯-೬೦॥

ಹೀಗೆಯೇ ಆತನು ಸರ್ವದಾ ಶಂಕರನನ್ನೇ ಪೂಜಿಸುತ್ತಾ ಕೊನೆಕೊನೆಗೆ ಆಹಾರವನ್ನು ಸಹ ಬಿಟ್ಟು ಈಶ್ವರಧ್ಯಾನದಲ್ಲಿಯೇ ನಿರತನಾದನು. ಇದನ್ನು ಆತನ ಪತ್ನಿಯು ನೋಡಿ, ಒಂದು ದಿನ ಪತಿಗೆ ನಮಸ್ಕರಿಸಿ ಅಂಜಲಿಬದ್ಧಳಾಗಿ ನಿಂತು ಹೀಗೆ ಕೇಳಿಕೊಂಡಳು. ॥೬೧-೬೨॥

ದೀನಬಂಧುವಾದ ಪತಿದೇವನೇ, ನಮಸ್ಕಾರಪೂರ್ವಕವಾಗಿ ಕೇಳಿಕೊಳ್ಳುತ್ತಿರುವ ಈ ನನ್ನ ವಿಜ್ಞಾಪನೆಯನ್ನು ಲಾಲಿಸು. ಕರುಣೆಯಿಂದ ನನ್ನ ಮಾತನ್ನು ಅವಧಾರಿಸು. ಲೋಕದಲ್ಲಿ ಶಿವಪ್ರೀತಿಕರಗಳಾದ ನಡೆವಳಿಕೆಗಳು ಎಷ್ಟೋ ಇರುವುವು.

ಶಿವಾಚಾರಾಃ ಶ್ರುತಿಪ್ರೋಕ್ತಾಸ್ಸಂತ್ಯೇವ ವಿವಿಧಾ ಅಪಿ ।
ತೇಷು ಕಸ್ಯ ಪರಿತ್ಯಾಗೇ ಪಾಪಮಾಪ್ನೋತಿ ಮಾನವಃ ॥೬೪॥

ಇದಂ ವಕ್ತವ್ಯಮಧುನಾ ಪುಣ್ಯಪಾಪವಿವೇಚನೈಃ ।
ಪುಣ್ಯಾಪುಣ್ಯವಿವೇಕೇನ ಪ್ರವೃತ್ತಿಶ್ಚ ನಿವರ್ತನಂ ॥೬೫॥

ಪುಣ್ಯಕರ್ಮಣಿ ಪುಣ್ಯಾತ್ಮಾ ಪ್ರವೃತ್ತಃ ಪುಣ್ಯಕರ್ಮಣಾ ।
ಪಾಪಕರ್ಮಣಿ ಪಾಪಾತ್ಮಾ ಪ್ರವೃತ್ತಸ್ಸ್ಯಾದ್ವಿವೇಕತಃ ॥೬೬॥

ಇದಂ ಪುಣ್ಯಮಿತಿ ಜ್ಞಾತ್ವಾ ಪುಣ್ಯೈಃ ಪುಣ್ಯೇಚ್ಛಯಾ ಪುಮಾನ್ ।
ಪುಣ್ಯಂ ಕರೋತಿ ತೇನೈವ ಪುಣ್ಯರಾಶಿಃ ಪ್ರವರ್ಧತೇ ॥೬೭॥

ಪರದಾರಾಭಿಗಮನಂ ಪಾಪಮಿತ್ಯವಧಾರಣಂ ।
ಪುನಃ ಕಾಮಾತುರಸ್ತಸ್ಮಾನ್ನಿವೃತ್ತೋ ನ ಪ್ರಜಾಯತೇ ॥೬೮॥

---

ಅವೆಲ್ಲವೂ ಶ್ರುತಿಪ್ರೋಕ್ತಗಳೆಂದೇ ಕೇಳಿರುವೆನು. ಅವುಗಳಲ್ಲಿ ಯಾವುದನ್ನು ಪರಿತ್ಯಾಗಮಾಡಿದರೆ ಮನುಷ್ಯನು ಮಹಾ ಪಾಪಿಯೆನಿಸುವನು ಎಂಬುವದನ್ನು ನನಗೆ ತಿಳಿಸುವವನಾಗು. ॥೬೩-೬೪॥

ಸ್ವಾಮಿಯೇ, ಮೊದಲು ಪಾಪ, ಪುಣ್ಯ ಇವುಗಳ ಸ್ವರೂಪವನ್ನು ತಿಳಿಸು. ಮತ್ತು ಪಾಪಕರ್ಮಗಳಲ್ಲಿ ಕ್ರಮವಾಗಿ ಪ್ರವೃತ್ತಿಯಾಗಲಿ, ನಿವೃತ್ತಿಯಾಗಲಿ, ಹುಟ್ಟುವುದು ಹೇಗೆ? ಪುಣ್ಯಶಾಲಿಯು ತನ್ನ ಸುಕೃತವಿಶೇಷದಿಂದ ಪುಣ್ಯಕರ್ಮಗಳನ್ನೇ ಮಾಡುವನು. ಪಾಪಿಷ್ಠನು ತನ್ನ ಸಂಸ್ಕಾರವಶದಿಂದ ಪಾಪಕಾರ್ಯಗಳಲ್ಲಿಯೇ ತೊಡಗುವನು. ॥೬೫-೬೬॥

ಪುಣ್ಯಾತ್ಮನು ಪುಣ್ಯಸಂಪಾದನೆಗಾಗಿ ಪುಣ್ಯಕರಗಳಾದ ಕಾರ್ಯಗಳನ್ನು ಮಾಡಿ ಪುಣ್ಯವನ್ನೇ ಹೆಚ್ಚಿಸಿಕೊಳ್ಳುವನು. ಪಾಪಿಯಾದರೋ ಪರಪತ್ನೀಗಮನವು ಪಾಪಕರವೆಂದು ತಿಳಿದಿದ್ದರೂ, ಕಾಮಾತುರನಾಗಿ ಪರಸ್ತ್ರೀಯನ್ನು ಉಪಭೋಗಿಸದೆ ಹಿಂದಿರುಗುವುದಿಲ್ಲ. ಇದರಿಂದ ಪಾಪವೃದ್ಧಿಮಾಡಿಕೊಳ್ಳುವನು. ॥೬೭-೬೮॥

ಏವಂ ಸತಿ ವಿವೇಕೇ ಯಸ್ಸ್ಯಾತ್ಪಾಪಾಪಗೋಚರಃ ।
ಸ ತಾವದುಪಯುಕ್ತಃ ಸ್ಯಾತ್ಪ್ರವರ್ತಕತಯಾ ಮತಃ ॥೧೯॥

ಇತಿ ತದ್ವಚಸಂ ಶ್ರುತ್ವಾ ಸ ವಿಪ್ರಸ್ಸತ್ಯತತ್ಪರಃ ।
ತಾಮಾಹ ಯುವತೀಂ ಭಾರ್ಯಾಂ ಸ್ಮರನ್ನೇವ ಮಹೇಶ್ವರಂ ॥೨೦॥

॥ ಸತ್ಯವ್ರತ ಉವಾಚ ॥

ಸಂತಿ ಧರ್ಮಾಶ್ಶ್ರುತಿಪ್ರೋಕ್ತಾಃ ಪುರಾಣೋಕ್ತಾಶ್ಚ ಕೋಟಿಶಃ ।
ತೇಷು ಧರ್ಮೇಷು ಸರ್ವೇಷು ಧರ್ಮಾಃ ಪಂಚ ಮನೋಹರಾಃ ॥೨೧॥

ವಿಭೂತಿಧಾರಣಂ ಧರ್ಮಸ್ತಥಾ ರುದ್ರಾಕ್ಷಧಾರಣಂ ।
ರುದ್ರಾಧ್ಯಾಯಜಪೋ ಲಿಂಗೇ ಬಿಲ್ವೈಃ ಶಂಕರಪೂಜನಂ ॥೨೨॥

ಪಂಚಮುಶ್ಶಿವನೈವೇದ್ಯಭೋಜನಂ ತೈಃ ಪರಂ ನರಃ ।
ಕೃತೈರ್ಮುಕ್ತೋ ಭವತ್ಯೇವ ಮಹಾಪಾತಕಕೋಟಿಭಿಃ ॥೨೩॥

---

ಹೀಗೆ ಪುಣ್ಯಪಾಪಗಳ ವಿವೇಕವು ನಿಶ್ಚಿತವಾದ ಮೇಲೂ ಪುಣ್ಯಪಾಪಕಾರ್ಯ ಗಳಲ್ಲಿ ಪ್ರವರ್ತಿಸುವುದು ಯಾವ ರೀತಿಯಲ್ಲಿ? ಎಂಬುದನ್ನು ತಿಳಿಯಬೇಕೆಂದು ಬಯಸುತ್ತಿರುವೆನು" ಎಂದು ಕೇಳಿಕೊಂಡ ಪತ್ನಿಯನ್ನು ನೋಡಿ, ಪರಮೇಶ್ವರ ನನ್ನು ಸ್ಮರಿಸುತ್ತಾ ಕೆಲವು ಹಿತೋಕ್ತಿಗಳನ್ನು ಬೋಧಿಸತೊಡಗಿದನು. ॥೧೯-೨೦॥

"ಎಲೌ ಪತ್ನಿಯೇ ಕೇಳು, ವೇದದಲ್ಲಿ ಮತ್ತು ಪುರಾಣಗಳಲ್ಲಿ ಧರ್ಮ ವೆಂಬುದು ಕೋಟ್ಯಂತರವಿಧಗಳಲ್ಲಿ ಉಕ್ತವಾಗಿದೆ. ಅವುಗಳಲ್ಲಿ ಅತ್ಯಂತ ಮುಖ್ಯ ವೆನಿಸಿದ ಧರ್ಮಗಳೆಂದರೆ ಈ ಐದೇ. ವಿಭೂತಿಧಾರಣೆ, ರುದ್ರಾಕ್ಷಧಾರಣೆ, ರುದ್ರಾ ಧ್ಯಾಯಜಪ, ಬಿಲ್ವದಳದಿಂದ ಶಿವಲಿಂಗಾರ್ಚನೆಮಾಡುವುದು. ಶಿವಪ್ರಸಾದ ಭೋಜನ, ಈ ಐದು ಕರ್ಮಗಳೇ ಪಂಚಮಹಾಧರ್ಮಗಳು. ಇವುಗಳ ಆಚರಣೆ ಯಿಂದ ಮನುಷ್ಯನಿಗೆ ಮಹಾಪಾಪಸಂಪರ್ಕವು ತೊಲಗಿ ಆತನು ಕೃತಕೃತ್ಯನೆನಿಸು ವನು. ॥೨೧-೨೨-೨೩॥

ನಾರೀಣಾಂ ಚ ನರಾಣಾಂ ಚ ಧರ್ಮೋಽಯಂ ತುಲ್ಯ ಇತ್ಯತಃ ।
ಅವಿಶೇಷೇಣ ಕರ್ತವ್ಯಂ ಸರ್ವೇಷಾಮಪಿ ಸರ್ವಥಾ ॥೨೪॥

ರುದ್ರಾಧ್ಯಾಯಜಪೇ ಶಕ್ತಿಃ ಸ್ತ್ರೀಣಾಂ ಯದಿ ನ ಸರ್ವಥಾ ।
ತದಾ ಪಂಚಾಕ್ಷರೋ ಜಪ್ಯೋ ರುದ್ರಾಧ್ಯಾಯಗತಃ ಪರಃ ॥೨೫॥

ಅಧೀತಾ ಏವ ಸರ್ವೇಽಪಿ ವೇದಾಸ್ತೇನ ಮಹಾತ್ಮನಾ ।
ಯೇನ ಪಂಚಾಕ್ಷರೋ ಜಪ್ತೋ ವೇದಸಾರತಯಾ ಸ್ಮೃತಃ ॥೨೬॥

ದಧಿಮಂಥನಸಂಪ್ರಾಪ್ತನವನೀತನಿಭಂ ವಿದುಃ ।
ಪಂಚಾಕ್ಷರಂ ಮಹಾಮಂತ್ರಂ ವೇದರಾಶಿವಿನಿರ್ಗತಂ ॥೨೭॥

ಅಯಂ ಮಂತ್ರಃ ಪರೋ ಮಂತ್ರಃ ಸರ್ವಮಂತ್ರೋತ್ತಮೋತ್ತಮಃ ।
ಮಂತ್ರರಾಜಾಧಿರಾಜೋಽಯಂ ಮಂತ್ರರತ್ನಮಿತಿ ಸ್ಮೃತಃ ॥೨೮॥

ವೇದೈಃ ಪರಮಯಂ ಮಂತ್ರೋ ಜಪ್ತಃ ಪಂಚಾಕ್ಷರಃ ಪರಃ ।
ಮಹೇಶ್ವರೇಣ ಜಪ್ತೋಽಯಂ ಜಪ್ತೋಽಪ್ಯಂಬಿಕಯಾ ಮುದಾ ॥೨೯॥

ಕುಮಾರೇಣಾಪಿ ಜಪ್ತೋಽಯಂ ಗಣೇಶೇನಾಪಿ ಸಾದರಂ ।
ಶ್ರೀಕಾಲಭೈರವೇಣಾಪಿ ಜಪ್ತಃ ಪಂಚಾಕ್ಷರಃ ಪರಃ ॥೩೦॥

---

ಈ ಧರ್ಮಗಳು ಸ್ತ್ರೀಪುರುಷರೆಲ್ಲರಿಗೂ ಸಮಾನವಾದವುಗಳು. ಆದರಲ್ಲಿ ಸ್ತ್ರೀಯರು ರುದ್ರಾಧ್ಯಾಯವನ್ನು ಜಪಿಸಲು ಅಸಮರ್ಥರಾದರೆ ಆಗ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಬಹುದು. ಅದರಿಂದ ರುದ್ರಾಧ್ಯಾಯಜಪದ ಫಲವು ದೊರೆಯುವುದು. (ಸ್ತ್ರೀಯರಿಗೆ ವೇದಾಧಿಕಾರವಿಲ್ಲವೆಂದು ಶಾಸ್ತ್ರವು ಪ್ರತಿಪಾದಿಸುತ್ತದೆ.) ॥೨೪-೨೫॥

ಯಾರು ಸಕಲ ವೇದಸಾರದಂತಿರುವ ಪಂಚಾಕ್ಷರಮಂತ್ರವನ್ನು ಭಕ್ತಿಯಿಂದ ಜಪಿಸುವರೋ, ಅಂತಹವರು ಸಕಲ ವೇದಪಾರಾಯಣದ ಫಲವನ್ನೂ ಹೊಂದುವರು. ಪಂಚಾಕ್ಷರಮಂತ್ರವೆಂಬುದು ಮೊಸರನ್ನು ಕಡೆದು ತೆಗೆದ ಸಾರವಾದ ಬೆಣ್ಣೆಯಂತೆ ವೇದರಾಶಿಯ ಮುಖ್ಯಸಾರವೆನಿಸಿದೆ. ॥೨೬-೨೭॥

ಈ ಮಂತ್ರವೆಂಬುದು ಮಂತ್ರಗಳಲ್ಲೆಲ್ಲಾ ಶ್ರೇಷ್ಠವೆನಿಸಿದೆ. ಮತ್ತು ಉತ್ತಮೋತ್ತಮವಾದುದರಿಂದ ಮಂತ್ರರಾಜ, ಮಂತ್ರರತ್ನ ಎಂಬ ಹೆಸರುಗಳನ್ನೂ ಇದು

ವೀರಭದ್ರೇಣ ಜಪ್ತೋಽಯಂ ನಂದಿಕೇಶೇನ ಸಾದರಂ ।
ಸ ಭೃಂಗಿಪ್ರಮುಖೈಸ್ಸರ್ವೈರ್ಗಣೈರ್ಜಪ್ತಸ್ಸಕಿನ್ನರೈಃ ॥೮೧॥

ಗಂಧರ್ವೈರಪಿ ಜಪ್ತೋಽಯಂ ಸಕಲತ್ರೈಶ್ಚ ಪನ್ನಗೈಃ ।
ನಾರಾಯಣೇನ ಜಪ್ತೋಽಯಂ ಜಪ್ತೋಽಯಂ ಪದ್ಮಯಾ ಮುದಾ ॥೮೨॥

ಬ್ರಹ್ಮಣಾಪಿ ಸರಸ್ವತ್ಯಾ ಜಪ್ತೋಽಯಂ ಪರಮೋ ಮನುಃ ।
ಇಂದ್ರೇಣ ಜಪ್ತಶ್ಶಚ್ಯಾಪಿ ಜಯಂತೇನಾಪಿ ಯತ್ನತಃ ॥೮೩॥

ಸೂರ್ಯೇಣ ಛಾಯಯಾ ಜಪ್ತಶ್ಚಂದ್ರೇಣಾಪಿ ಪ್ರಯತ್ನತಃ ।
ಅಗ್ನಿನಾಪಿ ಪ್ರಜಪ್ತೋಽಯಂ ಸ್ವಾಹಯಾಪಿ ಪ್ರಯತ್ನತಃ ॥೮೪॥

ವಾಯುನಾಪಿ ಪ್ರಜಪ್ತೋಽಯಂ ಭೂತ್ಯಾ ಜಪ್ತೋ ವಿಶೇಷತಃ ।
ಯಮೇನಾಪಿ ಪ್ರಜಪ್ತೋಽಯಮನ್ಯೈರಪಿ ಸುರೈಸ್ತತಃ ॥೮೫॥

---

ಪಡೆದಿರುವುದು. ಸಕಲ ವೇದಗಳೂ ಸಹ ಈ ಮಂತ್ರವನ್ನೇ ಜಪಿಸಿವೆ. ಅಷ್ಟಲ್ಲದೆ, ಪಾರ್ವತಿ, ಸ್ಕಂದ, ಗಣಪತಿ, ಕಾಲಭೈರವ ಮುಂತಾದವರೂ ಮತ್ತು ಸಾಕ್ಷಾನ್ಮಹೇಶ್ವರನೂ ಸಹ ಈ ದಿವ್ಯಮಂತ್ರವನ್ನು ಆಗಾಗ ಜಪಿಸಿ ಸಿದ್ಧಿಯನ್ನು ಪಡೆದಿರುವರು. ||೭೮-೭೯-೮೦||

ಅಲ್ಲದೆ ವೀರಭದ್ರ, ನಂದೀಶ್ವರ, ಭೃಂಗಿಯೇ ಮೊದಲಾದ ಸಕಲ ಪ್ರಮಥ ಗಣಗಳೂ, ಕಿನ್ನರರೇ ಮೊದಲಾದ ದೇವಯೋಗಿಗಳೂ, ಸರ್ಪದೇವತೆಗಳೂ, ತಮ್ಮ ಪತ್ನಿಯರೊಡಗೂಡಿ ಈ ಪಂಚಾಕ್ಷರಮಂತ್ರವನ್ನು ಜಪಿಸಿರುವರು. ಲಕ್ಷ್ಮೀಸಮೇತನಾದ ನಾರಾಯಣನೂ, ಸರಸ್ವತಿಯಿಂದ ಕೂಡಿದ ಬ್ರಹ್ಮನೂ, ಜಯಂತ ಮತ್ತು ಶಚಿಯರಿಂದ ಕೂಡಿದ ದೇವೇಂದ್ರನೂ ಈ ದಿವ್ಯಮಂತ್ರವನ್ನು ಜಪಿಸಿರುವರು. ||೮೧-೮೨-೮೩||

ಛಾಯಾಪತಿಯಾದ ಸೂರ್ಯನೂ, ಚಂದ್ರನೂ, ಅಗ್ನಿಯೂ, ತತ್ಪತ್ನಿಯಾದ ಸ್ವಾಹೆಯೂ, ವಾಯು ಮತ್ತು ಭೂತೀದೇವಿಯರೂ, ಯಮನೂ ಮತ್ತು ಉಳಿದ ಎಲ್ಲಾ ದೇವತೆಗಳೂ ಸಹ ಈ ಮಂತ್ರವನ್ನೇ ಜಪಮಂತ್ರವೆಂದು ಭಾವಿಸಿರುವರು. ||೮೪-೮೫||

ದಧೀಚಿಪ್ರಮುಖೈಸ್ಸರ್ವೈರ್ಜಪ್ತೋಽಯಂ ಮುನಿಭಿಸ್ಸದಾ ।
ಅಯಮೇವ ಪರೋ ಮಂತ್ರಸ್ಸರ್ವೇಷಾಂ ಮೋಕ್ಷದಾಯಕಃ ॥೪೬॥

ಪಂಚಾಕ್ಷರಾಕಾರಸುಧಾಸಮುದ್ರಂ
ಶ್ರುತ್ವಾ ಮಹಾರುದ್ರಮಿಷ್ಟಪರಂ ತಂ ।
ಕೋ ವಾ ನ ತನ್ಮಂತ್ರಜಪಾನುರಕ್ತ
ಸ್ತ್ಯಕ್ತ್ವಾ ಪಶುಘ್ನಂ ಕೃತಪಾಪರಾಶಿಂ ॥೪೭॥

ಇತೋಽಧಿಕಃ ಕೋಽಪಿ ನ ವೇದಮಧ್ಯೇ
ಮಂತ್ರೋಽಸ್ತಿ ಮಂತ್ರಾಧಿಕ ಏವ ಸೋಽಯಂ ।
ಅಯಂ ಸ್ಮೃತಶ್ಚೇನ್ಮರಣಾವಸಾನೇ
ಮುಕ್ತಿಃ ಪರಂ ಕಿಂ ನ ಕರಪ್ರಪನ್ನಾ ॥೪೮॥

ಮಂತ್ರೇಷ್ವಯಂ ಶಾಂಭವಮಂತ್ರರಾಜ
ರಾಜಾಧಿರಾಜಃ ಖಲು ಶೈವಮಂತ್ರಃ ।

---

ದಧೀಚಿಯೇ ಮೊದಲಾದ ಸಕಲ ಮಹರ್ಷಿಗಳು ಸಹ ಈ ಮಂತ್ರವನ್ನೇ ಪುರಶ್ಚರಣೆಮಾಡಿ ಸಿದ್ಧರೆನಿಸಿರುವರು. ಆದುದರಿಂದ ಸಕಲರಿಗೂ ಸಾಕ್ಷಾನ್ಮುಕ್ತಿಪ್ರದವಾದದ್ದು ಈ ಮಂತ್ರವೊಂದೇ. ॥೪೬॥

ಪಂಚಾಕ್ಷರಮಂತ್ರದ ಆಕಾರವನ್ನು ಪಡೆದಿರುವ ಈ ಅಮೃತಸಮುದ್ರವನ್ನು ಮಹೇಶ್ವರನಿಗೆ ಪ್ರೀತಿಕರವಾದ ಈ ಪಂಚಾಕ್ಷರಾಮೃತವನ್ನು ಕೇಳಿದವರು ಮತ್ತಾವ ಮಂತ್ರಜಪದಲ್ಲಿಯೂ ಆಸಕ್ತಿಹೊಂದಲಾರರು. ಏಕೆಂದರೆ ಉಳಿದ ಯಾಜ್ಞಿಕವಾದ ಮಂತ್ರಗಳು ಪಶುಹಿಂಸಾರೂಪವಾದ ಯಾಗಾದಿಗಳಿಗೆ ಮಾತ್ರ ಉಪಯುಕ್ತಗಳೆನಿಸಿವೆ. ಅದರಿಂದ ಅವು ಪಾಪಾಧಾಯಕಗಳೇ ಹೊರತು ಪುಣ್ಯಸಂಪಾದಕಗಳಲ್ಲ. ॥೪೭॥

ಈ ಪಂಚಾಕ್ಷರ ಮಂತ್ರಕ್ಕಿಂತ ಶ್ರೇಷ್ಠವಾದ ಮಂತ್ರವು ವೇದರಾಶಿಯಲ್ಲಿ ಎಲ್ಲಿಯೂ ಇಲ್ಲ. ಈ ಮಂತ್ರವನ್ನು ಮರಣಕಾಲದಲ್ಲಿ ಸ್ಮರಿಸಿದವರಿಗೆ ಮುಕ್ತಿಯುಂಬುದು ಕರಗತವಾದುದಲ್ಲವೇ ! ॥೪೮॥

ಶಿವಸಂಬಂಧವಾದ ಮಂತ್ರಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವೂ ವಿಶೇಷ ಸಿದ್ಧಿಪ್ರದವೂ ಆದ ಮಂತ್ರವೇ ಇದು. ಆದ್ದರಿಂದಲೇ ಇದನ್ನು ಮಂತ್ರರಾಜನೆನ್ನುವರು.

ಅತಸ್ಸ ಏವಾಮಿತಪುಣ್ಯಹೇತು
ಸ್ಸ ಏವ ಮೋಕ್ಷಾಯ ವಿನಿರ್ಮಿತೋಽಪಿ ॥೮೯॥

ಇತಿ ತದ್ವಚನಂ ಶ್ರುತ್ವಾ ಪ್ರಾಹ ಸತ್ಯವ್ರತಂ ಸತೀ ।
ಅಯಂ ಮಹೇಶ್ವರೇಣಾಪಿ ಮಂತ್ರೋ ಜಪ್ತಃ ಕಥಂ ವದ ॥೯೦॥

ಮೋಕ್ಷಾಯ ಜಪ್ಯತೇ ಮಂತ್ರೋ ಮುಮುಕ್ಷುಭಿರಯಂ ತತಃ ।
ಕಿಮಸ್ತಿ ಕೃತ್ಯಮೀಶಸ್ಯ ತಜ್ಜಪೇನ ವಿಶೇಷತಃ ॥೯೧॥

ಚತುರ್ಥ್ಯಂತಂ ಪದಂ ಪ್ರಾಹ ಶಂಕರಂ ಲೋಕಶಂಕರಂ ।
ತಸ್ಮೈ ನಮಃ ಪದೇನಾಪಿ ಪೂಜಾಂ ತಾವದ್ವಿಧೀಯತೇ ॥೯೨॥

ಪೂಜಾಪಿ ವಿವಿಧಾ ಸಾ ತು ತಸ್ಯ ಸಾ ಸ್ಯಾನ್ನಮಸ್ಕ್ರಿಯಾ ।
ಕಾಪಿ ಪೂಜಾ ತಯಾ ಮರ್ತ್ಯೋ ಮುಚ್ಯತೇ ಪಾಪಬಂಧನೈಃ ॥೯೩॥

---

ಸಕಲ ಪುಣ್ಯರಾಶಿಗೂ, ವಿಶೇಷವಾದ ಮೋಕ್ಷಕ್ಕೂ ಮುಖ್ಯ ಕಾರಣಭೂತವಾದುದು ಈ ಮಂತ್ರವೇ. ॥೮೯॥

ಎಂದು ಹೇಳಿದ ಪತಿವಾಕ್ಯವನ್ನು ಕೇಳಿ ಪತ್ನಿಯು ಮತ್ತೆ ಹೀಗೆ ಪ್ರಶ್ನಿಸಿದಳು. "ಪತಿವರ್ಯನೇ, ಈ ಮಂತ್ರವನ್ನು ಮಹೇಶ್ವರನೂ ಸಹ ಜಪಮಾಡಿದನೆಂದು ಹೇಳಿದೆಯಲ್ಲವೆ? ಅದು ಹೇಗೆ? ಸಕಲರಿಗೂ ಮುಕ್ತಿಯನ್ನು ಅನುಗ್ರಹಿಸುವ ಲೋಕಶಂಕರನಿಗೆ ಈ ಮಂತ್ರದಿಂದ ಆಗಬೇಕಾದ ಸಿದ್ಧಿಯಾವುದು ? ಅಲ್ಲದೆ ಈ ಪಂಚಾಕ್ಷರವನ್ನು ಬಿಟ್ಟು ಇನ್ನೂ ಅನೇಕವಾಗಿರುವ ಶಿವನಾಮಾವಳಿಗಳನ್ನು ಚತುರ್ಥೀವಿಭಕ್ತ್ಯಂತವಾಗಿ ಮಾಡಿಕೊಂಡು, ನಮಶ್ಶಬ್ದಗಳಿಂದ ಕೂಡಿಸಿ ಪೂಜಿಸಿದರೂ, ಅದು ಈಶ್ವರಪೂಜೆಯಲ್ಲವೆ? ಆಗ ಪಂಚಾಕ್ಷರಮಂತ್ರವೇ ಬೇಕೆಂಬುದು ಹೇಗೆ? ಮತ್ತು ಶಿವಪೂಜಾಕ್ರಮವು ನಾನಾವಿಧವಾಗಿರುವುದಷ್ಟೆ. ಅದರಲ್ಲಿ ಯಾವ ಕ್ರಮವು ವಿಶೇಷವಾಗಿ ಶಿವಪ್ರೀತಿಕರವೆನಿಸುವುದು ? ಈ ವಿಷಯಗಳನ್ನು ನನಗೆ ತಿಳಿಸಬೇಕು" ಎಂದು ಪ್ರಾರ್ಥಿಸಲು ಆಗ ಸತ್ಯವ್ರತನು ಹೀಗೆಂದನು. ॥೯೦-೯೧-೯೨-೯೩॥

॥ ಸತ್ಯವ್ರತ ಉವಾಚ ॥

ಸತ್ಯಮುಕ್ತಂ ತ್ವಯಾ ಬಾಲೇ ತತ್ಪ್ರೋತ್ತರಮಿದಂ ಶೃಣು ।
ಯೇನ ಸ್ಯಾತ್ಸಂಶಯೋಚ್ಛೇದಃ ಪಾಪರಾಶಿಲಯೋಽಪಿ ತೇ ॥೯೪॥

ವೇದಾಸ್ಸೃಷ್ಟಾಶ್ಶಂಕರೇಣ ತೇಷು ವೇದೇಷು ಕಃ ಪರಃ ।
ವೇದಭಾಗ ಇತಿ ಪ್ರೀತ್ಯಾ ಶಂಕರೇಣ ವಿಚಾರಿತಃ ॥೯೫॥

ಬಹುಕಾಲವಿಚಾರೇಣ ರುದ್ರಾಧ್ಯಾಯಃ ಪರಸ್ಸ್ಮೃತಃ ।
ಸ ಮಂತ್ರರತ್ನಕಲಶಸ್ತತ್ತುಲ್ಯೋಽಪಿ ಸ ಏವ ಹಿ ॥೯೬॥

ಲೋಕೇ ನ ತಾದೃಶಂ ವಸ್ತು ದೃಶ್ಯತೇ ಮುಕ್ತಿಸಾಧನಂ ।
ತಥಾ ಚ ತತ್ಸಮಂ ವಸ್ತು ತದೇವೇತ್ಯವಧಾರಿತಂ ॥೯೭॥

ತತ್ರಾಪಿ ಮಂತ್ರಾಸ್ಸಂತ್ಯೇವ ಬಹವಶ್ಶಾಂಭವಾತ್ಮಕಾಃ ।
ಮಂತ್ರರತ್ನಸ್ವರೂಪಾಸ್ತೇ ತೇಷಾಂ ಶಕ್ತಿರ್ವಿಲಕ್ಷಣಾ ॥೯೮॥

ಮಂತ್ರೇಷು ತೇಷು ಸರ್ವೇಷು ಕಶ್ಶ್ರೇಷ್ಠತಮ ಇತ್ಯಪಿ ।
ವಿಚಾರಿತೋ ಮಹೇಶೇನ ಗೌರ್ಯಾ ಸಹ ವಿಶೇಷತಃ ॥೯೯॥

---

" ಪತ್ನಿಯೇ, ನೀನು ಕೇಳಿದ ಪ್ರಶ್ನೆ ಯುಕ್ತವಾದದ್ದು ಅದಕ್ಕೆ ಉತ್ತರವಿಷ್ಟೆ. ಈಗ ನಾನು ಹೇಳುವ ಸಮಾಧಾನದಿಂದ ನಿನ್ನ ಸಂಶಯವು ಪರಿಹಾರವಾಗುವುದಲ್ಲದೆ ಪುಣ್ಯ ಪ್ರಾಪ್ತಿಯೂ ಲಭಿಸುವುದು. ಶಂಕರನು ಸಕಲ ವೇದಗಳನ್ನೂ ಸೃಷ್ಟಿ ಮಾಡಿದನಷ್ಟೆ. ಅದರಲ್ಲಿ ಯಾವ ವೇದಭಾಗವು ಅತ್ಯಂತ ಶ್ರೇಷ್ಠವಾದದ್ದೆಂದು ಶಂಕರನೇ ಒಂದು ಸಾರಿ ಯೋಚನೆ ಮಾಡಿದನು. ॥೯೪-೯೫॥

ಹೀಗೆ ಬಹುಕಾಲ ಯೋಚಿಸಿ, ಕೊನೆಗೆ ವೇದದಲ್ಲೆಲ್ಲಾ ರುದ್ರಾಧ್ಯಾಯವೇ ಶ್ರೇಷ್ಠವಾದ ಮಂತ್ರರತ್ನ ; ಅದಕ್ಕೆ ಸದೃಶವಾದ ಮಂತ್ರವೇ ಬೇರೊಂದಿಲ್ಲ. ಅದಕ್ಕೆ ಸಮನಾದ ಮುಕ್ತಿ ಸಾಧಕವಾದ ಪವಿತ್ರವಸ್ತುವೂ ಮತ್ತೊಂದಿಲ್ಲ. ಅದರ ಲ್ಲಿಯೂ ಕೆಲವು ಮಂತ್ರಗಳಂತೂ ರತ್ನಗಳಂತೆಯೇ ಬಹು ಮುಖ್ಯವಾದುವುಗಳೆಂದೂ ಶಕ್ತಿಯುತವಾದವುಗಳೆಂದೂ ನಿರ್ಧರಿಸಿದನು. ॥೯೬-೯೭-೯೮॥

ಆ ಮಂತ್ರಗಳಲ್ಲಿಯೂ, ಶ್ರೇಷ್ಠತಮವಾದ ಮಂತ್ರವಾವುದೆಂಬುದನ್ನು ತಿಳಿಯಲು ಶಂಕರನು ಪತ್ನಿಯಾದ ಗೌರೀದೇವಿಯೊಡನೆ ಹೀಗೆಂದನು. "ದೇವಿಯೇ,

ದೇವಿ ದೇವಿ ವರಾರೋಹೇ ರುದ್ರಾಧ್ಯಾಯಗತೇಷ್ವಪಿ ।
ಮಂತ್ರೇಷು ಕಃ ಪ್ರಿಯಸ್ತಾವಸ್ಮಂತ್ರಸ್ತವ ವದಾಧುನಾ ॥೧೦೦॥

ಇತ್ಯುಕ್ತಂ ತದ್ವಚಶ್ರುತ್ವಾ ಶಂಕರಸ್ಯ ಮಹಾತ್ಮನಃ ।
ಅತಿಸಂತುಷ್ಟಹೃದಯಾ ಪ್ರಾಹ ಶಂಕರಮಾದರಾತ್ ॥೧೦೧॥

ದೇವೋತ್ತಮ ಮಹಾದೇವ ಪ್ರಶ್ನೋ ಯಸ್ತೇ ತದುತ್ತರಂ ।
ತ್ವರಯಾ ನೈವ ಪಶ್ಯಾಮಿ ಕ್ಷಮಾ ತತ್ರಾಸ್ತು ಮಯ್ಯಪಿ ॥೧೦೨॥

ಭೂರ್ಜತ್ವಗ್ಭೇದಮಾದಾಯ ರುದ್ರಾಧ್ಯಾಯೋ ನಿಜಾಕ್ಷರೈಃ ।
ಲೇಖನೀಯಃ ಪ್ರಯತ್ನೇನ ಸಲೋಚನಮನೋಹರಃ ॥೧೦೩॥

ತತಃ ಪರಂ ಪೃಥಕ್ತೇಷಾಂ ಮಂತ್ರಾಣಾಮಭಿವೀಕ್ಷಣೇ ।
ತದರ್ಥಾಕಲನೇನೈವ ತತ್ತ್ವಂ ಜ್ಞೇಯಂ ನ ಚಾನ್ಯಥಾ ॥೧೦೪॥

---

ರುದ್ರಾಧ್ಯಾಯಗತಗಳಾದ ಮಂತ್ರಗಳಲ್ಲಿ ಯಾವುದು ನಿನಗೆ ಅತ್ಯಂತ ಪ್ರಿಯವಾದದ್ದು ? ಎಂಬುದನ್ನೂ ಈಗಲೇ ನಿನಗೆ ತಿಳಿಸು.'' ಎಂದು ಪ್ರಶ್ನಿಸಿದನು. ॥೯೯-೧೦೦॥

ಹಾಗೆ ಕೇಳಿದ ಶಂಕರನ ಪ್ರಶ್ನೆಗೆ ಉತ್ತರ ಹೇಳಲು ಅತಿಕುತೂಹಲದಿಂದ ಗೌರಿಯು ಸಂತುಷ್ಟಾಂತರಂಗವುಳ್ಳವಳಾಗಿ ಪರಮೇಶ್ವರನೊಡನೆ ಹೀಗೆಂದಳು. "ಸ್ವಾಮಿಯೇ, ದೇವದೇವನಾದ ಮಹಾದೇವನೇ, ನಿನ್ನ ಪ್ರಶ್ನೆಗೆ ಜಾಗ್ರತೆ ಉತ್ತರ ಹೇಳಲು ಹೇಗೆ ಸಾಧ್ಯವಾದೀತು ? ನಿದಾನವಾಗಿ ಯೋಚಿಸಿ ಹೇಳುವೆನು. ಕ್ಷಮಿಸಬೇಕು. ॥೧೦೧-೧೦೨॥

ಮೊದಲು ರುದ್ರಾಧ್ಯಾಯ ಮಂತ್ರವನ್ನೆಲ್ಲಾ ಭೂರ್ಜಪತ್ರದಲ್ಲಿ ನಿನ್ನ ಅಕ್ಷರಗಳಿಂದಲೇ ಪ್ರಯತ್ನಪೂರ್ವಕವಾಗಿ, ಸ್ಫುಟವಾಗಿ ಮತ್ತು ಮನೋಹರವಾಗಿ ಬರೆದು ಕೊಡಬೇಕು. ಅನಂತರ ಆ ಮಂತ್ರಗಳನ್ನೂ ಅರ್ಥವನ್ನೂ ನಿದಾನವಾಗಿ ವಿಮರ್ಶಿಸಿ ಆಮೇಲೆ ಅದರ ತತ್ತ್ವವನ್ನು ಅರಿಯುವೆನು. ಇಲ್ಲದಿದ್ದರೆ ಸಾಧ್ಯವಿಲ್ಲ. ॥೧೦೩-೧೦೪॥

ಯಸ್ಯ ಮಂತ್ರಸ್ಯ ಸಾಮರ್ಥ್ಯಂ ಯಾವಾನರ್ಥೋಽಪಿ ಯಾದೃಶಃ ।
ತದ್ಬೋಧಸ್ತ್ವಾವದಧುನಾ ಕೃಪಯಾ ತವ ಜಾಯತೇ ॥೧೦೫॥

ತತಃ ಪರಂ ವಿಶೇಷೋಽಪಿ ಜ್ಞೇಯೋ ಭವತಿ ಶಂಕರ ।
ಅನ್ಯಥಾ ತಸ್ಯ ಸಾಮರ್ಥ್ಯಂ ದುರ್ಜ್ಞೇಯಮಿತಿ ಮೇ ಮತಿಃ ॥೧೦೬॥

ಇತಿ ತದ್ವಚನಂ ಶ್ರುತ್ವಾ ಶಂಕರೋ ಹೃಷ್ಟಮಾನಸಃ ।
ತಾಮಾಲಿಂಗ್ಯಾಹ ಗಿರಿಜಾಂ ಸಮ್ಯಗುಕ್ತಂ ತ್ವಯೇತ್ಯಪಿ ॥೧೦೭॥

ತತಃ ಪರಂ ಮಹಾದೇವೋ ಲಿಖಿತ್ವಾ ಪುಸ್ತಕೇ ಶುಭೇ ।
ದದೌ ತಸ್ಯೈ ಪುಸ್ತಕಂ ಚ ಸಾ ದಧಾರ ಸ್ವಮಸ್ತಕೇ ॥೧೦೮॥

ನತ್ವಾ ದದರ್ಶ ತಾನ್ಮಂತ್ರಾನಗಾಧಾರ್ಥಾನನೇಕಧಾ ।
ತನ್ಮಂತ್ರಾಲೋಕನೇನಾಪಿ ಪರಮಾನಂದಮಾಪ ಸಾ ॥೧೦೯॥

ತತಃ ಪರಂ ಮಹಾದೇವಸ್ಸರ್ವವಿದ್ಯಾನಿಧಿಸ್ತದಾ ।
ತದ್ವ್ಯಾಖ್ಯಾನಂ ತದಾ ತಾವಚ್ಚಕಾರಾತಿಮನೋಹರಂ ॥೧೧೦॥

---

ಮಂತ್ರದ ಸಾಮರ್ಥ್ಯವು ಅದರ ಅರ್ಥದ ಮೇಲೆ ಪರಿಣಾಮವಾಗುತ್ತದೆ. ಅದಕ್ಕಾಗಿ ಮೊದಲು ಮಂತ್ರದ ಅರ್ಥವನ್ನು ತಿಳಿಯಬೇಕು. ನಿನ್ನ ಅನುಗ್ರಹ ವೊದಗಿದರೆ ನಾನು ಈಗ ಮಂತ್ರಾರ್ಥವನ್ನು ತಿಳಿದು ಮಂತ್ರಗಳ ಸಾಮರ್ಥ್ಯವನ್ನು ಅರಿಯುವೆನು. ಹಾಗಿಲ್ಲದಿದ್ದರೆ ಮಂತ್ರಮಹಿಮೆಯನ್ನು ವಿವರಿಸಲು ಸಾಧ್ಯವೇ ಇಲ್ಲ." ||೧೦೫-೧೦೬||

ಎಂದು ಹೇಳಿದೊಡನೆಯೇ, ಶಂಕರನು ಸಂತುಷ್ಟನಾಗಿ ಆಲಿಂಗನಪುರಸ್ಸರ ವಾಗಿ ದೇವಿಯನ್ನು ಹೊಗಳಿ, ದೇವಿಯು ಹೇಳಿದಂತೆಯೇ ಸ್ವಹಸ್ತಾಕ್ಷರಗಳಿಂದಲೇ ರುದ್ರಾಧ್ಯಾಯವನ್ನು ಬರೆದುಕೊಟ್ಟನು. ಗಿರಿಜೆಯು ಆ ಪುಸ್ತಕವನ್ನು ಸ್ವೀಕರಿಸಿ ತಲೆಯಲ್ಲಿಟ್ಟುಕೊಂಡಳು. ||೧೦೭-೧೦೮||

ಅನಂತರ ಆ ಪುಸ್ತಕವನ್ನು ನೋಡಿ ನಮಸ್ಕರಿಸಿ, ಅಲ್ಲಿದ್ದ ಸಕಲ ಮಂತ್ರ ಗಳನ್ನೂ, ಅವುಗಳ ಅಗಾಧವಾದ ಅರ್ಥವನ್ನೂ ವಿಮರ್ಶಿಸಿ ಪರಮಾನಂದಭರಿತ ಳಾದಳು. ಕೂಡಲೇ ವಿದ್ಯಾನಿಧಿಯಾದ ಪರಶಿವನೇ ಆ ಮಂತ್ರಗಳ ಅರ್ಥವನ್ನು

ತದ್ವ್ಯಾಖ್ಯಾನೇನ ಕಾಲೋಽಪಿ ಗತೋ ಯಾವಾನ್ವರಾನನೇ ।
ತಾವಾಂಸ್ತಾಭ್ಯಾಂ ನ ವಿದಿತಶ್ಶಿವಾಭ್ಯಾಮಪಿ ಕೇವಲಂ ॥೧೧೧॥

ಪ್ರಕೃತ್ಯರ್ಥಪ್ರತ್ಯಯಾರ್ಥಭಾವನಾನಾಂ ವಿಚಾರಣೈಃ ।
ಏಕೈಕಸ್ಯಾಪಿ ಮಂತ್ರಸ್ಯ ಭೂಯಾನ್ ಕಾಲೋ ಗತಃ ಖಲು ॥೧೧೨॥

ಸಂಪೂರ್ಣಮುಕ್ತ್ವಾ ಮಂತ್ರಾರ್ಥಂ ಪಾರ್ಥ್ಯಾರ್ಥಂ ಸ ಪುನಃಪುನಃ ।
ತದರ್ಥಖ್ಯಾಪನಂ ಕೃತ್ವಾ ಸ್ಥಿತಸ್ತನ್ಮಂತ್ರಮುಚ್ಚರನ್ ॥೧೧೩॥

ಯ ಏವ ಮಂತ್ರೋ ವ್ಯಾಖ್ಯಾತಸ್ಸ ಏವ ಪುನರಾದರಾತ್ ।
ಜಪ್ತೋಽಪ್ಯರ್ಥಾನುಸಂಧಾನಪೂರ್ವಕಂ ಪುನರಾದರಾತ್ ॥೧೧೪॥

ಏಕೈಕಮಂತ್ರಮುಚ್ಚಾರ್ಯ ತದರ್ಥಂ ಸ ಪುನಃ ಪುನಃ ।
ವಕ್ತುಮಿಚ್ಛತಿ ಗೌರೀಶೋ ವಿರತೋ ನ ಪ್ರಜಾಯತೇ ॥೧೧೫॥

ಏಕೈಕಮಂತ್ರವ್ಯಾಖ್ಯಾನೈರಸಂಖ್ಯಾತೈರನೇಕಧಾ ।
ಕಲ್ಪಾವೃತ್ತಿರಭೂದೇವ ನ ಕಲ್ಪೇಷ್ವಪಿ ತನ್ಮನಃ ॥೧೧೬॥

---

ವಿವರಿಸಿ ಹೇಳುವುದಕ್ಕೆ ಆರಂಭಿಸಿದನು. ಅದು ಪಾರ್ವತಿಯ ಮನಸ್ಸಿಗೆ ಅತಿಯಾದ ಆನಂದವನ್ನುಂಟುಮಾಡಿತು. ॥೧೦೯-೧೧೦॥

ಪ್ರತಿ ಮಂತ್ರಕ್ಕೂ ಮಹೇಶ್ವರನು ಆ ಪದಗಳಲ್ಲಿರುವ ಪ್ರಕೃತ್ಯರ್ಥ ಮತ್ತು ಪ್ರತ್ಯಯಾರ್ಥಗಳನ್ನು ವಿವರಿಸುತ್ತಾ, ರಹಸ್ಯಾರ್ಥವನ್ನೆಲ್ಲಾ ವಿವರಿಸಲು ಎಷ್ಟುಕಾಲವು ಕಳೆಯಿತು ಎಂಬುದು ಪರಶಿವದಂಪತಿಗಳಿಗೇ ತಿಳಿಯಲಿಲ್ಲ. ಅಷ್ಟು ದೀರ್ಘಕಾಲ ಶಂಕರನು ರುದ್ರಾಧ್ಯಾಯದ ಅರ್ಥವನ್ನು ದೇವಿಗೆ ಉಪದೇಶಿಸಿದನು. ॥೧೧೧-೧೧೨॥

ಶಂಕರನು ಮಂತ್ರಾರ್ಥವನ್ನು ವಿವರಿಸುತ್ತಾ ಆ ಅರ್ಥದ ಮಂತ್ರವು ಇದೇ ಎಂದು ಒತ್ತಿ ಹೇಳುವುದಕ್ಕೆ ಆ ಮಂತ್ರವನ್ನೇ ಉಚ್ಚರಿಸುತ್ತಿದ್ದನು. ವ್ಯಾಖ್ಯಾನ ಮಾಡಿದ ಮಂತ್ರವನ್ನೇ ಮತ್ತೆ ಮತ್ತೆ ಅರ್ಥವತ್ತಾಗಿ ಪುರಶ್ಚರಣೆ ಮಾಡುತ್ತಾ ಆದರದಿಂದ ಅದನ್ನು ಪಾರ್ವತಿಗೆ ತಿಳಿಸುತ್ತಿದ್ದನು. ॥೧೧೩-೧೧೪॥

ಹೀಗೆಯೇ ಒಂದೊಂದು ಮಂತ್ರವನ್ನೂ ಉಚ್ಚರಿಸುತ್ತಾ ಅವುಗಳ ಅರ್ಥವನ್ನು ನಾನಾರೀತಿ ವಿವರಿಸುತ್ತಾ ಇರುವಾಗ, ಅನೇಕ ಕಲ್ಪಗಳೇ ಕಳೆದು ಹೋದವು.

ಅಂಗಷಟ್ಕಾಭಿಧಾನೇನ ನಿಷ್ಪನ್ನಾರ್ಥೋ ಮನುಸ್ತದಾ ।
ತದಾಪಿ ನ ಜಹಾತ್ಯೇವ ಪುನರ್ಜಪತಿ ತಂ ಮನುಂ ॥೧೧೭॥

ಪೀತಾಪಿ ಯಾ ಸುಧಾಧಾರಾ ತಾಂ ಪುನಃ ಪಾತುಮಿಚ್ಛತಿ ।
ತಥಾ ತಥಾ ಮಹಾದೇವೋ ಮನುಂ ತಂ ವಕ್ತುಮಿಚ್ಛತಿ ॥೧೧೮॥

ಅಂಬಾ ಪೃಚ್ಛತಿ ತತ್ತತ್ತ್ವಂ ಸಾ ಪುನಃ ಪುನರಾದರಾತ್ ।
ನ ಸಾಪಿ ವಿರತಾ ಪ್ರಶ್ನಾದುತ್ತರಾದ್ವಿರತೋ ನ ಸಃ ॥೧೧೯॥

ಸ ಮಂತ್ರಮಹಿಮಾ ಜ್ಞಾತಃ ಶಿವಾಭ್ಯಾಮೇವ ಕೇವಲಂ ।
ಜ್ಞಾತೋ ಮಧುರಿಮಾ ತಸ್ಯ ತಾಭ್ಯಾಮೇವ ನ ಚೇತರೈಃ ॥೧೨೦॥

ದ್ರಾಕ್ಷಾಫಲರಸಾಭಿಜ್ಞಾ ತಂ ಪುನಃ ಪುನರಿಚ್ಛತಿ ।
ಯಥಾ ತಥೈತನ್ಮಹಿಮಾ ತಾಭ್ಯಾಂ ಜ್ಞಾತಃ ಪುನಃ ಪುನಃ ॥೧೨೧॥

---

ಆದರೂ ಹೇಳುವ ಶಂಕರನಿಗಾಗಲಿ ಕೇಳುವ ಪಾರ್ವತಿಗಾಗಲಿ ಜುಗುಪ್ಸೆಯುಂಟಾಗಲಿಲ್ಲ. ಉತ್ಸಾಹವೂ ಕುಗ್ಗಲಿಲ್ಲ. ॥೧೧೫-೧೧೬॥

ಷಡಂಗಗಳ ಹೊಂದಿಕೆಯಾಗುವಂತೆ ಮಂತ್ರದ ಅರ್ಥವನ್ನು ವಿವರಿಸಿದರೂ ಮತ್ತೆ ಮತ್ತೆ ಅದೇ ಅರ್ಥವನ್ನು ವಿವರಿಸುವದನ್ನೂ, ಮಂತ್ರಪುರಶ್ಚರಣೆಯನ್ನೂ ಬಿಡುತ್ತಲೇ ಇರಲಿಲ್ಲ. ಅಮೃತಪಾನದಿಂದ ಮನುಷ್ಯನು ಹೇಗೆ ತೃಪ್ತಿಹೊಂದಲಾರನೋ ಹಾಗೆಯೇ ಮಹಾದೇವನೂ ಆ ಮಂತ್ರಪಾರಾಯಣದಿಂದ ತೃಪ್ತಿ ಹೊಂದಲಿಲ್ಲ. ॥೧೧೭-೧೧೮॥

ವ್ಯಾಖ್ಯಾನಸಮಯದಲ್ಲಿ ತನಗೆ ತೋರಿದ ಪ್ರಶ್ನೆಗಳನ್ನೆಲ್ಲಾ ಪಾರ್ವತಿಯು ಮತ್ತೆ ಮತ್ತೆ ಪ್ರಶ್ನಿಸುವಳು. ಅವಕ್ಕೆ ಉತ್ತರವನ್ನು ಪರಶಿವನು ಹೇಳುತ್ತಿರುವನು. ಹೀಗೆ ಪ್ರಶ್ನೋತ್ತರಗಳಲ್ಲಿ ಪಾರ್ವತೀಪರಮೇಶ್ವರರು ಆಯಾಸಗೊಳ್ಳಲೇ ಇಲ್ಲ. ಅಂತೂ ಆ ಮಂತ್ರದ ಮಹಿಮೆಯನ್ನೂ ಸ್ವಾರಸ್ಯವನ್ನೂ ತಿಳಿಯುವವರು ಪಾರ್ವತಿಪರಮೇಶ್ವರರಲ್ಲದೆ ಮತ್ತಾರೂ ಇಲ್ಲವೆಂದೇ ಹೇಳಬಹುದು. ॥೧೧೯-೧೨೦॥

ದ್ರಾಕ್ಷಿಯ ಹಣ್ಣಿನ ಸವಿಯು ಹೇಗೆ ಮನುಷ್ಯರಿಗೆ ಪದೇ ಪದೇ ತಿನ್ನುವ ಆಸೆಯನ್ನು ಹೆಚ್ಚಿಸುವುದೋ, ಹಾಗೆ ಶಿವದಂಪತಿಗಳಿಗೆ ರುದ್ರಾಧ್ಯಾಯದ ಮಹಿ

ಮಂತ್ರಾರ್ಥಜ್ಞಾನಧಾರಾ ಯಾ ಸಾ ವಿಚ್ಛಿನ್ನಾ ನ ಜಾಯತೇ ।
ತನ್ಮಂತ್ರಾರ್ಥಾನುಸಂಧಾನಧಾರಾ ಯಾ ಸಾ ಸುಧಾಪರಾ ॥೧೨೨॥

ಏವಂ ಪ್ರತ್ಯೇಕಮಂತ್ರಾಣಾಂ ವ್ಯಾಖ್ಯಾನೇನ ಮಹೇಶ್ವರಃ ।
ಸಂತೋಷಧಾರಯಾ ಕ್ರಾಂತಸ್ತಯಾ ಗಿರಿಜಯಾ ಸಹ ॥೧೨೩॥

ತತಃ ಪರಂ ಚಕಾರಾಂತಂ ಶಿವಾಸಾದ್ಯಂ ಮನುಂ ಪರಂ ।
ದೃಷ್ಟ್ವಾ ಸಂತೋಷಮಾಪನ್ನೋ ನ ತಸ್ಮಾದ್ವಿರತಶ್ಶಿವಃ ॥೧೨೪॥

ತದರ್ಥಾಃ ಕೋಟಿಶಃ ಪ್ರೋಕ್ತಾಶ್ಶಂಕರೇಣ ಮಹಾತ್ಮನಾ ।
ಶ್ರುತಾಶ್ಚ ಶಿವಯಾ ಭಕ್ತ್ಯಾ ಕೃತ್ವಾ ಮಂತ್ರಾಂತರಂ ತದಾ ॥೧೨೫॥

ಗುಣಬೋಧಕಮಂತ್ರೇಷು ತದನ್ಯೇಷು ತಥಾ ರುಚಿಃ ।
ನ ಯಥಾ ಸ್ವಸ್ವರೂಪಾವಬೋಧಕೇ ತಾದೃಶೇ ಮನೌ ॥೧೨೬॥

---

ಮೆಯು ಹಿತಕರವಾಗಿ ಕಂಡುಬಂದಿತು. ಮಂತ್ರಾರ್ಥಜ್ಞಾನಧಾರೆಗೆ ಅಲ್ಲಿ ಅಡ್ಡಿಯೇ ಇರಲಿಲ್ಲ. ಮತ್ತು ಅದು ಸುಧಾಪ್ರವಾಹದಂತೆ ಸಂತತವಾಗಿ ಮುಂದುವರಿಯು ತ್ತಿದ್ದಿತು. ॥೧೨೧-೧೨೨॥

ಹೀಗೆ ಅಲ್ಲಿರುವ ಸಕಲ ಮಂತ್ರಗಳಿಗೂ ಅರ್ಥವನ್ನು ವಿವರಿಸಿ ಶಂಕರನು ದೇವಿಯೊಡನೆ ಆನಂದಪಟ್ಟನು. ಅನಂತರ ಚಕಾರಾಂತವಾದ ಅಂದರೆ ಚಕಾರವೇ ಕೊನೆಯಾಗಿ ಉಳ್ಳ 'ನಮೋ ಭವಾಯಚ' ಎಂಬ ಶಿವನಾಮ ಮಂತ್ರಗಳ ಅರ್ಥ ವನ್ನೂ ಚಮಕಾಧ್ಯಾಯದ ಅರ್ಥವನ್ನೂ ವಿವರಿಸುತ್ತಾ ಶಂಕರನು ಮತ್ತೆ ಮತ್ತೆ ಉತ್ಸಾಹದಿಂದ ಅದನ್ನೇ ಮುಂದುವರಿಸುತ್ತಿದ್ದನು. ॥೧೨೩-೧೨೪॥

ಆ ಮಂತ್ರಗಳ ಅರ್ಥವನ್ನು ಪಾರ್ವತಿಯು ಅತ್ಯಂತ ಭಕ್ತಿಯಿಂದ ಕೇಳುತ್ತಾ ಬೇರೆ ಮಂತ್ರಗಳ ಕಡೆಗೆ ಗಮನವನ್ನೇ ಕೊಡಲಿಲ್ಲ. ಇತರ ಮಂತ್ರಗಳು ಗುಣ ಬೋಧಕಗಳಾಗಿದ್ದುದರಿಂದಲೂ, ಅವುಗಳಲ್ಲಿ ಆತ್ಮಸ್ವರೂಪವನ್ನು ಸುಲಭವಾಗಿ ತಿಳಿ ಸುವ ಸಾಮರ್ಥ್ಯವಿಲ್ಲದಿರುವುದರಿಂದಲೂ ಅವುಗಳಲ್ಲಿ ಅಷ್ಟಾಗಿ ಪ್ರೀತಿ ಇಡಲಿಲ್ಲ. ॥೧೨೫-೧೨೬॥

ಮನವಸ್ಸಂತು ಬಹವಃ ಕಿಂ ತೈರತ್ಯಂತದುರ್ಲಭಃ ।
ಅಯಮೇವೇತಿ ವಿಜ್ಞಾತಶ್ಶಂಯುತೋ ವಾನ್ವಿತೋ ಮನುಃ ॥೧೨೭॥

ತನೇವ ಮಂತ್ರಮುಚ್ಚಾರ್ಯ ಕಲ್ಪೇಷ್ವಪಿ ಗತೇಷ್ವಪಿ ।
ನಿರತೋ ನಾಭವತ್ತಸ್ಯ ತನ್ಮಾಧುರ್ಯಾನುಸೇವನಾತ್ ॥೧೨೮॥

॥ ಗೌರ್ಯುವಾಚ ॥

ತತಃ ಪರಂ ಮಹಾದೇವಂ ತನ್ಮಂತ್ರಾವರ್ತನೋತ್ಸುಕಂ ।
ದೃಷ್ಟ್ವಾ ಗೌರೀ ಪ್ರಯತ್ನೇನ ಪ್ರಣಮ್ಯಾಹ ಕೃತಾಂಜಲಿಃ ॥೧೨೯॥

ಕೃತಾರ್ಥಾಸ್ಮಿ ಮಹಾದೇವ ರುದ್ರಾಧ್ಯಾಯಾವಲೋಕನಾತ್ ।
ತಾವತೈವ ಪ್ರಹೃಷ್ಟಾಹಂ ಸ ಏವಾನಂದಸಾಧನಂ ॥೧೩೦॥

ತತ್ರ ಯೇ ಮನವಶ್ಶೈವಾಸ್ತದ್ವ್ಯಾಖ್ಯಾಶ್ರವಣಾದಪಿ ।
ಸ ಏವ ಪರಮಾನಂದಃ ಪುನರುಕ್ತ ಇವ ಸ್ಥಿತಃ ॥೧೩೧॥

ತತ್ರಾಪ್ಯಯಂ ಶಿಕಾರಾದ್ಯೋ ಮಂತ್ರೋ ಮಂತ್ರಮಣಿಶ್ಶ್ರುತಃ ।
ಇತೋಧಿಕೋ ನ ಕೋಪ್ಯತ್ರ ಮಂತ್ರ ಇತ್ಯೇವ ಮೇ ಮತಿಃ ॥೧೩೨॥

---

ಅನೇಕ ಮಂತ್ರಗಳು ಲೋಕದಲ್ಲಿರಬಹುದು. ಆದರೆ ಅವುಗಳಿಂದ ಹೆಚ್ಚು ಪ್ರಯೋಜನವಾಗಲಾರದು. ಈ ರುದ್ರಾಧ್ಯಾಯಾಂತರ್ಗತವಾದ ಮಂತ್ರಗಳಲ್ಲೆಲ್ಲಾ ಶಿವನಾಮಗಳು ಸೇರಿ ಮನುಷ್ಯರಿಗೆ ಸುಖದಾಯಕಗಳಾಗಿವೆ. ಇಂತಹ ಶಿವಮಂತ್ರ ವನ್ನು ಅನೇಕ ಕಲ್ಪಕಾಲ ಪರ್ಯಂತ ಉಚ್ಚರಿಸುತ್ತಿದ್ದರೂ, ಅದರ ಮಹಿಮಾಸ್ವಾದ ದಿಂದ ಉಚ್ಚರಿಸುವವನಿಗೆ ಜುಗುಪ್ಸೆಯೇ ಉಂಟಾಗಲಾರದು. ॥೧೨೭-೧೨೮॥

ಹಾಗೆ ಅತಿಶಯವಾಗಿ ಮಂತ್ರಾವರ್ತನೆಯಲ್ಲಿಯೇ ಉತ್ಸುಕನಾಗಿರುವ ಪತಿ ಯನ್ನು ನೋಡಿ ಪಾರ್ವತಿಯು ಹೀಗೆ ಪ್ರಾರ್ಥಿಸಿಕೊಂಡಳು. “ ಮಹಾದೇವನೇ, ಈ ರುದ್ರಾಧ್ಯಾಯವನ್ನು ಶ್ರವಣ ಮಾಡಿ ನಾನು ಧನ್ಯಳಾದೆನು. ಕೇವಲ ಈ ಪುಸ್ತಕದರ್ಶನದಿಂದಲೇ ಸಂತುಷ್ಟಳಾಗಿರುವೆನು. ನನ್ನ ಈ ಆನಂದಕ್ಕೆ ಇದೇ ಮುಖ್ಯ ಸಾಧಕವಾಗಿರುವುದು. ॥೧೨೯-೧೩೦॥

ಶಿವಪರವಾಗಿರುವ ಈ ಮಂತ್ರವ್ಯಾಖ್ಯಾನ ಶ್ರವಣದಿಂದಲೇ ನನಗೆ ಆನಂದವು ಮತ್ತೆ ಮತ್ತೆ ಬರುತ್ತಿರುವುದು. ಅದರಲ್ಲಿಯೂ, ಶಿಕಾರಾದಿಯಾದ ಮಂತ್ರಗಳಂತೂ

ಯದ್ವ್ಯಾಖ್ಯಾನೇನ ಕಲ್ಪಾನಾಮಯುತಾನಿ ಗತಾನ್ಯಪಿ ।
ತದ್ವ್ಯಾಖ್ಯಾನಾನ್ನ ವಿರತಿಸ್ತವಾದ್ಯಾಪಿ ಪ್ರಜಾಯತೇ. ॥೧೩೩॥

ಅಯಂ ಧನ್ಯತಮಃ ಕಾಲೋ ಯದ್ವ್ಯಾಖ್ಯಾನೇನ ನೀಯತೇ ।
ಏತದ್ವ್ಯಾಖ್ಯಾನತಸ್ಸಂತು ಸಂತತಂ ಕಲ್ಪಕೋಟಯಃ ॥೧೩೪॥

ತದ್ವ್ಯಾಖ್ಯಾನಶ್ರವಣತೋ ವಿರತಿರ್ಮಾಸ್ತು ಮೇ ಪ್ರಭೋ ।
ಅಯಮೇವ ವರೋ ದೇಯಃ ಕೃಪಯಾ ಪರಯಾಧುನಾ ॥೧೩೫॥

ಅಯಂ ವರೋ ವರಮಣಿರ್ವರಾಣಾಮಪಿ ಕೇವಲಂ ।
ಅಯಂ ನಿಧಾನಂ ನಿಧಯಃ ಸರ್ವಸ್ವಮಪಿ ಮೇ ಪ್ರಭೋ ॥೧೩೬॥

ಪುನಃ ಪುನರ್ಮಧುರಿಮಾ ತೇನಾಭಿನವ ಏವ ಮೇ ।
ಸಂಪಾದಿತೋಯಂ ವ್ಯಾಖ್ಯಾನೈರಪಾರೈರಕಲಂಕಿತೈಃ ॥೧೩೭॥

ಪುನಃ ಪುನರ್ವರ್ಧನೀಯಃ ಸೋಯಂ ಮಧುರಿಮಾ ಪ್ರಭೋ ।
ಏತದ್ವೃದ್ಧಿಂ ಸುಧಾಂ ಮನ್ಯೇ ಸುಧಾಯಾಮಪಿ ಸರ್ವಥಾ ॥೧೩೮॥

---

ಮಂತ್ರರತ್ನಗಳಂತೆಯೇ ತೋರಿ ಬರುತ್ತಿವೆ. ಇದಕ್ಕೆ ಸಮನಾದ ಅಥವಾ ಇದಕ್ಕಿಂತಲೂ ಅಧಿಕ ಮಹಿಮೆಯುಳ್ಳ ಮಂತ್ರವೆಂಬುದು ಇಲ್ಲವೆಂದೇ ನನ್ನ ಭಾವನೆ. ॥೧೩೧-೧೩೨॥

ಮಹಾದೇವನೇ, ಈ ಮಂತ್ರವ್ಯಾಖ್ಯಾನ ಮಾಡಲುಪಕ್ರಮಿಸಿ ಅನೇಕ ಕಲ್ಪಗಳು ಕಳೆದುಹೋದುವು. ಇನ್ನೂ ಅದನ್ನು ನೀನು ಮುಗಿಸಿಯೇ ಇಲ್ಲ. ಒಟ್ಟಿನಲ್ಲಿ ಈ ವ್ಯಾಖ್ಯಾನಕ್ಕಾಗಿ ಕಳೆದ ಕಾಲವೇ ಧನ್ಯವಾದದ್ದು. ಮತ್ತು ಇಂತಹ ಕಾಲವು ಕೋಟಿ ಕಲ್ಪಸಂಖ್ಯೆಯಲ್ಲಿ ಕಳೆದರೂ ನಮಗೆ ವ್ಯಥೆಯಾಗಲಾರದು. ॥೧೩೩-೧೩೪॥

ಪರಶಿವನೇ, ಈ ಮಂತ್ರಾರ್ಥವನ್ನು ಕೇಳುವುದರಲ್ಲಿ ನನಗೆ ಜುಗುಪ್ಸೆಯೇ ಇಲ್ಲದಂತೆ ಒಂದು ವರವನ್ನು ದಯೆಯಿಂದ ಕೊಡು. ಈ ವರವನ್ನೇ ನಾನು ಶ್ರೇಷ್ಠವಾದ ನಿನ್ನ ಅನುಗ್ರಹವೆಂದೂ ನನ್ನ ಸಕಲ ನಿಧಿಯೆಂದೂ ಭಾವಿಸುವೆನು. ॥೧೩೫-೧೩೬॥

ಎಷ್ಟು ಸಾರಿ ಕೇಳಿದರೂ ಇದನ್ನು ಮತ್ತೆ ಮತ್ತೆ ಕೇಳಬೇಕೆನ್ನಿಸುವುದು. ಹೀಗೆ ಕೇಳಿದ್ದರಿಂದ ನಾನು ಎಷ್ಟೋ ವಿಷಯಗಳನ್ನು ಕಳಂಕರಹಿತವನ್ನಾಗಿ

ಇತಿ ತದ್ವಚನಂ ಶ್ರುತ್ವಾ ಶಂಕರೋ ಲೋಕಶಂಕರಃ ।
ತದ್ವ್ಯಾಖ್ಯಾನರತೋ ನಿತ್ಯಂ ಕುಮಾರಂ ಪ್ರಾಹ ಸಾದರಂ ॥೧೩೯॥

ಕುಮಾರ ಶೃಣು ಮೇ ವಾಕ್ಯಮಶಕಾಮಪಿ(?)ಸರ್ವಥಾ ।
ಕುಮಾರ ಕೃತ್ಯಂ ಯತತ್ತೇ ಕರ್ತವ್ಯಮಧುನಾ ಖಲು ॥೧೪೦॥

ಅಧುನಾ ಮಂತ್ರರಾಜಾರ್ಥವ್ಯಾಖ್ಯಾನನಿರತೋಽಸ್ಮ್ಯತಃ ।
ಕಾರ್ಯಾಂತರೇ ನ ಮೇ ಪ್ರೀತಿರಂಬಿಕಾಯಾಶ್ಚ ಸರ್ವಥಾ ॥೧೪೧॥

ಸೃಷ್ಟಿಪಾಲನಸಂಹಾರಾನ್ ಕುರು ಯತ್ನಪುರಸ್ಸರಂ ।
ಅದ್ಯಾವಧಿ ವಿಶೇಷೇಣ ನ ತತ್ರಾಸ್ಥಾ ಮಮ ಧ್ರುವಂ ॥೧೪೨॥

ಯದ್ಯತ್ಕಾರ್ಯಂ ಮಯಾ ತಾವದವಧಾನಪುರಸ್ಸರಂ ।
ಕೃತಂ ತತ್ತಾವದಧುನಾ ತ್ವಯಾ ಕಾರ್ಯಂ ಷಡಾನನ ॥೧೪೩॥

---

ಮಾಡಿಕೊಂಡಿರುವೆನು. ಅದರಿಂದ ನನ್ನ ಆನಂದವು ಇನ್ನೂ ಹೆಚ್ಚುತ್ತಿರುವುದು. ಇಂತಹ ಆನಂದವರ್ಧಕ ಶಕ್ತಿಯು ಅಮೃತದಲ್ಲಿಯೂ ಇಲ್ಲವೆಂದೇ ನನ್ನ ಭಾವನೆ. ಅಮೃತಕ್ಕಿಂತಲೂ ಇದನ್ನು ಹೆಚ್ಚೆಂದು ನಾನು ಭಾವಿಸಿರುವೆನು. ॥೧೩೭-೧೩೮॥

ಹೀಗೆಂದು ಕೇಳಿಕೊಂಡ ದೇವಿಯ ಮಾತುಗಳನ್ನು ಕೇಳಿ ಲೋಕಶಂಕರನಾದ ಮಹಾದೇವನು, ಅದೇ ವ್ಯಾಖ್ಯಾನವನ್ನೇ ಮುಂದುವರಿಸುತ್ತಾ ಕುಮಾರಸ್ವಾಮಿಯನ್ನು ಕರೆದು ಹೀಗೆಂದನು. "ಎಲೈ ಗುಹನೇ, ನನ್ನ ಮಾತನ್ನು ಕೇಳು. ನಿನಗೆ ಇದನ್ನು ನಡೆಸುವುದು ಕಷ್ಟವಾಗಿದ್ದರೂ, ನನ್ನ ಅಪ್ಪಣೆಯಂತೆ ಈಗ ಈ ಕಾರ್ಯದಲ್ಲಿ ತೊಡಗುವವನಾಗು. ॥೧೩೯-೧೪೦॥

ಕುಮಾರನೇ, ನಾನು ಈಗ ಮಂತ್ರರಾಜವೆನಿಸಿದ ಶ್ರೀರುದ್ರದ ವ್ಯಾಖ್ಯಾನದಲ್ಲಿ ನಿರತನಾಗಿದ್ದೇನೆ. ಪಾರ್ವತಿಯು ಅದನ್ನು ಕೇಳುವ ಕುತೂಹಲದಲ್ಲಿರುವಳು. ಆದುದರಿಂದ ನಾವಿಬ್ಬರೂ ಇಲ್ಲಿನವರೆಗೆ ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರ್ಯಗಳಿಗೆ ಮನಗೊಡಲಾಗಲಿಲ್ಲ. ಮುಂದೆ ಆಗುವುದೂ ಇಲ್ಲ. ನೀನು ಆ ಕೆಲಸದಲ್ಲಿ ನಮ್ಮಪ್ಪಣೆಯಂತೆ ನಿರತನಾಗು. ॥೧೪೧-೧೪೨॥

ನಾನು ಇಲ್ಲಿಯ ವರೆಗೂ ನಡೆಸಿರುವ ಕಾರ್ಯಗಳನ್ನು ಜಾಗರೂಕತೆಯಿಂದ ನಡೆಸಿರುವೆನು. ನೀನೂ ಸಹ ಇದನ್ನೇ ಮುಂದುವರಿಸುತ್ತಿರು. ಯಾವ ದಿವಸ ಈ

ಕದಾ ವಾ ಮಂತ್ರರಾಜಸ್ಯ ವ್ಯಾಖ್ಯಾ ಪೂರ್ಣಾ ಭವಿಷ್ಯತಿ ।
ಸ ಕಾಲೋಽಪ್ಯಧುನಾ ತಾವದ್ಗಣನಾ ಗೋಚರೋ ನ ಮೇ ॥೧೪೪॥

ದೃಷ್ಟಿರ್ಯಥಾ ಯಥಾ ಯಸ್ಯ ತಸ್ಯ ಸೃಷ್ಟಿಸ್ತಥಾ ತಥಾ ।
ಸಂಪಾದನೀಯಾ ಯತ್ನೇನ ಮಾಸ್ತು ತಸ್ಯ ವಿಪರ್ಯಯಃ ॥೧೪೫॥

ಸೃಷ್ಟಿಂ ಚ ಪಾಲನಂ ಪ್ರೀತ್ಯಾ ಕುರು ಯತ್ನಪುರಸ್ಸರಂ ।
ಸಂಹಾರಂ ಚ ಕುರು ಪ್ರಾಜ್ಞ ಸರ್ವದಾಪಿ ಮಮಾಜ್ಞಯಾ ॥೧೪೬॥

ನೋಲ್ಲಂಘನೀಯಾ ಸಹಸಾ ಮದಾಜ್ಞಾಪಿ ತದಾಧುನಾ ।
ಮದಾಜ್ಞಾಪಾಲನೇನೈವ ತವಾನಂದಃ ಪ್ರವರ್ಧತಾಂ ॥೧೪೭॥

ಗಣಾಶ್ಚ ಕೋಟಿಶಸ್ಸಂತಿ ಸಹಾಯಾಸ್ತವ ತೈಸ್ಸಹ ।
ತ್ವಯಾ ಸರ್ಗಾದಿಕಾರ್ಯಾಣಿ ಕರ್ತವ್ಯಾನಿ ಯಥಾ ಯಥಂ ॥೧೪೮॥

ಮಧ್ಯೇ ಮಧ್ಯೇ ಸಮಾಗತ್ಯ ಕುರು ಕಾರ್ಯನಿವೇದನಂ ।
ತದೇವ ಕಾರ್ಯಂ ಯತ್ನೇನ ವಿರತಂ ಮೇ ತತೋ ಮನಃ ॥೧೪೯॥

---

ಮಂತ್ರವ್ಯಾಖ್ಯಾನವು ಪೂರ್ತಿಯಾಗುವುದೋ ಅಂದೇ ಮತ್ತೆ ನನ್ನ ಕಾರ್ಯಕಲಾಪಗಳನ್ನು ಕೈಗೊಳ್ಳುವೆನು. ಆದರೆ ಅದು ಮುಗಿಯುವ ಕಾಲವು ಎಂದು ? ಎಂಬುದು ನನಗೆ ತಿಳಿಯದಾಗಿದೆ. ॥೧೪೩-೧೪೪॥

ಇಲ್ಲಿನವರೆಗೂ ಯಾವ ಯಾವ ವಸ್ತುಗಳು ಹೇಗೆ ಹೇಗೆ ಸೃಷ್ಟಗಳಾಗಿವೆಯೋ ಅವೆಲ್ಲವೂ ಹಾಗೆಯೇ ಸೃಷ್ಟಿಯಾಗುತ್ತಿರಲಿ. ನೀನು ಸೃಷ್ಟಿ, ರಕ್ಷಣೆ ಈ ಎರಡು ಕಾರ್ಯಗಳನ್ನೂ ನಿನ್ನಿಷ್ಟಬಂದಂತೆ ನಡೆಸಿ, ಸಂಹಾರವನ್ನು ಮಾತ್ರ ನನ್ನ ಅಪ್ಪಣೆಯಿಂದ ಮುಂದುವರಿಸುವವನಾಗು. ॥೧೪೫-೧೪೬॥

ಎಂದೂ ನನ್ನ ಅಪ್ಪಣೆಯನ್ನು ಉಲ್ಲಂಘಿಸಬೇಡ. ನನ್ನ ಆಜ್ಞಾಪಾಲನೆಯಿಂದಲೇ ನಿನಗೆ ಆನಂದವು ಹೆಚ್ಚುವುದು. ನಿನ್ನ ಸಹಾಯಕ್ಕಾಗಿ ಕೋಟಿಸಂಖ್ಯೆಯ ಗಣಗಳಿರುವುವು. ಸೃಷ್ಟ್ಯಾದಿ ಸಕಲ ಕಾರ್ಯಗಳನ್ನೂ ಮೊದಲಿನಂತೆಯೇ ಅವರ ಸಹಾಯದಿಂದ ನಡೆಸುವವನಾಗು. ॥೧೪೭-೧೪೮॥

ಅಲ್ಲದೆ ಆಗಾಗ ನನ್ನಲ್ಲಿಗೆ ಬಂದು ನೀನು ನಡೆಸಿದ ಕಾರ್ಯಗಳನ್ನು ನನ್ನಲ್ಲಿ ವರದಿಮಾಡು. ಅದರಿಂದ ನನ್ನ ಮನಸ್ಸಿಗೆ ನೆಮ್ಮದಿಯುಂಟಾಗುವುದು ಎಂದು

ಇತಿ ಶಂಕರವಾಕ್ಯಾನಿ ಶ್ರುತ್ವಾ ವಾಕ್ಯವಿಶಾರದಃ ।
ತಮಾಹ ಗಿರಿಶಂ ನತ್ವಾ ಷಣ್ಮುಖಃ ಸಕೃತಾಂಜಲಿಃ ॥೧೫೦॥

ಸ್ವಾಮಿನ್ಮಯಾಪಿ ಮಂತ್ರಾರ್ಥಃ ಸಾಕಲ್ಯೇನ ಶ್ರುತೋ ನ ಸಃ ।
ತನ್ಮಂತ್ರಾರ್ಥಶ್ರವಣತೋ ವಿರತಂ ಚ ನ ಮೇ ಮನಃ ॥೧೫೧॥

ತದರ್ಥಾಃ ಕತಿ ತೇಷಾಂ ಚ ತಾತ್ಪರ್ಯಂ ಕುತ್ರ ವಾ ಪ್ರಭೋ ।
ತಜ್ಞಾನೇನ ವಿನಾ ತಾವದಾನಂದೋ ನ ಪ್ರವರ್ಧತೇ ॥೧೫೨॥

ಅಂಬಿಕಾಸನ್ನಿಧಾನೇನ ತದರ್ಥಶ್ರವಣೇ ಸತಿ ।
ಪುನರರ್ಥಾಂತರಾಕಾಂಕ್ಷಾ ಮಮ ತಾವತ್ಪ್ರಜಾಯತೇ ॥೧೫೩॥

ಕಾಲಾಂತರೇಷು ತತ್ಪ್ರಶ್ನಃ ಕರ್ತುಮೇವ ನ ಶಕ್ಯತೇ ।
ಅರ್ಥಪ್ರವಾಹಕಲ್ಲೋಲಮಾಲಾಕುಲವಿಜೃಂಭಣಾತ್ ॥೧೫೪॥

---

ಹೇಳಿದ ಶಂಕರನ ಮಾತುಗಳನ್ನು ಕೇಳಿದ ಕುಮಾರಸ್ವಾಮಿಯು ಅಂಜಲಿಬದ್ಧನಾಗಿ ಈರೀತಿ ಪ್ರಾರ್ಥಿಸಿಕೊಂಡನು. ॥೧೪೯-೧೫೦॥

ಸ್ವಾಮಿಯೇ, ಒಂದು ನನ್ನ ಪ್ರಾರ್ಥನೆ. ನೀನು ಈಗ ಹೇಳಬೇಕೆಂದಿರುವ ಮಂತ್ರಾರ್ಥವನ್ನು ನಾನು ಎಂದೂ ಕೇಳಿಲ್ಲ. ಕೇಳುವ ಆಸೆಯೂ ಬಹಳವಾಗಿದೆ. ಅದರ ಅಗಾಧವಾದ ಅರ್ಥವನ್ನೂ, ತಾತ್ಪರ್ಯವನ್ನೂ ತಿಳಿಯದಿದ್ದ ಮೇಲೆ ಮನುಷ್ಯರಿಗೆ ಆನಂದವೆಲ್ಲಿ ಬಂದೀತು ? ಆನಂದವರ್ಧಕವಾದ ಅಂತಹ ಮಂತ್ರಾರ್ಥವನ್ನು ನಾನೂ ತಿಳಿಯುವಂತೆ ಅನುಗ್ರಹಿಸು. ॥೧೫೧-೧೫೨॥

ಪಾರ್ವತಿಯ ಸನ್ನಿಧಿಯಲ್ಲಿ ಮಂತ್ರಾರ್ಥವನ್ನು ಕೇಳುವುದರಿಂದಲೇ ನನಗೆ ಅದರ ನೈಜಾರ್ಥವು ಸ್ಫುರಿಸುವುದಲ್ಲದೆ ನಿಜವಾಗಿಯೂ ಜ್ಞಾನವೃದ್ಧಿಯಾಗುವುದು. ಈಗಲ್ಲದೆ ಅದರ ಅರ್ಥವನ್ನು ಮುಂದೆಂದೂ ತಿಳಿಯಲಾಗುವುದಿಲ್ಲ. ಏಕೆಂದರೆ ಆ ಅರ್ಥವಿವರಣೆಯು ಪ್ರವಾಹದಂತೆ ಬರುವ ನಿನ್ನ ವಾಗ್ಝರಿಯಿಂದಲ್ಲದೆ ಒಂದೆರಡು ಪ್ರಾಸಂಗಿಕವಾದ ಮಾತುಗಳಿಂದ ನಮಗೆ ತಿಳಿಯಲಾರದು. ॥೧೫೩-೧೫೪॥

ಅವಶ್ಯಮೇವ ಸಹಸಾ ತತ್ತದರ್ಥಾವಧಾರಣಂ ।
ಪುನಃ ಪ್ರಶ್ನೇ ನಾವಕಾಶಃ ಸರ್ವೇಷಾಂ ಮಮ ಜಾಯತೇ ॥೧೫೫॥

ಯಂ ಯಮರ್ಥಂ ಮಹಾದೇವೀ ಪೃಚ್ಛತ್ಯಾದರಪೂರ್ವಕಂ ।
ತದರ್ಥಾಕಲನೇ ಶಕ್ತಿರ್ಮಮ ತಾವನ್ನ ಜಾಯತೇ ॥೧೫೬॥

ತ್ವತ್ತಶ್ಚೇದಿಯಮಭ್ಯಸ್ತಾ ವಿದ್ಯಾ ಭವತಿ ಶಂಕರ ।
ತದಾ ಧನ್ಯಂ ಪರಂ ಮನ್ಯೇ ಸ್ವಾತ್ಮಾನಂ ನಾನ್ಯಥಾ ಖಲು ॥೧೫೭॥

ಮನೋಜ್ಞಶಿವಮಂತ್ರಾರ್ಥವ್ಯಾಖ್ಯಾಪೀಯೂಷವಾಹಿನೀ ।
ಕೇನ ತ್ಯಾಜ್ಯಾ ಮಹಾದೇವ ಕೃಪಾ ಯದಿ ಭವೇತ್ತ್ವದಾ ॥೧೫೮॥

ವ್ಯಾಖ್ಯಾಪ್ರವಾಹಾಶ್ಚಲಿತಾಃ ಕಥಂ ವಾ
ತೇ ಮಂತ್ರರಾಜಸ್ಯ ಮಹೇಶ ತೇ ಕೈಃ ।
ಗ್ರಾಹ್ಯಾಃ ಕಥಂ ಕರ್ಣಮಹಾಸುರೇಂದ್ರಾ
ಸ್ತ್ವಯಾ ಪರಂ ತಾತವಿನಿರ್ಮಿತಾಶ್ಚ ॥೧೫೯॥

---

ಅಷ್ಟಲ್ಲದೆ ನೀನು ಹೇಳುವ ವ್ಯಾಖ್ಯಾನದಿಂದ ನನಗೆ ಮತ್ತೆ ಸಂದೇಹ ಬರದಂತಹ ಯಥಾರ್ಥಜ್ಞಾನವು ಲಭಿಸುವುದು. ಏಕೆಂದರೆ ಪಾರ್ವತಿಯು ಯಾರು ಯಾರಿಗೆ ಎಲ್ಲೆಲ್ಲಿ ಸಂದೇಹ ಬರುವುದೆಂಬುದನ್ನೆಲ್ಲಾ ಅರಿತು, ಆಯಾ ಸಂದೇಹ ಗಳಿಗನುಸಾರವಾಗಿ ಪ್ರಶ್ನೆಹಾಕಿ, ನಿನ್ನಿಂದ ಸಮಾಧಾನವನ್ನು ಪಡೆಯುವಳು. ಆದ್ದರಿಂದ ಇಂತಹ ಸಂದರ್ಭದಲ್ಲಿ ನನಗೆ ಅವಕಾಶವನ್ನು ದಯಪಾಲಿಸು. ॥೧೫೫-೧೫೬॥

ನಿನ್ನಿಂದ ಅನುಗೃಹೀತನಾಗಿ ಆ ಮಂತ್ರಾರ್ಥವನ್ನೆಲ್ಲಾ ಗ್ರಹಿಸಿದರೆ ಆಗ ನಾನು ಧನ್ಯನೆನಿಸುವೆನು. ನನ್ನ ಧನ್ಯತೆಗೆ ಮತ್ತಾವುದೂ ಸಹಾಯ ದೊರೆಯ ಲಾರದು. ಶಿವಮಂತ್ರದ ಅರ್ಥವೇ ಒಂದು ಅಮೃತಪ್ರವಾಹ. ಅದನ್ನು ಹೊಂದ ಬೇಕಾದರೆ ಈಗ ನನಗೆ ನಿನ್ನ ಕೃಪೆಯೊಂದೇ ಬೇಕಾಗಿರುವುದು. ಸಿಕ್ಕಿದ ಇಂತಹ ಅಮೂಲ್ಯವಾದ ಅವಕಾಶವನ್ನು ಯಾರು ತಾನೇ ಕಳೆದುಕೊಳ್ಳುವರು ? ॥೧೫೭-೧೫೮॥

ತಂದೆಯೇ, ನಿನ್ನ ವ್ಯಾಖ್ಯಾನವೆಂಬ ಮಹಾಪ್ರವಾಹವು ಹರಿಯಲು ಆರಂಭಿ ಸಿದರೆ ಅದನ್ನು ಧರಿಸಿಕೊಳ್ಳುವವರು ಯಾರು ? ನಿನ್ನಿಂದಲೇ ನಿರ್ಮಿತವಾದ

ಮತ್ಕರ್ಣಾರ್ಣವಪೂರ್ಣವರ್ಣತಟನೀನಿರ್ಮಾಣದಕ್ಷಾಧುನಾ
ತ್ರ್ಯಕ್ಷಾಕ್ಷೇಪವಿವರ್ಜಿತೇನ ಮನಸಾ ತಾವತ್ತ್ವಯಾ ತತ್ಕೃತಂ ।
ಅನ್ಯೇನಾಪಿ ಭವೇನ್ನ ತದ್ಗಿರಿಜಯಾ ತೇನಾಧುನಾ ಮೇ ಮನೋ
ಭೂಯಸ್ತಚ್ಛ್ರವಣಾಯ ಸಂತತಮುಮಾಕಾಂತಾಶ್ರಿತಂ ವಾಂಛತಿ ॥೧೬೦॥

ಏತನ್ಮಂತ್ರಮಹೋಲ್ಲಸನ್ಮಧುರಿಮಾ ರಾಶಿಃ ಸಮುಜ್ಜೃಂಭತೇ
ತತ್ಕಲ್ಲೋಲಪರಂಪರಾಂತರಳಿಮಾ ಭೂಮಾಪಿ ಸೀಮಾಪಿ ಕಃ ।
ಕಾಮಂ ಕಾಮಮಯಂ ಮಯಂ ವಿತನುತೇ ತತ್ರಾವದಭ್ಯರ್ಥಿತಂ
ದೈವಾಜ್ಞಾಯತ ಇತ್ಯನೈಮಿ ಕಿಮಿತೋಽಪ್ಯಾಶಾಸ್ಯಮನ್ಯತ್ಪ್ರಭೋ ॥೧೬೧॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ಸತ್ಯವ್ರತ
ತತ್ಪತ್ನೀ ಸಂವಾದೇ ಶ್ರೀರುದ್ರಮಂತ್ರವ್ಯಾಖ್ಯಾನವರ್ಣನಂ ನಾಮ
ಅಷ್ಟತ್ರಿಂಶೋಽಧ್ಯಾಯಃ

---

ನಮ್ಮ ಕಿವಿಗಳು ನಿನ್ನ ವ್ಯಾಖ್ಯಾಪ್ರವಾಹವನ್ನು ಖಂಡಿತವಾಗಿ ಗ್ರಹಿಸಿಕೊಳ್ಳಲಾರವು. ಸುರೇಂದ್ರಾದಿಗಳಿಗೂ ನಿನ್ನ ವ್ಯಾಖ್ಯಾಶ್ರವಣವು ದುರ್ಲಭವಾದುದಲ್ಲವೇ! ॥೧೫೯॥

ಪರಶಿವನೇ, ನೀನು ನನ್ನ ಕಿವಿಗಳೆಂಬ ಸಮುದ್ರವನ್ನು ತುಂಬುವಂತಹ ವ್ಯಾಖ್ಯಾಪ್ರವಾಹಗಳನ್ನು ಸೃಷ್ಟಿಸಲು ಸಮರ್ಥನಾಗಿರುವೆ. ಅಲ್ಲದೆ ಶಿವಭಕ್ತಿಪೂರಿತವಾದ ಮನಸ್ಸನ್ನೂ ನನಗೆ ಅನುಗ್ರಹಿಸಿರುವೆ. ಪಾರ್ವತಿಯ ಹೃದಯಾನಂದಕವಾಗಿ ಪರಶಿವನಲ್ಲಿ ಸ್ಥಿರವಾಗಿ ನೆಲಸಿರುವ ಈ ನನ್ನ ಮನಸ್ಸು ಈಗ ನೀನು ವಿವರಿಸುವ ವ್ಯಾಖ್ಯಾನ ಶ್ರವಣದಲ್ಲಿ ಅತ್ಯಂತ ಕುತೂಹಲಗೊಂಡಿರುವುದೆಂದು ನಾನು ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇನೆ. ॥೧೬೦॥

ಮಹಾದೇವನೇ, ಈ ಮಂತ್ರವ್ಯಾಖ್ಯಾನವೆಂಬ ಮಧುರಾಶಿಯು ಅಲೆ ಅಲೆಯಾಗಿ ಸಮುದ್ರದಂತಾಗುತ್ತಿರುವಾಗ ಅದಕ್ಕೆ ಒಂದು ಎಲ್ಲೆಯಿರುವುದೇ? ಈ ನಿನ್ನ ವಾಕ್ಸರಣಿಯ ಶ್ರವಣದಿಂದ ಸಕಲೇಷ್ಟಾರ್ಥಗಳೂ ಸಿದ್ಧಿಸುವಾಗ, ಅಂತಹ ಒಂದು ಸನ್ನಿವೇಶವು ಈಗ ನನಗೆ ದೊರೆತಿರುವುದಕ್ಕೆ ಬಹು ಸಂತೋಷಪಡುವೆನು. ಈಗಲ್ಲದೆ ನನಗೆ ಮತ್ತಾವ ಸನ್ನಿವೇಶದಲ್ಲಿ ಈ ಆನಂದವು ದೊರೆಕೀತು. ಮಹಾ

ದೇವನೇ, ಈ ಜ್ಞಾನಸಾಧನೆಗೆ ತಕ್ಕ ಸನ್ನಿವೇಶವನ್ನು ಕರುಣೆಯಿಂದ ನನಗೆ ಅನುಗ್ರಹಿಸು"ಎಂದು ಕುಮಾರಸ್ವಾಮಿಯು ಮಹಾದೇವನನ್ನು ಪ್ರಾರ್ಥಿಸಿಕೊಂಡನು. ||೧೬೧||

ಇಲ್ಲಿಗೆ ಶ್ರೀಶಿವರಹಸ್ಯದ ತೃತೀಯಾಂಶದ ಉತ್ತರಾರ್ಧದಲ್ಲಿ ಸತ್ಯವ್ರತ ಮತ್ತು ಅವನ ಪತ್ನಿಯರ ಸಂಭಾಷಣೆಯಲ್ಲಿ ಶ್ರೀರುದ್ರಮಂತ್ರವ್ಯಾಖ್ಯಾವರ್ಣನೆ ಯೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

**ಇತ್ಯಾಕರ್ಣ್ಯ ಕುಮಾರಚಾರುವಚನಂ ಹಾರಾವಳೀಸನ್ನಿಭಂ**
**ತತ್ಪೀಯೂಷತರಂಗಸನ್ನಿಭಮುಮಾಪೀಯೂಷಕರ್ಣಾರ್ಣವೈಃ ।**
**ಪೇಯಂ ಪಾತು ಪತಿಸ್ತತಃ ಪ್ರಿಯಮಿತಿ ಪ್ರಾಯಃ ಸ್ವಯಂ ವಾಂಛಯಾ**
**ಪಾತುಂ ಕಂಠಮಣಿಂ ಚಕಾರ ದಯಯಾಪ್ಯುತ್ಕಂಠಯಾ ಕೇವಲಂ ॥೧॥**

**ಕುಮಾರ ಸಾಧೂಕ್ತಮಿದಂ ತ್ವಯಾದ್ಯ**
**ಪಂಚಾಕ್ಷರಾರ್ಥಾವಗಮಾಯ ಯತ್ನಃ ।**

---

## ಮೂವತ್ತೊಂಬತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಮೃದುಮಧುರವಾಗಿ ಹೇಳಿದಂತಹ ಅಮೃತಸಮಾನವಾದ ವಾಣಿಯನ್ನು ಕೇಳಿ ಪಾರ್ವತೀಪರಮೇಶ್ವರರು ಸಂತೋಷಪಟ್ಟು, ಅವನ ಸ್ತುತಿರೂಪವಾದ ಮಾತುಗಳನ್ನೇ ಒಂದು ಸುಂದರವಾದ ಹಾರವನ್ನಾಗಿ ಮಾಡಿಕೊಂಡರು. ಅಲ್ಲದೆ ಅದೇ ವಚನಗಳನ್ನು ಅಮೃತಪ್ರವಾಹದಂತೆ ಅತ್ಯುತ್ಸಾಹದಿಂದ ಪದೇ ಪದೇ ಸ್ಮರಿಸಿಕೊಳ್ಳುತ್ತಾ ತೃಪ್ತಿಯಿಂದ ಪಾನಮಾಡುತ್ತಾ, ಕಂಠಮಣಿಯಂತೆ ಅದನ್ನು ಸದಾ ಹೃದಯಮಧ್ಯವಲ್ಲಿ ನೆಲಸುವಂತೆ ಧರಿಸಿದರು. ॥೧॥

ಅನಂತರ ಶಂಕರನು ಕುಮಾರಸ್ವಾಮಿಯನ್ನು ನೋಡುತ್ತಾ, "ಪ್ರಿಯಪುತ್ರನೇ, ನೀನು ಈಗ ಶಿವಪಂಚಾಕ್ಷರಗಳ ಅರ್ಥವನ್ನು ತಿಳಿಯಲು ಪ್ರಯತ್ನಿಸು

ಕೃತಸ್ಸ ತಾವತ್ಪರಮಾರ್ಥತಸ್ತು
ಸರ್ವೋಪಕಾರಾಯ ನ ಸಂಶಯೋಽತ್ರ ॥೨॥

ಲಂಬೋದರೇಣ ಸಹ ಸಾದರಮತ್ರ ನಿತ್ಯಂ
ಸ್ಥಿತ್ವಾ ವಿಚಾರ್ಯ ಪುನರರ್ಥವಿಶೇಷವಾರ್ತಾಂ ।
ಸಮ್ಯಙ್ನಿಧಾಯ ಹೃದಯೇಽಪಿ ವಿನೇಯ ಏವ
ಕಾಲಃ ಕಿಯಾನಪಿ ವಿಶೇಷಮಯೂಖತುಲ್ಯಃ ॥೩॥

ಇತಿ ತದ್ವಚನಂ ಶ್ರುತ್ವಾ ಕುಮಾರಗಣಪೋಽಪಿ ಸಃ ।
ಆನಂದಸಾಗರಾಪಾರತರಂಗಾಸಂಗಲೀಲಯಾ ॥೪॥

ತತಃ ಪರಂ ಕುಮಾರೋಽಪಿ ಸ್ಕಂದೋಽಪಿ ಶಿವಯೋರ್ಮುಹುಃ ।
ಪ್ರಣಮ್ಯ ಚರಣಾಂಭೋಜಂ ಸ್ಥಿತಶ್ಶಂಕರಸನ್ನಿಧೌ ॥೫॥

ಮಹಾಪ್ರಲಯಕಾಲೀನಭಯಾಪಹರಣಕ್ಷಮಾಂ ।
ಮುಹುಃ ಪಂಚಾಕ್ಷರವ್ಯಾಖ್ಯಾಂ ಶುಶ್ರಾವ ಚ ಷಡಾನನಃ ॥೬॥

ತತಃ ಪರಂ ದದರ್ಶಾಯಂ ಕೋಟಿಶಃ ಶಿವವಿಗ್ರಹಾನ್ ।
ಸ್ಕಂದಃ ಪಂಚಾಕ್ಷರವ್ಯಾಖ್ಯಾವಿಶೇಷಕಥನೋದ್ಯತಾನ್ ॥೭॥

---

ತ್ತಿರುವೆ. ನಿಜವಾಗಿಯೂ ಅದು ಬಹಳ ಕುತೂಹಲದಿಂದ ತಿಳಿಯುವ ಅಂಶವೇ. ಅದರಿಂದ ಅನೇಕ ಪ್ರಯೋಜನಗಳೂ ಲಭಿಸುವುವು. ಇದರಲ್ಲಿ ಸಂದೇಹವಿಲ್ಲ. ॥೨॥

ನೀನು ಇಲ್ಲಿರುವ ನಿನ್ನ ಸಹೋದರನಾದ ಲಂಬೋದರನೊಡನೆ ಈಗ ನಾನು ಹೇಳುವ ವಿಷಯವನ್ನೆಲ್ಲಾ ಗ್ರಹಿಸಿ ಧಾರಣಮಾಡು. ಏಕೆಂದರೆ ಕಾಲವು ಮಿಂಚಿನಂತೆ ಹಾರಿಹೋಗತಕ್ಕದ್ದು. ಅದರಿಂದ ನಿನ್ನ ಕೋರಿಕೆಯನ್ನು ನಾನು ಈಗಲೇ ನೆರವೇರಿಸಿಕೊಡುವೆನು." ॥೩॥

ಎಂದು ಹೇಳಿದ ಮಹೇಶ್ವರನ ಮಾತುಗಳನ್ನು ಗಣನಾಯಕನಾದ ಕುಮಾರಸ್ವಾಮಿಯು ಕೇಳಿ ಆನಂದಾಂಬುಧಿಮಗ್ನನಾಗಿ, ತನ್ನ ಮಾತಾಪಿತೃಗಳ ಚರಣಕಮಲಗಳಿಗೆ ವಂದಿಸಿ ಶಂಕರನ ಹತ್ತಿರ ನಿಂತುಕೊಂಡನು. ॥೪-೫॥

ಹಾಗೆ ಮಹಾಪ್ರಲಯದ ಭಯವನ್ನು ಸಹ ನಿವಾರಿಸುವ ಶಕ್ತಿಯುಳ್ಳ ಪಂಚಾಕ್ಷರವ್ಯಾಖ್ಯಾನವನ್ನು ಕೇಳಲು ಸಿದ್ಧನಾಗಿ ನಿಂತೊಡನೆಯೇ, ಕುಮಾರ

ಪಂಚಾಕ್ಷರಾರ್ಥವ್ಯಾಖ್ಯಾನವಿಗ್ರಹಾನಪಿ ಕೋಟಿಶಃ ।
ಶಂಕರಾಭಿಮುಖಾನ್ ಸರ್ವಾನ್ ಭೂತಿರುದ್ರಾಕ್ಷಭೂಷಣಾನ್ ॥೮॥

ಪ್ರಹರ್ಷ ಸ್ಮೇರವದನಾನ್ ಜಟಾಮಂಡಲಮಂಡಿತಾನ್ ।
ತತ್ತ್ವದರ್ಥಾವಬೋಧಾದಿಸುಧಾಪಾನವಿಜೃಂಭಿತಾನ್ ॥೯॥

ದೃಷ್ಟ್ವಾ ತಾಂಛಂಕರಾಸಕ್ತಾನ್ ಶಾಂಕರಾನಪಿ ಕೋಟಿಶಃ ।
ವಿಚಿತ್ರಮಾಲ್ಯಾಭರಣಾನ್ನವಚಂದ್ರವಿಭೂಷಣಾನ್ ॥೧೦॥

ಸೋಮಸೂರ್ಯಾಗ್ನಿನಯನಾನುಮಾಲಿಂಗಿತವಿಗ್ರಹಾನ್ ।
ತ್ರಿಶೂಲಹಸ್ತಾನ್ ವರದಾನ್ ನೀಲಕಂಠಾನ್ಮನೋಹರಾನ್ ॥೧೧॥

ದೃಷ್ಟ್ವಾ ತಾನ್ವಿಸ್ಮಯಾಪನ್ನೋ ಲಂಬೋದರಮುವಾಚ ಸಃ ।
ಕಿಮಿದಂ ದೃಶ್ಯತೇ ಭ್ರಾತಃ ಸಹಸ್ರಾಣಿ ಸಹಸ್ರಶಃ ॥೧೨॥

ಉಗ್ರಾಣಾಮುಗ್ರವೀರ್ಯಾಣಾಮಪಾರಾಣಾಂ ಮಹಾತ್ಮನಾಂ ।
ಘನಗಂಭೀರವಚಸಾಮಧುನಾ ಪ್ರತಿವೋಜಸಾಂ ॥೧೩॥

---

ಸ್ವಾಮಿಯು ಈಶ್ವರನಮುಂದೆ ಪಂಚಾಕ್ಷರವ್ಯಾಖ್ಯಾನವನ್ನು ವಿವರಿಸುವಂತಹ ಕೋಟಿಸಂಖ್ಯೆಯ ಶಿವವಿಗ್ರಹಗಳು ಬಂದು ನಿಂತುದನ್ನು ನೋಡಿದನು. ॥೬-೭॥

ಅವರೆಲ್ಲರೂ ಈಶ್ವರನ ಎದುರಿನಲ್ಲಿ ಅಸಂಖ್ಯಾತರಾಗಿ ಭಸ್ಮರುದ್ರಾಕ್ಷಗಳನ್ನು ಧರಿಸಿ, ಜಟಾಮಂಡಲದಿಂದ ಶೋಭಿಸುತ್ತಾ, ನಗುಮುಖದವರಾಗಿ ಶಿವಪಂಚಾಕ್ಷರಗಳ ಅರ್ಥದ ರಸವನ್ನೇ ಆಸ್ವಾದಿಸುತ್ತಾ ಕಾಂತಿಯುಕ್ತರಾಗಿ ನಿಂತಿದ್ದರು. ॥೮-೯॥

ಅಲ್ಲದೆ ಅವರೆಲ್ಲರೂ ಶಂಕರಸ್ವರೂಪರಾಗಿಯೇ ಇದ್ದು ಕೋಟಿಶಂಕರರಂತೆ ಕಾಣುತ್ತಿದ್ದರು. ಎಲ್ಲರಲ್ಲಿಯೂ ಅರ್ಧಚಂದ್ರ, ತ್ರಿಲೋಚನಗಳು, ಉಮಾದೇವಿ; ತ್ರಿಶೂಲವರದಹಸ್ತಗಳು, ನೀಲವಾದ ಕಂಠಭಾಗ ಮುಂತಾದ ಶಿವಚಿಹ್ನೆಗಳೆಲ್ಲವೂ ಮನೋಹರಗಳಾಗಿ ಕಾಣುತ್ತಿದ್ದುವು. ॥೧೦-೧೧॥

ಇದನ್ನೆಲ್ಲಾ ನೋಡಿ ಕುಮಾರಸ್ವಾಮಿಯು ಚಕಿತನಾಗಿ ತಮ್ಮನಾದ ಲಂಬೋದರನನ್ನು ಕುರಿತು ಹೀಗೆಂದನು—“ಸಹೋದರನೇ, ಇದೇನಾಶ್ಚರ್ಯ! ಉಗ್ರವೀರ್ಯವುಳ್ಳವರೂ ಅತಿಶಯವಾದ ಮಹಿಮೆಯುಳ್ಳವರೂ ತೇಜಸ್ಸಿನಿಂದ ಪ್ರಜ್ವ

ದಿಙ್ಮಂಡಲಾನಿ ವ್ಯಾಪ್ತಾನಿ ತೈರೇವಾಮಿತವಿಕ್ರಮೈಃ ।
ಪ್ರತಿಕ್ಷಣಂ ವೃದ್ಧಿರೇವ ತೇಷಾಮಾಶು ಪ್ರಜಾಯತೇ ॥೧೪॥

ಇತಿ ತದ್ವಚನಂ ಶ್ರುತ್ವಾ ಸ್ಕಂದಮಾಹ ಗಣೇಶ್ವರಃ ।
ಧೈರ್ಯಮಾವಹ ತೇ ಸರ್ವೇ ಶಂಕರಸ್ಯೈವ ವಿಗ್ರಹಾಃ ॥೧೫॥

ಪಂಚಾಕ್ಷರಾರ್ಥವ್ಯಾಖ್ಯಾನಮೂರ್ತಯಃ ಸಮುಪಸ್ಥಿತಾಃ ।
ಕೋಟಿಶಃ ಕೋಟಿಶಸ್ತೇಷಾಂ ಮುಖಾನಿ ರಸನಾ ಅಪಿ ॥೧೬॥

ರಸನಾಕೋಟಿಭಿರ್ವಾ ಸ್ಯಾತ್ತದರ್ಥಖ್ಯಾಪನಂ ಕಥಂ ।
ರುದ್ರಾಣಾಂ ಕೋಟಿಭಿರ್ವಾತ್ರ ತತೋ ವೃದ್ಧಿಃ ಪ್ರಜಾಯತೇ ॥೧೭॥

ಅಪಾರಕಲ್ಪಾವಗಮೇಽಪ್ಯಪಾರ
ಜಿಹ್ವಾಭಿರಾನಂದಕರೇಂದುಮೌಲಿಃ ।
ಪಂಚಾಕ್ಷರಾರ್ಥನಖಿಲಾನ್ ಸ ವಕ್ತುಂ
ಶಕ್ತಃ ಕಥಂ ವಾ ಗಿರಿಜಾಪಿ ಶಕ್ತಾ ॥೧೮॥

---

ಲಿಸುವವರೂ, ಮೇಘಧ್ವನಿಯಿಂದ ವಿಜೃಂಭಿಸುವವರೂ ಆದ ಇವರು ಎಲ್ಲಿಂದ ಬಂದರು ? ॥೧೨-೧೩॥

ಇವರ ಆಕಾರವು ದಿಗಂತವನ್ನೆಲ್ಲಾ ವ್ಯಾಪಿಸಿದೆ. ಮತ್ತು ಕ್ಷಣಕ್ಷಣಕ್ಕೂ ವೃದ್ಧಿಹೊಂದುತ್ತಲೇ ಇರುವರು '' ಎಂದು ಹೇಳಿದ ಕುಮಾರಸ್ವಾಮಿಯ ಮಾತಿಗೆ ಗಣಪತಿಯು ಉತ್ತರವಾಗಿ " ಕುಮಾರನೇ, ನೀನು ಭಯಪಡಬೇಡ, ಇದೆಲ್ಲವೂ ಈಶ್ವರನ ಸ್ವರೂಪಗಳೇ. ॥೧೪-೧೫॥

ಶಿವಪಂಚಾಕ್ಷರದ ಅರ್ಥವನ್ನು ವಿವರಿಸಲು ಕೋಟಿ ಕೋಟಿ ಸಂಖ್ಯೆಯ ಶಿವವಿಗ್ರಹಗಳೇ ಬೇಕು. ಆ ಒಂದೊಂದು ಈಶ್ವರಾಕಾರಕ್ಕೂ ಕೋಟಿ ನಾಲಗೆಗಳಿದ್ದರೂ ಆ ಪಂಚಾಕ್ಷರಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ಆದಕ್ಕಾಗಿ ಇನ್ನೂ ಈಶ್ವರಾಕಾರಗಳು ವೃದ್ಧಿಹೊಂದುತ್ತಿವೆ. ಯೋಚಿಸಬೇಡ. ॥೧೬-೧೭॥

ಶಂಕರನು ಅನೇಕ ಕಲ್ಪಪರ್ಯಂತವಾಗಿ ಅನೇಕ ಆಕಾರಗಳನ್ನು ಪಡೆದು ಅನೇಕ ನಾಲಿಗೆಗಳಿಂದ ಪಂಚಾಕ್ಷರಮಹಿಮೆಯನ್ನು ವರ್ಣಿಸಿದರೂ ಮುಗಿಯಲಾರದು. ಆ ವಿಷಯವನ್ನು ಸುಲಭವಾಗಿ ವಿವರಿಸಲು ಜನನಿಯಾದ ಪಾರ್ವತಿಗೂ ಸಾಧ್ಯವಾಗದು. ॥೧೮॥

ತಸ್ಯ ಪಂಚಾಕ್ಷರಸ್ಯೈವ ಯಾನರ್ಥಾನಾಹ ಶಂಕರಃ ।
ತದರ್ಥವಿಗ್ರಹಾನ್ ಪಶ್ಯ ಕೋಟಿಶಃ ಸಮುಪಸ್ಥಿತಾನ್ ॥೧೯॥

ಏತೇಷಾಂ ಗಣನಾ ತಾವತ್ ಕರ್ತುಮೇವ ನ ಶಕ್ಯತೇ ।
ಪುನಃಪುನರ್ಭವಂತ್ಯೇವ ಕೋಟಿಶಸ್ತೇ ಕ್ಷಣೇ ಕ್ಷಣೇ ॥೨೦॥

ದೃಷ್ಟಃ ಕಿಲಾಯುವಾಸಂದಸ್ತದಾಲೋಕನಮಾತ್ರತಃ ।
ಆನಂದವಿಗ್ರಹಾನ್ ಪಶ್ಯ ಶಂಕರಸ್ಯ ಮಹಾತ್ಮನಃ ॥೨೧॥

ತದಿದಂ ಕೌತುಕಂ ಲೋಕೇ ನ ಕೇನಾಪ್ಯವಲೋಕಿತಂ ।
ಶಂಕರಾನುಗ್ರಹೇಣೈವ ಮಯಾ ದೃಷ್ಟಂ ತ್ವಯಾಪಿ ತತ್ ॥೨೨॥

ಅಪೂರ್ವಾ ಖಲು ಸಾ ಸೃಷ್ಟಿರಷ್ಟಮೂರ್ತಿಕೃತಾ ಯತಃ ।
ವಿಲಕ್ಷಣೈವ ಲೋಕೇಭ್ಯಃ ಸರ್ವೇಭ್ಯೋಽಪೀತಿ ನಿಶ್ಚಿತಾಃ ॥೨೩॥

ಭಾಗ್ಯಾನಾಂ ಪರಿಪಾಕೋಽಯಂ ಪುಣ್ಯಾನಾಮಪಿ ಕೋಟಿಶಃ ।
ಕಿಮುತೋಽಪ್ಯಧಿಕಂ ಭಾಗ್ಯಂ ಭಾಗ್ಯೋತ್ತಮಮಿತಿ ಸ್ಮೃತಂ ॥೨೪॥

---

ಪರಶಿವನು ಆ ಪಂಚಾಕ್ಷರಾರ್ಥವಿವರಣೆಗಾಗಿಯೇ ಹೀಗೆ ಕೋಟಿಸಂಖ್ಯೆಯಲ್ಲಿ ತನ್ನ ಆಕಾರವನ್ನು ಹೆಚ್ಚಿಸಿಕೊಂಡಿರುವನು. ಇವರನ್ನು ಎಣಿಸುವುದೇ ಸಾಧ್ಯವಿಲ್ಲವಾಗಿದೆ. ಇಷ್ಟಕ್ಕೇ ನಿಲ್ಲದೆ ಇದು ಮತ್ತೂ ಮತ್ತೂ ವೃದ್ಧಿಹೊಂದುತ್ತಿರುವುದು. ನೋಡು. ॥೧೯-೨೦॥

ಈ ಈಶ್ವರಮೂರ್ತಿಗಳನ್ನು ನೋಡುವುದರಿಂದಲೇ ನಮಗೆ ಅಸದೃಶವಾದ ಆನಂದವುಂಟಾಗುತ್ತಿದೆ. ಇಷ್ಟು ಅಸಂಖ್ಯಾತವಾದ ಶಿವಮೂರ್ತಿಗಳನ್ನು ಏಕಕಾಲದಲ್ಲಿ ದರ್ಶನಮಾಡಲು ಯಾರಿಂದತಾನೆ ಸಾಧ್ಯವಾದೀತು ? ಈ ಭಾಗ್ಯವು ನಮ್ಮಿಬ್ಬರಿಗೂ ಈಶ್ವರಾನುಗ್ರಹದಿಂದಲೇ ಲಭಿಸುವುದರಲ್ಲಿ ಸಂದೇಹವಿಲ್ಲ. ॥೨೧-೨೨॥

ಈಶ್ವರನ ಮನೋನಿರ್ಮಿತವಾದ ಸೃಷ್ಟಿಯು ಲೋಕೋತ್ತರವಾದುದು. ಸಕಲ ಲೋಕನಿರ್ಮಾಣಗಳ ವೈಚಿತ್ರ್ಯಕ್ಕಿಂತಲೂ ಇದು ಆಶ್ಚರ್ಯಕರವೆನಿಸಿರುವುದು. ನಮ್ಮ ಅನೇಕ ಸುಕೃತಗಳ ಮತ್ತು ಪುಣ್ಯಕರ್ಮಗಳ ಪರಿಣಾಮವಾಗಿ ಇಂತಹ ಈಶ್ವರಮೂರ್ತಿದರ್ಶನಭಾಗ್ಯವು ಈಗ ನಮಗೆ ಲಭಿಸಿದೆ. ॥೨೩-೨೪॥

ಇತಿ ತದ್ವಚನಂ ಶ್ರುತ್ವಾ ಸ್ಕಂದಸ್ಸಂತುಷ್ಟಮಾನಸಃ ।
ದೃಷ್ಟ್ವಾ ಪುನಃ ಪುನಃ ಸಾಂಬಂ ಪ್ರಾಪಾನಂಧಮಹೋದಧಿಂ ॥೨೫॥

ಬ್ರಹ್ಮಕಲ್ಪೇಷ್ವಪಾರೇಷು ಗತೇಷು ತದನಂತರಂ ।
ನಂದೀಶಃ ಸ್ಕಂದಪಾದಾಬ್ಜಂ ಸಸ್ಮಾರ ಪ್ರೀತಿಪೂರ್ವಕಂ ॥೨೬॥

ಸ ಭಕ್ತವತ್ಸಲಸ್ತಾವನ್ನಂದಿಕೇಶೇನ ಸ ಸ್ಮೃತಃ ।
ಸ ಚ ಕೇನ ಸಹೋವಾಚ ಕಿಮಿತ್ಯಾಶ್ಚರ್ಯಮಾವಹತ್ ॥೨೭॥

ಸ್ಮೃತಃ ಕಿಮರ್ಥಮಧುನಾ ಕಿಂ ವಾ ಕಾರ್ಯಮುಪಸ್ಥಿತಂ ।
ಆನಂದಾಂಬೋಧಿಕಲ್ಲೋಲಲೋಲೋಹಂ ಹಿ ವದಾಧುನಾ ॥೨೮॥

॥ ನಂದಿಕೇಶ್ವರ ಉವಾಚ ॥

ಅತೀತಬ್ರಹ್ಮಕಲ್ಪಾನಾಂ ಗಣನಾಪಿ ನ ಸರ್ವಥಾ ।
ನ ಜಾತಮೇವ ಸಹಸಾ ತ್ವತ್ಪಾದಾಂಬುಜದರ್ಶನಂ ॥೨೯॥

ವ್ಯರ್ಥಃ ಸರ್ವೋ ಗತಃ ಕಾಲೋ ನ ಶ್ರುತಾ ಶಾಂಭವೀ ಕಥಾ ।
ತತಸ್ತ್ವನ್ಮುಖಮಾಲೋಕ್ಯ ಜೀವತ್ಯೈವ ಸ್ಥಿತಂ ಮಯಾ ॥೩೦॥

---

ಎಂದು ಲಂಬೋದರನು ಸ್ಕಂದನಿಗೆ ನಿಜಸ್ಥಿತಿಯನ್ನು ಹೇಳಲು, ಸ್ಕಂದ ಸ್ವಾಮಿಯು ಆಶ್ಚರ್ಯಾವಿಷ್ಟನಾಗಿ ಮತ್ತೆ ಮತ್ತೆ ಆನಂದಸಿಧಿಯಾದ ಮಹೇಶ್ವರನನ್ನೇ ನೋಡುತ್ತಾ ಸ್ತಬ್ಧನಾಗಿ ನಿಂತುಬಿಟ್ಟನು. ಹೀಗೆಯೇ ಇರುವಾಗ ಅನೇಕ ಬ್ರಹ್ಮ ಕಲ್ಪಗಳು ಕಳೆದುಹೋದವು. ಆಗ ಒಂದುಸಾರಿ ನಂದೀಶ್ವರನು ಸ್ಕಂದನ ಪಾದ ಕಮಲವನ್ನು ಧ್ಯಾನಿಸುತ್ತಾ ಕುಮಾರಸ್ವಾಮಿಯನ್ನು ಸ್ಮರಿಸಿಕೊಂಡನು. ॥೨೫-೨೬॥

ಭಕ್ತವತ್ಸಲನಾದ ಸ್ಕಂದನು ನಂದಿಕೇಶನಿಂದ ಪ್ರಾರ್ಥಿಸಲ್ಪಟ್ಟು, "ಎಲೈ ನಂದಿಕೇಶನೇ, ನನ್ನನ್ನು ಸ್ಮರಿಸಿಕೊಳ್ಳಲು ಕಾರಣವೇನು ? ನನ್ನಿಂದಾಗಬೇಕಾದ ಕಾರ್ಯವಾವುದು ? ಈಗ ನಾನು ಆನಂದಾಂಭೋನಿಧಿಯಲ್ಲಿ ಮಗ್ನನಾಗಿ ಕಾರ್ಯಾ ಕಾರ್ಯವಿಚಾರತತ್ಪರನಾಗದೇ ಅಚ್ಚರಿಯಿಂದ ಕೂಡಿರುವೆನು." ॥೨೭-೨೮॥

ಎಂದು ಸ್ಕಂದಸ್ವಾಮಿಯು ಹೇಳಿದ್ದನ್ನು ಕೇಳಿ ನಂದಿಕೇಶ್ವರನು, "ಸ್ವಾಮಿಯೇ ಅನೇಕ ಬ್ರಹ್ಮಕಲ್ಪಗಳು ಕಳೆದುಹೋದರೂ, ಕಾಲದ ಅರಿವಿಲ್ಲದೇ

ತ್ವನ್ಮುಖಾಲೋಕನಾಭಾವೇ ಮೃತಕಲ್ಪಮಿದಂ ವಪುಃ ।
ಜೀವನಂ ಮೇ ಕಥಂ ವಾ ಸ್ಯಾತ್ಕಿಂ ನ ಜ್ಞಾತಮಿದಂ ತ್ವಯಾ ॥೩೧॥

ಭಕ್ತವತ್ಸಲತಾ ಕ್ವತ್ಯಾ ತವ ಮಯ್ಯಪಿ ಯಾ ಸ್ಥಿತಃ ।
ಸ್ನೇಹಪ್ರವಾಹಃ ಸ ಗತಃ ಕಿಂ ವಿಧೇಯಮತಃ ಪರಂ ॥೩೨॥

ಮಹೇಶ್ವರಾಜ್ಞಯಾ ಲೋಕಾಃ ಪ್ರಭವಂತಿ ಪುನಃ ಪುನಃ ।
ಸ್ಥಿತಂ ಪ್ರಾಪ್ಯ ವಿನಶ್ಯಂತಿ ಸ್ವಸ್ವಕಾಲೇ ಯಥಾಕ್ರಮಂ ॥೩೩॥

ಶಿವಲೀಲಾಪ್ರಸಾರೋ ಯಃ ಸ ಸೃಷ್ಟ್ಯಾದೀನ್ ಕರೋತ್ಯತಃ ।
ನ ತತ್ರ ಭಾರಃ ಕಸ್ಯಾಪಿ ನ ವಿಚಾರೋಪಿ ತತ್ರ ಹಿ ॥೩೪॥

ಗಣಾನಾಮಪಿ ಸರ್ವೇಷಾಂ ತ್ವದ್ದರ್ಶನಮಪೇಕ್ಷಿತಂ ।
ಮಹೇಶದರ್ಶನಾಕಾಂಕ್ಷಾ ಜಾತಾಪಿ ವಿಫಲೈವ ಸಾ ॥೩೫॥

---

ನೀನು ಹೀಗೆ ನಿಂತಿರುವೆ. ನನಗೂ ಸಹ ನಿನ್ನ ಪಾದಕಮಲಗಳ ದರ್ಶನವು ಲಭಿಸದೆ, ಆ ಕಾಲವೆಲ್ಲಾ ವ್ಯರ್ಥವಾಗಿ ಕಳೆದುಹೋಯಿತು. ನಿನ್ನ ಮುಖಾರವಿಂದದಿಂದ ಈಶ್ವರಕಥಾಲೇಶವನ್ನೂ ನಾನು ಕೇಳಿ ಧನ್ಯನಾಗಲಿಲ್ಲ. ಈಗ ನಿನ್ನನ್ನು ನೋಡಿ ನನಗೆ ಗತಜೀವನವು ಮತ್ತೆ ಬಂದಂತಾಯಿತು. ॥೨೯-೩೦॥

ಎಲೈ ದೇವದೇವನೇ, ನಿನ್ನ ಮುಖದರ್ಶನವಿಲ್ಲದಿದ್ದರೆ ಈ ನನ್ನ ದೇಹವು ಮೃತಪ್ರಾಯವೆಂದೇ ತಿಳಿಯುವೆನು. ಹಾಗಿರುವಾಗ ನನ್ನ ಜೀವನದ ಪಾಡೇನು? ಎಂಬುದನ್ನು ನೀನು ಅರಿಯದೇಹೋದೆಯಾ! ಭಕ್ತವತ್ಸಲನಾದ ನೀನು ನನ್ನ ಮೇಲಿಟ್ಟಿರುವ ಅತಿಶಯವಾತ್ಸಲ್ಯವೇ ಹೀಗಾದಮೇಲೆ ಮುಂದೆ ನಾನು ಮಾಡುವುದೇನು ಎಂಬುದೇ ನನಗೆ ಮುಖ್ಯಯೋಚನೆಯಾಗಿದೆ. ॥೩೧-೩೨॥

ಮಹೇಶ್ವರಾಜ್ಞೆಯಿಂದಲೇ ಸೃಷ್ಟವಾದ ಈ ಜಗತ್ತು ಅವನಿಂದಲೇ ರಕ್ಷಣೆಯನ್ನು ಪಡೆದು, ಹಾಗೆಯೇ ಸೃಷ್ಟವಾದ ರೀತಿಯಲ್ಲಿಯೇ ಲಯಹೊಂದುವುದು. ಈ ಸೃಷ್ಟಿ, ಸ್ಥಿತಿ, ಲಯಗಳನ್ನೂ ಈಶ್ವರಲೀಲೆಯೆಂದೇ ತಿಳಿಯಬೇಕು. ಇದರಲ್ಲಿ ಯಾರ ಕೈಚಳಕವಾಗಲಿ, ವಿಮರ್ಶೆಯಾಗಲಿ ನಡೆಯಲಾರದು. ॥೩೩-೩೪॥

ಸಕಲಗಣಗಳೂ ನಿನ್ನ ದರ್ಶನಕ್ಕಾಗಿಯೇ ಹಾತೊರೆಯುತ್ತಿರುವುವು. ನಿನ್ನ ದರ್ಶನವಿಲ್ಲದೆ ಈಶ್ವರದರ್ಶನವನ್ನು ಅಪೇಕ್ಷಿಸುವುದೇ ವ್ಯರ್ಥವೆನಿಸುವುದು.

ಕ್ವ ಮಹೇಶಪದಾಂಭೋಜಾಲೋಕನಂ ಸುಕೃತೈರ್ವಿನಾ ।
ಕ್ವ ತಾದೃಶಾನಿ ಪುಣ್ಯಾನಿ ರಾಶೀಭೂತಾನಿ ಕೋಟಿಶಃ ॥೩೬॥

ತವಾಪಿ ದರ್ಶನಂ ತಾವದಸ್ಮಾಕಮಪಿ ದುರ್ಲಭಂ ।
ಅದ್ಯ ಸ್ನೇಹವಶಾದೇವ ಕಾರಿತಂ ತತ್ಷಡಾನನ ॥೩೭॥

ಇತಿ ತದ್ವಚನಂ ಶ್ರುತ್ವಾ ಘನಗಂಭೀರಯಾ ಗಿರಾ ।
ಪ್ರಾಹ ಸ್ಕಂದಸ್ತಮೇವಾದೌ ಕೃತ್ಯಮಸ್ತೀತಿ ಸಾದರಂ ॥೩೮॥

ಪಂಚಾಕ್ಷರಾರ್ಥಕಥನೇ ಗಿರಿಶಃ ಪ್ರವೃತ್ತಃ
ಸ್ವಾರ್ಧಾಂಗಭಾಗವಿನಿವಿಷ್ಟಶಿವಾಸಹಾಯಃ ।
ಧೃತ್ವಾಪ್ಯಪಾರಶಿವವಿಗ್ರಹಕೋಟಿಕೋಟಿ
ಜಿಹ್ವಾಂ ಗಣೋ ಗಣನಯಾಪಿ ವಿನಾ ತದರ್ಥಾನ್ ॥೩೯॥

ತದ್ದರ್ಶನಾನ್ನ ವಿರತಂ ಚ ಮನೋಽಧುನಾಪಿ
ನೂನಂ ತದರ್ಥಕಥನಾಮೃತವೃಷ್ಟಿಪೂರ್ಯೈಃ ।

---

ಮಹೇಶ್ವರ ದರ್ಶನಕ್ಕೆ ಸಹಾಯವಾಗುವಂತಹ ಅಸಂಖ್ಯಾತವಾದ ಪುಣ್ಯರಾಶಿಯನ್ನು ನಾವು ಸಂಪಾದಿಸಿರುವೆವೆ? ಅದನ್ನು ನಿನ್ನ ದರ್ಶನದಿಂದ ಈಗ ಹೊಂದಬೇಕಾಗಿದೆ. ॥೩೫-೩೬॥

ನಮಗೆ ನಿನ್ನ ದರ್ಶನವಾಗುವುದೂ ಕಷ್ಟವೇ. ಅತ್ಯಂತ ಸ್ನೇಹದ ಪರಿಣಾಮವಾಗಿ ನಿನ್ನ ದರ್ಶನವು ನನಗೆ ಈಗ ಲಭಿಸಿರುವುದು " ಎಂದು ಗಂಭೀರವಾದ ವಾಣಿಯಿಂದ ಹೇಳಿದ ನಂದಿಕೇಶ್ವರನ ಮಾತುಗಳನ್ನು ಕೇಳಿ ಕುಮಾರಸ್ವಾಮಿಯು " ಅಯ್ಯಾ ನಂದಿಯೇ, ನಿನ್ನಿಂದ ಆಗಬೇಕಾದ ಕಾರ್ಯವೊಂದಿರುವುದು " ಎಂದು ಹೇಳಿದನು. ॥೩೭-೩೮॥

" ನಂದೀಶ್ವರನೇ, ಅರ್ಧನಾರೀಶ್ವರನಾದ ಗಿರಿಶನು ಶಿವಪಂಚಾಕ್ಷರೀಮಂತ್ರದ ಅರ್ಥವನ್ನು ವಿವರಿಸಿ ಹೇಳಲು ಕೋಟಿ ಕೋಟಿ ಸಂಖ್ಯೆಯ ಆಕಾರವನ್ನು ಪಡೆದನು. ಅಗಣಿತವಾದ ನಾಲಿಗೆಗಳಿಂದ ಆ ವಿಷಯವನ್ನು ವಿವರಿಸಲು ಆರಂಭಿಸಿರುವನು. ॥೩೯॥

ಆ ಈಶ್ವರಾಕಾರಗಳ ದರ್ಶನದಿಂದ ನನ್ನ ಮನಸ್ಸು ದಣಿಯಲಿಲ್ಲ. ಆ ಅರ್ಥಶ್ರವಣದಿಂದ ನನ್ನ ಮನಸ್ಸು ಪರಿಪೂರ್ಣವಾಗಲಿಲ್ಲ. ಆಗಲೇ ನೀನು

ಪೂರ್ಣಂ ತಥಾಪಿ ಸಮುಪಾಗತನೇವ ತಾವತ್
ತ್ವಚ್ಚಿಂತನೇನ ಕಿಮಿತಿ ಸ್ಮೃತಮೇವಮದ್ಯ ॥೪೦॥

ತದರ್ಥಾಸ್ತ್ವಪಾರಾಸ್ತದರ್ಥಾವಬೋಧಾ
ಸ್ತತಶ್ಚಿತ್ತಮೇತನ್ನಿವೃತ್ತಂ ಕಥಂ ವಾ ।
ತ್ವಯಾ ಕೋಪಿ ವಿಘ್ನಃ ಕೃತಃ ಸೋಪಿ ಸದ್ಯೋ
ನ ಕಾಲೋಪಿ ವಾರ್ತಾ ವಿಶೇಷೋಪಿ ನಂದಿನ್ ॥೪೧॥

ಸುಧಾಪ್ರವಾಹಾಶ್ಚಲಿತಾಃ ಪ್ರಯಾಂತಿ
ತದರ್ಥರೂಪಾಃ ಸಹಸಾತಿವೃದ್ಧಾಃ।
ಸ ತೇ ಭವಂತ್ಯೇವ ತಥಾವಿಧಾಸ್ತೇ
ತೇ ನೂತನಾ ಏವ ಪುನಃ ಪುನರ್ಹಿ ॥೪೨॥

ಆನಂದಾಬ್ಧಿತರಂಗಸಂಗತಮಿದಂ ಚಿತ್ತಂ ಕಥಂ ವಾ ಭವೇ
ದಿತ್ಯೇವ ಪ್ರತಿಕಲ್ಪಮೀಶ್ವರಪದಾಂಭೋಜಾರ್ಚನೇ ಜೀವನಂ ।

---

ನನ್ನನ್ನು ಪ್ರಾರ್ಥನೆ ಮಾಡಿದ್ದರಿಂದ ನಿನ್ನ ಯೋಚನೆಯು ನನಗೆ ಬಂದು, ತೃಪ್ತಿಯಿಲ್ಲದೆ ನಿನ್ನೊಡನೆ ಮಾತನಾಡುತ್ತಿರುವೆನು. ॥೪೦॥

ಅದರ ಅರ್ಥವಾದರೊ, ಅಪಾರವಾದದ್ದು. ಅದನ್ನು ಗ್ರಹಿಸುವುದೇ ನನಗೆ ಕಷ್ಟವಾಗಿದೆ. ಮನಸ್ಸಿಗೆ ಅದನ್ನರಿಯುವ ಶಕ್ತಿಯೇ ನಿಂತುಹೋಗಿದೆ. ಹಾಗೆಯೇ ನಿಶ್ಚಲಮನಸ್ಸಿನಿಂದಿರುವಾಗ ವಿಘ್ನವು ನನಗೆ ನಿನ್ನಿಂದ ಉಂಟಾಯಿತು. ಆ ವಿಘ್ನ ಪರಿಹಾರಕ್ಕೆ ಇಷ್ಟುಕಾಲವು ಬೇಕಾಯಿತು. ಇಷ್ಟೇ, ಹೆಚ್ಚು ಸಮಾಚಾರವೇನೂ ಇಲ್ಲ. ॥೪೧॥

ಪಂಚಾಕ್ಷರಗಳ ಅರ್ಥವು ಅಮೃತಪ್ರವಾಹದಂತೆ ಹರಿಯುತ್ತಿದೆ. ಮತ್ತು ಅತಿಶಯವಾಗಿ ಬೆಳೆಯುತ್ತಿದೆ. ಬೆಳೆದಷ್ಟೇ ನಿಲ್ಲುವುದಿಲ್ಲ. ಯೋಚಿಸಿದರೆ ಮತ್ತೆ ಮತ್ತೆ ಹೊಸದಾಗಿಯೇ ತೋರಿಬರುವುದು. ಎಷ್ಟುಸಾರಿ ಕೇಳಿದರೂ ಜುಗುಪ್ಸೆ ಯಾಗುವಂತಿಲ್ಲ. ॥೪೨॥

ನಮ್ಮ ಮನಸ್ಸು ಸದಾ ಆನಂದಾಮೃತವಾರಿಧಿಯಲ್ಲಿ ಮುಳುಗಿ ವಿಹರಿಸಲಿ ಎಂಬ ಉದ್ದೇಶದಿಂದಲೇ ನಾನು ಅನೇಕ ಕಲ್ಪಪರ್ಯಂತವಾಗಿ ಈಶ್ವರಪಾದ ಪೂಜಾ ಸಕ್ತನಾಗಿ ಕಾಲಕಳೆದೆನು. ಅದರ ಫಲವೇ ಈಗ ನಾನಾರೀತಿಯಲ್ಲಿ ಶಿವಮೂರ್ತಿ

ನೀತಂ ತ್ವೈರಧುನಾ ಫಲಾನಿ ವಿವಿಧಾನ್ಯಾಶು ಪ್ರಜಾತಾನ್ಯಹೋ
ಜಾಯಂತ್ಯೇವ ಪುನಃ ಪುನರ್ನವಕಥಾಪೀಯೂಷಧಾರಾವೃತಾಃ॥೪೩॥

ಶೃಣು ಶೃಣು ಶೃಣು ತಾವತ್ತ್ವಾಂ ಧ್ವನಿಂ ಸಾವಧಾನಂ
ಶಿವವಚನವಿಲಾಸಃ ಸೋಽಯಮತ್ಯದ್ಭುತೋಽಭೂತ್ ।
ಪರಿಹರತಿ ಸ ಗಂಗಾತುಂಗಕಲ್ಲೋಲಮಾಲಾ
ವಿಲಸಿತಮಪಿ ನೂನಂ ಕಿಂ ವದಾಮೋ ವಿಚಿತ್ರಂ ॥೪೪॥

ಪಂಚಾಕ್ಷರಾರ್ಥಸಭಯಾ ಪರಿವೀತಮೇವ
ದಿಙ್ಮಂಡಲಂ ವಿಪುಲಮಾಶು ನಿಶಾ ನ ಸಂಧ್ಯಾ ।
ಜ್ಞಾತಾ ನ ತದ್ವದಧುನಾ ದಿನಧೀರಪೀತಿ
ಧೈರ್ಯಂ ಪ್ರವೃದ್ಧಮುಸಕೃತ್ಕಥಯಾ ತಥಾ ನೇ ॥೪೫॥

---

ದರ್ಶನ, ಪಂಚಾಕ್ಷರಮಹಿಮಾಶ್ರವಣ ಮುಂತಾದ ಪ್ರಯೋಜನವನ್ನುಂಟು ಮಾಡಿತು. ಇನ್ನುಮುಂದೆಯೂ ನಾನು ಹೊಸಹೊಸದಾದ ಕಥಾಮೃತವನ್ನು ಕೇಳುವ ಭಾಗ್ಯವೂ ಉಂಟಾಗುವಂತಿದೆ. ॥೪೩॥

ನಂದಿಯೇ ಕೇಳು. ಶಂಕರನ ಮುಖಾರವಿಂದಗಳಿಂದ ಬರುವ ಗಂಭೀರ ಧ್ವನಿಯನ್ನು ನಿದಾನವಾಗಿ ಕೇಳು. ಮತ್ತೂ ಕೇಳು. ಶಿವವಚನವಿಲಾಸವು ಎಷ್ಟು ಆಶ್ಚರ್ಯವಾಗಿದೆಯೆಂಬುದನ್ನು ತಿಳಿದುಕೋ. ಆ ಗಂಭೀರಧ್ವನಿಯು ಗಂಗಾ ನದಿಯ ಅಲೆಗಳ ಮೊರೆತವನ್ನು ಸಹ ತಿರಸ್ಕರಿಸುತ್ತಿರುವುದು. ಇದನ್ನು ನಾವು ಎಂತಹ ಆಶ್ಚರ್ಯವೆಂದು ಭಾವಿಸೋಣ. ॥೪೪॥

ಪಂಚಾಕ್ಷರಾರ್ಥಶ್ರವಣದಿಂದ ನನಗೆ ದಿಕ್ಕೇ ತೋರದಂತಾಯಿತು. ಈ ಧ್ವನಿಯು ದಿಗಂತವನ್ನೆಲ್ಲಾ ವ್ಯಾಪಿಸಿತು. ನನಗಾದರೋ ರಾತ್ರಿ, ಹಗಲುಗಳ ಪರಿಜ್ಞಾನವೇ ಇಲ್ಲದಂತಾಯಿತು. ಇದು ಹಗಲೋ, ರಾತ್ರಿಯೋ ಎಂಬ ಸಂದೇಹ ವುಂಟಾಗಿದೆ. ನಿನ್ನ ದರ್ಶನವಾದಮೇಲೆ ನನಗೆ ಒಂದು ವಿಧವಾದ ಧೈರ್ಯ ವುಂಟಾಗಿದೆ. ॥೪೫॥

ಪಂಚಾಕ್ಷರಾರ್ಥಶ್ರವಣೇನ ತಾವತ್
ಗಾತ್ರಂ ಪವಿತ್ರಂ ಶ್ರವಣಾನಿ ತಾನಿ ।
ಪೂತಾನಿ ಸದ್ಯಃ ಸುಧಯಾಪಿ ಸಿಕ್ತಾ
ನ್ಯತಃಪರಂ ಕಿಂ ವದ ಕಾರ್ಯಮಸ್ತಿ ॥೪೬॥

ವಕ್ತಾ ಶಂಕರ ಏವ ಸಾಪಿ ಗಿರಿಜಾ ಶ್ರೋತುಂ ಪ್ರವೃತ್ತಾ ಮುದಾ
ತದ್ವ್ಯಾಖ್ಯಾನಸುಧಾರಸೈರವಿರಲೈಸ್ತೃಪ್ತಸ್ಸ ವಿಶ್ವೇಶ್ವರಃ ।
ತೃಪ್ತಾ ಸಾ ಗಿರಿರಾಜರಾಜತನಯಾ ಶ್ರೋತುಂ ಪುನರ್ವಾಂಛಯಾ
ಶಂಭುಂ ಪ್ರೇರಯತೀತಿ ನಾದ್ಭುತಮಿದಂ ವ್ಯಾಖ್ಯೇವ ಸಾ ತಾದೃಶೀ ॥೪೭॥

ಯಾ ಪೂರ್ವಂ ಕಥಿತಾ ಶಿವೇನ ಬಹುಧಾ ಯತ್ನೈಃ ಕದಾ ಸಾ ಕಥಾ
ಭಿನ್ನಾ ಸಾ ಮುಹುರೇವ ತತ್ಕಥನತೋ ನೇಶೋ ನಿವೃತ್ತಃ ಖಲು ।
ಕೋ ವಾ ತತ್ರ ರಸಃ ಶಿವಸ್ಯ ಬಹುಧಾ ವೃತ್ತಸ್ತದರ್ಥೈರಪಿ
ಪ್ರಾಪ್ತೈಸ್ತೈರ್ಮುಖರೀಕೃತಃ ಕರುಣಯಾ ಸೋಽಯಂ ವಿಲಾಸಃ ಪ್ರಭೋಃ
॥೪೮॥

---

ಈ ಪಂಚಾಕ್ಷರಾರ್ಥಶ್ರವಣದಿಂದ ನನ್ನ ದೇಹವು ಪರಿಶುದ್ಧವಾಯಿತು. ಕಿವಿಗಳು ಪವಿತ್ರವಾದವು. ದೇಹವೆಲ್ಲಾ ಅಮೃತಸಿಕ್ತವಾದಂತಾಯಿತು. ಇದಕ್ಕಿಂತಲೂ ಹೆಚ್ಚಾಗಿ ದೊರಕಬೇಕಾದ ಸುಖವಾವುದು ? ॥೪೬॥

ಪಂಚಾಕ್ಷರಾರ್ಥವನ್ನು ವಿವರಿಸುವವನು ಶಂಕರನು. ಕೇಳುವ ಕುತೂಹಲದಿಂದಿರುವವಳು ಪಾರ್ವತಿಯು. ಹೀಗೆ ಹೇಳುವ ಮತ್ತು ಕೇಳುವ ಕಾರ್ಯಗಳಿಂದ ತೃಪ್ತರಾಗಿ ಪಾರ್ವತೀಪರಮೇಶ್ವರರು ಆನಂದಪಡುತ್ತಿರುವರು. ಎಷ್ಟು ಹೇಳುತ್ತಿದ್ದರೂ ಇನ್ನೂ ಹೇಳಬೇಕೆಂದು ಪ್ರೇರಿಸುವ ಪಾರ್ವತಿಯ ಕುತೂಹಲವನ್ನೂ ಕೇಳಬೇಕೆಂದು ತೋರಿಸುವ ಪಾರ್ವತಿಯ ಆಸಕ್ತಿಯನ್ನೂ, ಕೇಳಿದಂತೆಲ್ಲಾ ವಿವರಿಸುವ ಸ್ವಾಮಿಯ ಸಾಮರ್ಥ್ಯವನ್ನೂ ನೋಡಿದರೆ, ಪಂಚಾಕ್ಷರವ್ಯಾಖ್ಯಾನದ ಮಹಿಮೆಯು ಎಷ್ಟೆಂದು ತಿಳಿಯುವುದು. ॥೪೭॥

ಒಂದುಸಾರಿ ಶಂಕರನು ಹೇಳಿದ ಅರ್ಥವನ್ನೇ ಮತ್ತೆ ವಿವರಿಸುತ್ತಾ ಹೋದರೆ ಅದು ಹೊಸದಾಗಿಯೇ ಕಂಡುಬರುವುದು. ಅದನ್ನು ನಾವು ತಿಳಿದುಕೊಳ್ಳುವುದೇ ಕಷ್ಟವಾಗುವುದು. ನಾನಾರೀತಿಯಲ್ಲಿ ವಿಧವಿಧವಾದ ಆಕಾರಗಳಿಂದ

ಪುನಃಪುನರ್ನೂತನಮರ್ಥಮುಕ್ತ್ವಾ
ಹೃಷ್ಟೋ ಭವತ್ಯೇವ ಸದಾಶಿವೋಽಪಿ ।
ತದರ್ಥಮೂರ್ತಿಂ ಚ ಪುನಃ ಸ ದೃಷ್ಟ್ವಾ
ಪ್ರದರ್ಶಯತ್ಯೇವ ಸದಾಶಿವಾಯೈ ॥೪೯॥

ಅತಃ ಪರಂ ಶಂಕರಸನ್ನಿಧಾನೇ
ಸ್ಥೇಯಂ ಸದಾ ಸಾದರಮಿತ್ಯುದೀರ್ಯ ।
ಸ್ಕಂದೋ ಗತೋಽತಿತ್ವರಯಾ ತದಾನೀಂ
ನಂದೀ ಪರಂ ವಿಸ್ಮಯಮಾಪ ನೂನಂ ॥೫೦॥

ತತಃ ಪರಂ ನಂದಿಕೇಶೋ ಭೃಂಗಿಪ್ರಭೃತಿಭಿರ್ಗಣೈಃ ।
ಸಹೈಕತ್ರ ಸಭಾಂ ಕೃತ್ವಾ ಕೈಲಾಸದ್ವಾರಮಾಶ್ರಿತಃ ॥೫೧॥

ತತಃ ಪಂಚಾಕ್ಷರಸ್ಯೈವ ಮುಹುರ್ವ್ಯಾಖ್ಯಾನಕೌಶಲಂ ।
ವ್ಯಾಜಹಾರ ಮಹೇಶಸ್ಯ ಜಹಾರ ಚ ರುಜಂ ಸ್ಥಿರಾಂ ॥೫೨॥

---

ಕಂಡುಬರುವ ಶಂಕರನ ಲೀಲೆಯು ಹೀಗೆ ಧ್ವನಿಗೊಡುತ್ತಿರುವಾಗ ಅದನ್ನು ಕೇಳಿ ಆನಂದಪಡುವ ನಾವು ಶಂಕರನ ವಿಲಾಸವನ್ನು ಯಾವರೀತಿ ಹೊಗಳುವುದು ? ॥೪೮॥

ಸದಾಶಿವನು ಮತ್ತೆ ಮತ್ತೆ ಹೊಸ ಹೊಸ ಪಂಚಾಕ್ಷರಾರ್ಥಗಳನ್ನು ವಿವರಿಸುತ್ತಾ, ತದರ್ಥಬೋಧಕವಾದ ಮೂರ್ತಿಗಳನ್ನು ಪಾರ್ವತಿಗೆ ತೋರಿಸುವನು. ಅದನ್ನು ನೋಡಿ ದೇವಿಯು ಹರ್ಷಚಿತ್ತಳಾಗುವಳು. ॥೪೯॥

ಇದೇ ರೀತಿ ಶಂಕರನ ಸನ್ನಿಧಿಯಲ್ಲಿ ಪಂಚಾಕ್ಷರಮಂತ್ರವ್ಯಾಖ್ಯಾನವು ನಡೆಯುತ್ತಿರುವುದು. ನಾನು ಅದನ್ನು ಬಿಟ್ಟು ಇಲ್ಲಿರಲು ಸಾಧ್ಯವಿಲ್ಲ. ಜಾಗ್ರತೆ ಶಂಕರನ ಸಾನ್ನಿಧ್ಯಕ್ಕೆ ಹೋಗಲೇಬೇಕು." ಎಂದು ಹೇಳಿ ಕುಮಾರಸ್ವಾಮಿಯು ಹೊರಟು ಹೋಗಲು, ನಂದೀಶ್ವರನು ಆಶ್ಚರ್ಯದಿಂದ ಮೌನವನ್ನು ತಾಳಿದನು. ॥೫೦॥

ಅನಂತರ ನಂದಿಯು, ಭೃಂಗಿಯೇ ಮೊದಲಾದ ಗಣ ದೇವತೆಗಳೊಡಗೂಡಿ ಕೈಲಾಸ ಪರ್ವತದ ದ್ವಾರ ಪ್ರದೇಶದಲ್ಲಿ ಒಂದು ಸಭೆ ಸೇರಿಸಿ, ಅಲ್ಲಿ ನೆರೆದಿದ್ದ ಗಣ ವರ್ಗದವರಿಗೆಲ್ಲಾ ಕುಮಾರ ಸ್ವಾಮಿಯು ತನಗೆ ಹೇಳಿದ್ದ ಶಿವಪಂಚಾಕ್ಷರೀವ್ಯಾಖ್ಯಾನ

ತತಸ್ಸಸಾಗರಾಸ್ತತ್ರ ಬ್ರಹ್ಮನಾರಾಯಣಾದಯಃ ।
ಆಗತ್ಯ ನಂದಿಕೇಶಂ ತಂ ಪ್ರಣತಾಸ್ಸನ್ನತಾನನಾಃ ॥೫೩॥

ತಾನಾಗತಾಂತ್ಸಮಾಲೋಕ್ಯ ನಂದಿಕೇಶಃ ಶಿವವ್ರತಾನ್ ।
ನಾರಾಯಣಾದೀನಾಹಾದೌ ಕಿಮಾಗತಮಿಹೇತ್ಯಪಿ ॥೫೪॥

॥ ನಾರಾಯಣ ಉವಾಚ ॥

ಕಲ್ಪಾಂತೇ ಸೃಷ್ಟಿರದ್ಯಾಸೀದಸ್ಮಾಕಂ ಶಿವಲೀಲಯಾ ।
ಕಿಂ ನಃ ಕಾರ್ಯಮಕಾರ್ಯಂ ವಾ ತತ್ಸರ್ವಂ ವದ ತತ್ತ್ವತಃ ॥೫೫॥

ಮಹೇಶ್ವರಾಜ್ಞಯಾ ಲೋಕಾಃ ಸರ್ವೇ ಸೃಷ್ಟಾಃ ಸ್ಥಿತಾ ಅಪಿ ॥೫೬॥

ಅಸ್ಮಾಕಂ ಶಿವಸನ್ನಿಧಾನಮಧುನಾ ಸಂಭಾವಿತಂ ಕಿಂ ನ ವಾ
ಧುಂಡೇರ್ವಾ ಗಣನಾಯಕಸ್ಯ ಸಮಯಃ ಸ್ಕಂದಸ್ಯ ವಾ ಕಃ ಪ್ರಿಯಃ।
ಅತ್ರಾಭ್ಯಾಗಮನಂ ನಿವೇದಯತಿ ಯಃ ಕೃತ್ಯಂ ಚ ಯಸ್ಮಾದ್ಭವೇತ್
ತಂ ವಾ ಪ್ರೇರಯ ನಂದಿಕೇಶ್ವರ ಪರಂ ಕೃತ್ಯೈರ್ವಿಲಂಬೈರಲಂ ॥೫೭॥

---

ಮಾಡುತ್ತಿರುವ ಶಂಕರನ ಅದ್ಭುತ ಲೀಲೆಯನ್ನು ಸರ್ವರಿಗೂ ತಿಳಿಸಿದನು. ಮತ್ತು ಅದರಿಂದ ಅವರಿಗೆಲ್ಲಾ ಅತಿಶಯವಾದ ಆನಂದವುಂಟಾಗುವಂತೆ ಮಾಡಿದನು. ॥೫೧-೫೨॥

ಅನಂತರ ಬ್ರಹ್ಮ, ನಾರಾಯಣ ಸಮುದ್ರಗಳು, ಮೊದಲಾದ ದೇವತಾಶ್ರೇಷ್ಠರು ಅಲ್ಲಿಗೆ ಬಂದು, ನಂದಿಕೇಶ್ವರನಿಗೆ ವಂದಿಸಿ ನಿಂತುಕೊಂಡರು. ನಂದಿಕೇಶ್ವರನು ಹಾಗೆ ಬಂದ ಬ್ರಹ್ಮ, ವಿಷ್ಣು ಇವರನ್ನೂ ನೋಡಿ, ಕುಶಲ ಪ್ರಶ್ನೆಮಾಡುತ್ತಾ ಏತಕ್ಕಾಗಿ ಇಲ್ಲಿಗೆ ದಯೆಗೈದಿರಿ ಎಂದು ಪ್ರಶ್ನಿಸಿದನು. ॥೫೩-೫೪॥

ಶಿವಲೀಲೆಯಿಂದ ನಡೆಸಲ್ಪಡುವ ಸೃಷ್ಟಿ ಸ್ಥಿತ್ಯಾದಿಕಾರ್ಯಗಳು ನಮ್ಮಿಂದ ಶಿವಾಜ್ಞೆಯಂತೆ ನಡೆಸಲ್ಪಟ್ಟವು. ಇನ್ನು ಮುಂದೇನು ಮಾಡಬೇಕೆಂಬುದೇ ನಮಗೆ ತಿಳಿಯದಾಗಿದೆ. ಅಂತೂ ಸಕಲ ಲೋಕಗಳ ಸೃಷ್ಟಿ ಸ್ಥಿತಿಕಾರ್ಯಗಳು ಮಹೇಶ್ವರನ ಅಪ್ಪಣೆಯಂತೆ ನಡೆದಂತಾಯಿತು. ॥೫೫-೫೬॥

ನಂದೀಶ್ವರನೇ, ಇದನ್ನು ತಿಳಿಸಲು ನಾವು ಈಶ್ವರನ ಸಮೀಪವನ್ನು ಹೊಂದಬೇಕು. ಅದಕ್ಕಾಗಿ ಅಲ್ಲಿರುವ ಧುಂಡಿವಿನಾಯಕನಿಗಾಗಲಿ, ಕುಮಾರ

ತ್ವತ್ತಃ ಕೋಽಪಿ ಮಹೇಶ್ವರಸ್ಯ ಪರಮೋ ಭಕ್ತೋಽಪಿ ನಾಪ್ತಸ್ತ್ವಯಾ
ದೇವಾನಾಂ ನ ನಿಯಾಮಕೋಽಪಿ ಬಹುಧಾ ತತ್ಕಾರ್ಯಕರ್ತಾಪಿ ನ ।
ಸರ್ವಜ್ಞತ್ವಮುಮಾಸಹಾಯಚರಣಾಂಭೋಜಾರ್ಚನಾದ್ಯೈಸ್ತ್ವಯಾ
ಪ್ರಾಪ್ತಂ ಭಾಗ್ಯಮಿತೋಽಪಿ ನಾಧಿಕಮಿತಿ ಜ್ಞಾತಃ ಫಲೈಃ ಕೇವಲಂ ॥೫೮॥

ಇತಿ ತದ್ವಚನಂ ಶ್ರುತ್ವಾ ಯಥಾಪೂರ್ವಂ ಪ್ರಕಲ್ಪಿತಾನ್ ।
ನಾರಾಯಣಾದಿಕಾನ್ ದೃಷ್ಟ್ವಾ ಪ್ರಾಹ ನಂದೀ ಸವಿಸ್ಮಿತಃ ॥೫೯॥

॥ ನಂದಿಕೇಶ್ವರ ಉವಾಚ ॥

ಕಿಂ ಕಿಂ ಪುಣ್ಯಂ ಪುರಾ ಚೀರ್ಣಂ ಭವದ್ಭಿರಮರಾಃ ಪರಂ ।
ತದ್ವದಧ್ವಂ ವಿಚಾರೇಣ ಕುತೋ ವಾ ಸಮುಪಾಗತಂ ।೬೦॥

---

ಸ್ವಾಮಿಗಾಗಲಿ ನಾವು ಬಂದಿರುವ ವಿಷಯವನ್ನು ತಿಳಿಸುವವರಾರು ? ಅವರಿಂದ ನಮ್ಮ ಇಷ್ಟಾರ್ಥವನ್ನು ಜಾಗ್ರತೆಯಾಗಿ ಕೈಗೂಡಿಸು. ಜಾಗ್ರತೆಯಾಗಿ ನಮಗೆ ಶಿವ ಸಾಕ್ಷಾತ್ಕಾರವನ್ನು ಒದಗಿಸಿಕೊಡುವವನಾಗು ! ॥೫೭॥

ಪರಮೇಶ್ವರನಿಗೆ ನೀನು ಪರಮ ಭಕ್ತನು. ಮತ್ತು ಆಪ್ತನೂ ಆಗಿರುವೆ. ಆದರಿಂದಲೇ ನೀನು ಸಕಲದೇವತೆಗಳಿಗೂ, ಅವರು ಮಾಡುವ ಸಕಲ ಕಾರ್ಯಕ್ಕೂ ಒಡೆಯನೆನಿಸಿರುವೆ. ನೀನು ಸರ್ವಜ್ಞನೂ ಹೌದು. ಈ ಎಲ್ಲಾ ವಿಧವಾದ ಗುಣ ಗಳೂ, ಶಕ್ತಿಯೂ, ಪಾರ್ವತೀಪತಿಯಾದ ಶಂಕರನ ಪಾದಪದ್ಮಗಳ ಅರ್ಚನೆಯಿಂದ ಲ್ಲವೆ ನಿನಗೆ ಲಭಿಸಿರುವುದು ! ಆದಕ್ಕೆ ತಕ್ಕಂತೆ ನೀನು ಪರಶಿವನ ಆರಾಧನೆಯನ್ನೇ ಅಧಿಕ ಫಲವೆಂದು ನಂಬಿರುವೆ. ॥೫೮॥

ಹೀಗೆ ಶ್ಲಾಘಿಸಿದ ಬ್ರಹ್ಮ, ವಿಷ್ಣ್ವಾದಿಗಳ ಮಾತುಗಳನ್ನು ಕೇಳಿ ನಂದಿಯು ಮುಂದೆ ಹೇಳುವಂತೆ ಕೆಲವು ಮಾತುಗಳನ್ನಾಡಿದನು. ॥೫೯॥

" ಎಲೈ ದೇವತೆಗಳಿರಾ, ನೀವೇ ಪುಣ್ಯಶಾಲಿಗಳು. ಯಾವ ಯಾವ ಪುಣ್ಯಗ ಳನ್ನು ಆಚರಿಸಿ ನೀವು ಇಲ್ಲಿಗೆ ಬಂದಿರುವಿರಿ ? ಅದನ್ನು ಮೊದಲು ವಿಚಾರಮಾಡಿರಿ ಮತ್ತು ಯಾವ ಉದ್ದೇಶದಿಂದ ಈಗ ನೀವು ಇಲ್ಲಿಗೆ ಆಗಮಿಸಿರುವಿರಿ ! ॥೬೦॥

‖ ದೇವಾ ಊಚುಃ ‖

ಸ್ಥಿತಮಸ್ಮಾಭಿರನಿಶಂ ಶ್ರೀಶೈಲಾಪಾರಕಂಧರೇ ।
ತತ್ಕಂದರೇತಿವಿಸ್ತೀರ್ಣೇ ಮನೋಜ್ಞಕದಲೀವನಂ ‖೬೧‖

ತಿಷ್ಠಂತ್ಯಂಬುಜವೀತಾನಿ ಸಂತ್ಯಪಾರಸರಾಂಸ್ಯಪಿ ।
ನ ತತ್ರ ಸೂರ್ಯಸಂಚಾರಶ್ಚಂದ್ರಸ್ಯಾಪಿ ನ ರಶ್ಮಯಃ ‖೬೨‖

ಅತ್ಯುಚ್ಚಬಿಲ್ವತರವಸ್ಸಂತಿ ತತ್ರ ಮನೋಹರಾಃ ।
ಮಂದರಾದ್ಯಾಶ್ಚ ತರವಃ ಸಂತಿ ತತ್ರ ಮನೋಹರಾಃ ‖೬೩‖

ತತ್ರ ಸರ್ವರ್ತುಪುಷ್ಪಾಣಿ ಸರ್ವದಾ ಸಂತಿ ಕೋಟಿಶಃ ।
ತತ್ರೈವಾಮೃತಕುಲ್ಯಾಶ್ಚ ಸಂತಿ ರಮ್ಯಾಸ್ಸಹಸ್ರಶಃ ‖೬೪‖

ತತ್ರಾಸ್ತಿ ಲಿಂಗಮುತ್ಕೃಷ್ಟಂ ತ್ರಿಪುರಾಂತಕನಾಮಕಂ ।
ತತ್ರಾಸ್ತಿ ರತ್ನಪ್ರಾಸಾದೋ ರತ್ನಮಂದಿರಮಂಡಿತಃ ‖೬೫‖

ತದ್ರತ್ನಕಾಂತಿಭಿಸ್ಸರ್ವಂ ತದಾಲೋಕಸಮನ್ವಿತಂ ।
ನ ಚ ಲೋಕಾಂತರಾಪೇಕ್ಷಾ ತತ್ರತ್ಯಾನಾಂ ಮಹಾತ್ಮನಾಂ ‖೬೬‖

---

ಎಂದು ನಂದೀಶ್ವರನು ಕೇಳಿದ ಪ್ರಶ್ನೆಗೆ ದೇವತೆಗಳು “ ನಂದಿಯೇ ನಾವು ಇಲ್ಲಿನವರೆಗೂ ಶ್ರೀಶೈಲದ ಅಪಾರವಾದ ತಪ್ಪಲು ಪ್ರದೇಶ (ಗುಹಾಭಾಗ) ದಲ್ಲಿ ನಿಂತಿದ್ದೆವು. ಅದು ಮನೋಹರವಾದ ಬಾಳೆಗಿಡಗಳಿಂದಲೂ, ಕಮಲ ಸುಮಭರಿತ ವಾದ ಸರೋವರಗಳಿಂದಲೂ ನಿಬಿಡವಾಗಿದ್ದು, ಸೂರ್ಯ ಚಂದ್ರರ ಕಿರಣಗಳ ಪ್ರವೇಶಕ್ಕೂ ಅಡ್ಡಿಯಾಗಿರುವುದು. ‖೬೧-೬೨‖

ಅಲ್ಲಿ ದೊಡ್ಡ ದೊಡ್ಡ ಬಿಲ್ವವೃಕ್ಷಗಳೂ, ಮಂದಾರವೇ ಮೊದಲಾದ ದಿವ್ಯ ಪುಷ್ಪವೃಕ್ಷಗಳೂ, ಆರು ಋತುಗಳಲ್ಲಿಯೂ ಒಂದೇ ಸಮನಾಗಿ ಬಿಡುವ ಪುಷ್ಪಗಳೂ ನಯನ ಮನೋಹರಗಳಾಗಿರುವುವು. ಅಮೃತ ಭರಿತವಾದ ಸಣ್ಣ ಸಣ್ಣ ಕೊಳಗಳಂತೂ ಅಲ್ಲಿ ಲೆಕ್ಕವಿಲ್ಲದಷ್ಟಿವೆ. ‖೬೩-೬೪‖

ಅಲ್ಲಿಯೇ ತ್ರಿಪುರಾಂತಕವೆಂಬ ಹೆಸರುಳ್ಳ ಶಿವಲಿಂಗವೊಂದಿರುವುದು. ಆ ರತ್ನಮಯವಾದ ಗೃಹವು ಉಪ್ಪರಿಗೆಯೊಡನೆ ಮನೋಹರವಾಗಿರುವುದು. ಅದರಲ್ಲಿರುವ ರತ್ನಕಾಂತಿಗಳ ಪ್ರಸರದಿಂದ ಆ ಪ್ರದೇಶವೆಲ್ಲವೂ ಕಾಂತಿಮಯವಾಗಿ, ಅಲ್ಲಿ ನೆಲಸಿ

ತೇಷಾಂ ಪ್ರಭಾವಃ ಕೇನಾಪಿ ವಕ್ತುಮೇವ ನ ಶಕ್ಯತೇ ।
ಭಸ್ಮೋದ್ಧೂಲಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥೬೭॥

ರುದ್ರಾಕ್ಷಮಾಲಾಭರಣಾಶ್ಶಿವಪೂಜಾಪರಾಯಣಾಃ ।
ತತ್ರ ಪ್ರಲಯವಾರ್ತಾಪಿ ಸರ್ವಥಾ ನ ಶ್ರುತಾ ಖಲು ॥೬೮॥

ನ ತತ್ರ ಯಮಸಂಚಾರಃ ಪಾಪವಾರ್ತಾಪಿ ದೂರತಃ ।
ಶಿವಲಿಂಗಾರ್ಚನೇನೈವ ತತ್ರ ಸ್ಯಾತ್ಕಾಲಯಾಪನಂ ॥೬೯॥

ನಿತ್ಯಂ ಶ್ರೀಶೈಲನಾಥಸ್ಯ ವಿಹಾರಸ್ತತ್ರ ಜಾಯತೇ ।
ಸ ವಿಹಾರೋಽಪ್ಯನುಮಿತೋ ದಿವ್ಯೈಃ ಪರಿಮಲಾದಿಭಿಃ ॥೭೦॥

ಶ್ರೂಯಂತೇ ದಿವ್ಯಗಾನಾನಿ ಧ್ವನಯಸ್ತತ್ರ ಕೇವಲಂ ।
ಗಾಯಕಾಸ್ತು ನ ದೃಶ್ಯಂತೇ ನ ಚ ವೀಣಾದಯಸ್ತಥಾ ॥೭೧॥

ಪುಷ್ಪಾಸಾರಸ್ಸದಾ ತತ್ರ ಸರ್ವದಾ ಮಣಿದೀಪಕಾಃ ।
ಚಂದ್ರಮಂಡಲಸಂಕಾಶಂ ತಲ್ಲಿಂಗಮತಿಕೋಮಲಂ ॥೭೨॥

---

ರುವ ಮಹಾತ್ಮರಿಗೆ ಬೇರೆ ಲೋಕಗಳನ್ನೂ ನೋಡಬೇಕೆಂಬ ಅಪೇಕ್ಷೆಯೇ ಉಂಟಾಗು ವಂತಿಲ್ಲ. ॥೬೫-೬೬॥

ಅಲ್ಲಿ ನೆಲಸಿರುವ ಮಹಾತ್ಮರ ಮಹಿಮೆಯನ್ನು ವರ್ಣಿಸಲು ಸಾಧ್ಯವೇ ಇಲ್ಲ. ಅವರೆಲ್ಲರೂ ಭಸ್ಮ ಭೂಷಿತಾಂಗರಾಗಿ, ಭಸ್ಮತ್ರಿಪುಂಡ್ರಗಳಿಂದಲೂ, ರುದ್ರಾಕ್ಷ ಮಾಲೆ ಗಳಿಂದಲೂ ಶೋಭಿಸುತ್ತಾ, ಸರ್ವದಾ ಶಿವಪೂಜಾಸಕ್ತರಾಗಿರುವರು. ಆ ಪ್ರದೇಶಕ್ಕೆ ಪ್ರಲಯದ ಸೋಂಕೇ ಇರುವುದಿಲ್ಲ. ॥೬೭-೬೮॥

ಆ ಸ್ಥಳಕ್ಕೆ ಯಮನಿಗೆ ಪ್ರವೇಶವೇ ದೊರೆಯಲಾರದು. ಪಾಪಕಾರ್ಯ ಗಳ ಸಂಬಂಧವೇ ಇಲ್ಲದಿರುವಾಗ ಯಮಸಂಚಾರದ ಅವಶ್ಯಕತೆಯೇ ಅಲ್ಲಿ ಕಾಣುವು ದಿಲ್ಲ. ಅಲ್ಲಿನವರೆಲ್ಲ ಸರ್ವದಾ ಶಿವಲಿಂಗಾರ್ಚನೆಯಲ್ಲಿಯೇ ಮಗ್ನರಾಗಿ ಕಾಲ ಕಳೆಯುತ್ತಿರುವರು. ಅಲ್ಲಿ ಶ್ರೀಶೈಲೇಶ್ವರನ ಸಂಚಾರವು ದಿವ್ಯಸುಗಂಧಪ್ರಸರದಿಂದ ಊಹಿಸಲ್ಪಡುವುದು. ॥೬೯-೭೦॥

ಅಲ್ಲಿ ಗಾಯಕರೂ ಗಾನಸಾಧಕಗಳಾದ ವೀಣಾದಿಗಳೂ ಕಾಣದೆ, ಶ್ರಾವ್ಯ ವಾದ ಸಂಗೀತಧ್ವನಿಯು ಮಾತ್ರ ಕೇಳಿಬರುವುದು. ಆ ಶಿವಲಿಂಗದ ಸುತ್ತಲೂ

ಬಿಲ್ವಮಂದಾರಪುಷ್ಪೌಘೈಃ ಕ್ರಿಯತೇ? ತಸ್ಯ ಪೂಜನಂ ।
ತತ್ರಾಕಲ್ಪಿತದೀಪಾನಾಂ ಪ್ರಭಾಸ್ಸಂತಿ ಸಹಸ್ರಶಃ ॥೭೩॥

ತತ್ಪ್ರಭಾಕಂಧರವ್ಯಾಪ್ತಾ ಕೋಟಿಸೂರ್ಯಪ್ರಭಾ ಸಮಾ ।
ನ ತತ್ಪ್ರಭಾ ನಿಭಾ ಕಾಪಿ ಪ್ರಭಾತ್ವನ್ಯತ್ರ ದೃಶ್ಯತೇ ॥೭೪॥

ತತ್ರ ಯೇ ಶಾಂಭವಾಸ್ಸಂತಿ ಶಿವಪೂಜಾಪರಾಯಣಾಃ
ತದ್ಭೃತ್ಯಭೃತ್ಯಭೃತ್ಯಾಶ್ಚ ವಯಂ ತತ್ಸೇವಕಾಃ ಖಲು ॥೭೫॥

ಹಾರೋಪಹಾರಶೇಷೇಣ ತದ್ಭುಕ್ತ್ವೋರ್ವರಿತೇನ ಚ ।
ಅಸ್ಮದೀಯಶರೀರಾಣಾಂ ಪೋಷಣಂ ಪ್ರತಿವಾಸರಂ ॥೭೬॥

ಕಲ್ಪವೃಕ್ಷಸಮಾನೀತೈರುಪಹಾರಃ ಪ್ರಕಲ್ಪ್ಯತೇ ।
ಫಲಾದ್ಯೈರ್ವಿವಿಧೈರ್ಭಕ್ಷ್ಯೈಶ್ಯಂಕರಾಯಾನುವಾಸರಂ ॥೭೭॥

---

ಪುಷ್ಪಗಳ ರಾಶಿಯೂ, ಮಣಿಮಯವಾದ ದೀಪಗಳೂ ವಿರಾಜಿಸುವುವು. ಇದರಿಂದ ಶಿವಲಿಂಗವು ಚಂದ್ರಮಂಡಲದಂತೆ ಕೋಮಲವಾಗಿ ಪ್ರಕಾಶಿಸುತ್ತಿರುವುದು. ॥೭೧-೭೨॥

ಆ ಶಿವಲಿಂಗವು ಬಿಲ್ವ, ಮಂದಾರ, ಮುಂತಾದ ಪುಷ್ಪರಾಶಿಗಳಿಂದ ಸರ್ವದಾ ಪೂಜಿತವಾಗಿರುವುದು. ಆ ಶಿವಲಿಂಗದ ಮುಂದೆ ಇರಿಸಿರುವ ಮಣಿದೀಪಗಳ ಕಾಂತಿಯು ಆ ಗುಹಾಪ್ರದೇಶವನ್ನೆಲ್ಲಾ ಬೆಳಗಿಸುತ್ತಿರುವುದು. ತತ್ಸದೃಶವಾದ ಪ್ರಭೆಯೇ ಲೋಕದಲ್ಲಿ ಮತ್ತಾವುದೂ ಇರಲಾರದು. ॥೭೩-೭೪॥

ಅಲ್ಲಿ ಶಿವಾರ್ಚನೆಯಿಂದ ಜೀವಿಸುವ ಈಶ್ವರಭಕ್ತರಿಗೆ ದಾಸಾನುದಾಸರಾಗಿ ಸೇವಕರಂತೆ ನಾವು ಅವರನ್ನೇ ಅನುಸರಿಸಿಕೊಂಡಿರುವೆವು. ಅವರು ಕೊಟ್ಟ ಶಿವ ನೈವೇದ್ಯಶಿಷ್ಟವನ್ನೇ ಭುಂಜಿಸಿ ಪವಿತ್ರಗಾತ್ರರಾಗಿ ಪ್ರತಿದಿನವೂ ನಾವು ದೇಹ ಪೋಷಣೆಮಾಡಿಕೊಂಡಿರುವೆವು. ॥೭೫-೭೬॥

ಕಲ್ಪವೃಕ್ಷಗಳಿಂದ ತರಲ್ಪಟ್ಟ ಫಲಗಳೇ ಶಿವನಿಗೆ ಉಪಹಾರರೂಪವಾಗಿ ಸಮರ್ಪಿಸಲ್ಪಡುತ್ತವೆ. ಇನ್ನೂ ವಿವಿಧವಾದ ಹಣ್ಣುಗಳನ್ನೂ, ನಾನಾವಿಧವಾದ ಭಕ್ಷ್ಯ ಭೋಜ್ಯಾದಿಗಳನ್ನೂ ಶಂಕರನಿಗೆ ನಿತ್ಯವೂ ಅವರು ಸಮರ್ಪಿಸುವರು. ॥೭೭॥

ತದ್ಭುಕ್ತಭುಕ್ತಶೇಷಾಣಾಂ ಫಲಾಂಶೇನ ವಿಶೇಷತಃ ।
ಭಕ್ಷಣೇನೈವ ಪುಷ್ಟಾಶ್ಚ ದೇವಾಸ್ತ್ವಸ್ಮಾಕಮನ್ವಹಂ ॥೭೮॥

ತೈರ್ಯದಾ ಪೂಜ್ಯತೇ ಲಿಂಗಂ ತ್ರಿಪುರಾಂತಕಸಂಜ್ಞಿಕಂ ।
ಅಸ್ಮಾಭಿರ್ದೃಶ್ಯತೇ ದೂರಾತ್ತಾವದ್ಗಮನಮೇವ ನ ॥೭೯॥

ಪ್ರಜ್ವಲತ್ಪರ್ವತಾಕಾರಂ ತಲ್ಲಿಂಗಮತಿಶೋಭನಂ ।
ಮಹಾಸಿದ್ಧಗಣಸ್ತತ್ರ ಸರ್ವದಾ ಸಮುಪಸ್ಥಿತಃ ॥೮೦॥

ತತ್ರ ವತ್ಸರಪರ್ಯಂತಮೇಕೈಕಕದಲೀಫಲೈಃ ।
ತೃಪ್ತಿರ್ಭವತಿ ಸರ್ವೇಷಾಂ ದಿವ್ಯೈಶ್ಶಿವಸಮರ್ಪಿತೈಃ ॥೮೧॥

ಸುವರ್ಣವರ್ಣಮುತ್ಕೃಷ್ಟಂ ತನ್ಮಹತ್ಕದಲೀಫಲಂ ।
ಸಹಸ್ರತೃಪ್ತಿರೇಕೇನ ಫಲೇನೈವ ಪ್ರಜಾಯತೇ ॥೮೨॥

ದ್ರಾಕ್ಷಾಫಲಾನಿ ರಮ್ಯಾಣಿ ತಾದೃಶಾನ್ಯೇವ ತಾನ್ಯಪಿ ।
ಕಪಿತ್ಥಾನ್ಯಪಿ ತತ್ತುಲ್ಯಾನ್ಯಪಾರಾಣಿ ವನೇ ವನೇ ॥೮೩॥

---

ಶಿವನಿವೇದಿತವಾಗಿ ಅವರು ತಿಂದು ಉಳಿದಿರುವ ಫಲಭಾಗವನ್ನೇ ನಾವೂ ತಿಂದು ಜೀವಿಸುತ್ತಿರುವೆವು. ಅಲ್ಲಿರುವ ಭಕ್ತರು ತ್ರಿಪುರಾಂತಕಲಿಂಗವನ್ನು ಪೂಜಿಸಲು ಯಾವಾಗ ಆರಂಭಿಸುವರೋ, ಆಗ ನಾವು ನಮ್ಮ ಮುಂದಿನ ಪ್ರಯಾಣವನ್ನೇ ನಿಲ್ಲಿಸಿ, ಅಲ್ಲಿಯೇ ಅಂಜಲಿಬದ್ಧರಾಗಿ ದೂರದಲ್ಲಿ ನಿಲ್ಲುವೆವು. ಆ ಶಿವಲಿಂಗವಾದರೋ ಆಗ ಉರಿಯುವ ಪರ್ವತದಂತೆ ತೇಜಸ್ಸಿನಿಂದ ಪ್ರಜ್ವಲಿಸುವುದು. ಆಗ ಸಿದ್ಧಸಾಧ್ಯರೆಲ್ಲರೂ ಅಲ್ಲಿ ನೆರೆದು ಸದಾ ಶಿವಧ್ಯಾನಾಸಕ್ತರಾಗುವರು. ||೭೮-೭೯-೮೦||

ಅಲ್ಲಿ ಶಿವನಿಗೆ ನೈವೇದ್ಯವಾದ ಒಂದೊಂದು ಬಾಳೆಯ ಹಣ್ಣನ್ನು ತಿನ್ನುವುದರಿಂದಲೇ, ನಮಗೆ ಒಂದು ವರ್ಷಪರ್ಯಂತ ಆಹಾರವೇ ಬೇಕೆನಿಸುವುದಿಲ್ಲ. ಅಲ್ಲಿನ ಬಾಳೆಹಣ್ಣುಗಳು ಸುವರ್ಣದ ಬಣ್ಣದಂತೆ ಹೊಳೆಯುತ್ತಾ ಸಹಸ್ರಪ್ರಾಣಿಗಳಿಗೆ ಒಂದೇ ಒಂದು ಹಣ್ಣು ತೃಪ್ತಿಪಡಿಸುವಂತಿರುತ್ತದೆ. ||೮೧-೮೨||

ಅಲ್ಲಿ ಮನೋಹರವಾದ ದ್ರಾಕ್ಷಾಫಲಗಳೂ, ಅಷ್ಟೇ ಸುಂದರವಾಗಿರುವ ಬೇಲದಹಣ್ಣುಗಳೂ, ತತ್ಸದೃಶಗಳಾದ ಇತರ ಸ್ವಾದುಫಲಗಳೂ ವಿರಾಜಿಸುತ್ತಿರುವುವು.

ತಾದೃಶಂ ಭಾಗ್ಯಮನ್ಯತ್ರ ಭೂಲೋಕೇ ತು ನ ದೃಶ್ಯತೇ ।
ತದ್ವಿಹಾರಸ್ಥಲಂ ರಮ್ಯಮಪೂರ್ವಪರಿಕಲ್ಪಿತಂ ॥೮೪॥

ತಸ್ಮಿನ್ನೇವ ಗಿರೌ ರಮ್ಯಾಣ್ಯಪಾರಾಣಿ ಸ್ಥಲೇ ಸ್ಥಲೇ ।
ತಿಷ್ಠಂತ್ಯಾಲೋಕನಾದೇವ ಸರ್ವಪಾಪಹರಾಣ್ಯಪಿ ॥೮೫॥

ತಾನಿ ಸ್ವಯಂಭುಲಿಂಗಾನಿ ವಹ್ನಿಕಲ್ಪಾನಿ ಕೋಟಿಶಃ ।
ಕೋಟಿಶಸ್ಸಂತಿ ಕುಂಡಾನಿ ಸರ್ವಸಿದ್ಧಿಕರಾಣಿ ಚ ॥೮೬॥

ತತ್ರೈವ ಮತ್ತಮಾತಂಗಾಃ ಕೋಟಿಶಸ್ಸಂತಿ ತೈರಪಿ ।
ಐರಾವತಾವತಾರೈಸ್ತೈರ್ವ್ಯಾಪ್ತಂ ತದ್ಗಿರಿಕಾನನಂ ॥೮೭॥

ಪಾತಾಲವಾಹಿನೀ ಗಂಗಾ ತತ್ರ ತಿಷ್ಠತಿ ಶೋಭನಾ ।
ತದ್ವಿಲೋಕನಮಾತ್ರೇಣ ಪಾಪನಾಶಃ ಪ್ರಜಾಯತೇ ॥೮೮॥

ತತ್ರ ಸ್ನಾತ್ವಾ ಮಹಾದೇವಂ ಪೂಜಯನ್ ಬಿಲ್ವಪಲ್ಲವೈಃ ।
ಅಭೀಪ್ಸಿತಾರ್ಥಾನ್ ಲಭತೇ ತತ್ಕಿಲಾತ್ಯಂತದುರ್ಲಭಂ ॥೮೯॥

---

ಅಂತಹವುಗಳನ್ನು ಭೂಲೋಕದಲ್ಲಿ ನಾವು ಎಂದೂ ನೋಡಲಾರೆವು. ಆ ವಿಹಾರ ಸ್ಥಳವೂ ಹಾಗೆಯೇ ಅಪೂರ್ವವಾದ ಸೌಂದರ್ಯದಿಂದ ಕೂಡಿದ್ದಾಗಿರುತ್ತದೆ.॥೮೩-೮೪॥

ಅದೇ ಪರ್ವತದಲ್ಲಿ ಇನ್ನೂ ರಮಣೀಯಗಳಾದ ಅನೇಕ ಪವಿತ್ರಸ್ಥಳಗಳಿರುವುವು. ಅವುಗಳ ದರ್ಶನಮಾತ್ರದಿಂದಲೇ ನಮ್ಮ ಸಕಲ ಪಾಪಗಳೂ ಪರಿಹಾರವಾಗುವುವು. ಹಾಗೆಯೇ ಅಲ್ಲಿ ಅಗ್ನಿಸದೃಶಗಳಾದ ಕೋಟಿಸಂಖ್ಯೆಯ ಸ್ವಯಂ ಉದ್ಭವವಾದ ಶಿವಲಿಂಗಗಳು ಕಾಣುತ್ತಿರುವುವು. ॥೮೫-೮೬॥

ಅಲ್ಲಿಯೇ ಮದಿಸಿದ ಆನೆಗಳು ಐರಾವತಕ್ಕೆ ಸರಿಸಮಗಳೆನಿಸಿ, ಆ ಅರಣ್ಯದಲ್ಲೆಲ್ಲಾ ಸಂಚರಿಸುತ್ತಿರುವುವು. ಪಾತಾಳಲೋಕಕ್ಕೆ ಹರಿಯುವ ಗಂಗಾನದಿಯು ಅಲ್ಲಿಯೇ ಶಿವಜಟೆಯಿಂದ ಹರಿದುಬರುವುದು. ಅದರ ದರ್ಶನದಿಂದಲೇ ನಮ್ಮ ಸಕಲ ಪಾಪಗಳೂ ನಿವಾರಣೆಯಾಗುವುವು. ॥೮೭-೮೮॥

ಅದರಲ್ಲಿ ಸ್ನಾನಮಾಡಿ, ಈಶ್ವರಲಿಂಗವನ್ನು ಬಿಲ್ವಪಲ್ಲವಾದಿಗಳಿಂದ ಅರ್ಚಿಸಿದವರಿಗೆ ಸಕಲಾಭೀಷ್ಟಗಳೂ ಸಿದ್ಧಿಸುವುವು. ಆದರೆ ಆ ಸನ್ನಿವೇಶವು ಒದಗುವುದೇ

ತತ್ರತ್ಯಾಸ್ತು ಶಿಲಾಸ್ಸರ್ವಾಶ್ಶಿವಲಿಂಗಾನಿ ಕೇವಲಂ ।
ಗುಲ್ಮಾಣಿ ತರವಃ ಪತ್ರಾಣ್ಯಪಾರಾಣ್ಯಮಿತಾನ್ಯಪಿ ॥೯೦॥

ಭ್ರಮರಾಂಬಾ ವಿಶಾಲಾಕ್ಷೀ ಸಾ ಭವಾನೀ ಶಿವಾ ಶುಭಾ ।
ತತ್ರಾಸ್ತಿ ತತ್ಪದಾಂಭೋಜಪೂಜಯಾ ಭಾಗ್ಯಮಶ್ನುತೇ ॥೯೧॥

ಯಸ್ತಾಮಸಿತಭೂತಾಯಾಂ ಸಮಭ್ಯರ್ಚ್ಯ ಮಹಾನಿಶಿ ।
ಕುರ್ಯಾತ್ಪ್ರದಕ್ಷಿಣಂ ತಸ್ಯಾಸ್ಸಸಿದ್ಧಿಂ ಪ್ರಾಪ್ನುಯಾನ್ನರಃ ॥೯೨॥

ಅಸ್ಮಾಭಿರೇಕದಾ ದೇವೀ ಭೂತಾಯಾಂ ನಿಶಿ ವೀಕ್ಷಿತಾ ।
ಪ್ರದಕ್ಷಿಣೀಕೃತಾ ಸೈವ ಶತವಾರಂ ಪ್ರಯತ್ನತಃ ॥೯೩॥

ನಗ್ನೈರ್ವಿಭೂತಿಕವಚೈರ್ಜಟಾಮಂಡಲಮಂಡಿತೈಃ ।
ತದಾನೀಮಾಗತಾಸ್ತತ್ರ ಕೋಟಿಶೋ ಭೈರವಾಸ್ತದಾ ॥೯೪॥

---

ಕಷ್ಟ. ಅಲ್ಲಿರುವ ಶಿಲೆಗಳೆಲ್ಲಾ ಶಿವಲಿಂಗಗಳೇ. ಪ್ರತಿಪೊದರುಗಳೂ, ಮರಗಳೂ, ಶಿವಪೂಜಾಂಗವಾದ ಪತ್ರೆಗಳೇ ಆಗಿರುವುವು. ॥೮೯-೯೦॥

ಅಲ್ಲಿ ವಿಶಾಲವಾದ ನೇತ್ರಗಳುಳ್ಳ ಭವಾನೀದೇವಿಯು ಭ್ರಮರಾಂಬಾ ಎಂಬ ಹೆಸರಿನಿಂದ ನೆಲಸಿರುವಳು. ಆ ದೇವಿಯ ಪಾದಕಮಲಗಳ ಅರ್ಚನೆಯಿಂದ ಭಕ್ತನು ವಿಶೇಷವಾದ ಐಶ್ವರ್ಯವನ್ನು ಹೊಂದುವನು. ಮತ್ತು ಕೃಷ್ಣಪಕ್ಷದ ಚತುರ್ದಶಿಯ ಅರ್ಧ ರಾತ್ರಿಯ ವೇಳೆಯುಲ್ಲಿ ಯಾವನು ಆ ಭ್ರಮರಾಂಬಾದೇವಿಯನ್ನು ಭಕ್ತಿಯಿಂದರ್ಚಿಸಿ, ಪ್ರದಕ್ಷಿಣಾದಿಗಳಿಂದ ದೇವಿಯನ್ನು ತೃಪ್ತಿಪಡಿಸುವನೋ, ಆತನು ಸರ್ವಸಿದ್ಧಿಗಳನ್ನೂ ದೇವ್ಯನುಗ್ರಹದಿಂದ ಪಡೆಯುವನು. ॥೯೧-೯೨॥

ನಾವು ಒಂದುಸಾರಿ ಚತುರ್ದಶಿಯ ರಾತ್ರಿಯಲ್ಲಿ ದೇವಿಯನ್ನು ಭಕ್ತಿಯಿಂದರ್ಚಿಸಿ ನೂರು ಪ್ರದಕ್ಷಿಣೆಮಾಡಿದೆವು. ಆಗ ದಿಗಂಬರರಾಗಿ ವಿಭೂತಿಯಿಂದ ತುಂಬಿದ ದೇಹವುಳ್ಳ ಜಟಾಮಂಡಲಾಲಂಕೃತರಾದ ಕೋಟಿಸಂಖ್ಯೆಯ ಭೈರವದೇವತೆಗಳು ಒಟ್ಟಾಗಿ ಬಂದು ನೆರೆದರು. ॥೯೩-೯೪॥

ಏಕೈಕಃ ಪರ್ವತಾಕಾರೋ ಜ್ವಲತ್ಪರ್ವತಮುಸ್ತಕಃ ।
ಹಸ್ತೈರಪಾರೈರ್ಧೃತ್ವೈವ ವಹ್ನಿರೂಪಾನ್ನಗೋತ್ತಮಾನ್ ॥೯೫॥

ಸಿಂಹಾಸ್ಸಮಾಗತಾಸ್ತತ್ರ ತೇ ಹಿಮಾಚಲಸನ್ನಿಭಾಃ ।
ವ್ಯಾಘ್ರಾಸ್ಸಮಾಗತಾಸ್ತತ್ರ ಕಾಲಕೂಟವಿಷೋಪಮಾಃ ॥೯೬॥

ಸಹಸ್ರಜಿಹ್ವಾಸ್ಸರ್ಪಾಶ್ಚ ಕೋಟಿಶಸ್ಸಮುಪಾಗತಾಃ ।
ತದ್ದರ್ಶನಾತ್ಸಕಂಪೋಽಪಿ ಸಮಭೂದಚಲಸ್ತದಾ ॥೯೭॥

ತಸ್ಯಾನುವೃತ್ತಿರದ್ಯಾಪಿ ಶರೀರೇಷ್ವನುವರ್ತತೇ ।
ತದಾ ತದ್ದರ್ಶನಾದೇವ ಧೈರ್ಯಮಾಶು ವಿನಿರ್ಗತಂ ॥೯೮॥

ತೇ ಕೋಟಿಯೋಜನಾಯಾಮರಸನಾವ್ಯಾಪ್ತವಿಗ್ರಹಾಃ ।
ಜ್ವಾಲಮಾಲಾಸಮಾಕೀರ್ಣಪರ್ವತಾ ಇವ ಸಂಸ್ಥಿತಾಃ ॥೯೯॥

ತತಃ ಪರಂ ಕೃತಂ ಧೈರ್ಯಂ ಮರಣಾತ್ಕಿಂ ಭಯಂ ಭವೇತ್ ।
ಏತೇಭ್ಯ ಇತಿ ನಿಶ್ಚಿತ್ಯ ತತಸ್ತೇ ನಿರ್ಗತಾ ಅಪಿ ॥೧೦೦॥

---

ಅವರಲ್ಲಿ ಒಬ್ಬೊಬ್ಬರೂ ಪ್ರಜ್ವಲಿಸುವ ಶಿಖರಗಳಿಂದ ಕೂಡಿದ ಪರ್ವತದಂತೆ ಮಹಾಕೃತಿಯಿಂದಿದ್ದರು. ಅವರು ತಮ್ಮ ಕೈಗಳಲ್ಲಿ ಬೆಂಕಿಯಂತೆ ಉರಿಯುವ ಪರ್ವತಗಳನ್ನೇ ಹಿಡಿದು ಬಂದರು. ಒಡನೆಯೇ ಹಿಮಾಚಲದಂತೆ ಎತ್ತರವಾದಂತಹ ಸಿಂಹಗಳೂ, ಕಾಲಕೂಟ ವಿಷದಂತೆ ಕ್ರೂರಗಳಾದ ಹುಲಿಗಳೂ ಅಲ್ಲಿಗೆ ಬಂದು ಸೇರಿದವು. ॥೯೫-೯೬॥

ಸಾವಿರ ನಾಲಗೆಗಳುಳ್ಳ ಸರ್ಪಗಳು ಕೋಟಿ ಸಂಖ್ಯೆಯಲ್ಲಿ ಬಂದು ನೆರೆದವು. ಅವುಗಳನ್ನು ನೋಡಿದ್ದರಿಂದಲೇ ಪರ್ವತರಾಶಿಯೆಲ್ಲವೂ ಹೆದರಿ ನಡುಗಲಾರಂಭಿಸಿತು ಈಗಲೂ ಆ ಭಯವು ನಮ್ಮ ಶರೀರದಲ್ಲಿ ಕಂಡುಬರುತ್ತಿರುವುದು. ಆಗಲಂತೂ ನಮ್ಮ ಧೈರ್ಯವೆಲ್ಲವೂ ಅಲ್ಲಿಯೇ ಅಡಗಿ ಹೋಯಿತು. ॥೯೭-೯೮॥

ಆ ಸರ್ಪಗಳು ಕೋಟಿಯೋಜನದಷ್ಟಗಲ ತಮ್ಮ ನಾಲಗೆಗಳನ್ನು ಪ್ರಸರಿಸಿಕೊಂಡು, ಉರಿಯುವ ಬೆಂಕಿಯ ಮಾಲೆಯಿಂದ ಕೂಡಿದ ಪರ್ವತಗಳಂತೆ ಬಂದವು. ಅವುಗಳನ್ನು ನೋಡಿ ನಮಗೆ "ನಮ್ಮ ಪ್ರಾಣಗಳನ್ನು ಬಿಟ್ಟು ಮತ್ತೇನನ್ನು ಇವು ಕೊಂಡೊಯ್ದಾವು?" ಎಂಬ ಧೈರ್ಯಹುಟ್ಟಿತು. ಕಡೆಯಲ್ಲಿ ಅವು ನಮಗೇನೂ

ತತಃ ಪರಂ ಭವಾನೀ ಸಾ ದಿವ್ಯಸುಂದರವಿಗ್ರಹಾ ।
ಪ್ರಸನ್ನಾ ಪ್ರಾಹ ವಿಮಲಾ ಕಮಲಾಮಲಲೋಚನಾ ॥೧೦೧॥

ಯತ್ಸೌಂದರ್ಯಂ ತದಾ ದೃಷ್ಟಮಂಬಾಯಾಸ್ತತ್ಪರಂ ಭುವಿ ।
ನ ದೃಷ್ಟಂ ಕ್ವಾಪಿ ತತ್ತಾವತ್ಪ್ರಸನ್ನಮತಿಶೋಭನಂ ॥೧೦೨॥

ತದುದ್ವೀಕ್ಷಣಮಸ್ಮಾಕಮಶಕ್ಯಮಭವತ್ತದಾ ।
ತತ್ಪದಾಂಬುರುಹೇ ದತ್ತಂ ಸಚಿತ್ತಂ ನಯನಾಂಬುಜಂ ॥೧೦೩॥

ತತಃ ಕಾಪ್ಯಭವದ್ವಾಣೀ ನಭೋಮಂಡಲಮಧ್ಯತಃ ।
ಸಾ ಶ್ರುತಾ ದುಃಖನಾಶಾಯ ಸರ್ವಸೌಭಾಗ್ಯದಾಯಿನೀ ॥೧೦೪॥

ಕಿಮಪೇಕ್ಷಿತಮಸ್ತ್ಯತ್ರ ಭವತಾಂ ತದ್ವದಂತು ವಃ ।
ತದ್ಭವಿಷ್ಯತಿ ಸಂದೇಹೋ ನ ಕಾರ್ಯಸ್ಸರ್ವಥಾ ಖಲು ॥೧೦೫॥

---

ತೊಂದರೆಕೊಡದೆ ಹೊರಟುಹೋದವು. ಆದರೂ ನಮಗೆ ಭಯ ಮಾತ್ರ ತಪ್ಪಲಿಲ್ಲ. ॥೯೯-೧೦೦॥

ಅನಂತರ ದಿವ್ಯ ಸುಂದರ ವಿಗ್ರಹಳಾದ ದೇವಿಯು ಅಲ್ಲಿ ನಮಗೆ ಪ್ರತ್ಯಕ್ಷಳಾದಳು. ಆಗ ದೇವಿಯ ಸೌಂದರ್ಯವನ್ನು ನೋಡಿದ ನಾವು ಮತ್ತೆಲ್ಲಿಯೂ ಯಾವಾಗಲೂ ತತ್ಸದೃಶವಾದ ಸೌಂದರ್ಯವನ್ನೂ ಪ್ರಸನ್ನತೆಯನ್ನೂ ಕಾಣಲಿಲ್ಲ. ದೇವಿಯಾದರೋ ಅಷ್ಟು ಪ್ರಸನ್ನಳಾಗಿದ್ದು ಸಂತೋಷದಿಂದ ಕೆಲವು ಮಾತುಗಳನ್ನಾಡಿದಳು. ॥೧೦೧-೧೦೨॥

ಆದರೆ ತೇಜಃಪುಂಜದಂತಿದ್ದ ದೇವಿಯ ದೇಹಕಾಂತಿಯನ್ನು ನಾವು ನೋಡಲಾರದೇ ಹೋದೆವು. ಒಡನೆಯೇ ನಾವು ನಮ್ಮ ಮನಸ್ಸನ್ನೂ, ನಯನೇಂದ್ರಿಯವನ್ನೂ ದೇವಿಯ ಪಾದಕಮಲದಲ್ಲಿ ನಿಲ್ಲಿಸಿ ಸ್ತಬ್ಧರಾಗಿ ನಿಂತುಬಿಟ್ಟೆವು. ಆಗ ಅಂತರಿಕ್ಷ ಮಧ್ಯದಿಂದ ಒಂದು ಅನಿರ್ವಚನೀಯವಾದ ವಾಣಿಯೊಂದು ನಮಗೆ ಕೇಳಿಬಂದಿತು. ಆ ಧ್ವನಿಯು ನಮ್ಮ ದುಃಖನಿವಾರಕವಾಗಿಯೂ, ಸೌಭಾಗ್ಯಪ್ರದವಾಗಿಯೂ ಇದ್ದಿತು. ॥೧೦೩-೧೦೪॥

"ಎಲೈ ದೇವತೆಗಳಿರಾ, ನಿಮ್ಮ ಅಪೇಕ್ಷೆಯೇನು ? ಏತಕ್ಕಾಗಿ ಇಲ್ಲಿಗೆ ಬಂದಿರಿ ? ನಿಮ್ಮ ಕೋರಿಕೆಯು ಈಗಲೇ ನಿಜವಾಗಿ ನೆರವೇರುವುದು." ಎಂದು

ತದಾನೀಮುಕ್ತಮಸ್ಮಾಭಿಸ್ಸ್ವರತ್ವಸಮುಪೇಕ್ಷಿತಂ ।
ನಾನ್ಯದಿತ್ಯೇವ ತೇನೈವ ತಥಾಸ್ತ್ವಿತ್ಯುಕ್ತಮಾದರಾತ್ ॥೧೦೬॥

ತತಃ ಪರಂ ನ ಸಾ ದೃಷ್ಟಾ ಭವಾನೀ ಭವವಲ್ಲಭಾ ।
ವಯಂ ಚ ವಿಸ್ಮಯಾವಿಷ್ಟಾಃ ಸರ್ವೇಽಪಿ ಸಮುಪಾಗತಾಃ ॥೧೦೭॥

ಕಾರ್ಯಮಸ್ತಿ ಕಿಮಸ್ಮಾಕಂ ತತ್ಸರ್ವಂ ವದ ಸಾದರಂ ।
ಕಸ್ಮಿನ್ ಕರ್ಮಣಿ ಯೋಗ್ಯತ್ವಮಸ್ಮಾಕಮವಧಾರಿತಮ್ ॥೧೦೮॥

ಇತಿ ತದ್ವಚನಂ ಶ್ರುತ್ವಾ ನಂದೀಶೋ ಹೃಷ್ಟಮಾನಸಃ ।
ತೈರಪಾರೈಸ್ಸುರೈಸ್ಸಾಕಂ ವೈಕುಂಠಮಗಮತ್ತದಾ ॥೧೦೯॥

ಪೂರ್ವಶೋಭಾಸಮಾಕ್ರಾಂತಂ ದೃಷ್ಟ್ವಾ ವೈಕುಂಠಮಾದರಾತ್ ।
ಸ್ಮೃತ್ವಾ ಮಹೇಶಪಾದಾಬ್ಜಂ ತೇಷ್ವೇಕಂ ಪ್ರಾಹ ಸಾದರಂ ॥೧೧೦॥

---

ಅಶರೀರವಾಣಿಯು ನುಡಿಯಲು ಆಗ ನಾವು " ದೇವಿಯೇ, ನಮಗೆ ಯಾವಾಗಲೂ ದೇವಲೋಕವಾಸವಿರಲಿ ಎಂಬುದೇ ನಮ್ಮ ಮುಖ್ಯ ಕೋರಿಕೆ " ಎಂದು ಪ್ರಾರ್ಥಿಸಲು ಆಗ ಆ ಧ್ವನಿಯು ಹಾಗೆಯೇ ಆಗಲಿ ಎಂದುತ್ತರವಿತ್ತಿತು. ||೧೦೫-೧೦೬||

ಅಲ್ಲಿಂದ ಮುಂದೆ ನಾವು ಆ ದೇವಿಯರೂಪವನ್ನು ನೋಡಲಿಲ್ಲ. ಆದರಿಂದ ನಮಗೆ ಆತ್ಯಾಶ್ಚರ್ಯವುಂಟಾಗಿ ಈಗ ಎಲ್ಲರೂ ಇಲ್ಲಿಗೆ ಬಂದಿರುವೆವು. ಮುಂದೆ ನಾವು ಏನು ಮಾಡಬೇಕು ? ಯಾವ ರೀತಿ ನಡೆಯಬೇಕು ? ಎಂಬುದನ್ನು ನಮಗೆ ದಯೆಯಿಂದ ತಿಳಿಸುವನಾಗು." ||೧೦೭-೧೦೮||

ಎಂದು ದೇವತೆಗಳೆಲ್ಲರೂ ನಂದೀಶ್ವರನಲ್ಲಿ ಹೇಳಿಕೊಳ್ಳಲು, ಆಗ ನಂದಿಯು, ಸಂತುಷ್ಟನಾಗಿ ಅವರನ್ನೆಲ್ಲಾ ವೈಕುಂಠನಾಮಕವಾದ ಮನೆಗೆ ಕರೆದುಕೊಂಡು ಹೋದನು. ಆ ಭವನವಾದರೋ ಅತಿಶಯವಾದ ಸೌಂದರ್ಯದಿಂದ ಕಂಗೊಳಿಸುತ್ತಿದ್ದಿತು. ಅದನ್ನು ನೋಡಿ ಶಂಕರನನ್ನು ಸ್ಮರಿಸುತ್ತಾ ನಂದೀಶನು ಆ ದೇವತೆಗಳಲ್ಲಿ ಒಬ್ಬನನ್ನು ಕರೆದು ಹೀಗೆಂದನು. ||೧೧೦||

ಆಯಾಹಿ ಪುಣ್ಯರೂಪತ್ವಂ ವೈಕುಂಠನಿದಮುತ್ತಮಂ ।
ಭವನಂ ದೇವದೇವೇನ ಮಹೇಶೇನ ವಿನಿರ್ಮಿತಂ ॥೧೧೧॥

ಏತಸ್ಯ ಭವನಸ್ಯೈವ ಕರ್ತವ್ಯಂ ರಕ್ಷಣಂ ತ್ವಯಾ ।
ಅಪ್ರಮಾದೇನ ಕರ್ತವ್ಯಮತ್ರ ಶಂಕರಪೂಜಯಾ ॥೧೧೨॥

ಇಮಾನಿ ದಿವ್ಯಲಿಂಗಾನಿ ಶಿವರೂಪಾಣಿ ಕೋಟಿಶಃ ।
ಪಶ್ಯ ಪಶ್ಯ ವಿಶೇಷೇಣ ರಮ್ಯಾನ್ ಬಿಲ್ವತರೂನಪಿ ॥೧೧೩॥

ಮಣಿಮಂಡಲಸಂಕ್ರಾಂತಂ ಬಿಲ್ವಮೂಲೇಷು ಪೂಜಯಾ ।
ಶಿವಲಿಂಗಾನಿ ಯತ್ನೇನ ಕೋಮಲೈರ್ಬಿಲ್ವಪಲ್ಲವೈಃ ॥೧೧೪॥

ಏತೇಷು ಶಿವಲಿಂಗೇಷು ಸರ್ವದಾ ಬಿಲ್ವಪಲ್ಲವಾಃ ।
ಅಪಾರಾಣ್ಯಪಿ ಪುಷ್ಪಾಣಿ ಸಫಲಾನಿ ವಿಶೇಷತಃ ॥೧೧೫॥

ಪೂಜಾ ಶೂನ್ಯಾನಿ ಲಿಂಗಾನಿ ಭವಿಷ್ಯಂತಿ ಯದಾ ತದಾ ।
ಅಧಿಕಾರಪ್ರಚ್ಯವಸ್ತೇ ಭವಿಷ್ಯತಿ ನ ಸಂಶಯಃ ॥೧೧೬॥

---

"ಎಲೈ ದೇವಶ್ರೇಷ್ಠನೇ, ಈ ವೈಕುಂಠನಾಮಕ ಭವನವು ಪುಣ್ಯತಮವಾದದ್ದು. ಇದನ್ನು ನಿರ್ಮಿಸಿದವನು ಸಾಕ್ಷಾತ್ಪರಮೇಶ್ವರನೇ. ಇಂತಹ ಭವನವನ್ನು ನೀನು ಜಾಗರೂಕತೆಯಿಂದ ಸರ್ವದಾ ಶಂಕರನನ್ನು ಆರಾಧಿಸುತ್ತಾ ರಕ್ಷಿಸಿಕೊಂಡಿರು ॥೧೧೧-೧೧೨॥

ಇಲ್ಲಿ ಶಿವಸ್ವರೂಪಗಳಾದ ಅನೇಕ ದಿವ್ಯ ಶಿವಲಿಂಗಗಳಿರುವುವು. ಇಲ್ಲಿಯೇ ಮನೋಹರವಾದ ಬಿಲ್ವವೃಕ್ಷಗಳೂ, ಅದರ ಸುತ್ತಲೂ ರತ್ನಮಯವಾದ ಪಾತಿಗಳೂ, ಅದರಲ್ಲೆಲ್ಲಾ ಶಿವಲಿಂಗಗಳೂ ಕಂಡು ಬರುವುವು. ಇವುಗಳನ್ನು ನೀನು ತಪ್ಪದೆ ಬಿಲ್ವಪಲ್ಲವಗಳಿಂದ ಪೂಜಿಸುತ್ತಾ ಇಲ್ಲಿ ನಿಂತಿರು. ॥೧೧೩-೧೧೪॥

ಈ ಶಿವಲಿಂಗಗಳನ್ನು ಸರ್ವದಾ ಬಿಲ್ವಪಲ್ಲವಗಳಿಂದಲೂ, ಇತರ ವಿಧವಾದ ಫಲಪುಷ್ಪಗಳಿಂದಲೂ ವಿಶೇಷವಾಗಿ ಪೂಜಿಸುವುದನ್ನು ಬಿಟ್ಟೀಯೆ ! ಎಂದಾದರೂ ಈ ಶಿವಲಿಂಗಗಳಿಗೆ ಪೂಜೆಯು ನಿಂತುಹೋದರೆ ನಿನಗೆ ಅಧಿಕಾರಚ್ಯುತಿ ಒದಗುವುದು. ಇದು ನಿಜ. ಜಾಗರೂಕತೆಯಿಂದಿರು. ॥೧೧೫-೧೧೬॥

ಏತಲ್ಲಿಂಗಾರ್ಚನಾಯೈವ ನಿರ್ಮಾಣಂ ತವ ವಸ್ತುತಃ ।
ಧನ್ಯೋಽಸಿ ಕೃತಕೃತ್ಯೋಽಸಿ ಶಿವಾರ್ಚನಪರೋಭವ ॥೧೧೭॥

ತವಾತ್ರ ನಾಮಕರಣಂ ಕರೋಮಿ ಶಿವಲೀಲಯಾ ।
ನಾರಾಯಣೋಽಸಿ ವಿಷ್ಣುಸ್ತ್ವಂ ವೈಕುಂಠೋಽಸಿ ಜನಾರ್ದನಃ ॥೧೧೮॥

ತ್ವಮೇವ ಕಮಲಾಕಾಂತೋ ಗೋವಿಂದೋ ಗರುಡಧ್ವಜಃ ।
ಚಕ್ರಲಾಭೇ ತು ಚಕ್ರೀತಿ ನಾಮ ತೇ ಭಾವಿ ವಸ್ತುತಃ ॥೧೧೯॥

ತವಾಸ್ತಿ ಕೃತ್ಯಮಗ್ರೇಽಪಿ ತತ್ಕಾಲೇನ ಭವಿಷ್ಯತಿ ।
ಪಂಚಾಕ್ಷರಜಪಂ ಪ್ರೀತ್ಯಾ ಕುರು ಸಂತತಮಾಸ್ತಿಕ ॥೧೨೦॥

ಉದ್ಧೂಳನಂ ತ್ರಿಪುಂಡ್ರಾಭ್ಯಾಂ ರುದ್ರಾಕ್ಷೈರಪಿ ಸಂಸ್ಕೃತಃ ।
ಪೂಜಯಸ್ವ ಮಹಾದೇವಂ ಪ್ರಮಾದೋ ಮಾಸ್ತು ಸರ್ವದಾ ॥೧೨೧॥

ಇತ್ಯುಕ್ತ್ವಾ ಸ್ಥಾಪಯಿತ್ವಾ ಚ ವೈಕುಂಠೇ ತಜ್ಜನಾರ್ದನಂ ।
ಸತ್ಯಲೋಕಂ ಯಯೌ ನಂದೀ ತದ್ದೃಷ್ಟ್ವಾ ಸುಂದರಂ ಶುಭಂ ॥೧೨೨॥

---

ಈ ಶಿವಲಿಂಗಗಳ ಪೂಜಾ ಕಾರ್ಯಕ್ಕಾಗಿಯೇ ನಿನ್ನನ್ನು ಶಂಕರನು ನಿರ್ಮಿಸಿರುವನು. ಇದರಿಂದ ನೀನು ಧನ್ಯನೂ ಕೃತಾರ್ಥನೂ ಎನಿಸುವೆ. ಶಿವಾಜ್ಞೆಯಿಂದ ನಾನು ನಿನಗೆ ಈಗ, ನಾರಾಯಣ, ವಿಷ್ಣು, ವೈಕುಂಠ, ಜನಾರ್ದನ, ಕಮಲಾಕಾಂತ, ಗೋವಿಂದ, ಗರುಡಧ್ವಜ, ಮುಂತಾದ ಹೆಸರುಗಳನ್ನಿಟ್ಟು ನಾಮಕರಣಮಾಡುವೆನು. ಮುಂದೆ ನೀನು ಶಂಕರನಿಂದ ಸುದರ್ಶನ ಚಕ್ರವನ್ನು ಸಂಪಾದಿಸಿಕೊಂಡು ಚಕ್ರಿಯೆನಿಸುವೆ. ನಿನ್ನಿಂದ ಮುಂದೆ ಅನೇಕ ಕಾರ್ಯಗಳು ನಡೆಯಬೇಕಾಗಿವೆ. ಆದಕ್ಕಾಗಿ ನೀನು ಯಾವಾಗಲೂ ಶಿವಪಂಚಾಕ್ಷರ ಜಪದಿಂದ ಕಾಲಕಳೆಯುತ್ತಾ ಇಲ್ಲಿರು. ॥೧೨೧॥

ನೀನು ಸರ್ವದಾ ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಿಯ ಸರವನ್ನೂ ಧರಿಸಿಕೊಂಡು, ಜಾಗರೂಕನಾಗಿ ಮಹಾದೇವನನ್ನು ಆರಾಧಿಸುತ್ತಿರು" ಎಂದು ನಂದಿಯು ಜನಾರ್ದನನಿಗೆ ಆಜ್ಞಾಪಿಸಿ, ಅವನನ್ನು ವೈಕುಂಠ ಭವನದಲ್ಲಿಟ್ಟು, ಮುಂದಕ್ಕೆ ತಾನು ತನ್ನ ಕೃಪಾದೃಷ್ಟಿಯಿಂದಲೇ ಸುಂದರವಾಗಿದ್ದ ಸತ್ಯಲೋಕವನ್ನು ಸೇರಿದನು. ॥೧೨೨॥

ಸತ್ಯಲೋಕೇಽಪಿ ದೃಷ್ಟಾನಿ ಶಿವಲಿಂಗಾನಿ ಕೋಟಿಶಃ ।
ತಾನಿ ದೃಷ್ಟ್ವಾ ಪ್ರಹೃಷ್ಟಾತ್ಮಾ ಪೂಜಯಾಮಾಸ ಸಾದರಂ ॥೧೨೩॥

ತತಃ ಪರಂ ಸಮಾಹೂಯ ತೇಷ್ವೇಕಂ ಶಿವಪೂಜಕಂ ।
ತಮಾಹ ಸಾದರಂ ಭಕ್ತ್ಯಾ ಸ್ಮೃತ್ವಾ ಶಂಕರಪಾದುಕೇ ॥೧೨೪॥

ಸುಭಗೋಽಸಿ ಶಿವಾಚಾರೈರತ್ರ ಲಿಂಗಾನಿ ಪೂಜಯ ।
ಅಸ್ಯ ಲೋಕಸ್ಯ ಕರ್ತವ್ಯಂ ಸತ್ಯಸ್ಯ ಪರಿಪಾಲನಂ ॥೧೨೫॥

ಸತ್ಯಲೋಕ ಇತಿ ಖ್ಯಾತಃ ಸೋಽಯಂ ಶಂಕರಸಂಮತಃ ।
ಅಸ್ಯ ಬಿಲ್ವವನಸ್ಯಾಪಿ ಕರ್ತವ್ಯಂ ರಕ್ಷಣಂ ತ್ವಯಾ ॥೧೨೬॥

ಏತತ್ಪಾಲನಪುಣ್ಯೇನ ನಾಧಿಕಾರವಿಪರ್ಯಯಃ ।
ಅನ್ಯಥಾ ಸದನಾದಸ್ಮಾತ್ಪ್ರಚ್ಯವಸ್ತೇ ಭವಿಷ್ಯತಿ ॥೧೨೭॥

ತವ ನಾಮಾನಿ ವಕ್ಷ್ಯಾಮಿ ಮಹಾದೇವಾಜ್ಞಯಾಧುನಾ ।
ಚತುರ್ಮುಖೋ ವಿಧಿರ್ಬ್ರಹ್ಮಾ ವಾಣೀರಮಣ ಇತ್ಯಪಿ ॥೧೨೮॥

---

ಆ ಸತ್ಯಲೋಕದಲ್ಲಿಯೂ ಕೋಟಿ ಸಂಖ್ಯೆಯ ಶಿವಲಿಂಗಗಳು ಕಂಡುಬಂದವು. ಸಂತೋಷದಿಂದ ಮೊದಲು, ತಾನೇ ಅವುಗಳನ್ನು ಪೂಜಿಸಿ, ಅನಂತರ ಮತ್ತೊಬ್ಬ ದೇವತೆಯನ್ನು ಕರೆದು ಶಂಕರನ ದಿವ್ಯಪಾದುಕೆಗಳನ್ನು ಸ್ಮರಿಸುತ್ತಾ ಹೀಗೆಂದನು.

"ಎಲೈ ದೇವತೆಯೇ, ನೀನು ಶಿವಧರ್ಮಗಳಿಂದ ನಿನ್ನನ್ನು ಶುದ್ಧಿಗೊಳಿಸಿಕೊಂಡಿರುವೆ. ಇನ್ನು ಮುಂದೆ ನೀನು ಇಲ್ಲಿಯೇ ಇದ್ದು ಈ ಶಿವಲಿಂಗಗಳನ್ನಾರಾಧಿಸುತ್ತಾ, ಈ ಸತ್ಯಲೋಕದಲ್ಲಿ ಅನ್ವರ್ಥವಾಗಿ ನೆಲೆಗೊಂಡಿರುವ ಸತ್ಯವನ್ನೇ ಪರಿಪಾಲಿಸಿಕೊಂಡಿರು. ಇಲ್ಲಿರುವ ಬಿಲ್ವ ವನವನ್ನು ಮಾತ್ರ ಎಚ್ಚರಿಕೆಯಿಂದ ರಕ್ಷಿಸು. ಇದು ಈಶ್ವರನಿಗೆ ಬಹು ಪ್ರೀತಿಕರವಾದದ್ದು. ॥೧೨೫-೧೨೬॥

ಹೀಗೆ ಈ ಲೋಕವನ್ನು ನೀನು ರಕ್ಷಿಸಿಕೊಂಡಿರುವುದಾದರೆ ನಿನಗೆ ಈ ಗೃಹರಕ್ಷಣಾ ಕಾರ್ಯವು ಎಂದೂ ತಪ್ಪಲಾರದು. ಹಾಗಿಲ್ಲದಿದ್ದರೆ ನಿನಗೆ ಅಧಿಕಾರಚ್ಯುತಿ ಸಂಭವಿಸುವುದು. ಈಗ ಶಂಕರಾಜ್ಞೆಯಿಂದ ನಿನಗೆ ನಾನು, ಚತುರ್ಮುಖ, ವಿಧಿ, ಬ್ರಹ್ಮ, ವಾಣೀಪತಿ ಎಂಬ ಹೆಸರುಗಳನ್ನು ಕೊಟ್ಟಿರುವೆನು." ॥೧೨೭-೧೨೮॥

ಇತ್ಯುಕ್ತ್ವಾ ಸ್ಥಾಪಯಿತ್ವಾ ತಂ ಸತ್ಯಲೋಕೇ ಮನೋಹರೇ ।
ಸ್ವರ್ಗಂ ಲೋಕಂ ಯಯೌ ಪಶ್ಚಾತ್ತೈರ್ದೇವೈಸ್ಸಹ ಸಾದರಂ ॥೧೨೯॥

ತತ್ರ ತೇಷ್ವೇಕಮಾಹೂಯ ನಂದೀ ಪ್ರಾಹ ಶಿವಂ ಸ್ಮರನ್ ।
ಸ್ವರ್ಗಲೋಕಃ ಸುಖಾಯಾಯಂ ಶಿವೇನ ಪರಿಕಲ್ಪಿತಃ ॥೧೩೦॥

ಏತಸ್ಯ ಪಾಲನಂ ಕಾರ್ಯಂ ತ್ವಯಾಸಾದರಮನ್ವಹಂ ।
ಇಮಾನಿ ಶಿವಲಿಂಗಾನಿ ಪೂಜನೀಯಾನಿ ಯತ್ನತಃ ॥೧೩೧॥

ಇದಂ ಖಲು ಶಿವೋದ್ಯಾನಮೇತದ್ವನಸಮುದ್ಭವೈಃ
ಪುಷ್ಪೈರಪಾರೈರನಿಶಂ ಮಹೇಶ್ವರಮಿಹಾರ್ಚಯ ॥೧೩೨॥

ಮಹೇಶ್ವರಾರ್ಚನೇ ವಿಘ್ನೋ ಯದಿ ಸಂಭಾವಿತಸ್ತದಾ ।
ತದಾ ತವಾಧಿಕಾರೋಽಪಿ ಗತ ಇತ್ಯವಧಾರಯ ॥೧೩೩॥

ತುಭ್ಯಂ ನಾಮಾನಿ ದಾಸ್ಯಾಮಿ ಶ್ರೀಮಹೇಶ್ವಲೀಲಯಾ ।
ಇಂದ್ರಶ್ಶಕ್ರಶ್ಶಚೀಕಾಂತೋ ವಜ್ರೀ ವೃತ್ರಾರಿರಿತ್ಯಪಿ ॥೧೩೪॥

---

ಎಂದು ಬ್ರಹ್ಮನನ್ನು ಸತ್ಯಲೋಕದಲ್ಲಿ ನಿಲ್ಲಿಸಿ, ಅನಂತರ ಉಳಿದ ಸಕಲ ದೇವತೆಗಳನ್ನೂ ಕರೆದುಕೊಂಡು ಸ್ವರ್ಗಲೋಕಕ್ಕೆ ಹೋದನು. ಅಲ್ಲಿಯೂ ಒಬ್ಬ ದೇವತೆಯನ್ನು ಕರೆದು ಶಂಕರನ ಸ್ಮರಣೆಯಿಂದಲೇ ಅವನನ್ನು ಕುರಿತು ಹೀಗೆ ಹೇಳಲಾರಂಭಿಸಿದನು. "ಎಲೈ ದೇವತೆಯೇ, ಇದೋ ಇದೇ ಸ್ವರ್ಗಲೋಕ. ಶಂಕರನು ಇದನ್ನು ನಿಮ್ಮ ಸುಖಕ್ಕೋಸ್ಕರವೇ ನಿರ್ಮಾಣಮಾಡಿರುವನು. ೧೨೯-೧೩೦॥

ಈ ಸ್ವರ್ಗವನ್ನೂ, ನಿನ್ನ ಸಹೋದರರಂತಿರುವ ಈ ದೇವತೆಗಳನ್ನೂ ಆದರ ದಿಂದ ರಕ್ಷಿಸುತ್ತಿರು. ಈ ಶಿವಲಿಂಗವನ್ನು ಸದಾ ಪೂಜಿಸುವವನಾಗು. ಇಲ್ಲಿರುವ ಶಿವೋದ್ಯಾನದಲ್ಲಿ ಬೆಳೆದಂತಹ ಫಲಪುಷ್ಪಗಳಿಂದ ಸರ್ವದಾ ಮಹೇಶ್ವರನನ್ನು ಅರ್ಚಿಸುತ್ತಿರು. ॥೧೩೧-೧೩೨॥

ಯಾವದಿನ ನಿನಗೆ ಮಹೇಶಾರ್ಚನೆಯಲ್ಲಿ ವಿಘ್ನವೊದಗುವುದೋ, ಆದಿನ ದಿಂದಲೇ ನೀನು ಅಧಿಕಾರಚ್ಯುತನಾಗುವೆ. ಈಗ ನಿನಗೆ ಇಂದ್ರ. ಶಕ್ರ, ಶಚೀಕಾಂತ,

ತತಃ ಪರಂ ಚ ತೇಷ್ವೇಕಂ ಸಮಾಹೂಯ ತಮಾಹ ಸಃ ।
ತದಿದಂ ಸುರಕಾಂತಾರಂ ಪಾಲನೀಯಂ ತ್ವಯಾಧುನಾ ॥೧೩೫॥

ಸಂತ್ಯತ್ರ ಶಿವಲಿಂಗಾನಿ ಪೂಜನೀಯಾನಿ ಸಾದರಂ ।
ಏತದುದ್ಯಾನವನಜೈಃ ಪುಷ್ಪೈರರ್ಚಯ ಶಂಕರಂ ॥೧೩೬॥

ಏತಲ್ಲಿಂಗಾರ್ಚನಾಭಾವೋ ಯದಿ ಜ್ಞಾತಸ್ತದಾ ತವ ।
ಅಧಿಕಾರಪ್ರಚ್ಯವೋಽಪಿ ಜಾತ ಇತ್ಯವಧಾರಯ ॥೧೩೭॥

ಏತಲ್ಲಿಂಗಾರ್ಚನಂ ಕರ್ತುಂ ಸ್ಥಾಪಿತೋಽಸ್ಯತ್ರ ಸರ್ವದಾ ।
ಲಿಂಗಾರ್ಚನಪರಿತ್ಯಾಗೋ ನ ಕಾರ್ಯಸ್ಸರ್ವಥಾ ತ್ವಯಾ ॥೧೩೮॥

ಮಹಾಮೃತ್ಯುಂಜಯಂ ಮತ್ವಾ ಮಹಾದೇವಂ ಪ್ರಯತ್ನತಃ ।
ಪೂಜಯಸ್ವಾನಿಶಂ ಭಕ್ತ್ಯಾ ವಿಹಾಯ ಶ್ರಮಮಾದರಾತ್ ॥೧೩೯॥

ಏತಸ್ಮಿನ್ ಸುರಕಾಂತಾರೇ ಶಾಂಕರಾಗಮನಂ ಯದಿ ।
ತದಾ ತಾನತಿಯತ್ನೇನ ಪೂಜಯಸ್ವ ವಿಧಾನತಃ ॥೧೪೦॥

---

ವಜ್ರೀ, ವೃತ್ರಾರಿ ಎಂಬ ಹೆಸರುಗಳನ್ನು ಮಹೇಶ್ವರನ ಅಪ್ಪಣೆಯಂತೆ ಕೊಡುವೆನು.” ॥೧೩೩-೧೩೪॥

ಅನಂತರ ಮತ್ತೊಬ್ಬ ದೇವತೆಯನ್ನು ಕರೆದು, ಆತನಿಗೆ ದೇವ ವನದ ರಕ್ಷಣೆಯನ್ನೊಪ್ಪಿಸಿ, ಅಲ್ಲಿರುವ ಶಿವಲಿಂಗಸಮೂಹಗಳನ್ನು, ಆ ಉದ್ಯಾನದ ಫಲಪುಷ್ಪಗಳಿಂದ ಅರ್ಚಿಸುವಂತೆ ಆಜ್ಞಾಪಿಸಿ, ಅವನನ್ನು ಕುರಿತು ಹೀಗೆಂದನು.॥೧೩೫-೩೬॥

“ ನೀನು ಯಾವದಿನ ಲಿಂಗಾರ್ಚನೆಯನ್ನು ನಿಲ್ಲಿಸುವೆಯೋ ಆದಿನವೇ ನಿನಗೆ ಈ ಅಧಿಕಾರವು ತೊಲಗುವುದು. ಈ ಶಿವಲಿಂಗಗಳ ಅರ್ಚನೆಗಾಗಿಯೇ ನೀನು ಈ ಅಧಿಕಾರದಲ್ಲಿ ಆಜ್ಞಪ್ತನಾಗಿರುವೆ. ಎಂದೂ ಶಿವಲಿಂಗಪೂಜೆಯನ್ನು ಬಿಡಬೇಡ. ॥೧೩೭-೧೩೮॥

ಮಹಾದೇವನನ್ನು ಮಹಾಮೃತ್ಯುಂಜಯನೆಂದು ತಿಳಿದು ಎಷ್ಟೇ ಆಯಾಸವಾದರೂ ಗಣನೆಗೆ ತಾರದೆ ಶಿವಲಿಂಗಾರ್ಚನೆಮಾಡುತ್ತಿರು. ಈ ಸುರವನಕ್ಕೆ ಯಾರಾದರೂ ಈಶ್ವರ ಭಕ್ತರು ಬಂದದ್ದೇ ಆದರೆ ಅವರನ್ನು ಭಕ್ತಿಪೂರ್ವಕವಾಗಿ ಆರಾಧಿಸುತ್ತಿರು. ॥೧೩೯-೧೪೦॥

ಅನೇನೈವ ಹಿ ಮಾರ್ಗೇಣ ಕೈಲಾಸಗಮನೋತ್ಸುಕಾಃ ।
ಯದಿ ಸ್ಯುಶ್ಶಾಂಕರಾಸ್ತರ್ಹಿ ತಾನಭ್ಯರ್ಚಯ ಸಾದರಂ ॥೧೪೧॥

ಅಶಾಂಕರಾಣಾಂ ನಿಲಯಾಃ ಕಲ್ಪಿತಾಸ್ಸಂತಿ ಕೋಟಿಶಃ ।
ತೇಷು ತಾನ್ಪಾತಯಿತ್ವೈವ ಘಾತಯಸ್ವಾತಿದಾರುಣಂ ॥೧೪೨॥

ವಿದಾರಯಸ್ವ ಕ್ರಕಚೈಸ್ತಚ್ಛರೀರಾಣಿ ಕೋಟಿಶಃ ।
ಕೋಟಿಶಶ್ಚಾಗ್ನಿಕುಂಡೇಷು ತಾನ್ಪಾತಯ ನಿಘಾತಯ ॥೧೪೩॥

ಅಗ್ನಿಕುಲ್ಯಾಸು ಸರ್ವಾಸು ತಾನಾಪ್ಲಾವಯ ದುರ್ಜನಾನ್ ।
ಅಶೈವಾನಾಂ ತಪ್ತಶೈಲೇಷ್ವಾರೋಹಣಮನೇಕಧಾ ॥೧೪೪॥

ಭವತ್ವಶೈವದುಃಖಾಯ ತೇಷಾಮುಸ್ತ್ವನಿವರ್ತನಂ ।
ಅಶೈವಾರ್ಥಂ ಕಲ್ಪಿತಾಶ್ಚ ತೇ ತೇ ವೃಶ್ಚಿಕಸಾಗರಾಃ ॥೧೪೫॥

---

ಈಶ್ವರಭಕ್ತರೆನಿಸಿ ಪುಣ್ಯವಶದಿಂದ ಕೈಲಾಸಕ್ಕೆ ಹೋಗುತ್ತಾ ಶಾಂಭವರೇನಾದರೂ ಈ ಮಾರ್ಗದಲ್ಲಿ ಬಂದರೆ ಅವರನ್ನು ಪೂಜಿಸು. ಶಂಕರನನ್ನು ಪೂಜಿಸದ ಪಾಪಿಷ್ಠರಾದವರಿಗೆ ಮಾತ್ರ ಇಲ್ಲಿ ಅವಕಾಶಕೊಡಬೇಡ. ಅಂತಹವರಿಗಾಗಿ ಏರ್ಪಟ್ಟಿರುವ ನರಕಕ್ಕೆ ತಳ್ಳಿ ಭಯಂಕರವಾಗಿ ಅವರನ್ನು ಶಿಕ್ಷಿಸು. ॥೧೪೧-೧೪೨॥

ಮತ್ತು ಅವರ ದೇಹಗಳನ್ನು ಗರಗಸದಿಂದ ಸೀಳಿ, ಆ ಚೂರುಗಳನ್ನು ಅಗ್ನಿಕುಂಡದೊಳಕ್ಕೆ ಹಾಕು. ಅಂತಹ ಅಗ್ನಿಕುಂಡಗಳನ್ನು ಕೋಟಿಸಂಖ್ಯೆಯಿಂದ ನಿರ್ಮಿಸು. ॥೧೪೩॥

ಶಿವಪೂಜಕರಲ್ಲದವರನ್ನು ಅಗ್ನಿಕುಂಡದಲ್ಲಿ ಮುಳುಗಿಸು. ಮತ್ತು ಕಾದ ಬೆಟ್ಟದ ಮೇಲಕ್ಕೆ ಹತ್ತಿಸು. ಈ ಅಗ್ನಿಕುಂಡಾದಿಗಳು ಶಂಭುಭಕ್ತರಲ್ಲದವರ ಶಿಕ್ಷೆಗಾಗಿಯೇ ನಿರ್ಮಿಸಲ್ಪಟ್ಟಿವೆ. ಇಗೋ ಇಲ್ಲಿನೋಡು, ಚೇಳಿನ ಸಾಗರಗಳೇ ತೋರುತ್ತಿವೆ. ॥೧೪೪-೪೫॥

ಅನೇಕ ಸರ್ಪಗಳಿಂದ ಕೂಡಿದ ವಿಷಜ್ವಾಲೆಯ ಸಾಗರಗಳೂ, ಕಾದ ಆಯುಧಗಳೂ, ಕಬ್ಬಿಣದ ಪರ್ವತಗಳೂ, ಮರಳುತ್ತಿರುವ ಕೀವು ರಕ್ತಗಳ ಸಮುದ್ರವೂ

ವಿಷಜ್ವಾಲಾಸಾಗರಾಶ್ಚ ದಂದಶೂಕಸಮಾಶ್ರಯಾಃ ।
ಅಶಾಂಕರವಿನಾಶಾಯ ಕಲ್ಪಿತಾಸ್ಸಂತಿ ಕೋಟಿಶಃ ॥೧೪೬॥

ಪ್ರತಪ್ತಶಸ್ತ್ರಗಿರಯಃ ಪ್ರತಪ್ತಾಯಸಪರ್ವತಾಃ ।
ಅಶಾಂಭವಾಭಿತಾಪಾಯ ಕಲ್ಪಿತಾಸ್ಸಂತಿ ಕೋಟಿಶಃ ॥೧೪೭॥

ಕೋಟಿಶಸ್ಸಂತಿ ತಾನ್ಸಸ್ಯ ತಪ್ತಪೂಯಾಂಧುಸಿಂಧವಃ ।
ತೇಷ್ವಸ್ತು ಮಜ್ಜನಂ ತೇಷಾಮಶೈವಾನಾಂ ದುರಾತ್ಮನಾಂ ॥೧೪೮॥

ತತ್ರೈವ ಯಾತನಾಸ್ಥಾನಾನ್ಯಪಾರಾಣ್ಯಪಿ ಸಂತ್ಯತಃ ।
ತಾನ್ಯಶೈವಾತಿದುಃಖಾಯ ಕಲ್ಪಿತಾನಿ ವಿಲೋಕಯ ॥೧೪೯॥

ಅಶಾಂಭವಸ್ವರೂಪಾಣಿ ವದಾಮಿ ಶೃಣು ಸಾದರಂ ।
ಅಶಾಂಭವಾಚಾರಯುಕ್ತಮಶಾಂಭವಮಿತಿ ಸ್ಮರ ॥೧೫೦॥

ಭಸ್ಮತ್ರಿಪುಂಡ್ರರಹಿತಾನಶೈವಾನಿತಿ ಸಂಸ್ಮರ ।
ಉದ್ಧೂಲನವಿಹೀನಾ ಯೇ ತಾನಶೈವಾನಿತಿ ಸ್ಮರ ॥೧೫೧॥

ಪಂಚಾಕ್ಷರವಿಹೀನಾ ಯೇ ತಾನಶೈವಾನಿತಿ ಸ್ಮರ ।
ಶಿವಾರ್ಚನವಿಹೀನಾ ಯೇ ತಾನಶೈವಾನಿತಿ ಸ್ಮರ ॥೧೫೨॥

---

ಕೋಟಿಸಂಖ್ಯೆಯಲ್ಲಿ ನಿರ್ಮಿತವಾಗಿವೆ. ಅವೆಲ್ಲವುಗಳನ್ನೂ ಅಶಾಂಭವರ ಶಿಕ್ಷೆಗಾಗಿ ಉಪಯೋಗಿಸುವವನಾಗು. ॥೧೪೬-೧೪೭-೧೪೮॥

ಇವಲ್ಲದೆ ಇನ್ನೂ ಅಸಂಖ್ಯಾತವಾದ ಯಾತನಾಸ್ಥಾನಗಳೂ ಶಿವದ್ವೇಷಿಗಳಿಗಾಗಿ ನಿರ್ಮಿಸಲ್ಪಟ್ಟಿವೆ. ಆದರೆ ಶಿವದ್ವೇಷಿಗಳು ಯಾರು? ಅವರ ಸ್ವರೂಪವೇನು? ಎಂಬುದನ್ನು ನಾನು ಈಗ ತಿಳಿಸುವೆನು. ಕೇಳು. ॥೧೪೯-೧೫೦॥

ಭಸ್ಮತ್ರಿಪುಂಡ್ರಗಳಿಲ್ಲದೇ, ಶರೀರಕ್ಕೆಲ್ಲಾ ಭಸ್ಮಲೇಪವಿಲ್ಲದೆ, ಶಿವಪಂಚಾಕ್ಷರ ಮಂತ್ರವನ್ನು ಜಪಮಾಡದವರಾಗಿ, ಶಿವಾರ್ಚನೆಯಲ್ಲಿ ಮನಸ್ಸಿಡದವರನ್ನೆಲ್ಲಾ ಅಶೈವರು, ಅಂದರೆ ಶಿವದ್ವೇಷಿಗಳೆಂದೇ ತಿಳಿಯುವವನಾಗು. ॥೧೫೧-೧೫೨॥

ಶಿವಾರ್ಚನಧ್ಯಾನವಿಹೀನಚಿತ್ತಾನ್
ತ್ರಿಪುಂಡ್ರರುದ್ರಾಕ್ಷವಿಹೀನದೇಹಾನ್
ದುಷ್ಟಾನಶೈವಾನಿತಿ ಪಾತಯಾತ್ರ
ತಾನೇವ ಘೋರೇ ನಿರಯೇ ಯಥೇಷ್ಟಂ ॥೧೫೩॥

ದೂತಾಸ್ತು ಲೋಕೇ ವಿಚರಂತು ತಾವತ್
ತೇ ಕೋಟಿಶಃ ಶೈವಗೃಹಾನ್ವಿಹಾಯ ।
ಅಶೈವವೇಶ್ಮಸ್ವತಿಘೋರರೂಪಾ
ಸ್ತೇಷಾಂ ವಿನಾಶಾಯ ಪುನಃ ಪುನಶ್ಚ ॥೧೫೪॥

ತವ ಕೃತ್ಯಮಿದಂ ನಿತ್ಯಂ ಶಿವಪೂಜನಪೂರ್ವಕಂ ।
ಶಿವಾರ್ಚನಪರಿತ್ಯಾಗೋ ನ ಕಾರ್ಯಸ್ಸರ್ವದಾ ತ್ವಯಾ ॥೧೫೫॥

ತವ ನಾಮಾನಿ ದೇಯಾನಿ ಮಯಾ ಶಂಕರಲೀಲಯಾ ।
ಯಮಃ ಕಾಲೋ ಮಹಾನ್ಮೃತ್ಯುಸ್ತಥಾ ಶಮನ ಇತ್ಯಪಿ ॥೧೫೬॥

---

ಯಾರು ಶಿವಾರ್ಚನೆ ಮತ್ತು ಶಿವಧ್ಯಾನದಲ್ಲಿ ಮನಸ್ಸಿಡುವುದಿಲ್ಲವೋ, ಮತ್ತು ತದಂಗವಾಗಿ ಭಸ್ಮತ್ರಿಪುಂಡ್ರರುದ್ರಾಕ್ಷಿಗಳನ್ನು ಶರೀರದಲ್ಲಿ ಧರಿಸುವುದಿಲ್ಲವೋ, ಅಂತಹವರನ್ನು ದುಷ್ಟರಾದ ಅಶೈವರೆಂದು ತಿಳಿ. ಅವರನ್ನೇ ಇಂತಹ ಮಹಾ ಭಯಂಕರಾಕಾರವಾದ ನರಕದಲ್ಲಿ ಬೀಳಿಸುವವನಾಗು. ||೧೫೩||

ಅಲ್ಲದೆ ಭೂಲೋಕದಲ್ಲಿ ನೆಲಸಿರುವ ಅಂತಹ ಶಿವದ್ವೇಷಿಗಳನ್ನು ನಿರ್ಮೂಲ ಮಾಡಲು ಭಯಂಕರರಾದ ದೂತರನ್ನು ಕಳುಹಿಸುವವನಾಗು. ಅವರು ಶಿವಪೂಜಕರ ಗೃಹಗಳನ್ನು ರಕ್ಷಿಸಿ, ಶಿವದ್ವೇಷಿಗಳ ಗೃಹಗಳಲ್ಲಿ ನಿಂತು, ಅವರನ್ನು ನಿರ್ಮೂಲ ಗೊಳಿಸಲಿ. ||೧೫೪||

ಇಷ್ಟನ್ನೂ ನಡೆಸುತ್ತಾ ನೀನೂ ಸಹ ಶಿವಾರ್ಚನೆಯಲ್ಲಿಯೇ ನಿರತನಾಗಿರು. ಅದನ್ನು ಎಂದಿಗೂ ಬಿಡಬೇಡ. ಈಶ್ವರಾಜ್ಞೆಯಿಂದಲೇ ನಿನಗೆ, ಯಮ, ಕಾಲ, ಮಹಾ ಮೃತ್ಯು, ಶಮನ ಎಂಬ ಹೆಸರುಗಳನ್ನು ಈಗ ನಾನು ಕೊಟ್ಟಿರುವೆನು." ||೧೫೫-೧೫೬||

ಏವಮುಕ್ತಸ್ಸ ತಂ ನತ್ವಾ ನಂದಿಕೇಶಂ ಕೃತಾಂಜಲಿಃ ।
ತಥೇತ್ಯುಕ್ತ್ವಾ ತದಾಜ್ಞಾಂ ಚ ದಧಾರ ಶಿರಸಾ ಪರಂ ॥೧೫೭॥

ತತಃ ಪರಂ ಚಕಾರಾನ್ಯಾನ್ ದಿಕ್ಪಾಲಾನ್ನಂದಿಕೇಶ್ವರಃ
ತೇಷಾಮಪಿ ದದೌ ನಾಮಾನ್ಯುಮಾಕಾಂತಸ್ಯ ಲೀಲಯಾ ॥೧೫೮॥

ನಕ್ಷತ್ರರೂಪಾನನ್ಯಾಂಶ್ಚ ಸ ಚಕಾರ ಗೃಹಾನಪಿ ।
ಚಕಾರ ಮುನಿನಿರ್ಮಾಣಂ ಗಿರಿನಿರ್ಮಾಣಮಾದರಾತ್ ॥೧೫೯॥

ಗಂಧರ್ವಾಣಾಂ ಚ ನಿರ್ಮಾಣಂ ಕಿನ್ನರಾಣಾಂ ವಿಶೇಷತಃ
ಸಮುದ್ರಾಣಾಂ ಚ ನಿರ್ಮಾಣಂ ನದೀನಾಂ ಚ ವಿಶೇಷತಃ ॥೧೬೦॥

ಚಾರಣಾನಾಂ ಚ ನಿರ್ಮಾಣಂ ಮನುಷ್ಯಾಣಾಂ ವಿಶೇಷತಃ
ಸರ್ಪಾಣಾಮಪಿ ನಿರ್ಮಾಣಂ ವೃಶ್ಚಿಕಾನಾಂ ವಿಶೇಷತಃ । ॥೧೬೧॥

ಸರಸಾಮಪಿ ನಿರ್ಮಾಣಮೋಷಧೀನಾಂ ವಿಶೇಷತಃ
ವನಾನಾಮಪಿ ನಿರ್ಮಾಣಂ ಸಿಂಹಾನಾಂ ಚ ವಿಶೇಷತಃ ॥೧೬೨॥

ತಥಾ ವ್ಯಾಘ್ರಾದಿಜಂತೂನಾಂ ಪತಂಗಾನಾಂ ಚ ಕೋಟಿಶಃ ।
ಪಶೂನಾಮಪಿ ನಿರ್ಮಾಣಂ ಕೀಟಕಾನಾಂ ವಿಶೇಷತಃ ॥೧೬೩॥

---

ಹೀಗೆ ನಂದೀಶ್ವರನಿಂದ ಆಜ್ಞಪ್ತನಾದ ಯಮನು ನಂದೀಶ್ವರನಿಗೆ ವಂದಿಸಿ, ಅವರ ಅಪ್ಪಣೆಯಂತೆಯೇ ನಡೆಯುವೆನೆಂದು ಒಪ್ಪಿಕೊಂಡನು. ಹಾಗೆಯೇ ನಂದೀಶ್ವರನು ಇತರ ದಿಕ್ಪಾಲಕರಿಗೂ ಬೇರೆ ಬೇರೆ ಕಾರ್ಯಗಳನ್ನು ನೇಮಿಸಿ ಪರಶಿವನ ಅಪ್ಪಣೆಯಂತೆ ಅವರವರಿಗೆ ಪ್ರತ್ಯೇಕ ಪ್ರತ್ಯೇಕವಾದ ದಿಕ್ಪತಿಗಳ ಹೆಸರುಗಳನ್ನೂ ಕೊಟ್ಟನು. ॥೧೫೭-೧೫೮॥

ಅನಂತರ ನಂದೀಶ್ವರನು ಹಾಗೆಯೇ, ಗ್ರಹನಕ್ಷತ್ರಗಳನ್ನೂ, ಸಪ್ತರ್ಷಿಗಳನ್ನೂ, ಗಿರಿದುರ್ಗಗಳನ್ನೂ, ಗಂಧರ್ವರು, ಕಿನ್ನರರು, ಸಮುದ್ರಗಳು, ನದಿಗಳು, ಚಾರಣರು, ಮನುಷ್ಯರು, ಸರ್ಪಗಳು, ಚೇಳುಗಳು, ರಸವತ್ತಾದ ಔಷಧಿಗಳು, ಅರಣ್ಯಗಳು, ಸಿಂಹ, ಹುಲಿ, ಪಕ್ಷಿ ಮುಂತಾದ ಕಾಡುಪ್ರಾಣಿಗಳು, ಪಶುಗಳು, ಕೀಟಗಳು, ಇವೇ ಮೊದಲಾದ ಸಕಲ ಪ್ರಾಣಿಜಾತಿಗಳನ್ನೂ ಕೋಟಿ ಕೋಟಿಸಂಖ್ಯೆಯಲ್ಲಿ ಸೃಷ್ಟಿಮಾಡಿದನು. ॥೧೫೯-೧೬೦-೧೬೧-೧೬೨-೧೬೩॥

ಏವಂ ಕೃತ್ವಾ ಸ ನಿರ್ಮಾಣಂ ಸರ್ವೇಷಾಂ ನಂದಿಕೇಶ್ವರಃ ।
ಯಯೌ ಕೈಲಾಸನಗರಂ ಪೂಜಿತಸ್ಸಕಲೈಸ್ಸುರೈಃ ॥೧೬೪॥

ತತ್ರಾಪಾರಗಣೈರ್ಯುಕ್ತಃ ಶ್ರೀಮತ್ಕೈಲಾಸಪತ್ತನೇ
ಪ್ರಭಾವಂ ದೇವದೇವಸ್ಯ ಸಸ್ಮಾರ ಗಿರಿಜಾಪತೇಃ ॥೧೬೫॥

ತತಃ ಪಂಚಾಕ್ಷರವ್ಯಾಖ್ಯಾಧ್ವನಿಂ ಶ್ರುತ್ವಾ ನಿರಂತರಂ ।
ಉವಾಸ ನಂದಿಕೇಶೋಽಪಿ ಭೃಂಗಿತಂಡುಸಮನ್ವಿತಃ ॥೧೬೬॥

ಇತಿ ಸತ್ಯವ್ರತಸ್ಯೈವ ಶ್ರುತ್ವಾ ವಚನಮಾದರಾತ್
ತತ್ಪತ್ನೀ ಶುಕವಾಣೀತಿ ಸಂತುಷ್ಟಾ ಪುನರಾಹ ತಂ ॥೧೬೭॥

॥ ಶುಕವಾಣ್ಯುವಾಚ ॥

ಪಂಚಾಕ್ಷರಾರ್ಥವ್ಯಾಖ್ಯಾನಾತ್ಕದಾ ಸ್ಯಾದ್ವಿರತಶ್ಶಿವಃ ।
ವಿರತಾ ಸಾ ಭವಾನೀ ಚ ತದರ್ಥಶ್ರವಣಾದ್ಭವೇತ್ ॥೧೬೮॥

ತಯೋಃ ಕಾರ್ಯಾಂತರಾಪೇಕ್ಷಾ ಶಿವಯೋಃ ಕಿಂ ನ ಜಾಯತೇ ।
ಷಣ್ಮುಖಸ್ಯ ಗಣೇಶಸ್ಯ ಕಿಂ ನ ಕಾರ್ಯಾಂತರಂ ವದ ॥೧೬೯॥

---

ಹೀಗೆ ನಂದಿಯು ಸಕಲ ಪ್ರಾಣಿಗಳನ್ನೂ ಸೃಷ್ಟಿಮಾಡಿ, ಸಕಲ ಸುರರೊಂದಿಗೆ ಕೈಲಾಸನಗರವನ್ನು ಪ್ರವೇಶಿಸಿದನು. ಅಲ್ಲಿ ಸಕಲ ಪ್ರಮಥಗಣಗಳೊಡಗೂಡಿ, ದೇವದೇವನಾದ ಪಾರ್ವತೀಪತಿಯ ಮಹಿಮೆಯನ್ನು ಆಗಾಗ ಸ್ಮರಿಸುತ್ತಾ ಧ್ಯಾನಿಸುತ್ತಿದ್ದನು. ॥೧೬೪-೧೬೫॥

ಮತ್ತೂ, ಅಲ್ಲಿಯೇ ನಂದೀಶ್ವರನು ಶಂಕರನು ವಿವರಿಸುತ್ತಿದ್ದ ಪಂಚಾಕ್ಷರ ವ್ಯಾಖ್ಯಾನದ ಧ್ವನಿಯನ್ನು ಕೇಳುತ್ತಾ ಭೃಂಗಿ, ತಂಡು ಮೊದಲಾದ ಗಣನಾಯಕರೊಂದಿಗೆ ಅಲ್ಲಿಯೇ ವಾಸಮಾಡತೊಡಗಿದನು. ಎಂದು ಹೇಳಿದ ಸತ್ಯವ್ರತನ ಮಾತುಗಳನ್ನು ಕೇಳಿ ಪತ್ನಿಯಾದ ಶುಕವಾಣಿಯು ಮತ್ತೆ ಪತಿಯನ್ನು ಕುರಿತು ಹೀಗೆಂದಳು. ॥೧೬೬-೧೬೭॥

" ಪತಿವರ್ಯನೇ, ಹಾಗೆಯೇ ಪಂಚಾಕ್ಷರವ್ಯಾಖ್ಯಾನವನ್ನು ವಿವರಿಸುತ್ತಾ ಶಂಕರನು ಯಾವಾಗ ಅದನ್ನು ಮುಗಿಸಿದನು ? ಪಾರ್ವತಿಯು ಎಲ್ಲಿನವರೆಗೆ ಅದನ್ನು ಕೇಳಿದಳು ? ಅವರಿಬ್ಬರಿಗೂ, ಅವರ ಪುತ್ರರಾದ ಗುಹ ಗಣಪತಿಯರಿಗೂ

ಇತಿ ತದ್ವಚನಂ ಶ್ರುತ್ವಾ ಶುಕವಾಣೀಮುವಾಚ ಸಃ ।
ಸಂಸ್ಮರನ್ ಗಿರಿಜಾಕಾಂತಂ ಮುಹುರ್ಮುಹುರನಾಮಯಂ ॥೧೭೦॥

॥ ಸತ್ಯವ್ರತ ಉವಾಚ ॥

ಶೃಣು ಸತ್ಯಮಿದಂ ವಾಕ್ಯಂ ಸಾವಧಾನಂ ವರಾನನೇ ।
ದೇವದೇವಸ್ಯ ಮಹಿಮಾ ಮನೋವಾಗ್ವಿಷಯೋಽಪಿ ಸ ॥೧೭೧॥

ಶಂಕರಃ ಕರುಣಾಸಿಂಧುರ್ಯತ್ಕಾರ್ಯಂ ಕರ್ತುಮಿಚ್ಛತಿ ।
ತತ್ರ ನಾಯಾಸಲೇಶೋಽಪಿ ಮಹಾದೇವಸ್ಯ ಶೂಲಿನಃ ॥೧೭೨॥

ತದಿಚ್ಛಯಾ ಪರಂ ಕಾವ್ಯಂ ಭವತ್ಯೇವ ಸಹಸ್ರಧಾ ।
ಇಚ್ಛಾಮಾತ್ರೇಣ ಸಿದ್ಧಾರ್ಥಸ್ತತ ಏವ ಶಿವಃ ಪ್ರಭುಃ ॥೧೭೩॥

ಅನ್ಯೇನ ಕಲ್ಪಪರ್ಯಂತಂ ಕೃತೇ ಯತ್ನೇಽಪಿ ಸರ್ವಥಾ ।
ಕಾರ್ಯಲೇಶೋಽಪಿ ಸಹಸಾ ನ ಸುರೇಣ ಪ್ರಜಾಯತೇ ॥೧೭೪॥

---

ಅಲ್ಲಿನವರೆಗೆ ಯಾವ ಕೆಲಸವೂ ಇರಲಿಲ್ಲವೆ? ದಯೆಯಿಟ್ಟು ಅದನ್ನು ತಿಳಿಸು" ಎಂದು ಕೇಳಿಕೊಂಡ ಪಕ್ಷಿಯ ಮಾತುಗಳಿಗೆ ಉತ್ತರವಾಗಿ ಸತ್ಯವ್ರತನು ಮುಂದೆ ಪರಶಿವನನ್ನು ಧ್ಯಾನಿಸುತ್ತಾ ಈರೀತಿ ಅಂದನು. ॥೧೬೮-೧೬೯-೧೭೦॥

ಎಲೌ ಪ್ರಿಯಳೇ, ನಿನಗೆ ದೇವದೇವನಾದ ಶಂಕರನ ಮಹಿಮೆಯು ಇನ್ನೂ ಸರಿಯಾಗಿ ತಿಳಿದುಬಂದಿಲ್ಲ. ಅಲ್ಲದೆ ಅವನ ಮಹಿಮೆಯು ಮನಸ್ಸಿಗಾಗಲಿ ಮಾತಿಗಾಗಲಿ ಸಿಲುಕದು. ಆ ದೇವದೇವನು ದಯಾಸಮುದ್ರನು. ಅಲ್ಲದೆ ಆತನು ಎಷ್ಟೇ ಮಹಾಕಾರ್ಯಗಳನ್ನೆಸಗಿದರೂ ಸ್ವಲ್ಪವೂ ಆತನಿಗೆ ಆಯಾಸವು ತೋರಲಾರದು. ॥೧೭೧-೧೭೨॥

ಆ ಪರಮೇಶ್ವರನ ಇಚ್ಛೆಯಿಂದಲೇ ಸಕಲಕಾರ್ಯಗಳೂ ಸಹಸ್ರ ಸಂಖ್ಯೆಯಲ್ಲಿ ನೆರವೇರುತ್ತವೆ. ಇಚ್ಛಾಮಾತ್ರದಿಂದಲೇ ಕಾರ್ಯಸಿದ್ಧಿಯನ್ನು ಪಡೆಯುವ ಪ್ರಭುವೆಂದರೆ ಶಂಕರನೊಬ್ಬನೇ. ಶಂಕರನನ್ನು ಬಿಟ್ಟರೆ ಉಳಿದ ಯಾವ ದೇವತೆಯಾದರೂ, ಒಂದು ಮಹಾಕಾರ್ಯವನ್ನು ಕಲ್ಪಪರ್ಯಂತವಾಗಿ ಸಾಧಿಸಿದರೂ ಅದನ್ನು ಸಫಲಗೊಳಿಸಲಾರನು. ಪರಶಿವನ ಇಚ್ಛೆಯಿಂದಲೇ ಸಕಲವೂ ನೆರವೇರಬೇಕು. ॥೧೭೩-೧೭೪॥

ಅಭ್ರಂಕಷಾದ್ರಿನಿರ್ಮಾಣಂ ಕ್ಷಣೇನೈವ ಕರೋತಿ ಸಃ ।
ತದಿಚ್ಛಯಾ ತನೂತ್ಪತ್ತಿಃ ಕೇವಲಂ ಜಾಯತೇ ಯತಃ ॥೧೭೫॥

ಸಮುದ್ರಾಣಾಂ ಚ ನಿರ್ಮಾಣಂ ಸ ಕರೋತಿ ಮಹೇಶ್ವರಃ ।
ನ ತತ್ರಾಯಾಸಲೇಶೋಽಪಿ ಗಿರಿಶಸ್ಯ ಮಹಾತ್ಮನಃ ॥೧೭೬॥

ಕ್ಷೀರಸಾಗರನಿರ್ಮಾಣಂ ಕೃತಂ ತೇನ ಮಹಾತ್ಮನಾ ।
ಸ್ವೇಚ್ಛಾಲೇಶೇನ ತೇನೈವ ಗೌರೀಕಾಂತೇನ ಲೀಲಯಾ ॥೧೭೭॥

ಘೃತಸಾಗರನಿರ್ಮಾಣಂ ಶಂಕರೇಣೇಚ್ಛಯಾ ಕೃತಂ ।
ಇಕ್ಷುಸಾಗರನಿರ್ಮಾಣಂ ಶಂಕರೇಣ ಕೃತಂ ಖಲು ॥೧೭೮॥

ಅನ್ಯೇಷಾಂ ಸಾಗರಾಣಾಂ ಚ ನಿರ್ಮಾಣಂ ಲೀಲಯಾ ಕೃತಂ
ಭೂನಿರ್ಮಾಣಂ ಚ ತೇನೈವ ಲೀಲಯಾ ಖಲು ತತ್ಕೃತಂ ॥೧೭೯॥

ಭೂಧಾರಣಾರ್ಥಾಶ್ಶೈಲಾಶ್ಚ ನಿರ್ಮಿತಾಸ್ತೇನ ಲೀಲಯಾ ।
ಭೂಮಂಚಕಸ್ತಂಭರೂಪಾಸ್ತೇ ಶೈಲಾಸ್ಸಪ್ತ ಸುಂದರಿ ॥೧೮೦॥

---

ಅಂತರಿಕ್ಷವನ್ನು ಮುಟ್ಟುವಂತಿರುವ ದೊಡ್ಡ ಪರ್ವತವನ್ನು ಶಂಕರನು ಕ್ಷಣ ಮಾತ್ರದಲ್ಲಿ ಸೃಷ್ಟಿಸಬಲ್ಲನು. ಅವನ ಇಷ್ಟದಂತೆಯೇ ಎಲ್ಲಾ ದೇಹವೂ ನಿರ್ಮಾಣ ವಾಗುವುದು. ದೊಡ್ಡದೊಡ್ಡ ಸಮುದ್ರಗಳನ್ನೂ ಅನಾಯಾಸವಾಗಿ ನಿರ್ಮಾಣ ಮಾಡುವ ಸಾಮರ್ಥ್ಯವು ಪರಶಿವನಿಗಲ್ಲದೆ ಮತ್ತಾರಿಗೂ ಸಲ್ಲದು. ॥೧೭೫-೧೭೬॥

ಮಹಾತ್ಮನಾದ ಶಂಕರನೇ, ಕ್ಷೀರಸಮುದ್ರ, ತುಪ್ಪದ ಸಮುದ್ರ, ಕಬ್ಬಿನ ಹಾಲಿನ ಸಮುದ್ರ, ಮುಂತಾದ ದೊಡ್ಡದೊಡ್ಡ ಆಶ್ಚರ್ಯಕರಗಳಾದ ಸಮುದ್ರಗಳ ನ್ನೆಲ್ಲಾ ಲೀಲಾಜಾಲವಾಗಿ ನಿರ್ಮಾಣ ಮಾಡಿರುವನು. ॥೧೭೭-೧೭೮॥

ಎಲೌ ಪತ್ನಿಯೇ, ಇನ್ನೂ ಉಳಿದ ಅಗಾಧವಾದ ಸಮುದ್ರಗಳನ್ನೆಲ್ಲಾ ಸೃಷ್ಟಿಮಾಡಿ, ಹಾಗೆಯೇ ಭೂಮಿಯನ್ನೂ, ಆ ಭೂಮಿಯನ್ನು ಧರಿಸುವ ಏಳು ಸ್ತಂಭಗಳಂತಿರುವ ಸಪ್ತಕುಲಪರ್ವತಗಳನ್ನೂ, ಸ್ವೇಚ್ಛಾಮಾತ್ರದಿಂದಲೇ ಅನಾಯಾಸ ವಾಗಿ ನಿರ್ಮಾಣಮಾಡಿರುವನು. ॥೧೭೯-೧೮೦॥

ಪಾತಾಳರೂಪೋ ಲೋಕೋಪಿ ಸೃಷ್ಟಸ್ತೇನ ಸ್ವಲೀಲಯಾ ।
ಲೋಕಃ ಕರಂಡಕಾಕಾರಃ ಕಾಕೋದರವರಾಶ್ರಯಃ ॥೧೮೧॥

ತಸ್ಮಿನ್ ಲೋಕೇ ಶಿವಸ್ಥಾನಮೇಕಮಸ್ತಿ ವರಾನನೇ ।
ತಲ್ಲಿಂಗಂ ಕಾಂಚನಾಕಾರಂ ಶೇಷಭೂಷಣನಾಮಕಂ ॥೧೮೨॥

ತತ್ರಾಪಿ ನಿರ್ಮಿತಂ ರಮ್ಯಂ ಮಂದಿರಂ ರತ್ನಸುಂದರಂ ।
ರತ್ನಪ್ರಾಸಾದಶೃಂಗಾಗ್ರಕೋಟಿಕೋಟಿವಿರಾಜಿತಂ ॥೧೮೩॥

ತಸ್ಯ ಶೃಂಗಸ್ಯ ರತ್ನಾನಿ ವಿವಿಧಾನ್ಯಪಿ ಕೋಟಿಶಃ ।
ತತ್ಪ್ರಭಾಭಿಸ್ಸಲೋಕೋಪಿ ಭಾಸುರಸ್ಸರ್ವದಾ ಖಲು ॥೧೮೪॥

ತತ್ರ ಶೇಷಾದಯೋ ನಾಗಾಃ ಪೂಜಯಂತಿ ಮಹೇಶ್ವರಂ ।
ತದುದ್ಯಾನವನೋತ್ಪನ್ನಪ್ರಸೂನಸ್ರಗ್ಭಿರಾದರಾತ್ ॥೧೮೫॥

ಅಖಂಡಬಿಲ್ವಪತ್ರಾಣಿ ಸುವರ್ಣಕಮಲಾನ್ಯಪಿ ।
ತತ್ರಾಮಿತಾನಿ ತೈಃ ಪೂಜಾಂ ಕುರ್ವಂತಿ ಮುನಿಪುಂಗವಾಃ ॥೧೮೬॥

---

ಪಾತಾಳಲೋಕವನ್ನು ಒಂದು ಬುಟ್ಟಿಯ (ಕರಂಡಕ) ಆಕಾರದಲ್ಲಿ ಆದಿಶೇಷನಿಗೆ ಆಶ್ರಯಸ್ಥಾನವನ್ನಾಗಿ ಪರಶಿವನು ಕಲ್ಪಿಸಿರುವನು. ಆ ಪಾತಾಳದಲ್ಲಿಯೂ ಕೂಡ ಶೇಷಭೂಷಣನೆಂಬ ಹೆಸರಿನ ಸುವರ್ಣಮಯವಾದ ಶಿವಲಿಂಗವೊಂದಿರುವುದು. ॥೧೮೧-೧೮೨॥

ಆ ಶಿವಲಿಂಗಕ್ಕೂ ಒಂದು ರತ್ನಮಯವಾದ ಸುಂದರ ಮಂದಿರವಿರುವುದು. ಅದಕ್ಕೆ ದಿವ್ಯವಾದ ಉಪ್ಪರಿಗೆಯೂ ಅದರ ಮೇಲೆ ಕೋಟಿ ಕೋಟಿ ಸಂಖ್ಯೆಯಲ್ಲಿ ಶಿಖರಗಳೂ ಪ್ರಕಾಶಿಸುತ್ತಿರುವುವು. ಆ ಶಿಖರದಲ್ಲಿರುವ ದಿವ್ಯರತ್ನಗಳ ಪ್ರಭೆಯಿಂದ ಆ ಪಾತಾಳಲೋಕವೇ ಅತ್ಯಂತ ಪ್ರಕಾಶಮಾನವಾಗಿರುವುದು. ॥೧೮೩-೧೮೪॥

ಅಲ್ಲಿ ಆದಿಶೇಷನೇ ಮೊದಲಾದ ಸಮಸ್ತ ನಾಗಗಳು, ಅಲ್ಲಿರುವ ಉದ್ಯಾನಗಳಲ್ಲಿ ಬೆಳೆದ ಪುಷ್ಪಗಳಿಂದಲೂ, ಅಖಂಡವಾದ ಬಿಲ್ವಪತ್ರೆಗಳಿಂದಲೂ, ಸುವರ್ಣಕಮಲಗಳಿಂದಲೂ, ಅತಿಶಯವಾದ ರೀತಿಯಲ್ಲಿ ಮಹೇಶ್ವರಲಿಂಗವನ್ನು ಪೂಜಿಸುತ್ತಿರುವರು. ॥೧೮೫-೧೮೬॥

ತತ್ರ ಶೇಷೋಽಪಿ ರತ್ನಾದ್ಯೈರಪಾರೈರ್ಗಿರಿಜಾಪತಿಂ ।
ಪೂಜಯತ್ಯನಿಶಂ ಶಂಭುಂ ಬಿಲ್ವೈಶ್ಚ ಕನಕಾಂಬುಜೈಃ ॥೧೮೭॥

ತತ್ರ ಕೇತಕಪುಷ್ಪೈಶ್ಚ ಮಂದಾರೈರತಿಸುಂದರೈಃ ।
ಸುವರ್ಣಚಂಪಕಾಕಾರಪ್ರಸೂನೈಃ ಪೂಜಯಂತಿ ತಂ ॥೧೮೮॥

ನಾಗಕನ್ಯಾಸಹಸ್ರಾಣಿ ಪೂಜಯಿತ್ವಾ ಮಹೇಶ್ವರಂ ।
ನೃತ್ಯಂ ಕುರ್ವಂತಿ ಯತ್ನೇನ ತಸ್ಮಿನ್ ಶಂಕರಮಂದಿರೇ ॥೧೮೯॥

ಸಕುಟುಂಬಃ ಫೂರ್ಣಪತಿಸ್ಸಪುತ್ರೋಽಪಿ ಮಹೇಶ್ವರಂ ।
ಪೂಜಯಿತ್ವಾ ಪ್ರಸೂನಾದ್ಯೈಃ ಕಾಲಂ ನಯತಿ ಸಾದರಂ ॥೧೯೦॥

ಕೋಟಿಶಸ್ತತ್ಕುಟುಂಬಾನಿ ತತ್ಪುತ್ರಾ ಅಪಿ ಕೋಟಿಶಃ ।
ಪೂಜಯಂತಿ ಮಹಾದೇವಮತಿಯತ್ನೇನ ಸಂತತಂ ॥೧೯೧॥

ತೇಷಾಂ ಶಿವಾರ್ಚನಂ ಕಾರ್ಯಂ ನಾಸ್ತಿ ಕಾರ್ಯಾಂತರಂ ತಥಾ ।
ವಿದ್ಯಮಾನಾನಿ ಕಾರ್ಯಾಣಿ ಸಂತ್ಯಕ್ತಾನ್ಯೇವ ತೈಸ್ಸದಾ ॥೧೯೨॥

---

ಅಲ್ಲಿ ಆದಿಶೇಷನಾದರೋ, ವಿವಿಧವಾದ ರತ್ನಗಳಿಂದಲೂ, ಚಿನ್ನದಿಂದ ನಿರ್ಮಿತವಾದ ಕಮಲಗಳು, ಸಂಪಿಗೆ ಹೂವುಗಳು ಇವುಗಳಿಂದಲೂ, ಹಾಗೆಯೇ ಬಿಲ್ವದಳಗಳು, ಮಂದಾರವೇ ಮೊದಲಾದ ಸುಗಂಧಮಯವಾದ ಪುಷ್ಪಗಳು ಇವುಗಳಿಂದಲೂ, ಸದಾ ಶಿವಲಿಂಗವನ್ನು ಆರಾಧಿಸುತ್ತಿರುವನು. ॥೧೮೭-೧೮೮॥

ಮತ್ತು ಸಹಸ್ರಾರು ಜನ ನಾಗಕನ್ನಿಕೆಯರು ಮಹೇಶ್ವರನನ್ನು ಆರಾಧಿಸಿ, ಅದೇ ಶಿವಾಲಯದಲ್ಲಿ ನಾಟ್ಯವಾಡುತ್ತಿರುವರು. ಪೂರ್ಣಪತಿಯೆನಿಸಿದ ಆದಿಶೇಷನೂ ಸಹ ಪುತ್ರಮಿತ್ರಾದಿ ಕುಟುಂಬ ಪರಿವೃತನಾಗಿ, ಪುಷ್ಪಾದಿ ಪೂಜಾಸಾಮಗ್ರಿಗಳಿಂದ ಶಂಕರನನ್ನು ಆರಾಧಿಸುತ್ತಾ ಕಾಲವನ್ನು ಕಳೆಯುತ್ತಿರುವನು. ॥೧೮೯-೧೯೦॥

ನಾಗಕುಟುಂಬಗಳು, ಅವರ ಪುತ್ರಾದಿಗಳೂ ಸರ್ವದಾ ಮಹಾದೇವಲಿಂಗವನ್ನೇ ಪೂಜಿಸುವರು. ಅವರಿಗೆ ಶಿವಾರ್ಚನೆಯನ್ನು ಬಿಟ್ಟರೆ ಬೇರೆ ಕೆಲಸವೇ ಕಾಣಿಸದು. ಇರುವ ಸಕಲ ಕಾರ್ಯಗಳನ್ನೂ ಒಂದು ಕಡೆಗಿಟ್ಟು ಸದಾ ಶಂಕರಾರ್ಚನೆಯಲ್ಲಿಯೇ ಕಾಲಕಳೆಯುವರು. ॥೧೯೧-೧೯೨॥

ಶಿವಪೂಜನಮಸ್ಮಾಕಂ ಪರಮಂ ಕಾರ್ಯಮಿತ್ಯಪಿ ।
ತಿಷ್ಠಂತಿ ನಾಗಲೋಕಸ್ಥಾಃ ಸರ್ವೇ ಕಾಕೋದರಾ ಅಪಿ ॥೧೯೩॥

ಶಿವಪೂಜಾವಿನಿರ್ಮುಕ್ತಃ ಕೋಽಪಿ ಕಾಕೋದರೋಽಪಿ ನ ।
ಅನ್ಯೇಷಾಂ ತತ್ರ ಕಾ ವಾರ್ತಾ ತೇಷಾಂ ಕಾರ್ಯಂ ಶಿವಾರ್ಚನಂ ॥೧೯೪॥

ತೇಷಾಂ ತಥಾವಿಧಾ ಭಕ್ತಿಃ ಶಿವೇನೋತ್ಪಾದಿತಾ ತತಃ ।
ತಥೈವ ತೇಽಪಿ ಕುರ್ವಂತಿ ಲೀಲಯಾ ಶಿವಪೂಜನಂ ॥೧೯೫॥

ಲೀಲಾಮಾತ್ರಕೃತಾಮಿತಾಖಿಲಜಗಜ್ಜಾಲಾಯ ತಸ್ಮೈ ನಮ ।
ಸ್ತಸ್ಮೈ ಕಾರಣಕಾರಣಾಯ ಕರುಣಾಪೂರ್ಣಾರ್ಣವಾಯಾಸಕೃತ್
ತಸ್ಮೈ ಸೃಷ್ಟಜಗತ್ಸ್ಥಿತಿಕ್ಷತಿಪರವ್ಯಾಪಾರಲೀಲಾರಸವ್ಯಾಪ್ತಾಯಾಪಿ
ನಮೋ ನಮಃ ಪುನರಿದಂ ಸಾಂಬಾಯ ತಸ್ಮೈ ನಮಃ ॥೧೯೬॥

---

ಆ ನಾಗಲೋಕವಾಸಿಗಳಾದ ಸರ್ವರೂ, ಶಿವಪೂಜೆಯೇ ತಮ್ಮ ಮುಖ್ಯ ಕರ್ತವ್ಯವೆಂದು ಭಾವಿಸಿರುವರು. ಅದಕ್ಕಾಗಿಯೇ ಸಮಸ್ತ ಸರ್ಪಗಳೂ ಅಲ್ಲಿಯೇ ನೆಲಸಿರುವುವು. ॥೧೯೩॥

ಅಲ್ಲಿ ಶಿವಾರ್ಚನೆಮಾಡದಿರುವ ಸರ್ಪವೊಂದೂ ಕಾಣುವುದೇ ಇಲ್ಲ. ಇನ್ನುಳಿದವರ ವಿಷಯಗಳನ್ನು ಹೇಳಬೇಕೆ? ಅವರಿಗೆ ಅಷ್ಟು ಶಿವಭಕ್ತಿ ಹುಟ್ಟುವಂತೆ ಮಾಡಿದವನೂ ಸಾಕ್ಷಾತ್ಪರಶಿವನೇ. ಅದೇ ರೀತಿ ಅವರೂ ಸಹ ಶಂಕರ ಲೀಲೆಯನ್ನನುಸರಿಸಿ ಶಿವಾರಾಧನೆ ಮಾಡುತ್ತಿರುವರು. ॥೧೯೪॥

ಸಕಲ ಜಗತ್ತನ್ನೂ ಲೀಲಾಮಾತ್ರದಿಂದ ಸೃಷ್ಟಿಮಾಡಿ, ಸಮಸ್ತ ಜಗತ್ತಿನ ಸಾಧನಗಳಿಗೆಲ್ಲಾ ಮೂಲಕಾರಣನೆನಿಸಿ, ಕರುಣಾಸಮುದ್ರನಾಗಿರುವ ಮಹೇಶ್ವರನಿಗೆ ನಮಸ್ಕರಿಸುವೆನು. ಮತ್ತು ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳನ್ನು ತನ್ನ ಲೀಲೆಯನ್ನಾಗಿ ಮಾಡಿಕೊಂಡು, ತಾನೇ ಜಗದಾತ್ಮನಾಪರಿಣತನಾಗಿ, ಧ್ಯಾನವಿಷಯನಾಗಲು ಅಂಬಾಸಮೇತನಾಗಿ, ಪರಬ್ರಹ್ಮವಸ್ತುವೆನಿಸಿದ ಮಹೇಶ್ವರನಿಗೆ ಪುನಃ ಪುನಃ ವಂದಿಸುವೆನು." ಎಂದು ಸತ್ಯವ್ರತನು ಪತ್ನಿಯಾದ ಶುಕವಾಣಿಯ ಎದುರಿನಲ್ಲಿ ಹೇಳಿ ಸುಮ್ಮನಾದನು. ॥೧೯೬॥

**ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪಂಚಾಕ್ಷರವ್ಯಾಖ್ಯಾನಂ ವಿಗ್ರಹಕೋಟಿ ವರ್ಣನಂ ನಂದೀಶ್ವರಕೃತಸೃಷ್ಟಿವರ್ಣನಂ ನಾಗಲೋಕ ಶಿವಪೂಜಾ ವರ್ಣನಂ ನಾಮ ಏಕೋನ ಚತ್ವಾರಿಂಶೋಽಧ್ಯಾಯಃ**

---

ಇಲ್ಲಿಗೆ ಹರನಾಮಕವಾದ ಶ್ರೀಶಿವರಹಸ್ಯದ ತೃತೀಯಾಂಶದಲ್ಲಿ ಪಂಚಾಕ್ಷರ ವ್ಯಾಖ್ಯಾನಕ್ಕಾಗಿ ಕೋಟಿಶಿವವಿಗ್ರಹಗಳನ್ನು ರಚಿಸಿದುದು ಮತ್ತು ನಂದೀಶ್ವರನು ಸಕಲ ಲೋಕಗಳನ್ನು ಸೃಷ್ಟಿಸಿದುದು, ಪಾತಾಳ ಲೋಕದಲ್ಲಿ ನಿಖಿಲ ನಾಗಗಳೂ ಶಿವಾರ್ಚನೆಗೈದುದು, ಈ ವಿಷಯಗಳನ್ನು ತಿಳಿಸುವ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.





॥ ಶ್ರೀಃ ॥

॥ ಓಂ ನಮಶ್ಶಿವಾಯ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಚತ್ವಾರಿಂಶೋಽಧ್ಯಾಯಃ

॥ ರತ್ನಾಕರ ಉವಾಚ ॥

ಇತಿ ಸತ್ಯವ್ರತೋಕ್ತಾನಿ ವಚನಾನಿ ವಿಶೇಷತಃ ।
ಶ್ರುತ್ವಾ ತಮಾಹ ಭರ್ತಾರಂ ಹರ್ತಾರಂ ಪಾಪಕರ್ಮಣಾಂ ॥೧॥

॥ ಶುಕವಾಣ್ಯುವಾಚ ॥

ಯದುಕ್ತಮಧುನಾ ವಿದ್ವನ್ ತತ್ಸರ್ವಂ ಪಾಪನಾಶಕಂ ।
ಪುನಃ ಪ್ರಶ್ನಾಂತರಂ ಕಾರ್ಯಂ ತತ್ರ ದೇಹಿ ಮಮೋತ್ತರಂ ॥೨॥

---

## ನಲವತ್ತನೆಯ ಅಧ್ಯಾಯ

ಪತಿಯಾದ ಸತ್ಯವ್ರತನು ಹೇಳಿದ ಮಾತುಗಳನ್ನು ಶುಕವಾಣಿಯು ಆಲಿಸಿ ಕೇಳಿ, ಮತ್ತೂ ಶಿವಕಥೆಯನ್ನು ಕೇಳಬೇಕೆಂಬ ಅಪೇಕ್ಷೆಯಿಂದ ಪಾಪಪರಿಹಾರಕನೂ ತನ್ನ ಪತಿದೇವನೂ ಆದ ಸತ್ಯವ್ರತನನ್ನು ಕುರಿತು ಈರೀತಿ ನುಡಿದಳು. ॥೧॥

" ಪ್ರಿಯಪತಿಯೇ, ನೀನು ಸರ್ವವನ್ನೂ ತಿಳಿದವನು. ಆದ್ದರಿಂದಲೇ ಇಂಥ ಪಾಪನಾಶಕಗಳಾದ ಕಥೆಗಳನ್ನು ನನಗೆ ಶ್ರವಣಮಾಡಿಸಿದೆ. ಈಗ ನನಗೆ ಮತ್ತು ಪ್ರಶ್ನೆಗಳನ್ನು ಕೇಳಿ ತತ್ವಾಂಶವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವುಂಟಾಗಿದೆ. ಆದುದರಿಂದ ದಯೆಯಿಟ್ಟು ನನಗೆ ತಾತ್ತ್ವಿಕವಾದ ಉತ್ತರಗಳನ್ನು ಹೇಳಿ ನನ್ನ ಸಂದೇಹಗಳನ್ನು ಪರಿಹರಿಸು. ॥೨॥

ಕೃಪಾಳುತ್ವೇನ ವಿಜ್ಞಾತಸ್ಸರ್ವೈರಪಿ ತಥಾ ಸತಿ ।
ದಯಾ ವಿಧೇಯಾ ದಯಯಾ ಪಾಲನೀಯಾಸ್ಮಿ ಸರ್ವಥಾ ॥೩॥

ಗೌರೀಮನೋವಿಲಾಸಾನಾಮಪಾರಾಣಾಂ ಮಹೇಶ್ವರಃ ।
ಕಥಮಾಸೀದಾಲಯೋಽಯಂ ವದ ಸರ್ವಂ ವಿಶೇಷತಃ ॥೪॥

ಏತಾದೃಶಂ ಕೃತಂ ಪುಣ್ಯಂ ಕಿಂ ವಾ ಗಿರಿಜಯಾ ತಯಾ ।
ಯೇನ ಸರ್ವಾಮರಾಧೀಶೋ ಮಹೇಶಸ್ತತ್ಪತಿಃ ಪ್ರಭುಃ ॥೫॥

ಮಹೇಶ್ವರಃ ಪತಿರ್ಯಸ್ಮಾದಂಬಿಕಾಯಾಸ್ತತಸ್ಸುರಾಃ ।
ನಾರಾಯಣಾದಯೋ ದಾಸಾಸ್ತಸ್ಯಾ ದಾಸ್ಯಸ್ಸುರಾಂಗನಾಃ ॥೬॥

ಗಂಧರ್ವಾಃ ಕಿನ್ನರಾಸ್ಸಿದ್ಧಾಶ್ಚಾರಣಾ ಅಪಿ ಸೇವಕಾಃ ।
ಗೌರ್ಯಾಸ್ತದಂಗನಾಸ್ಸರ್ವಾಸ್ತಚ್ಚೇಟೀಚೇಟಿಕಾಃ ಖಲು ॥೭॥

---

ಎಲ್ಲರೂ ನಿನ್ನನ್ನು ದಯಾಳು ಎಂದು ಶ್ಲಾಘಿಸುವರು. ಮಹಾತ್ಮನಾದ ನೀನು ನನ್ನ ಮೇಲೆ ಕೃಪೆದೋರಿ ನನ್ನ ಸಂಶಯಗಳಿಗೆ ಯಥಾರ್ಥವಾದ ಉತ್ತರ ಕೊಟ್ಟು ನನ್ನನ್ನು ಉದ್ಧರಿಸು. ॥೩॥

ವೇದವೇದಾಂತಗಳ ಮಾತಿಗೂ, ಊಹೆಗೂ ಸಿಲುಕದ ಪರಮೇಶ್ವರನು ಪಾರ್ವತಿಯ ಸೌಂದರ್ಯ ವಿಲಾಸಗಳಿಗೆ ಹೇಗೆ ದೊರೆತನು? ಆ ಪರಶಿವನನ್ನು ವಲ್ಲಭನನ್ನಾಗಿ ಪಡೆಯುವಷ್ಟು ಸೌಭಾಗ್ಯವು ಗಿರಿಜೆಗೆ ಹೇಗೆ ಪ್ರಾಪ್ತವಾಯಿತು? ನನಗೆ ಈ ವೃತ್ತಾಂತವನ್ನು ವಿವರಿಸಿ ಹೇಳು. ॥೪॥

ಗಿರಿಜೆಯು ಅಂಥ ಮಹತ್ತರವಾದ ಯಾವ ಪುಣ್ಯವನ್ನು ಮಾಡಿದ್ದಳು.? ಆ ಲೋಕೋತ್ತರವಾದ. ಪುಣ್ಯವನ್ನು ಗಳಿಸಿದ್ದರಿಂದಲೇ ಸಮಸ್ತ ದೇವತೆಗಳಿಗೂ ಅಧಿಪತಿಯಾದ ಪರಮೇಶ್ವರನು ಆ ಗಿರಿಜೆಗೆ ಪತಿಯಾಗಿರುವುದರಲ್ಲಿ ಸಂಶಯವಿಲ್ಲ. ॥೫॥

ಆ ದೇವದೇವನನ್ನು ಪತಿಯನ್ನಾಗಿ ಪಡೆದುಕೊಂಡಿರುವುದರಿಂದ ಗಿರಿಜೆಯ ಸೌಭಾಗ್ಯವು ಎಷ್ಟು ಲೋಕಾತೀತವಾಗಿರುವುದು? ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳೂ ಆ ಗಿರಿಜೆಗೆ ದಾಸರಾಗಿರುವರು. ಹಾಗೆಯೇ ಗಂಧರ್ವರು, ಕಿನ್ನರರು, ಸಿದ್ಧಚಾರಣರು ಎಲ್ಲರೂ ದಾಸಾನುದಾಸರಾಗಿರುವರು. ಸಕಲ ಸುರಸುಂದರಿಯರೂ ಆ ಗಿರಿಜೆಗೆ ಸಖಿಯರಾಗಿಯೂ ದಾಸಿಯರಾಗಿಯೂ ನಿಂತಿರುವರು. ॥೬-೭॥

ಇದಂ ಖಲು ಮಹದ್ಭಾಗ್ಯಂ ಪ್ರಾಪ್ತಂ ಗೌರ್ಯಾ ತಯಾ ಕಥಂ ।
ಕಿಂ ವಾ ವ್ರತಂ ಪುರಾ ಚೀರ್ಣಂ ಯೇನ ಭಾಗ್ಯಮಿದಂ ಮಹತ್ ॥೮॥

ಕಿಂ ಚ ಮೃತ್ಯುಂಜಯೋ ಭರ್ತಾ ತಯಾ ಪ್ರಾಪ್ತೋ ಮಹೇಶ್ವರಃ ।
ಸಾ ಸರ್ವಮಂಗಳಾ ಜಾತಾ ವೈಧವ್ಯಂ ನೈವ ಪಶ್ಯತಿ ॥೯॥

ತದಿದಂ ಕೌತುಕಂ ಶ್ರೋತುಮಿಚ್ಛಾ ಜಾತಾ ಮಮಾಧುನಾ ।
ವದ ಸರ್ವಂ ವಿಶೇಷೇಣ ಯಥಾ ಜ್ಞಾತಂ ತಥಾ ಮುನೇ ॥೧೦॥

ಇತಿ ತದ್ವಚನಂ ಶ್ರುತ್ವಾ ಹೃಷ್ಟಸ್ಸತ್ಯವ್ರತಸ್ತದಾ ।
ತಾಮುವಾಚಾತಿವಿನತಾಂ ಕೃತಾಂಜಲಿಪುಟಾಂ ಮುನಿಃ ॥೧೧॥

---

ಇಂತಹ ಸುಯೋಗವು ಪರಮಭಾಗ್ಯದಿಂದ ಮಾತ್ರವೇ ಲಭಿಸುವುದಷ್ಟೆ! ಇಷ್ಟೊಂದು ಸೌಭಾಗ್ಯವನ್ನೂ ವೈಭವವನ್ನೂ ಗಿರಿಜೆಯು ಹೇಗೆ ಪಡೆದಳು.? ಇದಕ್ಕಾಗಿ ಆ ಭಗವತಿಯು ಪೂರ್ವದಲ್ಲಿ ಯಾವ ಮಹತ್ತರವಾದ ವ್ರತಗಳನ್ನು ಮಾಡಿದ್ದಳು? ॥೮॥

ಅಲ್ಲದೇ ಆ ಗೌರಿಯ ಸೌಭಾಗ್ಯವು ಎಷ್ಟು ಶಾಶ್ವತವಾದದ್ದು! ಮೃತ್ಯುವನ್ನೇ ಗೆದ್ದಿರುವ ಪರಶಿವನನ್ನು ಆಕೆಯು ಪತಿಯನ್ನಾಗಿ ಪಡೆದಿರುವುದರಿಂದ ಆಕೆಗೆ ವೈಧವ್ಯದ ಸಂಭಾವನೆಯೇ ಇರುವುದಿಲ್ಲ. ಆಕೆಯು ಪರಮಸುಮಂಗಲಿಯಾಗಿರುವುದರಿಂದಲೇ ಸರ್ವಮಂಗಳಾ ಎಂಬ ದಿವ್ಯವಾದ ಹೆಸರನ್ನು ಪಡೆದಿರುವಳು. ॥೯॥

ಇಂಥ ಪರಮಾಶ್ಚರ್ಯಕರವಾದ ಗಿರಿಜೆಯ ಪುಣ್ಯವೃತ್ತಾಂತವನ್ನು ಕೇಳಲು ನನಗೆ ಬಹಳ ಕುತೂಹಲವುಂಟಾಗಿದೆ. ಆದುದರಿಂದ ಆ ಎಲ್ಲಾ ಕಥೆಯನ್ನು ನೀನು ತಿಳಿದಿರುವಷ್ಟು ವಿಸ್ತಾರವಾಗಿ ಹೇಳು." ॥೧೦॥

ಈ ಪ್ರಕಾರವಾದ ಶುಕವಾಣಿಯ ಪ್ರಶ್ನೆಯನ್ನು ಕೇಳಿ ಸತ್ಯಮೂರ್ತಿಗೆ ಸಂತೋಷವಾಯಿತು. ಶುಕವಾಣಿಯ ಕುತೂಹಲವನ್ನೂ, ವಿನಯಪೂರಿತವಾದ ನಮಸ್ಕಾರವನ್ನೂ ಗಮನಿಸಿ, ಆಕೆಯ ಇಷ್ಟದಂತೆ ಸತ್ಯವ್ರತನು ಈ ರೀತಿ ಹೇಳಿದನು. ॥೧೧॥

ಶೃಣು ಭದ್ರೇ ಕೌತುಕಾನಿ ಮಾಹಾತ್ಮ್ಯಂ ಗಿರಿಶಸ್ಯ ಚ ।
ಪಾಪರಾಶಿಹರಂ ತಸ್ಯ ಮಾಹಾತ್ಮ್ಯಶ್ರವಣಾದಪಿ ॥೧೨॥

ದೇವಾಸುರಮಭೂದ್ಯುದ್ಧಂ ಪೂರ್ಣಂ ಶತಯುಗಾವಧಿ ।
ತತ್ರ ದೈತ್ಯೇಶ್ವರಃ ಕೋಽಪಿ ಜಾತಶ್ಚಂಡಪಿತಾಮಹಃ ॥೧೩॥

ಅಗ್ನಿಚಕ್ರಾಕುಲಂ ನಾಮ ನಗರಂ ತಸ್ಯ ಶೋಭನೇ ।
ತದೇವ ನಗರಂ ತಾವದಗ್ನಿಪ್ರಾಕಾರವೇಷ್ಟಿತಂ ॥೧೪॥

ಪ್ರಚಂಡನಾಮ ದೈತ್ಯೇಶಃ ಕಾಮರೂಪೋಽತಿಭೀಷಣಃ ।
ಸೂರ್ಯಮಂಡಲಪರ್ಯಂತಂ ತಸ್ಯ ಕಾಯಃ ಪ್ರವರ್ತತೇ ॥೧೫॥

---

"ಎಲೌ ಕಲ್ಯಾಣಿ! ನಿನ್ನ ಕುತೂಹಲವು ಯೋಗ್ಯವೂ ಶ್ಲಾಘ್ಯವೂ ಆಗಿದೆ. ಏಕೆಂದರೆ ಪರಮೇಶ್ವರನ ಚರಿತೆಯು ಅದ್ಭುತವಾಗಿರುವಂತೆ ಪುಣ್ಯಕರವೂ ಆಗಿರುತ್ತದೆ. ಆ ಚರಿತ್ರೆಯನ್ನು ಶ್ರವಣಮಾಡಿದ್ದರಿಂದಲೇ ಸಕಲ ಪಾಪಗಳೂ ಪರಿಹೃತವಾಗುವುವು. ನಿನ್ನ ಇಷ್ಟದಂತೆ ಪರಶಿವನ ಮಾಹಾತ್ಮ್ಯವನ್ನು ಹೇಳುವೆನು. ಆಲಿಸು. ॥೧೨॥

ಪೂರ್ವಕಾಲದಲ್ಲಿ ದೇವತೆಗಳಿಗೆ ದೈತ್ಯರೊಡನೆ ಯುದ್ಧವು ನಡೆಯಿತು. ಆ ಯುದ್ಧವು ನೂರು ಯುಗಗಳ ಪರ್ಯಂತವೂ ಘೋರವಾಗಿಯೇ ನಡೆಯುತ್ತಿದ್ದಿತು. ಆ ಸಮಯದಲ್ಲಿ ದೈತ್ಯರಿಗೆಲ್ಲಾ ಅಧಿಪತಿಯಾದ ಪ್ರಚಂಡನೆಂಬ ಅಸುರನಿದ್ದನು. ಆತನು ಚಂಡನೆಂಬ ದೈತ್ಯನ ಪಿತಾಮಹನಾಗಿದ್ದನು. ॥೧೩॥

ಅಗ್ನಿಚಕ್ರಾಕುಲ ಎಂಬ ಪಟ್ಟಣವು ಆ ದೈತ್ಯನ ವಾಸಸ್ಥಾನವಾಗಿದ್ದಿತು. ಆ ನಗರದ ಸುತ್ತಲೂ ಬೆಂಕಿಯಕೋಟೆ ಇದ್ದಿತು. ಬೆಂಕಿಯ ಪ್ರಾಕಾರದಿಂದ ಆ ರಾಜಧಾನಿಯು ಸುತ್ತುವರೆಯಲ್ಪಟ್ಟದ್ದರಿಂದಲೇ ಅದನ್ನು ಪ್ರವೇಶಿಸಲು ಯಾರಿಗೂ ಶಕ್ಯವಿರಲಿಲ್ಲ. ॥೧೪॥

ಆ ಪಟ್ಟಣಕ್ಕೆ ರಾಜನಾದ ಪ್ರಚಂಡ ದೈತ್ಯೇಶ್ವರನು ಮಾಯಾವಿಯೂ, ಕಾಮರೂಪಿಯೂ ಆಗಿದ್ದನು. ಆತನು ದುಷ್ಟನಾಗಿದ್ದನಲ್ಲದೇ ಭಯಂಕರನೂ ಆಗಿದ್ದನು. ಆ ದೈತ್ಯನ ಶರೀರವು ಸೂರ್ಯಮಂಡಲದವರೆಗೂ ವ್ಯಾಪಿಸುವಷ್ಟು ದೊಡ್ಡದಾಗಿತ್ತು. ॥೧೫॥

ಶಿರಾಂಸಿ ಕೋಟಿಶಸ್ತಸ್ಯ ಕರಾಸ್ತಸ್ಯೈವ ಕೋಟಿಶಃ ।
ನೇತ್ರಾಣಿ ಕೋಟಿಶಸ್ತಸ್ಯ ಚರಣಾ ಅಪಿ ಕೋಟಿಶಃ ॥೧೬॥

ಏಕೈಕಸ್ಮಿನ್ ಮುಖೇ ತಸ್ಯ ರಸನಾ ಅಪಿ ಕೋಟಿಶಃ ।
ನ ದಂತಾನಾಂ ತು ಗಣನಾ ದಂತಾಃ ಕುಲಿಶಸನ್ನಿಭಾಃ ॥೧೭॥

ಜ್ವಾಲಾಮಾಲಾಸಮಾಕೀರ್ಣಾಸ್ತೇ ದಂತಾ ಅಪಿ ಕೋಟಿಶಃ ।
ತಸ್ಯ ಮಂದಾನಿ ವಾಕ್ಯಾನಿ ಗಜತುಲ್ಯಾನಿ ಕೋಟಿಶಃ ॥೧೮॥

ತಚ್ಛರೀರಪ್ರಭಾಪೂರೈಃ ಪೂರಿತಂ ಸಕಲಂ ಜಗತ್ ।
ತನ್ನಿಶ್ವಾಸಕುಲೋದ್ವೇಲಾಸ್ಸಮುದ್ರಾಸ್ಸಪ್ತಸಾಗರಾಃ ॥೧೯॥

ಸ ಗಿರೀನಖಿಲಾನುಗ್ರೈಸ್ಸಿಕತಾನಿವ ಪಶ್ಯತಿ ।
ತತ್ಕ್ರೂರದೃಷ್ಟಿಪಾತೇನ ಭಸ್ಮೀಭೂತಾ ಭವಂತಿ ತೇ ॥೨೦॥

---

ಆ ದೈತ್ಯನಿಗೆ ಕೋಟಿ ಶಿರಸ್ಸುಗಳಿದ್ದವು. ಹಾಗೆಯೇ ಕೈಗಳು, ಕಾಲುಗಳು ಕಣ್ಣುಗಳು ಎಲ್ಲವೂ ಕೋಟಿ ಸಂಖ್ಯೆಯಲ್ಲಿಯೇ ಇದ್ದವು. ಒಂದೊಂದು ಬಾಯಿಯಲ್ಲಿಯೂ ಕೋಟಿ ನಾಲಿಗೆಗಳೂ ಹಲ್ಲುಗಳೂ ಕಾಣುತ್ತಿದ್ದುವು. ಆ ಹಲ್ಲುಗಳು ವಜ್ರಾಯುಧದಂತೆ ಬಹು ತೀಕ್ಷ್ಣವಾಗಿದ್ದವು. ಬಾಯಿಯಲ್ಲಿ ಸರ್ವದಾ ಬೆಂಕಿಯ ಜ್ವಾಲೆಯು ಪ್ರಕಾಶಿಸುತ್ತಿದ್ದಿತು. ಆತನ ಮಾತುಗಳು ಆನೆಯ ಗರ್ಜನೆಯಂತೆ ಕರ್ಣಕಠೋರವಾಗಿಯೂ ಭಯಂಕರವಾಗಿಯೂ ಇರುತ್ತಿದ್ದವು. ॥೧೬-೧೭-೧೮॥

ಆ ದೈತ್ಯನ ಶರೀರದ ಪ್ರಖರವಾದ ಕಾಂತಿಯಿಂದ ಸಮಸ್ತ ಜಗತ್ತುಗಳೂ ವ್ಯಾಪ್ತವಾಗಿರುತ್ತಿದ್ದವು. ಆತನ ಉಚ್ಛ್ವಾಸ ನಿಶ್ವಾಸದಿಂದ ಸಪ್ತಸಮುದ್ರಗಳೂ ಅಲ್ಲೋಲಕಲ್ಲೋಲವಾಗುತ್ತಿದ್ದುವು. ॥೧೯॥

ಆ ದೈತ್ಯನಿಗೆ ದೊಡ್ಡ ದೊಡ್ಡ ಪರ್ವತಗಳೂ ಸಹ ಸಾಟಿಯಾಗಿರಲಿಲ್ಲ. ಆತನ ದೃಷ್ಟಿಯಲ್ಲಿ ಪರ್ವತಗಳು ಕೇವಲ ಮರಳಿನ ಚಿಕ್ಕ ರಾಶಿಯಾಗಿದ್ದವು. ಆತನ ಕ್ರೂರವಾದ ದೃಷ್ಟಿಯು ಪರ್ವತಗಳ ಮೇಲೆ ಬಿದ್ದರೆ ಅವು ಕೂಡಲೇ ಭಸ್ಮೀಭೂತವಾಗುತ್ತಿದ್ದವು. ॥೨೦॥

ತದುತ್ಪನ್ನಂ ಮಹಾದೈತ್ಯಂ ದೇವಾ ನಾರಾಯಣಾದಯಃ ।
ಶ್ರುತ್ವಾ ಪಾತಾಲಮಗಮನ್ ತಪ್ತಾಸ್ತತ್ತೇಜಸಾ ಪರಂ ॥೨೧॥

ತೇ ಪಾತಾಳೇ ಭಯಗ್ರಸ್ತಾಃ ಕಿಂ ಕರ್ತವ್ಯಮಿಹೇತ್ಯಪಿ ।
ಚಿಂತಯಾ ಪರಯಾ ಗ್ರಸ್ತಾಃ ಸ್ಥಿತಾಶ್ಶೇಷಾದಿಭಿಸ್ತದಾ ॥೨೨॥

ಯುಗಾನಾಮಯುತಂ ತತ್ರ ಸ್ಥಿತ್ವಾ ದುಃಖಾತುರಾಸ್ತತಃ ।
ವಿಚಾರನಿರತಾ ಜಾತಾಃ ಕಾರ್ಯಾಕಾರ್ಯವಿವೇಕತಃ ॥೨೩॥

ತದಾ ನಾರಾಯಣಂ ಪ್ರಾಹ ಬ್ರಹ್ಮಾ ಮ್ಲಾನಮುಖಾಂಬುಜಂ ।
ಇಂದ್ರೇಣ ಪ್ರೇರಿತೋ ದೇವೈಸ್ತದನ್ಯೈರಪಿ ದುಃಖಿತಃ ॥೨೪॥

---

ಆ ಪ್ರಚಂಡ ದೈತ್ಯನು ತನ್ನಂತೆ ಅಜೇಯನಾದ ಮತ್ತೊಬ್ಬ ದೈತ್ಯಪುತ್ರ ನನ್ನೂ ಉತ್ಪಾದನೆ ಮಾಡಿದನು. ಈ ವೃತ್ತಾಂತವನ್ನು ಕೇಳಿ, ಮೊದಲೇ ಯುದ್ಧದಲ್ಲಿ ಪಲಾಯನಮಾಡಿದ್ದ ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳೂ ಆ ದೈತ್ಯನ ದಬ್ಬಾಳಿಕೆಯಿಂದ ತತ್ತರಿಸಿ ಹೋದರು. ಆಗ ಅವರೆಲ್ಲರೂ ಭಯಗ್ರಸ್ತ ರಾಗಿ ಪಾತಾಳಲೋಕಕ್ಕೆ ಹೋಗಿ ಅವಿತುಕೊಂಡರು. ||೨೧||

ಪಾತಾಳದಲ್ಲಿ ಆ ದೇವತೆಗಳೆಲ್ಲರೂ ಆದಿಶೇಷನೊಂದಿಗೆ ಮಹಾಭಯಾ ನ್ವಿತರಾಗಿ ಮುಂದೆ ಏನನ್ನು ಮಾಡಬೇಕೆಂಬುದನ್ನು ಯೋಚಿಸಲು ಶಕ್ತಿಯಿಲ್ಲದೇ ಕಂಗೆಟ್ಟು ಪರಮ ಚಿಂತೆಯಲ್ಲಿ ಮುಳುಗಿದ್ದರು. ||೨೨||

ಲಕ್ಷಾಂತರ ಯುಗಗಳ ವರೆಗೆ ಆ ದೇವತೆಗಳು ಹಾಗೆಯೇ ದಿಕ್ಕುಗಾಣದೇ ಭಯಾಕ್ರಾಂತರಾಗಿ ಬಿದ್ದಿದ್ದರು. ಕ್ರಮೇಣ ಮುಂದೆ ಏನನ್ನು ಮಾಡಬೇಕೆಂಬು ದನ್ನೂ, ಯುಕ್ತಾಯುಕ್ತ ಸಾಧಕಬಾಧಕ ವಿಚಾರಗಳನ್ನೂ ಪರ್ಯಾಲೋಚಿಸ ತೊಡಗಿದರು. ||೨೩||

ಆಗ ದೇವೇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನ ಸಂಗಡ ತಮ್ಮ ದುರವಸ್ಥೆಯನ್ನು ಹೇಳಿಕೊಂಡು ಪೇಚಾಡಿದರು. ಮತ್ತು ಇದರ ಪರಿಹಾರಕ್ಕೆ ಏನಾದರೂ ಉಪಾಯವನ್ನು ಮಾಡಬೇಕೆಂದು ಪ್ರಾರ್ಥಿಸಲು ಬ್ರಹ್ಮನು ವಿಷ್ಣುವಿನ ಬಳಿಗೆ ಹೋದನು. ವಿಷ್ಣುವೂ ಸಹ ಮೊದಲೇ ತಮ್ಮ ದುಃಸ್ಥಿತಿಯನ್ನೇ ಚಿಂತಿ ಸುತ್ತಾ ಖಿನ್ನಮನಸ್ಕನಾಗಿದ್ದನು. ಇದೆಲ್ಲವನ್ನೂ ನೋಡಿ ಅತ್ಯಂತ ದುಃಖದಿಂದ ಬ್ರಹ್ಮನು ವಿಷ್ಣುವನ್ನು ಕುರಿತು ಈರೀತಿ ಹೇಳಿದನು. ||೨೪||

॥ ಬ್ರಹ್ಮೋವಾಚ ॥

ನಾರಾಯಣ ಕಿಯತ್ಕಾಲಮತ್ರ ಸ್ಥೇಯಮತಃ ಪರಂ।
ಮರಣಂ ವಾ ವರಂ ನೂನಂ ನ ಚಾನ್ಯಸದನೇ ಸ್ಥಿತಿಃ ॥೨೫॥

ಅನ್ಯಾಧೀನತಯಾ ನೇಯಃ ಕಿಯಾನ್ ಕಾಲೋ ವದಾಧುನಾ ।
ಸ ಚೇದಾಯಾತಿ ಸಂಕ್ರುದ್ಧೋ ದೈತ್ಯಃ ಕಿಂ ವಾ ತದಾ ವದ ॥೨೬॥

ಸ ಸಮಾಗತ್ಯ ಸಸುತಾನ್ ಸಕುಟುಂಬಾನ್ ಸುರಾನ್ ಯದಿ।
ದಗ್ಧ್ವಾ ಯಾತಿ ತದಾ ಕೋ ವಾ ವದ ತಸ್ಯ ನಿವಾರಕಃ ॥೨೭॥

ಅಸ್ಮಾಭಿರೇವ ಗಂತವ್ಯಂ ಸನ್ನದ್ಧೈಶ್ಶಸ್ತ್ರಪಾಣಿಭಿಃ ।
ಜಯೋಽಸ್ತು ಮರಣಂ ವಾಸ್ತು ಕಿಂ ತಯಾ ಚಿಂತಯಾ ವದ ॥೨೮॥

---

ನಾರಾಯಣನೇ, ನಾವು ಇನ್ನೂ ಎಷ್ಟು ದಿನ ಇಲ್ಲಿರುವುದು ? ಪರರ ಮನೆಯಲ್ಲಿ ವಾಸಿಸುವುದಕ್ಕಿಂತ ಮರಣವೇ ಲೇಸು. ಅನ್ಯರ ಮನೆಯಲ್ಲಿ ಹೀಗೆ ವೃಥಾ ಬಹು ದಿವಸ ವಾಸಮಾಡುವುದು ಅತ್ಯಂತ ಅನುಚಿತ. ॥೨೫॥

ಹೀಗೆ ಪರಾಧೀನರಾಗಿಯೇ ನಾವು ಅನೇಕ ಯುಗಗಳನ್ನು ಕಳೆದೆವು. ಇನ್ನೂ ಎಷ್ಟು ದಿನ ಹೀಗಿರಲು ಸಾಧ್ಯ ? ಒಂದು ವೇಳೆ ಆ ಪ್ರಚಂಡ ದೈತ್ಯನಿಗೆ ನಾವು ಇಲ್ಲಿರುವುದು ತಿಳಿದರೆ ಗತಿ ಏನು ? ನಮ್ಮ ವೃತ್ತಾಂತವು ಅವನಿಗೆ ತಿಳಿದರೆ ಖಂಡಿತವಾಗಿಯೂ ಆತನು ಕೋಪಗೊಳ್ಳುವನು. ಆಗ ನಮ್ಮ ಪಾಡು ಏನಾಗುವುದು ? ಯೋಚಿಸಿ ನೋಡು. ॥೨೬॥

ಆ ದೈತ್ಯನಿಗೆ ನಮ್ಮ ಇರವು ಗೊತ್ತಾದರೆ ಆತನು ಕೂಡಲೇ ಇಲ್ಲಿಗೆ ಬಂದು ಸಮಸ್ತ ದೇವತೆಗಳನ್ನೂ ಪುತ್ರ ಪತ್ನಿಯರೊಂದಿಗೆ ಸುಟ್ಟುಬಿಡುವನು. ಆಗ ನಮ್ಮನ್ನು ಕಾಪಾಡುವವರಾಗಲಿ ಅಥವಾ ಆ ದೈತ್ಯನನ್ನು ತಡೆಯುವವರಾಗಲಿ ಯಾರಿರುವರು ? ಆತನ ಎದುರಿನಲ್ಲಿ ನಿಲ್ಲುವ ಧೈರ್ಯವು ಮತ್ತು ಸಾಹಸವು ಯಾವನಿಗಿದೆ ? ॥೨೭॥

ಈಗ ನಾವು ಹೀಗೆ ಹೇಡಿಗಳಂತೆ ಕುಳಿತುಕೊಳ್ಳಬಾರದು. ನಾವೇ ಧೈರ್ಯದಿಂದ ಮುಂದೆ ನುಗ್ಗೋಣ. ಶಸ್ತ್ರಾಸ್ತ್ರಗಳನ್ನು ಸನ್ನದ್ಧಮಾಡಿಕೊಂಡು ಹೋಗಿ ಆ ದೈತ್ಯನಮೇಲೆ ಬೀಳೋಣ. ಯುದ್ಧದಲ್ಲಿ ಜಯವಾದರೂ ಆಗಲಿ ಅಥವಾ ಮರಣ

ಕುಟುಂಬಾನ್ಯತ್ರ ತಿಷ್ಠಂತು ಸುತಾ ಅಪ್ಯತಿಬಾಲಕಾಃ ।
ಪ್ರೌಢಾಶ್ಚ ಪುತ್ರಾಸ್ತಿಷ್ಠಂತು ಕಾಮಧೇನುಶ್ಚ ತಿಷ್ಠತು ॥೨೯॥

ತಿಷ್ಠಂತು ಕಲ್ಪತರವಶ್ಶಿವಲಿಂಗಾನಿ ಕೋಟಿಶಃ ।
ಅಧುನಾ ತತ್ರ ಗಂತವ್ಯಂ ಭಾವಿ ಸರ್ವಂ ಭವಿಷ್ಯತಿ ॥೩೦॥

ಯದ್ಯಸ್ಮಾಕಮದೃಷ್ಟೇನ ಜಯೋ ಯದಿ ಭವಿಷ್ಯತಿ ।
ತದಾ ತತ್ರ ಕುಟುಂಬಾನಿ ಸಮಾಯಾಂತು ಸುತೈಸ್ಸಹ ॥೩೧॥

ಇತಿ ತದ್ವಚನಂ ಶ್ರುತ್ವಾ ಚಕ್ರಮಾದಾಯ ಕೇಶವಃ ।
ಯುದ್ಧಾಯ ನಿರ್ಗತಸ್ತೀವ್ರಂ ಬ್ರಹ್ಮಾದಿಸುರಸಂಯುತಃ ॥೩೨॥

ತತಸ್ತನ್ನಗರಂ ಪ್ರಾಪುರಗ್ನಿಮಂಡಲಸನ್ನಿಭಂ ।
ತತಸ್ತೇ ಮೂರ್ಛಿತಾ ಏವ ತತ್ಪುರಾದ್ಭುತತೇಜಸಾ ॥೩೩॥

---

ವಾದರೂ ಸಂಭವಿಸಲಿ. ಅದನ್ನು ಚಿಂತಿಸಿ ಪ್ರಯೋಜನವಿಲ್ಲ. ಅಂತೂ ಈಗ ಇಲ್ಲಿ ಅಕರ್ಮಣ್ಯರಾಗಿ ನಾವು ಇರುವುದು ಬೇಡ. ॥೨೮॥

ನಮ್ಮ ಪತ್ನೀಪುತ್ರರೇ ಮೊದಲಾದ ಪರಿವಾರದವರು ಇಲ್ಲಿಯೇ ಇರಲಿ. ಯುದ್ಧಕ್ಕೆ ಯೋಗ್ಯರಲ್ಲದ ಪುತ್ರರೂ, ನಮ್ಮ ಕಾಮಧೇನು, ಕಲ್ಪವೃಕ್ಷ ಮತ್ತು ಅಪಾರವಾದ ಶಿವಲಿಂಗಗಳು ಎಲ್ಲವೂ ಇಲ್ಲಿಯೇ ಇರಲಿ. ನಾವು ಮಾತ್ರ ಈ ಕೂಡಲೇ ಯುದ್ಧಕ್ಕೆ ಹೋಗೋಣ. ಮುಂದೆ ಏನಾಗುವುದೋ ಆಗಲಿ. ॥೨೯-೩೦॥

ಒಂದು ವೇಳೆ ನಮ್ಮ ಭಾಗ್ಯವಶದಿಂದ ನಮಗೆ ಜಯವು ಲಭಿಸಿದರೆ ಆಮೇಲೆ ನಮ್ಮ ಪರಿವಾರದವರನ್ನೂ ಸಮಸ್ತರನ್ನೂ ಕರೆಯಿಸಿಕೊಳ್ಳೋಣ. ॥೩೧॥

ಈ ಪ್ರಕಾರವಾಗಿ ಬ್ರಹ್ಮನು ಸಮಯೋಚಿತವಾಗಿ ಉದ್ಬೋಧನಗೊಳಿಸಲು ಆತನ ಅಭಿಪ್ರಾಯಕ್ಕೆ ವಿಷ್ಣುವೂ ಸಮ್ಮತಿಸಿದನು. ವಿಷ್ಣುವು ಆ ಕೂಡಲೇ ತನ್ನ ಚಕ್ರವನ್ನು ಹಿಡಿದು ಯುದ್ಧಕ್ಕೆ ಸನ್ನದ್ಧನಾದನು. ಬಳಿಕ ಆಯುಧಪಾಣಿಗಳಾದ ಸಮಸ್ತ ದೇವತೆಗಳೊಂದಿಗೆ ವಿಜಯೋತ್ಸಾಹದಿಂದ ಪ್ರಯಾಣಮಾಡಿದನು. ॥೩೨॥

ಆ ದೇವತೆಗಳೆಲ್ಲರೂ ಸಮರೋತ್ಸಾಹದಿಂದ ಆ ದೈತ್ಯನ ಪಟ್ಟಣವನ್ನು ಮುತ್ತಿದರು. ಆ ಪಟ್ಟಣವು ಮೊದಲೇ ಅಗ್ನಿಪ್ರಾಕಾರವುಳ್ಳದ್ದಾಗಿತ್ತಷ್ಟೆ. ದೇವತೆಗಳು ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದ ಕೂಡಲೇ ಆ ನಗರದ ಅದ್ಭುತವಾದ ತೇಜಸ್ಸಿನ ಹೊಡೆತದಿಂದ ಎಲ್ಲರೂ ಮೂರ್ಛಿತರಾಗಿ ಭೂಮಿಯಲ್ಲಿ ಬಿದ್ದರು. ॥೩೩॥

ಗತೇಷು ತೇಷು ಯುದ್ಧಾರ್ಥಂ ಕಮಲಾದ್ಯಾಸ್ಸುರಾಂಗನಾಃ ।
ಮೂರ್ಛಿತಾನ್ ಪತಿತಾನ್ ಶ್ರುತ್ವಾ ಚುಕ್ರುಶುರ್ಭಯವಿಹ್ವಲಾಃ ॥೩೪॥

ತತಸ್ತಾಶ್ಶೇಷಮಖಿಲಾಃ ಪ್ರಾಹುಃ ಖಿನ್ನಾನನಂ ತ್ವಯಾ ।
ಗಂತವ್ಯಂ ದೇವಕಾರ್ಯಾರ್ಥಮಸಹಾಯಾಸ್ಸುರಾಃ ಖಲು ॥೩೫॥

ಇತಿ ತದ್ವಚನಂ ಶ್ರುತ್ವಾ ಸ ಶೇಷಃ ಖಿನ್ನಮಾನಸಃ ।
ಚುಕ್ರೋಶೋಚ್ಚೈರ್ಹಾ ಹತೋಽಭೂದ್ಗೋವಿಂದೋಽಪೀತಿ ಸತ್ವರಂ॥೩೬॥

ತತಃ ಪರಂ ಕಿಯಾನ್ ಕಾಲೋ ವಿನೀತೋ ರೋದನೈಃ ಪರಂ ।
ಸುರದಾರಾ ವಿಸಂಜ್ಞಾಸ್ತೇ ಯುಗಾನಾಮಯುತಂ ಖಲು ॥೩೭॥

ಉತ್ಥಿತಾಃ ಕಮಲಾದ್ಯಾಸ್ತಾಸ್ಸರ್ವಾ ವೈಧವ್ಯವಿಹ್ವಲಾಃ ।
ಕಪಿಲಂ ಪ್ರಾಹುರತ್ಯಂತಂ ಶೈವಾರ್ಚನಪರಾಯಣಂ ॥೩೮॥

---

ಹಾಗೆ ದೇವತೆಗಳೆಲ್ಲರೂ ಮೂರ್ಛಿತರಾದ ವೃತ್ತಾಂತವನ್ನು ಲಕ್ಷ್ಮಿಯೇ ಮೊದಲಾದ ದೇವಾಂಗನೆಯರು ಕೇಳಿ ಅತ್ಯಂತ ಭಯತ್ರಸ್ತರಾಗಿ ರೋದಿಸತೊಡಗಿದರು. ॥೩೪॥

ದೇವತೆಗಳ ದುಃಸ್ಥಿತಿಯನ್ನು ಆದಿಶೇಷನೂ ಕೇಳಿ ಅತ್ಯಂತ ಖಿನ್ನಮನಸ್ಕನಾಗಿದ್ದನು. ಆಗ ಆ ದೇವಾಂಗನೆಯರೆಲ್ಲಾ ಆದಿಶೇಷನ ಬಳಿಗೆ ಹೋಗಿ ಗೋಳಿಡುತ್ತಾ ಹೀಗೆಂದು ಹೇಳಿದರು. " ಎಲೈ ಆದಿಶೇಷನೇ ! ಈಗ ದೇವತೆಗಳು ಸರ್ವಥಾ ಸಹಾಯಶೂನ್ಯರಾಗಿದ್ದಾರೆ. ಆದ್ದರಿಂದ ನೀನು ಸಹಾಯಾರ್ಥವಾಗಿ ಅಲ್ಲಿಗೆ ಹೋಗಬೇಕು. " ॥೩೫॥

ಅವರ ಮಾತನ್ನು ಕೇಳಿ ಶೇಷನಿಗೆ ಖೇದವು ಅಧಿಕವಾಯಿತು. ಅಯ್ಯೋ, ವಿಷ್ಣುವೂ ಹತನಾದನೇ ಎಂದು ಕೂಗಿಕೊಳ್ಳುತ್ತಾ ಗಟ್ಟಿಯಾಗಿ ರೋದಿಸಲಾರಂಭಿಸಿದನು. ॥೩೬॥

ಹೀಗೆಯೇ ಅತ್ಯಂತ ದುಃಖಾವಿಷ್ಟರಾಗಿ ರೋದಿಸುತ್ತಾ ದೇವತಾಸ್ತ್ರೀಯರು ಅನೇಕ ಕಾಲವನ್ನು ಕಳೆದರು. ಆ ದೇವಾಂಗನೆಯರಿಗೆ ಶೋಕಾಧಿಕ್ಯದಿಂದ ಮೈಮೇಲಿನ ಪ್ರಜ್ಞೆಯೇ ತಪ್ಪಿಹೋಗುತ್ತಿತ್ತು. ಲಕ್ಷ್ಮಿಯೇ ಮೊದಲಾದ ಸಕಲ ದೇವಾಂಗನೆಯರೂ ವೈಧವ್ಯದುಃಖದಿಂದ ವಿಹ್ವಲರಾಗಿದ್ದರು. ಆಗ ಅವರು ಅದೇ ಪಾತಾಳದ

|| ದೇವಾಂಗನಾ ಊಚುಃ ||

ಮುನಿಪ್ರವರ ದೇವಾಸ್ತೇ ಯುಗಾನಾಮಯುತಂ ಖಲು ।
ಮುನಿಪ್ರವರ ದೇವಾನಾಂ ದುರ್ದಶಾ ಕಿಂ ನ ಸಂಶ್ರುತಾ ||೩೯||

ಪ್ರಚಂಡೇನ ಹತಾಸ್ಸರ್ವೇ ದೈತ್ಯಾನಾಮಧಿಪೇನ ತೇ ।
ಅತಃಪರಂ ಕಿಮಸ್ಮಾಭಿಃ ಕರ್ತವ್ಯಂ ತದ್ವದಾಧುನಾ ||೪೦||

ಕಾರ್ಯಾಕಾರ್ಯವಿವೇಕೋಽಪಿ ನಾಸ್ಮಾಕಮಧುನಾ ಖಲು ।
ಇತಿ ತದ್ವಚನಂ ಶ್ರುತ್ವಾ ಕಪಿಲಸ್ಸಿದ್ಧಸೇವಿತಃ ||೪೧||

ಕಪಿಲೋಽಭಿಮುಖೋ ಭೂತ್ವಾ ಪ್ರಾಹ ಸ್ಮೃತ್ವಾ ಮಹೇಶ್ವರಂ ||೪೨||

---

ಲ್ಲಿದ್ದ ಪರಮಶಿವಭಕ್ತನಾದ ಕಪಿಲಮುನಿಯ ಬಳಿಗೆ ಹೋಗಿ ತಮ್ಮ ದುಃಖವನ್ನು ಹೇಳಿಕೊಂಡು ಗೋಳಾಡಿದರು. ||೩೭-೩೮||

ಮುನಿಶ್ರೇಷ್ಠನೇ, ದೇವತೆಗಳಿಗೆ ಎಂಥ ಕಷ್ಟವು ಬಂದೊದಗಿದೆ ಎಂಬುದನ್ನು ನೀನು ಕೇಳಿಲ್ಲವೇ ? ಈಗ ದೇವತೆಗಳಿಗೆ ಅತ್ಯಂತ ಅಪಾಯವು ಪ್ರಾಪ್ತವಾಗಿ ಅನೇಕ ಯುಗಗಳು ಸಂದುಹೋದವು. ಈ ದುಃಖಪ್ರಸಂಗವನ್ನು ಹೇಗೆ ಸಹಿಸಿಕೊಂಡಿರುವುದು ? ||೩೯||

ದೈತ್ಯರಿಗೆಲ್ಲಾ ಅಧಿಪತಿಯಾದ ಪ್ರಚಂಡನೆಂಬ ಅಸುರನಿಂದ ದೇವತೆಗಳೆಲ್ಲರೂ ನಾಶಗೊಳಿಸಲ್ಪಟ್ಟಿದ್ದಾರೆ. ಈಗ ನಮಗೆ ಮಹಾವಿಪತ್ತು ಸಂಭವಿಸಿದೆ. ಇದರಿಂದ ನಮಗೆ ಯುಕ್ತಾಯುಕ್ತ ವಿಚಾರವನ್ನು ವಿವೇಚಿಸುವ ಶಕ್ತಿಯೂ ಇಲ್ಲದಾಗಿದೆ. ಈಗ ನಾವು ಏನನ್ನು ಮಾಡಬೇಕು ? ನಾವು ಈ ವಿಪತ್ತಿನಿಂದ ಪಾರಾಗುವುದು ಹೇಗೆ ? ಇದಕ್ಕೆ ಏನಾದರೂ ಉಪಾಯವನ್ನು ಹೇಳಿಕೊಡು.'' ||೪೦||

ಹೀಗೆಂದು ಲಕ್ಷ್ಮಿಯೇ ಮೊದಲಾದ ಸಮಸ್ತ ದೇವಾಂಗನೆಯರೂ ಶರಣು ಹೊಕ್ಕು, ಉಪಾಯವನ್ನು ಹೇಳಿಕೊಡೆಂದು ಪ್ರಾರ್ಥಿಸಿಕೊಳ್ಳಲು, ಆಗ ಸಿದ್ಧಸೇವಿತನಾದ ಕಪಿಲಮುನಿಯು ಕನಿಕರಪಟ್ಟು ಈ ರೀತಿಯಾಗಿ ಉಪದೇಶಿಸಿದನು. ||೪೧-೪೨||

॥ ಕಪಿಲ ಉವಾಚ ॥

ಇಂದಿರೇ ಶರಣಂ ಯಾಹಿ ಶಂಕರಂ ಲೋಕಶಂಕರಂ ।
ಸ ಸರ್ವಮಂಗಳಾಕಾಂತೋ ಮಂಗಳಾನಿ ಪ್ರಯಚ್ಛತಿ ॥೪೩॥

ಸ ಸರ್ವಮಂಗಳಾಕಾರಸ್ಸರ್ವಮಂಗಳದಾಯಕಃ ।
ಮಂಗಳಾನಾಂ ಸ ಜನಕೋಽಪ್ಯಮಂಗಳಹರೋ ಹರಃ ॥೪೪॥

ಅಮಂಗಳಹರೇ ಸತಿ ತ್ರಿಪುರಕಾನನಧ್ವಂಸಕೃತ್
ಪ್ರಚಂಡತರಪಾವಕೇ ಮದನಮರ್ದಕೇ ಸಂಸ್ಮೃತೇ ।
ಅಮಂಗಳಸರಿದ್ವರಪ್ರಳಯ ಏವ ತಾವದ್ಭವೇತ್
ಸಮುದ್ರತನಯೇ ಸದಾ ಶುಭನದೀಸಮೂಹೋದಯೇ ॥೪೫॥

---

"ಎಲೌ ಲಕ್ಷ್ಮಿಯೇ, ಈಗ ನಿನಗೆ ಒದಗಿರುವ ಆಪತ್ತು ಪರಿಹಾರವಾಗ ಬೇಕಾದರೆ ನೀನು ಪರಮೇಶ್ವರನನ್ನೇ ಮೊರೆಹೊಗಬೇಕು. ಆ ಸರ್ವಮಂಗಳೆಯ ವಲ್ಲಭನು ಅಖಂಡ ವಿಶ್ವಕ್ಕೇ ಮಂಗಳಪ್ರದಾತನಿರುವನು. ನೀನು ಅನನ್ಯ ಭಕ್ತಿ ಯಿಂದ ಆತನನ್ನು ಶರಣುಹೊಕ್ಕರೆ ಪರಶಿವನು ನಿನಗೆ ಕ್ಷೇಮವನ್ನೂ ಕಲ್ಯಾಣ ವನ್ನೂ ಅನುಗ್ರಹಿಸುವನು. ॥೪೩॥

ಆ ಶಂಕರನು ಸ್ವಯಂ ಮಂಗಳಮೂರ್ತಿಯಾಗಿದ್ದಾನೆ. ಆತನೇ ಸಮಸ್ತ ಕಲ್ಯಾಣಗಳಿಗೂ ಉಗಮಸ್ಥಾನವಾಗಿರುವನು. ಮತ್ತು ಸಮಸ್ತ ಮಂಗಳಗಳನ್ನೂ ಅನುಗ್ರಹಿಸುವನು. ಆ ಪರಶಿವನು ಎಲ್ಲಾ ಬಗೆಯ ಅಶುಭಗಳನ್ನೂ ದುಃಖಗಳನ್ನೂ ನಿವಾರಣೆಮಾಡುವನು. ॥೪೪॥

ಎಲೈ ಸಮುದ್ರರಾಜಕುಮಾರಿಯಾದ ಇಂದಿರೆಯೇ, ಆ ಪರಮೇಶ್ವರನು ಅಮಂಗಳ ಪರಿಹಾರಕನಾಗಿರುವನು. ಆ ದೇವದೇವನು ತ್ರಿಪುರಾಸುರರೆಂಬ ಘೋರಾ ರಣ್ಯವನ್ನು ನಾಶಮಾಡುವುದರಲ್ಲಿ ಪ್ರಚಂಡ ಅಗ್ನಿಸ್ವರೂಪನು. ಅಲ್ಲದೇ ಗರ್ವಿಷ್ಠ ನಾದ ಮನ್ಮಥನ ಸೊಕ್ಕನ್ನೂ ಸಹ ಆ ಶಿವನೇ ಮುರಿದಿರುವನು. ಅಂತಹ ಶಿವನನ್ನು ಧ್ಯಾನಮಾಡಿದೊಡನೆ ಕಲ್ಯಾಣಪ್ರವಾಹವೇ ನಿನಗೆ ದೊರೆಯುವುದು. ಮತ್ತು ಸಮಸ್ತ ಅಶುಭಗಳೂ ಹೇಳಲು ಹೆಸರಿಲ್ಲದಂತೆ ನಿಶ್ಶೇಷವಾಗಿ ನಾಶವಾಗುವುವು. ॥೪೫॥

ನ ಕೋಽಪಿ ಜಾನಾತಿ ಶಿವಪ್ರಭಾವ
ಮತೋ ನ ತಸ್ಯ ಸ್ಮರಣೇ ಪ್ರವೃತ್ತಿಃ ।
ಅತೋ ವಿನಾಶೋ ಭವತೀತಿ ಮನ್ಯೇ
ಸದಾ ಮಹಾದೇವಪರಾಙ್ಮುಖಾನಾಂ ॥೪೬॥

ಕೇನಾಪಿ ದೃಷ್ಟಂ ನ ಮಹೇಶರೂಪಂ
ಶುಭಪ್ರವಾಹಾತ್ಮಕಮಪ್ರಮೇಯಂ ।
ಸ್ಮೃತೇ ಶಿವೇ ಚೇತಸಿ ಮಂಗಳಾನಿ
ಪದೇ ಪದೇ ಶೋಭನದಾನಿ ನಿತ್ಯಂ ॥೪೭॥

ಅಹೋ ಕಥಂ ಕೌತುಕಮೇತದಾಸೀ
ದನರ್ಚಿತೇಶಾನಪದಾಂಬುಜಾನಾಂ ।
ನಾಶಃ ಸುರಾಣಾಮಭವತ್ಕಿಮತ್ರಾ
ಪ್ಯತ್ಯದ್ಭುತಂ ಕಿಂಚಿದಗಮ್ಯಮಸ್ತಿ ॥೪೮॥

---

ಯಾರು ಯಾರು ಆ ಪರಶಿವನನ್ನು ಆರಾಧಿಸುವುದಿಲ್ಲವೋ, ಅಂತಹವರು ನಿಶ್ಚಯವಾಗಿಯೂ ಗಿರಿಶನ ಮಹಿಮೆಯ ಮಹತ್ವವನ್ನು ಅರಿಯುವುದಿಲ್ಲ. ಆದ್ದರಿಂದಲೇ ಅವರು ದುಃಖವನ್ನು ಅನುಭವಿಸುವರು. ಅಲ್ಲದೇ ಅಂಥ ಶಿವಜ್ಞಾನ ವಿಮುಖರಾದವರು ಶೀಘ್ರವಾಗಿಯೇ ನಾಶಹೊಂದುವುದರಲ್ಲಿ ಸಂಶಯವಿಲ್ಲ. ॥೪೬॥

ಆ ಗಿರಿಶನು ಯಾವ ಪ್ರಮೇಯಗಳಿಗೂ ಗೋಚರನಾಗತಕ್ಕವನಲ್ಲ. ಆದ್ದರಿಂದಲೇ ಯಾರಿಂದಲೂ ಚರ್ಮಚಕ್ಷುಸ್ಸಿನಿಂದ ಆತನನ್ನು ನೋಡಲು ಶಕ್ಯವಿಲ್ಲ. ಆತನು ಅಖಂಡವಾಗಿ ಮಂಗಳಮೂರ್ತಿಯೇ ಆಗಿರುವನು. ಆತನನ್ನು ಅನನ್ಯತೆಯಿಂದ ಮನಃಪೂರ್ವಕವಾಗಿ ಧ್ಯಾನಿಸಿದವರು ಪದೇ ಪದೇ ಅನೇಕ ಶ್ರೇಯಸ್ಸುಗಳನ್ನು ಪಡೆಯಬಹುದು. ॥೪೭॥

ಪೂರ್ವದಲ್ಲಿಯೂ ಹೀಗೆಯೇ ಅನೇಕ ದೇವತೆಗಳು ಸ್ವಾಭಾವಿಕವಾಗಿಯೇ ಅಹಂಕಾರಿಗಳೂ ಅಜ್ಞಾನಿಗಳೂ ಆಗಿದ್ದೂ, ಶಿವನನ್ನು ಉದಾಸೀನವಾಗಿ ಕಂಡರು. ದೇವದೇವನಾದ ಶಂಕರನನ್ನು ಅವರು ಪೂಜಿಸಲಿಲ್ಲ. ಅಂಥ ಮಹಾಪರಾಧದಿಂದ ಅವರು ನಾಶಹೊಂದಿದರೆಂದರೆ, ಅದೇನು ಮಹಾ ಆಶ್ಚರ್ಯ ! ॥೪೮॥

ದೇವೈರಹಂಕಾರವಿಮೂಢಚಿತ್ತೈಃ
ಪ್ರಚಂಡಯುದ್ಧಾಯ ಗತಂ ಪ್ರಮತ್ತೈಃ ।
ವೇಗಾದಕೃತ್ವೈವ ಶಿವಾರ್ಚನಾನಿ
ತತಃ ಪ್ರನಷ್ಟಾ ಅಪಿ ಸತ್ವರಂ ತೇ ॥೪೯॥

ಸಂರಕ್ಷಕೇ ತಿಷ್ಠತಿ ದೇವದೇವೇ
ಮಹೇಶ್ವರೇ ದೇವಗಣಸ್ಯ ತಸ್ಮಿನ್ ।
ತತ್ಪೂಜನಾರ್ಥಂ ನ ಕೃತಃ ಪ್ರಯತ್ನ
ಸ್ತತಃ ಪ್ರನಷ್ಟಾಃ ಕಿಮಿಹಾಸ್ತಿ ಚಿತ್ರಂ ॥೫೦॥

ಭ್ರಷ್ಟಾಸ್ತಾವನ್ನಷ್ಟರಾಜ್ಯಾಶ್ಚ ಲೋಕೇ
ನಷ್ಟಾತ್ಮಾನಶ್ಶೈವಧರ್ಮೈರ್ವಿಹೀನಾಃ ।
ತಸ್ಮಾನ್ನಾಶೋ ನಾಮರಾಣಾಂ ಚ ಚಿತ್ರಂ
ವಿಶ್ವೇಶಾರ್ಚಾತ್ಯಾಗಜಂ ತತ್ಫಲಂ ಹಿ ॥೫೧॥

---

ಹಾಗೆಯೇ ಈಗಲೂ ದೇವತೆಗಳು ದುಡುಕಿನಿಂದ ಅನುಚಿತಕಾರ್ಯತತ್ಪರರಾಗಿರುವರು. ಮೋಹದಿಂದ ಅಹಂಕಾರಾವಿಷ್ಟರಾಗಿ ಶಿವನನ್ನು ಆರಾಧಿಸದೇ, ಶಿವಧ್ಯಾನವನ್ನೂ ಮಾಡದೇ ಅವಸರಪಟ್ಟು ಯುದ್ಧಕ್ಕೆ ಹೋದರು. ಎಷ್ಟಾದರೂ ಆ ಪ್ರಚಂಡ ದೈತ್ಯನು ಪ್ರಬಲನಾಗಿದ್ದಾನಷ್ಟೆ. ಆತನೊಡನೆ ಯುದ್ಧವನ್ನು ಆರಂಭಿಸುವ ಮೊದಲು ದೇವತೆಗಳು ಶಿವನನ್ನು ಉದಾಸೀನವಾಗಿ ಕಂಡರು. ಆದ್ದರಿಂದಲೇ ಅವರಿಗೆ ಈ ದುರವಸ್ಥೆಯು ಬಂದೊದಗಿತು. ॥೪೯॥

ಆ ದೇವದೇವನಾದ ಮಹಾದೇವನು ದೇವತೆಗಳ ಸಂರಕ್ಷಕನಾಗಿ ಸ್ವತಃ ಸಿದ್ಧನಾಗಿ ಇರುತ್ತಿರುವಾಗಲೂ, ಆತನನ್ನು ಅವರು ಶರಣುಹೋಗಲಿಲ್ಲ. ಆ ಮಹೇಶ್ವರನನ್ನು ಪೂಜಿಸುವ ಗೋಜಿಗೇ ಹೋಗಲಿಲ್ಲ. ಅಂದಮೇಲೆ ಅಂಥ ಮಹಾಪ್ರಭುವನ್ನು ಉದಾಸೀನಮಾಡಿ ಬಲವನ್ನು ಕಳೆದುಕೊಂಡರೆ ಅಪಾಯವುಂಟಾಗುವುದರಲ್ಲಿ ಆಶ್ಚರ್ಯವೇನು? ಇಂಥ ಸಂದರ್ಭದಲ್ಲಿ ಆಪತ್ತು ಬರದೇ ಮತ್ತೇನಾದೀತು? ॥೫೦॥

ಶಿವಧರ್ಮಗಳನ್ನು ತ್ಯಾಗಮಾಡಿ ಶಿವನನ್ನು ಆರಾಧಿಸದೇ ಇರುವವರು ಆತ್ಮಘಾತುಕರಾಗುತ್ತಾರೆ. ಅಂಥ ಶಿವವಿಮುಖರು ಎಷ್ಟೇ ಬಲಶಾಲಿಗಳಾಗಿರಲಿ, ಮಹಾರಾಜರೇ ಆಗಲಿ, ಅವರು ತಮ್ಮ ರಾಜ್ಯವನ್ನೂ ಸರ್ವಸ್ವವನ್ನೂ ಕಳೆದುಕೊ

ಉಮಾಸಹಾಯಾಂಘ್ರಿಸರೋಜಪೂಜಾ
ಪರಾಙ್ಮುಖಸ್ಯಾಪಿ ಸುಖಂ ಯದಿ ಸ್ಯಾತ್ ।
ತದಾ ವಿಷಾಣಾದಪಿ ನೀರಧಾರಾ
ಸ್ಯಾದಂಬುವಾಹಾದಿವ ವೃಷ್ಟಿಕಾಲೇ ॥೫೨॥

॥ ಗರುಡ ಉವಾಚ ॥

ಇತ್ಯುದೀರ್ಯ ಸ್ಥಿತಸ್ತತ್ರ ಕಪಿಲಸ್ತಾವದಾಗತಃ ।
ಗರುಡಶ್ಶೋಕಸಂತಪ್ತಸ್ಸುರನಾಶೇನ ಸತ್ವರಂ ॥೫೩॥

ಸ ಸಮಾಗತ್ಯ ಕಪಿಲಂ ಭಸ್ಮೋದ್ಧೂಳಿತವಿಗ್ರಹಂ ।
ತ್ರಿಪುಂಡ್ರರುದ್ರಾಕ್ಷಧರಂ ನತ್ವಾ ಪ್ರಾಹ ಕೃತಾಂಜಲಿಃ ॥೫೪॥

---

ಳ್ಳುತ್ತಾರೆ. ಹಾಗೆಯೇ ಈಗ ದೇವತೆಗಳೂ ನಾಶವನ್ನು ಪಡೆದಿರುವರೆಂದರೆ ಇದರಲ್ಲಿ ಆಶ್ಚರ್ಯವೇನು ? ಇದೆಲ್ಲವೂ ಆ ಶಿವಾರಾಧನೆಯನ್ನು ತ್ಯಾಗಮಾಡಿದುದರ ಫಲವಷ್ಟೆ. ॥೫೧॥

ಪಾರ್ವತೀವಲ್ಲಭನನ್ನು ಆರಾಧಿಸದೇ ಶಿವವಿಮುಖನಾಗಿರುವವನಿಗೂ ಸುಖವು ಲಭಿಸುವ ಪಕ್ಷದಲ್ಲಿ ನೀರಸವಾದ ಕೊಂಬಿನಿಂದಲೂ ಸಹ ಮಳೆಗಾಲದಲ್ಲಿ ಮೋಡದಿಂದ ನೀರು ಹೊರಡುವಂತೆ ನೀರು ಸುರಿಯಬಹುದು. (ಅಂದರೆ—ಕೊಂಬಿನಿಂದ ನೀರು ಹೊರಡುವುದು ಹೇಗೆ ಅಸಂಭವವೋ ಹಾಗೆಯೇ ಶಿವಪರಾಙ್ಮುಖನಿಗೆ ಸುಖವೂ ಅಸಂಭವ ಎಂದು ತಾತ್ಪರ್ಯ). ॥೫೨॥

ಹೀಗೆಂದು ಕಪಿಲಮುನಿಯು ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ಗರುಡನು ಓಡಿಬಂದನು. ದೇವತೆಗಳೆಲ್ಲರೂ ನಾಶಹೊಂದಿದ್ದರಿಂದ ಆತನು ಮಹಾ ದುಃಖಾಕ್ರಾಂತನಾಗಿ ಭಯದಿಂದ ಸಮಾಚಾರವನ್ನು ತಿಳಿಸಲು ಓಡುತ್ತಲೇ ಬಂದಿದ್ದನು. ॥೫೩॥

ಆ ಗರುಡನು ಬಂದೊಡನೆಯೇ, ಭಸ್ಮತ್ರಿಪುಂಡ್ರರುದ್ರಾಕ್ಷಧಾರಿಯಾದ ಕಪಿಲ ಮುನಿಗೆ ನಮಸ್ಕರಿಸಿ, ಕೈಗಳನ್ನು ಮುಗಿದುಕೊಂಡು ಈ ರೀತಿ ಹೇಳಿದನು. ॥೫೪॥

"ಭಗವನ್, ಕಪಿಲಮುನಿಯೇ, ಕಾಪಾಡು ಕಾಪಾಡು. ಮಹಾ ಅನರ್ಥವಾಗಿ ಹೋಗಿದೆ. ಪ್ರಚಂಡಾಸುರನ ಪಟ್ಟಣದ ಬೆಂಕಿಯ ಜ್ವಾಲೆಯಿಂದ ದೇವತೆಗ

ಪ್ರಚಂಡಪುರತೇಜೋಭಿಸ್ಸಂತಪ್ತಾಸ್ತ್ರಿದಶಾಃ ಪರಂ ।
ಪೇತುಃ ಪೃಥಿವ್ಯಾಂ ನಿಸ್ಸಂಜ್ಞಾಃ ಕಿಂ ಕರ್ತವ್ಯಮತಃಪರಂ ॥೫೫॥

ಇತಿ ತದ್ವಚನಂ ಶ್ರುತ್ವಾ ಕಪಿಲಃ ಪ್ರಾಹ ಸಾದರಂ ।
ವೃತ್ತಾಂತಮಖಿಲಂ ತಾವದ್ವದಸ್ವೇತಿ ವಿಶೇಷತಃ ॥೫೬॥

॥ ಗರುಡ ಉವಾಚ ॥

ಪಾತಾಲಾದ್ಗತಮಸ್ಮಾಭಿರ್ದೇವೈರ್ದೈತ್ಯಜಯೇಚ್ಛಯಾ ।
ದಿವ್ಯಶಸ್ತ್ರಾಘಸಂಕೀರ್ಣೈರ್ಗಂಧರ್ವಾದಿಸಮನ್ವಿತೈಃ ॥೫೭॥

ಶಾರ್ಙ್ಗಶಂಖಧ್ವನಿವ್ಯಾಪ್ತಂ ತದಾ ಭೂಮಂಡಲಂ ಮುನೇ ।
ದೇವದುಂದುಭಿನಿರ್ಘೋಷೈಸ್ಸುರಕೋಲಾಹಲೈರಪಿ ॥೫೮॥

ಪ್ರತಿಧ್ವನಿಸಮಾಕೀರ್ಣಾಸ್ಸರ್ವೇಪಿ ಗಿರಯಸ್ತದಾ ।
ಚಕ್ರಸ್ಫುರಣಸಂಭೂತೈಃ ಸ್ಫುಲಿಂಗೈರಾವೃತಂ ಜಗತ್ ॥೫೯॥

---

ಳೆಲ್ಲರೂ ಬೆಂದುಹೋಗಿದ್ದಾರೆ. ಎಲ್ಲರೂ ಮೂರ್ಛಿತರಾಗಿ ನೆಲದ ಮೇಲೆ ಬಿದ್ದಿದ್ದಾರೆ." ॥೫೫॥

ಈ ಪ್ರಕಾರವಾಗಿ ಗರುಡನು ಆತುರವಾಗಿ ಹೇಳಲು, ಕಪಿಲಮುನಿಯು ಆಗ್ರಹದಿಂದ ಏನು ಸಮಾಚಾರ ನಡೆದಿದೆ? ಎಲ್ಲವನ್ನೂ ವಿಶದವಾಗಿ ಹೇಳೆಂದು ಕೇಳಿದನು. ಆಗ ಗರುಡನು ಮತ್ತೆ ಹೀಗೆಂದನು. ॥೫೬॥

"ನಾವು ಸಮಸ್ತ ದೇವತೆಗಳೂ ಗಂಧರ್ವರಿಂದೊಡಗೂಡಿ ದೈತ್ಯರೊಡನೆ ಯುದ್ಧಮಾಡಿ ಗೆಲ್ಲಬೇಕೆಂಬ ಸಂಕಲ್ಪದಿಂದ ಈ ಪಾತಾಳಲೋಕದಿಂದ ಹೊರಟೆವು. ನಮ್ಮ ಹತ್ತಿರ ದಿವ್ಯವಾದ ಸಕಲ ಆಯುಧಗಳೂ ಅಸ್ತ್ರಗಳೂ ಇದ್ದವು. ॥೫೭॥

ದೇವತೆಗಳೆಲ್ಲರಿಗೂ ಸಮರೋತ್ಸಾಹವು ತುಂಬಿಹೋಗಿತ್ತು. ಆಗ ಮಹಾಟೋಪದಿಂದ ಬಾರಿಸಿದ ದುಂದುಭಿ, ಶಂಖ, ಪಟಹ ಮುಂತಾದ ಯುದ್ಧವಾದ್ಯದಿಂದ ಪ್ರಚಂಡ ಧ್ವನಿಯು ಹತ್ತು ದಿಕ್ಕುಗಳನ್ನೂ ವ್ಯಾಪಿಸಿತು. ಪ್ರಪಂಚದ ಎಲ್ಲಾ ಗಿರಿದುರ್ಗಗಳೂ ಪ್ರತಿಧ್ವನಿಸ್ಗೈಯ್ಯುತ್ತಿದ್ದವು. ವಿಷ್ಣುಚಕ್ರದಿಂದ ಹೊರಟ ಪ್ರಖರವಾದ ಬೆಂಕಿಯ ಕಿಡಿಗಳು ಸಮಸ್ತ ಜಗತ್ತನ್ನೂ ವ್ಯಾಪಿಸಿದುವು. ದೇವಸೇನಾಬಲದಿಂದ ಅಖಂಡ ವಿಶ್ವವೇ ಅಲ್ಲೋಲಕಲ್ಲೋಲವಾಯಿತು. ಹೀಗೆ

ತದಾನೀಂ ತದ್ಧ್ವನಿಂ ಶ್ರುತ್ವಾ ಪ್ರಚಂಡಾಖ್ಯೋ ಮಹಾಸುರಃ ।
ಸ್ವಪ್ರಧಾನಂ ಮಹೋಗ್ರಾಖ್ಯಂ ಬಿಡಾಲಂ ಚಾಹ ಸತ್ವರಂ ॥೬೦॥

॥ ಪ್ರಚಂಚ ಉವಾಚ ॥

ಕೋಽಯಂ ಕೋಲಾಹಲಃ ಕ್ರೂರಃ ಕಠೋರಶ್ರೂಯತೇ ಮುಹುಃ
ಸ್ಫುಲಿಂಗಾಶ್ಚ ಸಮಾಯಾಂತಿ ಶತಶೋಽಥ ಸಹಸ್ರಶಃ ॥೬೧॥

ಅಭೂತಪೂರ್ವಮೇತಾವದತ್ಯದ್ಭುತಮಿದಂ ಖಲು ।
ಪ್ರವಿಷ್ಟೋ ಹೃದಯಾಕಾಶೇ ಸರ್ವದಾ ಭಯದೋಽಧುನಾ ॥೬೨॥

ಕೇನ ಸೃಷ್ಟೋ ಧ್ವನಿಸ್ಸೋಽಯಂ ಕಸ್ಯ ಚೇದಂ ವಿಜೃಂಭಣಂ ।
ಮಹೀ ಸಕಂಪಾ ಸಕಲಾ ಗಿರಿಕಾನನಸಂವೃತಾ ॥೬೩॥

---

ಮಹಾಸಂಭ್ರಮದಿಂದ ಉತ್ಸಾಹಪೂರ್ಣರಾಗಿ ನಾವು ಆ ಪ್ರಚಂಡದೈತ್ಯನ ಪಟ್ಟಣದ ಬಳಿಗೆ ಹೋದೆವು. ॥೫೮-೫೯॥

ಆಗ ನಮ್ಮ ಆ ಕೋಲಾಹಲಧ್ವನಿಯು ದೈತ್ಯಾಧಿಪತಿಯಾದ ಪ್ರಚಂಡಾಸುರನ ಕಿವಿಯನ್ನೂ ಮುಟ್ಟಿತು. ಆ ಪ್ರಚಂಡದೈತ್ಯನು ಆ ಧ್ವನಿಯನ್ನು ಕೇಳಿದೊಡನೆಯೇ ತನ್ನ ಪ್ರಧಾನಮಂತ್ರಿಗಳಾದ ಮಹೋಗ್ರ ಮತ್ತು ಬಿಡಾಲ ಎಂಬುವರನ್ನು ಕರೆಯಿಸಿ ಈ ರೀತಿ ಕೇಳಿದನು. ॥೬೦॥

"ಎಲೈ ಮಂತ್ರಿಗಳಿರಾ, ಇದು ಏನು ? ಹೀಗೆ ಕೋಲಾಹಲವು ಕೇಳಿಬರುತ್ತಿರುವುದು ? ಇಷ್ಟು ಆಟೋಪಯುಕ್ತವಾಗಿಯೂ ಕರ್ಣಕಠೋರವಾಗಿಯೂ ಇರುವ ಧ್ವನಿಯು ಎಲ್ಲಿಯದು ? ಅಲ್ಲದೇ ಬೆಂಕಿಯ ಕಿಡಿಗಳೂ ಉದುರುತ್ತಿರುವುವು. ಇವು ಎಲ್ಲಿಂದ ಬರುತ್ತಿವೆ ? ॥೬೧॥

ಇಂಥ ಮಹೋಲ್ಬಣವಾದ ಧ್ವನಿಯನ್ನು ಹಿಂದೆಂದೂ ಕೇಳಿರಲಿಲ್ಲ. ಈ ಧ್ವನಿಯು ಅತ್ಯದ್ಭುತವಾಗಿದೆ. ಈಗ ಒಂದುಸಲ ಈ ಧ್ವನಿಯನ್ನು ಕೇಳಿದ ಮಾತ್ರಕ್ಕೇ ಸರ್ವದಾ ಹೆದರಿಕೊಂಡು ಕುಳಿತುಕೊಳ್ಳುವಷ್ಟು ಭಯಂಕರವಾಗಿದೆ. ಈ ಧ್ವನಿಯಿಂದ ಸಮಸ್ತ ಭೂಮಂಡಲ, ಗಿರಿ, ಬೆಟ್ಟ ಮತ್ತು ಅರಣ್ಯ ಎಲ್ಲವೂ ನಡುಗುತ್ತಿವೆ. ಇಂಥ ಮಹಾ ಆಟೋಪವು ಯಾರದು ? ಹೀಗೆ ಧ್ವನಿಯನ್ನು ಮಾಡುತ್ತಿರುವವರು ಯಾರು ? ॥೬೨-೬೩॥

ಲೋಕೇ ಪ್ರತಿಭಟಃ ಕೋಽಪಿ ಕಿಮುತ್ಪನ್ನೋ ಮಮಾಧುನಾ ।
ಕೇನ ಸ್ಯಾತ್ತಾದೃಶೋತ್ಪತ್ತಿಶ್ಶಕ್ತಿಸ್ತಸ್ಯಾಪಿ ಕೀದೃಶೀ ॥೬೪॥

ಇದಂ ವಿಚಾರ್ಯ ಸಕಲಂ ವದ ಯತ್ನಪುರಸ್ಸರಂ ।
ಆಹಾರೇಽಪಿ ನ ಮೇ ಬುದ್ಧಿರಧುನಾ ತು ಪ್ರಜಾಯತೇ ॥೬೫॥

ಇತಿ ತದ್ವಚನಂ ಶ್ರುತ್ವಾ ಕ್ರೂರಃ ಪ್ರಾಹ ಮಹಾಸುರಃ ।
ವಿಚಾರಃ ಕೋಽಯಮಧುನಾ ಮಮಾಹಾರೋ ನ ರೋಚತೇ ॥೬೬॥

ಪ್ರಬಲಸ್ಯ ತವಾಸ್ಯೇಯಂ ಕಥಂ ಬುದ್ಧಿಃ ಪ್ರಜಾಯತೇ ।
ಲೋಕತ್ರಯೇಽಪಿ ದೃಷ್ಟೋಽಸ್ತಿ ನ ತೇ ಪ್ರತಿಭಟಃ ಖಲು ॥೬೭॥

---

ಅಥವಾ ಪ್ರಪಂಚದಲ್ಲಿ ಯಾವನಾದರೂ ನನಗೆ ಪ್ರತಿಪಕ್ಷಿಯು ಹುಟ್ಟಿಕೊಂಡಿರುವನೇ? ಅಪ್ರತಿಭಟನಾದ ನನಗೆ ಸಾಟಿಯಾಗುವ ಅವನು ಯಾರು? ಯಾರಿಂದ ಅವನು ಇಷ್ಟು ಪ್ರಬಲಿಸಿರುವನು? ಅವನ ಅಹಂಕಾರ ಪರಾಕ್ರಮಗಳು ಎಷ್ಟರ ಮಟ್ಟಿಗಿವೆ? ॥೬೪॥

ಆಯ್ಯಾ ಮಂತ್ರಿಯೇ, ಈಗ ಈ ಬಗೆಯಾಗಿ ಆಟೋಪಮಾಡುತ್ತಾ ಬಂದಿರುವವರು ಯಾರವರು ಎಂಬುದನ್ನು ಸರಿಯಾಗಿ ವಿಚಾರಿಸಿರಿ. ಪ್ರಯತ್ನಪುರಸ್ಸರವಾಗಿ ಅವರ ಸ್ಥಿತ್ಯಂತರಗಳನ್ನು ತಿಳಿದುಕೊಂಡು ಬಂದು ಕೂಡಲೇ ನನಗೆ ಹೇಳಿರಿ. ಈಗ ಇದನ್ನು ತಿಳಿದುಕೊಂಡಲ್ಲದೇ ಆಹಾರ ಸ್ವೀಕಾರದಲ್ಲಿಯೂ ನನಗೆ ಸಮಾಧಾನವಿಲ್ಲ." ॥೬೫॥

ಹೀಗೆಂದ ದೈತ್ಯಾಧಿಪತಿಯ ಮಾತನ್ನು ಕೇಳಿ ಕ್ರೂರನೆಂಬ ಅಮಾತ್ಯನು ಈ ರೀತಿ ಹೇಳಿದನು. ಪ್ರಭುವೇ, ಇದೇನು ಆಶ್ಚರ್ಯಕರವಾದ ಮಾತನ್ನಾಡುವೆ? ಇದು ಅಂಥ ಮಹಾವಿಚಾರವೇ? ಇದಕ್ಕೂ ನಿನ್ನ ಆಹಾರಕ್ಕೂ ಏನು ಸಂಬಂಧ? ನೀನು ಸ್ವಲ್ಪವೂ ಚಿಂತಿಸಬೇಕಾಗಿಲ್ಲ. ಇಷ್ಟು ಪ್ರಬಲನಾದ ನಿನಗೆ ಶತ್ರು ಎಂದರೇನು? ನೀನು ಹೀಗೇನೂ ಯೋಚಿಸಲು ಕಾರಣವಿಲ್ಲ. ನಾವು ಮೂರು ಲೋಕವನ್ನೂ ಕಲಕಿ ನೋಡಿದ್ದೇವೆ. ನಿನಗೆ ಶತ್ರುವಾಗಲೀ ಪ್ರತಿಭಟನಾಗಲಿ ಒಬ್ಬನೂ ಇರುವುದಿಲ್ಲ. ॥೬೬-೬೭॥

ಯದಪ್ರತಿಮಮನ್ಯೈಶ್ವರ್ಯಂ ತವ ತನ್ನ ವಿನಶ್ಯತಿ ।
ಅತಶ್ಚಿಂತಾ ನ ಕಾಪ್ಯಸ್ತಿ ಭಯಂ ತ್ಯಜ ಮಹಾಸುರ ॥೬೮॥

ದೇವೈಸ್ಸರ್ವೈಸ್ಸಗಂಧರ್ವೈಃ ಕಿನ್ನರೈಸ್ಸಹ ದುಃಖಿತೈಃ ।
ಸಕುಟುಂಬೈಸ್ಸಪುತ್ರೈಶ್ಚ ಗತಂ ಪಾತಾಲಮಂಡಲಂ ॥೬೯॥

ಅತಃಪರಂ ನ ಕೋಽಪ್ಯಸ್ತಿ ಭೂಲೋಕೇ ತಾದೃಶೋ ರಿಪುಃ ।
ಸ್ವರ್ಗಲೋಕೋಽಧುನಾ ಶೂನ್ಯಸ್ಸತ್ಯಲೋಕೋಽಪಿ ಸರ್ವಥಾ ॥೭೦॥

ವೈಕುಂಠೇಽಪಿ ನ ಕೋಽಪ್ಯಸ್ತಿ ನ ವಾ ನಕ್ಷತ್ರಮಂಡಲೇ ।
ನ ಚ ಗಂಧರ್ವಲೋಕೇಷು ಯಮಲೋಕೇಽಪಿ ಸರ್ವಥಾ ॥೭೧॥

---

ನಿನಗೆ ಯಾವ ಅಸದೃಶವಾದ ಮತ್ತು ಅಪರಿಮೇಯವಾದ ವೈಭವವಿರುವುದೋ ಅದನ್ನು ನೀನು ನಿರಾಬಾಧವಾಗಿ ಉಪಯೋಗಿಸಬಹುದು. ನಿನಗೆ ವೈರಿಗಳು ಇರುವರೆಂಬ ಯೋಜನೆಯನ್ನೇ ಮಾಡಬೇಡ. ನಿನಗೆ ಸರ್ವಥಾ ಯಾವ ಭಯವೂ ಇರುವುದಿಲ್ಲ. ॥೬೮॥

ನಿನ್ನ ಅಪ್ರತಿಹತವಾದ ಪರಾಕ್ರಮದಿಂದ ಪರಾಜಿತರಾದ ದೇವತೆಗಳು, ಗಂಧರ್ವರು, ಕಿನ್ನರರು ಮತ್ತು ಸಿದ್ಧವಿದ್ಯಾಧರರೆಲ್ಲರೂ ತಮ್ಮ ತಮ್ಮ ಕುಟುಂಬ ಸಮೇತರಾಗಿ ಭಯದಿಂದ ಪಲಾಯನ ಮಾಡಿ ಪಾತಾಳ ಲೋಕಕ್ಕೆ ಹೋಗಿ ಅವಿತುಕೊಂಡಿರುವರು. ॥೬೯॥

ನಿನಗೆ ಶತ್ರುಗಳೆಂದು ಹೇಳಿಕೊಳ್ಳುವುದಕ್ಕೆ ಸ್ವಲ್ಪವಾದರೂ ಅರ್ಹತೆ ಇದ್ದ ದೇವತೆಗಳೇ ಹೀಗೆ ಹೆಸರಿಲ್ಲದಂತೆ ಓಡಿಹೋಗಿರುವರು. ಅಂದಮೇಲೆ ಭೂಲೋಕದಲ್ಲಿ ಆ ಮನುಷ್ಯ ಮಾತ್ರರು ನಿನಗೆ ಹೇಗೆ ಶತ್ರುಗಳಾದಾರು? ಅದು ಸರ್ವಥಾ ಅಸಂಭವವೇ ಸರಿ. ನಿನ್ನ ಮೇಲಿನ ತೀವ್ರ ಭಯದಿಂದ ದೇವತೆಗಳೆಲ್ಲರೂ ಸ್ವರ್ಗಲೋಕವನ್ನೂ, ಸತ್ಯಲೋಕವನ್ನೂ, ವೈಕುಂಠವನ್ನೂ, ಹಾಗೆಯೇ ನಕ್ಷತ್ರಮಂಡಲ, ಗಂಧರ್ವಲೋಕ ಇವುಗಳೆಲ್ಲವನ್ನೂ ಬಿಟ್ಟು ಪಲಾಯನ ಮಾಡಿರುವರು. ಆ ಲೋಕಗಳಲ್ಲಿ ಒಂದರಲ್ಲಿಯೂ ಯಾರೂ ಇಲ್ಲದೆ ಎಲ್ಲವೂ ಬರಿದಾಗಿ ಪಾಳುಬಿದ್ದಿವೆ ॥೭೦-೭೧॥

ಕೈಲಾಸವಾಸೀ ಭಗವಾನೇಕಸ್ತಿಷ್ಠತಿ ಶಂಕರಃ ।
ತತ್ಪೂಜಕಾನಾಮಸ್ಮಾಕಂ ಭಯಂ ಸಂಭಾವಿತಂ ನ ಚ ॥೭೨॥

ಪೂಜಯಸ್ವ ಮಹಾದೇವಂ ಲಿಂಗರೂಪಿಣಮವ್ಯಯಂ ।
ಅಪಾರೈರುಪಚಾರೈಸ್ತಂ ಭಯಂ ಸಂತ್ಯಜ ಸಂತ್ಯಜ ॥೭೩॥

ಯದಾ ಮೋಹೇನ ನಾಸ್ಮಾಕಂ ಶಿವೇ ಭಕ್ತಿರ್ಭವಿಷ್ಯತಿ ।
ತದಾ ಭಯಂ ಭವತ್ಯೇವ ದುಃಖಧಾರಾ ಪದೇಪದೇ ॥೭೪॥

ಯೇನ ಸ್ಮೃತೋ ಮಹಾದೇವಸ್ಸಂಸಾರಾತ್ಸ ವಿಮುಚ್ಯತೇ ।
ಭಯಾನಾಂ ತತ್ರ ಕಾ ವಾರ್ತಾ ಭಯಲೇಶೋಽಪಿ ವಾ ಕಥಂ ॥೭೫॥

---

ಕೈಲಾಸ ಒಂದರಲ್ಲಿ ಮಾತ್ರ ಜನವಸತಿ ಇದೆ. ನಮ್ಮ ಆರಾಧ್ಯ ದೈವವಾದ ಶಂಕರನು ಅಲ್ಲಿ ವಿರಾಜಮಾನನಾಗಿದ್ದಾನೆ. ಆ ಪರಮೇಶ್ವರನನ್ನು ಪೂಜಿಸುವ ನಮಗೆ ಮತ್ತೆ ಯಾರಿಂದಲೂ ವಿಘ್ನವಾಗಲಿ ಆತಂಕವಾಗಲಿ ಉಂಟಾಗುವ ಸಂಭವವೇ ಇಲ್ಲ. ॥೭೨॥

ಈಗ ನೀನು ನಿಶ್ಚಿಂತನಾಗಿ ಲಿಂಗರೂಪಧಾರಿಯಾದ ಆ ಪರಮೇಶ್ವರನನ್ನು ಪೂಜಿಸು. ನಿನ್ನ ವೈಭವಕ್ಕೆ ಅನುಗುಣವಾಗಿ ಸಕಲ ಉಪಚಾರಗಳನ್ನೂ ಸೇವೆಗಳನ್ನೂ ಸಲ್ಲಿಸಿ ಆರಾಧಿಸು. ಮನಸ್ಸಿಗೆ ಸ್ವಲ್ಪವೂ ಭಯವನ್ನು ತಂದುಕೊಳ್ಳಬೇಕಾಗಿಲ್ಲ. ॥೭೩॥

ಎಂದು ನಾವು ಪ್ರಮಾದದಿಂದಲೋ ಅಥವಾ ಮೌಢ್ಯದಿಂದಲೋ ಶಿವನನ್ನು ಆರಾಧಿಸುವುದಿಲ್ಲವೋ, ಅಂದು ನಮಗೆ ಭಯವು ಸಂಭಾವಿತವಾಗುವುದು. ಶಿವಭಕ್ತಿಯನ್ನು ತ್ಯಜಿಸಿದರೆ ಆಗ ನಮಗೆ ದುಃಖಪರಂಪರೆಗಳು ಒದಗುವುದು ಸಹಜ. ॥೭೪॥

ಯಾವನು ಆ ಮಹಾದೇವನನ್ನು ಸ್ಮರಿಸಿಕೊಳ್ಳುವನೋ ಅವನು, ಸಕಲ ವಿಧವಾದ ಸಂಸಾರಬಂಧನದಿಂದಲೂ ಮುಕ್ತಿಯನ್ನು ಪಡೆಯುವನು. ಹೀಗಿರಲು ಅಂಥ ಶಿವಭಕ್ತಿ ಇರುವ ನಮಗೆ ಭಯವೆಂದರೇನು? ದುಃಖಪ್ರಸಂಗವೆಲ್ಲಿಂದ ಬಂದೀತು? ॥೭೫॥

ಅಸ್ಮಾಕಂ ಬಲಮೇತಾವತ್ಪ್ರಚಂಡರಿಪುಸಂಕ್ಷಯೇ ।
ಮಹಾದೇವಾರ್ಚನಂ ತತ್ರ ಶಪಥಶ್ಶಿವಪಾದಯೋಃ ॥೭೬॥

ಅಸ್ಮಾಸು ಸತ್ಸು ಕಾ ಭೀತಿಶ್ಶ್ಯಾಂಕರೇಷು ತವಾಧುನಾ ।
ಪ್ರಲಯಾವಧಿ ನಾಸ್ಮಾಕಂ ದುಃಖವಾರ್ತಾಪಿ ಲೇಶತಃ ॥೭೭॥

ಇತಿ ತದ್ವಚನಂ ಶ್ರುತ್ವಾ ಪ್ರಚಂಡೋ ಭೀಮವಿಕ್ರಮಃ ।
ಮಹೋಗ್ರಾಖ್ಯಮುವಾಚೇದಂ ವಚನಂ ವಿಸ್ಮಯಾವಹಂ ॥೭೮॥

॥ ಪ್ರಚಂಡ ಉವಾಚ ॥

ಸತ್ಯಮುಕ್ತಂ ತ್ವಯಾ ನಾತ್ರ ಸರ್ವಥಾ ನ ವಿಪರ್ಯಯಃ ।
ಅಯಂ ಕೋಲಾಹಲಶ್ಶಾಂತೋ ಭವಿಷ್ಯತಿ ಯದಾ ತದಾ ॥೭೯॥

---

ಎಲೈ ಪ್ರಚಂಡಪ್ರಭುವೇ, ನಮ್ಮ ಇಂಥ ಅಗಾಧಪರಾಕ್ರಮಕ್ಕೂ ನಮ್ಮ ಸಕಲ ಶತ್ರುಗಳ ಪರಾಜಯಕ್ಕೂ ಮುಖ್ಯ ಕಾರಣವು ಶಿವಾರ್ಚನೆ ಎಂದೇ ತಿಳಿ. ಈ ವಿಷಯವು ನಿಜವೆಂಬುದರಲ್ಲಿ ಶಿವಪಾದಗಳಾಗಿಯೂ ಶಪಥಮಾಡಬಲ್ಲೆನು. ॥೭೬॥

ನಾವೆಲ್ಲರೂ ಪರಮಶಿವಭಕ್ತರಾಗಿರಲು ನಿನಗೆ ಭಯವೆಲ್ಲಿಂದ ಬರಬೇಕು? ಯಾರು ನಮ್ಮ ಮೇಲೆ ಕೈಮಾಡಬಲ್ಲರು? ಅಂಥ ಸಾಮರ್ಥ್ಯವು ಬ್ರಹ್ಮಾಂಡದಲ್ಲೇ ಯಾರಿಗೂ ಇರುವುದಿಲ್ಲವೆಂದು ತಿಳಿ. ಇನ್ನು ಈ ಕಲ್ಪವು ಮುಗಿದು ಪ್ರಳಯವಾಗುವವರೆಗೂ ಯಾವ ಭಯವೂ ಇರುವುದಿಲ್ಲ. ನಮಗೆ ಆ ವರೆಗೆ ಯಾವ ದುಃಖ ಪ್ರಸಂಗವೂ ಸಂಭವಿಸುವುದಿಲ್ಲ. ಇನ್ನು ನೀನು ನಿಶ್ಚಿಂತನಾಗಿರು." ॥೭೭॥

ಈ ಪ್ರಕಾರವಾದ ಉಗ್ರನ (ಕ್ರೂರನ) ಮಾತನ್ನು ಕೇಳಿದ ಬಳಿಕ ಮಹಾ ಪರಾಕ್ರಮಿಯಾದ ಪ್ರಚಂಡದೈತ್ಯನು ಈರೀತಿ ಹೇಳಿದನು. ॥೭೮॥

" ಎಲೈ ಉಗ್ರನೇ! ನೀನು ಹೇಳುವುದು ಸರಿಯಾಗಿದೆ. ಅದರಲ್ಲೇನೂ ಅನುಮಾನವಿರುವುದಿಲ್ಲ. ನೀನು ಯೋಗ್ಯವಾದ ಮಾತನ್ನೇ ಹೇಳಿರುವೆ. ಆದರೆ ಇಷ್ಟು ಕೋಲಾಹಲವಾಗುತ್ತಿರುವಾಗ ನನಗೆ ಆಹಾರವು ರುಚಿಸುವುದಿಲ್ಲ. ಈ ಗಲಭೆಯು ಕೂಡಲೇ ಶಾಂತವಾಗಬೇಕು. ಬಳಿಕ ಉಳಿದ ಯೋಚನೆ ಹಾಗಿರಲಿ. ॥೭೯॥

ಭೋಕ್ತವ್ಯಮನ್ಯಥಾ ತತ್ರ ನ ರುಚಿ ರ್ಮಮಜಾಯತೇ ।
ಉಗ್ರಜ್ವಾಲಂ ಸಮಾಹೂಯ ಪ್ರೇಷಯಸ್ವ ರಣಾಯ ತಂ ॥೮೦॥

ಯಾಂತು ತೇನ ಸಹಾನ್ಯೇಽಪಿ ದೈತ್ಯಾಶ್ಶಸ್ತ್ರಬಲಾನ್ವಿತಾಃ ।
ಇತಿ ತದ್ವಚನಂ ಶ್ರುತ್ವಾ ಜ್ವಾಲಾಸ್ಯಂ ಚಾಹ್ವಯತ್ತದಾ ॥೮೧॥

ಪ್ರೇಷಯಾಮಾಸ ಧರ್ಮಾತ್ಮಾ ದೈತ್ಯಕೋಟಿಸಮಾವೃತಂ ।
ತದಾ ತಮಾಹ ಜ್ವಾಲಾಸ್ಯಂ ತತ್ಕೋಲಾಹಲಕಾರಿಣಃ ॥೮೨॥

ಹಂತವ್ಯಾ ಏವ ಬಹುಧಾ ನಾತ್ರ ಕಾರ್ಯಾ ವಿಚಾರಣಾ ।
ಇತಿ ತದ್ವಚನಂ ಶ್ರುತ್ವಾ ಸೋಽಪಿ ವೀರ್ಯಬಲೋದ್ಧತಃ ॥೮೩॥

ಜಗಾಮ ದೈತ್ಯಪ್ರವರೈಸ್ಸಂವೃತೋ ರಥಮಾಸ್ಥಿತಃ ।
ಅಭ್ರಂಕಷಂ ರಥಂ ದೃಷ್ಟ್ವಾ ಪತಾಕಾರ್ಬುದಸಂಯುತಂ ॥೮೪॥

---

ಈ ಕೋಲಾಹಲವನ್ನು ನೋಡಿದರೆ ಯಾರೋ ಕೊಬ್ಬಿನಿಂದ ಯುದ್ಧಕ್ಕೆಂದು ಬಂದಿರುವಂತೆ ತೋರುತ್ತಿದೆ. ಆದ್ದರಿಂದ ಅವರೊಡನೆ ಯುದ್ಧಮಾಡಿ ಅವರ ಸೊಕ್ಕನ್ನು ಮುರಿದು ಕಳುಹಿಸಲು ಈ ಕೂಡಲೇ ನಮ್ಮ ಉಗ್ರಜ್ವಾಲನನ್ನು ಕಳುಹು. ಅಲ್ಲದೇ ಇನ್ನೂ ಅನೇಕ ಶಸ್ತ್ರಸಜ್ಜಿತರಾದ ದೈತ್ಯಸೈನ್ಯಗಳನ್ನೂ ಜೊತೆಯಲ್ಲಿ ಕಳುಹಿಸು.'' ॥೮೦॥

ಹೀಗೆಂದು ಪ್ರಚಂಡದೈತ್ಯನು ಆಜ್ಞಾಪಿಸಲು ಅದೇ ಮೇರೆಗೆ ಆ ಅಮಾತ್ಯನು ಜ್ವಾಲಾಸ್ಯದೈತ್ಯನನ್ನು ಕರೆಯಿಸಿದನು. ಮತ್ತು ಈ ಕೂಡಲೇ ಹೋಗಿ ಆ ಕೋಲಾ ಹಲವನ್ನು ಮಾಡುತ್ತಿರುವವರು ಯಾರೇ ಆಗಿದ್ದರೂ ಅವರನ್ನು ಕೊಲ್ಲೆಂದೂ ಈ ವಿಚಾರದಲ್ಲಿ ಸ್ವಲ್ಪವೂ ಹಿಂದೆಮುಂದೆ ನೋಡಬೇಕಾಗಿಲ್ಲೆಂದೂ ಅಪ್ಪಣೆಯಿತ್ತು ಯುದ್ಧಕ್ಕೆ ಕಳುಹಿಸಿದನು. ಆತನ ಜೊತೆಯಲ್ಲಿ ಅನೇಕ ಶಸ್ತ್ರಸಜ್ಜಿತವಾದ ದೈತ್ಯ ಸೈನ್ಯವನ್ನೂ ಕಳುಹಿಸಿದನು. ಆ ಜ್ವಾಲಾಸ್ಯದೈತ್ಯನೂ ಸಹ ಮಂತ್ರಿಯ ಅಪ್ಪಣೆ ಮೇರೆಗೆ ಆ ಕೂಡಲೇ ಯುದ್ಧಕ್ಕೆ ಹೊರಟನು. ॥೮೧-೮೨-೮೩॥

ಜ್ವಾಲಾಸ್ಯನು ಅನೇಕ ದೈತ್ಯರೊಡನೆ ರಥವನ್ನೇರಿ ವೇಗದಿಂದ ರಣಾಂಗಣಕ್ಕೆ ಬಂದನು. ಅವನ ರಥವು ಅಂತರಿಕ್ಷವನ್ನು ಮುಟ್ಟುವಷ್ಟು ಮಹೋನ್ನತವಾಗಿ ದ್ದಿತು. ಕೋಟ್ಯಂತರ ಧ್ವಜಪತಾಕೆಗಳು ಅದರಲ್ಲಿ ಹಾರಾಡುತ್ತಿದ್ದವು. ಆತನ

ಜ್ವಾಲಾಕುಲಸಮಾಕೀರ್ಣಂ ಭಯಮಾಪುಸ್ತದಾ ಸುರಾಃ ।
ತದಾ ನಾರಾಯಣಃ ಪ್ರಾಹ ಚತುರ್ಮುಖಮುಖಾನ್ ಸುರಾನ್ ॥೮೫॥

ಜ್ವಲತ್ಪರ್ವತಸಂಕಾಶೋ ರಥೋ ಪೃಷ್ಟೋ ನವೇತ್ಯಪಿ ।
ಅತ್ಯಾಶ್ಚರ್ಯಕರಸ್ಸೋಽಯಂ ರಥೋ ವಹ್ನಿಗಣಾಕುಲಃ ॥೮೬॥

ಕಿಮತಃ ಪರಮಸ್ಮಾಭಿಃ ಕರ್ತವ್ಯಂ ತದ್ವದಂತು ವಃ ।
ಆಯಾತ್ಯೇವಾತಿವೇಗೇನ ವಾತವೇಗನಿವಾರಕಃ ॥೮೭॥

ತದ್ರಥಜ್ವಾಲಯಾ ಸ್ಥಾತುಮಶಕ್ಯಮಿತಿ ಭಾತಿ ಮೇ ।
ಅತಃ ಪರಂ ಕ್ವ ಗಂತವ್ಯಂ ದಿಗಂತಂ ವ್ಯಾಪ್ತ ಏವ ಸಃ ॥೮೮॥

---

ರಥವು ಬೆಂಕಿಯ ಜ್ವಾಲೆಗಳಿಂದ ಕೂಡಿದ್ದಿತು. ಇಂಥ ಭಯಂಕರ ದೃಶ್ಯವನ್ನು ಕಂಡೊಡನೆಯೇ ಎಲ್ಲಾ ದೇವತೆಗಳೂ ಮಹಾ ಭಯದಿಂದ ನಡುಗಿದರು. ಆಗ ವಿಷ್ಣುವು, ಬ್ರಹ್ಮನೇ ಮೊದಲಾದ ದೇವತೆಗಳನ್ನು ಕುರಿತು ಈರೀತಿ ಹೇಳಿದನು. ||೮೪-೮೫||

ಬೆಂಕಿಯ ಜ್ವಾಲೆಯಿಂದ ಪರಿವೃತವಾದ ಈ ರಥವು ನಿಜವಾದ ರಥವೋ ಅಥವಾ ಉರಿಯುತ್ತಿರುವ ಪರ್ವತವೋ, ತಿಳಿಯುವುದೇ ಕಷ್ಟವಾಗಿದೆ. ಇದೆಲ್ಲ ದೃಶ್ಯವೂ ಮತ್ತು ಸಂದರ್ಭಗಳೂ ಅತ್ಯದ್ಭುತವಾಗಿರುವಂತೆ ಅಪಾಯಕರಗಳೂ ಆಗಿವೆ. ||೮೬||

ಈಗ ನಾವು ಏನು ಮಾಡಬೇಕೆಂಬುದೂ ತೋಚದಾಗಿದೆ. ನೀವೇ ಹೇಳಿರಿ. ಮುಂದೆ ನಾವೇನು ಮಾಡೋಣ? ಆಲೋಚಿಸಲೂ ಸಹ ಈಗ ಹೆಚ್ಚು ವೇಳೆ ಇಲ್ಲ. ಆ ರಥವು ವಾಯುವೇಗವನ್ನೂ ಸಹ ಮೀರಿಸುವ ವೇಗದಲ್ಲಿ ನಮ್ಮ ಕಡೆಗೇ ಓಡಿಬರುತ್ತಿದೆ. ||೮೭||

ಈಗ ಯುದ್ಧವನ್ನು ಮಾಡುವುದಂತೂ ದೂರವಿರಲಿ. ಆ ರಥದ ಜ್ವಾಲೆಯನ್ನು ಸಹಿಸಿಕೊಂಡು ಇಲ್ಲಿ ನಿಲ್ಲಲು ಶಕ್ಯವಿಲ್ಲೆಂದು ತೋರುತ್ತದೆ. ಈಗ ಏನು ಮಾಡುವುದು? ಎಲ್ಲಿಗೆ ಹೋಗುವುದು? ಆ ರಥಜ್ವಾಲೆಯು ದಿಗಂತವನ್ನೂ ಸಹ ವ್ಯಾಪಿಸಿಕೊಂಡಿದೆ. ಇನ್ನು ನಾವು ಬದುಕುವುದು ಹೇಗೆ? ||೮೮||

ರಥೋ ಮಹಾಗ್ನಿಸಂಕಾಶಃ ಶ್ರುತಪೂರ್ವೋಽಪಿ ನ ಧ್ರುವಂ ।
ಪಶ್ಯ ಪಶ್ಯ ರಥೇ ದೈತ್ಯಂ ರಥಸ್ಥಮಪಿ ಸತ್ವರಂ ॥೮೯॥

ಚತುರ್ಮುಖಾಧುನಾ ಪಶ್ಯ ರಥವಾಜಿರಥಂ ಪರಂ ।
ಅತಃ ಪರಂ ನ ಪಾತಾಲೇ ಗಂತುಂ ಕಾಲೋಽಪಿ ವರ್ತತೇ ॥೯೦॥

ಗಮನೇಽಪಿ ಸುಖಂ ತತ್ರ ಕಥಂ ಸಂಭಾವಿತಂ ವದ ।
ಇತಿ ತದ್ವಚನಂ ಶ್ರುತ್ವಾ ಪ್ರಾಹ ನಾರಾಯಣಂ ವಿಧಿಃ ॥೯೧॥

ಚಕ್ರಂ ಗೃಹಾಣ ಕಾ ಭೀತಿಃ ಕುರು ಯುದ್ಧಮಿಹೇತ್ಯಪಿ ।
ತತಃ ಪರಮಭೂದ್ಯುದ್ಧಂ ಯುಗಾನಾಮಯುತಂ ತಯೋಃ ॥೯೨॥

---

ಹೀಗೂ ರಥವಿರುತ್ತದೆಂಬುದನ್ನು ನಾವೆಂದೂ ಕೇಳಿಯೂ ಇರಲಿಲ್ಲ. ಈ ರಥವಾದರೋ ಸಾಕ್ಷಾತ್ ಬೆಂಕಿಯ ಸ್ವರೂಪವೇ ಆಗಿದೆ. ಬ್ರಹ್ಮನೇ, ನೋಡು ನೋಡು. ಆ ರಥವು ಎಷ್ಟು ಭಯಂಕರವಾಗಿದೆ. ಆ ರಥದಲ್ಲಿ ಕುಳಿತಿರುವ ದೈತ್ಯನನ್ನೂ ಅವಲೋಕಿಸು. ॥೮೯॥

ಚತುರ್ಮುಖನೇ, ಇತ್ತ ನೋಡು. ಆ ರಥವೂ ಆ ಕುದುರೆಗಳೂ ಎಷ್ಟು ರುದ್ರಾಕಾರಗಳಾಗಿವೆ. ಇನ್ನು ನಮ್ಮ ಗತಿ ಏನು? ಪಾತಾಳಕ್ಕೆ ಓಡಿಹೋಗಲು ದಾರಿಯೂ ಸಹ ಕಾಣುವುದಿಲ್ಲ. ಅವಕಾಶವೂ ಇರುವುದಿಲ್ಲ. ಅಥವಾ ಈಗ ನಾವು ಪಾತಾಳಕ್ಕೆ ಹೋದರೂ ನಮಗೆ ಇನ್ನು ಸುಖವೆಲ್ಲಿಂದ ಬಂತು? ಈಗ ಏನು ಮಾಡುವುದು? ನೀನೇ ಹೇಳು." ॥೯೦॥

ಈ ಪ್ರಕಾರವಾದ ವಿಷ್ಣುವಿನ ಮಾತನ್ನು ಕೇಳಿ ಬ್ರಹ್ಮನು ಆಗ ವಿಷ್ಣುವಿಗೆ ಧೈರ್ಯ ಹೇಳಿದನು. ಈಗ ನಾವು ಹೆದರಕೂಡದು. ಹಿಂಜರಿಯಕೂಡದು. ಹಠದಿಂದ ಹೋರಾಡಬೇಕು. ಹಿಡಿ ಚಕ್ರವನ್ನು. ಚಕ್ರವನ್ನು ತಿರುಗಿಸಿ ಯುದ್ಧ ಮಾಡು. ಹೀಗೆಂದು ಬ್ರಹ್ಮನು ಹುರಿದುಂಬಿಸಲು ವಿಷ್ಣುವು ಯುದ್ಧಕ್ಕಾರಂಭಿಸಿದನು. ಆ ಜ್ವಾಲಾಸ್ಯದೈತ್ಯನಿಗೂ ವಿಷ್ಣುವಿಗೂ ಹೀಗೆಯೇ ಅನೇಕ ಯುಗಪರ್ಯಂತ ಯುದ್ಧವು ನಡೆಯಿತು. ॥೯೧-೯೨॥

ಪರಸ್ಪರಪರಿಕ್ಷಿಪ್ತಶಸ್ತ್ರಾಸ್ತ್ರೈರ್ಮುನಿಪುಂಗವ ।
ತತೋ ನಷ್ಟರಥಸ್ಸೋಽಭೂನ್ನಷ್ಟಾಶ್ವೋ ನಷ್ಟಸೈನಿಕಃ ॥೯೩॥

ತತಃ ಪರಂ ಗದಾಯುದ್ಧಂ ಜಾತಂ ಯುಗಚತುಷ್ಟಯಂ ।
ತತಃ ಪರಂ ಖಮಾಶ್ರಿತ್ಯ ಸ ಚಕಾರಾಸುರೋ ರವಂ ॥೯೪॥

ತತ್ರಾಪಿ ಸ ಗತೋ ವಿಷ್ಣುಸ್ತತ್ರ ಯುದ್ಧಮಭೂತ್ತಯೋಃ ।
ತತಃ ಪಪಾತ ಭೂಪೃಷ್ಠೇ ಹತೋ ನಾರಾಯಣಸ್ತದಾ ॥೯೫॥

ಸಂಜ್ಞಾಂ ಪ್ರಾಪ್ಯ ಗತೋ ಭೂಯೋ ಯುದ್ಧಾಯ ಕೃತನಿಶ್ಚಯಃ ।
ಮುಷ್ಟಿಯುದ್ಧಮಭೂತ್ತತ್ರ ಯುಗಾನಾಮಯುತಂ ತಯೋಃ ॥೯೬॥

ತತಸ್ಸ ದೈತ್ಯಸ್ತೇನೈವ ನಿಹತೋ ಹರಿಣಾ ತದಾ ।
ತತಸ್ಸೈನ್ಯಂ ಹತಂ ಸರ್ವಂ ಚಕ್ರಿಣಾ ತೇನ ದುಸ್ಸಹಂ ॥೯೭॥

---

ಎಲೈ ಕಪಿಲಮುನಿಯೇ! ಆ ಯುದ್ಧವು ಅತ್ಯಂತ ಭಯಂಕರವಾಗಿದ್ದಿತು. ಇಬ್ಬರೂ ಅನೇಕಾನೇಕ ಶಸ್ತ್ರಾಸ್ತ್ರಗಳಿಂದ ಹೋರಾಡಿದರು. ಕೊನೆಯಲ್ಲಿ ಆ ದೈತ್ಯನ ರಥವು ನಾಶವಾಯಿತು. ಹಾಗೆಯೇ ಆತನ ಕುದುರೆಗಳೂ ಅನೇಕ ಸೈನಿಕರೂ ಹತರಾದರು. ॥೯೩॥

ಆ ಕೂಡಲೇ ಆ ಜ್ವಾಲಾಸ್ಯದೈತ್ಯನು ಭಯಂಕರಧ್ವನಿಮಾಡುತ್ತಾ ಆಕಾಶಕ್ಕೆ ಹಾರಿ ಮೇಲುಗಡೆಯಿಂದ ಗದಾಯುದ್ಧಕ್ಕೆ ಆರಂಭಿಸಿದನು. ಆಗ ವಿಷ್ಣುವೂ ಸಹ ಗದೆಯನ್ನೇ ಧರಿಸಿ ಪ್ರಚಂಡನಾಗಿ ಹೋರಾಡಿದನು. ಆ ಯುದ್ಧವೂ ಸಹ ನಾಲ್ಕು ಯುಗ ಪರ್ಯಂತ ನಡೆಯಿತು. ಕೊನೆಗೆ ಆ ಅಸುರನು ವಿಷ್ಣುವಿನ ಮೇಲೆ ಮಹಾ ಬಲಪ್ರಹಾರ ಮಾಡಿದನು. ಆ ಹೊಡೆತವನ್ನು ತಡೆಯಲಾರದೇ ವಿಷ್ಣುವು ಮೂರ್ಛಿತನಾಗಿ ಭೂಮಿಯಲ್ಲಿ ನಿಶ್ಚೇಷ್ಟನಾಗಿ ಬಿದ್ದನು. ॥೯೪-೯೫॥

ಬಳಿಕ ವಿಷ್ಣುವು ಮೂರ್ಛೆಯಿಂದೆದ್ದು ಮಹಾ ದೃಢಸಂಕಲ್ಪದಿಂದ ಮತ್ತೆ ಮುಷ್ಟಿಯುದ್ಧಕ್ಕಾರಂಭಿಸಿದನು. ಆ ಭಯಂಕರವಾದ ಮುಷ್ಟಿಯುದ್ಧವು ಹತ್ತು ಸಹಸ್ರ ಯುಗಪರ್ಯಂತ ಅವಿಚ್ಛಿನ್ನವಾಗಿ ನಡೆಯಿತು. ॥೯೬॥

ಆ ಘನಘೋರವಾದ ಯುದ್ಧದಲ್ಲಿ ವಿಷ್ಣುವು ಆ ದೈತ್ಯನಿಗೆ ಅನೇಕ ಬಲಪ್ರಹಾರಗಳನ್ನು ಮಾಡಿದನು. ಆ ಭಯಂಕರವಾದ ಹೊಡೆತವನ್ನು ತಾಳಲಾ

ತತಃ ಕ್ಷಣಾರ್ಧಂ ಸುಖಿನಃ ಸುರಾಸ್ಸರ್ವೇ ತದಾ ಸ್ಥಿತಾಃ ।
ಜ್ವಾಲಾಸ್ಯಂ ನಿಹತಂ ದೃಷ್ಟ್ವಾ ಪ್ರಚಂಡಸ್ತಪ್ತಮಾನಸಃ ॥೯೮॥

ಕಿಂ ಕರ್ತವ್ಯಮಿತಿ ಪ್ರಾಹ ಪ್ರಧಾನಮುರುವಿಕ್ರಮಂ ॥೯೯॥

॥ ಪ್ರಧಾನ ಉವಾಚ ॥

ಅಪಾರೇಷ್ವಸುರೇಷ್ವೇಕಃ ಕಶ್ಚಿಜ್ಜ್ವಾಲಾಸ್ಯನಾಮಕಃ ।
ಮೃತಃ ಕಾ ತಾವತಾ ಹಾನಿಸ್ಸ ತಾವದತಿದುರ್ಬಲಃ ॥೧೦೦॥

ವಹ್ನಿಕೂಟ ಇತಿ ಖ್ಯಾತಃ ಕಶ್ಚಿದಸ್ತಿ ಮಹಾಸುರಃ ।
ಸ ಯುದ್ಧನಿಪುಣಸ್ಸೋಽಪಿ ಯುದ್ಧಾಯ ಕೃತನಿಶ್ಚಯಃ ॥೧೦೧॥

---

ರದೇ ಆ ಜ್ವಾಲಾಸ್ಯದೈತ್ಯನು ಕೂಡಲೇ ಮೃತನಾದನು. ಆಗ ವಿಷ್ಣುವು ಮತ್ತೆ ಚಕ್ರವನ್ನು ಧರಿಸಿ ಯುದ್ಧಮಾಡುತ್ತಾ ಅಪಾರ ದೈತ್ಯಸೈನ್ಯವನ್ನೂ ಕೊಂದನು. ಆಗ ಸ್ವಲ್ಪಮಟ್ಟಿಗೆ ದೇವತೆಗಳಿಗೆ ಧೈರ್ಯವೂ ಸಂತೋಷವೂ ತಲೆದೋರಿತು.॥೯೭॥

ಜ್ವಾಲಾಸ್ಯದೈತ್ಯನು ಮೃತನಾದನೆಂಬ ವಾರ್ತೆಯನ್ನು ಕೇಳಿ ಪ್ರಚಂಡ ದೈತ್ಯನಿಗೆ ಮಹಾ ಸಂಕಟವಾಯಿತು. ಆಗ ಆತನು ಮುಂದೇನು ಮಾಡಬೇಕೆಂದು ಮತ್ತೆ ಮಂತ್ರಿಯನ್ನೇ ಕೇಳಿದನು. ॥೯೮-೯೯॥

ಆಗ ಮಂತ್ರಿಯು ಪ್ರಚಂಡನನ್ನು ಕುರಿತು ಪ್ರಭುವೇ, ಇಷ್ಟಕ್ಕೆ ತಾವು ಚಿಂತಿಸಬಾರದು. ನಮ್ಮ ಅಪಾರವಾದ ದೈತ್ಯಸಂಪತ್ತಿನಲ್ಲಿ ಜ್ವಾಲಾಸ್ಯನೆಂಬೊಬ್ಬನು ಮೃತನಾದದ್ದಕ್ಕೆ ಇಷ್ಟು ವ್ಯಸನವೇ? ಆತನು ಮೃತನಾದ್ದರಿಂದ ನಮಗೇನೂ ಅತಿಶಯವಾದ ನಷ್ಟವಿಲ್ಲ. ಆ ಜ್ವಾಲಾಸ್ಯನು ನಮ್ಮವರಲ್ಲೆಲ್ಲಾ ಅತ್ಯಂತ ದುರ್ಬಲ ನಾಗಿದ್ದನು. ಅವನು ಹೋಗಲಿ. ಈಗ ಬಲಿಷ್ಠನಾದ ದೈತ್ಯನನ್ನು ಯುದ್ಧಕ್ಕೆ ಕಳುಹಿಸಿದರಾಯಿತು. ಇದಕ್ಕಾಗಿ ಚಿಂತಿಸಬೇಕಾಗಿಲ್ಲ. ॥೧೦೦॥

ವಹ್ನಿಕೂಟನೆಂಬ ದೈತ್ಯನು ಯುದ್ಧದಲ್ಲಿ ಮಹಾ ನಿಪುಣನಿರುವನು. ಅಲ್ಲದೇ ಈ ಮೊದಲೇ ಅವನು ಯುದ್ಧಕ್ಕೆ ಹೋಗಬೇಕೆಂದು ದೃಢಸಂಕಲ್ಪವನ್ನೂ ಮಾಡಿದ್ದಾನೆ. ಅತ್ಯಂತ ಉತ್ಸಾಹಶಾಲಿಯಾದ ಆತನನ್ನು ಈಗ ಯುದ್ಧಕ್ಕೆ ಕಳುಹಿಸೋಣ. ॥೧೦೧॥

ತೇನೈವ ಸಹ ನಿರ್ಯಾಂತು ಕೋಟಿಶೋಽಪ್ಯಸುರಾ ಅಪಿ ।
ಯುದ್ಧದರ್ಪಸಮಾಕ್ರಾಂತಾಸ್ತೇಽಪಿ ಸೋಽಪಿ ಮಹಾಬಲಃ ॥೧೦೨॥

ಗಜಾನಾಮರ್ಬುದಂ ಯಾತು ನ್ಯರ್ಬುದಂ ವಾಜಿನಾಮಪಿ ।
ರಥಾನಾಂ ನ್ಯರ್ಬುದಂ ಯಾತು ಯುದ್ಧಾಯಾತಿಪ್ರಯತ್ನತಃ ॥೧೦೩॥

ಇತ್ಯುಕ್ತ್ವಾ ಸೋಽಪಿ ಸಂಕ್ರುದ್ಧಂ ವಹ್ನಿಕೂಟಮುವಾಚ ತಂ ।
ಯಾಹಿ ಯುದ್ಧಾಯ ವೇಗೇನ ವಿಲಂಬಂ ಸಂತ್ಯಜೇತ್ಯಪಿ ॥೧೦೪॥

ಇತ್ಯುಕ್ತಸ್ಸ ಯಯೌ ತೇನ ಬಲೈಸ್ತ್ರೈಃ ಪ್ರಬಲೈರ್ಯುತಃ ।
ನಾರಾಯಣಾದಯೋ ಯತ್ರ ತೇ ಸುರಾಸ್ತತ್ರ ಸತ್ವರಂ ॥೧೦೫॥

ತತಃ ಪರಂ ಸುರೈಸ್ಸಾಕಂ ಯುದ್ಧಂ ಘೋರಮಭೂತ್ತದಾ ।
ಚಕ್ರೀ ಚಕ್ರಂ ಸಮಾದಾಯ ಚಿಚ್ಛೇದಾಸುರಪುಂಗವಾನ್ ॥೧೦೬॥

---

ಆ ವಹ್ನಿಕೂಟನ ಜೊತೆಯಲ್ಲಿ ಕೋಟಿ ದೈತ್ಯಸೈನ್ಯವೂ ಹೋಗುವುದು. ಅವರೆಲ್ಲರೂ ಯುದ್ಧದಲ್ಲಿ ಉತ್ಸಾಹ, ದರ್ಪ, ಇವುಗಳಿಂದ ಕೂಡಿದ್ದಾರೆ. ಮತ್ತು ಮಹಾ ಪರಾಕ್ರಮಶಾಲಿಗಳಾಗಿಯೂ ಇದ್ದಾರೆ. ॥೧೦೨॥

ಅಲ್ಲದೇ ಅಶ್ವಸೈನ್ಯ, ಗಜಸೈನ್ಯ ಇವುಗಳನ್ನೂ ಸಹ ಕೋಟ್ಯಂತರಸಂಖ್ಯೆಯಲ್ಲಿ ಯುದ್ಧಕ್ಕೆ ಸಜ್ಜುಮಾಡಿ ಕಳುಹಿಸೋಣ. ॥೧೦೩॥

ಹೀಗೆಂದು ಹೇಳಿ ಆ ಮಂತ್ರಿಯು ಕೂಡಲೇ ವಹ್ನಿಕೂಟನನ್ನು ಕರೆಯಿಸಿ ನೀನು ಸ್ವಲ್ಪವೂ ವಿಳಂಬ ಮಾಡದೆ ಈ ಕೂಡಲೇ ಯುದ್ಧಕ್ಕೆ ಹೋಗೆಂದು ಆಜ್ಞಾಪಿಸಿದನು. ॥೧೦೪॥

ಮಂತ್ರಿಯ ಅಪ್ಪಣೆಯನ್ನು ಕೇಳಿದೊಡನೆಯೇ ಆ ವಹ್ನಿಕೂಟ ದೈತ್ಯನು ಪ್ರಚಂಡ ಸೈನ್ಯಗಳೊಡನೆ ವಿಷ್ಣುವೇ ಮೊದಲಾದ ದೇವತೆಗಳಿದ್ದೆಡೆಗೆ ವೇಗದಿಂದ ಹೋದನು. ॥೧೦೫॥

ಆಗ ಮತ್ತೆ ದೇವದೈತ್ಯರಿಗೆ ಘೋರವಾದ ಯುದ್ಧವು ನಡೆಯಿತು. ನಾರಾಯಣನು ಆ ಯುದ್ಧದಲ್ಲಿ ಬಹುವಾಗಿ ಹೋರಾಡಿ ಚಕ್ರದಿಂದ ಅವಿಚ್ಛಿನ್ನವಾಗಿ ದೈತ್ಯರನ್ನೆಲ್ಲಾ ಕತ್ತರಿಸಿದನು. ॥೧೦೬॥

ತದಾ ಶೋಣಿತವಾಹಿನ್ಯಸ್ಸಮುತ್ಪನ್ನಾಸ್ತತಸ್ಸುರಾಃ ।
ತೇ ರಕ್ತವಾಹಿನೀ ನೀತಾಸ್ಸರ್ವೇಽಪಿ ಭಯವಿಹ್ವಲಾಃ ॥೧೦೭॥

ತತಃಪರಂ ಗತಾಸ್ಸರ್ವೇ ಸಮುದ್ರೇ ಪತಿತಾಸ್ಸುರಾಃ ।
ರಕ್ತಪ್ರವಾಹವೇಗೇನ ತತ್ತರಂಗಾಹತಾ ಅಪಿ ॥೧೦೮॥

ತತಃಪರಂ ಕಿಯತ್ಕಾಲಂ ಸ್ಥಿತ್ವಾ ತೀರೇ ಸರಿತ್ಪತೇಃ ।
ಪುನರ್ಯುದ್ಧೋನ್ಮುಖಾ ಜಾತಾಃ ಕ್ರೂರೈರಸುರಪುಂಗವೈಃ ॥೧೦೯॥

ಪಶ್ಚಾದಬ್ದಾಯುತಂ ಜಾತಂ ಯುದ್ಧಂ ಘೋರತರಂ ಮುನೇ ।
ತತಸ್ತೇ ನಿಹತಾಸ್ಸರ್ವೇ ರಾಕ್ಷಸಾಸ್ಸುರಪುಂಗವೈಃ ॥೧೧೦॥

ಅಗ್ನಿಕೂಟಂ ಮೃತಂ ಶ್ರುತ್ವಾ ಪ್ರಚಂಡೋ ಭಯಸಂಕುಲಃ ।
ಪ್ರಾಹ ಪ್ರಧಾನಂ ಹಾ ಹಾ ಹಾ ಕಿಮಭೂದಿತಿ ಸತ್ವರಂ ॥೧೧೧॥

---

ಆ ಯುದ್ಧದಲ್ಲಿ ಮಡಿದ ಅಸಂಖ್ಯಾತ ದೈತ್ಯರ ರಕ್ತದಿಂದ ರಕ್ತಮಯವಾದ ದೊಡ್ಡ ಪ್ರವಾಹವೇ ಉಂಟಾಯಿತು. ಆ ಪ್ರಚಂಡವಾದ ರಕ್ತಪ್ರವಾಹದಲ್ಲಿ ಸಿಲುಕಿ ದೇವತೆಗಳೆಲ್ಲರೂ ಅತ್ಯಂತ ಭೀತರಾದರಲ್ಲದೇ, ತೇಲಿಕೊಂಡು ಹೋಗಿ ಅನೇಕ ದೇವತೆಗಳು ಸಮುದ್ರದಲ್ಲಿ ಬಿದ್ದರು. ಆ ರಕ್ತಪ್ರವಾಹದಿಂದ ಬಹು ಕಷ್ಟವನ್ನು ಅನುಭವಿಸಿದರು. ॥೧೦೭-೧೦೮॥

ಅನೇಕ ದೇವತೆಗಳು ಆ ಸಮುದ್ರದಲ್ಲಿ ಸಿಲುಕಿ ಎದ್ದು ಬರಲೂ ಸಹ ತ್ರಾಣ ವಿಲ್ಲದೇ ಎಷ್ಟೋ ಕಾಲದ ವರೆಗೆ ಅಲ್ಲಿಯೇ ಬಿದ್ದಿದ್ದರು. ಬಳಿಕ ಹೇಗೋ ಚೇತರಿಸಿ ಕೊಂಡು ಬಂದು ಕ್ರೂರರಾದ ದೈತ್ಯರೊಡನೆ ಪುನಃ ಕಾದಾಡಲಾರಂಭಿಸಿದರು. ॥೧೦೯॥

ಮತ್ತೆ ಆ ಘೋರ ಯುದ್ಧವು ಹತ್ತು ಸಹಸ್ರ ವರ್ಷ ಪರ್ಯಂತ ನಡೆಯಿತು. ದೇವತೆಗಳು ಅಪೂರ್ವ ಸಾಹಸದಿಂದ ಯುದ್ಧಮಾಡಿ ಆ ದೈತ್ಯರೆಲ್ಲರನ್ನೂ ಕೊಂದರು. ॥೧೧೦॥

ಆ ಯುದ್ಧದಲ್ಲಿ ಅಗ್ನಿಕೂಟ ದೈತ್ಯನು ಮೃತನಾದನೆಂಬ ವಾರ್ತೆಯನ್ನು ಕೇಳಿದೊಡನೆಯೇ ಪ್ರಚಂಡದೈತ್ಯನಿಗೆ ಭಯವುಂಟಾಯಿತು. ಅವನು ಆ ಕೂಡಲೇ ಮಂತ್ರಿಯನ್ನು ಕುರಿತು "ಇದೇನಿದು ಸರ್ವನಾಶವಾಗುತ್ತಿದೆ! ಇದಕ್ಕೆ ಪರ್ಯವ ಸಾನವು ಅಥವಾ ಪ್ರತೀಕಾರವು ಯಾವುದು? ಇನ್ನು ನಾವು ಉದಾಸೀನ ಮಾಡು

ತಂ ಪುನರ್ವಚನೈರ್ಧೀರೈರಾಹ ಕ್ರೂರೋ ವಿಚಕ್ಷಣಃ ।
ಧೈರ್ಯಂ ಹೃದಿ ನಿಧಾಯೈವ ಮಹಾದೇವಮನುಸ್ಮರನ್ ॥೧೧೨॥

॥ ಕ್ರೂರ ಉವಾಚ ॥

ಯುದ್ಧಕಾಲೇಷು ಮರಣಂ ಭಟಾನಾಂ ಕಿಂ ನ ಜಾಯತೇ ।
ಅಧೈರ್ಯಂ ತತ್ರ ಸಹಸಾ ನ ಕರ್ತವ್ಯಂ ತ್ವಯಾಧುನಾ ॥೧೧೩॥

ಅಸ್ಮದ್ಭಟಾನಾಂ ಗಣನಾ ಕರ್ತುಮೇವ ನ ಶಕ್ಯತೇ ।
ತತ್ರ ಕೇಚಿದ್ಧತಾ ಯುದ್ಧೇ ತಾವತಾ ಭೀತಿರತ್ರ ಕಾ ॥೧೧೪॥

ಪುನಃ ಪುನಃ ಪ್ರೇಷಣೀಯಾ ಸ್ಸುರಾಸ್ತೇ ಪ್ರಬಲಾಃ ಖಲು ।
ಕಲ್ಪಾವಸಾನಪರ್ಯಂತಂ ಯುದ್ಧೇ ಸೈನ್ಯಂ ನ ನಶ್ಯತಿ ॥೧೧೫॥

---

ತ್ತಿದ್ದರೆ, ಬಹಳ ಅಪಾಯವು ಸಂಭವಿಸುವಂತೆ ತೋರುತ್ತಿದೆ. ಇದಕ್ಕೆ ಸರಿಯಾದ ಉಪಾಯವನ್ನು ಯೋಚಿಸಬೇಕು" ಎಂದನು. ॥೧೧೧॥

ಮಂತ್ರಿಯಾದ ಕ್ರೂರನು ಬಹು ಧೈರ್ಯಶಾಲಿಯೂ ಬುದ್ಧಿಶಾಲಿಯೂ ಆಗಿದ್ದನು. ದೈತ್ಯೇಶ್ವರನ ಮಾತನ್ನು ಕೇಳಿ ಆತನೇನೂ ಹೆದರಲಿಲ್ಲ. ಮತ್ತೆ ಆ ಪ್ರಚಂಡನಿಗೆ ಸಮಾಧಾನವನ್ನೂ ಧೈರ್ಯವನ್ನೂ ಹೇಳಿ, ಶಿವನನ್ನು ಮನಸಾ ಧ್ಯಾನಿಸಿಕೊಂಡು ಈರೀತಿ ಹೇಳಿದನು. ॥೧೧೨॥

ಪ್ರಭುವೇ, ಯುದ್ಧದಲ್ಲಿ ಸಿಪಾಯಿಗಳಿಗೆ ಮರಣ ಒದಗುವುದು ಸಂಭವವಷ್ಟೆ. ಇದಕ್ಕಾಗಿ ಹೆಚ್ಚು ಚಿಂತೆಗೊಳಗಾಗಿ ಧೈರ್ಯಗೆಡಬಾರದು. ರಾಜನಾದವನು ಯುದ್ಧ ಕಾಲದಲ್ಲಿ ಎಂತಹ ದುರ್ಘಟನೆಯಾದರೂ ಧೈರ್ಯದಿಂದ ಎದುರಿಸಬೇಕು. ॥೧೧೩॥

ನಮ್ಮಲ್ಲಿರುವ ಸೈನಿಕರಾದರೂ ಅಲ್ಪಸ್ವಲ್ಪವೇ ? ನಮಗೆ ಅಪಾರ ಸೈನ್ಯವಿರುವುದು. ನಮ್ಮಲ್ಲಿರುವ ಸೈನಿಕರನ್ನು ಇಷ್ಟೆಂದು ಲೆಕ್ಕಮಾಡಲು ಸಾಧ್ಯವಿರುವುದಿಲ್ಲ. ಅವರಲ್ಲಿ ಎಲ್ಲಿಯೋ ಕೆಲವರು ಮೃತರಾದ ಮಾತ್ರಕ್ಕೆ ನಾವು ಧೈರ್ಯಗುಂದಿ ಭಯಪಡಲು ಕಾರಣವಿಲ್ಲ. ॥೧೧೪॥

ವಸ್ತುತಃ ಈಗ ಯುದ್ಧಕ್ಕಿಳಿದಿರುವ ದೇವತೆಗಳು ಬಲಿಷ್ಠರಾಗಿರುವಂತೆ ತೋರುತ್ತಿರುವುದು. ಆದರೂ ಏನೂ ಚಿಂತಿಸಬೇಕಾಗಿಲ್ಲ. ನಮ್ಮಲ್ಲಿರುವ ಸೈನ್ಯವನ್ನು ಕಲ್ಪಾಂತ್ಯದವರೆಗೆ ಪದೇ ಪದೇ ತಂಡತಂಡವಾಗಿ ಕಳುಹಿಸಿದರೂ ನಮ್ಮ ಸೈನ್ಯವು

ಅಪಾರಸೇನಾಪತಯಸ್ಸಂತ್ಯಪಾರಾಃ ಕಿಲಾಧುನಾ ।
ಪ್ರೇಷಣೀಯಾಸ್ತ್ವಯಾ ತತ್ರ ಚಿಂತಾ ಕಾರ್ಯಾ ನ ಸರ್ವಥಾ ॥೧೧೬॥

ಇತ್ಯುಕ್ತ್ವಾ ಪ್ರೇಷಯಾಮಾಸ ಕ್ರೂರೋ ದೈತ್ಯಾನ್ ಸ ಕೋಟಿಶಃ ।
ತೈಃ ಪುನರ್ಯುದ್ಧಮಭವದ್ದೇವಾನಾಮಪಿ ದುಸ್ಸಹಂ ॥೧೧೭॥

ಚಕ್ರೇಣೈಕೇನ ನಿರ್ಭಿನ್ನಾಃ ಕೋಟಿಶೋಽಪ್ಯಸುರಾಸ್ತದಾ ।
ತಥಾ ವಜ್ರೇಣ ನಿರ್ಭಿನ್ನಾ ದೈತ್ಯಾನಾಂ ಕೋಟಿಕೋಟಯಃ ॥೧೧೮॥

ತದಾ ತಾನ್ನಿಹತಾನ್ ಶ್ರುತ್ವಾ ಪ್ರಚಂಡಶ್ಚಂಡವಿಕ್ರಮಃ ।
ಪುನಃ ಕ್ರೂರಮುವಾಚೇದಂ ಜ್ವಲನ್ನಿವ ಮಹಾಗಿರಿಃ ॥೧೧೯॥

---

ಮುಗಿಯುವುದಿಲ್ಲ. ಎಷ್ಟೇ ದಿವಸಗಳಾದರೂ ಯುದ್ಧವನ್ನು ನಡೆಸುತ್ತಿರೋಣ. ॥೧೧೫॥

ನಮ್ಮಲ್ಲಿ ಅಪರಿಮಿತ ಸೈನ್ಯವಿರುವಂತೆ ಸೈನ್ಯಾಧಿಪತಿಗಳೂ ಅಸಂಖ್ಯಾತರಾಗಿರುವರು. ಅವರನ್ನು ಈಗ ಯುದ್ಧಕ್ಕೆ ಕಳುಹಿಸೋಣ. ಈಗ ಚಿಂತೆಗೇನೂ ಕಾರಣವಿಲ್ಲ. ॥೧೧೬॥

ಹೀಗೆಂದು ರಾಜನಿಗೆ ಧೈರ್ಯಹೇಳಿ ಮಂತ್ರಿಯಾದ ಕ್ರೂರನು ಕೋಟ್ಯಂತರ ದೈತ್ಯಸೈನ್ಯವನ್ನು ಯುದ್ಧಕ್ಕೆ ಅಟ್ಟಿದನು. ಆಗ ಪುನಃ ಭಯಂಕರವಾದ ಯುದ್ಧವಾರಂಭವಾಯಿತು. ॥೧೧೭॥

ದೇವತೆಗಳೂ ಸಹ ಜೀವಪಣವಿಟ್ಟಂತೆ ಹೋರಾಡಿದರು. ವಿಷ್ಣುವು ಒಂದು ಕಡೆ ತನ್ನ ಚಕ್ರದಿಂದಲೂ, ಮತ್ತೊಂದು ಕಡೆ ದೇವೇಂದ್ರನು ತನ್ನ ವಜ್ರಾಯುಧದಿಂದಲೂ ಕೋಟಿ ಕೋಟಿ ದೈತ್ಯರನ್ನು ಸಂಹರಿಸಿದರು. ಹೀಗೆ ದೈತ್ಯರೆಲ್ಲರೂ ಯುದ್ಧದಲ್ಲಿ ಮಡಿದರು. ॥೧೧೮॥

ಯುದ್ಧದಲ್ಲಿ ತನ್ನ ಸೈನ್ಯವೆಲ್ಲ ನಾಶವಾದ ವಾರ್ತೆಯನ್ನು ಕೇಳಿ ಪ್ರಚಂಡನಿಗೆ ಸಹನೆಯು ಮೇರೆ ಮೀರಿತು. ಉರಿಯುವ ಗಿರಿಯಂತೆ, ಕ್ರೋಧಗೊಂಡು ಕ್ರೂರಮಂತ್ರಿಗೆ ಈರೀತಿ ಹೇಳಿದನು. ॥೧೧೯॥

॥ ಪ್ರಚಂಡ ಉವಾಚ ॥

ಪ್ರೇಷಿತೈಸ್ತೈರಸಂಖ್ಯಾತೈರಸಂಖ್ಯಾತಬಲೋದ್ಧತೈಃ ।
ಮೃತಾ ದೈತ್ಯಾಸ್ಸುರಾಸ್ತ್ರೌಘೈಃ ಕಿಂ ಕರ್ತವ್ಯಮತಃ ಪರಂ ॥೧೨೦॥

ಪ್ರಬಲಾ ಏವ ನಿಹತಾಸ್ತೇ ಸರ್ವೇ ರಾಕ್ಷಸಾಃ ಖಲು ।
ತಾದೃಶಾಸ್ತಾವದತ್ಯಲ್ಪಾಃ ಕೇಚಿತ್ತಿಷ್ಠಂತಿ ತೈರಲಂ ॥೧೨೧॥

ಅತಃ ಪರಂ ಕಿಮಸ್ಮಾಕಂ ಬಲಂ ಕ್ವ ವಿಜಯೋನ್ಮುಖಂ ।
ಕೇನೋಪಾಯೇನ ಜೇತವ್ಯಾಸ್ಸುರಾಸ್ತೇ ದೈತ್ಯಪುಂಗವ ॥೧೨೨॥

॥ ಕ್ರೂರ ಉವಾಚ ॥

ನ ಕೇವಲಂ ರಾಕ್ಷಸಾನಾಂ ಬಲೇನ ವಿಜಯೋ ಭವೇತ್ ।
ಶಂಕರಾನುಗ್ರಹಾಭಾವೇ ಜಯವಾರ್ತಾಪಿ ದೂರತಃ ॥೧೨೩॥

---

ಮಂತ್ರಿಯೇ, ಈಗ ಏನು ಮಾಡುವುದು ? ಬಲಿಷ್ಠರಾದ ಅಸಂಖ್ಯೆಯ ಸೈನಿಕರನ್ನೂ ಕಳುಹಿಸಿದ್ದಾಯಿತು. ಹಾಗೆಯೇ ಅವರೆಲ್ಲರೂ ಆ ದೇವತೆಗಳ ಆಯುಧಗಳಿಗೆ ತುತ್ತಾಗಿ ಹೋದರು. ॥೧೨೦॥

ಅತ್ಯಂತ ಪರಾಕ್ರಮಶಾಲಿಗಳಾದ ನಮ್ಮ ದೈತ್ಯರೆಲ್ಲರೂ ಈಗ ಸತ್ತು ಹೋದರು. ಅಂಥವರು ಸಿಕ್ಕುವುದು ಬಹಳ ಕಷ್ಟವೇ ಸರಿ. ಇನ್ನುಳಿದವರು ಕೆಲವರು ಮಾತ್ರ. ಅವರಿಂದ ಯಾವ ಭರವಸೆಯೂ ಇಲ್ಲ. ॥೧೨೧॥

ಆದುದರಿಂದ ಈಗ ಏನು ಮಾಡುವುದು ? ಜಯವನ್ನು ಸಂಪಾದಿಸಿಯೇ ತೀರುವುದೆಂಬ ಭರವಸೆಯುಳ್ಳ ಸೈನ್ಯವೆಲ್ಲಿದೆ ? ಈಗ ಆ ದೇವತೆಗಳನ್ನು ಗೆಲ್ಲುವುದು ಹೇಗೆ ? ಯಾವ ಉಪಾಯವನ್ನು ಮಾಡೋಣ ? ಈ ಪ್ರಕಾರವಾಗಿ ಪ್ರಚಂಡ ದೈತ್ಯೇಶ್ವರನು ಕೇಳಲು ದೂರದರ್ಶಿಯಾದ ಆ ಕ್ರೂರ ಮಂತ್ರಿಯು ಈರೀತಿ ಉತ್ತರವಿತ್ತನು. ॥೧೨೨॥

“ ಎಲೈ ಪ್ರಭುವೇ, ನಾವು ಕೇವಲ ನಮ್ಮ ಪ್ರಯತ್ನದಲ್ಲಿಯೇ ಭರವಸೆಯನ್ನಿಟ್ಟು ಮೈಮರೆಯಬಾರದು. ಜಯ ಗಳಿಸಬೇಕಾದರೆ ಮುಖ್ಯವಾಗಿ ಶಿವಾನುಗ್ರಹವಿರಬೇಕು. ಅದೊಂದಿಲ್ಲದಿದ್ದರೆ ಎಷ್ಟೇ ದೈತ್ಯಸೈನ್ಯಬಲವಿದ್ದರೂ ಜಯ ಲಭಿಸ

ತ್ವಯಾತಿತ್ವರಯಾ ಕಾರ್ಯಂ ತ್ರಿಪುರಾಂತಕಪೂಜನಂ ।
ಅಪಾರೈರುಪಚಾರೈಸ್ತೈರ್ಯೇನ ತುಷ್ಯತಿ ಶಂಕರಃ ॥೧೨೪॥

ಮೃತ್ಯುಂಜಯಾಭ್ಯರ್ಚನೇನ ಜಯಃ ಖಲು ಪದೇ ಪದೇ ।
ಅತೋ ಜಯಾರ್ಥಂ ಯತ್ನೇನ ಯಜ ಮೃತ್ಯುಂಜಯಂ ಪ್ರಭುಂ ॥೧೨೫॥

ಭೂಷಣಾಯ ಪರಂ ಸೇನಾ ನ ಜಯಾಯ ಕದಾಚನ ।
ಜಯಶ್ಶಿವಾರ್ಚನೇನೈವ ಕೇವಲೇನ ಭವಿಷ್ಯತಿ ॥೧೨೬॥

ಇತಿ ತದ್ವಚನಂ ಶ್ರುತ್ವಾ ತಮುಕ್ತ್ವಾ ಸಮ್ಯಗಿತ್ಯಪಿ ।
ಸ ಶಿವಾರಾಧನೋದ್ಯುಕ್ತಃ ಪ್ರಚಂಡೋ ಭೂರಿಸಾಧನೈಃ ॥೧೨೭॥

ಯಾವದಾರ್ಜಿತಮೈಶ್ವರ್ಯಂ ತಾವದರ್ಪಿತಮೀಶ್ವರೇ ।
ಅಭಿಷೇಕಾದಿಭಿರ್ದೈತ್ಯಃ ಪೂಜಯಾಮಾಸ ಶಂಕರಂ ॥೧೨೮॥

---

ಲಾರದು. ಶಿವಾನುಗ್ರಹವಿಲ್ಲದ ಮೇಲೆ ಜಯವೆಂಬುದು ಬಹು ದೂರವಲ್ಲವೆ! ॥೧೨೩॥

ಆದುದರಿಂದ ಪ್ರಭುವೇ, ಕೂಡಲೇ ನೀನು ಶಿವಾರ್ಚನೆಯನ್ನು ಮಾಡು. ಅಪಾರವಾದ ಸೇವೆಯಿಂದಲೂ ಉಪಚಾರಗಳಿಂದಲೂ ಶಿವನನ್ನು ತುಷ್ಟಿಗೊಳಿಸು. ಶಿವನು ಸುಪ್ರೀತನಾದರೆ ಪದೇ ಪದೇ ಜಯವು ಲಭಿಸುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಈಗ ಜಯವನ್ನು ಸಂಪಾದಿಸಲು ಪರಮಪ್ರಭುವಾದ ಶಂಕರನನ್ನು ಭಕ್ತಿಯಿಂದ ಆರಾಧಿಸು. ॥೧೨೪-೧೨೫॥

ಕೇವಲ ಸೈನ್ಯದಿಂದ ಎಂದೂ ಜಯದ ಭರವಸೆ ಇಲ್ಲ. ಸೈನ್ಯವು ಕೇವಲ ನಿಮಿತ್ತಮಾತ್ರ ಅಥವಾ ಅಲಂಕಾರಮಾತ್ರವಾಗಿರುವುದು. ಜಯವು ಮಾತ್ರ ಮುಖ್ಯವಾಗಿ ಶಿವಾರಾಧನೆಯಿಂದಲೇ ಪ್ರಾಪ್ತವಾಗುವುದು." ಹೀಗೆಂದು ಮಂತ್ರಿಯು ಹೇಳಲು ॥೧೨೬॥

ಆತನ ಮಾತನ್ನು ಕೇಳಿ ಪ್ರಚಂಡದೈತ್ಯನು ಒಳ್ಳೆಯದು ಹಾಗೆಯೇ ಮಾಡುವೆನೆಂದು ಹೇಳಿ, ಆ ಕೂಡಲೇ ಅಪರಿಮಿತ ಸಾಮಗ್ರಿಗಳಿಂದ ಶಿವನನ್ನು ಪೂಜಿಸಲಾರಂಭಿಸಿದನು. ॥೧೨೭॥

ಆ ಪ್ರಚಂಡದೈತ್ಯೇಶ್ವರನು ಮೊದಲು ತಾನು ಸಂಪಾದಿಸಿದ್ದ ಸಕಲ ಐಶ್ವರ್ಯ

ತತಃ ಪರಂ ಸುರಾಸ್ಸರ್ವೇ ದೈತ್ಯಾಸ್ತೇ ನಿಹತಾ ಇತಿ ।
ಪ್ರಚಂಡಾಸುರನಾಶಾಯ ಜಗ್ಮುಸ್ತನ್ನಗರಂ ಪ್ರತಿ ॥೧೨೯॥

ತತಸ್ತನ್ನಗರಾಪಾರವಹ್ನಿ ಪ್ರಾಕಾರತೇಜಸಾ ।
ಹತಾಸ್ತೇ ಮೂರ್ಛಿತಾಸ್ಸರ್ವೇ ಸಂಜ್ಞಾ ತೇಷಾಂ ನ ದೃಶ್ಯತೇ॥೧೩೦॥

ಅತಃ ಪರಂ ವಿಧೇಯಂ ಕಿಂ ಮಯಾ ಕಮಲಯಾಪಿ ವಾ ।
ಶಚ್ಯಾ ವಾಣ್ಯಾಪಿ ಭಗವನ್ ಶಾಧಿ ನಸ್ತ್ವಂ ವಿಶೇಷತಃ ॥೧೩೧॥

ಇತಿ ತದ್ವಚನಂ ಶ್ರುತ್ವಾ ಕಪಿಲಸ್ಸಿದ್ಧಪುಂಗವಃ ।
ಪ್ರಾಹ ಗಂಭೀರವಚನೈರ್ಲಕ್ಷ್ಮೀಮಭಿಮುಖೀಂ ತದಾ ॥೧೩೨॥

---

ಸಾಮಗ್ರಿಗಳನ್ನೂ ಪರಮೇಶ್ವರನಿಗೆ ಅರ್ಪಿಸಿದನು. ಹಾಗೂ ಅಭಿಷೇಕವೇ ಮೊದಲಾದ ಸಮಸ್ತ ವಿಧಿಪೂರ್ವಕವಾಗಿ ಶಂಕರನನ್ನು ಪೂಜಿಸಿದನು. ||೧೨೮||

ಇತ್ತಲಾಗಿ ದೇವತೆಗಳು ಸಮಸ್ತ ದೈತ್ಯರನ್ನೂ ಕೊಂದುಹಾಕಿ ಇನ್ನು ಪ್ರಚಂಡದೈತ್ಯನನ್ನೂ ಸಂಹರಿಸಬೇಕೆಂದು ಅವನ ಪಟ್ಟಣಕ್ಕೆ ನುಗ್ಗಲಾರಂಭಿಸಿದರು. ||೧೨೯||

ದೇವತೆಗಳು ಪಟ್ಟಣದ ಬಾಗಿಲ ಬಳಿಗೆ ಹೋದೊಡನೆಯೇ, ಆ ಪಟ್ಟಣದ ಸುತ್ತಲೂ ಇದ್ದ ಬೆಂಕಿಯ ಕೋಟೆಯ ಜ್ವಾಲೆಯಿಂದ ಬೆಂದುಹೋದರು. ಅವರೆಲ್ಲರೂ ಆ ಕೂಡಲೇ ಪ್ರಜ್ಞೆತಪ್ಪಿ ನೆಲದ ಮೇಲೆ ಬಿದ್ದಿದ್ದಾರೆ. ಅವರಿಗೆ ಸ್ವಲ್ಪವೂ ಎಚ್ಚರವಿಲ್ಲ. ಇನ್ನು ಮುಂದೂ ಪ್ರಜ್ಞೆಬಂದು ಏಳುವರೋ ಏನೋ ತಿಳಿಯದಾಗಿದೆ. ||೧೩೦||

ಎಲೈ ಕಪಿಲಮುನಿಯೇ, ಇನ್ನು ನಾನೇನು ಮಾಡಲಿ? ಲಕ್ಷ್ಮಿಯೂ, ಸರಸ್ವತಿಯೂ, ಶಚೀದೇವಿಯೂ ಈಗ ಏನನ್ನುಮಾಡಬೇಕು? ನಮ್ಮ ಗತಿ ಏನು? ನಮಗೆ ಏನೂ ತಿಳಿಯದಾಗಿದೆ. ಮಹಾತ್ಮನಾದ ನೀನೇ ನಮಗೆ ಈಗ ಉಪಾಯವನ್ನು ಹೇಳಬೇಕು." ಹೀಗೆಂದು ಗರುಡನು ಹೇಳಲು, ||೧೩೧||

ಸಿದ್ಧಪುರುಷನಾದ ಆ ಕಪಿಲಮುನಿಯು ಎಲ್ಲಾ ವೃತ್ತಾಂತವನ್ನೂ ಕೇಳಿ ಅತ್ಯಂತ ಗಂಭೀರನಾಗಿ ಕ್ಷಣಕಾಲ ಯೋಚಿಸಿ, ಲಕ್ಷ್ಮಿಯೇ ಮೊದಲಾದ ಸಮಸ್ತ ದೇವಾಂಗನೆಯರೂ ಪ್ರಾರ್ಥಿಸಿಕೊಂಡಮೇಲೆ ಈರೀತಿ ನುಡಿದನು. ||೧೩೨||

ದೈತ್ಯೋಽಪಿ ಶಂಕರಪದಾಂಬುರುಹಾರ್ಚನೇಷು
ವಿಶ್ವಸ್ಯ ಶಂಕರಪದಾಂಬುಜಪೂಜನಾನಿ ।
ಕೃತ್ವಾಧಿತಿಷ್ಠತಿ ಜಯೋಽಪಿ ಸ ತೇನ ಲಬ್ಧಃ
ತೈರೇವ ಪುಣ್ಯಮಧಿಕಂ ಖಲು ತಸ್ಯ ನೂನಂ ॥೧೩೩॥

ನ ಧ್ಯಾತೋ ಗಿರಿಶೋ ಮುದಾ ಯದಿ ತದಾ ದುಃಖಾರ್ಣವೇ ಮಜ್ಜನಂ
ಕಿಂ ನ ಸ್ಯಾದಿತಿ ನಿಶ್ಚಯೋಽಪಿ ನ ಕಥಂ ನಾರಾಯಣಸ್ಯಾಭವತ್ ।
ಇಂದ್ರಸ್ಯಾಪಿ ವಿಧೇರಪೀತಿ ಬಹುಧಾ ಹಾ ಕಷ್ಟಮಾಸೀದತೋ
ದುಷ್ಟಂ ಚಿತ್ತಮಭೂತ್ಕಥಂ ಸುರಗಣಸ್ಯಾದ್ಯೋಽಪರಾಧೋ ಮಹಾನ್ ॥೧೩೪॥

ಶಿವಾರ್ಚನಪರಿತ್ಯಾಗೇ ಸ್ವರೂಪಾದಪರಾಧತಃ ।
ಜಾತಮೇವಮಭೂತ್ಕಷ್ಟಂ ತ್ರಿದಶಾನಾಂ ವಿಶೇಷತಃ ॥೧೩೫॥

---

ಆ ಪ್ರಚಂಡನು ಅತ್ಯಂತ ತಾಮಸನಾಗಿ ದೈತ್ಯನಾಗಿದ್ದರೂ ಸಹ ಶಿವಾರ್ಚನೆಯ ಮಾಹಾತ್ಮ್ಯೆಯಲ್ಲಿ ನಂಬಿಕೆಯನ್ನಿಟ್ಟು ಶಿವಾರ್ಚನೆಯನ್ನು ಮಾಡಿದನು. ಆದ್ದರಿಂದಲೇ ಅವನಿಗೆ ಯಾವ ಅಪಾಯವೂ ಉಂಟಾಗಲಿಲ್ಲ. ಕೊನೆಗೂ ಅವನೇ ಗೆದ್ದನು. ಆದುದರಿಂದ ಶಿವಾರ್ಚನೆಯಿಂದ ಬಹು ಅಮೂಲ್ಯವಾದ ಪುಣ್ಯವು ಲಭಿಸುವುದು. ಶಿವಾರ್ಚನೆಯಿಂದಲೇ ಅವನು ಈಗ ಪುಣ್ಯಶಾಲಿಯೂ ಜಯಶಾಲಿಯೂ ಆಗಿರುವನು. ॥೧೩೩॥

ದೇವದೇವನಾದ ಶಂಕರನನ್ನು ಭಕ್ತಿಯಿಂದ ಧ್ಯಾನಿಸದಿದ್ದರೆ ದುಃಖಸಾಗರದಲ್ಲಿ ಮುಳುಗಬೇಕಾಗಬಹುದೆಂಬ ಯೋಚನೆಯು ಏತಕ್ಕೆ ವಿಷ್ಣುವಿಗುಂಟಾಗಲಿಲ್ಲ? ಆ ದೇವೇಂದ್ರನಾಗಲೀ ಅಥವಾ ಬ್ರಹ್ಮನಾಗಲಿ ಈ ವಿಚಾರವನ್ನೇಕೆ ಚಿಂತಿಸಲಿಲ್ಲ? ಅಯ್ಯೋ, ದೇವತೆಗಳು ಮೊಟ್ಟಮೊದಲಿಗೇ ತಪ್ಪನ್ನು ಮಾಡಿ ಆಪತ್ತನ್ನು ತಂದುಕೊಂಡಿರುವರು. ಅವರ ಮನಸ್ಸು ಏತಕ್ಕಿಷ್ಟೊಂದು ದೋಷದೂಷಿತವಾಯಿತು? ಅಂತೂ ಅವರು ಉಚಿತವಾಗಿ ವರ್ತಿಸಲಿಲ್ಲ. ಅವರ ಮೇಲಿನ ಅಪರಾಧವೇ ಮಹತ್ತರವಾಗಿದೆ. ॥೧೩೪॥

ಶಿವನನ್ನು ಮರೆತದ್ದರಿಂದಲೂ ಶಿವಾರ್ಚನೆಯನ್ನು ತ್ಯಜಿಸಿದ್ದರಿಂದಲೂ ದೇವತೆಗಳು ಮೊದಲೇ ಬಹು ತಪ್ಪನ್ನು ಮಾಡಿದರು. ಆ ಅಪರಾಧದಿಂದಲೇ

ನರೋಽಪಿ ಗಿರಿಶಾರ್ಚನಪ್ರವಣಮಾನಸಸ್ಸರ್ವದಾ
ಸುಖೇನ ಖಲು ತಿಷ್ಠತೀತ್ಯವಗತಂ ನ ದೇವೈರಪಿ ।
ಅಹೋ ಬತ ಬತಾಧುನಾ ಬಹುವಿಧೋಽಪಿ ಮೋಹೋ ಮಹಾನ್
ಶಿವಾರ್ಚನಪರಾಙ್ಮುಖಾನಪಿ ಕರೋತಿ ದೇವಾನಹೋ ॥೧೩೬॥

ಇತಿ ತದ್ವಚನಂ ಶ್ರುತ್ವಾ ಕಪಿಲಂ ಮುನಿಪುಂಗವಂ ।
ನತ್ವಾಶ್ರುಪೂರ್ಣನಯನಾ ಪ್ರಾಹ ಗದ್ಗದಯಾ ಗಿರಾ ॥೧೩೭॥

॥ ಶ್ರೀಲಕ್ಷ್ಮ್ಯುವಾಚ ॥

ನ ಮೋಹರಹಿತಃ ಕೋಽಪಿ ಸುರೇಷು ಮುನಿಪುಂಗವ ।
ಮೋಹಪ್ರವಾಹಸಂವೀತೋ ನಾರಾಧಯತಿ ಶಂಕರಂ ॥೧೩೮॥

---

ಅವರಿಗೆ ಇಂಥ ವಿಪತ್ತು ಬಂದಿತು. ಶಿವವೈಮುಖ್ಯದಿಂದ ಕಷ್ಟ ಒದಗುವುದೇ ಸರಿ. ॥೧೩೫॥

ಶಿವಾರ್ಚನೆಯಲ್ಲಿಯೇ ಮನಸ್ಸು ಆಸಕ್ತವಾಗಿದ್ದರೆ ಮನುಷ್ಯಮಾತ್ರದವನೂ ಜಯ ಸುಖಶಾಂತಿಗಳಿಂದ ನೆಮ್ಮದಿಯಾಗಿರುವನೆಂಬ ವಿಚಾರವು ದೇವತೆಗಳಿಗೆ ತಿಳಿಯಲಿಲ್ಲವಲ್ಲ? ಅಯ್ಯೋ, ಏನು ಹೇಳುವುದು? ಇದು ಪರಮ ಅಜ್ಞಾನ, ಮೋಹ ಎಂಬುದು ಬಹು ಮಹತ್ತರವಾದುದೇ ಸರಿ. ಏಕೆಂದರೆ ಆ ಮೋಹವು ಉತ್ಕೃಷ್ಟಚೇತನರಾದ ದೇವತೆಗಳನ್ನೂ ಶಿವಾರ್ಚನವಿಮುಖರನ್ನಾಗಿ ಮಾಡಬಲ್ಲದಾಗಿರುತ್ತದೆ.” ॥೧೩೬॥

ಈ ರೀತಿಯಾಗಿ ಕಪಿಲನು ಹೇಳಲು ಆ ಮಾತುಗಳನ್ನು ಕೇಳಿ ಲಕ್ಷ್ಮಿಗೆ ಬಹಳ ವ್ಯಸನವುಂಟಾಯಿತು. ಆಗ ಲಕ್ಷ್ಮಿಯು ಕಣ್ಣೀರನ್ನಿಡುತ್ತಾ ಗದ್ಗದಕಂಠದಿಂದ ಈ ರೀತಿ ಹೇಳಿದಳು. ॥೧೩೭॥

“ಭಗವನ್ ಕಪಿಲಮುನಿಯೇ, ನೀನು ಹೇಳಿದಂತೆ ದೇವತೆಗಳಲ್ಲಿ ಒಬ್ಬನೂ ಶಿವಾರಾಧನೆಯನ್ನು ಮಾಡಲಿಲ್ಲ. ಅವರಲ್ಲಿ ಅಜ್ಞಾನವಿಲ್ಲದವನು ಒಬ್ಬನೂ ಇಲ್ಲ. ಎಲ್ಲರೂ ಮೋಹಾವಿಷ್ಟರಾಗಿ ಶಂಕರನನ್ನೇ ಮರೆತರು. ॥೧೩೮॥

ಪುನಃಪುನರಿದಂ ಜ್ಞಾತಂ ಶಂಕರಾರಾಧನಂ ವಿನಾ ।
ಸುಖಂ ನೇತಿ ವಿಶೇಷೇಣ ಜ್ಞಾತಮದ್ಯ ನ ಸಂಶಯಃ ॥೧೩೯॥

ಅತಃ ಪರಂ ಸ್ಯಾತ್ಸುರಜೀವನಂ ಕಥಂ
ಕಥಂ ವಿಸಂಜ್ಞತ್ವವಿನಾಶನಂ ಚ ।
ಅಸ್ಮಾಸು ವೈಧವ್ಯವಿನಾಶನಂ ಚ
ಸೌಭಾಗ್ಯವೃದ್ಧಿಶ್ಚ ಕಥಂ ಮುನೀಶ ॥೧೪೦॥

ನ ಮಹಾಪ್ರಳಯೇಽಪಿ ಯೇನ ನಾಶೋ
ವಿನಿವಾರ್ಯೋ ನ ತಥಾಚ ಕೇನ ವಾ ಸ್ಯಾತ್ ।
ಪುನರಾಗಮನಂ ವದಾಶು ತೇಷಾಂ
ಪುನರುಜ್ಜೀವನಮಪ್ಯಪಾರಭಾಗ್ಯಂ ॥೧೪೧॥

ಸರ್ವಜ್ಞೇನ ಜ್ಞಾಯತೇ ಧರ್ಮತತ್ತ್ವಂ
ಯೋಗಾಭ್ಯಾಸಾಚ್ಛಂಕರಾರಾಧನೇನ ।

---

ಶಿವಾರಾಧನೆಯನ್ನು ತ್ಯಜಿಸಿದರೆ ಎಂದೂ ಸುಖವುಂಟಾಗುವುದಿಲ್ಲೆಂದು ಪದೇ ಪದೇ ಕೇಳಿದ್ದೇವೆ. ಅಲ್ಲದೇ ಈಗ ಅದು ಸಂಪೂರ್ಣವಾಗಿಯೂ ನಿಶ್ಚಿತವಾಯಿತು. ॥೧೩೯॥

ಆದರೆ ಮುನಿವರ್ಯನೇ, ಪ್ರಕೃತದಲ್ಲಿ ದೇವತೆಗಳು ಬದುಕುವುದು ಹೇಗೆ? ಅವರು ಪುನಃ ಚೇತನವಿಶಿಷ್ಟರಾಗಿ ನಿಲ್ಲಲು ಉಪಾಯವೇನು? ಹೇಳು. ನಮ್ಮ ಈ ವೈಧವ್ಯವು ನಾಶವಾಗಿ ನಾವು ಸುಮಂಗಲಿಯರಾಗುವುದಕ್ಕೆ ಉಪಾಯವೇನು? ॥೧೪೦॥

ಸ್ತ್ರೀಯರಿಗೆ ವೈಧವ್ಯವು ಅತ್ಯಂತ ದುಸ್ಸಹವಾದುದು. ಈ ವೈಧವ್ಯವು ಮಹಾಪ್ರಳಯದಲ್ಲಿಯೂ ಸಹ ನಾಶವೆಂದೆನಿಸಲಾರದು. ಇಂಥ ಮಹಾಮಂಗಳಮಯವಾದ ವೈಧವ್ಯವು ಬಿಡುಗಡೆಯಾಗುವುದು ಹೇಗೆ? ದೇವತೆಗಳು ಪುನಃ ಬದುಕಿಬರುವುದಕ್ಕೆ ಉಪಾಯವೇನು? ಅವರು ಪುನಃ ಇಲ್ಲಿಗೆ ಬರುವಂತಾದರೆ ಸಾಕು. ಅದೇ ನಮ್ಮ ಪರಮ ಭಾಗ್ಯ. ॥೧೪೧॥

ಎಲೈ ಮುನಿಶ್ರೇಷ್ಠನೇ, ನೀನು ಸರ್ವಜ್ಞನಾಗಿರುವೆ. ನಿನಗೆ ಸಕಲ ಧರ್ಮತತ್ವಗಳೂ ಸರ್ವ ಉಪಾಯಗಳೂ ತಿಳಿದಿರುತ್ತವೆ. ನೀನು ಶಾಶ್ವತಿಕವಾದ ಶಿವಾ

ಏತತ್ಸರ್ವಂ ನಿಶ್ಚಯೇನಾಶು ತಾವತ್
ವಕ್ತವ್ಯಂ ಮೇ ಯೇನ ದುಃಖಾಪಹಾರಃ ॥೧೪೨॥

ಇತಿ ತದ್ವಚನಂ ಶ್ರುತ್ವಾ ಕಮಲಾಂ ವ್ಯಾಕುಲಾಂ ತದಾ ।
ಕಪಿಲಃ ಪ್ರಾಹ ನಿಶ್ಚಿತ್ಯ ವ್ರತಂ ಜೀವನಸಾಧನಂ ॥೧೪೩॥

॥ ಕಪಿಲ ಉವಾಚ ॥

ರಹಸ್ಯಂ ವ್ರತಮಸ್ತ್ಯೇಕಂ ಕಮಲೇ ವಿಮಲೇ ಶೃಣು ।
ಗೋಪನೀಯಂ ಪ್ರಯತ್ನೇನ ಶಂಕರೋಕ್ತಮಿದಂ ವ್ರತಂ ॥೧೪೪॥

ವ್ರತಾನಾಮಪಿ ಸರ್ವೇಷಾಮಿದಮೇವೋತ್ತಮಂ ವ್ರತಂ ।
ಯದ್ವ್ರತಾಚರಣೇನೈವ ಸರ್ವಸೌಭಾಗ್ಯಸಂಪದಃ ॥೧೪೫॥

ಪುರಾ ಕೈಲಾಸಶಿಖರೇ ರತ್ನಶೃಂಗವಿರಾಜಿತೇ ।
ಭ್ರಮದ್ಭ್ರಮರಸಂಘೋಷಪ್ರತಿಧ್ವನಿವಿರಾಜಿತೇ ॥೧೪೬॥

---

ರಾಧನೆಯಿಂದಲೂ ಯೋಗಾಭ್ಯಾಸಸಿದ್ಧಿಯಿಂದಲೂ ತ್ರಿಕಾಲಜ್ಞಾನಿಯಾಗಿರುವೆ. ಈಗ ನಮಗೆ ಒದಗಿರುವ ದುಃಖಕ್ಕೆ ಪರಿಹಾರೋಪಾಯವನ್ನು ಹೇಳಿ ನಮ್ಮನ್ನು ಕಾಪಾಡು." ॥೧೪೨॥

ಹೀಗೆಂದು ಲಕ್ಷ್ಮಿಯು ಬಹುವಾಗಿ ಬೇಡಿಕೊಳ್ಳಲು ಕಪಿಲಮುನಿಗೂ ಆಕೆಯಮೇಲೆ ದಯೆಯುಂಟಾಯಿತು. ಆಗ ಮುನಿಯು ಮನಸ್ಸಿನಲ್ಲೇ ಬಲಾಬಲಗಳನ್ನು ಪರ್ಯಾಲೋಚಿಸಿದನು. ಬಳಿಕ ಪತಿಸಂಜೀವನಕ್ಕೆ ಇದೇ ಸರಿಯಾದ ಉಪಾಯವೆಂದು ನಿರ್ಣಯಿಸಿಕೊಂಡು, ಒಂದು ವ್ರತವನ್ನು ವ್ಯಾಕುಲಳಾಗಿದ್ದ ಲಕ್ಷ್ಮಿಗೆ ಈರೀತಿ ಉಪದೇಶಿಸಿದನು. ॥೧೪೩॥

"ಇಂದಿರೆಯೇ, ಚಿಂತಿಸಬೇಡ. ಇದಕ್ಕೊಂದು ಉಪಾಯವಿರುವುದು. ಹೇಳುವೆನು ಕೇಳು. ಲೋಕದಲ್ಲಿ ಪವಿತ್ರವಾದ ಒಂದು ವ್ರತವುಂಟು. ಅದು ಸಾಕ್ಷಾತ್ ಶಿವಪ್ರೋಕ್ತವಾದುದು. ಇದು ಮಹಾಗುಪ್ತವಾಗಿ ಇರಬೇಕಾದ್ದಲ್ಲದೇ ಸಕಲ ವ್ರತಗಳಿಗಿಂತಲೂ ಉತ್ತಮತರವಾದದ್ದು. ಇದನ್ನು ಆಚರಿಸಿದರೆ ಸಕಲ ಸೌಭಾಗ್ಯಗಳ ಲಾಭವು ನಿಶ್ಚಿತವಾಗಿಯೂ ಪ್ರಾಪ್ತವಾಗುವುದು. ॥೧೪೪-೧೪೫॥

ಎಲೌ ಲಕ್ಷ್ಮೀದೇವಿಯೇ, ಈ ವ್ರತದ ಮಾಹಾತ್ಮ್ಯೆಯನ್ನು ಹೇಳುವೆನು. ಆಲಿಸು. ನೀನು ಈ ಮೊದಲೇ ಶಿವಧಾಮವಾದ ಕೈಲಾಸವನ್ನು ಕೇಳಿರುವೆಯಷ್ಟೆ.

ಮರಾಲರಾಜಿಸಂಕೀರ್ಣೇ ವರಟಾಪರಿವೇಷ್ಟಿತೇ ।
ತತ್ರೈಕರತ್ನಸ್ರಾಸಾದಃ ಕೋಟಿಯೋಜನಮುನ್ನತಃ ॥೧೪೭॥

ತತ್ರ ಸಿಂಹಾಸನಂ ದಿವ್ಯಂ ರತ್ನಕಾಂತಿವಿರಾಜಿತಂ ।
ಪುಷ್ಪಶಯ್ಯಾಸಮಾಕ್ರಾಂತಂ ನಾನಾಮಣಿಸಮನ್ವಿತಂ ॥೧೪೮॥

ಚಂದ್ರಮಂಡಲಮಾಲಾಭಿಃ ಪರಿತಃ ಪರಿವೇಷ್ಟಿತಂ ।
ತತ್ರ ಶಂಕರಮಾಸೀನಂ ಪ್ರಸನ್ನವದನಂ ನವಂ ॥೧೪೯॥

ಪ್ರತಿಕ್ಷಣಸುಖಾಂಭೋಧಿತರಂಗಪರಿವೇಷ್ಟಿತಂ ।
ರತ್ನಹಾರಸಮಾಕ್ರಾಂತಕಿರೀಟಕಟಕಾನ್ವಿತಂ ॥೧೫೦॥

---

ಆ ಕೈಲಾಸಶಿಖರವು ಸಾಕ್ಷಾತ್ ರತ್ನಮಯವಾದುದು. ಅಲ್ಲಿನ ಸುಗಂಧಮಯವಾದ ಪುಷ್ಪಗಳಿಂದ ಎಳೆಯಲ್ಪಟ್ಟ ಭ್ರಮರಗಳು ಸರ್ವದಾ ಅಲ್ಲಿ ಝೇಂಕಾರ ಧ್ವನಿಗೈಯ್ಯುತ್ತಿವೆ. ಅಲ್ಲಿ ಅನೇಕಾನೇಕ ಸ್ತ್ರೀಪುರುಷ ಹಂಸಗಳು ಯಥೇಚ್ಛವಾಗಿ ವಿಹರಿಸುತ್ತವೆ. ಅಂಥ ಅತಿಪ್ರಶಸ್ತವಾದ ಕೈಲಾಸದಲ್ಲಿ ನೂರುಯೋಜನದಷ್ಟು ಎತ್ತರವಾಗಿರುವ ಒಂದು ರತ್ನಮಯವಾದ ದಿವ್ಯಸೌಧವಿರುವುದು. ||೧೪೬-೧೪೭||

ಆ ದಿವ್ಯವಾದ ಅರಮನೆಯಲ್ಲಿ ಸಕಲ ವಸ್ತುಸಾಮಗ್ರಿಗಳೂ ದಿವ್ಯಮಣಿಮಯವಾಗಿಯೂ ಲೋಕೋತ್ತರಗಳಾಗಿಯೂ ಇರುತ್ತವೆ. ಅಲ್ಲಿ ದಿವ್ಯವಾದ ಸಿಂಹಾಸನ ಒಂದಿದೆ. ಅದನ್ನು ವರ್ಣಿಸಲಳವಲ್ಲ. ಹಾಗೆಯೇ ದಿವ್ಯವಾದ ಶಯನಗಳೇ ಮೊದಲಾದ ವಸ್ತುಗಳೂ, ಚಂದ್ರಮಂಡಲದಂತಿರುವ ರತ್ನಮಯವಾದ ಅಲಂಕಾರಗಳೂ ಅಪಾರವಾಗಿ ಸಮೃದ್ಧವಾಗಿರುತ್ತವೆ. ||೧೪೮||

ಆ ದಿವ್ಯವಾದ ಸಿಂಹಾಸನದ ಮೇಲೆ ದೇವದೇವನಾದ ಶಂಕರನು ಸುಖಾಸೀನನಾಗಿರುವನು. ಆ ಆನಂದಮೂರ್ತಿಯು ಸದಾ ಆನಂದಸಾಗರದ ಲಹರಿಯುಳ್ಳವನೋ ಎಂಬಂತೆ ವಿರಾಜಿಸುವನು. ಆ ಶಿವನ ಪ್ರಸನ್ನವಾದ ಮುಖಕಾಂತಿಯಿಂದ ನೋಡುವವರಿಗೆ ಅಲ್ಲಿ ಸರ್ವವೂ ಹೊಸಹೊಸತಾಗಿಯೇ ತೋರುವುದು. ಶಂಕರನು ಮುಕ್ತಾಹಾರ, ಕಿರೀಟ, ಕೈಕಡಗ ಮುಂತಾದ ದಿವ್ಯಾಭರಣಗಳನ್ನು ಧರಿಸಿರುವನು. ||೧೪೯-೧೫೦||

ರತ್ನಾಂಗುಲೀಯಕಾಪಾರಕಾಂತಿಪುಂಜವಿರಾಜಿತಂ ।
ಸುವರ್ಣಕಟಿಸೂತ್ರಸ್ಥಮಣಿಮಂಡಲಮಂಡಿತಂ ॥೧೫೧॥

ಕಸ್ತೂರೀಘನಸಾರಾಢ್ಯಪಾಟೀರರಸರೂಷಿತಂ ।
ಸ್ಫುರನ್ಮಣಿಗಣಾಕೀರ್ಣಕರ್ಣಭೂಷಣರಂಜಿತಂ ॥೧೫೨॥

ಮಣಿರತ್ನಸಮಾಕೀರ್ಣಸ್ಫುರನ್ನೂಪುರಪಾದುಕಂ ।
ಕ್ಷೀರಸಾಗರಸಂಕಾಶವಸನೈಃ ಪರಿವೇಷ್ಟಿತಂ ॥೧೫೩॥

ಅಭಯಪ್ರದಮೀಶಾನಂ ವರದಂ ಗಣವಂದಿತಂ।
ಸೋಮಸೂರ್ಯಾಗ್ನಿನಯನಂ ಸೋಮಾರ್ಧಕೃತಶೇಖರಂ ॥೧೫೪॥

ತ್ರಿಶೂಲಮೂಲಹಸ್ತಂ ತಂ ರತ್ನಸಾನುಶರಾಸನಂ ।
ಸಸ್ಮೇರಂ ಹೀರಹಾರಾಭಕರ್ಪೂರಗಿರಿಸನ್ನಿಭಂ ॥೧೫೫॥

ಪ್ರಸಾದಾಭಿಮುಖಂ ದೇವಮುಮಾ ಪ್ರಾಹಾತಿಶೋಭನಾ ॥೧೫೬॥

---

ಆ ಸರ್ವೋತ್ತಮನಾದ ಶಂಕರನು ರತ್ನಮಯವಾದ ಅಲಂಕಾರಗಳನ್ನೂ, ಉಂಗುರ, ಕಟಿಸೂತ್ರ, ಕರ್ಣಕುಂಡಲ, ಕಾಲುಬಳೆ ಮುಂತಾದ ಆಭರಣಗಳನ್ನೂ ಧರಿಸಿರುವನಲ್ಲದೇ, ಕಸ್ತೂರಿ, ಕುಂಕುಮಕೇಸರಿ ಮುಂತಾದ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡಿರುವನು. ರತ್ನಮಯವಾದ ಕಾಲುಬಳೆಯಿಂದಲೂ, ಮಣಿರಂಜಿತವಾದ ಪಾದುಕೆಗಳಿಂದಲೂ ಶೋಭಿಸುತ್ತಿರುವನು. ಕ್ಷೀರಸಾಗರದಂತೆ ಶುಭ್ರವಾದ ವಸ್ತ್ರಗಳನ್ನು ಧರಿಸಿಕೊಂಡಿರುವನು. ಆ ತ್ರಿಶೂಲಪಾಣಿಯು ಸಕಲ ಶಿವಗಣಗಳಿಂದ ಸರ್ವದಾ ಸೇವಿತನಾಗಿ ಪ್ರಸನ್ನನಾಗಿರುವನು. ಆ ಚಂದ್ರಶೇಖರನು ಸೂರ್ಯ, ಚಂದ್ರ, ಅಗ್ನಿಗಳಿಂದ ತ್ರಿನೇತ್ರಗಳುಳ್ಳವನಾಗಿದ್ದಾನೆ. ಆ ದೇವದೇವನು ಸರ್ವದಾ ತನ್ನ ಭಕ್ತರಿಗೆ ಅಭಯವನ್ನೂ ವರಗಳನ್ನೂ ದಯಪಾಲಿಸುತ್ತಿರುವನು. ಇಂಥ ಸೌಭಾಗ್ಯಮಯನೂ ಆನಂದಮಯನೂ ಆದ ಶಂಕರನನ್ನು ಒಂದು ಸಲ ಭಗವತಿಯಾದ ಪಾರ್ವತಿಯು ನೋಡುತ್ತಾ ಈ ರೀತಿ ಕೇಳಿದಳು. ॥೧೫೧-೧೫೨-೧೫೩-೧೫೪-೧೫೫-೧೫೬॥

|| ಗೌರ್ಯುವಾಚ ||

ಮಹಾದೇವ ಮಹೇಶಾನ ಕರುಣಾಸಾಗರ ಪ್ರಭೋ ।
ಶಂಭೋ ಪ್ರಸೀದ ಭಗವನ್ ದಯಾಂ ಕುರು ಸದಾ ಮಯಿ ॥೧೫೭॥

ಕಿಮನ್ಯತ್ಕರುಣಾಪಾತ್ರಂ ತವ ಚಂದ್ರಕಲಾಧರ ।
ಮದನ್ಯದಪಿ ಲೋಕೇಷು ಸರ್ವೇಷ್ವಪಿ ಸದಾಶಿವ ॥೧೫೮॥

ಕೃಪಾಮೂರ್ತಿಸ್ತ್ವಮೀಶಾನ ತಯಾ ಕರುಣಯಾ ಮಯಿ ।
ಸ್ನೇಹೋಽಪಿ ಕ್ರಿಯತೇ ನೂನಂ ಸ್ನೇಹಪಾತ್ರಮಹಂ ಯತಃ॥೧೫೯॥

ಅದ್ಯೈಕಂ ಪ್ರಷ್ಟುಮಿಚ್ಛಾಮಿ ಸರ್ವಲೋಕಹಿತಾವಹಂ ।
ವ್ರತಂ ಮಹೇಶ ತತ್ತಾವದ್ವದ ಸ್ನೇಹಪುರಸ್ಸರಂ ॥೧೬೦॥

---

ಪ್ರಿಯನಾದ ಭಗವಂತನೇ, ನೀನೇ ಸಕಲರಿಗೂ ಪ್ರಭುವಾಗಿದ್ದೀಯೆ. ನಿನ್ನನ್ನೇ ಸರ್ವರೂ ದಯಾಮಯನೆಂತಲೂ ಮಹಾದೇವನೆಂತಲೂ ಮಹೇಶಾನನೆಂತಲೂ ಸ್ತುತಿಸುತ್ತಾರೆ. ಇಂಥ ಸರ್ವಪೂಜ್ಯನಾದ ನೀನು ಸದಾ ಶಾಶ್ವತವಾಗಿ ನನ್ನ ಮೇಲೆ ದಯೆಯನ್ನಿಟ್ಟಿರಬೇಕೆಂದು ಬೇಡಿಕೊಳ್ಳುತ್ತೇನೆ. ||೧೫೭||

ಪ್ರಿಯಚಂದ್ರಶೇಖರನೇ, ನೀನು ಈವರೆಗೂ ನನ್ನ ಮೇಲೆ ಅಪಾರ ಕರುಣೆಯನ್ನಿಟ್ಟಿರುವೆ. ನನ್ನಷ್ಟು ಪ್ರೀತಿಪಾತ್ರವಾದ ವಸ್ತುವು ನಿನಗೆ ಬೇರೊಂದೂ ಇರುವುದಿಲ್ಲವೆಂದೂ ತಿಳಿದಿದ್ದೇನೆ. ಆದರೂ ನಿನ್ನನ್ನು ಪದೇಪದೇ ಪ್ರಾರ್ಥಿಸಿಕೊಳ್ಳಬೇಕೆಂಬ ತೀವ್ರವಾದ ಆಸೆ ನನಗುಂಟಾಗುತ್ತಿರುವುದು. ||೧೫೮||

ನೀನು ಪರಮದಯಾಳು ಎಂಬುದು ಇದರಿಂದಲೇ ವ್ಯಕ್ತವಾಗುವುದು. ನನ್ನ ಮೇಲೆ ಇಟ್ಟಿರುವ ಕೃಪೆಯನ್ನೇ ನೀನು ಪ್ರೇಮಮಯವನ್ನಾಗಿ ಮಾಡಿಕೊಂಡಿರುವೆ. ನಿನ್ನ ಪ್ರೇಮಾಮೃತವನ್ನು ಪಡೆದಿರುವ ನಾನೇ ಧನ್ಯಳು. ಇದು ನಿಜ. ||೧೫೯||

ಓ ಮಹೇಶನೇ, ಈಗ ನಾನು ನಿನ್ನಲ್ಲಿ ಒಂದು ಪ್ರಶ್ನೆಮಾಡಲಿರುವೆನು. ನನಗೊಂದು ವ್ರತವನ್ನು ಉಪದೇಶಿಸು. ಈ ವ್ರತದಿಂದ ಮುಂದೆ ಅನೇಕ ಜನರಿಗೆ ಅನುಕೂಲವಾಗುವಂತಿರಬೇಕು. ನನ್ನ ಮೇಲೆ ದಯೆಮಾಡಿ ಅಂಥ ಮಹತ್ತರವಾದ ಒಂದು ವ್ರತವನ್ನು ನನಗೆ ಬೇಗ ಉಪದೇಶಿಸು. ||೧೬೦||

ಇತ್ಯಂಬಿಕಾವಚನರೂಪಸುಧಾಂ ಮಹೇಶೋ
ಮತ್ವಾ ಪ್ರಹೃಷ್ಟಹೃದಯಸ್ಸದಯಸ್ವಭಾವೈಃ ।
ಆಲಿಂಗ್ಯ ಶೈಲತನಯಾಂ ವಿನಯಾನತಾಂಗೀ
ಮಂಗೀಕೃತಾಖಿಲಶಿವಾಸುನಯೋಽಪ್ಯುವಾಚ ॥೧೬೧॥

॥ ಶ್ರೀಶಿವ ಉವಾಚ ॥

ಕಿಂ ವ್ರತಂ ಪ್ರಷ್ಟುಮಿಚ್ಛಾ ತೇ ಗೌರಿ ಸ್ಮೇರವರಾನನೇ ।
ತದ್ಗೋಪನೀಯಮಪ್ಯದ್ಯ ವಕ್ಷ್ಯೇ ವಿದ್ಯಾಮಯೇ ಶಿವೇ ॥೧೬೨॥

ತವಾಪಿ ಕಿಂ ವಾ ವದ ಗೋಪನೀಯಂ
ತವೈವ ಸರ್ವಂ ಗಿರಿರಾಜಕನ್ಯೇ ।
ಇದಂ ಮಹದ್ಭಾಗ್ಯಮಪಾರಮೇತತ್
ತವೈವ ಕಸ್ಯೇದೃಶಭಾಗ್ಯಮಸ್ತಿ ॥೧೬೩॥

---

ಹೀಗೆಂದು ಗಿರಿಜೆಯು ಪ್ರಾರ್ಥಿಸಿಕೊಳ್ಳಲು ಪರಮೇಶ್ವರನಿಗೆ ಬಹು ಸಂತೋಷವಾಯಿತು. ಶಿವನು ಪರಮದಯಾಸ್ವಭಾವದವನಾದ್ದರಿಂದ ಅನ್ಯಹಿತ ಕ್ಕಾಗಿ ಪಾರ್ವತಿಯು ಕೇಳಿಕೊಂಡ ಬೇಡಿಕೆಯ ವಚನವು ಆತನಿಗೆ ಅಮೃತತುಲ್ಯ ವಾಯಿತು. ಆಗ ಶಂಕರನು ಗಿರಿಜೆಯ ಪ್ರಾರ್ಥನೆಯನ್ನು ಸ್ವೀಕರಿಸಿದನಲ್ಲದೇ ವಿನಯಾನ್ವಿತಳಾದ ಗಿರಿಜೆಯನ್ನು ಪ್ರೇಮದಿಂದ ಆಲಿಂಗಿಸಿಕೊಂಡು ಈರೀತಿ ನುಡಿದನು. ॥೧೬೧॥

" ಪ್ರಿಯೆ ಗೌರಿ, ನೀನು ಯಾವ ವ್ರತವನ್ನು ಕೇಳಲು ಅಪೇಕ್ಷಿಸುತ್ತಿದ್ದೀಯೇ ? ಎಂತಹ ವ್ರತವನ್ನು ನಿನಗೆ ಹೇಳಬೇಕೆಂಬುದನ್ನು ತಿಳಿಸು. ನೀನು ನನ್ನ ಪ್ರೇಮ ಸರ್ವಸ್ವವಾಗಿರುವುದರಿಂದಲೂ ಸ್ವಯಂ ನೀನು ವಿದ್ಯಾಸ್ವರೂಪಳಾಗಿರುವುದ ರಿಂದಲೂ ನಿನ್ನಲ್ಲಿ ಮುಚ್ಚಿಡುವುದಾವುದೂ, ನನ್ನಲ್ಲಿರುವುದಿಲ್ಲ. ನಿನಗೆ ಅಪೇಕ್ಷಿತ ವಾದದ್ದನ್ನು ಕೇಳು. ಎಂಥ ಗೋಪ್ಯವಾಗಿದ್ದರೂ ಹೇಳುವೆನು. ॥೧೬೨॥

ಎಲೌ ಗಿರಿಜೆಯೇ, ನಿನಗೂ ತಿಳಿಸದೇ ಗುಟ್ಟಾಗಿ ಇಟ್ಟುಕೊಂಡಿರುವಂ ಥಾದ್ದು ನನ್ನಲ್ಲಿ ಯಾವುದಿದೆ? ನನ್ನ ಸರ್ವಸ್ವವೂ ನೀನೇ ಆಗಿರುವೆ. ನನ್ನಲ್ಲಿರುವ ಪ್ರತಿಯೊಂದು ವಸ್ತುವೂ ನಿನ್ನ ಸೌಭಾಗ್ಯವೇ ಆಗಿರುವುದು. ಆದುದರಿಂದ ನೀನೇ ಪರಮಭಾಗ್ಯವತಿಯಾಗಿರುವೆ. ಇಂಥ ಭಾಗ್ಯವು ಮತ್ತೆ ಯಾರಿಗಿದೆ ? ॥೧೬೩॥

ಇತ್ಯಾಕರ್ಣ್ಯ ಮಹೇಶಸಾದರವಚೋವೀಚೀಮುವಾಚಾಂಬಿಕಾ
ತ್ವತ್ಪಾದಾಂಬುರುಹಾವಲೋಕನರತಾ ಧನ್ಯಾಸ್ಮಿ ಧನ್ಯೋತ್ತಮ ।
ಅರ್ಧಾಂಗೇ ವಿನಿವೇಶಿತಾಸ್ಮಿ ಕಿಮತೋ ಭಾಗ್ಯಂ ಭವೇದಿತ್ಯಹಂ
ಸಾನಂದಾ ಸತತಂ ಕೃಪೈವಮನಿಶಂ ಸಂಪ್ರಾರ್ಥನೀಯಾ ಮಯಾ ॥೧೬೪॥

ಸೌಭಾಗ್ಯವೃದ್ಧಿದಂ ಕಿಂ ವಾ ವ್ರತಂ ಮಂಗಳದಾಯಕಂ ।
ಪುತ್ರಪೌತ್ರಾದಿಸಂಪತ್ತಿಸಾಧನಂ ಚ ವದಾಶು ಮೇ ॥೧೬೫॥

ಯದ್ವ್ರತಾಚರಣೇನೈವ ನ ನಾರೀ ವಿಧವಾ ಭವೇತ್ ।
ಜನ್ಮಾಂತರೇಽಪಿ ಸುಭಗಾ ಸುಪುತ್ರಾ ಭವತಿ ಪ್ರಭೋ ॥೧೬೬॥

---

ಈ ಪ್ರಕಾರವಾಗಿ ಪರಮೇಶ್ವರನು ಆದರದಿಂದ ಆನಂದಲಹರಿಯಂತೆ ಸಂಭಾಷಿಸಲು ಪಾರ್ವತಿಯು ಅತ್ಯಾನಂದದಿಂದ ಈ ರೀತಿ ನುಡಿದಳು. " ಪ್ರಿಯ ಗಿರಿಶನೇ, ನೀನು ದೇವೋತ್ತಮನಾಗಿರುವೆ. ನಿನ್ನ ಪಾದಕಮಲಗಳನ್ನು ಸರ್ವದಾ ನಾನು ಸಂದರ್ಶಿಸುತ್ತಿರುವುದರಿಂದ ನಿಜವಾಗಿಯೂ ಧನ್ಯಳಾಗಿದ್ದೇನೆ. ನಾನು ಭಾಗ್ಯವತಿ ಎಂಬುದರಲ್ಲಿ ಏನೂ ಸಂದೇಹವಿಲ್ಲ. ಏಕೆಂದರೆ, ದೇವದೇವನಾದ ನೀನು ನಿನ್ನ ಅರ್ಧಾಂಗದಲ್ಲಿ ನನಗೆ ಸ್ಥಾನವನ್ನು ಕೊಟ್ಟು ಕರುಣಿಸಿದ್ದೀಯೆ. ಇದಕ್ಕಿಂತಲೂ ಹೆಚ್ಚು ಭಾಗ್ಯವು ನನಗೆ ಮತ್ತೆ ಯಾವುದಿರುವುದು ? ಇಂಥ ಮಹಾಪುರಸ್ಕಾರವು ನನಗೆ ಲಭಿಸಿರುವುದರಿಂದ ನಾನು ಸದಾ ಆನಂದಭರಿತಳಾಗಿರುತ್ತೇನೆ. ಇದೇ ಅನುಗ್ರಹವು ಶಾಶ್ವತವಾಗಿ ನನ್ನಲ್ಲಿ ಇರಲೆಂದೇ ಸತತವೂ ನಿನ್ನನ್ನು ಪ್ರಾರ್ಥಿಸುತ್ತೇನೆ. ॥೧೬೪॥

ಪ್ರಿಯ ಶಂಕರನೇ, ಸೌಭಾಗ್ಯಾಭಿವೃದ್ಧಿಯು ಯಾವ ವ್ರತದಿಂದ ಲಭಿಸುವುದು ? ಕಲ್ಯಾಣಪ್ರದವಾಗಿಯೂ ಪುತ್ರಪೌತ್ರಾದಿ ಸಂಪತ್ತುಗಳನ್ನು ಅನುಗ್ರಹಿಸುವುದಾಗಿಯೂ ಇರುವ ವ್ರತವನ್ನು ನನಗೆ ಉಪದೇಶಿಸು. ॥೧೬೫॥

ಯಾವ ವ್ರತವನ್ನು ಸ್ತ್ರೀಯು ಅನುಷ್ಠಿಸಿದರೆ ಜನ್ಮ ಜನ್ಮಾಂತರದಲ್ಲಿಯೂ ಆಕೆಯು ವಿಧವೆಯಾಗುವುದಿಲ್ಲವೋ, ಸದಾ ಸೌಭಾಗ್ಯವತಿಯಾಗಿಯೇ ಇದ್ದು ಪುತ್ರಾದಿ ಸಂಪತ್ತುಗಳನ್ನು ಪಡೆಯುವಳೋ ಅಂಥ ವ್ರತವನ್ನು ನನಗೆ ತಿಳಿಸು. ॥೧೬೬॥

ಯದ್ವ್ರತಾಚರಣಾಭಾವೇ ವಿಧವಾ ಸ್ಯಾಚ್ಚ ದುರ್ಭಗಾ ।
ಅಪುತ್ರಾ ಮೃತಪುತ್ರಾ ಚ ಮೃತಬಂಧುಜನಾ ಸದಾ ॥೧೬೭॥

ಏತಾದೃಶಂ ವ್ರತಂ ಕಿಂಚಿದ್ವ್ರತಂ ನಾರೀಮನೋಹರಂ ।
ಯದ್ವ್ರತಶ್ರವಣೇನಾಪಿ ಮುಚ್ಯತೇ ಪಾಪಕೋಟಿಭಿಃ ॥೧೬೮॥

ಇತಿ ತದ್ವಚನಂ ಶ್ರುತ್ವಾ ಶಿವಮಾಲಿಂಗ್ಯ ಶಂಕರಃ ।
ಪ್ರಾಹ ವ್ರತೋತ್ತಮಂ ಧನ್ಯಮಂಬಿಕಾಯೈ ಮನೋಹರಂ ॥೧೬೯॥

॥ ಶ್ರೀಸದಾಶಿವ ಉವಾಚ ॥

ಅಸ್ತಿ ವ್ರತೋತ್ತಮಂ ಗೌರಿ ನಾರೀಣಾಮೇವ ಕೇವಲಂ ।
ತದ್ವ್ರತಾಚರಣೇನೈವ ನಾರೀ ಸುಖಮವಾಪ್ನುಯಾತ್ ॥೧೭೦॥

---

ಯಾವ ವ್ರತವನ್ನು ಮಾಡದೇ ಇದ್ದಾಗ ಸ್ತ್ರೀಗೆ ವೈಧವ್ಯವು ಪ್ರಾಪ್ತವಾಗುವುದು ? ದೌರ್ಭಾಗ್ಯಶಾಲಿನಿಯಾಗಿರುವುದು, ಮಕ್ಕಳಿಲ್ಲದಿರುವುದು, ಹುಟ್ಟಿದ ಮಕ್ಕಳೆಲ್ಲಾ ಸಾಯುವುದು, ಬಂಧುಗಳು ಮೃತರಾಗುವುದು ಮುಂತಾದ ಅನಿಷ್ಟಗಳು ಯಾವ ವ್ರತಾನುಷ್ಠಾನದಿಂದ ನಿವೃತ್ತಿಯಾಗುವುವು ? ॥೧೬೭॥

ನನಗೆ ಅಂಥ ವ್ರತವನ್ನು ಹೇಳು. ಯಾವ ವ್ರತದ ನಾಮವನ್ನು ಕೇಳಿದರೂ ಸಹ ಪಾಪಪರಿಹಾರವುಂಟಾಗುವುದೋ, ಯಾವ ವ್ರತವು ಸರ್ವಥಾ ಸ್ತ್ರೀಯರಿಗೆ ಅನುಕೂಲ ಆನಂದಗಳನ್ನು ಅನುಗ್ರಹಿಸುವುದೋ, ಅಂತಹ ವ್ರತವನ್ನು ಉಪದೇಶಿಸು.'' ॥೧೬೮॥

ಹೀಗೆಂದು ಪಾರ್ವತಿಯು ಕೇಳಿಕೊಳ್ಳಲು ಶಂಕರನು ಪ್ರೀತಿಯಿಂದ ಗಿರಿಜೆಯನ್ನು ಆಲಿಂಗಿಸಿಕೊಂಡು ಮನೋಹರವೂ ಉತ್ತಮವೂ ಆದ ವ್ರತವನ್ನು ಹೇಳತೊಡಗಿದನು. ॥೧೬೯॥

ಪ್ರಿಯೆ ಗೌರಿ, ಉತ್ತಮವಾದ ವ್ರತವೊಂದುಂಟು. ಅದು ಕೇವಲ ಸ್ತ್ರೀಯರಿಗಾಗಿಯೇ ಇರುತ್ತದೆ. ಅವರೇ ಅದಕ್ಕೆ ಅಧಿಕಾರಿಗಳು. ಆ ವ್ರತವನ್ನಾಚರಿಸಿದರೆ ಸ್ತ್ರೀಯು ಸಕಲ ಸೌಭಾಗ್ಯ ಸುಖಗಳನ್ನೂ ಪಡೆಯುವಳು. ॥೧೭೦॥

ಸತ್ಕುಲೇ ಜನ್ಮ ಸಂಪ್ರಾಪ್ಯ ಸೌಂದರ್ಯಮತಿಶೋಭನಂ ।
ಭಾಗ್ಯಂ ಚ ಪ್ರಾಪ್ನುಯಾನ್ನಾರೀ ತದ್ವ್ರತಾಚರಣಾಚ್ಛಿವೇ ॥೧೭೧॥

ನ ಪ್ರಪಶ್ಯತಿ ವೈಧವ್ಯಂ ತದ್ವ್ರತಾಚರಣೋತ್ಸುಕಾ ।
ಅಪುತ್ರಾ ನ ಭವತ್ಯೇವ ದುರ್ಭಗಾಪಿ ನ ಸರ್ವಥಾ ॥೧೭೨॥

ರೂಪಲಾವಣ್ಯಸಂಪನ್ನಾ ಸಂಪತ್ಕೀರ್ತಿಸಮನ್ವಿತಾ ।
ಬಂಧುಪೋಷಣಸಂಸಕ್ತಾ ನಾರೀ ತಸ್ಮಾದ್ವ್ರತಾದ್ಭವೇತ್ ॥೧೭೩॥

ನ ತದ್ವ್ರತಸಮಂ ಲೋಕೇ ನಾರೀಣಾಂ ವ್ರತಮಸ್ತ್ಯಪಿ ।
ಅತಸ್ತದ್ವ್ರತಮತ್ಯಂತಂ ಭಕ್ತ್ಯಾ ಕಾರ್ಯಂ ಪ್ರಯತ್ನತಃ ॥೧೭೪॥

ಮಾಸಿ ಭಾದ್ರಪದೇ ಶುಕ್ಲೇ ಪಕ್ಷೇ ಹಸ್ತರ್ಕ್ಷಸಂಯುತಾ ।
ಯಾ ತೃತೀಯಾ ಭವೇತ್ತಸ್ಯಾಂ ತದ್ವ್ರತಾಚರಣಂ ಭವೇತ್ ॥೧೭೫॥

---

ಈ ವ್ರತವನ್ನಾಚರಿಸಿದರೆ ಸ್ತ್ರೀಯು ಜನ್ಮಜನ್ಮಾಂತರದಲ್ಲಿಯೂ ಸದ್ವಂಶದಲ್ಲಿಯೇ ಜನಿಸಿ ಮಂಗಳಸ್ಥಾಯಿಯಾದ ಸೌಂದರ್ಯವನ್ನೂ ಸೌಭಾಗ್ಯವನ್ನೂ ಪಡೆಯುವಳು. ॥೧೭೧॥

ಈಗ ನಾನು ಹೇಳುವ ವ್ರತವನ್ನು ಆಚರಿಸುವ ಸ್ತ್ರೀಯು ಎಂದೂ ವೈಧವ್ಯ ದುಃಖದಲ್ಲಿ ಬೀಳುವುದಿಲ್ಲ. ಪುತ್ರಹೀನಳಾಗಿಯಾಗಲೀ, ದೌರ್ಭಾಗ್ಯವತಿಯಾಗಲೀ ಎಂದೂ ಆಗುವುದಿಲ್ಲ. ಈ ವ್ರತದಿಂದ ಸ್ತ್ರೀಯು ಸದ್ಗುಣವತಿಯೂ ರೂಪಲಾವಣ್ಯಶಾಲಿನಿಯೂ ಆಗುವಳಲ್ಲದೇ ಬಂಧುವರ್ಗವನ್ನೆಲ್ಲಾ ಪಾಲಿಸಬಲ್ಲವಳಾಗುವಳು. ಮತ್ತು ಕೀರ್ತಿಶಾಲಿನಿಯೂ ಐಶ್ವರ್ಯವತಿಯೂ ಆಗುವಳು. ॥೧೭೨-೧೭೩॥

ಸ್ತ್ರೀಯರಿಗೆ ಈ ವ್ರತಕ್ಕಿಂತಲೂ ಮಿಗಿಲಾದ ಬೇರೊಂದು ವ್ರತವಿರುವುದಿಲ್ಲ. ಆದುದರಿಂದ ಈ ವ್ರತವನ್ನು ಸ್ತ್ರೀಯರು ಅತಿಪ್ರಯತ್ನಪುರಸ್ಸರವಾಗಿ ಭಕ್ತಿಯಿಂದ ಆಚರಿಸಬೇಕು. ॥೧೭೪॥

ಈ ವ್ರತವನ್ನು ಭಾದ್ರಪದಮಾಸದ ಶುಕ್ಲಪಕ್ಷ, ಹಸ್ತನಕ್ಷತ್ರಯೋಗವಿರುವ ತೃತೀಯಾತಿಥಿಯ ದಿನ ಆಚರಿಸಬೇಕು. ॥೧೭೫॥

ಸಾಯಂಕಾಲಾತ್ಪೂರ್ವಮೇವ ಪೂಜಾಸಾಧನಮುತ್ತಮಂ ।
ಸಂಪಾದನೀಯಂ ಯತ್ನೇನ ಫಲಪುಷ್ಪಾದಿಕಂ ನವಂ ॥೧೭೬॥

ಮನೋಹರಾಣಿ ಪುಷ್ಪಾಣಿ ಯಾವಂತಿ ವರವರ್ಣಿನಿ ।
ತಾನಿ ಸಂಪಾದನೀಯಾನಿ ಪರಿಪಕ್ವಫಲಾನ್ಯಪಿ ॥೧೭೭॥

ಪುಷ್ಪಾಣ್ಯಪಿ ವಿಶೇಷೇಣ ಫಲಾನ್ಯಪಿ ಸದಾಶಿವೇ ।
ಯಾನಿ ಸಂಪಾದನೀಯಾನಿ ಕರವೀರಾಣಿ ಶೋಭನೇ ॥೧೭೮॥

ಕುಂದಮಂದಾರಕಮಲನೀಲೋತ್ಪಲಕುಲಾನ್ಯಪಿ ।
ಬಕುಲಾನಿ ಮನೋಜ್ಞಾನಿ ಕನಕಾನ್ಯಪಿ ಶೋಭನೇ ॥೧೭೯॥

ತ್ರಿವಿಧಾನಿ ಪ್ರಫುಲ್ಲಾನಿ ಕರವೀರಾಣಿ ಶೋಭನೇ ।
ಜಪಾಚಂಪಕಪುಷ್ಪಾಣಿ ಪುನ್ನಾಗಕುಸುಮಾನ್ಯಪಿ ॥೧೮೦॥

ದ್ರೋಣಾಪಾಮಾರ್ಗಕಲ್ಹಾರಕೇತಕೀಕುಸುಮಾನ್ಯಪಿ ।
ಫುಲ್ಲಾರ್ಜುನಪ್ರಸೂನಾನಿ ಸಾಧನೀಯಾನಿ ಯತ್ನತಃ ॥೧೮೧॥

---

ಈ ವ್ರತವನ್ನು ಆಚರಿಸುವ ಸ್ತ್ರೀಯರು ಸಾಯಂಕಾಲಕ್ಕೆ ಮೊದಲೇ ಪೂಜಾಸಾಮಗ್ರಿಗಳನ್ನೆಲ್ಲಾ ಸಂಪಾದಿಸಿ ಅಣಿಮಾಡಿಟ್ಟುಕೊಳ್ಳಬೇಕು. ಪೂಜೆಗೆ ಉತ್ತಮೋತ್ತಮವಾದ ಪದಾರ್ಥಗಳನ್ನು ಸಂಪಾದಿಸಬೇಕು. ಮನೋಹರವಾದ ಹಣ್ಣುಕಾಯಿಗಳನ್ನೂ ಹೂವುಪತ್ರೆಗಳನ್ನೂ ತಂದುಕೊಳ್ಳಬೇಕು. ಯಾವ ಯಾವ ಪುಷ್ಪಗಳು ಉತ್ತಮವಾಗಿರುತ್ತವೆಯೋ ಅವುಗಳನ್ನೂ, ಹಾಗೆಯೇ ಉತ್ತಮಫಲ ಗಳನ್ನೂ ಕರವೀರಪುಷ್ಪಗಳನ್ನೂ (ಕಣಿಗಲು) ಮುಖ್ಯವಾಗಿ ಒದಗಿಸಿಕೊಳ್ಳಬೇಕು. ॥೧೭೬-೧೭೭-೧೭೮॥

ಮಲ್ಲಿಗೆ, ಮಂದಾರ, ಕಮಲ, ಕನ್ನೈದಿಲೆ, ಪುನ್ನಾಗ, ಸಂಪಿಗೆ, ದಾಸವಾಳ, ಮೂರು ವಿಧವಾದ ಕಣಿಗಲು ಹೂವುಗಳು, ಅಶೋಕ ಮುಂತಾದ ನೂತನ ಮನೋಹರಗಳಾದ ಪುಷ್ಪಗಳನ್ನೂ, ಮತ್ತು ಕನಕ, ರತ್ನ, ಮಾಣಿಕ್ಯ, ಮುತ್ತು, ಹವಳ ಇವುಗಳನ್ನೂ ಶೇಖರಿಸಿಕೊಳ್ಳಬೇಕು. ॥೧೭೯-೧೮೦॥

ತುಂಬೇಹೂವು, ಉತ್ತರಣೆಹೂವು, ಸೌಗಂಧಿಕಪುಷ್ಪ, ಕೇದಿಗೆಹೂವು, ಷಜ್ಜವೃಕ್ಷದಹೂವು, ಕದಂಬಪುಷ್ಪ ಮತ್ತು ದವನ ಇವುಗಳನ್ನೂ, ಮಾವಿನಪತ್ರೆ,

ಕಂಟಕಾರಿಪ್ರಸೂನಾನಿ ಶ್ವೇತಾರ್ಕಕುಸುಮಾನ್ಯಪಿ ।
ತಥಾ ಬಿಲ್ವಪ್ರಸೂನಾನಿ ಸಾಧನೀಯಾನಿ ಯತ್ನತಃ ॥೧೮೨॥

ತಥಾ ಕದಂಬಪುಷ್ಪಾಣಿ ತಥಾ ದಮನಕಾನ್ಯಪಿ ।
ಆಮ್ರಾಮಲಕಪತ್ರಾಣಿ ಬಿಲ್ವಪತ್ರಾಣಿ ಶೋಭನೇ ॥೧೮೩॥

ಅನ್ಯಾನ್ಯಪಿ ಸುಗಂಧೀನಿ ಸಾಧನೀಯಾನಿ ಸಾದರಂ ।
ಫಲಾನಿ ನಾರಿಕೇಳಾಮ್ರಬೀಜಪೂರಾದಿಕಾನ್ಯಪಿ ॥೧೮೪॥

ಶಕ್ತಿರ್ಯಾ ಫಲಪುಷ್ಪಾದಿಸಾಧನೇ ಸಾ ಗುಣಾವಹಾ ।
ಅತಃ ಪ್ರಯತ್ನೈರ್ವಿವಿಧೈಸ್ಸಾಧನೀಯಾನಿ ತಾನ್ಯಪಿ ॥೧೮೫॥

ಸುಂದರಂ ಮಂದಿರಂ ಕಾರ್ಯಂ ಸುಸುಧಾಲೇಪನಾದಿಭಿಃ ।
ಅಲಂಕೃತಂ ಚ ಕರ್ತವ್ಯಂ ವಿತಾನೈರ್ಧ್ವಜಮಂಟಪೈಃ ॥೧೮೬॥

ವಿಚಿತ್ರವಸನೈಃ ಕಾರ್ಯಂ ವಿಚಿತ್ರಂ ಶಿವಮಂದಿರಂ ।
ತೋರಣಾಲಂಕೃತಂ ಕಾರ್ಯಂ ಹಾರರಾಜಿವಿರಾಜಿತಂ ॥೧೮೭॥

---

ನೆಲ್ಲೀಪತ್ರೆ, ಬಿಲ್ವಪತ್ರೆ ಮುಂತಾದ ಪತ್ರೆಗಳನ್ನೂ ಅಲ್ಲದೇ, ಇನ್ನೂ ಯಾವ ಯಾವ ಪುಷ್ಪಗಳು ಪತ್ರೆಗಳು ಮನೋಹರಗಳಾಗಿರುತ್ತವೆಯೋ, ಪರಿಮಳವಾಗಿರುತ್ತವೆಯೋ ಅವುಗಳನ್ನೂ ಸಂಪಾದಿಸಿಕೊಳ್ಳಬೇಕು. ॥೧೮೧-೧೮೨-೧೮೩॥

ಹಾಗೆಯೇ ಹಣ್ಣುಕಾಯಿಗಳಲ್ಲಿ ತೆಂಗಿನಕಾಯಿ, ಮಾವು, ಸೀಬೆ ಮುಂತಾದ ಹಣ್ಣುಗಳನ್ನೂ ಒದಗಿಸಬೇಕು. ಈ ಹಣ್ಣುಹೂವುಗಳು ಪೂಜೆಗೆ ಎಷ್ಟು ಹೆಚ್ಚಾಗಿದ್ದರೆ ಅಷ್ಟೂ ವಿಶೇಷವಿರುವುದರಿಂದ ತಮ್ಮ ಶಕ್ತಿಗೆ ಎಷ್ಟು ಸಾಧ್ಯವೋ ಅಷ್ಟನ್ನೂ ಸಂಪಾದಿಸಿಕೊಂಡು ಸಿದ್ಧಪಡಿಸಿಕೊಳ್ಳಬೇಕು. ॥೧೮೪-೧೮೫॥

ವ್ರತವನ್ನು ಆಚರಿಸುವ ಮಂದಿರವನ್ನು ಮೊದಲು ಗುಡಿಸಿ ಸಾರಿಸಿ ಶುದ್ಧ ಪಡಿಸಬೇಕು. ಅಲ್ಲದೇ ಸುಣ್ಣವನ್ನು ಬಳಿದು ಸುಂದರವನ್ನಾಗಿಯೂ ಮಾಡಬೇಕು. ತೋರಣ, ಧ್ವಜ, ಪತಾಕೆ ಇವುಗಳಿಂದ ಮಂಟಪವನ್ನು ಚೆನ್ನಾಗಿ ಅಲಂಕರಿಸ ಬೇಕು. ॥೧೮೬॥

ಶಿವಮಂದಿರಕ್ಕೆ ಬಣ್ಣಬಣ್ಣವಾಗಿರುವ ಬಟ್ಟೆಗಳನ್ನು ಕಟ್ಟಿ ಚಿತ್ರಿತವಾಗಿರು ವಂತೆ ಮಾಡಬೇಕು. ತಳಿರುತೋರಣಗಳನ್ನು ಅಲ್ಲಲ್ಲೇ ಬಿಗಿದು ಕಟ್ಟಬೇಕು.

ಪುಷ್ಪಗುಚ್ಛಸಮಾಕೀರ್ಣಂ ಪುಷ್ಪಮಾಲಾಸಮಾವೃತಂ ।
ಸುಗಂಧದ್ರವ್ಯಸಂಲಿಪ್ತಂ ರಂಗವಲ್ಲೀಸಮಾವೃತಂ ॥೧೮೮॥

ತೂರ್ಯಧ್ವನಿಸಮಾಕೀರ್ಣಂ ಶಿವಗಾನವಿಜೃಂಭಿತಂ ।
ಪುಣ್ಯಾಹವಾಚನೋಪೇತಂ ದ್ವಿಜಮಂಡಲಮಂಡಿತಂ ॥೧೮೯॥

ಏವಂ ಕೃತ್ವಾ ಶಿವಾಚಾರಂ ದೀಪಮಾಲಾವಿಜೃಂಭಿತಂ ।
ರಂಭಾಸ್ತಂಭಸಮಾಕೀರ್ಣಂ ಪೂರ್ಣಕುಂಭವಿರಾಜಿತಂ ॥೧೯೦॥

ಏತಾದೃಶೇ ಶಿವಾಗಾರೇ ಪ್ರವಿಶ್ಯ ಚ ಶುಚಿಸ್ಮಿತಾ ।
ಪೂಜಯೇದುತ್ತಮಂ ಲಿಂಗಂ ಹೇಮರೌಪ್ಯಾದಿಲಕ್ಷಣಂ ॥೧೯೧॥

---

ಅನೇಕ ಮುಕ್ತಾಹಾರಗಳಿಂದಲೂ ಹೂವಿನ ಗೊಂಚಲುಗಳಿಂದಲೂ ಹೂವಿನಮಾಲೆಗಳಿಂದಲೂ ಅಲಂಕರಿಸಬೇಕು. ಚೆನ್ನಾಗಿ ರಂಗವಲ್ಲಿಯಿಂದ ಸಿಂಗರಿಸಬೇಕಲ್ಲದೇ ಪರಿಮಳದ್ರವ್ಯಗಳನ್ನು ಅಲ್ಲಲ್ಲೇ ಬಳಿದು ಮಂದಿರವನ್ನು ಸುವಾಸಿತವನ್ನಾಗಿ ಮಾಡಬೇಕು. ॥೧೮೭-೧೮೮॥

ಆ ಮಂದಿರದಲ್ಲಿ ಮಂಗಳವಾದ್ಯಘೋಷವನ್ನೇರ್ಪಡಿಸಬೇಕು. ಶಿವಭಜನ ಮತ್ತು ಶಿವನಾಮಗಾನ ಇವುಗಳ ಮೇಳವನ್ನು ನಡೆಯಿಸಬೇಕು. ಅಲ್ಲಿಗೆ ಬ್ರಾಹ್ಮಣರು ಮತ್ತು ಸುವಾಸಿನಿಯರನ್ನು ಕರೆಯಿಸಬೇಕಲ್ಲದೇ ಬ್ರಾಹ್ಮಣರಿಂದ ಪುಣ್ಯಾಹವಾಚನವನ್ನು ಮಾಡಿಸಬೇಕು. ಹೀಗೆ ಸಕಲ ಶಿವಧರ್ಮಗಳನ್ನೂ ನಡೆಯಿಸಬೇಕಲ್ಲದೇ ಮಂದಿರವನ್ನು ದೀಪಮಾಲೆಗಳಿಂದ ಅಲಂಕರಿಸಿ ಬೆಳಗಿಸಬೇಕು. ಮಂಗಳಾರ್ಥವಾಗಿ ಬಾಳೆಮರಗಳನ್ನು ಕಟ್ಟಿಸಬೇಕು. ಹಾಗೂ ಪೂರ್ಣ ಕಲಶಗಳನ್ನೂ ಸ್ಥಾಪಿಸಬೇಕು. ॥೧೮೯-೧೯೦॥

ಹೀಗೆ ಪರಮ ವೈಭವಯುಕ್ತವಾದ ಶಿವಮಂದಿರವನ್ನು, ಸ್ನಾನಾದಿ ಶೌಚಕರ್ಮಗಳಿಂದ ಪರಿಶುದ್ಧಳಾದ ಸ್ತ್ರೀಯು ಆನಂದದಿಂದ ಪ್ರವೇಶಿಸಿ ಸ್ವರ್ಣಮಯವಾದ ಅಥವಾ ರಜತಮಯವಾದ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸಬೇಕು. ಹಾಗೆಯೇ ಸಮಸ್ತ ಉಪಚಾರಗಳನ್ನೂ ಸಕಲ ಸೇವೆಗಳನ್ನೂ ಸಲ್ಲಿಸಿ ಆರಾಧಿಸಬೇಕು. ॥೧೯೧॥

ಅಥವಾ ಸೈಕತಂ ಲಿಂಗಂ ಪೂಜನೀಯಂ ಪ್ರಯತ್ನತಃ ।
ತತ್ರೈವ ಸೈಕತೇ ಲಿಂಗೇ ಧ್ಯಾಯೇನ್ಮಾಮವ್ಯಯಂ ಪ್ರಭುಂ ॥೧೯೨॥

ಧ್ಯಾಯೇದಿಂದುಕಲಾವತಂಸಮಸಕೃದ್ವಾಮಾಂಗಭಾಗೋಲ್ಲಸ
ದ್ಗೌರೀಚಾರುತರಾಧರಾನನಸುಧಾರಶ್ಮಿಸ್ಫುರದ್ವೀಕ್ಷಣಂ ।
ತತ್ಪೀನೋರುಪಯೋಧರಾಗ್ರವಿಲಸತ್ಕಾಶ್ಮೀರಧಾರಾಂಕುರಂ
ಧೀರಂ ಶಂಕರಮಿಂದುಸುಂದರರಜಃಕರ್ಪೂರಗೌರಂ ಹರಂ ॥೧೯೩॥

ರತ್ನಾಪಾರಕಿರೀಟಕೋಟಿಘಟಿತಂ ಕರ್ಣಸ್ಫುರನ್ಮೌಕ್ತಿಕಂ
ಸಗ್ರೈವೇಯಕಮಿಂದುಖಂಡಸುಕರನ್ಯಾಪಾರಸಾರಾನ್ವಿತಂ ।
ಹಾರಾಪಾರವಿಹಾರರಾಜಿರುಚಿರಂ ರತ್ನಾಂಗದಾಲಂಕೃತಂ
ಸೌವರ್ಣಾಮಿತಕಂಕಣಾಂಗುಲಿಲಸದ್ಭೂಷಾಸಮೇತಂ ಶಿವಂ ॥೧೯೪॥

---

ಸ್ವರ್ಣರಜತಾದಿಮಯಲಿಂಗವು ದುರ್ಲಭವಾಗಿದ್ದರೆ, ವಾಲುಕಾಮಯವಾದ (ಮರಳಿನಿಂದ) ಲಿಂಗವನ್ನೇ ಸ್ಥಾಪಿಸಿಕೊಂಡು ಅದರಲ್ಲಿಯೇ ಶಾಶ್ವತನೂ ಲೋಕೇಶ್ವರನೂ ಆದ ನನ್ನ ಸ್ವರೂಪವನ್ನು ಧ್ಯಾನಾದಿಗಳಿಂದ ಅನುಸಂಧಾನ ಮಾಡುತ್ತಾ ಸಕಲೋಪಚಾರಗಳಿಂದ ಪೂಜಿಸಬೇಕು. ಹೀಗೆ ಪ್ರಯತ್ನಪುರಸ್ಸರವಾಗಿ ಪೂಜೆಗೆ ಆರಂಭಿಸಿ ಈ ರೀತಿ ಧ್ಯಾನಿಸಬೇಕು. ॥೧೯೨॥

ಚಂದ್ರಶೇಖರಾಲಂಕಾರವುಳ್ಳ ಶಂಕರನನ್ನು ಪದೇ ಪದೇ ಭಾವಿಸಿ ಧ್ಯಾನಿಸಬೇಕು. ಆ ಶಂಕರನು ತನ್ನ ದೇಹದ ಎಡ ಅರ್ಧಭಾಗದಲ್ಲಿ ಪಾರ್ವತಿಯನ್ನು ಧರಿಸಿರುವನೆಂದೂ, ಆ ಗಿರಿಜೆಯು ಚಂದ್ರತುಲ್ಯವಾದ ಮುಖಾಧರವನ್ನು ಪ್ರೇಮಪುರಸ್ಸರವಾಗಿ ಈಕ್ಷಿಸುತ್ತಿರುವನೆಂದೂ, ಆ ಗೌರಿಯು ಸ್ತನಯುಗ್ಮಗಳ ಮೇಲೆ ಲೇಪಿಸಿಕೊಂಡಿರುವ ಕುಂಕುಮಕೇಸರಿಯ ಕಾಂತಿಯಿಂದ ವಿಶೇಷ ಶೋಭಾಯುಕ್ತನಾಗಿರುವನೆಂದೂ ಭಾವಿಸಬೇಕು. ಆ ಶಂಕರನು ಚಂದ್ರಮನಂತೆಯೂ, ಪಚ್ಚಕರ್ಪೂರದಂತೆಯೂ ಶುಭ್ರವರ್ಣನಾಗಿದ್ದಾನೆಂಬುದಾಗಿ ಭಾವಿಸಿ ಧ್ಯಾನಿಸಬೇಕು. ॥೧೯೩॥

ಮತ್ತು ಆ ಶಂಕರನನ್ನು ಈ ರೀತಿ ಧ್ಯಾನಿಸಬೇಕು. ಪರಶಿವನು ರತ್ನದಿಂದ ಕೆತ್ತಿದ ದಿವ್ಯವಾದ ಕಿರೀಟವನ್ನು ಧರಿಸಿದ್ದಾನೆ. ಕಿವಿಗಳಲ್ಲಿ ಮುತ್ತಿನ ಆಭರಣಗಳು ಪ್ರಕಾಶಿಸುತ್ತಿವೆ. ಕಂಠದಲ್ಲಿ ದಿವ್ಯವಾದ ಹಾರವನ್ನು ಧರಿಸಿದ್ದಾನೆ. ಅಲ್ಲದೇ ಮತ್ತೆ ಬೇರೆ ಅಪಾರವಾದ ಹಾರಗಳಿಂದ ಅಲಂಕೃತನಾಗಿದ್ದಾನೆ. ಅವನು ಚಂದ್ರ

ಗೌರೀನೀಲಕುಲಾಚಲಾಭಕಬರೀಭಾರಸ್ಫುರನ್ನೀರಭಾ
ಧಾರಾಲಂಕೃತಕಂಬುಕಂಠವಿಲಸನ್ಮೂಲಂ ತ್ರಿಶೂಲಾಮಲಂ ।
ಹಸ್ತಾಂಭೋರುಹಫುಲ್ಲಪಂಕಜಮೃಗಸ್ಫಾರಾಂಗಸಂಗಂ ಮುದಾ
ಧ್ಯಾಯೇನ್ಮಾಮುಗಜಾಕರಾಂಬುಜಪದಾಂಭೋಜಂ ಚಿರಂ ಸಾದರಂ॥೧೯೫॥

ಹಸ್ತನ್ಯಸ್ತಸಮಸ್ತಗಂಧವಿಲಸತ್ಕಸ್ತೂರಿಕಾಕರ್ದಮ
ಪ್ರಕ್ಷೇಪಾಭಿಮುಖಾಂಬಿಕಾಕುಚತಟಾಲಂಕಾರಶಂಕಾಕರಂ ।
ಶಂಕಾತಂಕಕಲಂಕಪಂಕರಹಿತಂ ಶಾಂತಂ ಪ್ರಸನ್ನಾನನಂ
ಸವ್ಯಾಸವ್ಯಪದಾಂಬುಜಾತಿಸುಷುಮಾಸಂಜಾತಗಂಗಾಜಲಂ ॥೧೯೬॥

---

ಕಲೆಯನ್ನು ಧರಿಸಿ ಅದರ ಅಪೂರ್ವಕಾಂತಿಯಿಂದ ದಿವ್ಯವಾಗಿ ವಿರಾಜಿಸುತ್ತಾನೆ. ತೋಳುಗಳಲ್ಲಿ ರತ್ನಮಯವಾದ ಅಂಗದವೆಂಬ (ತೋಳುವಂಕಿ) ಆಭರಣವನ್ನು ಧರಿಸಿದ್ದಾನೆ. ಕೈಗಳಿಗೂ ಮತ್ತು ಬೆರಳುಗಳಿಗೂ ಸ್ವರ್ಣಮಯ ಮತ್ತು ರತ್ನಮಯವಾದ ಅನೇಕ ಒಡವೆಗಳನ್ನು ಧರಿಸಿದ್ದಾನೆ. ॥೧೯೪॥

ಶಿವನು ಉಮಾದೇಹಾರ್ಧಧಾರಿಯಾದುದರಿಂದ ಅವನ ಶಂಖಸದೃಶವಾದ ಕಂಠಪ್ರದೇಶವು ಗೌರಿಯ ನೀಲಮಣಿಗಿರಿಯಂತಿರುವ ಕೇಶಪಾಶಗಳ ದಿವ್ಯಕಾಂತಿಯಿಂದ ಮೇಘದಂತೆ ನೀಲವರ್ಣವಾಗಿ ರಾಜಿಸುತ್ತಿರುವುದು. ಆ ಮಹಾದೇವನು ತ್ರಿಶೂಲಾಯುಧವನ್ನು ಧರಿಸಿರುತ್ತಾನೆ. ಕರಕಮಲದಲ್ಲಿ ಮೃಗವನ್ನೂ ಪದ್ಮವನ್ನೂ ಹಿಡಿದಿದ್ದಾನೆ. ಗಿರಿಜೆಯು ಆ ಶಂಕರನ ಪಾದಪದ್ಮಗಳನ್ನು ತನ್ನ ಕರಕಮಲಗಳಿಂದ ಸದಾ ವಂದಿಸುತ್ತಾಳೆ. ಹೀಗೆಂದು ಬಹಳ ಹೊತ್ತಿನ ವರೆಗೂ ನನ್ನನ್ನೇ ಭಕ್ತಿಯಿಂದ ಧ್ಯಾನಿಸಬೇಕು. ॥೧೯೫॥

ಗಿರಿಜೆಯು ಸ್ವಹಸ್ತದಿಂದ ಶಂಕರನಿಗೆ ಗಂಧಲೇಪವನ್ನು ಮಾಡಲು, ಯಾವಾಗ ತನ್ನ ಕೈಯ್ಯಲ್ಲಿ ಕಸ್ತೂರಿಯೇ ಮೊದಲಾದ ಸುಗಂಧದ್ರವ್ಯಗಳನ್ನು ಹಿಡಿದುಕೊಂಡು ಶಂಕರನ ಎದುರುಗಡೆಯಲ್ಲಿ ನಿಂತುಕೊಳ್ಳುವಳೋ, ಆಗ ಸಾಕ್ಷಾತ್ ಶಂಕರನೇ ಗಿರಿಜೆಯ ಕುಚಗಳಿಗೆ ಒಂದು ಅಪೂರ್ವವಾದ ಲೋಕೋತ್ತರವಾದ ಅಲಂಕಾರದಂತೆ ತೋರುವನು. ಆ ದೇವದೇವನ ದಿವ್ಯಪಾದಗಳ ಪರಮಶೋಭೆಯು ಪ್ರಸರಿಸುತ್ತಿರುವುದನ್ನು ನೋಡಿದರೆ ಪಾದಗಳಿಂದ ಗಂಗಾಜಲವೇ ಪ್ರವಹಿಸುತ್ತಿರುವುದೋ ಎಂಬಂತೆ ಕಾಣುವುದು. ಇಂಥ ಮಹಾದೇವನು ಸದಾ ಪ್ರಸನ್ನ ಮುಖನೂ

ಏವಂ ಧ್ಯಾತ್ವಾ ಮಹಾದೇವಂ ಮಹಾದ್ರಿತನಯಾನ್ವಿತಂ ।
ತಸ್ಮಿನ್ನಾವಾಹಯೇಲ್ಲಿಂಗೇ ಸರ್ವದಾ ಮಂಗಳಾವಹೇ ॥೯೭॥

ಉಮಾಕಾಂತ ಮಹಾದೇವ ಲಿಂಗೇ ಸನ್ನಿಹಿತೋ ಭವ ।
ಸೈಕತೇಽಸ್ಮಿನ್ ಪ್ರಸೀದ ತ್ವಂ ಮಂಗಳಾನಿ ಪ್ರಯಚ್ಛ ಮೇ ॥೯೮॥

ನವರತ್ನಗಣೋಪೇತಂ ಸುಸುವರ್ಣವಿರಾಜಿತಂ ।
ಸಿಂಹಾಸನಂ ಗೃಹಾಣೇದಂ ತ್ರಿಲೋಚನ ಶಿವಾಯುತ ॥೯೯॥

ಪಾದ್ಯಂ ಗೃಹಾಣ ಗೌರೀಶ ಘನಸಾರಸಮನ್ವಿತಂ ।
ಗಂಗಾಜಲನಿರ್ಮಿತಂ ಚ ಶೀತವಾತಾದಿಶೀತಲಂ ॥೧೦೦॥

---

ಶಾಂತಾನಂದಮಯನೂ ಆಗಿರುವನು. ಆ ಸರ್ವಜ್ಞಮೂರ್ತಿಗೆ ಎಂದೂ ಸಂದೇಹವಾಗಲಿ, ವಿಘ್ನಬಾಧೆಯಾಗಲಿ ಸೋಂಕುವುದಿಲ್ಲ. ||೯೬||

ಹೀಗೆಂದು ಭಕ್ತಿಯಿಂದ ಧ್ಯಾನಿಸಿದ ಬಳಿಕ ಗಿರಿಜಾಸಮೇತನಾದ ಮಹಾದೇವನನ್ನು ಮಂಗಳಮಯವಾದ ಶಿವಲಿಂಗದಲ್ಲಿ ಆವಾಹನೆ ಮಾಡುವೆನೆಂದು ಸಂಕಲ್ಪಿಸಿ ಆವಾಹಿಸಬೇಕು. ||೯೭||

ಲಿಂಗವು ಮರಳಿನಿಂದ ನಿರ್ಮಿತವಾಗಿದ್ದ ಪಕ್ಷದಲ್ಲಿ ಈ ಮಂತ್ರವನ್ನು ಹೇಳಿ ಆವಾಹನೆ ಮಾಡಬೇಕು. ಓ ಪಾರ್ವತೀರಮಣನೇ, ಮಹಾದೇವನೇ, ನನ್ನಲ್ಲಿ ಪ್ರಸನ್ನನಾಗು. ಈ ವಾಲುಕಾಮಯವಾದ ಲಿಂಗದಲ್ಲಿ ನಿನ್ನ ಸಾನ್ನಿಧ್ಯವನ್ನು ಅನುಗ್ರಹಿಸು. ನೀನು ಇಲ್ಲಿ ಆವಾಹಿತನಾಗಿ ನನಗೆ ಮಂಗಳಪ್ರದಾನಮಾಡು. ||೯೮||

ತ್ರಿಲೋಚನನೇ! ಈ ಸಿಂಹಾಸನವನ್ನು ಸ್ವೀಕರಿಸು. ನವರತ್ನಗಣಗಳಿಂದಲೂ, ಸುವರ್ಣಾಲಂಕಾರಗಳಿಂದಲೂ ಒಪ್ಪುತ್ತಿರುವ ಈ ಸಿಂಹಾಸನದಲ್ಲಿ ಪಾರ್ವತೀ ಸಹಿತನಾಗಿ ಬಂದು ಅಧ್ಯಾಸೀನನಾಗು. ಹೀಗೆಂದು ಆಸನವನ್ನರ್ಪಿಸಬೇಕು. ||೯೯||

ಗೌರೀರಮಣನೇ! ಈ ಪಾದ್ಯೋದಕವನ್ನು ಸ್ವೀಕರಿಸು. ನಿನ್ನ ಸೇವೆಗಾಗಿ ಶೀತಲವಾದ ಗಂಗಾಜಲವನ್ನು ಪಚ್ಚಕರ್ಪೂರ ಮುಂತಾದವುಗಳಿಂದ ಪರಿಷ್ಕರಿಸಿ ಇದನ್ನು ನಿನಗೆ ಅರ್ಪಿಸುತ್ತಿದ್ದೇನೆ. ದಯೆಯಿಟ್ಟು ಸ್ವೀಕರಿಸು. ||೧೦೦||

ಗೃಹಾಣಾಚಮನೀಯಂ ಚ ರತ್ನಪಾತ್ರಸಮರ್ಪಿತಂ ।
ಆನೀತಂ ರತ್ನಪಾತ್ರೇಣ ಮುಕ್ತಾಫಲವಿರಾಜಿತಂ ॥೨೦೧॥

ತತಃ ಪಂಚಾಮೃತೈಶ್ಶುದ್ಧೈರಭಿಷೇಕಂ ಪೃಥಕ್ ಪೃಥಕ್ ।
ಸಮರ್ಪಣೀಯಮೀಶಾಯ ಮಹ್ಯಂ ಪೂಜಾಪುರಸ್ಸರಂ ॥೨೦೨॥

ಕ್ಷೀರಾಭಿಷೇಕೋತ್ತರಮಾದರೇಣ
ಜಲಾಭಿಷೇಕೋಽಪಿ ಸಮರ್ಪಣೀಯಃ ।
ವಸ್ತ್ರೇ ದೇಯೇ ತದನಂತರಂ ತು
ಯಜ್ಞೋಪವೀತಂ ನವಚಂದನಂ ಚ

ಪುಷ್ಪಾಣಿ ದೇಯಾನಿ ತತಃ ಪರಂ ಚ
ಸುಗಂಧವಸ್ತೂನಿ ವಿಶೇಷತಶ್ಚ ।
ಧೂಪಪ್ರಧೂಪೋಽಪಿ ತತಶ್ಚ ದೀಪೋ
ಘೃತೇನ ಗವ್ಯೇನ ಸಮನ್ವಿತೋಽಪಿ



---

ದೇವೇಶನೇ! ಈ ಆಚಮನವನ್ನು ಸ್ವೀಕರಿಸು. ಈ ಶುದ್ಧವಾದ ಜಲವನ್ನು ರತ್ನಪಾತ್ರೆಯಲ್ಲಿ ತಂದಿರುವೆನು. ರತ್ನಪಾತ್ರೆಯಿಂದಲೇ ಶುಚಿಯಾಗಿ ನಿನಗೆ ಅರ್ಪಿಸುವೆನು. ಈ ಜಲವನ್ನು ಮುಕ್ತಾಫಲ ಮುಂತಾದವುಗಳಿಂದ ಪರಿಷ್ಕರಿಸಿದ್ದೇನೆ. ॥೨೦೧॥

ಹೀಗೆ ಆಚಮನೋದಕವನ್ನು ಅರ್ಪಿಸಿದ ಬಳಿಕ ಪಂಚಾಮೃತಗಳಿಂದ ಬೇರೆ ಬೇರೆಯಾಗಿ ಅಭಿಷೇಕವನ್ನು ಮಾಡಬೇಕು. ಪೂಜೆಯನ್ನು ಮಾಡುತ್ತಾ ನನ್ನ ಸ್ವರೂಪವನ್ನೇ ಸದಾ ಭಾವಿಸಿಕೊಳ್ಳುತ್ತಾ, ಭಕ್ತಿಯಿಂದ ಸಕಲವನ್ನೂ ನನಗೇ ಅರ್ಪಿಸಬೇಕು. ॥೧೦೨॥

ಮೊದಲು ಕ್ಷೀರದಿಂದ ಅಭಿಷೇಕ ಮಾಡಿ ಬಳಿಕ ಶುದ್ಧೋದಕದಿಂದಲೂ ಅಭಿಷೇಕ ಮಾಡಬೇಕು. ಅನಂತರ ಕ್ರಮವಾಗಿ ವಸ್ತ್ರಗಳನ್ನೂ, ಯಜ್ಞೋಪವೀತವನ್ನೂ, ನಾನಾಬಗೆಯ ನೂತನ ಗಂಧಚಂದನಗಳನ್ನೂ ಲೇಪಿಸಬೇಕು. ॥೨೦೩॥

ಬಳಿಕ ಪುಷ್ಪಗಳನ್ನೂ, ಪುಷ್ಪಹಾರಗಳನ್ನೂ ಸಮರ್ಪಿಸಬೇಕು. ಅನಂತರ ನಾನಾವಿಧವಾದ ಸುಗಂಧದ್ರವ್ಯಗಳನ್ನೂ ಅರ್ಪಿಸಿ ಧೂಪವನ್ನು ಆಘ್ರಾಣಿಸಬೇಕು. ಬಳಿಕ ಹಸುವಿನ ತುಪ್ಪದ ದೀಪದ ಆರತಿಯನ್ನು ಬೆಳಗಬೇಕು. ॥೨೦೪॥

ತತ್ರ ಪ್ರದೇಯಾ ಖಲು ವರ್ತಿಕಾ ಸ್ಯಾತ್
ಏಕಾದಶಾವರ್ತಿತತಂತುಯುಕ್ತಾ।
ತಥಾವಿಧಾಷ್ಟಾಂಗುಲವರ್ತಿಕಾಭಿಃ
ತಾಸ್ತಾವದೇಕಾದಶವರ್ತಿಕಾಃ ಸ್ಯುಃ ॥೨೦೫॥

ದೇಯಂ ಗೋಕ್ಷೀರಪಕ್ವಾನ್ನಂ ಮುಹ್ಯಂ ದಧ್ಯೋದನಾದಿಕಂ।
ಪಶ್ಚಾದಾಚಮನೀಯಂ ಚ ಕರಸ್ಯೋದ್ವರ್ತನಂ ತಥಾ ॥೨೦೬॥

ತಾಂಬೂಲಂ ವ್ಯಜನಂ ಛತ್ರಂ ಚಾಮರಂ ದರ್ಪಣಂ ತಥಾ।
ಪುನರ್ಧೂಪಶ್ಚ ದೀಪಶ್ಚ ಪಶ್ಚಾತ್ಪೂಜಾಸಮರ್ಪಣಂ ॥೨೦೭॥

ಏವಂ ಪಂಚಾಭಿಷೇಕೇಷು ಪೃಥಗಭ್ಯರ್ಚನಂ ಭವೇತ್।
ಪಶ್ಚಾನ್ಮಹಾಭಿಷೇಕಃ ಸ್ಯಾದ್ರುದ್ರಸೂಕ್ತಾದಿಭಿಃ ಪರಂ ॥೨೦೮॥

---

ಆ ದೀಪವನ್ನು ಹೊತ್ತಿಸುವ ಬತ್ತಿಯನ್ನು ವಿಶೇಷವಿಧಿಯಪ್ರಕಾರ ನಿರ್ಮಿಸಿರಬೇಕು. ಹನ್ನೊಂದು ನೂಲುಗಳನ್ನು ಸೇರಿಸಿ ಹೊಸೆದು, ಹಾಗೆ ಹೊಸೆದಿರುವ ದಾರವನ್ನು ಮತ್ತೆ ಹನ್ನೊಂದಾವರ್ತಿ ಸೇರಿಸಿ ಹೊಸೆಯಬೇಕು. ಹೀಗೆ ನಿರ್ಮಿಸಿದ ಬತ್ತಿಯು ಎಂಟು ಅಂಗುಲ ಉದ್ದವಿರಬೇಕು. ಇಂಥ ಬತ್ತಿಯಿಂದ ದೀಪವನ್ನು ಬೆಳಗಬೇಕು. ॥೨೦೫॥

ಹೀಗೆ ದೀಪವನ್ನರ್ಪಿಸಿದ ಬಳಿಕ ಹಸುವಿನ ಹಾಲು, ಪಕ್ವಾನ್ನ, ದಧ್ಯೋದನ ಮುಂತಾದ ಭಕ್ಷ್ಯಭೋಜ್ಯಗಳನ್ನು ನನಗೆ ನೈವೇದ್ಯಮಾಡಬೇಕು. ಅನಂತರ ಶುದ್ಧಾಚಮನವನ್ನರ್ಪಿಸಿ, ಕರೋದ್ವರ್ತನ ಸೇವೆಯನ್ನು ಸಲ್ಲಿಸಬೇಕು. ॥೨೦೬॥

ತಾಂಬೂಲವನ್ನರ್ಪಿಸಿ ಬಳಿಕ ಛತ್ರಿ, ಚಾಮರ, ಬೀಸಣಿಗೆ, ಕನ್ನಡಿ ಮುಂತಾದವುಗಳಿಂದ ಉಪಚರಿಸಬೇಕು. ಪುನಃ ಧೂಪವನ್ನೂ ದೀಪವನ್ನೂ ಅರ್ಪಿಸಿ, ಬಳಿಕ ಸಂಪೂರ್ಣ ಪೂಜೆಯನ್ನು ಸಲ್ಲಿಸಬೇಕು. ॥೨೦೭॥

ಮೇಲೆ ಹೇಳಿದಷ್ಟು ಪೂಜಾವಿಧಿಯೂ ಕೇವಲ ಕ್ಷೀರಾಭಿಷೇಕ (ಪಂಚಾಮೃತದಲ್ಲಿ) ಪಕ್ಷದಲ್ಲಿ ವಿಹಿತವಾದವುಗಳು. ಹೀಗೆಯೇ ಉಳಿದ ದಧ್ಯಭಿಷೇಕವೇ ಮೊದಲಾದ ನಾಲ್ಕು ಅಭಿಷೇಕಪಕ್ಷದಲ್ಲಿಯೂ ಯಥೋಕ್ತವಾದ ರೀತಿಯಲ್ಲಿ ಬೇರೆಯಾಗಿ ಪೂಜೆಯನ್ನು ನಡೆಯಿಸಬೇಕು. ಹೀಗೆ ಪೂಜೆಯೊಡನೆ ಪಂಚಾಮೃತಾಭಿ

ರತ್ನಕುಂಭಸಮಾನೀತಂ ಸ್ನಾನಾಯ ಜಲಮೀಶ್ವರ ।
ಗೃಹಾಣ ವಿಮಲಂ ದೇವ ಪ್ರಸೀದೇತಿ ಸಮರ್ಪಯೇತ್ ॥೨೦೯॥

ಪಶ್ಚಾದುದ್ವರ್ತನಂ ದದ್ಯಾದ್ಬಿಲ್ವಪತ್ರೈರ್ಮನೋಹರೈಃ ।
ಫಲಗಂಧೋದಕೈಃ ಪಶ್ಚಾದಭಿಷೇಕಂ ಸಮಾಚರೇತ್ ॥೨೧೦॥

ಪಶ್ಚಾದಾಚಮನೀಯಂ ಚ ಪಶ್ಚಾದ್ವಸ್ತ್ರಸಮರ್ಪಣಂ ।
ಪಶ್ಚಾತ್ಸ್ಯಾತ್ಕೇಶಸಂಸ್ಕಾರಸಮರ್ಪಣಮಘಾಪಹಂ ॥೨೧೧॥

ಕ್ಷೀರಸಾಗರಸಂಕಾಶೇ ದುಕೂಲೇ ಗಿರಿಜಾಪತೇ ।
ಗೃಹಾಣೇತಿ ಪ್ರಯತ್ನೇನ ದೇಯಂ ವಸ್ತ್ರದ್ವಯಂ ಮುದಾ ॥೨೧೨॥

---

ಷೇಕವು ಪೂರ್ತಿ ಆದನಂತರ ರುದ್ರಾಧ್ಯಾಯ ಮತ್ತು ರುದ್ರಸೂಕ್ತಾದಿಗಳಿಂದ ಮಹಾಭಿಷೇಕವನ್ನು ನಡೆಸಬೇಕು. ॥೨೦೮॥

ಅಭಿಷೇಕಾಂತ್ಯದಲ್ಲಿ ಈ ಮಂತ್ರವನ್ನು (ಶ್ಲೋಕವನ್ನು) ಹೇಳಿ ಸಂಪೂರ್ಣ ಅಭಿಷೇಕವನ್ನು ಸಮರ್ಪಿಸಿ ಪೂರ್ತಿಗೊಳಿಸಬೇಕು. ಈಶ್ವರನೇ ! ನಿನ್ನ ಅಭಿಷೇಕಕ್ಕಾಗಿ ರತ್ನಕಲಶಗಳಲ್ಲಿ ನೀರನ್ನು ತಂದು ಸಮರ್ಪಿಸುತ್ತಿದ್ದೇನೆ. ಈ ನಿರ್ಮಲೋದಕದ ಸ್ನಾನವನ್ನು ಸ್ವೀಕರಿಸು. ಎಂದು ಶುದ್ಧೋದಕವನ್ನರ್ಪಿಸಬೇಕು. ॥೨೦೯॥

ಅನಂತರ ಕೋಮಲಗಳಾದ ಬಿಲ್ವದಳಗಳಿಂದ ಮೈಯನ್ನೊತ್ತುವ ಸೇವೆಯನ್ನು ಸಲ್ಲಿಸಬೇಕು. ಬಳಿಕ ಫಲೋದಕ, ಗಂಧೋದಕ ಮುಂತಾದ ವಿಶೇಷ ಜಲಗಳಿಂದ ಅಭಿಷೇಕವನ್ನು ನಡೆಸಬೇಕು. ॥೨೧೦॥

ಹೀಗೆ ಸಮಗ್ರವಾಗಿ ಅಭಿಷೇಕವನ್ನು ಮಾಡಿದ ಬಳಿಕ ಶುದ್ಧಾಚಮನವನ್ನೂ ವಸ್ತ್ರವನ್ನೂ ಅರ್ಪಿಸಬೇಕು. ಅನಂತರ ಕೇಶಪಾಶಸಂಸ್ಕಾರವನ್ನು ಮಾಡಬೇಕು. ಇದರಿಂದ ಸಮಸ್ತ ಪಾಪಗಳೂ ನಾಶವಾಗುತ್ತವೆ. ॥೨೧೧॥

ಓ ಗಿರಿಜಾರಮಣನೇ, ಈ ಕ್ಷೀರಸಮುದ್ರದಂತೆ ಶುಭ್ರವಾಗಿರುವ ವಸ್ತ್ರಗಳನ್ನು ಸ್ವೀಕರಿಸು. ಹೀಗೆಂದು ಹೇಳಿ ಭಕ್ತಿಯಿಂದ ವಸ್ತ್ರಗಳನ್ನು ಸಮರ್ಪಿಸಬೇಕು. ॥೨೧೨॥

ಉಪವೀತೇ ಸಮಾನೀತೇ ಗೃಹಾಣಾತಿಸಿತೇ ಪ್ರಭೋ ।
ಶಂಭೋ ತಾಭ್ಯಾಂ ಪವಿತ್ರತ್ವಂ ಗೃಹೀತಾಭ್ಯಾಂ ಪ್ರಯಚ್ಛ ಮೇ ॥೨೧೩॥

ಮೃಗಮದರಸಸಾರಾಸಾರಪಾಟೀರಸಾರ
ದ್ರವರಸಘನಸಾರಾಪಾರಕಾಶ್ಮೀರಪೂರಾನ್ ।
ಕನಕಕಮಲಗಂಧಾಮಂದಸಿಂದೂರಧಾರಾ
ಪರಿವೃತಬಹುಗಂಧಾನ್ ಸಾಂಬ ಶಂಭೋ ಗೃಹಾಣ ॥೨೧೪॥

ಅಪಾರರತ್ನಾಭರಣಾನಿ ಶಂಭೋ
ಕಿರೀಟಹಾರಪ್ರಮುಖಾನಿ ಸಾಂಬ ।
ಗೃಹಾಣ ತೈರಾಭರಣೈರ್ಗೃಹೀತೈ
ರಪಾರಭಾಗ್ಯಾನಿ ಮಮ ಪ್ರಯಚ್ಛ ॥೨೧೫॥

---

ಓ ಶಂಭುವೇ! ನಿನಗಾಗಿ ಸಂಪಾದಿಸಿರುವ ಈ ಶುಭ್ರಕಾಂತಿಯುಳ್ಳ, ಯಜ್ಞೋಪವೀತಗಳನ್ನು ಸ್ವೀಕರಿಸು. ಇದರಿಂದ ನನಗೆ ಪಾವಿತ್ರ್ಯವನ್ನು ಅನುಗ್ರಹಿಸು. ॥೨೧೩॥

ಓ ಶಂಕರನೇ! ನಿನಗಾಗಿ ಅಪಾರಗಂಧಗಳನ್ನು ಕಲ್ಪಿಸಿರುವೆನು. ಪುನಗು, ಜವ್ವಾಜಿ, ಪಚ್ಚಕರ್ಪೂರ, ಕುಂಕುಮಕೇಸರಿ, ಸುವರ್ಣದಂತಿರುವ ಗಂಧ, ಪದ್ಮಗಂಧ, ಚಂದ್ರ, ಸಿಂದೂರ ಮುಂತಾದ ಅನೇಕ ಪರಿಮಳದ್ರವ್ಯಗಳನ್ನೂ ಚಂದನ ಗಂಧಗಳನ್ನೂ ಸಮ್ಮಿಶ್ರಮಾಡಿಯೂ ಬೇರೆಬೇರೆಯಾಗಿಯೂ ಕಲ್ಪಿಸಿರುವ ಈ ನಾನಾ ಬಗೆಯ ಗಂಧವನ್ನು ನಿನಗೆ ಅರ್ಪಿಸುವೆನು. ಕೃಪೆಮಾಡಿ ಇವನ್ನು ಸ್ವೀಕರಿಸು. ಹೀಗೆಂದು ಹೇಳಿ ಗಂಧವನ್ನು ಒಪ್ಪಿಸಬೇಕು. ॥೨೧೪॥

ಓ ಸದಾಶಿವನೇ! ನಿನಗೆ ಅಪಾರವಾದ ಅಲಂಕಾರಗಳನ್ನೂ ಕಿರೀಟ, ಮುಕ್ತಾಹಾರ ಮುಂತಾದ ಅನೇಕ ಆಭರಣಗಳನ್ನೂ ಸಮರ್ಪಿಸುವೆನು. ಇವುಗಳನ್ನು ಪ್ರೀತಿಯಿಂದ ಸ್ವೀಕರಿಸಿ ನನಗೆ ಅನಂತ ಅಕ್ಷಯ ಸೌಭಾಗ್ಯವನ್ನು ಕರುಣಿಸು. ॥೨೧೫॥

ಮಂದಾರಕುಂದನವಕುಂಕುಮಕೇಸರಾಣಿ
ನೀಲೋತ್ಪಲಾನಿ ಕಮಲಾನಿ ಮನೋಹರಾಣಿ ।
ಶ್ರೀಕೇತಕೀಕನಕಚಂಪಕಪಾರಿಜಾತ
ಮಲ್ಲೀಪ್ರಸೂನಸಹಿತಾನಿ ಗೃಹಾಣ ಶಂಭೋ ॥೨೧೬॥

ಜಾಜೀಪ್ರಸೂನಕರವೀರಕುಟಜಪ್ರಸೂನ
ಪುನ್ನಾಗನಾಗನದಕೋಕನದಾನಿ ಶಂಭೋ ।
ಗ್ರಾಹ್ಯಾಣಿ ತಾನಿ ಸುಕುಶೇಶಯುಸಂಯುತಾನಿ
ದ್ರೋಣಾರ್ಕಪುಷ್ಪಸಹಿತಾನಿ ಮನೋಹರಾಣಿ ॥೨೧೭॥

ದಮನಕಕನಕಬಿಲ್ವೀಪಲ್ಲವೈರರ್ಚಯೇ ತ್ವಾ
ಮಭಿನವಸಿತದೂರ್ವಾಸ್ಸ್ವರ್ಣಪುಷ್ಪಾದಿಭಿಶ್ಚ ।
ಬಹುವಿಧಬಹುಪುಷ್ಪಸ್ರಗ್ಭಿರಭ್ಯರ್ಚಯೇ ತ್ವಾಂ
ವಿವಿಧರುಚಿರಗಂಧೈಶ್ಶ್ಯೈಲಜಾಜಾನಿಮೀಶಂ ॥೨೧೮॥

ಧೂಪಧೂಮಂ ಗೃಹಾಣ ತ್ವಮುಮಾಕಾಂತ ಮನೋಹರಂ ।
ಧೂಪಧೂಮಪ್ರದಾನೇನ ಹರ ಪಾಪಾನಿ ಸಂಹರ ॥೨೧೯॥

---

ತ್ರ್ಯಂಬಕನೇ! ನಿನಗೆ ಅಪಾರ ಕುಸುಮಗಳನ್ನು ಸಮರ್ಪಿಸುವೆನು. ಸ್ವೀಕರಿಸು. ಮಂದಾರ, ದುಂಡುಮಲ್ಲಿಗೆ, ರಕ್ತಕೇಸರ, ಕನ್ನೈದಿಲೆ, ಕಮಲ, ಕೇದಿಗೆ, ಕೆಂಡಸಂಪಿಗೆ, ಪಾರಿಜಾತ, ಮಲ್ಲಿಗೆ ಮುಂತಾದ ಪುಷ್ಪಗಳನ್ನು ನಿನಗೆ ಸಮರ್ಪಿಸುವೆನು. ॥೨೧೬॥

ಓ ಗಿರಿಜಾರಮಣನೇ! ನಿನಗೆ ಬಹುವಿಧವಾದ ಪುಷ್ಪಗಳನ್ನೂ ಪುಷ್ಪಹಾರಗಳನ್ನೂ ಸಮರ್ಪಿಸುವೆನು. ಅಲ್ಲದೇ, ಜಾಜಿ, ಕರವೀರ, ಪುನ್ನಾಗ, ನದಿಯಕಮಲ, ತುಂಬೆ, ಎಕ್ಕದ ಹೂವು, ಮುಂತಾದ ಪುಷ್ಪಗಳಿಂದಲೂ, ದವನ, ಬಿಲ್ವಪತ್ರೆ, ದೂರ್ವೆಯ ಚಿಗುರುಗಳು ಮುಂತಾದ ಪತ್ರಗಳಿಂದಲೂ, ಮತ್ತು ನಾನಾವಿಧವಾದ, ಗಂಧವಿಶೇಷದಿಂದ ಸುವಾಸಿತಗಳಾದ ಹೂಗಳಿಂದಲೂ ಹೂಮಾಲೆಗಳಿಂದಲೂ ನಿನ್ನನ್ನು ಪೂಜಿಸುವೆನು. ॥೨೧೭-೨೧೮॥

ಓ ಹರನೇ! ಈ ಧೂಪಗಳ ಮನೋಹರವಾದ ಪರಿಮಳವನ್ನು ಸೇವಿಸು.

ಕಪಿಲಾಘೃತಸಂಯುಕ್ತವರ್ತಿಕಾಲಲಿತಾನ್ ಬಹೂನ್ ।
ದೀಪಾನ್ ಗೃಹಾಣ ಸಾಂಬಾದ್ಯ ಪ್ರಸೀದ ಕರುಣಾನಿಧೇ ॥೨೨೦॥

ನೈವೇದ್ಯಂ ಪರಮಾನ್ನರಾಶಿಸಹಿತಂ ಗೋಕ್ಷೀರಫೇನಪ್ರಭಂ
ಲಡ್ಡೂಕೈರ್ವಟಕೈರಪೂಪಸಹಿತೈರ್ಭಕ್ಷ್ಯೈರಪಾರೈರಪಿ ।
ಶಾಕೈರಪ್ಯಮಿತೈಃ ಫಲೈರಪಿ ಯುತಂ ದ್ರಾಕ್ಷಾರಸಾಲಾದಿಭಿಃ
ಸಾಜ್ಯಂ ಶರ್ಕರಯಾ ಸಮೇತಮುಸಕೃತ್ತುಭ್ಯಂ ಭವಾನೀಪತೇ ॥೨೨೧॥

ದಧ್ಯನ್ನಾನಿ ಗೃಹಾಣ ತಾನಿ ವಿಮಲಂ ಪಾನೀಯಮಾನೀಯ ತೇ
ತಾಂಬೂಲಾನಿ ಗೃಹಾಣ ತಾನಿ ವಿಮಲಾನೇಲಾಲವಂಗಾದಿಕಾನ್ ।
ಕರ್ಪೂರಾಮಿತದೀಪಜಾಲಘಟಿತಂ ನೀರಾಜನಂ ದೀಯತೇ
ತುಭ್ಯಂ ಶಂಕರ ತದ್ಗೃಹಾಣ ಗಿರಿಜಾಕಾಂತಾತಿಕಾಂತಂ ಮುದಾ ॥೨೨೨॥

---

ನಿನಗೆ ಧೂಪದ ಹೊಗೆಯನ್ನು ಸಮರ್ಪಿಸುವೆನು. ಇದನ್ನು ಸ್ವೀಕರಿಸಿ ನನ್ನ ಸಮಸ್ತ ಪಾಪಗಳನ್ನೂ ನಾಶಗೊಳಿಸು. ಹೀಗೆಂದು ಹೇಳಿ ಧೂಪವನ್ನರ್ಪಿಸಬೇಕು. ॥೨೧೯॥

ಅಂಬಾಪತಿಯೇ! ನಿನಗೆ ಹಸುವಿನ ತುಪ್ಪದ ದೀಪಗಳನ್ನು ಅರ್ಪಿಸುವೆನು. ಇವುಗಳನ್ನು ಸ್ವೀಕರಿಸಿ ಅನುಗ್ರಹಮಾಡುತ್ತಾ ಪ್ರಸನ್ನನಾಗು. ಹೀಗೆಂದು ದೀಪಗಳನ್ನು ಸಮರ್ಪಿಸಬೇಕು. ॥೨೨೦॥

ಭವಾನೀವಲ್ಲಭನೇ ! ಈ ನೈವೇದ್ಯವನ್ನು ಸ್ವೀಕರಿಸು. ಪರಮಾನ್ನ, ಗೋಕ್ಷೀರ, ಉಂಡೆಗಳು, ಆಂಬಡೆಗಳು, ಕಜ್ಜಾಯಗಳು, ಅಲ್ಲದೇ ಮತ್ತಿತರ ಭಕ್ಷ್ಯಭೋಜ್ಯಗಳೂ, ಶಾಕಪಾಕಗಳೂ, ಹಣ್ಣುಹಂಪಲುಗಳು, ಸಕ್ಕರೆ, ತುಪ್ಪಸಹಿತವಾದ ದ್ರಾಕ್ಷೆ, ಮಾವು ಮುಂತಾದ ನಾನಾವಿಧವಾದ ಫಲಗಳೂ ನಿನಗಾಗಿ ಕಲ್ಪಿತವಾಗಿವೆ. ಇವೆಲ್ಲವನ್ನೂ ನಿನಗೆ ಸಮರ್ಪಿಸುವೆನು. ದಯೆಯಿಟ್ಟು ಸ್ವೀಕರಿಸು. ॥೨೨೧॥

ಓ ಶಂಕರನೇ, ದಧ್ಯನ್ನಪರ್ಯಂತವಾಗಿ ಸಕಲ ಭೋಜ್ಯವಸ್ತುಗಳನ್ನೂ ನಿನಗೆ ಸಮರ್ಪಿಸಿದ ಬಳಿಕ ಇದೋ ಈ ತಂಪಾದ ಪಾನೀಯವನ್ನು ಸಮರ್ಪಿಸುತ್ತೇನೆ. ಗಿರಿಜಾವಲ್ಲಭನೇ, ಈ ಏಲಕ್ಕಿ ಲವಂಗ ಸಹಿತವಾದ ತಾಂಬೂಲವನ್ನು ಸ್ವೀಕರಿಸು. ದೇವದೇವನೇ, ನಿನಗೆ ಅನೇಕದೀಪಗಳಿಂದ ಯುಕ್ತವಾದ ಈ ಕರ್ಪೂರದಾರತಿಯನ್ನು ಬೆಳಗುತ್ತೇನೆ. ಇವೆಲ್ಲವನ್ನೂ ಪ್ರೀತಿಯಿಂದ ಈಕ್ಷಿಸು. ॥೨೨೨॥

ಪುಷ್ಪಾಂಜಲಿಂ ಗೃಹಾಣೇಶ ಪ್ರಸೀದ ಗಿರಿಜಾಪತೇ ।
ಪ್ರಯಚ್ಛ ಮಹ್ಯಂ ಸೌಭಾಗ್ಯಾನ್ಯಪಾರಾಣಿ ಮಹಾಪ್ರಭೋ ॥೨೨೩॥

ಅಂಗಪೂಜಾ ತತಃ ಕಾರ್ಯಾ ಪುಷ್ಪೈಃ ಪಾದನಖಾವಧಿ ।
ಜಟಾಮಂಡಲಪರ್ಯಂತಂ ಸಾಂಬಧ್ಯಾನಪುರಸ್ಸರಂ ॥೨೨೪॥

ಸುರಾಸುರಶಿರಃಕೋಟಿಕೋಟೀರಮಣಿಕಾಂತಿಭಿಃ ।
ಅರ್ಚಿತಾಂಸ್ತೇ ನಖಾನ್ ಶಂಭೋ ಪೂಜಯಾಮಿ ಪ್ರಸೀದ ಮೇ ॥೨೨೫॥

ತ್ವತ್ಪಾದಾಂಗುಲಿಜಾಪಾರಸುಷುಮಾಪರಿವೇಷ್ಟಿತಃ ।
ಅರುಣೋಽರುಣತಾಂ ಪ್ರಾಪ ತಾನೀಶಾಭ್ಯರ್ಚಯಾಮ್ಯಹಂ ॥೨೨೬॥

ವಿಷ್ಣುನೇತ್ರಾರವಿಂದೇನ ಯತ್ಪಾದತಲಮರ್ಚಿತಂ ।
ತದರ್ಚಯಾಮಿ ಗೌರೀಶ ಸ್ವರ್ಣಪದ್ಮೈರ್ಮನೋಹರೈಃ ॥೨೨೭॥

---

ಪರಮೇಶನೇ, ಇದೋ ನಿನಗೆ ಕುಸುಮಾಂಜಲಿಯನ್ನು ಸಮರ್ಪಿಸುತ್ತೇನೆ. ಇದನ್ನು ಸ್ವೀಕರಿಸಿ ನನ್ನಮೇಲೆ ಸುಪ್ರೀತನಾಗು. ಅನಂತಸೌಭಾಗ್ಯಗಳನ್ನು ನನಗೆ ಪ್ರದಾನಮಾಡು. ಹೀಗೆಂದು ಹೇಳಿ ಮಂತ್ರಪುಷ್ಪವನ್ನು (ಪುಷ್ಪಾಂಜಲಿ) ಸಮರ್ಪಿಸಬೇಕು. ॥೨೨೩॥

ಅನಂತರ ಅಪಾರಪುಷ್ಪಗಳಿಂದ ಪಾದಾದಿ ಜಟಾಂತವಾಗಿ ಅಂಗಪೂಜೆಯನ್ನು ಮಾಡಬೇಕು. ಪೂಜಿಸುವಾಗ ನಿರಂತರವಾಗಿ ಧ್ಯಾನತತ್ಪರತೆಯಿರಬೇಕು. ॥೨೨೪॥

ಶಂಭುವೇ, ನಿನ್ನ ಕಾಲುಗುರುಗಳನ್ನು ದೇವದಾನವರೆಲ್ಲರೂ ತಮ್ಮ ಮಸ್ತಕದಲ್ಲಿ ಧರಿಸಿದ ಮಣಿಪ್ರಭೆಯಿಂದ ಅಲಂಕರಿಸುತ್ತಿರುವರು. ಅಂಥ ಸರ್ವಪೂಜ್ಯಗಳಾದ ನಿನ್ನ ಪಾದ ನಖಗಳನ್ನು ನಾನು ಪೂಜಿಸುವೆನು. ಸುಪ್ರೀತನಾಗು. ॥೨೨೫॥

ಈಶ್ವರನೇ, ನಿನ್ನ ಕಾಲುಬೆರಳುಗಳ ಅತಿಶಯವಾದ ಸೌಂದರ್ಯಕಾಂತಿಯಿಂದಲೇ ಸೂರ್ಯನೂ ಸಹ ಕೆಂಪಾದ ಕಾಂತಿಯನ್ನು ಪಡೆದುಕೊಂಡಿರುವನು. ಅಂಥ ಪರಮ ಶೋಭಾಯುಕ್ತಗಳಾದ ನಿನ್ನ ಪಾದಾಂಗುಲಿಗಳನ್ನು ನಾನು ಪೂಜಿಸುವೆನು. ॥೨೨೬॥

ಗೌರೀಶನೆ, ನಿನ್ನ ಪಾದಗಳನ್ನು ಸಾಕ್ಷಾತ್ ವಿಷ್ಣುವು ತನ್ನ ನೇತ್ರಕಮಲದಿಂದಲೇ ಪೂಜಿಸಿರುವನು. ಅಂಥ ಮಹತ್ತರವಾದ ನಿನ್ನ ಪಾದಗಳನ್ನು ಸ್ವರ್ಣಪದ್ಮಗಳಿಂದ ಅರ್ಜಿಸುವೆನು. ॥೨೨೩॥

ಇಂದುಕಂದುಕಸಂಯುಕ್ತಂ ಯಜ್ಜಾನುಯುಗಳಂ ಪ್ರಭೋ ।
ತದದ್ಯ ಗಿರಿಜಾಜಾನೇ ಪೂಜಯಾಮಿ ಪ್ರಸೀದ ಮೇ ॥೨೨೮॥

ಯದೂರುಭಾಗಸೌಂದರ್ಯಮೃದುಲತ್ವಾದಿಕಾ ಗುಣಾಃ ।
ಜ್ಞಾತಾ ಭವಾನ್ಯಾ ತಂ ಪುಷ್ಪೈಃ ಪೂಜಯಾಮಿ ಪ್ರಸೀದ ಮೇ ॥೨೨೯॥

ತಟಿತ್ಕೂಟನಿಭಂ ಯತ್ತೇ ಶಂಭೋ ಕಟಿತಟಂ ಪ್ರಭೋ ।
ತದರ್ಚಯಾಮಿ ಪ್ರಸವೈರುತ್ಫುಲ್ಲೈಃ ಕೋಮಲೈರಪಿ ॥೨೩೦॥

ಯಲ್ಲಿಂಗಾದಭವನ್ನುಪೇಂದ್ರವಿಧಯಸ್ಸೇಂದ್ರಾಸ್ಸುರಾಸ್ಸಾಗರಾಃ
ಗಂಧರ್ವೋರಗಕಿನ್ನರಾ ಅಪಿ ಮುಹುಸ್ತ್ಯೈರರ್ಚಿತಂ ಯನ್ಮುದಾ ।
ತತ್ತಾವತ್ಕುಸುಮೈಸ್ಸುಗಂಧಲಲಿತೈರಭ್ಯರ್ಚಯಾಮಿ ಪ್ರಭೋ
ಲಿಂಗಂ ಮಂಗಳದಾಯಕಂ ಗಿರಿಶ ಮೇ ಪುತ್ರಾನ್ ಪ್ರಯಚ್ಛೋತ್ತಮಾನ್
॥೨೩೧॥

---

ಚೆಂಡಿನಂತೆ ವರ್ತುಳವಾಗಿಯೂ ಚಂದ್ರನಂತೆ ಸುಂದರವಾಗಿಯೂ ಇರುವ ನಿನ್ನ ಮೊಳಕಾಲುಗಳಿಗೆ ಭಕ್ತಿಯಿಂದ ಪೂಜಿಸುವೆನು. ನನ್ನಲ್ಲಿ ಪ್ರಸನ್ನನಾಗು. ॥೨೨೮॥

ಯಾವ ಊರುಗಳ (ತೊಡೆ) ಸೌಂದರ್ಯ, ಸೌಕುಮಾರ್ಯ, ಮಾರ್ದವ ಮುಂತಾದ ಗುಣಗಳ ಮಹತ್ವವನ್ನು ಗಿರಿಜೆಯೊಬ್ಬಳೇ ಅರಿತಿರುವಳೋ ಅಂಥ ನಿನ್ನ ಊರುಗಳನ್ನು ಕೋಮಲಗಳಾದ ಪುಷ್ಪಗಳಿಂದ ಅರ್ಚಿಸುವೆನು. ॥೨೨೯॥

ಓ ಪ್ರಭುವೇ, ವಿದ್ಯುನ್ಮಂಡಲದಂತಿರುವ ನಿನ್ನ ಕಟಿಮೂಲವನ್ನು (ಸೊಂಟ) ಅರಳಿದ ಕೋಮಲಗಳಾದ ಪುಷ್ಪಗಳಿಂದ ಪೂಜಿಸುವೆನು. ॥೨೩೦॥

ಗಿರಿಶನೇ, ನಿನ್ನ ಲಿಂಗದಿಂದಲೇ ವಿಷ್ಣುಬ್ರಹ್ಮರೂ, ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ಗಂಧರ್ವ, ಕಿನ್ನರ, ಕಿಂಪುರುಷ, ಉರಗ ಮುಂತಾದ ಸಕಲ ಚರಾಚರ ಜೀವರಾಶಿಗಳೂ ಜನಿಸಿರುತ್ತವೆ. ಮತ್ತು ಆ ನಿನ್ನ ಲಿಂಗವನ್ನೇ ನಾರಾಯಣನೇ ಆದಿಯಾಗಿ ಸಮಸ್ತರೂ ಭಕ್ತಿಯಿಂದ ಪೂಜಿಸುವರು. ಅಂಥ ನಿನ್ನ ಮಂಗಳಾತ್ಮಕವಾದ ಲಿಂಗವನ್ನು ಪರಿಮಳಯುಕ್ತವಾದ ಕೋಮಲಕುಸುಮಗಳಿಂದ ಪೂಜಿಸುವೆನು. ಈ ಪೂಜೆಯಿಂದ ಸುಪ್ರೀತನಾಗಿ ನನಗೆ ಸತ್ಸಂತಾನವನ್ನು ಕರುಣಿಸು. ॥೨೩೧॥

ಯನ್ನಾಭಿದೇಶಂ ಸರಸೀರುಹಾಕ್ಷೀ
ವಿಲೋಕ್ಯ ಗೌರೀ ಪುನರಾದರೇಣ ।
ಆವರ್ತಶೋಭೇಯಮಿತಿ ಪ್ರಸನ್ನಾ
ತನ್ನಾಭಿದೇಶಂ ತವ ಪೂಜಯಾಮಿ ॥೨೩೨॥

ಯದ್ವಕ್ಷಸ್ಸ್ಥಲಮಂಬಿಕಾಕುಚತಟಾಸಾರಸ್ಫುರತ್ಕಾಂತಿಭಿಃ
ತತ್ಪಾಟೀರರಸಾಭಿಷಿಕ್ತವಿಲಸತ್ಕಸ್ತೂರಿಕಾಕರ್ದಮೈಃ ।
ವ್ಯಾಪ್ತಂ ತತ್ತವ ಪೂಜಯಾಮಿ ಭಗವನ್ನಾನಂದಯಾನಂದದ
ಶ್ರೀಕಂಠಾವ ಕೃಪಾನಿಧಾನ ಸತತಂ ದೀನಾರ್ತಿಸಂಹಾರಕ ॥೨೩೩॥

ಗೌರೀಚಾರುಕುಚೋರುಮೇರುಶಿಖರಸ್ಫಾರತ್ಪ್ರಭಾಸಂಭ್ರಮ
ವ್ಯಾಪಾರವ್ಯವಹಾರಸಾರನಿಕರಾಭಿಖ್ಯಾವೃತೌ ತೇ ಕರೌ ।
ಉತ್ಫುಲ್ಲಾಮಲಕೇತಕೀದಲಯುತಾಪಾರಪ್ರಸೂನಾನ್ವಿತೌ
ಗೌರೀಸುಂದರಕಂಕಣಾಂಗದಮಣಿವ್ಯಾಪ್ತೌ ಸಮಭ್ಯರ್ಚಯೇ ॥೨೩೪॥

---

ನಿನ್ನ ನಾಭಿಯನ್ನು ನೋಡಿ ಗೌರಿಯು ಅದರ ಸೊಬಗಿನಿಂದ ಅತ್ಯಂತ ಸಂತುಷ್ಟಳಾಗುವಳು. ಸಾಕ್ಷಾತ್ ನೀರಿನ ಸುಳಿಯೇ ಇದೆಂದು ತರ್ಕಿಸಿಕೊಂಡು ಪದೇ ಪದೇ ನೋಡಿ ಆನಂದಪಡುವಳು. ಅಂಥ ಪರಮಭಾಗ್ಯಾತ್ಮಕವಾದ ನಿನ್ನ ನಾಭಿಯನ್ನು ಪೂಜಿಸುವೆನು. ॥೨೩೨॥

ಶ್ರೀಕಂಠನೇ, ನೀನು ದಯಾನಿಧಿಯಾಗಿರುವೆ. ಶರಣಾಗತರ ದುಃಖವನ್ನು ಸಂಹರಿಸಿ ಅವರನ್ನು ಕಾಪಾಡುವೆ. ನಿನ್ನ ವಕ್ಷಸ್ಸ್ಥಲವು ಸದಾ ಗಿರಿಜೆಯ ಸ್ತನಗಳಲ್ಲಿ ಚರ್ಚಿತವಾದ ಕಸ್ತೂರಿಯೇ ಮೊದಲಾದ ದಿವ್ಯಚಂದನಗಳಿಂದ ವ್ಯಾಪ್ತವಾಗಿರುತ್ತದೆ. ಅಂಥ ನಿನ್ನ ಹೃದಯವನ್ನು ಪೂಜಿಸುವೆನು. ಈ ಪೂಜೆಯನ್ನು ಸ್ವೀಕರಿಸಿ ನನಗೆ ಆನಂದವನ್ನು ಕೊಡು. ॥೨೩೩॥

ಮಹಾದೇವನೇ, ನಿನ್ನ ಹಸ್ತಗಳನ್ನು ಈಗ ಪೂಜಿಸುವೆನು. ನಿನ್ನ ದಿವ್ಯವಾದ ಕರಗಳು ಸದಾ ಭಗವತೀ ಗಿರಿಜೆಯ ಸ್ತನಗಳ ಸಂಭ್ರಮವನ್ನು ಸಾರ್ಥಕಪಡಿಸುವ ವ್ಯವಹಾರದಲ್ಲಿ ಆಸಕ್ತವಾಗಿರುತ್ತವೆ. ಮತ್ತು ಭಗವತಿಯು ಧರಿಸಿರುವ ತಾಳೆಹೂವು, ರತ್ನದ ತೋಳುಬಂದಿ ಮುಂತಾದ ಆಭರಣಗಳ ಸಂಪರ್ಕಸಮಾಗಮಗಳಿಂದ

ಯದ್ಬಾಹುಮಂಡಲತಟೆತ್ಪುಟಮಂಡಲೇನ
ಗೌರೀಶರೀರಸುಷುಮಾಪ್ಯತಿಮಂಡಿತಾಭೂತ್ ।
ತದ್ಬಾಹುಮಂಡಲಮಣಿಪ್ರಕರಪ್ರಭಾಢ್ಯಂ
ಪುಷ್ಪಪ್ರಭಾಢ್ಯಮಧುನಾ ಕರವಾಣಿ ಶಂಭೋ ॥೨೩೫॥

ಗೌರೀಮನೋಹರವಿಹಾರವರಾವತಾರ
ಸ್ವೇದೋದಕಾಮಿತಮನೋಹರಮೌಕ್ತಿಕಾಢ್ಯಂ ।
ಶ್ರೀಕಂಠಕಂಠಮನಿಶಂ ತವ ಪೂಜಯಾಮಿ
ಸೋತ್ಕಂಠಮಾಶು ಕುಸುಮೈರಸಮೈಶ್ಶಿವಾದ್ಯ ॥೨೩೬॥

ಲೋಕತ್ರಯಾಮಿತವಿಶೇಷಫಲಪ್ರಭೂತ
ತತ್ತದ್ರಸಾಭಿಮುಖಮೀಶಮುಖಂ ಪ್ರಸೂನೈಃ ।
ಅಭ್ಯರ್ಚಯಾಮಿ ರಸನಾಮಪಿ ನಾಸಿಕಾಂ ಚ
ಗಂಧಪ್ರವಾಹಸಹಿತೈಶ್ಶಿವ ತೇ ಪ್ರಸೂನೈಃ ॥೨೩೭॥

---

ಉಜ್ಜ್ವಲವಾಗಿರುತ್ತವೆ. ಅಂಥ ನಿನ್ನ ಲೋಕೋತ್ತರವಾದ ಕರಕಮಲಗಳನ್ನು ಪೂಜಿಸುವೆನು. ॥೨೩೪॥

ದಿವ್ಯವಿದ್ಯುನ್ಮಂಡಲದಿಂದ ಯುಕ್ತವಾಗಿರುವುವೋ ಎಂಬ ಹಾಗೆ ತೋರುವಷ್ಟು ಉಜ್ವಲವಾಗಿರುವ ನಿನ್ನ ಬಾಹುಗಳ ಸಂಶ್ಲೇಷದಿಂದ ಸೌಂದರ್ಯನಿಧಿಯಾದ ಗಿರಿಜೆಯ ಸೌಂದರ್ಯಕ್ಕೂ ಒಂದು ವಿಶೇಷತೆ ಉಂಟಾಯಿತೋ ಎಂದು ತೋರುತ್ತಿರುವುದು. ಅಂಥ ನಿನ್ನ ಪುಷ್ಪಾದಿಸಮಲಂಕೃತಗಳಾದ ಬಾಹುದ್ವಯಗಳನ್ನು ಪುಷ್ಪಾಲಂಕೃತಗಳನ್ನಾಗಿ ಮಾಡುವೆನು. ನಿನ್ನ ಬಾಹುಗಳನ್ನು ಭಕ್ತಿಯಿಂದ ಪೂಜಿಸಿ ಅಲಂಕರಿಸುವೆನು. ॥೨೩೫॥

ಶಿವನೇ, ನೀನು ಭಗವತಿ ಗಿರಿಜೆಯೊಡನೆ ವಿಹರಿಸುವ ಕಾಲದಲ್ಲಿ ಅಲ್ಪ ಶ್ರಮದಿಂದ ಬೆವರು ಹನಿಗಳು ಉಂಟಾಗಿ, ಅವು ನಿನ್ನ ಕಂಠಮೂಲದಲ್ಲಿ ಮುತ್ತುಗಳಂತೆ ಶೋಭಿಸುತ್ತಿವೆ. ಅಂಥ ನಿನ್ನ ಮನೋಹರವಾದ ಕಂಠವನ್ನು ಭಕ್ತಿಪುರಸ್ಸರವಾಗಿ ಕೋಮಲಪುಷ್ಪಗಳಿಂದ ಪೂಜಿಸುವೆನು. ॥೨೩೬॥

ಈಶನೇ, ಲೋಕತ್ರಯದಲ್ಲಿ ಎಲ್ಲೆಲ್ಲಿ ಯಾವ ಯಾವ ಫಲಗಳಿರುತ್ತವೆಯೋ ಅವೆಲ್ಲವುಗಳ ರಸಪರಿಚಯವು ನಿನ್ನ ಮುಖಕ್ಕೆ ಒದಗುತ್ತದೆ. ಅಂಥ ನಿನ್ನ ದಿವ್ಯ

ನೇತ್ರಾಣಿ ಸೋಮರವಿವಹ್ನಿಮಯಾನಿ ಶಂಭೋ
ಕರ್ಣದ್ವಯಂ ಚ ವಿಲಸನ್ಮಣಿಕುಂಡಲಾಢ್ಯಂ ।
ಅಭ್ಯರ್ಚಯಾಮಿ ಕುಸುಮೈರವ ಮಾಂ ಮಹೇಶ
ಮೋಹಂ ವಿನಾಶಯ ವಿಧೇಹಿ ಪರಾಂ ಶ್ರಿಯಂ ಮೇ ॥೨೩೮॥

ಉದ್ವೇಲಸುದ್ಗತಸರಿದ್ವರಸಾಗರಾದಿ
ನೀರಪ್ರವಾಹನಿಕರೋಽಪ್ಯಣುಕಲ್ಪ ಏವ ।
ಯನ್ಮೌಳಿದೇಶತುಹಿನಾಂಶುಕರಾಭಿಭೂತಃ
ತನ್ಮೌಳಿಮಾಶು ಕುಸುಮೈಶ್ಶಿವ ಪೂಜಯಾಮಿ ॥೨೩೯॥

ಇತ್ಯಂಗಪೂಜಾಂ ವಿಧಿವತ್ಕೃತ್ವಾ ಕೃತ್ವಾ ಪ್ರದಕ್ಷಿಣಂ ।
ನತ್ವಾ ಸ್ತೋತ್ರೈಶ್ಚ ಸಂತುಷ್ಟಃ ಕರ್ತವ್ಯೋಽಹಂ ಮುಹುರ್ಮುಹುಃ॥೨೪೦॥

---

ಮುಖವನ್ನು ಪೂಜಿಸುವೆನು. ಪರಮೇಶ್ವರನೇ, ನಿನ್ನ ನಾಸಿಕವನ್ನೂ ರಸನೆಯನ್ನೂ ಸಹ ಗಂಧಪುಷ್ಪಾದಿಗಳಿಂದ ಅಲಂಕರಿಸುವೆನು. ॥೨೩೭॥

ಶಂಭುವೇ, ನಿನ್ನ ನೇತ್ರಗಳು ಸೂರ್ಯ, ಚಂದ್ರ ಮತ್ತು ಅಗ್ನಿಸ್ವರೂಪಗಳಾಗಿರುತ್ತವೆ. ಅಂಥ ನಿನ್ನ ನೇತ್ರತ್ರಯಗಳನ್ನೂ ಮತ್ತು ಕಿವಿಗಳನ್ನೂ ಕುಸುಮಗಳಿಂದ ಪೂಜಿಸುವೆನು. ಇದರಿಂದ ಸುಪ್ರೀತನಾಗಿ ನನ್ನ ಅಜ್ಞಾನವನ್ನು ಪರಿಹರಿಸಿ ನನಗೆ ಅತಿಶಯವಾದ ಸಿರಿಯನ್ನು ಕರುಣಿಸು. ॥೨೩೮॥

ಶಿವನೇ, ನಿನ್ನ ಜಟಾಗ್ರಭಾಗದಿಂದ ಸತತವೂ ಉದ್ಭವಿಸುವ ಗಂಗಾಪ್ರವಾಹದೆದುರಿನಲ್ಲಿ ಅಖಂಡ ಸಮುದ್ರಗಳೂ ಅಣುಕಲ್ಪವಾಗಿರುತ್ತವೆ. ಅಂಥ ಶಿರೋಗ್ರಭಾಗದಲ್ಲಿ ನೀನು ಸುಂದರನಾದ ಚಂದ್ರಮನನ್ನು ಬೇರೆ ಧರಿಸಿದ್ದೀಯೆ. ಆ ನಿನ್ನ ಮಸ್ತಕವನ್ನು ಈಗ ಭಕ್ತಿಯಿಂದ ಪೂಜಿಸುವೆನು. ॥೨೩೯॥

ಪ್ರಿಯೆ ಗಿರಿಜೆ! ಈರೀತಿ ಸ್ತುತಿಸಿ ಅಂಗಪೂಜೆಯನ್ನು ಮಾಡಿದ ಬಳಿಕ ಪ್ರದಕ್ಷಿಣ ನಮಸ್ಕಾರವನ್ನು ಮಾಡಬೇಕು. ಮತ್ತು ಪುನಃ ಪುನಃ ನಾನಾಬಗೆಯಾದ ಸ್ತೋತ್ರಗಳಿಂದ ಸ್ತುತಿಸಿ ನನ್ನನ್ನು ಪ್ರೀತಿಗೊಳಿಸಬೇಕು. ॥೨೪೦॥

ಸ್ವರ್ಣಾಕಾರಜಟಾಧರಾಯ ಭಗವನ್ ತುಭ್ಯಂ ನಮಸ್ತೇ ನಮಃ
ಶಂಭೋ ಭರ್ಗ ಭವಾಂಬುರಾಶಿಜಭಯಾಪಾರವ್ಯಥಾಂ ನಾಶಯ ।
ದೀನಾನಾಥಶರಣ್ಯಪುಣ್ಯವಿಭವಪ್ರಾಪ್ಯಾಂಬಿಕಾವಲ್ಲಭ
ಸ್ವಾಮಿನ್ ಶೋಭನದಾಯಮದ್ಯ ಕುರು ಮೇ ಗೌರೀವಿನೋದಪ್ರದ॥೨೪೧॥

ಯತ್ಪಾದಾಂಬುಜಪೂಜನಾನಿ ಸಕಲಶ್ರೇಯೋ ನಿದಾನಾನಿ ಮೇ
ಪಾಪಾಪಾರತರಂಗಿಣೀದಿನಕರಾಕಾರಾಣ್ಯತುಲ್ಯಾನ್ಯಪಿ ।
ದುಃಖಾಪಾರವನಾನಲಾನಿ ಸಕೃದಪ್ಯಾಲೋಕಿತಾನಿ ಪ್ರಭೋ
ಶಂಭೋ ತಾನಿ ಕರೋಮಿ ತಾವದಧುನಾ ಸಂಪತ್ಪ್ರದಾನಾಯ ಮೇ॥೨೪೨॥

ಯಲ್ಲಿಂಗಾರ್ಚನವೀಕ್ಷಣೇನ ಸಕೃದಪ್ಯಾನಂದಸಿಂಧುರ್ಮುಹುಃ
ಸಂಪದ್ರೂಪತರಂಗಸಂಗಲಲಿತಃ ಪ್ರಾಪ್ತೋ ಭವತ್ಯನ್ವಹಂ ।
ತಲ್ಲಿಂಗಾರ್ಚನಮೇವ ಸಂತತಮಹಂ ಕರ್ತುಂ ಪ್ರವೃತ್ತಃ ಫಲಂ
ತನ್ಮೇ ವಾಂಛಿತಮಿಚ್ಛಯಾಪಿ ತನುತೇ ದೃಷ್ಟಂ ಸಕೃದ್ಧ್ಯಾನತಂ ॥೨೪೩॥

---

ಭಗವಂತನೇ! ನೀನು ಸ್ವರ್ಣದಂತೆ ಹೊಳೆಯುವ ಜಟೆಯನ್ನು ಧರಿಸಿದ್ದೀಯೆ. ನಿನಗೆ ನಾನು ನಮಸ್ಕರಿಸುವೆನು. ಈ ಸಂಸಾರ ಸಾಗರದಲ್ಲಿ ನನಗೆ ಒದಗಿರುವ ಸಕಲ ದುಃಖಗಳನ್ನೂ ಪರಿಹರಿಸು. ಸ್ವಾಮಿಯೇ! ನೀನು ದೀನಬಾಂಧವನೂ, ಪುಣ್ಯೈಕಲಭ್ಯನೂ, ಗೌರೀವಲ್ಲಭನೂ, ಗೌರೀಸಮಾಗಮಪ್ರಿಯನೂ ಆಗಿರುವೆಯಲ್ಲವೆ! ನಿನ್ನನ್ನು ಶತಶಃ ನಮುಸ್ಕರಿಸುವೆನು. ನನಗೆ ಕಲ್ಯಾಣವನ್ನುಂಟು ಮಾಡು. ॥೨೪೧॥

ಓ ಪ್ರಭುವೇ! ನಿನ್ನ ಪಾದಪದ್ಮಾರ್ಚನೆಯು ಸಮಸ್ತ ಶ್ರೇಯಸ್ಸುಗಳಿಗೂ ಆದಿಕಾರಣವೂ, ಪಾಪವೆಂಬ ನದಿಗೆ ಪ್ರಖರನಾದ ಸೂರ್ಯಸ್ವರೂಪವೂ, ದುಃಖವೆಂಬ ಅರಣ್ಯಕ್ಕೆ ಅಗ್ನಿಪ್ರಾಯವೂ ಆಗಿರುತ್ತದೆ. ಒಂದೇ ಸಾರಿ ನಿನ್ನನ್ನು ಸಂದರ್ಶಿಸಿದರೂ ಸಕಲ ಸಂಪತ್ತುಗಳೂ ಲಭಿಸುವುವು. ಅಂಥ ಪುಣ್ಯತಮಗಳಾದ ಅರ್ಚನ ದರ್ಶನ ಇವುಗಳನ್ನು ನಾನು ಈಗ ಯಥಾಶಕ್ತಿ ನೆರವೇರಿಸಿದ್ದೇನೆ. ನನಗೆ ಸುಪ್ರೀತನಾಗಿ ಅನುಗ್ರಹಿಸು. ॥೨೪೨॥

ಶಂಕರನೇ! ನಿನ್ನ ಪರಮಾಯತನವಾದ ಶಿವಲಿಂಗವನ್ನು ಸಂದರ್ಶಿಸುವುದರಿಂದಲೂ, ಶಿವಲಿಂಗಾರ್ಚನೆಯ ದರ್ಶನದಿಂದಲೂ, ಆನಂದಸಾಗರವು ಸಂಪತ್ತುಗ

ಇಂದ್ರೋಪೇಂದ್ರಪುರಸ್ಸರೈರಪಿ ಸುರೈರ್ಲಿಂಗಂ ಯದಾರಾಧಿತಂ
ಗಂಧರ್ವೈರಪಿ ಕಿನ್ನರೈರಪಿ ಮುನಿಶ್ರೇಷ್ಠೈಶ್ಚ ಸಿದ್ಧೈರಪಿ ।
ತತ್ಪೂಜಾಂ ಕರವಾಣಿ ಶೂಲವಿಲಸತ್ಪಾಣೇ ಕ್ಷಣಂ ವಾ ರಣೇ
ನಿರ್ವಾಣೇ ಮರಣೇಽಪಿ ವಾ ಸಕರುಣಪ್ರಾಣಪ್ರಯಾಣೇಽಪಿ ವಾ ॥೨೪೪॥

ಪ್ರೀತ್ಯಾ ಸಂತತಮಂತಕಾಂತಕಪದಾಂಭೋಜಾರ್ಚನಾತ್ಯಾದರಾಃ
ತೇ ಶೂರಾಸ್ಸುರಪೂಜಿತಾಂಘ್ರಿಕಮಲಾಃ ಕಲ್ಯಾಣಲೀಲಾಲಯಾಃ ।
ತತ್ಸರ್ವಂ ಕಮಲಾವಿಲಾಸನಿಲಯಾಪಾರಾಂಗನಾತ್ಮುನ್ನತಾ
ನಂತೋನ್ಮತ್ತಮತಂಗಜಾವೃತಪುರದ್ವಾರಾ ನರಾಧೀಶ್ವರ ॥೨೪೫॥

ಯಲ್ಲೀಲಾಲವ ಏವ ಸೃಷ್ಟಿಕರಣೋಪಾಯೋಽನಪಾಯಃ ಪ್ರಿಯೇ
ದೇವಾನಾಮಪಿ ತಂ ಭಜಾಮಿ ಸಕೃದಪ್ಯಾರಾಧಿತೋ ಯಶ್ಶಿವಃ ।
ಇತ್ಯುಕ್ತಸ್ಸಕಲೇಪ್ಸಿತಾನ್ಯಪಿ ಮುಹುರ್ದಾತುಂ ತತಶ್ಶಂಕರಂ
ನ ತ್ಯಕ್ಷ್ಯಾಮಿ ಸಮರ್ಚಯಾಮಿ ಮನಸಾ ಬಿಲ್ವೈಃ ಪ್ರಸೂನೈರಪಿ ॥೨೪೬॥

---

ಳೆಂಬ ಲಹರಿಗಳಿಂದ ಉಕ್ಕುತ್ತಿರುವುದು. ಅಂಥ ಮಹತ್ತಮವಾದ ಶಿವಲಿಂಗಾರ್ಚನೆಯಲ್ಲಿ ನನ್ನ ಪ್ರವೃತ್ತಿಯನ್ನು ನೋಡಿ ಸುಪ್ರೀತನಾಗಿ ನನ್ನಲ್ಲಿ ಅನುಗ್ರಹಿಸು. ॥೨೪೩॥

ದೇವೇಂದ್ರ, ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಗಂಧರ್ವ, ಕಿನ್ನರ ಸಿದ್ಧ, ಸಾಧ್ಯ, ಮತ್ತು ಋಷಿಗಳು ಎಲ್ಲರೂ ನಿನ್ನ ಶಿವಲಿಂಗವನ್ನು ಪೂಜಿಸುವರು. ಅಂಥ ಉತ್ತಮೋತ್ತಮ ಶಿವಲಿಂಗವನ್ನು ನಾನು ರಣಕ್ಷೇತ್ರದಲ್ಲಿ, ಮರಣದಲ್ಲಿ, ಪ್ರಾಣಪರಿತ್ಯಾಗಸಮಯದಲ್ಲಿ, ಮೋಕ್ಷಪ್ರಾಪ್ತಿಗೆ ಮೊದಲು ಎಲ್ಲೇ ಇದ್ದರೂ ಪೂಜಿಸುವೆನು. ॥೨೪೪॥

ನರಾಧೀಶ್ವರನೇ! ನಿನ್ನನ್ನು ಪೂಜಿಸುವವರು ಶೂರರೂ ಸುರವಂದ್ಯರೂ ಕಲ್ಯಾಣಶಾಲಿಗಳೂ ಆಗುವರು. ಅಲ್ಲದೇ ನಿನ್ನ ಭಕ್ತರು ವಾಸಿಸುವ ಪಟ್ಟಣದಲ್ಲಿ ಸಾಕ್ಷಾತ್ ಕಮಲಾಪತಿಯಾದ ವಿಷ್ಣುವು ನೆಲೆಸುವನು. ಮದಗಜವೇ ಮೊದಲಾದ ಅಷ್ಟೈಶ್ವರ್ಯಗಳೂ ಸುಲಭವಾಗಿ ಲಭಿಸುವುವು. ಇವೆಲ್ಲವುಗಳಿಂದಲೂ ಅವರು ಕೂಡಿ ಸಕಲ ಸೌಖ್ಯಗಳನ್ನೂ ಅನುಭವಿಸುವರು. ॥೨೪೫॥

ಆ ಶಂಕರನ ಲೀಲಾಲೇಶವು ಅವ್ಯಾಹತವಾದ ಅಖಂಡಬ್ರಹ್ಮಾಂಡವನ್ನು ಸೃಷ್ಟಿಸುವ ಕಾರ್ಯದಲ್ಲಿ ನಿರಂಕುಶಕಾರಣವಾಗಿರುತ್ತದೆ. ಅಂತಹ ಆ ಪರಶಿವನು

ಯಲ್ಲಿಂಗಾರ್ಚನತೋ ಭವಂತಿ ಬಹವಃ ಪುತ್ರಾಶ್ಚ ಪೌತ್ರಾದಯೋ
ವೃದ್ಧಿಂ ಸಂತತಿರೇತಿ ಸಂಪದಪಿ ಸಾ ವೃದ್ಧಿಂ ಪ್ರಯಾಸ್ಯತ್ಯತಃ ।
ಲಿಂಗಾರಾಧನಮೇವ ಮೇ ಸುಖದಮಿತ್ಯನ್ಯದ್ವಿಹಾಯಾದರಾತ್
ಕರ್ತವ್ಯಂ ಕರುಣಾಕರಸ್ಸ ಭಗವಾನಿಷ್ಟಾರ್ಥದಸ್ತೇನ ಮೇ ॥೨೪೭॥

ಇತಿ ಸ್ತುತ್ವಾ ಮಹಾದೇವಂ ಪ್ರಣಮ್ಯ ಚ ಪುನಃ ಪುನಃ ।
ಪುನಃ ಪೂಜಾ ಯಥಾಕಾಮಂ ಕರ್ತವ್ಯಾ ಕುಸುಮಾದಿಭಿಃ ॥೨೪೮॥

ಮತ್ಕಥಾಶ್ರವಣೇನೈವ ರಾತ್ರೌ ಜಾಗರಣಂ ಶಿವೇ ।
ಕರ್ತವ್ಯಮತಿಯತ್ನೇನ ತೂರ್ಯಾದಿಭಿರಪಿ ಪ್ರಿಯೇ ॥೨೪೯॥

---

ಸಕಲ ದೇವತೆಗಳಿಗೂ ಪೂಜ್ಯನೂ ಪ್ರಿಯನೂ ಆಗಿದ್ದಾನೆಂಬುದು ಏನು ಮಹಾ ವಿಶೇಷ. ಅಂತಹ ಮಹಾದೇವನನ್ನು ಪೂಜಿಸುವೆನೆಂದು ಹೇಳಿ ಸಂಕಲ್ಪಿಸಿದ ಮಾತ್ರದಿಂದಲೇ ಸಕಲ ಇಷ್ಟಾರ್ಥಗಳನ್ನೂ ಆ ಶಿವನು ಪ್ರದಾನಮಾಡುವನು. ಅಂಥ ದೇವದೇವನನ್ನು ನಾನು ಎಂದೂ ಬಿಡುವುದಿಲ್ಲ. ಮರೆಯುವುದೂ ಇಲ್ಲ. ಆ ಶಂಕರನನ್ನೇ ಮನಸಾ ಧ್ಯಾನಿಸುವೆನು ಮತ್ತು ಬಿಲ್ವಾದಿಗಳಿಂದ ಸದಾ ಪೂಜಿಸುವೆನು. ॥೨೪೬॥

ಶಿವಲಿಂಗವನ್ನು ಆರಾಧಿಸಿದರೆ ಬಹು ಪುತ್ರಪೌತ್ರರು ಜನಿಸಿ ಸಂತಾನವು ಅಭಿವೃದ್ಧವಾಗುತ್ತದೆ. ಐಶ್ವರ್ಯವೂ ಸಹ ದಿನೇ ದಿನೇ ಹೆಚ್ಚಾಗುವುದು. ಆದುದರಿಂದ ಶಿವಲಿಂಗಾರಾಧನೆಯೇ ಪರಮಸುಖಸಾಧನವೆಂದು ನಿರ್ಣಯಿಸಿಕೊಂಡು ನಾನು ಅನ್ಯವ್ಯಾಪಾರವ್ಯವಹಾರಗಳನ್ನೆಲ್ಲಾ ಬಿಟ್ಟು ಸತತವೂ ಶಿವಲಿಂಗವನ್ನೇ ಆರಾಧಿಸುವೆನು. ಇದರಿಂದ ಆ ದಯಾನಿಧಿಯಾದ ಭಗವಂತನು ಪ್ರಸನ್ನನಾಗಿ ಆತನೇ ನನಗೆ ಸಕಲ ಇಷ್ಟಾರ್ಥಗಳನ್ನೂ ಕರುಣಿಸುವನು." ॥೨೪೭॥

ಹೀಗೆಂದು ಮಹಾದೇವನನ್ನು ಸ್ತುತಿಸಿ ಪದೇ ಪದೇ ನಮಸ್ಕರಿಸಬೇಕು. ಬಳಿಕ ಪುಷ್ಪಾದಿಗಳಿಂದ ಯಥೇಷ್ಟವಾಗಿ ಪುನಃ ಪೂಜೆಯನ್ನು ನಡೆಸಬೇಕು.॥೨೪೮॥

ರಾತ್ರಿಯಲ್ಲಿ ನನ್ನ ಕಥೆಯನ್ನೇ ಕೇಳುತ್ತಾ ಜಾಗರಣ ಮಾಡಬೇಕು. ಅಲ್ಲದೇ ಮಂಗಳವಾದ್ಯಗಳಿಂದ ರಾತ್ರಿಯೆಲ್ಲಾ ಭಜನೆಮಾಡುತ್ತಾ ಕಾಲಕಳೆಯಬೇಕು.॥೨೪೯॥

ಕಾರ್ಯಂ ನಾಟ್ಯಂ ಚ ನಾರೀಭಿಸ್ಸಿಕತಾಲಿಂಗಸನ್ನಿಧೌ ।
ಪಶ್ಚಾದುಪಾಯನಂ ದದ್ಯಾತ್ಫಲಾಪೂಪಾದಿಭಿರ್ವೃತಂ ॥೨೫೦॥

ಶೈವೇಭ್ಯಸ್ಸಕುಟುಂಬೇಭ್ಯೋ ದಕ್ಷಿಣಾದಾನಪೂರ್ವಕಂ ।
ದಕ್ಷಿಣಾ ಲಕ್ಷಮಾಷಂಸ್ಯಾತ್ಸುವರ್ಣಾನಾಂ ವರಾನನೇ ॥೨೫೧॥

ಸಾ ಯಥಾವಿಭವಂ ವಾ ಸ್ಯಾದ್ವಿತ್ತಶಾಠ್ಯಂ ನ ಕಾರಯೇತ್ ।
ಸೌವರ್ಣಂ ರಾಜತಂ ವಾ ಸ್ಯಾದ್ವೈಣವಂ ಶೂರ್ಪಮುತ್ತಮಂ॥೨೫೨॥

ತತ್ಫಲೈಃ ಪೂರಿತಂ ಕಾರ್ಯಮಪೂಪಾದ್ಯೈರ್ವಿಶೇಷತಃ ।
ದುಕೂಲವೇಷ್ಟಿತಂ ಕಾರ್ಯಂ ಸ್ವರ್ಣಲಿಂಗಸಮನ್ವಿತಂ ॥೨೫೩॥

ತಚ್ಚಾಂಭವಾಯ ದಾತವ್ಯಂ ಶಿವಧ್ಯಾನಪುರಸ್ಸರಂ ।
ಉಪಾಯನಂ ಗೃಹಾಣೇದಮಂಬಿಕಾರಮಣಪ್ರಭೋ ॥೨೫೪॥

---

ಆಗ ಆ ವಾಲುಕಾಲಿಂಗದ ಮುಂಭಾಗದಲ್ಲಿ ಸ್ತ್ರೀಯರಿಂದ ನಾಟ್ಯವನ್ನು ಮಾಡಿಸಬೇಕು. ಆನಂತರ ಪೂಜಾಫಲಸಿದ್ಧಿಗಾಗಿ ಹಣ್ಣುಕಾಯಿಗಳಿಂದಲೂ ಭಕ್ಷ್ಯ ಭೋಜ್ಯಗಳಿಂದಲೂ ಯುಕ್ತವಾದ ಉಪಾಯನ ದಾನಮಾಡಬೇಕು. ॥೫೦॥

ಉಪಾಯನದಾನವನ್ನು ದಕ್ಷಿಣಾಪೂರ್ವಕವಾಗಿ ಸತ್ಪಾತ್ರರಾಗಿರುವ, ಕುಟುಂಬಿಗಳಾದ ಈಶ್ವರಭಕ್ತರಿಗೆ ಕೊಡಬೇಕು. ಉಪಾಯನ ದಾನಕ್ಕೆ ಸುವರ್ಣದ ಲಕ್ಷವರಹಗಳನ್ನು ಕೊಡಬಹುದು. ಈ ದಕ್ಷಿಣೆಯ ವಿಚಾರದಲ್ಲಿ ಸ್ವಲ್ಪವೂ ಲೋಭ ವನ್ನು ತೋರದೇ ತಮ್ಮ ಶಕ್ತಿಗೆ ಅನುಗುಣವಾಗಿ ಸುವರ್ಣ ಅಥವಾ ರಜತರೂಪ ವಾದ ದಕ್ಷಿಣೆಯನ್ನು ಕೊಡಬೇಕು. ದಾನಕ್ಕೆ ಬಿದಿರಿನ ಉತ್ತಮವಾದ ಮೊರಗಳನ್ನು ಉಪಯೋಗಿಸಬೇಕು. ॥೫೧-೫೨॥

ಆ ಮೊರದಲ್ಲಿ ಹಣ್ಣುಕಾಯಿಗಳನ್ನೂ ಭಕ್ಷ್ಯಭೋಜ್ಯಾದಿಗಳನ್ನೂ ಮತ್ತು ಸುವರ್ಣದ ಶಿವಲಿಂಗಪ್ರತಿಮೆಯನ್ನೂ ಇಟ್ಟು ಮೇಲೆ ಉತ್ತಮವಾದ ವಸ್ತ್ರದಿಂದ ಸುತ್ತಿ ಮರೆಮಾಡಿರಬೇಕು. ॥೫೩॥

ಆ ಉಪಾಯನವನ್ನು ಶಿವಧ್ಯಾನಮಾಡುತ್ತಾ ಶಾಂಭವನಿಗೆ ದಾನಮಾಡ ಬೇಕು. " ಓ ಪ್ರಭುವಾದ ಅಂಬಿಕಾವಲ್ಲಭನೇ, ಈ ಉಪಾಯವನ್ನು ನಿನಗೆ ಸಮರ್ಪಿ ಸುತ್ತೇನೆ. ಇದನ್ನು ಸ್ವೀಕರಿಸಿ ಪ್ರಸನ್ನನಾಗು. ನನಗೆ ಸಕಲ ಇಷ್ಟಾರ್ಥಗಳನ್ನೂ

ಅಭೀಪ್ಸಿತಾರ್ಥದ ಸ್ವಾಮಿನ್ ಶೋಭನಾನಿ ಪ್ರಯಚ್ಛ ಮೇ ।
ಇತಿ ಮಂತ್ರಂ ಸಮುಚ್ಚಾರ್ಯ ದತ್ವೋಪಾಯನಮಾದರಾತ್॥೨೫೫॥

ಭೋಜನೀಯಾಃ ಪ್ರಯತ್ನೇನ ಶಾಂಭವಾಃ ಸ್ವಾದುಭೋಜನೈಃ ।
ಏವಂ ಕರೋತಿ ಯಾ ನಾರೀ ವ್ರತಮೇತದ್ವರಾನನೇ ॥೨೫೬॥

ಸಾ ಪುತ್ರಪೌತ್ರಸಂಯುಕ್ತಾ ಸರ್ವಸಂಪದ್ಯುತಾ ಭವೇತ್ ।
ಸಾ ನ ಪ್ರಾಪ್ನೋತಿ ವೈಧವ್ಯಂ ದುಃಖಂ ನಾಪ್ನೋತಿ ಸರ್ವಥಾ॥೨೫೭॥

ಕೀರ್ತಿಯುಕ್ತಾ ಭವೇನ್ನಿತ್ಯಮಪಕೀರ್ತಿವಿವರ್ಜಿತಾ ।
ಇದಂ ವ್ರತೋತ್ತಮಂ ದೇವಿ ಸರ್ವಸಂಪತ್ಕರಂ ಪರಂ ॥೨೫೮॥

ಇತೋಽಪಿ ನಾಧಿಕಂ ಶಾಸ್ತ್ರೇ ವ್ರತಂ ದೃಷ್ಟಂ ಮಯಾ ಶಿವೇ ॥೨೫೯॥

---

ಸಮಸ್ತ ಮಂಗಳಗಳನ್ನೂ ಅನುಗ್ರಹಿಸು." ಹೀಗೆಂಬ ಅರ್ಥವುಳ್ಳ ಮಂತ್ರವನ್ನು (ಈ ಶ್ಲೋಕವನ್ನು) ಹೇಳಿ ಉಪಾಯನದಾನ ಮಾಡಬೇಕು. ||೨೫೪-೨೫೫||

ಹೀಗೆ ಸಮಗ್ರವಾಗಿ ಪೂಜೆಯು ನೆರವೇರಿದ ಬಳಿಕ ಶಿವನೈವೇದ್ಯವಾದ ಭಕ್ಷ್ಯಭೋಜ್ಯಾದಿಗಳಿಂದ ಶಾಂಕರರಿಗೆ ಅವಶ್ಯವಾಗಿ ಭೋಜನವನ್ನು ಮಾಡಿಸಿ ತೃಪ್ತಿಪಡಿಸಬೇಕು. ಹೀಗೆ ಸಂಪೂರ್ಣವಾಗಿ ಈ ವ್ರತವನ್ನು ಯಾವ ಸ್ತ್ರೀಯು ಮಾಡುವಳೋ ಅವಳು ಪುತ್ರಪೌತ್ರಾದಿ ಸಂತಾನಸಮೃದ್ಧಿಯನ್ನೂ ಸಮಸ್ತ ಸಂಪತ್ತನ್ನೂ ಪಡೆಯುವಳು. ||೨೫೬||

ಈ ವ್ರತವನ್ನಾಚರಿಸಿದ ನಾರಿಯು ಎಂದೂ ವೈಧವ್ಯವನ್ನಾಗಲೀ ಅಥವಾ ಮತ್ತೆ ಬೇರೆ ಯಾವ ವಿಧವಾದ ದುಃಖವನ್ನಾಗಲೀ ಪಡೆಯುವುದಿಲ್ಲ. ಎಂದೂ ಅಪವಾದ ಅಪಕೀರ್ತಿಗಳಿಗೆ ಗುರಿಯಾಗದೇ ಸದಾ ಸತ್ಕೀರ್ತಿಯಿಂದ ಆನಂದವನ್ನು ಪಡೆಯುವಳು. ||೨೫೭||

ಪ್ರಿಯೇ ಗಿರಿಜೆ, ಹೀಗಿರುವ ಈ ವ್ರತವು ಸಾಮಾನ್ಯವಾದುದಲ್ಲ. ವ್ರತಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದದ್ದು. ಈ ವ್ರತದಿಂದ ಸಕಲ ವಿಧವಾದ ಸಂಪತ್ತುಗಳೂ ಲಭಿಸುವುವು. ಈ ವ್ರತದಂಥ ಶ್ರೇಷ್ಠವಾದ ಯಾವ ವ್ರತವೂ ಶಾಸ್ತ್ರದಲ್ಲಿ ಉಕ್ತವಾಗಿರುವುದಿಲ್ಲ. ಈ ವ್ರತವನ್ನು ಮೀರಿಸಿರುವ ವ್ರತವಂತೂ ಇಲ್ಲವೇ ಇಲ್ಲವೆಂದು ತಿಳಿ. ||೨೫೮-೨೫೯||

॥ ಕಪಿಲ ಉವಾಚ ॥

ಇತೀಶವಚನಂ ಶ್ರುತ್ವಾ ಗೌರೀ ಶಂಕರವಲ್ಲಭಾ ।
ಸಂತೋಷಂ ಪರಮಂ ಪ್ರಾಪ ವ್ರತಮಾಹಾತ್ಮ್ಯಕೀರ್ತನಾತ್॥೨೬೦॥

ಸೋಮವಾಸರಸಂಯುಕ್ತಾ ತೃತೀಯಾ ಶ್ವಃ ಸ್ವಭಾವತಃ ।
ಅಯಂ ಖಲು ಮಹಾಯೋಗಶ್ಶಿವಯೋಗಶ್ಶಿವಪ್ರದಃ ॥೨೬೧॥

ಅತಸ್ತ್ವಯಾಪಿ ಕರ್ತವ್ಯಮಿಂದಿರೇ ವ್ರತಮುತ್ತಮಂ ।
ಶಾಂಭವಂ ಶುಭದಂ ಮನ್ಯೇ ವ್ರತಮೇತದ್ವ್ರತೋತ್ತಮಂ ॥೨೬೨॥

ಅಯಂ ಭಾದ್ರಪದೋ ಮಾಸಃ ಶ್ವಸ್ತೃತೀಯಾಪಿ ಶೋಭನೇ ।
ಹಸ್ತನಕ್ಷತ್ರಸಂಯುಕ್ತಾ ಶುಕ್ಲಪಕ್ಷಶ್ಶುಭಾವಹಃ ॥೨೬೩॥

---

ಈ ಪ್ರಕಾರ ಶಿವನು ಆ ವ್ರತದ ಸ್ವರೂಪವನ್ನೂ, ಅದರ ಫಲಮಹಿಮೆಯನ್ನೂ ಉಪದೇಶಿಸಲು, ಅದೆಲ್ಲವನ್ನೂ ಕೇಳಿ ಗೌರಿಗೆ ಪರಮಾನಂದವಾಯಿತು. ॥೨೬೦॥

ಎಲೌ ಲಕ್ಷ್ಮಿಯೇ, ನೀನೂ ಈ ಅತ್ಯುತ್ತಮವಾದ ವ್ರತವನ್ನು ಆಚರಿಸಿದರೆ ನಿನಗೆ ಸುಖವುಂಟಾಗುವುದು. ನಾಳೆ, ಸೋಮವಾರದಿಂದ ಕೂಡಿದ ತೃತೀಯಾತಿಥಿಯಾಗಿರುವುದು. ಇದರಿಂದ ಪುಣ್ಯತಮವಾದ ಶಿವಯೋಗವೇ ಲಭಿಸಿರುವುದು. ಈ ಮಹಾಯೋಗದಲ್ಲಿ ಈ ವ್ರತವನ್ನು ಆಚರಿಸಿದರೆ ಮಂಗಳವು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ. ॥೨೬೧॥

ಈ ವ್ರತವು ಉತ್ತಮೋತ್ತಮವಾದದ್ದು ಮತ್ತು ಶಿವಪ್ರೋಕ್ತವಾದದ್ದು. ಆದರಿಂದಲೇ ಇದು ಸಕಲ ಶುಭಫಲಗಳನ್ನೂ ಪ್ರದಾನಮಾಡುವುದಾಗಿದೆ. ಲಕ್ಷ್ಮಿಯೇ, ನೀನು ಈ ವ್ರತವನ್ನು ಆಚರಿಸಿ ಇಷ್ಟಾರ್ಥಗಳನ್ನು ಪಡೆದುಕೊ. ॥೨೬೨॥

ನಾಳೆಯ ದಿನ ಒಳ್ಳೆಯ ಸುಯೋಗವಿರುವುದು. ಭಾದ್ರಪದ ಮಾಸದ ಶುಕ್ಲಪಕ್ಷದ ತೃತೀಯಾ ತಿಥಿಯು ನಾಳೆ ಇರುವುದು. ಜೊತೆಗೆ ಹಸ್ತನಕ್ಷತ್ರವೂ ಸೇರಿಕೊಂಡಿರುವುದರಿಂದ ಈ ಮಹಾಯೋಗವು ಅತ್ಯಂತ ಶುಭಪ್ರದವಾಗುವುದು. ॥೨೬೩॥

ತವ ಭಾಗ್ಯಮಿದಂ ಪ್ರಾಯಸ್ಸಂಪನ್ನಂ ಕಮಲೇಽಧುನಾ ।
ಶ್ವಸ್ತೃತೀಯಾಪಿ ಸಂಪ್ರಾಪ್ತಾ ಸೇಯಂ ವ್ರತತಿಥಿಃ ಖಲು ॥೨೬೪॥

ಸಿದ್ಧೈವ ಸರ್ವಾ ಸಾಮಗ್ರೀ ತಯಾ ಪೂಜಯ ಶಂಕರಂ ।
ಅತ್ರೈವಾತಿಪ್ರಯತ್ನೇನ ಕಪಿಲೇಶಸ್ಯ ಸನ್ನಿಧೌ ॥೨೬೫॥

ಗರುಡಶ್ಶಿವಭಕ್ತೋಽಯಮಾನಯಿಷ್ಯತಿ ಸಾಧನಂ ।
ಸರ್ವಾಮರಾಂಗನಾಯುಕ್ತಾ ಕುರು ಶಂಕರಪೂಜನಂ ॥೨೬೬॥

ವಿಸಂಜ್ಞೋ ಮೂರ್ಛಿತೋ ವಾಪಿ ಮೃತೋ ವಾ ದೈವಯೋಗತಃ ।
ಆಯಾಸ್ಯತ್ಯೇವ ತೇ ಭರ್ತಾ ತದ್ವ್ರತಾಚರಣಾದ್ಧ್ರುವಂ ॥೨೬೭॥

ಸಂಶಯೋಽತ್ರ ನ ಕರ್ತವ್ಯಃ ಕಮಲೇ ವಿಮಲೇ ತ್ವಯಾ ।
ಶಾಂಭವಂ ವ್ರತಮೇವೇದಂ ಸುರಸಂಜೀವನೀ ಖಲು ॥೨೬೮॥

---

ಇಂದಿರೆಯೇ! ನಿನ್ನ ಭಾಗ್ಯವು ಇಂದು ಉದಯಿಸಿದಂತೆ ತೋರುವುದು. ಏಕೆಂದರೆ ಅತ್ಯಂತ ಶೀಘ್ರದಲ್ಲಿಯೇ ಅಂದರೆ ನಾಳೆ ದಿನವೇ ಈ ವ್ರತಕ್ಕೆ ಮುಖ್ಯ ತಿಥಿಯಾದ ತೃತೀಯಾ ತಿಥಿಯು ಪ್ರಾಪ್ತವಾಗಿರುವುದು. ನೀನು ಇನ್ನೂ ಸ್ವಲ್ಪವೂ ನಿದಾನಿಸಬೇಕಾಗಿಲ್ಲ. ॥೨೬೪॥

ಇಲ್ಲಿ ಸಕಲ ಪೂಜಾಸಾಮಗ್ರಿಗಳೂ ಸಿದ್ಧವಾಗಿಯೇ ಇರುತ್ತವೆ. ಈ ಸಾಮಗ್ರಿಗಳಿಂದ ಇಲ್ಲಿಯೇ ಕಪಿಲೇಶ್ವರನ ಸನ್ನಿಧಿಯಲ್ಲಿ ಈ ಮಹಾವ್ರತರೂಪವಾದ ಶಿವಾರ್ಚನೆಯನ್ನು ಭಕ್ತಿಯಿಂದ ಆಚರಿಸು. ॥೨೬೫॥

ಈ ಶಿವಭಕ್ತನಾದ ಗರುಡನು ಮತ್ತುಳಿದ ಎಲ್ಲಾ ಪೂಜಾಸಾಮಗ್ರಿಗಳನ್ನೂ ತಂದು ನಿನಗೆ ಅಣಿಮಾಡಿ ಕೊಡುವನು. ನೀನು ಸಮಸ್ತ ದೇವಾಂಗನೆಯರೊಂದಿಗೆ ಪರಮ ನಿಷ್ಠೆಯಿಂದ ಶಿವಾರ್ಚನೆಯನ್ನು ಮಾಡು. ॥೨೬೬॥

ನೀನು ಈ ವ್ರತವನ್ನು ವಿಧ್ಯುಕ್ತರೀತಿಯಲ್ಲಿ ಆಚರಿಸಿದರೆ ನಿನ್ನ ಪತಿಯು ಎಲ್ಲೇ ಇರಲಿ, ಮೂರ್ಛಿತನಾಗಿರಲಿ, ಅಥವಾ ಮೃತನೇ ಆಗಿದ್ದರೂ ಶೀಘ್ರವಾಗಿಯೇ ಯಾವ ಅಪಾಯಕ್ಕೂ ಒಳಗಾಗದೇ ನಿನ್ನನ್ನು ಬಂದು ಸೇರುವನು. ॥೨೬೭॥

ಎಲೌ ಇಂದಿರೆಯೇ! ನನ್ನ ಮಾತಿನಲ್ಲಿ ನಿನಗೆ ಸ್ವಲ್ಪವೂ ಸಂಶಯ ಬೇಡ. ಈ ಶೈವಮಹಾವ್ರತವು ದೇವತೆಗಳು ಪುನಃ ಜೀವಂತರಾಗುವುದಕ್ಕೆ ಸಂಜೀವಿನಿ ಎಂದೇ ತಿಳಿ. ॥೨೬೮॥

ಸರ್ವಲೋಕೋಪಕಾರಾಯ ಶಿವಾಯೈ ಗಿರಿಶೋದಿತಂ ।
ಅವಶ್ಯಮೇವ ಕರ್ತವ್ಯಂ ವೈಧವ್ಯವಿನಿವಾರಕಂ ॥೨೬೯॥

ವೈಧವ್ಯಾಶನಿರೂಪಮೇವ ಕಮಲೇ ಶೈವವ್ರತಂ ಸಾದರಂ
ಶ್ವಃ ಕರ್ತವ್ಯಮನೇನ ತೇ ಪತಿರಿಹಾಯಾಸ್ಯತ್ಯವಶ್ಯಂ ಸುರೈಃ ।
ಸಾಕಂ ಪಶ್ಯ ಮದೀಯಮೇವ ವಚನಂ ವಿಶ್ವಸ್ಯ ಸತ್ಯಂ ಮಯಾ
ಪ್ರೋಕ್ತಂ ಶಂಕರಪಾದಯೋರಪಿ ಶಪಾಮ್ಯತ್ರಾರ್ಥವಾದೋಽಪಿ ನ ॥೨೭೦॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಶೃಣು ಪದ್ಮೇ ಪ್ರವಕ್ಷ್ಯಾಮಿ ಸರ್ವದುಃಖವಿನಾಶಕಂ ॥೨೭೧॥

ಪುರಾ ತ್ರಿಪುರಸಂಹಾರಂ ಕರ್ತುಮಭ್ಯುದ್ಯತಶ್ಶಿವಃ ।
ಪ್ರಾಹ ಗೌರೀಂ ಪ್ರಯತ್ನೇನ ಸಮಾಲಿಂಗ್ಯ ಪುನಃ ಪುನಃ ॥೨೭೨॥

---

ಈ ಮಹಾವ್ರತವನ್ನು ಲೋಕಾನುಗ್ರಹಾರ್ಥವಾಗಿಯೇ ಶಂಕರನು ಗಿರಿಜೆಗೆ ಹೇಳಿರುವನು. ಆ ಮೊದಲುಗೊಂಡು ಪ್ರಚಾರದಲ್ಲಿರುವ, ಮತ್ತು ಅಮಂಗಳಪ್ರದವಾದ ವೈಧವ್ಯವನ್ನು ಪರಿಹರಿಸುವ ಈ ವ್ರತವನ್ನು ನೀನು ಅವಶ್ಯವಾಗಿ ಮಾಡು. ॥೨೬೯॥

ಎಲೌ ಲಕ್ಷ್ಮಿಯೇ! ಈ ವೈಧವ್ಯವೆಂಬ ದುಃಖಕ್ಕೆ ವಜ್ರಾಯುಧರೂಪವಾದ ಶಿವವ್ರತವನ್ನು ನಾಳೆ ದಿನವೇ ನೀನು ಮಾಡು. ನೀನು ಈ ವ್ರತವನ್ನು ಆಚರಿಸಿ ದೊಡನೆಯೇ ನಿನ್ನ ಪತಿಯು ಈಗ ಎಲ್ಲೇ ಇದ್ದರೂ ಆ ಕೂಡಲೇ ಸಮಸ್ತ ದೇವತೆ ಗಳೊಂದಿಗೆ ಇಲ್ಲಿಗೇ ಕ್ಷೇಮದಿಂದ ಬರುವನು. ಈ ನನ್ನ ಮಾತಿನಲ್ಲಿ ನಂಬಿಕೆಯ ನ್ನಿಡು. ನಾನು ಶಿವಪಾದಪದ್ಮಗಳ ಆಣೆಯಾಗಿಯೂ ಸತ್ಯವಾದದ್ದನ್ನು ನಿನಗೆ ಉಪದೇಶಿಸುತ್ತಿರುವೆನು. ಈ ವ್ರತದ ಮಹಿಮೆಯು ಅಷ್ಟು ಘನತರವಾದದ್ದು. ಇದ ರಲ್ಲಿ ಕೊಂಚವೂ ಅರ್ಥವಾದವಾಗಲೀ ಅಯಥಾರ್ಥವಾಗಲೀ ಇರುವುದಿಲ್ಲ. ॥೨೭೦॥

ಇದೇ ವಿಚಾರದಲ್ಲಿ ಒಂದು ಪುರಾತನವಾದ ಇತಿಹಾಸವುಂಟು. ಆ ಇತಿಹಾಸ ವನ್ನು ಶ್ರವಣಮಾಡಿದ ಮಾತ್ರದಿಂದಲೇ ಸಕಲ ದುಃಖಗಳೂ ನಾಶವಾಗುವುವು. ಆದುದರಿಂದ ಅದನ್ನೇ ನಿನಗೆ ಹೇಳುವೆನು. ಆಲಿಸಿ ಕೇಳು. ॥೨೭೧॥

ಪೂರ್ವದಲ್ಲಿ ತ್ರಿಪುರರೆಂಬ ಮಹಾದೈತ್ಯರಿದ್ದರು. ಆ ದುಷ್ಟರನ್ನು ನಿಗ್ರಹಿಸು ವುದಕ್ಕೆ ಶಂಕರನೇ ಹೋಗಬೇಕಾಯಿತು. ಆಗ ಶಂಕರನು ಗಿರಿಜೆಯನ್ನು ಪ್ರೀತಿ ಯಿಂದ ಆಲಿಂಗಿಸಿಕೊಂಡು ಈ ರೀತಿ ಹೇಳಿದನು. ॥೨೭೨॥

॥ ಶ್ರೀಶಂಕರ ಉವಾಚ ॥

ತ್ರಿಪುರಾಸುರ ಇತ್ಯೇಕೋ ದೈತ್ಯಾನಾಮಧಿಪಶ್ಶಿವೇ ।
ಸ ಸರ್ವಸುರನಾಶಾಯ ಪ್ರವೃತ್ತಸ್ಸ ಮಹಾನ್ ಖಲು ॥೨೭೩॥

ತಚ್ಛರೀರಂ ಗಿರಿಸುತೇ ಕೋಟಿಪರ್ವತಸನ್ನಿಭಂ ।
ಜ್ವಲದ್ವಹ್ನಿಗಣಾಕಾರಮಾಕಾಶೇ ಚರತಿ ಸ್ವಯಂ ॥೨೭೪॥

ಪುರಾಣಿ ತಸ್ಯ ವಿಮಲೇ ತ್ರೀಣ್ಯಂಬರಚರಾಣ್ಯಪಿ ।
ತೇಷು ತೇಷಾಮವಸ್ಥಾನಮಸುರಾಣಾಂ ದುರಾತ್ಮನಾಂ ॥೨೭೫॥

ತಾರಾಕ್ಷೋ ಮಕರಾಕ್ಷಶ್ಚ ವಿದ್ಯುನ್ಮಾಲೀತಿ ತೇ ತ್ರಯಃ ।
ತೇ ಜಗತ್ತ್ರಯಸಂಹಾರಂ ಕರ್ತುಮದ್ಯ ಸಮುದ್ಯತಾಃ ॥೨೭೬॥

---

ಪ್ರಿಯೇ ಗಿರಿಜೆ, ಈಗ ತ್ರಿಪುರನೆಂಬ ದೈತ್ಯನು ಸಕಲ ದೈತ್ಯರಿಗೂ ಅಧಿಪತಿಯಾಗಿ ಸೊಕ್ಕಿಹೋಗಿದ್ದಾನೆ. ಆ ದುಷ್ಟನು ಸಮಸ್ತ ದೇವತೆಗಳನ್ನೂ ನಾಶಮಾಡಬೇಕೆಂಬ ದುಷ್ಟಸಂಕಲ್ಪವನ್ನು ಹೊಂದಿದ್ದಾನೆ. ಮತ್ತು ನಾಶಪಡಿಸುತ್ತಿದ್ದಾನೆ. ॥೨೭೩॥

ಆ ತ್ರಿಪುರದೈತ್ಯನ ದೇಹವು ನೂರಾರುಪರ್ವತಗಳನ್ನು ಒಟ್ಟು ಸೇರಿಸಿದಷ್ಟು ದೊಡ್ಡದಾಗಿದೆ. ಅಷ್ಟು ಬೃಹದಾಕಾರನಾದ ಆ ದೈತ್ಯನು ಉರಿಯುತ್ತಿರುವ ಬೆಂಕಿಯಂತೆ ತೋರುವನಲ್ಲದೇ ಅವನು ಸದಾ ಆಕಾಶದಲ್ಲಿಯೇ ಸಂಚರಿಸುವನು.॥೨೭೪॥

ಆ ದೈತ್ಯೇಶ್ವರನು ಮೂರು ಪಟ್ಟಣಗಳನ್ನು ಕಲ್ಪಿಸಿಕೊಂಡಿರುವನು. ಆ ಪಟ್ಟಣಗಳೂ ಸಹ ಆಕಾಶದಲ್ಲಿಯೇ ಸಂಚರಿಸುವುವು. ಇಂಥ ದುರ್ಗಮವಾದ ಪಟ್ಟಣಗಳಲ್ಲಿ ದುರಾತ್ಮರಾದ ಕೋಟ್ಯಂತರ ದೈತ್ಯರು ಯಥೇಚ್ಛವಾಗಿ ವಾಸಮಾಡಿಕೊಂಡಿದ್ದಾರೆ. ॥೨೭೫॥

ಎಲ್ಲಾ ಅಸುರರೂ ದುಷ್ಟರಾಗಿ ಕೊಬ್ಬಿಹೋಗಿರುವರು. ಅಲ್ಲದೇ ತಾರಾಕ್ಷ, ಮಕರಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂವರು ಈ ಜಗತ್ತನ್ನೇ ನಾಶಪಡಿಸಲು ಆರಂಭಿಸಿರುವರು. ॥೨೭೬॥

ನಾರಾಯಣಾದಯಸ್ಸರ್ವೇ ತದ್ಭೀತ್ಯೈವ ದಿಗಂತರಂ ।
ಸಂಪ್ರಾಪ್ತಾಃ ಕುಟುಂಬಸಹಿತಾಃ ಪುತ್ರೈರಪಿ ಸಮನ್ವಿತಾಃ ॥೨೭೭॥

ತೇಷಾಂ ಪ್ರತಿಭಟೋ ಲೋಕೇ ನ ಕೋಽಪ್ಯಸ್ತಿ ವರಾನನೇ ।
ತತ್ಸಂಹಾರೋಽಪಿ ಕರ್ತವ್ಯಃ ಪ್ರಯತ್ನೈರ್ಬಹುಭಿರ್ಮಯಾ ॥೨೭೮॥

ತ್ವಯಾ ಸಹ ನ ಗಂತವ್ಯಂ ವಿಲಂಬೋಽಪಿ ಭವಿಷ್ಯತಿ ।
ಯುದ್ಧಪ್ರದೇಶೇ ನಾರೀಣಾಮುಚಿತಂ ಗಮನಂ ನ ತು ॥೨೭೯॥

ಸಂಭಾವಿತಃ ಪ್ರಯಾಸೋಽಪಿ ತತ್ರ ಯುದ್ಧೇ ಮಹಾಸುರೈಃ ।
ಕುಮಾರೋ ಗಣನಾಥಶ್ಚ ರಕ್ಷಣೀಯಾಸ್ತ್ವಯಾ ಶಿವೇ ॥೨೮೦॥

---

ಈ ದೈತ್ಯರ ಪೀಡೆಯನ್ನೂ ಉಪಟಳವನ್ನೂ ಸಹಿಸಲಾರದೇ ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳೂ, ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಹೆದರಿಕೆಯಿಂದ ಪತ್ನೀಪುತ್ರಸಹಿತರಾಗಿ ದಿಗಂತಕ್ಕೆ ಓಡಿಹೋಗಿ ಅವಿತುಕೊಂಡಿರುವರು. ॥೨೭೭॥

ಆ ದೈತ್ಯರಿಗೆ ಎದುರಾಳುಗಳು ಮೂರು ಲೋಕಗಳಲ್ಲೇ ಯಾರೂ ಇರುವುದಿಲ್ಲ. ಹೀಗೆ ಅತ್ಯಂತ ಗರ್ವಿಷ್ಠರಾದ ಆ ದೈತ್ಯರನ್ನು ಹೇಗಾದರೂ ಮಾಡಿ ನಾನೇ ಸಂಹರಿಸಬೇಕಾಗಿದೆ. ಆ ದೈತ್ಯರ ಕ್ರೌರ್ಯವು ಲೋಕಕ್ಕೆ ದುಸ್ಸಹವಾಗಿದೆ. ॥೨೭೮॥

ಆದುದರಿಂದ ನಾನು ಈ ಕೂಡಲೇ ಅವರನ್ನು ಸಂಹರಿಸಲು ಹೋಗುವೆನು. ಈಗ ನಿನ್ನನ್ನು ಇಲ್ಲಿಯೇ ಬಿಟ್ಟುಹೋಗಬೇಕಾಗಿದೆ. ಯುದ್ಧಕ್ಷೇತ್ರಕ್ಕೆ ಸ್ತ್ರೀಯರು ಹೋಗುವುದು ಒಳ್ಳೆಯದಲ್ಲವಷ್ಟೆ. ಅಲ್ಲದೇ ನಿಮ್ಮೆಲ್ಲರನ್ನೂ ಕರೆದುಕೊಂಡು ಹೋಗುವುದೆಂದರೆ ಬಹಳ ವಿಳಂಬವಾದೀತು. ಆದ್ದರಿಂದ ನೀನು ಇಲ್ಲಿಯೇ ಇರು. ॥೨೭೯॥

ಆ ಮಹಾ ಉದ್ಧತರಾದ ಅಸುರರೊಡನೆ ಯುದ್ಧಮಾಡುವಾಗ ಕದಾಚಿತ್ ಪ್ರಮಾದವೂ ಸಂಭವಿಸೀತು. ಆಯಾಸ ಅಪಾಯಗಳೂ ಸಂಭವಿಸಬಹುದು. ಆದುದರಿಂದ ನೀನು ಇಲ್ಲಿಯೇ ಇದ್ದು ಬಾಲಕನಾದ ಷಣ್ಮುಖನನ್ನೂ ಮತ್ತು ಗಣಪತಿಯನ್ನೂ ಸಹ ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿರು. ॥೨೮೦॥

ಭಾದ್ರಶುಕ್ಲತೃತೀಯಾಯಾಂ ಯತ್ಸೌಮಂಗಲ್ಯದಂ ವ್ರತಂ।
ತತ್ಕರ್ತವ್ಯಂ ತ್ವಯಾ ಗೌರಿ ಯನ್ಮಯೋಕ್ತಂ ಪುರಾ ಮುದಾ ॥೨೮೧॥

ವೈಧವ್ಯನಾಶಕತ್ವೇನ ತದ್ವ್ರತಂ ಪರಿಕೀರ್ತಿತಂ।
ತದವಶ್ಯಂ ತ್ವಯಾ ಕಾರ್ಯಂ ಪ್ರಮಾದಂ ಮಾ ಕುರು ಪ್ರಿಯೇ ॥೨೮೨॥

ಪುರಾ ತೇನಾಸುರೇಣಾಶು ಮುನಯೋ ನಿಹತಾಶ್ಶಿವೇ।
ಋಷಿಪತ್ನ್ಯಸ್ತದಾ ಸರ್ವಾಃ ಪ್ರಲಾಪವ್ಯಾಕುಲಾ ಅಪಿ ॥೨೮೩॥

ದೃಷ್ಟ್ವಾ ತಾಸ್ತತ್ರ ಸಂಪ್ರಾಪ್ತೋ ನಂದಿಕೇಶೋ ಗಣಾಧಿಪಃ।
ಉವಾಚ ತಾಸಾಂ ದುಃಖಾನಿ ನಿವಾರಯಿತುಮಾದರಾತ್ ॥೨೮೪॥

---

ನಾನು ಹಿಂದೆ ನಿನಗೆ ಸೌಮಂಗಲ್ಯಪ್ರದವಾದ ಒಂದು ಮಹಾವ್ರತವನ್ನು ಉಪದೇಶಿಸಿದ್ದೆ. ಅದು ನಿನಗೂ ಜ್ಞಾಪಕವಿರುತ್ತದೆಯಷ್ಟೆ. ಆ ವ್ರತವನ್ನು ನೀನು ಸೌಭಾಗ್ಯಾಭಿವೃದ್ಧ್ಯರ್ಥವಾಗಿ ಭಾದ್ರಶುಕ್ಲತೃತಿಯಾತಿಥಿಯಲ್ಲಿ ಅವಶ್ಯವಾಗಿ ಮಾಡುತ್ತಿರು. ॥೮೧॥

ಈ ಮಹಾವ್ರತವು ವೈಧವ್ಯದುರ್ಯೋಗವನ್ನು ಪರಿಹರಿಸುವುದೆಂದೂ ಸಕಲ ಸನ್ಮಂಗಳಪ್ರದವಾದದ್ದೆಂದೂ ನಿನಗೆ ಹಿಂದೆಯೇ ಹೇಳಿದ್ದೇನೆ. ಅಂಥ ಮಹತ್ತರವಾದ ಆ ವ್ರತವನ್ನು ನೀನು ಸ್ವಲ್ಪವೂ ಪ್ರಮಾದಬಾರದಂತೆ ಆಚರಿಸುತ್ತಿರಬೇಕು. ॥೮೨॥

ಈ ತ್ರಿಪುರದೈತ್ಯನೇ, ಹಿಂದೆ ಅನೇಕ ಮಹಾಮುನಿಗಳನ್ನೂ ಸಹ ಕೊಂದಿದ್ದನು. ಆಗ ಅನೇಕ ಋಷಿಪತ್ನಿಯರು ವೈಧವ್ಯದುಃಖವನ್ನು ಸಹಿಸಲಾರದೇ ಗಟ್ಟಿಯಾಗಿ ರೋದಿಸಲಾರಂಭಿಸಿದರು. ॥೮೩॥

ಅದೇ ಸಮಯಕ್ಕೆ ಸರಿಯಾಗಿ ಗಣಾಧಿಪತಿಯಾದ ನಮ್ಮ ನಂದಿಕೇಶನು ಅಕಸ್ಮಾತ್ ಅಲ್ಲಿಗೆ ಹೋಗಿದ್ದನು. ಆಗ ಅವನು ಋಷಿಪತ್ನಿಯರ ದುರ್ದವಸ್ಥೆಯನ್ನು ನೋಡಿ ಕನಿಕರದಿಂದ ಅವರ ಕಷ್ಟವನ್ನು ಪರಿಹರಿಸಬೇಕೆಂಬ ಅಪೇಕ್ಷೆಯಿಂದ, ಆ ಋಷಿಪತ್ನಿಯರನ್ನು ಕುರಿತು ಈ ರೀತಿ ಬೋಧಿಸಿದನು. ॥೮೪॥

॥ ನಂದಿಕೇಶ್ವರ ಉವಾಚ ॥

ಅರುಂಧತೀಮುಖಾಸ್ಸರ್ವಾಃ ಕಿಮೇವಂ ದುಃಖಸಾಗರೇ ।
ನಿಮಗ್ನಾಶ್ಶಂಕರಧ್ಯಾನಂ ಕರ್ತವ್ಯಮತಿಯತ್ನತಃ ॥೨೮೫॥

ಕಿಂ ಚ ವೈಧವ್ಯನಾಶಾಯ ತೃತೀಯಾವ್ರತಮೀರಿತಂ ।
ತತ್ಕರ್ತವ್ಯಂ ಪ್ರಯತ್ನೇನ ಸೌಮಂಗಲ್ಯಂ ಭವಿಷ್ಯತಿ ॥೨೮೬॥

ಮೃತೋ ಯಮಾಂತಿಕಂ ನೀತೋಽಪ್ಯಾಯಾತ್ಯೇವ ವ್ರತೇ ಕೃತೇ ।
ತಸ್ಮಾದವಶ್ಯಂ ಕರ್ತವ್ಯಂ ತದ್ವ್ರತಂ ಪಾಪನಾಶಕಂ ॥೨೮೭॥

ಇತಿ ತದ್ವಚನಂ ಶ್ರುತ್ವಾ ಸರ್ವಾಸ್ಸಂತುಷ್ಟಮಾನಸಾಃ ।
ಯಥೋಕ್ತವಿಧಿನಾ ಚಕ್ರುಸ್ತೃತೀಯಾಯಾ ವ್ರತಂ ಶಿವೇ ॥೨೮೮॥

---

"ಎಲೌ ಅರುಂಧತೀದೇವಿಯೇ, ಮತ್ತು ಋಷಿಪತ್ನಿಯರೇ, ಏತಕ್ಕೆ ವೃಥಾ ಶೋಕಪಡುತ್ತಿರುವಿರಿ? ದುಃಖವು ಹೇಗೂ ಪ್ರಾಪ್ತವಾಗಿಯೇ ಹೋಗಿದೆ. ಇನ್ನು ವ್ಯಸನಪಟ್ಟು ಪ್ರಯೋಜನವಿಲ್ಲ. ಈಗ ನೀವು ಈ ದುಃಖವನ್ನು ಪರಿಹರಿಸಿಕೊಳ್ಳಲು ಉಪಾಯವನ್ನು ಯೋಚಿಸಬೇಕು. ಆದ್ದರಿಂದ ನೀವೆಲ್ಲರೂ ಅವಶ್ಯವಾಗಿ ಶಂಕರನನ್ನೇ ಧ್ಯಾನಿಸಬೇಕು. ॥೨೮೫॥

ಈ ವೈಧವ್ಯದೋಷವು ಪರಿಹೃತವಾಗುವುದಕ್ಕೋಸ್ಕರವಾಗಿಯೇ ತೃತೀಯಾ ಮಹಾವ್ರತವು ಪ್ರೋಕ್ತವಾಗಿರುವುದು. ಆ ವ್ರತವನ್ನು ಅನುಷ್ಠಿಸಿದರೆ ಸೌಮಂಗಲ್ಯವು ಪ್ರಾಪ್ತವಾಗುವುದು. ಆದುದರಿಂದ ನೀವು ಆ ವ್ರತವನ್ನು ಅವಶ್ಯವಾಗಿ ಆಚರಿಸಿರಿ. ॥೨೮೬॥

ನಿಮ್ಮ ನಿಮ್ಮ ಪತಿಗಳು ಮೃತರಾಗಿದ್ದರೂ, ಯಮನ ಬಳಿಗೆ ಹೋಗಿದ್ದರೂ ಸಹ ನೀವು ಈ ವ್ರತವನ್ನು ಮಾಡಿದರೆ ಅವರು ತಿರುಗಿ ಬಂದೇ ಬರುವರು. ಇಂಥ ಸಕಲಾನಿಷ್ಟ ನಾಶಕವಾದ ಈ ವ್ರತವನ್ನು ನೀವು ಮಾಡಿರಿ." ॥೨೮೭॥

ಈ ಪ್ರಕಾರವಾಗಿ ನಂದಿಕೇಶನು ಉಪದೇಶಿಸಲು, ಸಮಯದಲ್ಲಿ ಮುಖ್ಯೋಪಾಯವು ದೊರೆತದ್ದರಿಂದ ಆ ಸಕಲ ಋಷಿಪತ್ನಿಯರಿಗೂ ಅತ್ಯಾನಂದವಾಯಿತು. ಆಗ ಅವರೆಲ್ಲರೂ ಈ ಮಹಾವ್ರತವನ್ನು ವಿಧಿವತ್ತಾಗಿ ಆಚರಿಸಿದರು. ॥೨೮೮॥

ಸಮಾಗತಾಶ್ಚ ಮುನಯಸ್ತದ್ವ್ರತಾಚರಣೋತ್ತರಂ ।
ತಾನ್ ದೃಷ್ಟ್ವಾ ವಿಸ್ಮಿತಾಸ್ಸರ್ವಾಃ ಪುಲಕಾಂಚಿತವಿಗ್ರಹಾಃ ॥೨೮೯॥

ಆನಂದಾಶ್ರುಸಮಾಕೀರ್ಣಾಃ ಪ್ರಣತಾಸ್ತತ್ಪದಾಂಬುಜೇ ।
ತೇಽಪಿ ಪ್ರಹೃಷ್ಟಾ ಮುನಯಸ್ತಾಃ ಪ್ರೋಚುಃ ಪ್ರೀತಿಪೂರ್ವಕಂ ॥೨೯೦॥

॥ ಮುನಯ ಊಚುಃ ॥

ಕಿಮುತ್ತಮಂ ವ್ರತಂ ಚೀರ್ಣಮಸ್ಮಾಭಿಸ್ಸಮುಪಾಗತಂ ।
ಸರ್ವದುಃಖವಿನಿರ್ಮುಕ್ತೈರಸುರೋದರಸಂಸ್ಥಿತೈಃ ॥೨೯೧॥

ಕಲತ್ರಕೃತ್ಯಮಧುನಾ ಕೃತಮೇವ ಮಹತ್ತರಂ ।
ಏತಾದೃಶಂ ಕಲತ್ರಾಣಾಂ ಲಾಭಃ ಪುಣ್ಯೈರ್ಮಹತ್ತರೈಃ ॥೨೯೨॥

---

ಋಷಿಪತ್ನಿಯರು ಈ ತೃತೀಯಾವ್ರತವನ್ನು ಮಾಡಿದೊಡನೆಯೇ ಸಮಸ್ತ ಋಷಿಗಳೂ ತಾವಾಗಿಯೇ ತಮ್ಮ ಪತ್ನಿಯರಿದ್ದೆಡೆಗೆ ಬಂದರು. ಹಾಗೆ ಜೀವಂತರಾಗಿ ಬಂದ ಋಷಿಗಳನ್ನು ನೋಡಿ ಋಷಿಪತ್ನಿಯರಿಗೆ ಪರಮಾನಂದವಾಯಿತು. ಆಗ ಅವರೆಲ್ಲರೂ ಆನಂದಾಶ್ರುಭರಿತರಾಗಿ ತಮ್ಮ ತಮ್ಮ ಪತಿಗಳ ಕಾಲುಗಳಿಗೆ ಅಡ್ಡ ಬಿದ್ದು ನಮಸ್ಕರಿಸಿದರು. ಇದರಿಂದ ಸಂತುಷ್ಟರಾದ ಆ ಋಷಿಗಳು ಪ್ರೀತಿಯಿಂದ ಈರೀತಿ ನುಡಿದರು. ॥೨೮೯-೨೯೦॥

"ಪ್ರಿಯಕಾಂತಾಮಣಿಗಳೇ, ನೀವು ಯಾವ ಮಹಾವ್ರತವನ್ನು ಮಾಡಿದಿರಿ ? ಆ ವ್ರತದ ಮಾಹಾತ್ಮ್ಯೆಯಿಂದ ನಾವು ಮೃತರಾಗಿ, ಅಸುರರ ಹೊಟ್ಟೆಯಲ್ಲಿ ಬಿದ್ದಿದ್ದವರೂ ಸಹ ಸುಖವಾಗಿ ನಿಮ್ಮ ಬಳಿಗೆ ತಿರುಗಿ ಬರುವಂತಾಯಿತು. ಅದೆಂತಹ ಮಹಾವ್ರತ ! ಹೇಳಿರಿ. ॥೨೯೧॥

ನೀವು ಇಂದು ಮಹತ್ತರವಾದ ಪತ್ನೀಕರ್ತವ್ಯವನ್ನು ನೆರವೇರಿಸಿ ಇದರಿಂದ ಪರಮಶ್ಲಾಘ್ಯರೆನಿಸಿಕೊಂಡಿರುವಿರಿ. ನಿಮ್ಮಂತಹ ಪತ್ನಿಯರು ಕೇವಲ ಪುಣ್ಯಾತ್ಮರಿಗೇ ದೊರೆಯುವರು. ನಿಮ್ಮನ್ನು ಎಷ್ಟು ಕೊಂಡಾಡಿದರೂ ಅದು ಅಲ್ಪವೇ ಸರಿ. ॥೨೯೨॥

ಕಥಂ ವಾ ತದ್ವ್ರತಂ ಚೀರ್ಣಂ ಕೇನೋಕ್ತಂ ಮಹತಾವ್ರತಂ ।
ಕಾನಿ ವಾ ಸಾಧನಾನೀತಿ ವಕ್ತ್ರವ್ಯಮತಿಸಾದರಂ ॥೨೯೩॥

ತತಸ್ತದ್ವಚನಂ ಶ್ರುತ್ವಾ ಋಷಿಪತ್ನ್ಯಃ ಪ್ರಣಮ್ಯ ತಾನ್ ।
ನಂದಿಕೇಶೋಕ್ತಮಿತ್ಯಾಹುರ್ವ್ರತಂ ಶಾಂಭವಮುತ್ತಮಂ ॥೨೯೪॥

ತತಃ ಪರಂ ಪ್ರಹೃಷ್ಟಾಸ್ತೇ ಗತಾಃ ಸ್ವಸ್ವಾಶ್ರಮಂ ಪ್ರತಿ ।
ತದಾ ಪ್ರಭೃತಿ ತೈಸ್ಸರ್ವೈಸ್ತದ್ವ್ರತಾಚರಣಂ ಕೃತಂ ॥೨೯೫॥

ತೇನೈವ ಸುಖಮಾಸಾದ್ಯ ಸ್ಥಿತಾಸ್ಸರ್ವೇ ನಿರಂತರಂ ।
ತತಃ ಕುರು ಪ್ರಯತ್ನೇನ ಗಿರಿಜೇ ತದ್ವ್ರತಂ ಮುದಾ ॥೨೯೬॥

ಇತ್ಯುಕ್ತ್ವಾ ಸ ಮಹಾದೇವೋ ಯಯೌ ಯುದ್ಧಾಯ ಸಾದರಂ ।
ತಯಾ ಚ ತದ್ವ್ರತಂ ಚೀರ್ಣಂ ಶಿವಯಾಪ್ಯಬ್ಧಿಕನ್ಯಕೇ ॥೨೯೭॥

---

ನೀವು ಅಂಥ ಮಹಾವ್ರತವನ್ನು ಹೇಗೆ ಮಾಡಿದಿರಿ ? ಅಂಥ ಮಹತ್ತರವಾದ ವ್ರತವನ್ನು ಯಾವ ಮಹಾತ್ಮನು ನಿಮಗೆ ಉಪದೇಶಿಸಿದನು ? ಆ ವ್ರತವನ್ನು ಆಚರಿಸಲು ಏನೇನು ಸಾಮಗ್ರಿಗಳು ಬೇಕಾಗುತ್ತವೆ? ಎಂಬುದನ್ನೆಲ್ಲಾ ನಮಗೆ ವಿವರಿಸಿ ಹೇಳಿರಿ." ||೨೯೩||

ಈರೀತಿ ಋಷಿಗಳು ಪ್ರಶ್ನಿಸಲು ಆಗ ಋಷಿಪತ್ನಿಯರು ತಮ್ಮ ಪತಿಯರಿಗೆ ನಮಸ್ಕರಿಸಿ ಈ ಶೈವಮಹಾವ್ರತವನ್ನು ನಂದಿಕೇಶಸ್ವಾಮಿಯು ತಮಗೆಉಪದೇಶಿಸಿದನೆಂಬುದನ್ನು ತಿಳಿಸಿದರು. ||೨೯೪||

ಅದನ್ನು ಕೇಳಿ ಋಷಿಗಳಿಗೆ ಪರಮಾನಂದವಾಯಿತು. ಬಳಿಕ ಅವರೆಲ್ಲರೂ ತಮ್ಮ ತಮ್ಮ ಪತ್ನಿಯರೊಂದಿಗೆ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ಆ ಮೊದಲುಗೊಂಡು ಅವರೆಲ್ಲರೂ ಈ ಮಹಾವ್ರತವನ್ನು ಮಾಡಲಾರಂಭಿಸಿದರು. ||೨೯೫||

ಆ ಋಷಿಗಳೆಲ್ಲರೂ ಆ ವ್ರತಾಚರಣೆಯ ಸುಕೃತದಿಂದಲೇ ಸಕಲ ಸೌಖ್ಯವನ್ನೂ ಪಡೆದುಕೊಂಡಿರುತ್ತಾರೆ. ಆದುದರಿಂದ ಪ್ರಿಯೆ ಗಿರಿಜೆ! ನೀನೂ ಸಹ ಆ ವ್ರತವನ್ನು ಪ್ರಯತ್ನಪುರಸ್ಸರವಾಗಿ ತಪ್ಪದೇ ಮಾಡುತ್ತಿರು." ||೨೯೬||

ಎಲೌ ಲಕ್ಷ್ಮಿಯೇ! ಶಂಕರನು ಈರೀತಿಯಾಗಿ ಪಾರ್ವತಿಗೆ ಹೇಳಿ

ತತಸ್ತ್ರಿಪುರಸಂಹಾರಂ ಕೃತ್ವಾ ಗೌರೀಮನೋಹರಃ ।
ಸಮಾಗತೋ ಗಿರಿಜಯಾ ಸಹ ರೇಮೇ ಮಹೇಶ್ವರಃ ॥೨೯೮॥

ಅಂಬಿಕಾ ತಂ ಮಹಾದೇವಂ ದೃಷ್ಟ್ವಾ ತ್ರಿಪುರನಾಶಕಂ ।
ತದ್ವ್ರತಸ್ಯೈವ ಮಹಿಮಾ ಭೂಯಾನಿತಿ ತುತೋಷ ಸಾ ॥೨೯೯॥

ತಸ್ಮಾತ್ತ್ವಯಾಪಿ ಯತ್ನೇನ ಕರ್ತವ್ಯಂ ತದ್ವ್ರತಂ ಮುದಾ ।
ಅವಿಶ್ವಾಸೋ ನ ಕರ್ತವ್ಯೋ ದುಃಖಂ ತ್ಯಜ ವಿಶೇಷತಃ ॥೩೦೦॥

ಇತಿ ತದ್ವಚನಂ ಶ್ರುತ್ವಾ ಸುರದಾರಾಸ್ತತಃ ಪರಂ ।
ಚಕ್ರುಸ್ತದ್ವ್ರತಮತ್ಯಂತಸಂತುಷ್ಟಹೃದಯಾಸ್ತದಾ ॥೩೦೧॥

---

ಯುದ್ಧಕ್ಕೆ ಹೊರಟುಹೋದನು. ಇತ್ತಲಾಗಿ ಪಾರ್ವತಿಯೂ ಸಹ ಆ ತೃತೀಯಾ ವ್ರತವನ್ನು ಮಾಡಿದಳು. ॥೨೯೭॥

ಆದರಿಂದ ಶಂಕರನು ಲೀಲಾಜಾಲವಾಗಿ ತ್ರಿಪುರಾಸುರನೇ ಮೊದಲಾದ ಸಕಲ ದೈತ್ಯರನ್ನೂ ಸಂಹರಿಸಿ ಸುಖವಾಗಿ ಗಿರಿಜೆಯ ಬಳಿಗೆ ತಿರುಗಿ ಬಂದನು. ಮತ್ತು ಪರಸ್ಪರವಾಗಿ ಅವರು ಸುಖಾನಂದಗಳನ್ನು ಪಡೆದರು. ॥೨೯೮॥

ಹೀಗೆ ಆ ಮಹಾದೈತ್ಯರನ್ನು ಯಾವ ಅಪಾಯಕ್ಕೂ ಒಳಗಾಗದೇ ಸಂಹರಿಸಿ ತಿರುಗಿ ಬಂದ ಶಂಕರನನ್ನು ನೋಡಿ ಗಿರಿಜೆಗೆ ಪರಮಾನಂದವಾಯಿತು. ಮತ್ತು ಇಂಥ ಸೌಭಾಗ್ಯವು ಆ ತೃತೀಯಾವ್ರತದ ದೆಸೆಯಿಂದಲೇ ಲಭಿಸಿತೆಂದೂ ಮನಗಂಡಳು. ॥೨೯೯॥

ಆದುದರಿಂದ ಎಲೌ ಇಂದಿರೆಯೇ! ನೀನೂ ಆ ಮಹಾವ್ರತವನ್ನು ಆಚರಿಸು. ಈಗ ವೃಥಾ ದುಃಖಿಸುತ್ತಾ ಕುಳಿತುಕೊಂಡರೆ ಪ್ರಯೋಜನವಿಲ್ಲ. ನನ್ನ ಮಾತಿನಲ್ಲಿ ದೃಢವಾದ ನಂಬಿಕೆಯನ್ನಿಟ್ಟು ಆತ್ಯಾದರದಿಂದ ಈ ವ್ರತವನ್ನು ಮಾಡು." ॥೩೦೦॥

ಹೀಗೆಂದು ಕಪಿಲಮುನಿಯು ಸುಲಭೋಪಾಯವನ್ನು ಉಪದೇಶಿಸಲು ಲಕ್ಷ್ಮಿಯೇ ಮೊದಲಾದ ದೇವಾಂಗನೆಯರು ಆಗ ಸ್ವಲ್ಪ ಧೈರ್ಯಗೊಂಡರು. ಅನಂತರ ಕಪಿಲಮುನಿಯು ಹೇಳಿದ ರೀತಿಯಲ್ಲಿ ಶ್ರದ್ಧೆಯಿಂದ ಮಹಾವ್ರತವನ್ನು ಮಾಡಲಾರಂಭಿಸಿದರು. ॥೩೦೧॥

ಗರುಡೇನ ಸಮಾನೀತಾ ಸಾಮಗ್ರೀ ವಿಧಿನೋದಿತಾ ।
ತಯಾ ಸಮ್ಯಗ್ವ್ರತಂ ಚೀರ್ಣಂ ಕಪಿಲೇಶಸ್ಯ ಸನ್ನಿಧೌ ॥೩೦೨॥

ತತಃ ಪರಂ ಮುನಿವರಂ ದೃಷ್ಟ್ವಾ ಕಪಿಲನಾಮಕಂ ।
ಪ್ರಾಹ ನಾರಾಯಣಸತೀ ಶಚ್ಯಾದಿಕಸಮನ್ವಿತಾ ॥೩೦೩॥

ವ್ರತಂ ಚೀರ್ಣಂ ಪ್ರಯತ್ನೇನ ವಿಧ್ಯುಕ್ತೈರೇವ ಸಾಧನೈಃ ।
ನಾಂಗಲೋಪೋಽಪಿ ಸಂವೃತ್ತೋ ವಿಭವೋಽಪಿ ಸ್ಥಿತಸ್ತಥಾ ॥೩೦೪॥

ಅದ್ಯಾಪಿ ನಾಗತಾ ಏವ ದೇವಾಃ ಕೇಽಪಿ ಮುನೀಶ್ವರ ।
ಅತಃ ಪರಂ ವ್ರತೇ ತಸ್ಮಿನ್ ವಿಶ್ವಾಸೋಽಪಿ ಕಥಂ ವದ ॥೩೦೫॥

---

ಪೂಜೆಗೆ ಬೇಕಾದ ಸಮಸ್ತ ಸಾಮಗ್ರಿಗಳನ್ನೂ ಗರುಡನು ತಂದು ಸಿದ್ಧ ಮಾಡಿ ಕೊಟ್ಟನು. ಆ ಸಾಮಗ್ರಿಗಳಿಂದ ಲಕ್ಷ್ಮಿಯೇ ಮುಂತಾದವರು ಕಪಿಲೇಶ್ವರ ಸನ್ನಿಧಿಯಲ್ಲಿ ಅತ್ಯಂತ ಪ್ರಶಸ್ತವಾದ ರೀತಿಯಿಂದ ವ್ರತವನ್ನು ಆಚರಿಸಿದರು. ॥೩೦೨॥

ವ್ರತವೆಲ್ಲವೂ ಸಾಂಗವಾಗಿ ನೆರವೇರಿದಮೇಲೆ ಶಚೀದೇವಿಯೇ ಮೊದಲಾದವರಿಂದೊಡಗೂಡಿದ ವಿಷ್ಣುಪತ್ನಿಯು ಕಪಿಲಮುನಿಯನ್ನು ಕುರಿತು ಈರೀತಿ ನುಡಿದಳು. ॥೩೦೩॥

ಮುನಿಶ್ರೇಷ್ಠನೇ! ನೀನು ಹೇಳಿದಂತೆ ವಿಧ್ಯುಕ್ತರೀತಿಯಲ್ಲಿ ವ್ರತವನ್ನು ಮಾಡಿದೆವು. ವಿಧಿವತ್ತಾಗಿ ಸಕಲ ಸಾಮಗ್ರಿಗಳಿಂದ ಸಮಸ್ತ ಪೂಜಾಂಗಗಳನ್ನೂ ನೆರವೇರಿಸಿದ್ದೇವೆ. ನಮ್ಮ ಐಶ್ವರ್ಯಕ್ಕೆ ಅನುಗುಣವಾಗಿ ಒಂದು ಪೂಜಾಂಗವನ್ನೂ ಬಿಡದೇ ವ್ರತವನ್ನು ಆಚರಿಸಿದ್ದೇವೆ. ॥೩೦೪॥

ವ್ರತವು ಸಾಂಗವಾಗಿ ನೆರವೇರಿದ್ದರೂ ಇನ್ನೂ ದೇವತೆಗಳೊಬ್ಬರೂ ತಿರುಗಿ ಬರಲಿಲ್ಲ. ಈಗೇನು ಮಾಡುವುದು? ವ್ರತವನ್ನು ಮಾಡಿಕ ಬಳಿಕ ನಮ್ಮ ಪತಿಗಳು ತಿರುಗಿ ಬಾರದ ಮೇಲೆ ಈ ವ್ರತವನ್ನು ಹೇಗೆ ನಂಬುವುದು? ಹೀಗೆ ಫಲಶೂನ್ಯವಾದರೆ ನಮಗೆ ಈ ವ್ರತದಲ್ಲಿ ನಂಬಿಕೆಯು ಉಂಟಾಗುವುದು ಹೇಗೆ? ॥೩೦೫॥

ವ್ಯಂಗಂ ಚೇತ್ಕ್ರಿಯತೇ ಕರ್ಮ ತದಾ ನ ಫಲಸಂಭವಃ ।
ಸಾಂಗೇಽಪಿ ತತ್ಫಲಾಭಾವಃ ಕಥಂ ವಾ ವದ ಸತ್ವರಂ ॥೩೦೬॥

ನಾರ್ಥವಾದೋಽಪಿ ತತ್ರೇತಿ ಶಪಥೋಽಪಿ ಕೃತಸ್ತ್ವಯಾ ।
ಅತಃ ಪರಂ ಕಿಂ ವಿಧೇಯಮಿತಿಚಿಂತಾಸಮಾಕುಲಾ ॥೩೦೭॥

ತತಃ ಪರಮುವಾಚೇತ್ಥಂ ಕಮಲಾಂ ಕಪಿಲಾಭಿಧಃ ।
ಮುನಿಸ್ತತ್ತ್ವವಿದಾಂ ಶ್ರೇಷ್ಠೋ ವರಿಷ್ಠಶ್ಶಾಂಕರೇಷ್ವಪಿ ॥೩೦೮॥

ಇಂದಿರೇ ಸುರಸಂವೀತಸ್ಸಮಾಯಾಸ್ಯತಿ ತೇ ಪತಿಃ ।
ವಿಷಾದೋ ನೈವ ಕರ್ತವ್ಯಃ ವಿಶ್ವಾಸಂ ಕುರು ತದ್ವ್ರತೇ ॥೩೦೯॥

ತತ್ಸಾದೃಶಂ ವ್ರತಂ ನೈವ ಯೇನೇಷ್ಟಂ ನ ಫಲಂ ಭವೇತ್ ।
ತಸ್ಯ ವ್ರತಸ್ಯ ಮಹಿಮಾ ದ್ರಷ್ಟವ್ಯಶ್ಚ ತ್ವಯಾಧುನಾ ॥೩೧೦॥

---

ಕರ್ಮದಲ್ಲಿ ಅಂಗಲೋಪ ಮಾಡಿದರೆ ಫಲವು ದೊರೆಯುವುದಿಲ್ಲವೆಂಬುದು ನಿಜ. ಆದರೆ ನಾವು ಸರ್ವಾಂಗಸಮೇತವಾಗಿ ವ್ರತಧರ್ಮವನ್ನು ಆಚರಿಸಿರುವೆವು. ಹೀಗಿದ್ದರೂ ನಮಗೆ ಏತಕ್ಕೆ ಫಲ ದೊರೆಯಲಿಲ್ಲ? ಹೇಳು. ॥೩೦೬॥

ಈ ವ್ರತವಿಷಯವಾಗಿ ನಾನು ಹೇಳಿದ ಮಾತಿನಲ್ಲಿ ಅತಿಶಯೋಕ್ತಿಯಾಗಲಿ ಅರ್ಥವಾದವಾಗಲಿ ಕೊಂಚವೂ ಇಲ್ಲವೆಂದು ನೀನೇ ಆಣೆ ಇಟ್ಟು ಹೇಳಿದ್ದೆ. ಆದರೆ ಈಗ ಅದೆಲ್ಲವೂ ನಮ್ಮ ಭಾಗಕ್ಕೆ ವ್ಯರ್ಥವಾದಂತೆ ತೋರುತ್ತಿದೆ. ಈಗ ಮುಂದೇ ನನ್ನು ಮಾಡಬೇಕೆಂಬುದೇ ನನಗೆ ಮಹಾ ಚಿಂತೆಯಾಗಿರುವುದು. ॥೩೦೭॥

ಈ ಪ್ರಕಾರವಾಗಿ ಲಕ್ಷ್ಮಿಯು ಗೋಳಿಟ್ಟು ಮಾತನಾಡಲು ಪರಮಶಿವ ಭಕ್ತಾಗ್ರಣಿಯೂ, ತತ್ತ್ವಜ್ಞಾನಿವರ್ಯನೂ ಆದ ಆ ಕಪಿಲಮುನಿಯು ಈರೀತಿ ಹೇಳಿದನು. ॥೩೦೮॥

ಲಕ್ಷ್ಮಿಯೇ! ಶೀಘ್ರದಲ್ಲಿಯೇ ನಿನ್ನ ಪತಿಯು ಸಮಸ್ತ ದೇವತೆಗಳೊಂದಿಗೆ ತಿರುಗಿ ಬರುವನು. ಚಿಂತಿಸಬೇಡ, ಈ ಮಹಾವ್ರತದಲ್ಲಿ ನಿನಗೆ ದೃಢವಾದ ನಂಬಿಕೆಯಿರಲಿ. ॥೩೦೯॥

ಈ ವ್ರತವು ಅತ್ಯಂತ ಮಹತ್ತರವಾದದ್ದು. ಇದರಿಂದ ಎಂದಿಗೂ ಫಲವುಂಟಾಗದೇ ಇರುವುದಿಲ್ಲ. ಇದರ ಫಲವು ಶೀಘ್ರದಲ್ಲಿಯೇ ನಿನಗೆ ಲಭಿಸುವುದು. ಈ

ಏತಸ್ಮಿನ್ನಂತರೇ ಕಾಲೇ ದುಂದುಂಭಿಧ್ವನಿರುತ್ಥಿತಃ ।
ಶ್ರುತಸ್ತಯಾ ಕಮಲಯಾ ಸುರದಾರೈಶ್ಚ ತೈರಪಿ ॥೩೧೧॥

ತತಃ ಪರಂ ಪ್ರಹೃಷ್ಟಾ ಸಾ ವಿಲೋಕ್ಯ ಗರುಡಂ ಮುಹುಃ ।
ಕ್ವತ್ಯೋಽಯಂ ಧ್ವನಿರಿತ್ಯಾಹ ಕಮಲಾ ವಿಮಲಾನನಾ ॥೩೧೨॥

ಸೋಽಪಿ ಶ್ರುತ್ವಾ ಧ್ವನಿಂ ತಸ್ಯಾಃ ಶ್ರುತ್ವಾ ಚ ವಚನಂ ಮುದಾ ।
ತಾಮಾಹ ಪ್ರಣತೋ ಭಕ್ತ್ಯಾ ದುಂದುಭಿಧ್ವನಿರಿತ್ಯಪಿ ॥೩೧೩॥

ತತಸ್ಸ ನತ್ವಾ ಕಮಲಾಂ ಕಪಿಲಂ ಕಪಿಲೇಶ್ವರಂ ।
ತದ್ರವಾಭಿಮುಖೋ ಭೂತ್ವಾ ಗರುಡಃ ಪ್ರಯಯೌ ತದಾ ॥೩೧೪॥

---

ವ್ರತದ ಮಹಿಮೆಯನ್ನು ಈಗಲೇ ನೀನು ಪರೀಕ್ಷಿಸಿ ನೋಡುವೆಯಂತೆ. ಸ್ವಲ್ಪ ನಿಧಾನಿಸು. ||೩೧೦||

ಹೀಗೆಂದು ಕಪಿಲಮುನಿಯು ಹೇಳುತ್ತಿರುವಾಗಲೇ ದೂರದಿಂದ ದುಂದುಭಿಯೇ ಮೊದಲಾದ ವಾದ್ಯಗಳ ಧ್ವನಿಯು ಕೇಳಿಸಿತು. ಲಕ್ಷ್ಮಿಯೂ ಮತ್ತಿತರ ದೇವಾಂಗನೆಯರೂ ಅತ್ಯುತ್ಸುಕತೆಯಿಂದ ಅದೇ ಧ್ವನಿಯನ್ನೇ ಆಲಿಸಿ ಕೇಳಿದರು. ||೩೧೧||

ಆ ಮಂಗಳಧ್ವನಿಯನ್ನು ಕೇಳಿದೊಡನೆಯೇ ಲಕ್ಷ್ಮಿಗೆ ಏನೋ ಒಂದು ಬಗೆಯ ಅನಿರ್ವಚನೀಯವಾದ ಆನಂದ ಸಂಚಾರವಾದಂತಾಯಿತು. ಆಗ ಅವಳು ಗರುಡನನ್ನು ಕುರಿತು, ಈ ಧ್ವನಿಯು ಎಲ್ಲಿನದೆಂದು ನೋಡೆಂದು ಆಣತಿಯನ್ನಿತ್ತಳು. ||೩೧೨||

ಲಕ್ಷ್ಮಿಯ ಅಪ್ಪಣೆಯನ್ನು ಕೇಳಿದೊಡನೆಯೇ ಗರುಡನು ಧ್ವನಿಯನ್ನು ಆಲಿಸಿ, ದುಂದುಭಿಯ ಧ್ವನಿಯೇ ಇದು ಎಂದು ಪರಿಚಯವಾದ ಕೂಡಲೇ ಲಕ್ಷ್ಮಿಗೆ ನಮಸ್ಕರಿಸಿ, ಸಂತೋಷಪೂರ್ವಕವಾಗಿ ಇದು ದುಂದುಭಿಧ್ವನಿಯೆಂದು ತಿಳಿಸಿದನು. ||೩೧೩||

ಆಗ ಗರುಡನು ಅತ್ಯಂತ ಆನಂದದಿಂದ ಲಕ್ಷ್ಮಿಗೂ, ಕಪಿಲಮುನಿಗೂ, ಕಪಿಲೇಶ್ವರನಿಗೂ ನಮಸ್ಕರಿಸಿ ಅತ್ಯಂತ ತವಕದಿಂದ ಆ ಧ್ವನಿಯ ಕಡೆ ನೋಡಲು ಹೊರಟನು. ||೩೧೪||

ತತೋ ದೂರಾದ್ವಿನಿಶ್ಚಿತ್ಯ ಸುರಾಗಮನಮಾದರಾತ್ ।
ಆಗತಾನಮರಾನಾಹ ಲಕ್ಷ್ಮೀಂ ಕುಶಲಪೂರ್ವಕಂ ॥೩೧೫॥

ತತಃ ಪ್ರಸನ್ನವದನಾ ಕಮಲಾ ಕಪಿಲೇಶ್ವರಂ ।
ನತ್ವಾ ತಂ ಕಪಿಲಂ ಪ್ರಾಹ ಕೃತಾಂಜಲಿಪುಟಾ ತದಾ ॥೩೧೬॥

ವ್ರತೋತ್ತಮೋಪದೇಶೇನ ಧನ್ಯಾಸ್ಮಿ ಮುನಿಪುಂಗವ ।
ಅವಿಶ್ವಾಸಲಯೋ ಜಾತೋ ವಿಶ್ವಾಸೋ ಮೇ ಪ್ರವರ್ಧತೇ ॥೩೧೭॥

ದೇವಾಸ್ಸಮಾಗತಾಸ್ಸರ್ವೇ ಜೀವಿತಾಶ್ಶಿವಪೂಜಯಾ ।
ಧನ್ಯಂ ವ್ರತಮಿದಂ ಧನ್ಯಂ ಧನ್ಯಂ ಧನ್ಯಂ ವ್ರತೋತ್ತಮಂ ॥೩೧೮॥

---

ಗರುಡನು ಸ್ವಲ್ಪ ದೂರದ ವರೆಗೆ ಹೋಗಿ ದೂರದಿಂದಲೇ ದೇವತೆಗಳು ಬರುತ್ತಿರುವರೆಂಬುದನ್ನು ತಿಳಿದುಕೊಂಡನು. ಒಡನೆಯೇ ಅತ್ಯಂತ ಉತ್ಸಾಹದಿಂದ ಲಕ್ಷ್ಮಿಯ ಬಳಿಗೆ ಓಡಿಬಂದು, ದೇವತೆಗಳು ಬಂದರೆಂಬ ಸಂತೋಷವಾರ್ತೆಯನ್ನು ತಿಳಿಸಿದನು. ॥೩೧೫॥

ಸಂತೋಷ ಸುದ್ದಿಯನ್ನು ಕೇಳಿದೊಡನೆ ಲಕ್ಷ್ಮಿಗೆ ಪರಮಾನಂದವಾಯಿತು. ಆಗ ಅವಳು ಮೊದಲು ಕಪಿಲೇಶ್ವರನಿಗೆ ವಂದಿಸಿ, ಬಳಿಕ ಕಪಿಲಮುನಿಯನ್ನು ಕುರಿತು ನಮಸ್ಕಾರಪೂರ್ವಕವಾಗಿ ಈರೀತಿ ನುಡಿದಳು. ॥೩೧೬॥

"ಎಲೈ ಮುನಿವರ್ಯನೇ! ಉತ್ತಮೋತ್ತಮವಾದ ವ್ರತವನ್ನು ಉಪದೇಶಿಸಿ ನನ್ನನ್ನು ಉದ್ಧಾರಮಾಡಿದೆ. ಇಂದು ನಾನು ಧನ್ಯಳಾದೆನು. ನನಗೆ ಈ ವ್ರತದ ವಿಷಯದಲ್ಲಿ ಅಪನಂಬಿಕೆಯು ದೂರವಾಯಿತು. ಈಗ ನಾನು ಸಂಪೂರ್ಣವಾಗಿ ವ್ರತದ ಮಹಿಮೆಯನ್ನು ನಂಬಿದ್ದೇನೆ. ॥೩೧೭॥

ಈ ವ್ರತದ ಮಾಹಾತ್ಮ್ಯೆಯಿಂದ ದೇವತೆಗಳೆಲ್ಲರೂ ತಿರುಗಿ ಬದುಕಿ ಬಂದರು. ಶಿವಾರ್ಚನೆಯ ದೆಸೆಯಿಂದ ದೇವತೆಗಳು ಪುನರುಜ್ಜೀವಿತರಾದರು. ಆಹಾ, ಈ ವ್ರತೋತ್ತಮದ ಮಹಿಮೆಯು ಎಷ್ಟು ಅದ್ಭುತವಾದುದು! ಈ ವ್ರತವೇ ಧನ್ಯವು. ಶತಶಃ ಧನ್ಯವಾದದ್ದು. ॥೩೧೮॥

ನ ಜಾನೇ ನ ಜಾನೇ ನ ಜಾನೇ ನ ಜಾನೇ
ನ ಜಾನೇ ನ ಜಾನೇ ಶಿವಾನ್ಯಂ ನ ಜಾನೇ ।
ಶಿವಾರಾಧನೇನೈವ ಸೌಖ್ಯಪ್ರವೃದ್ಧಿಃ
ಶಿವಾರಾಧನೇನೈವ ಸಂಪತ್ಸಮೃದ್ಧಿಃ ॥೩೧೯॥

ಶಿವಾರಾಧನೇನೈವ ದೇವಾಸ್ಸಜೀವಾಃ
ಶಿವಾರಾಧನಂ ತತ್ರ ಸಂಜೀವನೀ ಚ ।
ವ್ರತಸ್ಯಾಸ್ಯ ಮಾಹಾತ್ಮ್ಯಮತ್ಯದ್ಭುತಂ ಚ
ಪ್ರಕೃಷ್ಟಂ ಪ್ರಯುಂಜಾನಮೇವಂ ಕಥಂ ವಾ ॥೩೨೦॥

ವ್ರತಾನಾಮಿದಂ ತಾವದತ್ಯುತ್ತಮಂ ಹಿ
ವ್ರತಂ ಶ್ರೇಷ್ಠಮೇತತ್ಕೃತಂ ದೈವಯೋಗಾತ್ ।
ಮೃತಾ ಯೇನ ದೇವಾಃ ಪುನಸ್ತೇನ ಸರ್ವೇ
ಕಥಂ ವಾ ಪ್ರಜಾತಾಃ ಕಥಂ ವಾಸ್ಯ ಶಕ್ತಿಃ ॥೩೨೧॥

---

ಶಿವನನ್ನು ಮೀರಿಸಿರುವವನನ್ನು ನಾನು ಕಾಣೆ. ಶಿವನಂತೆ ಆಪದ್ಬಾಂಧವನನ್ನು ನಾ ಕಾಣೆ. ಶಿವನಷ್ಟು ಮಹಿಮಾಶಾಲಿಯನ್ನು ಬೇರೆ ನೋಡೆನು. ಶಿವನೇ ಸರ್ವೋತ್ತಮನೂ, ಆಪದ್ಬಾಂಧವನೂ, ಪರಮ ಮಹಿಮಾ ಶಾಲಿಯೂ ಆಗಿರುವನು. ಆ ಪರಶಿವನ ಆರಾಧನೆಯಿಂದಲೇ ನಮ್ಮ ಸೌಖ್ಯವು ಅಭಿವೃದ್ಧಿಯಾಗುವುದು. ಶಿವಾರ್ಚನೆಯಿಂದಲೇ ನಮ್ಮ ಐಶ್ವರ್ಯಗಳು ಅಭಿವೃದ್ಧವಾಗುವುವು. ॥೩೧೯॥

ಶಿವನನ್ನು ಆರಾಧಿಸಿದ್ದರಿಂದಲೇ ಈಗ ದೇವತೆಗಳು ಬದುಕಿಬಂದರು. ದೇವತೆಗಳ ಪುನರ್ಜೀವನದಲ್ಲಿ ಶಿವಾರಾಧನೆಯು ಸಾಕ್ಷಾತ್ ಸಂಜೀವನೌಷಧದ ಕೆಲಸವನ್ನು ಮಾಡಿತು. ಈ ತೃತೀಯಾವ್ರತದ ಮಾಹಾತ್ಮ್ಯವು ಅತ್ಯದ್ಭುತವೆಂಬುದು ಈಗ ಮನವರಿಕೆಯಾಯಿತು. ಕಪಿಲಮುನಿಯೇ! ಇಂಥ ಲೋಕೋತ್ತರವಾದ ಉಪಾಯವನ್ನು ನಮಗೆ ಹೇಗೆ ಉಪದೇಶಿಸಿದೆ! ನೀನು ಪರಮ ತತ್ತ್ವಜ್ಞಾನಿ ಎಂಬುದರಲ್ಲಿ ಸಂದೇಹವಿಲ್ಲ. ನಾವೂ ಸಹ ಇಂದು ಸುಖಿಗಳಾದೆವು. ॥೩೨೦॥

ಈ ವ್ರತವು ಅತ್ಯುತ್ತಮವೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ನಾವು ಒಳ್ಳೆಯ ಅದೃಷ್ಟದಿಂದ ಈ ವ್ರತವನ್ನು ಆಚರಿಸಿದೆವು. ಈ ವ್ರತದ ದೆಸೆಯಿಂದಲೇ ದೇವತೆಗಳು ಮೃತರಾಗಿದ್ದರೂ ಮತ್ತೆ ಬದುಕಿ ಎದ್ದು ಬಂದಿರುತ್ತಾರೆ. ಈ ವ್ರತವು ಅವರನ್ನು

ಅಹೋ ನ ಜಾನಂತಿ ವಿಮೂಢಚಿತ್ತಾಃ
ಶಿವಪ್ರಭಾವಂ ಶಿವಪೂಜನಸ್ಯ ।
ಸಾಮರ್ಥ್ಯಮೇವಂ ಮೃತಜೀವನಾಯ
ವ್ರತಂ ಚ ತೇನೋಕ್ತಮಿದಂ ಪ್ರಕೃಷ್ಟಂ ॥೩೨॥

ಇತ್ಯಾನಂದವಚೋವೀಚೀಸುಧಾಪಾನರತಾ ತದಾ ।
ಕಮಲಾಪಿ ತದಾ ದೇವಾಸ್ಸರ್ವೇ ತೇ ಸಮುಪಾಗತಾಃ ॥೩೩॥

ಆಗತ್ಯ ತೇ ಸುರಾಸ್ಸರ್ವೇ ನತ್ವಾ ತಂ ಕಪಿಲೇಶ್ವರಂ ।
ಪುಷ್ಪಾದ್ಯೈಃ ಪೂಜಯಾಮಾಸುರ್ಜೀವಿತಾಃ ಸ್ಮಸ್ತ್ವಯೇತ್ಯಪಿ ॥೩೪॥

ತತಃ ಪರಂ ಮುನಿಂ ನತ್ವಾ ಕಪಿಲಂ ಭಸ್ಮಭೂಷಿತಂ ।
ರುದ್ರಾಕ್ಷಭೂಷಣಂ ಶೈವಂ ಪ್ರಾಹುಶ್ಶಾಂಭವಸಂಯುತಂ ॥೩೫॥

---

ಹೇಗೆ ಸಂಜೀವನಗೊಳಿಸಿತು. ಈ ವ್ರತಕ್ಕೆ ಅಂಥ ಸಾಮರ್ಥ್ಯವು ಹೇಗೆ ಉಂಟಾಗಿದೆ? ನಮಗೆ ಇದೆಲ್ಲವೂ ಪರಮಾದ್ಭುತವೇ ಆಗಿದೆ. ॥೩೧॥

ಆಹಾ, ಎಷ್ಟೋ ಜನ ಅಜ್ಞಾನಿಗಳು ಇಂಥ ಶಿವಮಹಿಮೆಯನ್ನೂ ಶಿವಾರ್ಚನೆಯ ಮಾಹಾತ್ಮ್ಯೆಯನ್ನೂ ತಿಳಿಯದೇ ಮೂಢರಾಗಿರುವರಲ್ಲ! ಹೀಗೆ ಈ ವ್ರತವನ್ನು ಸಾಕ್ಷಾತ್ ಶಿವನೇ ಮೃತಸಂಜೀವಿನಿಯನ್ನಾಗಿ ಉಪದೇಶಿಸಿದ್ದಾನೆ. ಆಹಾ,-ಆ ಶಿವನು ಎಂಥಾ ದಯಾಮಯನಾಗಿದ್ದಾನೆ.” ॥೩೨॥

ಹೀಗೆ ಲಕ್ಷ್ಮಿಯು ವಚನಸುಧಾಲಹರಿಯನ್ನು ಅತ್ಯಾದರದಿಂದ ಪಾನಮಾಡಿಕೊಂಡು ಆನಂದ ಪಡುತ್ತಿರಲು ಆ ವೇಳೆಗೆ ಸರಿಯಾಗಿ ಸಮಸ್ತ ದೇವತೆಗಳೂ ಬಂದು ಸೇರಿದರು. ॥೩೩॥

ಆ ದೇವತೆಗಳು ಬಂದೊಡನೆಯೇ ಕಪಿಲೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿದರು. ಮತ್ತು ದೇವನೇ, ನಿನ್ನ ದಯೆಯಿಂದಲೇ ನಾವು ಪುನಃ ಜೀವಂತರಾದೆವು ಎಂದು ಸ್ತುತಿಸುತ್ತಾ ಪುಷ್ಪಾದಿಗಳಿಂದ ಪೂಜಿಸಿದರು. ॥೩೪॥

ಅಲ್ಲಿಯೇ ಕಪಿಲಮುನಿಯೂ ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ಶಾಂಭವರೊಡನೆ ಶಿವಚಿಂತನ ಮಾಡುತ್ತಾ ಕುಳಿತಿದ್ದನು. ದೇವತೆಗಳು ಮುನಿಯನ್ನು ಕಂಡೊಡನೆಯೇ ಭಕ್ತಿಯಿಂದ ನಮಸ್ಕರಿಸಿ ಈ ರೀತಿ ಹೇಳಿದರು. ॥೩೫॥

॥ ದೇವಾ ಊಚುಃ ॥

ಶಾಂಭವಾಯ ನಮಸ್ತುಭ್ಯಂ ಶಂಭುಪೂಜಾಪರಾಯ ಚ ।
ಭೂತಿಭೂಷಿತದೇಹಾಯ ರುದ್ರಾಕ್ಷಾಭರಣಾಯ ಚ ॥೩೨೬॥

ತತ್ತ್ವಜ್ಞಸ್ತ್ವಾದೃಶೋ ಲೋಕೇ ನ ದೃಷ್ಟೋ ನ ಶ್ರುತೋ ಯತಃ ।
ವ್ರತಮುಕ್ತಂ ತ್ವಯಾ ಶೈವಮಸ್ಮಜ್ಜೀವನಸಾಧನಂ ॥೩೨೭॥

ಯದುಕ್ತಂ ತದ್ವ್ರತಂ ಚೀರ್ಣಂ ಸುರದಾರೈರ್ವಿಶೇಷತಃ ।
ತೇನೈವ ಜೀವನಂ ಜಾತಮಾಗತಂ ಚ ಮುದಾಧುನಾ ॥೩೨೮॥

ದೀರ್ಘನಿದ್ರಾಪ್ರವಿಷ್ಟಾನಾಂ ಜೀವನಾಯ ಸಮೀರಿತಂ ।
ಶಾಂಭವಂ ವ್ರತಮೇತಾವದ್ವ್ರತಾನಾಮುತ್ತಮಂ ವ್ರತಂ ॥೩೨೯॥

ಶೇಷೇಣ ತಾವದಸ್ಮಭ್ಯಮುಕ್ತಮೇತದ್ವ್ರತಂ ಕೃತಂ ।
ಸುರದಾರೈಸ್ತ್ವಯಾ ಪ್ರೋಕ್ತಮಿತಿ ಪೀಯೂಷಸನ್ನಿಭಂ ॥೩೩೦॥

---

ಶಿವಭಕ್ತಾಗ್ರಣಿಯಾದ ಕಪಿಲಮುನಿಯೇ, ನಿನ್ನನ್ನು ವಂದಿಸುವೆವು. ಶಿವಪೂಜಾಪರಾಯಣನೂ, ಭಸ್ಮರುದ್ರಾಕ್ಷಧಾರಿಯೂ, ಸಕಲ ಶಿವಧರ್ಮನಿಷ್ಠನೂ ಆದ ನಿನಗೆ ಶತಶಃ ನಮಸ್ಕಾರಗಳು. ॥೩೨೬॥

ನಿನ್ನಂಥ ತತ್ವಜ್ಞಾನಿಯನ್ನು ಮತ್ತೆಲ್ಲಿಯೂ ನಾವು ನೋಡಿವು, ಅರಿಯೆವು. ಪರಮಜ್ಞಾನಿಯಾದ ನೀನು ನಮ್ಮ ಪುನರ್ಜೀವನಪ್ರದವಾದ ವ್ರತವನ್ನು ಉಪದೇಶಿಸಿರುವೆ. ॥೩೨೭॥

ನಮ್ಮ ದೇವಾಂಗನೆಯರು ನೀನು ಉಪದೇಶಿಸಿದ ವ್ರತವನ್ನು ಆದರದಿಂದ ಆಚರಿಸಿದರು. ಆ ಪುಣ್ಯದಿಂದಲೇ ನಾವು ಪುನಃ ಜೀವಂತರಾಗಿ ತಿರುಗಿಬರುವಂತಾಯಿತು. ॥೩೨೮॥

ದೀರ್ಘನಿದ್ರಾರೂಪವಾದ ಮರಣವನ್ನು ಹೊಂದಿದ್ದರೂ ಪುನರ್ಜೀವನೋಪಾಯವಾಗಿ ಈ ಶೈವಮಹಾವ್ರತವು ನಮಗೆ ಉಪದಿಷ್ಟವಾಯಿತು. ಆದ್ದರಿಂದ ಈ ವ್ರತವು ಉತ್ತಮೋತ್ತಮವೆಂಬುದರಲ್ಲಿ ಸಂದೇಹವೇ ಇಲ್ಲ. ॥೩೨೯॥

ಈ ಮಹಾವ್ರತವನ್ನು ನೀನು ದೇವಾಂಗನೆಯರಿಗೆ ಉಪದೇಶಿಸಿದೆ ಎಂದೂ, ದೇವಾಂಗನೆಯರೆಲ್ಲರೂ ಈ ಅಮೃತತುಲ್ಯವಾದ ವ್ರತವನ್ನು ಆಚರಿಸಿದರೆಂಬ ಸಮಾಚಾರವನ್ನೂ ಸಹ ನಮಗೆ ಆದಿಶೇಷನು ತಿಳಿಸಿದನು. ॥೩೩೦॥

ಅಕಸ್ಮಾದೇತದುತ್ಥಾನಂ ಯದಾ ಸಮಭವತ್ತದಾ ।
ಕಿಂ ಕೃತಂ ವ್ರತಮಿತ್ಯೇವ ದಾರೈರಿತಿ ವಿಚಾರಿತಂ ॥೩೩೧॥

ಮೃತ್ಯುಂಜಯವ್ರತೇನೈವ ಮೃತ್ಯುಂ ತರತಿ ಸರ್ವಥಾ ।
ನಾನ್ಯಥೇತ್ಯಪಿ ನಿರ್ಣೀತಂ ತತ್ತಥೈವಾಭವನ್ಮನೇ ॥೩೩೨॥

ಅತಃ ಪರಂ ಜೀವನಂ ತು ಜಾತಮೇವ ಶಿವಾಜ್ಞಯಾ ।
ಕಥಂ ಸ್ವಸ್ವಾಲಯಪ್ರಾಪ್ತಿರ್ಭವಿಷ್ಯತಿ ವದಾಧುನಾ ॥೩೩೩॥

ಇತಿ ತದ್ವಚನಂ ಶ್ರುತ್ವಾ ಕಪಿಲೋ ಮುನಿಪುಂಗವಃ ।
ಪ್ರಾಹ ಗಂಭೀರಯಾ ವಾಣ್ಯಾ ವಾಣೀಪತಿಮುಖಾನ್ ಸುರಾನ್ ॥೩೩೪॥

---

ನಾವು ಸಂಪೂರ್ಣವಾಗಿ ಮೂರ್ಛಿತರಾಗಿ ಬಿದ್ದಿದ್ದವರು ಯಾವಾಗ ಅಕಸ್ಮಾತ್ ಎಚ್ಚರಿಕೆಯನ್ನು ಪಡೆದು ಎದ್ದೆವೋ ಆಗಲೇ ನಾವು, ನಮ್ಮ ಪತ್ನಿಯರು ಯಾವುದೋ ಒಂದು ಮಹಾವ್ರತವನ್ನು ಮಾಡಿದ್ದಾರೆಂದು ಊಹಿಸಿದೆವು. ಮತ್ತು ಇದನ್ನೇ ಆದಿಶೇಷನ ಸಂಗಡ ಪ್ರಸ್ತಾಪಿಸಿದೆವು. ॥೩೩೧॥

ಶಿವವ್ರತವೆಂಬುದೊಂದರಿಂದಲೇ ಮೃತ್ಯುವನ್ನು ದಾಟಬಹುದೆಂಬುದನ್ನೂ, ಗೆಲ್ಲಬಹುದೆಂಬುದನ್ನೂ ನಾವು ಆಗಲೇ ಅಲ್ಲಿ ನಿರ್ಣಯಿಸಿಕೊಂಡೆವು. ಇಂಥ ಅಪೂರ್ವಲಾಭವು ಮತ್ತೆ ಯಾವುದರಿಂದಲೂ ಸಾಧ್ಯವಾಗುವುದಿಲ್ಲವೆಂಬುದನ್ನೂ ನಾವು ತಿಳಿದುಕೊಂಡೆವು. ಈಗ ನಮ್ಮ ಆ ನಿರ್ಣಯವೆಲ್ಲವೂ ನಿಜವೇ ಆಯಿತು. ॥೩೩೨॥

ಅಂತು ಈ ಬಗೆಯಾಗಿ ಶಿವಾಜ್ಞೆಯಿಂದಲೂ, ಶಿವಾನುಗ್ರಹದಿಂದಲೂ ನಾವು ಪುನಃ ಜೀವಂತರಾಗಿ ಬದುಕಿ ಬಂದೆವು. ಈಗ ನಾವು ನಮ್ಮ ನಮ್ಮ ಲೋಕವನ್ನೂ ಸ್ಥಾನಮನೆಗಳನ್ನು ಪಡೆಯುವುದೆಂತು ? ಅದಕ್ಕೇನು ಉಪಾಯವೆಂಬುದನ್ನು ಉಪದೇಶಿಸು." ॥೩೩೩॥

ಈ ಪ್ರಕಾರವಾಗಿ ದೇವತೆಗಳು ವಿನಯದಿಂದ ಕೇಳಿಕೊಳ್ಳಲು, ಕಪಿಲ ಮಹಾಮುನಿಯು ಬ್ರಹ್ಮನೇ ಮೊದಲಾದವರನ್ನು ಕುರಿತು ಗಂಭೀರವಾಗಿ ಈರೀತಿ ಹೇಳಿದನು. ॥೩೩೪॥

ಶಿವಾರಾಧನಸಾಮರ್ಥ್ಯಂ ನ ಜ್ಞಾತಂ ನಿಗಮೈರಪಿ ।
ಅತಃ ಕಥಂ ತದನ್ಯೇನ ಜ್ಞೇಯಂ ಭವತಿ ತತ್ತ್ವತಃ ॥೩೩೫॥

ಮಹಾದೇವಃ ಕೃಪಾಸಿಂಧುರ್ಯದಾ ಜೀವನಮಿಚ್ಛತಿ ।
ಸುರಾಣಾಮಸುರಾಣಾಂ ಚ ತದಾ ಭವತಿ ಜೀವನಂ ॥೩೩೬॥

ಉಪಾಯಮಪಿ ವಕ್ಷ್ಯಾಮಿ ದೈತ್ಯಾನಾಂ ವಿಜಯೇ ಸುರಾಃ ।
ಸ್ವದಾರಸಹಿತಾಸ್ತಾವತ್ತಿಷ್ಠಂತು ಸುಖಿನೋಽಧುನಾ ॥೩೩೭॥

ಇತಿ ತದ್ವಚನಂ ಶ್ರುತ್ವಾ ಪೂಜಯಿತ್ವಾ ಮಹೇಶ್ವರಂ ।
ನತ್ವಾ ತಂ ಮುನಿಶಾರ್ದೂಲಂ ಸ್ವಕಲತ್ರೈಸ್ಸಮನ್ವಿತಾಃ ॥೩೩೮॥

ಸ್ವಸ್ವಾಂಗನಾಂಗಸಂಗೇನ ತತ್ತದಾಲಿಂಗನೈರಪಿ ।
ಸುಧಾಪಾನೈಶ್ಚ ಸಂತುಷ್ಟಾಸ್ಸರ್ವೇ ನಾರಾಯಣಾದಯಃ ॥೩೩೯॥

---

"ಎಲೈ ದೇವತೆಗಳಿರಾ! ಆ ಶಿವಾರ್ಚನೆಯ ಸಾಮರ್ಥ್ಯವನ್ನೂ, ಮಹಿಮೆಯನ್ನೂ ಸಾಕ್ಷಾತ್ ವೇದಗಳೇ ಸಮಗ್ರವಾಗಿ ತಿಳಿಯಲಾರವು. ಅಂದಮೇಲೆ ಮತ್ತಿತರಿಗೆ ಅದರ ತತ್ತ್ವಜ್ಞಾನವು ಹೇಗೆ ಗೋಚರವಾದೀತು? ॥೩೩೫॥

ಆ ಸರ್ವಸ್ವತಂತ್ರನಾದ ಮಹಾದೇವನ ಸಂಕಲ್ಪದಲ್ಲಿ ಏನೇನಿರುವುದೋ ಅದೆಲ್ಲವೂ ನಡೆದೇ ತೀರುವುದು. ದೇವತೆಗಳೇ ಆಗಿರಲಿ, ದೈತ್ಯರೇ ಆಗಿರಲಿ, ಇವರು ಬದುಕಬೇಕೆಂದು ಆ ಶಿವನ ಇಚ್ಛೆ ಇದ್ದರೆ ಬದುಕುವರು. ಇಲ್ಲದಿದ್ದರೆ ಇಲ್ಲ. ॥೩೩೬॥

ನಿಮ್ಮ ಕೋರಿಕೆಯ ಮೇರೆಗೆ ದೈತ್ಯರನ್ನು ಗೆಲ್ಲುವುದಕ್ಕೆ ಉಪಾಯವನ್ನೂ ನಾನು ಹೇಳಿಕೊಡುವೆನು. ಆದರೆ ಈಗ ನೀವು ಕೆಲವು ಕಾಲ ನಿಮ್ಮ ನಿಮ್ಮ ಪತ್ನಿಯರೊಂದಿಗೆ ಸುಖವಾಗಿ ಆನಂದವನ್ನನುಭವಿಸಿರಿ." ॥೩೩೭॥

ಈರೀತಿಯಾಗಿ ಕಪಿಲ ಮುನಿಯು ಸಮಯೋಚಿತವಾಗಿ ಹೇಳಲು ದೇವತೆಗಳೆಲ್ಲರೂ ಅಪ್ಪಣೆ ಆದಂತೆ ಆಗಲಿ ಎಂದು ಒಪ್ಪಿಕೊಂಡು, ಬಳಿಕ ಶಿವಾರ್ಚನೆಯನ್ನು ಮಾಡಿ, ಕಪಿಲಮುನಿಗೆ ನಮಸ್ಕರಿಸಿ, ದೇವತೆಗಳು ತಮ್ಮ ತಮ್ಮ, ಪತ್ನಿಯರೊಂದಿಗೆ ಸುಖವಾಗಿ ವಿಹರಿಸಿದರು. ॥೩೩೮॥

ಆಗ ದೇವತೆಗಳು ಅಮೃತಪಾನ ಮಾಡಿ ಸಮಸ್ತ ಆಯಾಸಗಳನ್ನೂ ಕಳೆದುಕೊಂಡು ತಮ್ಮ ತಮ್ಮ ಪತ್ನಿಯರ ಸಂಗಡ ಆಲಿಂಗನವೇ ಮೊದಲಾದ ಕ್ರೀಡಾವಿಲಾಸಗಳನ್ನು ನಡೆಸುತ್ತಾ ಆನಂದಿಸಿದರು. ॥೩೩೯॥

ತತಸ್ಸಂತುಷ್ಟಹೃದಯಾಃ ಕೃತಕೃತ್ಯಾಶ್ಚ ತೇ ಸುರಾಃ ।
ನತ್ವಾ ತಂ ಕಪಿಲಂ ಪ್ರಾಹುಃ ಕೃತಾಂಜಲಿಪುಟಾಃ ಪುನಃ ॥೩೪೦॥

ಪ್ರಚಂಡನಗರಾಪಾರಜ್ವಾಲಾಮಾಲಾಸಮಾಕುಲಾಃ ।
ಮುನೇ ವಯಂ ಸುರಾಸ್ಸರ್ವೇ ಜೀವನಂ ಚ ಗತಂ ಖಲು ॥೩೪೧॥

ಶಿವವ್ರತಪ್ರಸಾದೇನ ಪುನರ್ಜಾತಂ ಚ ಜೀವನಂ ।
ಅತಃ ಪರಂ ಕಥಂ ತಸ್ಯ ಬಲಹಾನಿರ್ಭವಿಷ್ಯತಿ ॥೩೪೨॥

ಸುರಾಶ್ಶೃಣ್ವಂತು ಮದ್ವಾಕ್ಯಂ ಪ್ರಚಂಡಃ ಪ್ರಬಲೋ ಮಹಾನ್ ।
ತತಃ ಪರಾಜಯಸ್ತಸ್ಯ ಕಥಂ ಸಂಭಾವಿತೋ ವದ ॥೩೪೩॥

---

ಹೀಗೆಯೇ ಕೆಲವುಕಾಲ ದೇವತೆಗಳು ನಿಶ್ಚಿಂತರಾಗಿ ಸುಖೋಪಭೋಗಗಳನ್ನನುಭವಿಸಿ, ಅನಂತರ ಒಂದು ದಿನ ಅವರೆಲ್ಲರೂ ಕಪಿಲ ಮುನಿಯ ಬಳಿಗೆ ಬಂದು ನಮಸ್ಕರಿಸಿ ಅಂಜಲಿಬದ್ಧರಾಗಿ ನಿಂತು ಈರೀತಿ ವಿನಯದಿಂದ ಹೇಳಿದರು. ॥೩೪೦॥

" ಮುನಿವರ್ಯನೇ ! ಪ್ರಚಂಡ ದೈತ್ಯನು ಅತ್ಯಂತ ಪ್ರಬಲನಾಗಿರುವನು. ನಾವು ದೇವತೆಗಳೆಲ್ಲರೂ ಕೇವಲ ಆ ದೈತ್ಯನ ಪಟ್ಟಣದ ಜ್ವಾಲೆಯಿಂದಲೇ ಬೆಂದು ಹೋದೆವು. ಮತ್ತು ಮರಣವನ್ನೂ ಸಹ ಹೊಂದಿಬಿಟ್ಟೆವು. ॥೩೪೧॥.

ಅನಂತರ ಏನೋ ಅದೃಷ್ಟವಶಾತ್ ಶಿವವ್ರತದ ದೆಸೆಯಿಂದ ನಾವೆಲ್ಲರೂ ಬದುಕಿಕೊಂಡೆವು. ಆದರೆ ಈಗ ಆ ದೈತ್ಯನನ್ನು ಗೆಲ್ಲುವುದು ಹೇಗೆ ? ಆತನ ಬಲ ಪರಾಕ್ರಮಗಳು ಕುಂಠಿತವಾಗಿ ಅವನು ನಾಶವಾಗುವುದು ಹೇಗೆ ? ಅದಕ್ಕೆ ಯಾವ ಉಪಾಯವನ್ನು ಮಾಡಬೇಕು ? ನೀನೇ ಈಗ ನಮಗೆ ಗತಿಯನ್ನು ಕಾಣಿಸಬೇಕು" ಹೀಗೆಂದು ದೇವತೆಗಳು ಪ್ರಾರ್ಥಿಸಿಕೊಳ್ಳಲು ಕಪಿಲನು ಈರೀತಿ ನುಡಿದನು. ॥೩೪೨॥

ಎಲೈ ದೇವತೆಗಳೇ ! ಸುಮ್ಮನೇ ದುಡುಕಿದರೆ ಪ್ರಯೋಜನವಿಲ್ಲ. ನಾನು ಹೇಳುವುದನ್ನು ಕೇಳಿ ಚೆನ್ನಾಗಿ ಪರ್ಯಾಲೋಚಿಸಿರಿ. ಪ್ರಚಂಡ ದೈತ್ಯನು ಅಷ್ಟೊಂದು ಬಲಿಷ್ಠನಾಗಿರಲು ಆತನು ಹೇಗೆ ಪರಾಜಿತನಾದನು ? ಆತನನ್ನು ಗೆಲ್ಲುವುದು ತಾನೇ ಹೇಗೆ ಸಾಧ್ಯ ? ॥೩೪೩॥

ಅಪಾರಂ ತಸ್ಯ ತತ್ಸೈನ್ಯಂ ಸೋಽಪಿ ಶೂರವರಃ ಪರಃ ।
ಶಾಂಕರಾಗ್ರೇಸರಸ್ತಸ್ಯ ಕದಾಪಿ ನ ಪರಾಜಯಃ ॥೩೪೪॥

ಸ್ವಪ್ನೇಽಪಿ ಶಾಂಕರೈಸ್ಸಾಕಂ ಶಂಕರಾರಾಧನಪ್ರಿಯಃ ।
ಅತ ಏವ ಬಲಂ ತಸ್ಯ ವರ್ಧತೇ ಚ ಪ್ರತಿಕ್ಷಣಂ ॥೩೪೫॥

ಅತ್ಯುತ್ಕೃಷ್ಟಶಿವಾರ್ಚನಸ್ಯ ಫಲಮಿತ್ಯೇತನ್ಮಯಾ ನಿಶ್ಚಿತಂ
ತತ್ಸಾಮರ್ಥ್ಯಮಖಂಡಿತಂ ಖಲು ಸದಾ ಸಂಪತ್ಸಮೃದ್ಧೋಽಪಿ ಸಃ ।
ತಂ ಕೋ ವಾ ಭುವನತ್ರಯೇಽಪಿ ವದ ಮೇ ಜೇತುಂ ಸಮರ್ಥಸ್ಸುರೋ
ಗೌರೀಕಾಂತಪದಾರವಿಂದಭಜನಾಸಕ್ತಾಸ್ಸದಾ ರಾಕ್ಷಸಾಃ ॥೩೪೬॥

---

ಆ ಪ್ರಚಂಡದೈತ್ಯನ ಸೈನ್ಯಬಲವಾದರೋ ಅಸಂಖ್ಯಾತವಾಗಿ ಅಪಾರವಾಗಿರುವುದು. ಅಲ್ಲದೇ ಆ ದೈತ್ಯನು ಸ್ವತಃ ಮಹಾಪರಾಕ್ರಮಿಯೂ ಆಗಿದ್ದಾನೆ. ಅಷ್ಟೇ ಅಲ್ಲದೇ ಆತನು ಸ್ವಯಂ ಶಿವಭಕ್ತನು. ಆ ಶಿವಭಕ್ತಿಬಲದಿಂದ ಆತನು ಎಂದೂ ಪರಾಜಿತನಾಗುವುದಿಲ್ಲ. ॥೩೪೪॥

ಆ ಶಿವಭಕ್ತನಾಗಿರುವ ದೈತ್ಯನಿಗೆ ಶಿವಭಕ್ತರಿಂದಲೂ ಅಥವಾ ಮತ್ತೆ ಯಾರಿಂದಲೂ ಪರಾಭವವುಂಟಾಗಲಾರದು. ಆ ಶಿವಭಕ್ತಿಯ ಮಾಹಾತ್ಮ್ಯೆಯಿಂದ ಆತನ ಸಮಸ್ತ ಬಲಗಳೂ ದಿನದಿಂದ ದಿನಕ್ಕೆ ಅಭಿವೃದ್ಧಿಯನ್ನೇ ಹೊಂದುವುವು. ಆದುದರಿಂದ ಎಂದೂ ಶಾಂಕರರೊಡನೆ ವೈರವನ್ನು ಕಟ್ಟಿಕೊಳ್ಳಬಾರದು. ॥೩೪೫॥

ದೈತ್ಯರು ಸಾಮಾನ್ಯವಾಗಿ ಎಲ್ಲರೂ ಈಶ್ವರಭಕ್ತರಾಗಿಯೇ ಇರುತ್ತಾರೆ. ಅವರು ಸದಾ ಕಾಲದಲ್ಲಿಯೂ ಗೌರೀವಲ್ಲಭನ ಪಾದಪದ್ಮಗಳ ಭಜನೆಯಲ್ಲಿಯೇ ಆಸಕ್ತರಾಗಿರುತ್ತಾರೆ. ಹೀಗೆ ಆ ಮಹತ್ತರವಾದ ಶಿವಾರ್ಚನೆಯನ್ನು ದೈತ್ಯರು ಮಾಡುವುದರಿಂದಲೇ ಅವರು ಅತುಲೈಶ್ವರ್ಯವನ್ನೂ, ಅವ್ಯಾಹತವಾದ ಜಯವನ್ನೂ, ಅಕುಂಠಿತವಾದ ಔನ್ನತ್ಯವನ್ನೂ ಪಡೆದುಕೊಂಡಿರುತ್ತಾರೆ. ಅಂಥ ಪ್ರಬಲಪರಾಕ್ರಮಿಗಳನ್ನು ಗೆಲ್ಲುವುದಕ್ಕೆ ಸಮರ್ಥನಾದವನು ಈ ಮೂರು ಲೋಕದಲ್ಲಿ ಯಾವನಿರುವನು ? ಆ ಶಿವಭಕ್ತರಾದ ದೈತ್ಯರನ್ನು ಜಯಿಸುವುದಕ್ಕೆ ಯಾರಿಂದಲೂ ಸಾಧ್ಯವೇ ಇರುವುದಿಲ್ಲ. ॥೩೪೬॥

ಪ್ರಚಂಡೋ ಋಷಿಶಾರ್ದೂಲಸ್ಸ ತಾವದ್ಬಹುಲಾಭಿಧಃ ।
ಪೂರ್ವಂ ಪೂರ್ವಭವೇ ತೇನ ಶಂಕರಾರಾಧನಂ ಕೃತಂ ॥೩೪೭॥

ತೇನಾರ್ಚಿತಾನಿ ಲಿಂಗಾನಿ ಪ್ರತ್ಯಹಂ ಕೋಟಿಶಸ್ಸುರಾಃ ।
ಕಮುಲೈರಮುಲೈಃ ಪುಷ್ಪೈರ್ನವಬಿಲ್ವೀದಳೈರಪಿ ॥೩೪೮॥

ಉತ್ಫುಲ್ಲಾಪಾರಕನಕಪ್ರಸೂನೈರಪಿ ಪೂಜಿತಃ ।
ದ್ರೋಣಪುಷ್ಪೈರಪಾಮಾರ್ಗೈಶ್ಶಿವಸ್ತೇನ ಸಮರ್ಚಿತಃ ॥೩೪೯॥

ಲಿಂಗಾನಿ ಸ್ಥಾಪಿತಾನ್ಯೇವ ಕೋಟಿಶಸ್ತೇನ ಸಾದರಂ ।
ಸುವರ್ಣಮಂದಿರೇಷ್ವೇವ ಪೂಜಿತಾನ್ಯಪಿ ಕೋಟಿಶಃ ॥೩೫೦॥

ಸ ಸುಶಾಂಭವವಿದ್ಯಾಯಾಂ ಪ್ರವೀಣೋ ನಿಪುಣೋ ಬಲೀ ।
ಶಾಂಕರಾ ಏವ ತದ್ದಾರಾಸ್ತದ್ಭೃತ್ಯಾ ಅಪಿ ಕೋಟಿಶಃ ॥೩೫೧॥

---

ಎಲೈ ದೇವತೆಗಳೇ! ಆ ಪ್ರಚಂಡದೈತ್ಯನು ಸಾಮಾನ್ಯನೆಂದು ತಿಳಿಯ ಬೇಡಿರಿ. ಆ ದೈತ್ಯನು ಹಿಂದಿನ ಜನ್ಮದಲ್ಲಿ ಬಹುಲ ಎಂಬ ಹೆಸರಿನ ಋಷಿಯಾಗಿದ್ದನು. ಆ ಜನ್ಮದಲ್ಲಿ ಆತನು ಅಖಂಡವಾಗಿ ಶಿವನನ್ನು ಆರಾಧಿಸಿರುವನು. ॥೩೪೭॥

ಪೂರ್ವಜನ್ಮದಲ್ಲಿ ಬಹುಲಋಷಿಯಾಗಿದ್ದವನು ಆಗ ಪ್ರತಿದಿನವೂ ಕೋಟ್ಯಂತರ ಶಿವಲಿಂಗಗಳಿಗೆ ಪೂಜೆಯನ್ನು ನಡೆಸುತ್ತಿದ್ದನು. ಕಮಲ, ತುಂಬೆ, ಉತ್ತರಣೆ, ಮುಂತಾದ ಅನೇಕ ಪುಷ್ಪಗಳಿಂದಲೂ, ಕೋಮಲವಾದ ಬಿಲ್ವ ಪತ್ರೆಗಳಿಂದಲೂ ಸಮೃದ್ಧವಾಗಿ ಶಿವಾರ್ಚನೆಯನ್ನು ಮಾಡಿರುವನು. ॥೩೪೮-೩೪೯॥

ಹಿಂದಿನ ಜನ್ಮದಲ್ಲಿ ಈ ಪ್ರಚಂಡದೈತ್ಯನು ಸುವರ್ಣಮಯವಾದ ಅನೇಕ ಶಿವಮಂದಿರಗಳನ್ನು ಕಟ್ಟಿಸಿ ಅವುಗಳಲ್ಲಿ ಅಸಂಖ್ಯವಾದ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿಸಿರುವನು. ಮತ್ತು ಪೂಜಾದಿಗಳಿಂದ ಆರಾಧಿಸಿರುವನು., ॥೩೫೦॥

ಬಹಲಋಷಿಯು ಶಿವವಿದ್ಯೆಯಲ್ಲಿಯೂ ಅತ್ಯಂತ ಪ್ರವೀಣನಾಗಿದ್ದನು. ಮಹಾಶೈವನಾದ ಆತನ ಪತ್ನೀಪುತ್ರರೂ ಸೇವಕರೂ ಸಹ ಶಿವಪೂಜಕರೇ ಆಗಿದ್ದರು. ॥೩೫೧॥

ತಂ ತಾದೃಶಂ ಶಿವರತಂ ದೃಷ್ಟ್ವಾ ಕಂಪಮುಪಾಗತಾಃ ।
ಭವಂತಃ ಪೂರ್ವಮನುರಾಸ್ತದ್ವಿಘ್ನಾಚರಣೋದ್ಯತಾಃ ॥೩೫೨॥

ಭವದ್ಭಿರ್ಯತಿರೂಪೇಣ ಗತಂ ಪೂರ್ವಂ ತದಾಶ್ರಮಂ ।
ಅಶೈವರೂಪಮಾಸಾದ್ಯ ತದಾ ತತ್ಕೋಪವರ್ಧಕಂ ॥೩೫೩॥

ತದಾ ಪ್ರಾಹ ಸ ಶೈವೇಂದ್ರೋ ದೃಷ್ಟ್ವಾ ದೇವಾನಶಾಂಭವಾನ್ ।
ಹಂತವ್ಯಾ ಏವ ಸರ್ವೇಽಪಿ ಸುರಾ ಇತಿ ಪುನಃ ಪುನಃ ॥೩೫೪॥

ಅಶಾಂಭವೇಭ್ಯೋಽಪಿ ಮಹೇಶ್ವರೇಣ
ದತ್ತಂ ಕಿಮೈಶ್ವರ್ಯಮತಿಪ್ರಕೃಷ್ಟಂ ।
ಏತೇ ವಧಾರ್ಹಾ ಇತಿ ಮನ್ಮಹೇ ಹಿ
ಸ ಏವ ತಾವತ್ಪ್ರಬಲೋ ಮಹಾತ್ಮಾ ॥೩೫೫॥

---

ಹೀಗೆ ಆತನು ಕಠೋರವಾಗಿ ಶಿವಧರ್ಮನಿಷ್ಠನಾಗಿರಲು ಆಗ ನೀವೂ ಸಹ ಭಯಗ್ರಸ್ತರಾಗಿರುತ್ತಿದ್ದಿರಿ. ಅಲ್ಲದೇ ಮಧ್ಯೆಮಧ್ಯೆ ಆತನಿಗೆ ವಿಘ್ನವನ್ನೂ ಉಂಟು ಮಾಡುತ್ತಿದ್ದಿರಿ. ॥೩೫೨॥

ಎಲೈ ದೇವತೆಗಳಿರಾ, ಹಿಂದೆ ನೀವೇ ಒಂದು ದಿನ ಆ ಬಹಲಋಷಿಯ ಆಶ್ರಮಕ್ಕೆ ಯತಿವೇಷವನ್ನು ಧರಿಸಿಕೊಂಡು ಹೋಗಿದ್ದಿರಿ ಅಲ್ಲವೇ? ಆಗ ನೀವು ಭಸ್ಮರುದ್ರಾಕ್ಷಿಗಳೊಂದನ್ನೂ ಧರಿಸಿರಲಿಲ್ಲ. ನಿಮ್ಮ ಅಶೈವರೂಪವನ್ನು ನೋಡಿದ ಕೂಡಲೇ ಆ ಬಹಲನಿಗೆ ಮಹಾಕೋಪವುಂಟಾಯಿತು. ಅಲ್ಲದೇ ಆ ಶಿವಭಕ್ತನಾದ ಬಹಲನಿಗೆ ನೀವೆಲ್ಲರೂ ದೇವತೆಗಳೆಂಬುದೂ ಗೊತ್ತಾಯಿತು. ಹೀಗೆ ದೇವತೆಗಳಾಗಿದ್ದರೂ ಅಶೈವರಾಗಿದ್ದರಿಂದ ನಿಮ್ಮನ್ನು ಸಂಹರಿಸಬೇಕೆಂದು ಹೇಳುತ್ತಾ ದೂಷಿಸಲಾರಂಭಿಸಿದನು. ॥೩೫೪॥

ಇದೇನಿದು? ಶಿವನು ಅಶೈವರಾದ ಈ ದುರಾತ್ಮರಿಗೂ ಮಹದೈಶ್ವರ್ಯವನ್ನು ಕೊಟ್ಟಿರುವನಲ್ಲಾ! ಇದು ಅನುಚಿತ. ಇವರೆಲ್ಲರೂ ವಧಾರ್ಹರಾಗಿದ್ದಾರೆ. ಆದ್ದರಿಂದ ಇವರನ್ನು ನಾನು ಕೊಲ್ಲುತ್ತೇನೆ ಎಂದು ಗಟ್ಟಿಯಾಗಿ ಆರ್ಭಟಿಸುತ್ತಾ ಆ ಬಹಲಋಷಿಯು ನಿಮ್ಮನ್ನು ಅಂದಿನಿಂದ ಹೊಡೆಯಲಾರಂಭಿಸಿದನು. ॥೩೫೫॥

ತತಃ ಪರಂ ಸ ತೇನೈವ ಶರೀರೇಣಾತಿದಾರುಣಃ ।
ವವೃಧೇ ಸುರಸಂಹಾರಂ ಕರ್ತುಮೇವಾತಿಕೋಪನಃ ॥೩೫೬॥

ತಸ್ಯಾಭವತ್ತಥಾರೂಪಂ ಶಿವಪೂಜಾಪ್ರಸಾದತಃ ।
ಯದ್ದ್ರಷ್ಟುಮಪಿ ಶಕ್ಯಂ ನ ಸರ್ವಥಾ ಭವದಾದಿಭಿಃ ॥೩೫೭॥

ಸ ಜನ್ಮನಾ ನ ದೈತ್ಯೋಽಪಿ ಮುನಿರೇವ ಶಿವಾರ್ಚಕಃ ।
ದೈತ್ಯಕರ್ಮಕರತ್ವೇನ ದೈತ್ಯ ಇತ್ಯಭಿಧೀಯತೇ ॥೩೫೮॥

ಗತಶ್ಶಿವಾರಾಧನಕಾಲ ಏವ
ಭವದ್ಭಿರಿತ್ಯಾಕುಲಮಾನಸೋಽಭೂತ್ ।
ಅಶೈವಬುದ್ಧ್ಯೈವ ಭವತ್ಸವಿಘ್ನೋ
ವೃತೋಽಪಿ ವಿಶ್ವೇಶಪದಾರ್ಚನೇಷು ॥೩೫೯॥

---

ಅನಂತರ ಅಪಾರವಾದ ನಿಮ್ಮ ದೇವತೆಗಳ ಪರಿವಾರವನ್ನೆಲ್ಲಾ ಸದೆಬಡಿಯು ವುದಕ್ಕಾಗಿಯೇ ಅತ್ಯಂತ ಕೋಪಿಷ್ಠನಾಗಿ ಅದೇ ತನ್ನ ಶರೀರದಿಂದಲೇ ದೊಡ್ಡದಾಗಿ ಬೆಳೆಯಲಾರಂಭಿಸಿದನು. ॥೩೫೬॥

ಶಿವಪೂಜಾಲಬ್ಧವಾದ ಮಹಿಮೆಯು ಇದ್ದುದರಿಂದ ಆತನು ಅಷ್ಟೊಂದು ಬೃಹದಾಕಾರವಾಗಿ ಬಳೆದನು. ನಿಮ್ಮಂತಹವರಿಗೆ ಆತನ ಶರೀರವನ್ನು ಪೂರ್ತಿ ಯಾಗಿ ಒಂದು ಸಲಕ್ಕೆ ನೋಡಲು ಸಾಧ್ಯವಿಲ್ಲ. ಅಷ್ಟು ದೊಡ್ಡವನಾಗಿರುವನು. ॥೩೫೭॥

ಆ ಪ್ರಚಂಡನು ಜಾತ್ಯಾದೈತ್ಯನಲ್ಲ. ಜನ್ಮತಃ ಅವನು ಶಿವಾರ್ಚಕನೂ ಮತ್ತು ಮುನಿಯೂ ಆಗಿದ್ದಾನೆ. ಆದರೆ ಕ್ರಮೇಣ ದೈತ್ಯರ ಕೃತ್ಯವನ್ನು ಅವನು ಮಾಡತೊಡಗಿದ್ದುದರಿಂದ ಈಗ ಅವನನ್ನು ದೈತ್ಯನೆಂದು ಕರೆಯುವರು. ॥೩೫೮॥

ನೀವು ಈಗ ಆ ದೈತ್ಯನ ಪಟ್ಟಣವನ್ನು ಮುತ್ತಿದಾಗಲೂ ಸಹ ನೀವು ಶಿವಾರಾಧನೆಗೆ ವಿಘ್ನವನ್ನೊಡ್ಡುತ್ತಿರುವಿರೆಂದೂ, ಶಿವಾರ್ಚನೆಗೆ ಕಾಲವು ಅತೀತ ವಾಗುವುದೆಂದೂ, ಹೀಗೆ ನೀವು ಅವಿನಯವನ್ನಾಚರಿಸಿದ್ದರಿಂದ ನೀವು ಅಶೈವ ರಾಗಿದ್ದೀರೆಂಧೂ ತಿಳಿದುಕೊಂಡನಲ್ಲದೇ ಗತ್ಯಂತರವಿಲ್ಲದೇ ನಿಮ್ಮನ್ನು ಅವನು ಎದುರಿಸಿ ಯುದ್ಧವನ್ನು ನಡೆಸಬೇಕಾಯಿತು. ಯುದ್ಧವು ಆರಂಭವಾದ ಬಳಿಕ

ಅತಸ್ತೇನೈವ ಕೋಪೇನ ತಪೋಽಪಿ ಸಮಭೂನ್ಮಹತ್ ।
ತೇನಾಗ್ನಿಕಲ್ಪವಿವಾಸೀತ್ಸ ಏವ ಮುನಿಪುಂಗವಃ ॥೩೬೦॥

ಅತಃಪರಮಯಂ ಜ್ಞಾತೋ ಭವತಾಂ ತು ಪರಾಭವಃ ।
ತೇನ ಶಾಂತಸ್ಸ ಕೋಪೋಽಪಿ ತಸ್ಯ ತಾವನ್ಮಹಾಮುನೇಃ ॥೩೬೧॥

ಅಧುನಾ ಶಿವಪೂಜಾಯಾಂ ಪ್ರವೃತ್ತಸ್ಸಸುತಃ ಪರಂ ।
ಸಕಲತ್ರಸ್ಸಸೈನ್ಯಶ್ಚ ಯಾಸ್ಯತ್ಯೇವ ಶಿವಂ ಪ್ರಭುಂ ॥೩೬೨॥

ತಸ್ಯ ತಾವತ್ಕಲತ್ರಾಣಿ ಶಿವವಿದ್ಯಾತ್ಮಕಾನಿ ಹಿ ।
ಶಿವವಿದ್ಯಾಮೂರ್ತಿಪಂಕ್ತಿರ್ದಾರಾಕಾರಮುಪಾಶ್ರಿತಾ ॥೩೬೩॥

---

ನಿಮ್ಮನ್ನು ಜಯಿಸುವುದಕ್ಕಾಗಿ ಮತ್ತೆ ಶಿವಪೂಜಾದೀಕ್ಷಿತನಾಗಿ ಶಿವಾರಾಧನೆಯನ್ನೇ ಮಾಡಲಾರಂಭಿಸಿರುವನು. ॥೩೫೯॥

ಅಶೈವರಾದ ನಿಮ್ಮನ್ನು ನಿಗ್ರಹಿಸಬೇಕೆಂದೇ ಆತನಿಗೆ ಅಪೇಕ್ಷೆ ಇತ್ತು. ಆದ್ದರಿಂದಲೇ ಅವನಿಗೆ ನಿಮ್ಮ ಮೇಲೆ ಕೋಪವುಂಟಾಯಿತು. ಆದಕ್ಕೆ ಅನುಗುಣವಾಗಿ ಅತಿಶಯವಾದ ಶಿವಾರಾಧನರೂಪವಾದ ತಪಸ್ಸನ್ನು ಮಾಡಿ ತನ್ನ ಆತ್ಮ ತೇಜಸ್ಸನ್ನು ಅಭಿವೃದ್ಧಿಪಡಿಸಿಕೊಂಡನು. ಅದೇ ತೇಜಸ್ಸಿನಿಂದಲೇ ನೀವು ಪರಾಜಿತರಾದಿರಿ. ॥೩೬೦॥

ಹೀಗೆ ನೀವು ಪರಾಜಯವನ್ನು ಹೊಂದಿದಮೇಲೆ ಆ ಪ್ರಚಂಡನಕೋಪವು ಶಾಂತವಾಯಿತು. ಇದೇ ಆ ಪ್ರಚಂಡನ ಪೂರ್ವವೃತ್ತಾಂತ. ॥೩೬೧॥

ಶಿವಾರ್ಚನೆಗೆ ಸಕಲ ವಿಘ್ನಗಳೂ ತೊಲಗಿದ ಮೇಲೆ ಈಗ ಆ ಪ್ರಚಂಡನು ತನ್ನ ಪತ್ನೀಪುತ್ರ ಸೈನ್ಯಪರಿವಾರ ಸಮೇತನಾಗಿ ಅವಿಚ್ಛಿನ್ನವಾದ ಶಿವಾರಾಧನೆಯಲ್ಲಿ ಆಸಕ್ತನಾಗಿರುವನು. ಹೀಗಿರುವ ಈ ಶಿವಭಕ್ತನು ಅಂತ್ಯದಲ್ಲಿ ನಿಸ್ಸಂದೇಹವಾಗಿ ಶಿವಧಾಮವಾದ ಶಿವಸನ್ನಿಧಿಯನ್ನು ಸೇರುವನು. ॥೩೬೨॥

ಆ ಪ್ರಚಂಡನ ಪತ್ನಿಯರೂ ಸಹ ಸಾಮಾನ್ಯರಲ್ಲ. ಅಖಂಡ ಶಿವವಿದ್ಯೆಯನ್ನು ತಿಳಿದುಕೊಂಡು ಅವರು ಶಿವವಿದ್ಯಾಸ್ವರೂಪರೇ ಆಗಿರುವರು. ಆ ಸ್ತ್ರೀಯರನ್ನು ನೋಡಿದರೆ ಶಿವವಿದ್ಯೆಯೇ ಜನ್ಮತಳೆದುಬಂದಿರುವುದೋ ಎಂಬಂತೆ ಕಾಣುವುದು. ॥೩೬೩॥

ತತ್ಸೈನ್ಯಂ ತಸ್ಯ ಶಿಷ್ಯಾಸ್ತೇ ಹಾರಾ ವೀರಾಃ ಪ್ರಕೀರ್ತಿತಾಃ ।
ತಸ್ಯ ತನ್ನಗರಂ ತಾವದಾಶ್ರಮಸ್ತಸ್ಯ ಪಾವನಃ ॥೩೬೪॥

ಆಶ್ರಮಾಸ್ತರಣಾನ್ಯೇವ ಕುಶಾನಾಂ ಕೇವಲಂ ಖಲು ।
ಅಗ್ನಿಪ್ರಾಕಾರರೂಪಾಣಿ ಜಾತಾನಿ ವಿಮಲಾನ್ಯಪಿ ॥೩೬೫॥

ಅದ್ಯ ಸಾಯಂ ಮಹಾದೇವಂ ಪ್ರಯಾಸ್ಯತಿ ಮಹೋತ್ಸವೈಃ ।
ಕೈಲಾಸನಿಲಯಂ ಪ್ರಾಪ್ಯ ಸ್ಥಾಸ್ಯತ್ಯೇವ ಗಣೈಸ್ಸಹ ॥೩೬೬॥

ಪರಾಭವಾರ್ಥಂ ಭವತಾಂ ತೇನ ರೂಪಂ ಧೃತಂ ತಥಾ ।
ವೃತೇ ಪರಾಭವೇ ತಸ್ಯ ಕೋಪಶ್ಶಾಂತೋಽಪಿ ಸರ್ವಥಾ ॥೩೬೭॥

---

ಈ ರೀತಿ ಪ್ರಚಂಡನು ಈಗಲೂ ಮುನಿವೃತ್ತಿಯಲ್ಲೇ ಇರುವನೆಂದು ಹೇಳಬಹುದು. ಆ ಪಟ್ಟಣವೇ ಆತನ ಪಾವನವಾದ ಆಶ್ರಮವು. ಸೈನ್ಯವೆಲ್ಲವೂ ಆತನ ಶಿಷ್ಯಗಣಗಳು. ಆತನ ವೀರಭಟರೆಲ್ಲರೂ ದೈವಭಕ್ತರಾದ ಸಂಗಡಿಗರು. ॥೩೬೪॥

ಆ ಪಟ್ಟಣದ ಸುತ್ತಮುತ್ತ ಇರುವ ಅಗ್ನಿಯು ಆಶ್ರಮದಲ್ಲಿ ನೆಲಕ್ಕೆ ಹಾಸಿರುವ ದರ್ಭಾಸನಗಳೆಂದೇ ಹೇಳಬಹುದು. ಈ ರೀತಿ ಪ್ರಚಂಡನು ಈಗಲೂ ಮುನಿಯೇ ಆಗಿದ್ದಾನೆ. ॥೩೬೫॥

ಇಂದು ಸಾಯಂಕಾಲವೇ ಆ ಮುನಿಸ್ವರೂಪನಾದ ಪ್ರಚಂಡನು ತಾನಾಗಿಯೇ ಶಿವಸನ್ನಿಧಿಗೆ ತೆರಳುವನು. ಅತ್ಯಂತ ಸಂಭ್ರಮದಿಂದ ಕೈಲಾಸಕ್ಕೆ ಹೋಗಿ ಅಲ್ಲಿ ಶಿವಗಣಗಳೊಂದಿಗೆ ಇದ್ದು ಪರಮಾನಂದವನ್ನು ಪಡೆಯುವನು. ॥೩೬೬॥

ನೀವು ಅವಿನೀತರಾಗಿದ್ದರಿಂದಲೂ ಶಿವಾರಾಧನೆಯನ್ನು ಉದಾಸೀನ ಮಾಡಿದ್ದರಿಂದಲೂ ನಿಮಗೆ ಬುದ್ಧಿ ಕಲಿಸುವುದಕ್ಕೆ ಅಥವಾ ನಿಮ್ಮ ಗರ್ವವನ್ನು ಖಂಡಿಸುವುದಕ್ಕೆಂದು ಆತನು ಆರೀತಿ ಬೃಹದಾಕಾರವಾಗಿ ಬೆಳೆದಿದ್ದನು ; ಮತ್ತು ನಿಮ್ಮೊಡನೆ ಯುದ್ಧವನ್ನು ನಡೆಸಿ ನಿಮ್ಮನ್ನು ಪರಾಜಯಗೊಳಿಸಿದನು. ಹೀಗೆ ನೀವೆಲ್ಲರೂ ಪರಾಭವಗೊಂಡ ಬಳಿಕ ಅವನ ಕೃತ್ಯವು ನೆರವೇರಿದಂತಾಯಿತು. ಈಗ ಆತನ ಕೋಪವೂ ಶಾಂತವಾಯಿತು. ॥೩೬೭॥

ಕೈಲಾಸಭಿನ್ನಭುವನೇಷ್ವಶೇಷೇಷ್ವಪಿ ಸರ್ವಥಾ ।
ತೃಣಕಲ್ಪಮತಿಸ್ತಸ್ಯ ಸ ಯತಶ್ಶಾಂಕರಃ ಪರಃ ॥೩೬೮॥

ಏತಸ್ಮಿನ್ನಂತರೇ ಕಾಲೇ ಸಂವೃತಾಪ್ಯಶರೀರವಾಕ್ ।
ಪ್ರಚಂಡಶ್ಶಂಕರಂ ಪ್ರಾಪ ಸಮಿತ್ರ ಇತಿ ಸಾ ಶ್ರುತಾ ॥೩೬೯॥

ತದಾ ಸಂತೋಷಮಾಪನ್ನಾಸ್ಸರ್ವೇ ನಾರಾಯಣಾದಯಃ ।
ಕಪಿಲೇಶ್ವರಮಭ್ಯರ್ಚ್ಯ ನತ್ವಾ ಪ್ರಾಹುರ್ಮುನೀಶ್ವರಂ ॥೩೭೦॥

॥ ದೇವಾ ಊಚುಃ ॥

ವ್ರತಪ್ರಸಾದಾತ್ಪರಮಾಪ್ತಜೀವಾಃ
ಸರ್ವೇ ವಯಂ ತ್ವತ್ಕೃಪಯಾಧುನಾ ನಃ ।

---

ಪ್ರಚಂಡನು ಈಗಲೂ ಸಹ ಉದಾತ್ತವಾದ ಲಕ್ಷ್ಯವುಳ್ಳವನಾಗಿದ್ದಾನೆ. ಆತನಿಗೆ ಅಪೇಕ್ಷೆ ಇರುವುದು ಕೇವಲ ಕೈಲಾಸ ಒಂದರಲ್ಲಿಯೇ. ಕೈಲಾಸವನ್ನು ಬಿಟ್ಟು ಮತ್ತಿತರ ಯಾವ ಲೋಕವೂ ಆತನ ಲಕ್ಷ್ಯದಲ್ಲೇ ಕಾಣುವುದಿಲ್ಲ. ಏಕೆಂದರೆ ಆತನು ಪರಮಶಿವಭಕ್ತನೆನಿಸಿರುವನು. ಆದ್ದರಿಂದ ಕೈಲಾಸ ಒಂದನ್ನು ಬಿಟ್ಟು ಮತ್ತೆಲ್ಲ ಲೋಕಗಳೂ ಆತನಿಗೆ ತೃಣಪ್ರಾಯವೇ ಆಗಿರುತ್ತವೆ. ॥೩೬೮॥

ಹೀಗೆಂದು ಕಪಿಲಮುನಿಯು ಸಂಭಾಷಿಸುತ್ತಿರುವಾಗಲೇ ಅಶರೀರವಾಣಿಯು "ಪ್ರಚಂಡನು ತನ್ನ ಸಕಲ ಪರಿವಾರದೊಡನೆ ಕೈಲಾಸಕ್ಕೆ ಹೋದನು" ಎಂದು ನುಡಿಯಿತು. ॥೩೬೯॥

ಈ ವಾರ್ತೆಯನ್ನು ಕೇಳಿದೊಡನೆಯೇ ವಿಷ್ಣುವೇ ಮೊದಲಾದ ಸಕಲ ದೇವತೆಗಳಿಗೂ ಅತ್ಯಾನಂದವಾಯಿತು. ಆಗ ಅವರು ಅತ್ಯಂತ ಸಂತೋಷದಿಂದ ಕಪಿಲೇಶ್ವರನನ್ನು ಪೂಜಿಸಿದರು. ಬಳಿಕ ದೇವತೆಗಳು, ಕಪಿಲಮುನಿಗೆ ನಮಸ್ಕರಿಸುತ್ತಾ ಈ ರೀತಿ ಹೇಳಿದರು. ॥೩೭೦॥

"ಮುನಿವರ್ಯನೇ, ನೀನು ನಮಗೆ ಅತಿಶಯವಾದ ಉಪಕಾರ ಮಾಡಿದೆ. ನಿನ್ನ ದಯೆಯಿಂದಲೂ, ಈ ವ್ರತದ ಅನುಗ್ರಹದಿಂದಲೂ ನಾವು ಬದುಕಿದೆವು. ಇನ್ನು

ಸ್ವಸ್ವಾಲಯೇ ಕಿಂ ಗಮನಂ ನ ಯುಕ್ತ
ಮಿತ್ಯೂಚುರುಚ್ಚೈಃ ಸ್ವಕಲತ್ರಯುಕ್ತಾಃ ॥೩೭೧॥

ತತಸ್ತಾನಾಹ ಸ ಮುನಿಸ್ತಥಾಸ್ತ್ವಿತಿ ತತಃಪರಂ ।
ಪ್ರಯಯುಸ್ತೇ ಸುರಾಸ್ಸರ್ವೇ ಸಕುಟುಂಬಾಸ್ಸುತೈಸ್ಸಹ ॥೩೭೨॥

ಗತ್ವಾ ತೇ ಸ್ವಸ್ವನಿಲಯಂ ಯಥಾಪೂರ್ವಮವಸ್ಥಿತಾಃ ।
ಪರಮಾನಂದಸಂಪನ್ನಾಃ ಸ್ವಸ್ವದಾರಸಮನ್ವಿತಾಃ ॥೩೭೩॥

ಶಿವಪ್ರಸಾದೇನ ನಿಜಾಲಯೇಷು
ಸ್ಥಿತ್ವಾ ಶಿವಾರಾಧನಮಾದರೇಣ ।
ಕೃತ್ವಾ ಶಿವಾರಾಧನಸಾಧನಾನಿ
ಸಂಪಾದ್ಯ ನಿತ್ಯಂ ಸುಖಮಾಪುರಾರ್ಯೇ ॥೪೭೪॥

---

ನಾವು ನಮ್ಮ ಪರಿವಾರಗಳೊಂದಿಗೆ ನಮ್ಮ ನಮ್ಮ ಸ್ಥಾನಗಳಿಗೆ ತೆರಳಬಹುದಷ್ಟೆ. ನಿನ್ನ ಅಪ್ಪಣೆರೂಪವಾದ ಸಮ್ಮತಿಯನ್ನು ಅನುಗ್ರಹಿಸು." ಹೀಗೆಂದು ದೇವತೆಗಳು ಕೇಳಿಕೊಂಡರು. ॥೩೭೧॥

ಆಗ ಕಪಿಲಮುನಿಯು ತಥಾಸ್ತು ಎಂದು ಸಮ್ಮತಿಸಿದನು. ಅನಂತರ ಸಮಸ್ತ ದೇವತೆಗಳೂ ತಮ್ಮ ತಮ್ಮ ಪತ್ನೀ ಪುತ್ರ ಪರಿವಾರಗಳೊಂದಿಗೆ ತಮ್ಮ ತಮ್ಮ ಸ್ಥಾನ ಗಳನ್ನು ಕುರಿತು ಪ್ರಯಾಣ ಮಾಡಿದರು. ॥೩೭೨॥

ಬಳಿಕ ತಮ್ಮ ತಮ್ಮ ದೇಶಗಳನ್ನು ಸೇರಿ ಮೊದಲಿದ್ದಂತೆ ತಮ್ಮ ತಮ್ಮ ಪತ್ನೀಪುತ್ರರೊಂದಿಗೆ ಸುಖವಾಗಿ ವಾಸಮಾಡತೊಡಗಿದರು. ಮತ್ತು ಪರಮಾನಂದ ಭರಿತರಾದರು. ॥೩೭೩॥

ಆರ್ಯೆ ಶುಕವಾಣಿಯೇ, ಈ ರೀತಿಯಾಗಿ ಆ ಸಮಸ್ತ ದೇವತೆಗಳೂ ಶಿವಾನುಗ್ರಹದಿಂದ ತಮ್ಮ ತಮ್ಮ ಮನೆಗಳನ್ನು ಸೇರಿ ನಿತ್ಯವೂ ಶಿವಾರಾಧನೆಯನ್ನು ಮಾಡುವುದರಲ್ಲಿಯೂ, ಆರಾಧನ ಸಾಮಗ್ರಿಗಳನ್ನು ಸಂಪಾದಿಸುವುದರಲ್ಲಿಯೂ ಆಸಕ್ತರಾಗಿ ಇರುತ್ತಿದ್ದರಲ್ಲದೇ ಪರಮ ಸುಖಸಂತೋಷಗಳನ್ನೂ ಅನುಭವಿಸು ತ್ತಿದ್ದರು. ॥೩೭೪॥

ಕಿಂ ಕಿಂ ಫಲಂ ವಾ ನ ಶಿವಾರ್ಚನೇನ
ಭವಿಷ್ಯತೀತಿ ಪ್ರವದಾಮಿ ಬಾಲೇ ।
ಶಿವವ್ರತಸ್ಯಾಸ್ಯ ಫಲಂ ಪ್ರಕೃಷ್ಟಂ
ದೃಷ್ಟಂ ಮಯಾ ದೇವಗಣೈಶ್ಚ ದೃಷ್ಟಂ ॥೩೭೫॥

ಕರ್ತಾ ಶಂಕರ ಏವ ಸರ್ವಜಗತಾಂ ದೇವಾಧಿದೇವೋ ಭವೋ
ಭರ್ತಾಪಿ ತ್ರಿಪುರಾಂತಕೋ ಗಿರಿಕುಲಶ್ರೇಷ್ಠಾತ್ಮಜಾಕಾಮುಕಃ ।
ದಾತಾಪಿ ತ್ರಿಪುರಾಂತಕೋ ಗಿರಿಕುಲಶ್ರೇಷ್ಠಾತ್ಮಜಾಕಾಮುಕಃ
ಸಂಹರ್ತಾಪಿ ಸುರಾಸುರಾನತಶಿರೋರತ್ನಸ್ಫುರತ್ಪಾದುಕಃ ॥೩೭೬॥

---

ಬಾಲೆ ಶುಕವಾಣಿಯೇ, ಶಿವಾರ್ಚನೆಯ ದೆಸೆಯಿಂದ ಎಷ್ಟೆಷ್ಟು ಯಾವ ಯಾವ ಫಲಗಳು ಲಭಿಸುವುವೆಂದು ಹೇಗೆ ಪರಿಗಣಿಸಿ ಹೇಳಲಿ? ಅವುಗಳನ್ನು ಲೆಕ್ಕಮಾಡುವುದೇ ಅಶಕ್ಯವಾಗಿರುವುದು. ಆ ಶಿವಮಹಾವ್ರತದ ಉತ್ತಮೋತ್ತಮ ಫಲಗಳು ನನ್ನ ಮನಸ್ಸಿಗೆ ಮಾತ್ರ ತಿಳಿದಿರುವುವು. ಅದರ ಪೂರ್ಣಫಲಗಳ ವಿಚಾರ ವನ್ನು ದೇವತೆಗಳೂ ಬಲ್ಲರು. ಅದನ್ನು ಬಾಯಿಂದ ಹೇಳಿ ಮುಗಿಸಲು ಸಾಧ್ಯ ವಿಲ್ಲ. ॥೩೭೫॥

ಆ ದೇವಾಧಿದೇವನಾದ ಶಂಕರನೇ ಈ ಸಮಸ್ತ ಚರಾಚರಾತ್ಮಕವಾದ ಜಗತ್ತುಗಳನ್ನೂ ಸೃಷ್ಟಿಸುವವನು. ಆ ಭವಪ್ರಭುವೇ ಸಕಲ ಜಗತ್ತುಗಳನ್ನೂ ಕಾಪಾಡುವನೆಂದು ಮಹಾಮುನಿಗಳೂ, ವೇದ ಮತ್ತು ವೇದಾಂತಗಳೂ, ಸಿದ್ಧಾಂತ ಮಾಡಿರುತ್ತವೆ. ಪರ್ವತರಾಜರಾಜಕನ್ಯೆಯಾದ ಭಗವತಿ ಗಿರಿಜೆಯಲ್ಲಿಯೇ ಅನುರಕ್ತನಾಗಿರುವ ಆ ತ್ರಿಪುರದೈತ್ಯಧ್ವಂಸಿಯೇ ಚರಾಚರಪ್ರಾಣಿಗಳಿಗೆ ಇಷ್ಟಾರ್ಥ ಗಳನ್ನೆಲ್ಲಾ ಕೊಟ್ಟು ಭರಣಮಾಡುವವನು. ದೇವ ದಾನವ ಮೊದಲಾದ ಸಮಸ್ತ ರಿಂದಲೂ ಪೂಜಿತನೂ ವಂದಿತನೂ ಆದ ಆ ಶಂಕರನೇ ಅಂತ್ಯದಲ್ಲಿ ಈ ಜಗತ್ತು ಗಳನ್ನು ಸಂಹರಿಸುವವನು. ಈ ರೀತಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳೆಲ್ಲವೂ ಕೇವಲ ಈಶ್ವರಾಧೀನವಾಗಿರುತ್ತವೆ. ॥೩೭೬॥

ಜಾನಂತ್ಯೇವ ನ ವೇದರಾಶಿವಿಭವಾಸ್ತದ್ವೈಭವಂ ಶಾಂಭವಂ
ತಂ ಕೋ ವಾ ವದ ವಿಸ್ತರೇಣ ಗದಿತುಂ ಶಕ್ನೋತಿ ಶಕ್ತೋಽಪಿ ವಾ ।
ಕೋ ವಾ ತಿಷ್ಠತಿ ಭೂತಲೇಽಪಿ ಸುತರಾಂ ಸ್ವರ್ಗೇಽಪಿ ಸತ್ಯೇಽಪಿ ವಾ
ವೈಕುಂಠೇಽಪಿ ಸುರಾಸುರಾರ್ಚಿತಪದಾಂಭೋಜಸ್ಸ ಮೃತ್ಯುಂಜಯಃ॥೩೭೭॥

ತತ್ಸಾಮರ್ಥ್ಯಮಪಾರವೇದನಿಕರೈರ್ನ ಜ್ಞಾಯತೇ ಸರ್ವಥಾ
ಯತ್ಪಾದಾಂಬುಜಪೂಜಯಾ ಜಡಮತಿರ್ವಾಗೀಶ್ವರೀವಲ್ಲಭಃ ।
ಸ್ಯಾಲ್ಲಕ್ಷ್ಮೀರಮಣಶ್ಶಚೀಪತಿರಪಿ ಸ್ಯಾದಗ್ನಿರಿಂದುಸ್ತಥಾ
ಭಾನುಶ್ಚೇತಿ ತಮೀಶ್ವರಂ ಗಿರಿಸುತಾಕಾಂತಂ ಭಜೇ ಸಂತತಂ ॥೩೭೮॥

---

ಆ ಮಹಾದೇವನ ಶಕ್ತಿ ಮತ್ತು ವೈಭವಗಳನ್ನು ಸಮಗ್ರವಾಗಿ ಸಾಕ್ಷಾತ್ ವೇದರಾಶಿಗಳೂ ಸಹ ಅರಿಯವು. ಹೀಗಿರಲು ಮತ್ತುಳಿದವರು ಯಾರು ತಾನೇ ಆ ಅನಂತವೈಭವವನ್ನು ವಿವರಿಸಿ ಹೇಳಲು ಶಕ್ತರಿರುವರು? ಆ ಕಾರ್ಯವು ಶಕ್ಯವಾದದ್ದು ತಾನೇ ಹೇಗಾದೀತು? ಶುಕವಾಣಿಯೇ, ನೀನೇ ಆಲೋಚಿಸಿ ನೋಡು. ಆ ಮೃತ್ಯುಂಜಯನ ಹಾಗೆ ವೈಭವವುಳ್ಳವರು ಮತ್ತೆ ಯಾರಿರುವರು? ಆ ಶಿವನಂತೆ, ಸಮಸ್ತ ದೇವದಾನವರಿಂದಲೂ ಪೂಜ್ಯನಾದ ಮತ್ತು ವಂದ್ಯನಾದ ಮಹಿಮಾಶಾಲಿಯು ಭೂಲೋಕದಲ್ಲಾಗಲೀ, ಸ್ವರ್ಗಲೋಕದಲ್ಲಾಗಲಿ, ಸತ್ಯಲೋಕ ದಲ್ಲಾಗಲಿ, ವೈಕುಂಠದಲ್ಲಿ ತಾನೇ ಯಾವನಿರುವನು? ಇದನ್ನು ಪರ್ಯಾಲೋಚಿ ಸಿದರೆ ಶಿವನೇ ಸರ್ವೋತ್ತಮನೆಂಬುದು ನಿನಗೆ ಮನದಟ್ಟಾಗುವುದು. ॥೩೭೭॥

ಆ ಶಂಕರನ ಕರ್ತೃತ್ವಶಕ್ತಿಯೂ ಕ್ರಿಯಾಶಕ್ತಿಯೂ ಎಷ್ಟು ಅಪಾರವಾಗಿದೆ ಎಂಬ ವಿಷಯವು ವೇದಗಳಿಗೂ ಸಹ ಗೋಚರವಾಗಿರುವುದಿಲ್ಲ. ಅಂಥ ದೇವದೇವನ ಪಾದಪದ್ಮಗಳನ್ನೇ ಪೂಜಿಸಿ, ಸೇವಿಸಿ, ಬ್ರಹ್ಮನು ವಾಗಧೀಶ್ವರಿಯಾದ ಸರಸ್ವತಿಗೆ ಪತಿಯಾಗಿ ಮೇಲ್ಮೆಯನ್ನು ಪಡೆದುಕೊಂಡಿರುವನು; ವಿಷ್ಣುವು ಸಿರಿದೇವಿಗೆ ವಲ್ಲಭನಾಗಿ ಸುಖಾನಂದಗಳನ್ನು ಹೊಂದಿರುವನು; ಇಂದ್ರನು ಶಚೀದೇವಿಯ ಪತಿತ್ವವನ್ನು ಸಂಪಾದಿಸಿಕೊಂಡಿರುವನು. ಹೀಗೆಯೇ ಅಗ್ನಿ, ಚಂದ್ರ, ಸೂರ್ಯ ಮೊದಲಾದ ಸಮಸ್ತರೂ ಆ ಶಿವಾನುಗ್ರಹದಿಂದಲೇ ತಮ್ಮ ತಮ್ಮ ಸಾಧನೆಗನು ಗುಣವಾಗಿ ಕ್ರಿಯಾಸಿದ್ಧಿಯಿಂದ ಉತ್ತಮಸ್ಥಾನಗಳನ್ನು ಪಡೆದುಕೊಂಡಿರುವರು.

ಯಂ ಭಕ್ತ್ಯಾಮರಭೂರುಹಂ ಸುರಕುಲಾರಾಧ್ಯಂ ಚ ಸಿದ್ಧಾರ್ಚಿತಂ
ಗಂಧರ್ವಾದಿಸಮರ್ಚಿತಂ ಚ ಪರಮಂ ಪ್ರಾಹುಸ್ತಮೇಕಂ ಶಿವಂ ।
ಧ್ಯಾತ್ವಾ ಚಿತ್ತಮನಂತಪಾತಕಕುಲಾಪಾರಾಟವೀಕೋಟರಾ
ಪಾರಾಗ್ನಿಂ ಸುಖರೂಪಮೇತ್ಯ ಸತತಂ ತಚ್ಚಿಂತನಾಭ್ಯುದ್ಯತಂ ॥೩೭॥

ತಂ ವಂದೇ ಮುಹುರಾದರೇಣ ಗಿರಿಜಾವಕ್ಷೋಜಕಾಶ್ಮೀರಜಾ
ಪಾರಶ್ರೀರಸರಂಜಿತಂ ಪ್ರವಿಲಸತ್ಕಸ್ತೂರಿಕಾಚರ್ಚಿತಂ ।
ತತ್ಪಾಟೀರರಸಾಭಿರೂಷಿತಮಪಿ ವ್ಯಾಪ್ತಂ ದುಕೂಲೋತ್ತಮೈಃ
ಹಾರಾಪಾರವಿರಾಜಮಾನವಪುಷಂ ಜೋಷಂ ಪ್ರದೋಷೇಷ್ವಪಿ ॥೩೮॥

---

ಆದುದರಿಂದ ಪರಮೇಶ್ವರನ ಪಾರಮ್ಯವು ಸರ್ವೋತ್ತಮವಾದದ್ದು. ಆದ್ದರಿಂದ ನಾನು ಸತತವೂ ಆ ಗಿರಿಜಾಪತಿಯನ್ನೇ ಭಜಿಸುವೆನು. ॥೩೬॥

ತತ್ವಜ್ಞರಾದವರೆಲ್ಲರೂ ಆ ಶಿವನೊಬ್ಬನೇ ಸರ್ವೋತ್ತಮನೆಂದೂ, ನಿತ್ಯಶಾಶ್ವತ ಕಲ್ಪವೃಕ್ಷಸ್ವರೂಪನೆಂದೂ ಹೇಳುವರು. ಇದನ್ನು ಅರಿತುಕೊಂಡು ಸಮಸ್ತ ದೇವತೆಗಳೂ, ಸಿದ್ಧಚಾರಣರೂ, ಗಂಧರ್ವ ಮತ್ತು ಯಕ್ಷರೂ ಸರ್ವರೂ ಆ ದೇವ ದೇವನನ್ನೇ ಆರಾಧಿಸುವರು, ವಂದಿಸುವರು ಮತ್ತು ಪೂಜಿಸುವರು. ಇಂಥ ಮಹಾದೇವನನ್ನು ಯಾರು ಸತತವೂ ಭಾವನಾನ್ವಿತರಾಗಿ ಧ್ಯಾನಿಸುವರೋ, ಅವರ ಆ ಧ್ಯಾನವೇ ಅವರ ಸಕಲ ಪಾಪಗಳಿಗೂ ಅಗ್ನಿಸ್ವರೂಪವಾಗುವುದು. ಮತ್ತು ಅದೇ ಧ್ಯಾನಯೋಗಸಿದ್ಧಿಯ ಉದಯದಿಂದ ಅವರು ಸುಖತನ್ಮಯತೆಯನ್ನೂ ಪಡೆಯುವರು. ॥೩೭॥

. ಆ ಶಂಕರನು ತನ್ನ ಪ್ರಿಯಳಾದ ಗಿರಿಜೆಯೊಡನೆ ಆಲಿಂಗನಸಮಾಗಮಾದಿ ಸೌಖ್ಯವನ್ನು ಅನುಭವಿಸಿ, ಆ ಭಗವತಿಯ ಸ್ತನಗಳಲ್ಲಿ ಚರ್ಚಿತವಾದ ಕೇಸರಿ ಮತ್ತು ಕುಂಕುಮ, ಕಸ್ತೂರಿ ಮುಂತಾದ ಪರಿಮಳದ್ರವ್ಯಗಳಿಂದ, ತನ್ನ ಹೃದಯಾದಿ ಪ್ರದೇಶಗಳಲ್ಲಿ ಅಂಕಿತನಾಗಿರುತ್ತಾನೆ. ಮತ್ತು ಗಿರಿಜೆಯ ಅಂಗಾಂಗಗಳಲ್ಲಿ ಲಿಪ್ತವಾದ ಲಾಕ್ಷಾರಸಾದಿ ರಸದ್ರವ್ಯಗಳೂ ಆ ಭಗವತಿಯ ಶರೀರಸಂಪರ್ಕದಿಂದ ಶಿವನ ಶರೀರದಲ್ಲಿ ಶೋಭಾಯಮಾನವಾಗಿ ಅಂಟಿಕೊಳ್ಳುವುವು. ಹೀಗೆ ಪಾರ್ವತಿಯ ಸಂಬಂಧದಿಂದ ಶಂಕರನು ವಿಶೇಷವಾಗಿ ಉಜ್ವಲನಾಗಿರುತ್ತಾನೆ. ಅಲ್ಲದೇ ಸ್ವತಃ

ಯಲ್ಲಿಂಗಾದಭವತ್ಸಮಸ್ತಮಸಕೃದ್ಭೂಮಂಡಲಂ ಕುಂಡಲೀ
ಯತ್ಕರ್ಣೋತ್ತಮಕುಂಡಲಂ ಮಣಿಗಣಶ್ರೀಮಂಡಲಾಲಂಕೃತಂ ।
ತಂ ಹಾರೋತ್ತಮಮಾನಸಾಂಬುಜವರಂ ಶ್ರೀಕರ್ಣಿಕಾಸಂಶ್ರಿತಂ
ಶ್ರೀಕಾಂತಾರ್ಚಿತಪಾದುಕಂ ಭಜ ಮನಶ್ಶೈಲಾತ್ಮಜಾಕಾಮುಕಂ ॥೩೮೧॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಸತ್ಯವ್ರತಶುಕವಾಣೀ ಸಂವಾದೇ ಪ್ರಚಂಡನಾಮ ದೈತ್ಯೇತಿಹಾಸೇ
ದೇವಾಸುರಯುದ್ಧೇ ವೈಧವ್ಯ ಪರಿಹಾರ ಶಿವವ್ರತಕಥನಂ ನಾಮ
ಚತ್ವಾರಿಂಶೋಽಧ್ಯಾಯಃ

---

ಉತ್ತಮೋತ್ತಮಗಳಾದ ವಸ್ತ್ರಗಳನ್ನೂ ಮುಕ್ತಾಹಾರವೇ ಮೊದಲಾದ ದಿವ್ಯಾಭರಣಗಳನ್ನೂ ಶಿವನು ಧರಿಸಿರುವುದರಿಂದ ಆ ಶಂಕರನ ದಿವ್ಯದೇಹವು ಲೋಕೋತ್ತರವಾದ ಮತ್ತು ನಯನಾನಂದಕರವಾದ ಕಾಂತಿಸೊಬಗನ್ನು ಸುತ್ತಲೂ ಎಸೆಯುತ್ತಿರುವುದು. ಹೀಗೆ ಅಪ್ರಮೇಯಸ್ವರೂಪನಾಗಿರುವ ಪರಮೇಶ್ವರನನ್ನೇ ನಾನು ಪ್ರದೋಷಕಾಲದಲ್ಲಿಯೂ ಮತ್ತಿತರವೇಳೆಯಲ್ಲಿಯೂ ಸತತವೂ ನಿಶ್ಚಿಂತನಾಗಿ ಧ್ಯಾನಿಸುವೆನು. ॥೩೮೦॥

ಓ ಮನಸ್ಸೇ, ಆ ಗಿರಿಜಾರಮಣನನ್ನೇ ಸತತವೂ ಭಜಿಸು. ಯಾವ ಮಹಾದೇವನ ಅವ್ಯಾಹತವಾದ ಲಿಂಗದಿಂದ ಕೋಟಿ ಕೋಟಿ ಚರಾಚರ ಜಂತುಗಳೂ ಚತುರ್ದಶ ಭುವನಗಳೂ, ಸಪ್ತಲೋಕಗಳೂ ಸೃಷ್ಟಿಸಲ್ಪಟ್ಟವೆಯೋ, ಅಂಥ ಪರಮೇಶ್ವರನನ್ನು ಆರಾಧಿಸು. ಯಾವ ಶಂಕರನ ಕರ್ಣಕುಂಡಲವು ಅನಿತರಸಾಧಾರಣವಾಗಿ ರತ್ನ, ವಜ್ರ, ವೈಡೂರ್ಯ ಮುಂತಾದ ನವಮಣಿಗಳ ಮೇಲ್ಮೈಯನ್ನೂ ಏಕಕಾಲದಲ್ಲಿ ಹೊಂದಿಕೊಂಡು ಕಾಂತಿಸಮೃದ್ಧವಾಗಿರುತ್ತದೆಯೋ ಅಂಥ ಪರಶಿವನನ್ನೇ ಪೂಜಿಸು. ಯಾವ ಸದಾಶಿವನು, ಮಾನಸಸರೋವರೋತ್ಪನ್ನವಾದ, ಕಿಂಜಲ್ಕ, ಪರಾಗ ಮುಂತಾದ ಸಕಲ ಸಂಪತ್ತನ್ನೂ ಪಡೆದುಕೊಂಡಿರುವ ದಿವ್ಯಕಮಲಸ್ವರೂಪದಂತಿರುವನೋ ಅಂಥ ಶಂಭುಪ್ರಭುವನ್ನೇ ಧ್ಯಾನಿಸು. ಪರಮಶಿವಭಕ್ತಿಯುಳ್ಳ ಓ ಮನಸ್ಸೇ, ಭಗವತಿಯಾದ ಗಿರಿಜೆಯಿಂದಲೂ ಯಾವ ಭಗವಂತನ ಪಾದಾರವಿಂದಗಳು ಅರ್ಚಿಸಲ್ಪಡುವುವೋ ಅಂಥ ಆ ಪರಮೇಶ್ವರನನ್ನೇ ಅನನ್ಯಪ್ರವಣತೆಯಿಂದ

ಶರಣಾಗತನಾಗಿ ಸರ್ವಕಾಲದಲ್ಲಿಯೂ ಭಜಿಸು. ಮತ್ತು ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೋ ಎಂದು ಸತ್ಯವ್ರತನು ತನ್ನ ಪತ್ನಿಯಾದ ಶುಕವಾಣೀದೇವಿಗೆ ಶೈವವ್ರತಮಹಿಮೆಯನ್ನು ವಿವರಿಸಿದನು. ||೩೮೧||

ಇಂತು ಹರನಾಮಕವಾದ ಶ್ರೀಶಿವರಹಸ್ಯದ ತೃತೀಯಾಂಶದ ಉತ್ತರಾರ್ಧದಲ್ಲಿ ಸತ್ಯವ್ರತ ಮತ್ತು ಶುಕವಾಣಿ ಇವರ ಸಂಭಾಷಣೆಯಲ್ಲಿ, ಪ್ರಚಂಡನಾಮಕದೈತ್ಯನ ಕಥೆಯನ್ನು ನಿರೂಪಿಸುವ ಸಂದರ್ಭದಲ್ಲಿ, ಶಿವವ್ರತಮಹಿಮೆಯನ್ನು ತಿಳಿಸುವ ಕಥಾಭಾಗವನ್ನು, ಯಾಜ್ಞವಲ್ಕ್ಯಮಹರ್ಷಿಯು ಜನಕರಾಜನಿಗೆ ಹೇಳಿದನೆಂಬಲ್ಲಿಗೆ ನಲವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಶಿವಾಭ್ಯಾಂ ನಮಃ ||

